# ಟಾಲ್‌ಸ್ಟಾಯ್ ವಿಚಾರ




ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು

# ಟಾಲ್‌ಸ್ಟಾಯ್ ವಿಚಾರಧಾರೆ

ಉದಯಭಾನು ಕಲಾ ಸಂಘ (ರಿ)
ಬೆಂಗಳೂರು ೧೯

ಡಾ|| ಡಿ.ವಿ.ಕೃ. ಸ್ಮಾರಕ ಪ್ರತಿಯ ನಗರ ಅಂತರ
ಕಾಲೇಜು ಕನ್ನಡ ಚರ್ಚಾ ಸ್ಪರ್ಧೆ ಗೆ
ತೀರ್ಪುಗಾರರಾಗಿದ್ದ ಶ್ರೀಮತಿ ನಾಗಮಣಿ ಎಸ್. ರಾವ್
ಅವರಿಗೆ ಕೃತಜ್ಞತಾ ಪೂರ್ವಕ ಅರ್ಪಣೆ.

ದಿನಾಂಕ: [illegible]
ಸ್ಥಳ: ಕನ್ನಡ ಸಾಹಿತ್ಯ ಪರಿಷತ್ತು

ಉಪಾಧ್ಯಕ್ಷ
ಉದಯಭಾನು ಕಲಾ ಸಂಘ



ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ
**ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು**

TOLSTOY VICHARADHARE: Collection of articles, published by the Bangalore University with the financial assistance of Janma Bhoomi Trust, Bangalore, pp. 396 + xvi. 1973



ಪ್ರಕಾಶಕರು :
ಕೆ. ಸಿ. ಶಿವಪ್ಪ
ಕೋ-ಆರ್ಡಿನೇಟರ್
ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು 56003[illegible]

ಬೆಲೆ: ರೂ. 4-00

ಮುದ್ರಕರು :
ಎಂ. ಎಸ್. ಚಿಂತಾಮಣಿ
ಈಸ್ಟರ್ನ್ ಪ್ರೆಸ್, ಬೆಂಗಳೂರು 560029

## ಮುನ್ನುಡಿ

ಜಗತ್ತಿನ ಮಹಾ ವ್ಯಕ್ತಿಗಳಲ್ಲಿ ಟಾಲ್‌ಸ್ಟಾಯ್ ಒಬ್ಬರು. ಈ ಮಹಾವ್ಯಕ್ತಿತ್ವಕ್ಕೆ ಮುಖಗಳು ಮೂರು: ಕವಿ, ವಿಚಾರವಂತ ಮತ್ತು ಮಾನವತಾವಾದಿ. ಲೇಖಕನಾಗಿ ಟಾಲ್‌ಸ್ಟಾಯ್ ಅನೇಕ ಬೃಹತ್ ಕೃತಿಗಳನ್ನು ಬರೆದು ಹೆಸರಾಗಿದ್ದಾರೆ. ಅವರ ಅನೇಕ ಪುಸ್ತಕಗಳು ವಿಶ್ವದ ಹಲವಾರು ಭಾಷೆಗಳಿಗೆ ಅನುವಾದಿತವಾಗಿವೆ. ಸಾಹಿತಿಯಾಗಿ ಲೋಕವನ್ನು ಸೂಕ್ಷ್ಮವಾಗಿ ಅವಲೋಕಿಸಿದ್ದು ಮಾತ್ರವಲ್ಲದೆ, ವಿಚಾರವಂತನಾದ ಆತ ತನ್ನ ವ್ಯಕ್ತಿತ್ವವನ್ನು ಒರೆಗಲ್ಲಿಗೆ ಹಚ್ಚಿ ಪರಿಶೀಲಿಸಿಕೊಂಡ ನಿಷ್ಠುರ ಆತ್ಮವಿಮರ್ಶಕನೂ ಅಹುದು. ಅತ್ಯಂತ ಶ್ರೀಮಂತ ಕುಟುಂಬದಲ್ಲಿ ಹುಟ್ಟಿದ್ದರೂ, ತನ್ನ ಸುತ್ತಮುತ್ತಲಿನ ಜನಜೀವನದ ದುಸ್ಥಿತಿಯ ಬಗ್ಗೆ ಮರುಗಿ ಶ್ರೀಮಂತಿಕೆಯ ಅನುಕೂಲಾವಕಾಶಗಳನ್ನು ವರ್ಜಿಸಿ ಸಾಮಾನ್ಯರೊಂದಿಗೆ ಬದುಕಲು ಪ್ರಯತ್ನಪಟ್ಟ ಮಾನವತಾವಾದಿ. ಈ ಮೂರು ಲಕ್ಷಣಗಳು ಟಾಲ್‌ಸ್ಟಾಯ್ ಅವರನ್ನು ಮಹಾಜೀವಿಗಳ ವಿರಳ ಪಂಕ್ತಿಯಲ್ಲಿ ನಿಲ್ಲಿಸಿವೆ.

ಟಾಲ್‌ಸ್ಟಾಯ್ ಅವರ ವಿಚಾರಗಳು ಜಗತ್ತಿನ ಅನೇಕ ವ್ಯಕ್ತಿಗಳ ಮೇಲೆ ಪರಿಣಾಮವನ್ನು ಬೀರಿವೆ. ಮಹಾತ್ಮಾ ಗಾಂಧಿಯವರಿಗೆ ಸ್ಫೂರ್ತಿ ನೀಡಿದ ಹಲವರಲ್ಲಿ ಟಾಲ್‌ಸ್ಟಾಯ್ ಅವರೂ ಒಬ್ಬರು. ಟಾಲ್‌ಸ್ಟಾಯ್ ಅವರ ಧ್ಯೇಯ ಧೋರಣೆಗಳು ಪಾಶ್ಚಿಮಾತ್ಯರಿಗಿಂತ ಪೌರಾತ್ಯರಾದ ನಮಗೆ ಹೆಚ್ಚು ಸಮ್ಮತವಾಗುವ ಕಾರಣ ಅವರು ಭಾರತೀಯರಿಗೆ 'ಮಹರ್ಷಿ ಟಾಲ್‌ಸ್ಟಾಯ್' ಎಂದು ಪರಿಚಿತರಾಗಿದ್ದಾರೆ.

ಟಾಲ್‌ಸ್ಟಾಯ್ ಅವರು ಪಾರಂಪಾರಿಕವಾದ ಮತಮೌಢ್ಯಗಳಿಗೆ ವಿರೋಧಿಯಾಗಿ ಹೋರಾಡಿದವರು; ಬದುಕಿನ ಶ್ರೇಯಸ್ಸನ್ನು, ದೀನದಲಿತರ ಉದ್ಧಾರವನ್ನು ಹಾಗೂ ಸರ್ವೋದಯವನ್ನು ಬಹುವಾಗಿ ಹಾರೈಸಿದವರು. ಅವರ ವಿಚಾರಗಳು ಈಗಾಗಲೇ ಎಲ್ಲೆಡೆ ಸಾಕಷ್ಟು ಪ್ರಸಾರವಾಗಿವೆ. 'ಟಾಲ್‌ಸ್ಟಾಯ್ ವಿಚಾರಧಾರೆ' ಎಂಬ ಈ ಲೇಖನಸಂಗ್ರಹದಲ್ಲಿ ಅವರ ವಿಚಾರವಂತಿಕೆಯ ಹಲವು ನಿಲುವುಗಳನ್ನು ನಾವು ಕಾಣಬಹುದು. ಇಂದಿನ ಯುವಜನಾಂಗಕ್ಕೆ ಟಾಲ್‌ಸ್ಟಾಯ್ ಅವರ ವಿಚಾರಧಾರೆಯ ಅಗತ್ಯ ಎಷ್ಟಿದೆ ಎಂಬುದನ್ನು ಹೇಳಬೇಕಾಗಿಲ್ಲ.

ಈ ಕೃತಿಯ ಪ್ರಕಟಣೆಗೆ ಕಾರಣರಾದವರು ಜನ್ಮಭೂಮಿ ಟ್ರಸ್ಟಿನ ಶ್ರೀ ಬಿ. ಎನ್. ಗುಪ್ತ ಅವರು. ಶ್ರೀ ಗುಪ್ತ ಅವರು ವಿಶ್ವವಿದ್ಯಾಲಯಕ್ಕೆ ಒಂದು ಲಕ್ಷ ರೂಪಾಯಿಗಳ ನಿಧಿಯನ್ನು ನೀಡಲು ಮುಂದೆ ಬಂದಿದ್ದಾರೆ. ಅವರ ಉದಾರ ಕೊಡುಗೆಯ ವತಿಯಿಂದ ವಿಶ್ವವಿದ್ಯಾಲಯವು ಪ್ರತಿವರ್ಷ ಉತ್ತಮ ಕೃತಿಯೊಂದನ್ನು ಪ್ರಕಟಿಸುವ ಯೋಜನೆ

ಯನ್ನು ಹಮ್ಮಿಕೊಂಡಿದೆ. 'ಟಾಲ್‌ಸ್ಟಾಯ್ ವಿಚಾರಧಾರೆ' ಈ ದಿಶೆಯಲ್ಲಿ ಮೊದಲ ಹೆಜ್ಜೆ. ಶ್ರೀ ಗುಪ್ತ ಅವರ ಸಹಕಾರ ಸೌಜನ್ಯಕ್ಕಾಗಿ ವಿಶ್ವವಿದ್ಯಾಲಯವು ಅವರಿಗೆ ತುಂಬ ಕೃತಜ್ಞವಾಗಿದೆ. ಈ ಲೇಖನಗಳನ್ನು ಪ್ರಮಾಣಿಸಿ ಅನುವಾದಮಾಡಿಕೊಟ್ಟ ಎಲ್ಲರಿಗೂ, ಸಕಾಲದಲ್ಲಿ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಈಸ್ಟರ್ನ್ ಪ್ರೆಸ್ಸಿನ ಶ್ರೀ ಎಂ. ಎಸ್. ಚಿಂತಾಮಣಿ ಹಾಗೂ ಇತರರಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಜೂನ್ 27, 1973

**ಎಚ್. ನರಸಿಂಹಯ್ಯ**
ಉಪಕುಲಪತಿ

## ಪರಿವಿಡಿ

# ಟಾಲ್‌ಸ್ಟಾಯ್: ವ್ಯಕ್ತಿಚಿತ್ರ

ಜಗತ್ತಿನ ಬಹು ದೊಡ್ಡ ಸಾಹಿತಿಗಳ ಸಾಲಿನಲ್ಲಿ ಕೌಂಟ್ ಲಿಯೋ ಟಾಲ್‌ಸ್ಟಾಯ್ ಅವರ ಹೆಸರು ಎದ್ದು ಕಾಣುವಂಥದು. ಸಾಹಿತಿ, ವಿಚಾರವಂತ ಹಾಗೂ ಸಂತ ಎಂದು ಪರಿಗಣಿತವಾಗಿರುವ ಟಾಲ್‌ಸ್ಟಾಯ್ ಹತ್ತೊಂಬತ್ತನೆಯ ಶತಮಾನದ ನೈತಿಕ ಸತ್ವದ ಪ್ರಮುಖ ಪ್ರತಿನಿಧಿಯಂತೆ ತೋರಿದರು. ಜಗತ್ತಿನ ಎಷ್ಟೋ ವಿಚಾರವಂತರಿಗೆ, ಸುಧಾರಕರಿಗೆ ಸ್ಫೂರ್ತಿಯಾದರು. ಮಹಾತ್ಮಗಾಂಧಿಯವರು ಟಾಲ್‌ಸ್ಟಾಯ್ ಅವರನ್ನು ತಮ್ಮ ಮಾರ್ಗದರ್ಶಕರಲ್ಲಿ ಒಬ್ಬರು ಎಂದು ಕರೆದರು; ಸೇವೆ, ಕಾಯಕ, ಅಸಹಕಾರ ತತ್ತ್ವ ಮತ್ತು ಅನುಕಂಪೆಯ ಪ್ರತಿನಿಧಿ ಎಂದು ಗೌರವಿಸಿದರು. ಉಚ್ಚವಾದ ಶ್ರೀಮಂತ ಕುಟುಂಬದಲ್ಲಿ ಹುಟ್ಟಿದ್ದರೂ, ಇನ್ನೂ ಲೌಕಿಕವಾಗಿ ಮೇಲೇರಲು ಸಮಸ್ತ ಅನುಕೂಲ ಹಾಗೂ ಅವಕಾಶಗಳಿದ್ದರೂ, ಸಾಮಾನ್ಯ ಜನತೆಯ ಮೇಲಿನ ಅಪಾರವಾದ ಅನುಕಂಪ ದಿಂದ, ಅದೆಲ್ಲವನ್ನೂ ಬಿಟ್ಟುಕೊಟ್ಟು ಸಾಮಾನ್ಯರಲ್ಲಿ ಸಾಮಾನ್ಯರಾಗಿ ಬದುಕಲು, ಶ್ರಮಿಸಿದ ಅಪೂರ್ವ ವ್ಯಕ್ತಿ ಟಾಲ್‌ಸ್ಟಾಯ್.

ಟಾಲ್‌ಸ್ಟಾಯ್ ಹುಟ್ಟಿದ್ದು ಕ್ರಿ. ಶ. 1828ನೆ ಆಗಸ್ಟ್ 28ನೆಯ ತಾರೀಖು – ಯಾಸ್ನಾಯಾ ಪೋಲಾಯ್ನಾ ಎಂಬ ಹಳ್ಳಿಯಲ್ಲಿ. ಯಾಸ್ನಾಯಾ ಪೋಲಾಯ್ನಾ ಮಾಸ್ಕೋ ನಗರಕ್ಕೆ ಕೇವಲ 230 ಕಿಲೋಮೀಟರ್ ದೂರದಲ್ಲಿದೆ. ಇದು ದಟ್ಟವಾದ ಹಸುರಿನ ಏರಿಳಿವುಗಳಿಂದ ತುಂಬಿದ ಪರಿಸರದ ಒಂದು ಗ್ರಾಮ. ಟಾಲ್‌ಸ್ಟಾಯ್ ಮನೆತನದ ಹಿರಿಯರೊಬ್ಬರು ರಷ್ಯಾದ ಚಕ್ರವರ್ತಿ 'ಪೀಟರ್ ದಿ ಗ್ರೇಟ್' ನ ಆಪ್ತರಲ್ಲಿ ಒಬ್ಬರಾಗಿದ್ದರಂತೆ. ಟಾಲ್‌ಸ್ಟಾಯ್ ಹುಟ್ಟಿದ್ದು ಈ ಪರಂಪರೆಗೆ ಸೇರಿದ್ದ ಶ್ರೀಮಂತ ಕುಟುಂಬದಲ್ಲಿ. ಎಳೆಯಂದಿನಲ್ಲೇ ತಂದೆ–ತಾಯಂದಿರನ್ನು ಕಳೆದುಕೊಂಡ ಟಾಲ್‌-ಸ್ಟಾಯ್ ದೂರದ ಬಂಧುವಾದ ಚಿಕ್ಕಮ್ಮನ ಆಸರೆಯಲ್ಲಿ ಬೆಳೆದ. ಈ ಚಿಕ್ಕಮ್ಮನಿಗೆ ಸಾಧು ಸಂತರನ್ನು ಕಂಡರೆ, ಯಾತ್ರಿಕರನ್ನು ಕಂಡರೆ ವಿಶೇಷ ಆಸಕ್ತಿ, ಗೌರವ. ಹೀಗಿರು-ವಾಗ ಮನೆಗೆ ಬಂದು ಹೋಗುವ ಈ ಯಾತ್ರಿಕರು, ಸಾಧು ಸಂತರು ಟಾಲ್‌ಸ್ಟಾಯ್ ಪಾಲಿಗೆ ಯಾವುದೋ ಅವ್ಯಕ್ತದ ಅನ್ವೇಷಣೆಗೆ ಸಂಕೇತಗಳಂತೆ ತೋರಿದರು: ಅವರು ಹೇಳುತ್ತಿದ್ದ ಕತೆಗಳು ಈ ಹುಡುಗನ ಎಳೆಯ ಮನಸ್ಸಿನ ಮೇಲೆ ವಿಲಕ್ಷಣವಾದ ಪರಿಣಾಮವನ್ನು ಮಾಡಿದ್ದಲ್ಲದೆ, ಆತನಲ್ಲಿ ಒಂದು ಬಗೆಯ ಅನುಭಾವಿಕ ರುಚಿಯನ್ನು ಹುಟ್ಟಿಸಿದವು. ಎಳೆಯಂದು ಮೊಳೆತ ಈ ಹಗಲುಗನಸುತನ ಮತ್ತು ರಹಸ್ಯಾನ್ವೇಷಕ ಪ್ರವೃತ್ತಿಗಳು, ಟಾಲ್‌ಸ್ಟಾಯ್ ಅವರ ಬದುಕಿನ ಕೊನೆಯ ತನಕವೂ ಅಂಟಿಕೊಂಡವು.

ಶಾಲೆಯಲ್ಲಿ ಟಾಲ್‌ಸ್ಟಾಯ್ ತೀರ ದಡ್ಡನಾಗಿದ್ದ. ಶಾಲೆಯಲ್ಲಿ ಕಲಿಯುವ ಹಾಗೂ ಕಲಿಯುವ ಬಗ್ಗೆ ಆತನಿಗ ಆಸಕ್ತಿಯೇ ಇರಲಿಲ್ಲ. ಓದಿಗಿಂತ ಸುತ್ತಣ ಬದುಕಿನ ಬಗ್ಗೆ ಆತನಿಗೆ ಕಳಕಳಿ. ಕೇವಲ ಐದು ವರ್ಷದ ಬಾಲಕನಾಗಿದ್ದಾಗಲೇ ಆತನಿಗೆ ಈ ಜೀವನ ಎಂಬುದು ಕೇವಲ ವಿನೋದವಲ್ಲ. ಅದೊಂದು ಗಂಭೀರವಾದ ಸಮಸ್ಯೆ ಎಂದು ಅನ್ನಿಸಿತ್ತು. ಹದಿನಾರನೆಯ ವಯಸ್ಸಿನ ವೇಳೆಗೆ, ಸಾಂಪ್ರದಾಯಿಕವಾದ ಧಾರ್ಮಿಕ ಸಂಸ್ಥೆ – ಚರ್ಚಿನ ಬಗ್ಗೆ. ನಂಬಿಕೆ ಹೊರಟುಹೋಗಿತ್ತು. ಯೌವನದ ಅವಧಿಯೆಲ್ಲ ಒಂದು ಬಗೆಯ ತಾತ್ವಿಕ ಅನ್ವೇಷಣೆಯಲ್ಲಿ ಕಳೆಯಿತು – ಧರ್ಮದಿಂದ ಅಜ್ಞೇಯತಾವಾದಕ್ಕೆ. ಅಜ್ಞೇಯತಾವಾದದಿಂದ ಶೂನ್ಯತಾವಾದಕ್ಕೆ. ಕಡೆಕಡೆಗೆ ನಿರಾಶೆಯ ಅಂಚಿಗೆ ಹೀಗೆ ತಾಕಲಾಡಿತು ಅವನ ಮನಸ್ಸು. ಆಗಿನ್ನೂ ಟಾಲ್‌ಸ್ಟಾಯ್‌ಗೆ ಹತ್ತೊಂಬತ್ತು ವರ್ಷ.

ಹುಡುಗ ಟಾಲ್‌ಸ್ಟಾಯ್ ನೋಡಲು ಚೆಲುವನಲ್ಲ. ಎಲ್ಲರೂ ತನ್ನನ್ನು ಮೆಚ್ಚಬೇಕು ಎಂದು ಬಯಸಿದ ಈ ಹುಡುಗನಿಗೆ. ತನ್ನ ಕುರೂಪದ ಕಾರಣ ಯಾರೂ ತನ್ನನ್ನು ಪ್ರೀತಿಸುವುದಿಲ್ಲ ಅನ್ನಿಸಿತ್ತು. ಸಣ್ಣ ಸಣ್ಣ ಕಣ್ಣುಗಳು, ಬಾಗಿದ ಹಣೆ; ದಪ್ಪ ತುಟಿಗಳು; ಅಗಲವಾದ ಹೊಳ್ಳೆಯ ಮೂಗು; ಬಹು ದೊಡ್ಡ ಕಿವಿಗಳು. ತನ್ನ ಈ ರೂಪದ ಬಗ್ಗೆ ಜುಗುಪ್ಸೆಗೊಂಡು ಒಮ್ಮೆ ಆತ್ಮಹತ್ಯೆ ಮಾಡಿಕೊಳ್ಳಲು ಮನಸ್ಸು ಮಾಡಿದ. ಆದರೆ ಸುದೈವದಿಂದ ಮನಸ್ಸು ಬದಲಾಯಿಸಿದ; ಸಾಯುವ ಚಿಂತೆಯಲ್ಲಿದ್ದ ಮನಸ್ಸನ್ನು ದುರ್ವ್ಯಸನಗಳಲ್ಲಿ ಮುಳುಗಿಸಿ ಬದುಕಿಗೆ ಅಂಟಿಕೊಂಡ.

ಹೀಗಿರುವಾಗ ಸುಪ್ರಸಿದ್ಧ ತತ್ವಜ್ಞಾನಿ ರೂಸೋವಿನ ಬರಹಗಳು ಕಣ್ಣಿಗೆ ಬಿದ್ದುವು. ಚರ್ಚನ್ನು. ಧರ್ಮವನ್ನು ನಿರಾಕರಿಸಿದ್ದ ಟಾಲ್‌ಸ್ಟಾಯ್‌ಗೆ ರೂಸೋವಿನ ತಾತ್ವಿಕ ಚಿಂತನೆಗಳು ಆಕರ್ಷಕವಾಗಿ ಕಂಡವು. ಅವನೊಳಗಿನ ಸಾಹಿತಿಯನ್ನು ತಟ್ಟಿ ಎಚ್ಚರಿಸಿದುವು.

ರಷ್ಯನ್ ಜಮೀನ್ದಾರ (A Russian Land Lord) ಎಂಬ ಚಿಕ್ಕಿಲು ಕೃತಿಯನ್ನು ಟಾಲ್‌ಸ್ಟಾಯ್ ಬರೆದ. ಇದರಲ್ಲಿ ಟಾಲ್‌ಸ್ಟಾಯ್ ಎತ್ತಿದ ಸಮಸ್ಯೆ, ಅವನ ಬದುಕಿನ ಸ್ಥಾಯೀ ಸಮಸ್ಯೆಯಾಯಿತು. ಪ್ರಮಾದಿಯ ಆದರ್ಶಕ್ಕೂ ಸಾಮಾನ್ಯ ಜನತೆಯ ಅವಜ್ಞತೆಗೂ ನಿರಂತರವಾಗಿ ನಡೆಯುವ ಘರ್ಷಣೆಯೇ ಈ ಕೃತಿಯ ವಸ್ತು. ಈ ಕಾದಂಬರಿಯ ನಾಯಕ ರಾಜಕುಮಾರ ನೆಕ್ಲುದೋವ್ ವಿಶ್ವವಿದ್ಯಾಲಯದ ಶಿಕ್ಷಣಕ್ಕೆ ತಿಲಾಂಜಲಿ ಕೊಟ್ಟು. ರೈತರನ್ನು ಉದ್ಧಾರ ಮಾಡಲೆಂದು ಹಳ್ಳಿಗೆ ಬರುತ್ತಾನೆ. ಆದರೆ ಆತನ ರೈತರಿಗೆ ಸರ್ವಾಧಿಕಾರಿಯ ಒಪತ. ಕಿರುಕುಳಗಳ ಪರಿಚಯವಿತ್ತೇ ಹೊರತು. ದಯಾಮಯನಾದ ಒಡೆಯನೊಬ್ಬನ ಮರುಕ ಮಾನವೀಯತೆಗಳ ಪರಿಚಯವಿರಲಿಲ್ಲ. ಹೀಗಾಗಿ ತಮ್ಮ ಬಗ್ಗೆ ಸೌಜನ್ಯದಿಂದ ನಡೆದುಕೊಂಡ

ಒಡೆಯನ ನಡವಳಿಕೆಯನ್ನು ಶಂಕಿಸಿದರು; ಅವನ ನಡವಳಿಯ ಹಿಂದೆ ಏನೋ ಪಿತೂರಿ ಇದೆ ಎಂಬಂತೆ ಸಂದೇಹಿಸಿದರು; ಅವನೊಬ್ಬ ಮೂರ್ಖನೋ. ದುಷ್ಟನೋ ಎಂದು ಭಾವಿಸಿದರು. ನೆಕ್ಲುದೋವ್ ನಿರಾಶನಾಗಿ ಬದುಕಿಗೆ ಇಳಿಸಲಾರದ ಕನಸನ್ನು, ನಿರಾಶೆಯನ್ನು ಪಿಯಾನೋ ಬಾರಿಸುವ ನೆಪದಲ್ಲಿ ತೋಡಿಕೊಳ್ಳುತ್ತಾ ಕುಳಿತ……

ಒಂದು ಸ್ವಾರಸ್ಯವೆಂದರೆ ಟಾಲ್‌ಸ್ಟಾಯ್ ಬರೆದ ಮೊದಲ ಕೃತಿಯ ನಾಯಕನ ಹೆಸರು ನೆಕ್ಲುದೋವ್; ಆತ ಬರೆದ ಕಡೆಯ ಕಾದಂಬರಿ 'ಪುನರುತ್ಥಾನ'ದ ನಾಯಕನ ಹಸರೂ ನೆಕ್ಲುದೋವ್. ಮೊದಲ ಕಾದಂಬರಿಯ ಮಹತ್ವಾಕಾಂಕ್ಷಿಯಾದ, ಕನಸುಗಾರನಾದ ನೆಕ್ಲುದೇವ್, ಕಡೆಯ ಕಾದಂಬರಿಯಲ್ಲಿ ತನ್ನ ಅಪೂರ್ವವಾದ ಆತ್ಮಶೋಧನೆಯಿಂದ ಒಂದು ನೈತಿಕ ಪರಿವರ್ತನೆಯ ಮೂಲಕ ಮಹಾವ್ಯಕ್ತಿಯಾಗುತ್ತಾನೆ. ಟಾಲ್‌ಸ್ಟಾಯ್ ಕಟ್ಟಿಕೊಂಡ ಕನಸಿಗೆ, ಸಾಧಿಸಬೇಕೆಂದ ಆದರ್ಶಗಳಿಗೆ ಮೂಲ–ಜೂಲಗಳಂತಿದೆ ಈ ಎರಡು ಕಾದಂಬರಿಗಳ ವಸ್ತು.

## 2

1851ರ ವೇಳೆಗೆ ತನ್ನ ಇಪ್ಪತ್ಮೂರನೆಯ ವಯಸ್ಸಿನಲ್ಲಿ ಟಾಲ್‌ಸ್ಟಾಯ್ ಹಣವನ್ನೆಲ್ಲಾ ಜೂಜಾಡಿ ಕಳೆದುಕೊಂಡು, ಸಾಲಗಾರರ ಕಾಟದಿಂದ ತಪ್ಪಿಸಿಕೊಳ್ಳಲು ಕಾಕ್‌ಸಸ್‌ಗೆ ಓಡಿಹೋದ; ಸೈನ್ಯಕ್ಕೆ ಸೇರಿದ. ಆ ಹೊತ್ತಿಗೆ ಅವನ ಅಣ್ಣ ಸೈನ್ಯದಲ್ಲಿ ಒಬ್ಬ ಅಧಿಕಾರಿಯಾಗಿದ್ದ. ಹತ್ತೊಂಬತ್ತರ ಹರೆಯದಲ್ಲಿ ಆತ್ಮಹತ್ಯೆಗೆ ಪ್ರಯತ್ನಿಸಿದ ಟಾಲ್‌ಸ್ಟಾಯ್, ಇಪ್ಪತ್ಮೂರನೆ ವಯಸ್ಸಿನಲ್ಲಿ, ಬದುಕಿನ ಬಗ್ಗೆ ಬಲವಾದ ನಂಬಿಕೆಯುಳ್ಳವನಾಗಿದ್ದ. ತನ್ನ ತಾತ್ವಿಕ ಚಿಂತನೆಗಳನ್ನೂ, ಪಾಪಪುಣ್ಯಗಳ ಪ್ರಜ್ಞೆಯನ್ನೂ ಗಾಳಿಗೆ ತೂರಿದ. ರಹಸ್ಯಾನ್ವೇಷಕ ಬುದ್ಧಿಯ ಜತೆಗೆ ರಮಣಿಯರ ವಿಲಾಸ ಈತನನ್ನು ಸೆಳೆಯಿತು. ಬದುಕು ರಂಜನೆಯ ರಂಗವಾಯಿತು. ಒಂದೊಂದು ಪ್ರಮತ್ತವಾದ ಅನುಭವವೂ ಪ್ರಿಯವಾಯಿತು. 'ಚೆಲುವೆಯರೊಂದಿಗೆ ಬೆರೆಯುವುದು ಪಾಪ ಕಾರ್ಯವೇನಲ್ಲ: ಒಳ್ಳೆಯ ಆರೋಗ್ಯದ ಲಕ್ಷಣ' – ಎಂದು ತನ್ನ ಕೊಸ್ಸಾಕ್ಸ್ ಎಂಬ ಕೃತಿಯಲ್ಲಿ ಬರೆದು ತನ್ನನ್ನು ಸಮರ್ಥಿಸಿಕೊಂಡ!

ಪರ್ವತಾರಣ್ಯಗಳಲ್ಲಿ ಸುತ್ತಿದ; ರಣರಂಗದಲ್ಲಿ ಕಾದಾಡಿದ: ಜೂಜಾಡಿದ; ಕಂಡ ಕಂಡ ಹೆಣ್ಣುಗಳೊಂದಿಗೆ ರಮಿಸಿದ; ವಾಸ್ತವತೆಯ ಉಸಿರಾಡುವ ಕೃತಿಗಳನ್ನು ಬರೆದ. ಎಳೆಯಂದಿನ ಕತೆಗಳು. ಯುದ್ಧದ ಕತೆಗಳು. ಪ್ರಬಂಧ. ಪತ್ರ ಸಾಹಿತ್ಯ – ಒಂದರ ಹಿಂದೊಂದು ಪುಂಖಾನುಪುಂಖವಾಗಿ ಹೊರಬಂದವು.

ಸಾಹಿತ್ಯ ನಿರ್ಮಿತಿಯ ಈ ಕಾವಿನಲ್ಲಿ ತನ್ನ ಸೈನಿಕ ಕರ್ತವ್ಯಗಳ ಕಡೆಗ ಸರಿಯಾಗಿ ಗಮನ ಕೊಡಲಿಲ್ಲ. ಮಿಲಿಟರಿಯ ಸಮವಸ್ತ್ರ ಆತನಿಗೊಂದು ಹೆಮ್ಮೆಯ ವಸ್ತುವಾಗಿತ್ತು.

ಅದರ ಹೊಳೆ ಹೊಳೆಯುವ ಕಂಚಿನ ಗುಂಡಿಗಳು, ತಗುಲಿಸಿಕೊಂಡ ಪದಕಗಳು ಇತ್ಯಾದಿಗಳ ಬಗ್ಗೆ ಇದ್ದ ಹೆಮ್ಮೆ, ಯುದ್ಧದ ಸ್ವರೂಪವನ್ನು ದಿನದಿಂದ ದಿನಕ್ಕೆ ಕಂಡಂತೆ ಜುಗುಪ್ಸೆಗೆ ತಿರುಗತೊಡಗಿತು. 23ನೆ ವಯಸ್ಸಿನಲ್ಲಿ ಯುದ್ಧದ ಅನುಭವವನ್ನು ಕುರಿತು ಆತ ಬರೆದ 'ಧಾಳಿ' ಎಂಬ ಕೃತಿಯಲ್ಲಿ ಮೊಟ್ಟಮೊದಲಿಗೆ ಸೈನಿಕ ಕಾರ್ಯಾಚರಣೆಗಳ ಬಗೆಗೆ ಆತನಿಗೆ ಹುಟ್ಟಿದ ಜುಗುಪ್ಸೆ ಹಾಗೂ ಪ್ರತಿಭಟನೆಯ ದನಿ ಕಾಣಿಸಿಕೊಂಡಿದೆ.

ಈ ಜಗತ್ತು ಎಷ್ಟು ಸುಂದರವಾಗಿದೆ! ಅಸೀಮವಾದ ನಕ್ಷತ್ರ ಖಚಿತವಾದ ಈ ಸುಂದರ ಪೃಥ್ವಿಯ ಮೇಲೆ ಜನ ಯಾಕೆ ಶಾಂತವಾಗಿ ಬದುಕಬಾರದು; ಇಂಥ ರೋಷ, ಇಂಥ ಹಗೆತನ, ಒಬ್ಬರನ್ನೊಬ್ಬರು ಕೊಲ್ಲುವ ದಾಹ, ಇರುವಾಗ – ಶಾಂತವಾಗಿ ಹೇಗೆ ಬದುಕಿಯಾರು? ಸೌಂದರ್ಯದ, ಶಿವದ ಅಭಿವ್ಯಕ್ತಿಯಾದ ಈ ನಿಸರ್ಗದ ಚೆಲುವಿನ ಸಾನಿಧ್ಯದಿಂದ, ಸ್ಪರ್ಶದಿಂದ ಮಾನವ ಹೃದಯದ ದೌಷ್ಟ್ಯ ಮಾಯವಾಗಬೇಕು. ಆದರೆ, ಆಗುತ್ತಿಲ್ಲವಲ್ಲ! – ಎಂದು ಕೊರಗಿದ.

ಆದರೆ ಮತ್ತೆ ಯುದ್ಧ ಕರೆಯಿತು. 1853 ರಂದು ರಷ್ಯಾಕ್ಕೂ ಟರ್ಕಿಗೂ ಯುದ್ಧ ಶುರುವಾಯಿತು. ಟಾಲ್‌ಸ್ಟಾಯ್ ಯುದ್ಧದಲ್ಲಿ ಭಾಗವಹಿಸಬೇಕಾಯಿತು. ದೇಶಭಕ್ತಿಯ ಅಮಲನ್ನೇರಿಸಿಕೊಂಡು ಟಾಲ್‌ಸ್ಟಾಯ್ ರಣರಂಗದಲ್ಲಿ ಶತ್ರುಗಳನ್ನು ತರಿದುಹಾಕಿದ. ಈ ಕೊಲೆಯ ಉರುಬು ತಗ್ಗಿದ ಮೇಲೆ ಕೂತು ಮತ್ತೆ ಯೋಚಿಸಿದ. ದೇಶಭಕ್ತಿಯ ಹೆಸರಿನಲ್ಲಿ ಶಿಸ್ತಿನಿಂದ ನಡೆಯುವ ಈ ಕೊಲೆಪಾತಕ ಕಾರ್ಯಗಳನ್ನು ಯುದ್ಧ ಎಂದು ಗಂಭೀರವಾದ ಹೆಸರಿನಿಂದ ಕರೆಯಬೇಕೇ ಅನ್ನಿಸಿತು. ಯುದ್ಧದ ಬಗ್ಗೆ ಹಿಂದೆಯೇ ಮೊಳೆತ ತಿರಸ್ಕಾರ ಈ ವೇಳೆಗೆ ಹಣ್ಣಾಯಿತು. 1855ರ ಮಾರ್ಚಿ 5ನೇ ತಾರೀಖು ತನ್ನ ದಿನಚರಿ ಪುಸ್ತಕದಲ್ಲಿ ಹೀಗೆ ಬರೆದುಕೊಂಡ: 'ಈಗ ನನಗೊಂದು ಬಹು ದೊಡ್ಡ ವಿಚಾರ ಹೊಳೆದಿದೆ; ಇದಕ್ಕಾಗಿ ನಾನು ನನ್ನ ಇಡೀ ಜೀವಮಾನವನ್ನು ಮುಡಿಪಾಗಿಡುತ್ತೇನೆ. ಇದು ಹೊಸಧರ್ಮವೊಂದರ ಮೂಲಾಧಾರವಾಗಿದೆ. ಅದೆಂದರೆ ಪ್ರತಿಭಟನಾರಾಹಿತ್ಯಧರ್ಮ – ಅಂತರ್ ರಾಷ್ಟ್ರೀಯ ಭ್ರಾತೃತ್ವ, ವಿಶ್ವ ಶಾಂತಿ.'

## 3

1856 ರಂದು ಟಾಲ್‌ಸ್ಟಾಯ್ ಸೈನ್ಯಕ್ಕೆ ರಾಜೀನಾಮೆ ಕೊಟ್ಟು ಸೇಯಿಂಟ್ ಪೀಟರ್ಸ್ ಬರ್ಗ್ (ಇಂದಿನ ಲೆನಿನ್‌ಗ್ರಾಡ್) ಗೆ ಬಂದ. ಈ ವೇಳೆಗಾಗಲೇ ಒಳ್ಳೆಯ ಯೋಧನೆಂದೂ, ಸಾಹಿತಿಯೆಂದೂ ಟಾಲ್‌ಸ್ಟಾಯ್ ಹೆಸರಾಗಿದ್ದ. ಅಂದಿನ ಹೆಸರಾಂತ ಲೇಖಕರು, ಕಲಾವಿದರು ಈತನನ್ನು ಗೌರವದಿಂದ ಬರಮಾಡಿಕೊಂಡರು; ತಮ್ಮ ಅಂತರಂಗದ ವಲಯಕ್ಕೆ ಸೇರಿಸಿಕೊಂಡರು. ಆದರೆ ಅವರು ಟಾಲ್‌ಸ್ಟಾಯ್ ಪಾಲಿಗೆ, ಒಂದಿಷ್ಟೂ ಹೊಂದಿಕೆಯಿಲ್ಲದ, ಪ್ರತಿಷ್ಠೆಯ ಪೂಜಕರಂತೆ ತೋರಿದರು. ಅವರು ತಾವೇ ಒಂದು ವಿಶಿಷ್ಟ ವರ್ಗಕ್ಕೆ ಸೇರಿದವರಂತೆ, ತಮ್ಮ ಕಾಲದ ಬುದ್ಧಿಮತ್ತೆಯ ಅತಿ

ಮಾನುಷವ್ಯಕ್ತಿಗಳೆಂಬಂತೆ ಸೃಷ್ಟಿಯ ವೈಭವ ಹಾಗೂ ಕಿರೀಟಗಳೆಂಬಂತೆ ಭ್ರಮೆಯಲ್ಲಿದ್ದರು. ತಾವು ಬರೆಯುವುದು ಬುದ್ಧಿವಂತರಾದ ಕೆಲವರಿಗೆ ಮಾತ್ರವೇ ಎಂದುಕೊಂಡು, ಇನ್ನಿತರ ಜನ ತಮ್ಮ ಉಜ್ವಲ ಭಾವನೆಗಳಲ್ಲಿ ಪಾಲುಗೊಳ್ಳಲು ಅಸಮರ್ಥರಾದ ದಡ್ಡರೆಂದೂ, ಅಯೋಗ್ಯರೆಂದೂ ಭಾವಿಸಿದರು. ಸಾಹಿತ್ಯದ ಬಗ್ಗೆ ಟಾಲ್‌ಸ್ಟಾಯ್ ತಾಳಿದ ನಿಲುವಿಗೂ,ಅಂದಿನ ಸಮಕಾಲೀನರಾದ ಕೆಲವು ಲೇಖಕರ ನಿಲುವಿಗೂ ಹೊಂದಿಕೆಯಾಗಲಿಲ್ಲ. ಟಾಲ್‌ಸ್ಟಾಯ್ ಪಾಲಿಗೆ ಸಾಹಿತ್ಯ ಎಂಬುದೊಂದು ಧಾರ್ಮಿಕ ಕ್ರಿಯೆ. ಸೌಂದರ್ಯ ಮತ್ತು ತಿಳಿವುಗಳು ಎಲ್ಲರ ನಿಲುವಿಗೂ ಎಟುಕುವಂತಿರಬೇಕು, ಎಂಬುದು ಆತನ ಹಂಬಲ. ಕೆಲವರಿಗಾಗಿ ಅಲ್ಲ; ಎಲ್ಲರಿಗಾಗಿ, ಎಲ್ಲರ ಶ್ರೇಯಸ್ಸಿಗಾಗಿ, ಶಿಕ್ಷಣಕ್ಕಾಗಿ, ತಾನು ಬರೆಯುತ್ತೇನೆ ಎಂದುಕೊಂಡ.

ಜನ ಸಾಮಾನ್ಯರಿಗಾಗಿ ತಾನು ಬರೆಯುತ್ತೇನೆ ಎಂದುಕೊಂಡ ಮಾತ್ರಕ್ಕೆ. ಆ ಜನಸಾಮಾನ್ಯರೆಲ್ಲ ಬೃಹಸ್ಪತಿಗಳೆಂದೇನೂ ಟಾಲ್‌ಸ್ಟಾಯ್ ಭಾವಿಸಿರಲಿಲ್ಲ. ಅವರು ಏನು – ಎತ್ತ ಎಂಬುದನ್ನು ಎಲ್ಲರಿಗಿಂತ ಮಿಗಿಲಾಗಿ ಆತ ಬಲ್ಲವನಾಗಿದ್ದ. ಅವರ ಬದುಕಿನ ಪಶುಪ್ರವೃತ್ತಿಗಳ, ವಿಕೃತ ಮುಖಗಳ ಪರಿಚಯ ಆವನಿಗಿತ್ತು. ಆದರೂ ಅವರೆಲ್ಲ ಬೆಳಕಿಗೆ ಹಾತೊರೆಯುವವರು: ದಾರಿ ತೋರಿಸುವ ನಿರ್ದೇಶಕನೊಬ್ಬನಿಗಾಗಿ ಅವರು ಕಾಯುತ್ತಿದ್ದಾರೆ, ಎಂದು ಟಾಲ್‌ಸ್ಟಾಯ್ ಭಾವಿಸಿದ. ಜನದ ಹತ್ತಿರ ತಾನು ಹೋಗಬೇಕು, ಅವರೊಂದಿಗೆ ಬೆರೆಯಬೇಕು, ಅವರಿಗೇನು ಬೇಕು ಎಂಬುದನ್ನು ಸ್ವತಃ ತಿಳಿಯಬೇಕು; ಅವರಿಗೆ ಸಹಾಯಮಾಡಬೇಕು; ಅವರ ಅಂತರಂಗದ ಆಶಯಗಳ ಪೂರೈಕೆಗೆ ಸಾಧ್ಯವಾದಷ್ಟು ಪ್ರಯತ್ನಿಸಬೇಕು ಎಂದು ಸಂಕಲ್ಪಿಸಿದ.

ನಗರದಿಂದ ತನ್ನ ಹಳ್ಳಿ ಯಾಸ್ನಾಯಾ ಪೋಲಾಯ್ನಾಕ್ಕೆ ಹಿಂದಿರುಗಿದ. ತನ್ನ ರೈತರಿಗೆ ಶಿಕ್ಷಣ ಕೊಡಲೆಂದು ಶಾಲೆಯೊಂದನ್ನು ತೆರೆದ. ಅವರಿಗೆ ತಾನು ಗುರು ಅಲ್ಲ ಸಹೋದ್ಯೋಗಿ ಎಂಬುದನ್ನು ಮನದಟ್ಟು ಮಾಡಿಕೊಡಲು ಪ್ರಯತ್ನಿಸಿದ. ಅವರೆಲ್ಲರೂ ಕಲಿಯಲು ನಿಂತ ಮಕ್ಕಳಂತೆ, ಜೀವನ ಎಂಬ ರಹಸ್ಯ ಪುಸ್ತಕದ ಮೊದಲಕ್ಷರಗಳನ್ನು ತೊದಲುತ್ತಿದ್ದಾರೆ ಎಂದು ಭಾವಿಸಿದ.

ಆದರೆ ಪೋಲೀಸಿನವರು ಬಂದು ಬಲವಂತವಾಗಿ ಶಾಲೆಯನ್ನು ಮುಚ್ಚಬೇಕಾಯಿತು! ರೈತರನ್ನು ಅವರ ಅಜ್ಞಾನದಲ್ಲಿ ನೆಮ್ಮದಿಯಾಗಿರಲು ಬಿಡಿ ಎಂದು ಟಾಲ್‌ಸ್ಟಾಯ್‌ಗೆ ಬುದ್ಧಿವಾದ ಹೇಳಲಾಯಿತು. ಅನಂತರ ಟಾಲ್‌ಸ್ಟಾಯ್‌ಗೆ ಹತಾಶೆಯ ದಿನಗಳು. ಇಬ್ಬರು ತಮ್ಮಂದಿರು ಕ್ಷಯರೋಗದಿಂದ ತೀರಿಕೊಂಡರು: ತನಗೂ ಅದೇ ಬಾಯಿಲೆಯೋ ಏನೋ ಎಂಬ ಅನುಮಾನ ಬಂತು. ಒಳ್ಳೆಯದರಲ್ಲಿ ಮಾತ್ರ ಅಲ್ಲ, ಎಲ್ಲದರಲ್ಲೂ ಟಾಲ್‌ಸ್ಟಾಯ್‌ಗೆ ನಂಬಿಕೆ ಕುಸಿಯಿತು. ಆತ್ಮಹತ್ಯೆಯನ್ನೇಕೆ ಮಾಡಿಕೊಳ್ಳಬಾರದು ಎಂಬ ವಿಚಾರ ಮತ್ತೆ ತಲೆಯಲ್ಲಿ ಸುಳಿದಾಡಿತು.

ಆವರೆ ಹದಿನೇಳರ ಚೆಲುವೆ, ಸೋಫಿಯಾ ಆಂಡ್ರೆಯೇವಾ ಬೆಹ್ರ್ಸ್. ಎಂಬಾಕೆ ಟಾಲ್‌ಸ್ಟಾಯ್‌ನ ಕಣ್ಣನ್ನು ಸೆಳೆದಳು. ಅವಳ ವಯಸ್ಸಿನ ಎರಡರಷ್ಟು ವಯಸ್ಸಾಗಿತ್ತು ಆಗ ಟಾಲ್‌ಸ್ಟಾಯ್‌ಗೆ. ಅವರೂ ಆಕೆಯನ್ನು ಮದುವೆಯಾದ. ಮುಂದೆ ಐವತ್ತು ವರ್ಷಗಳಷ್ಟು ದೀರ್ಘ ಕಾಲ ಸೋಫಿಯಾ ಆತನ ಬಾಳಸಂಗಾತಿಯಾದಳು. ಆಕೆ ಲೇಖಕನಿಗೆ ನಿಜವಾದ ಪತ್ನಿಯಾದಳು. ಟಾಲ್‌ಸ್ಟಾಯ್ ಹೇಳಿಕೊಂಡು ಹೋದದ್ದನ್ನು ಕೂತು ಬರೆದಳು: ಅವನ ಕಲ್ಪನೆಯನ್ನು ಕೆರಳಿಸಿದಳು; ಅವನು ಬರೆದದ್ದನ್ನು ಬೇಸರಿಸದೆ ಕೂತು ಹಸ್ತಪ್ರತಿ ತಯಾರಿಸಿದಳು. ಅವನು ಕಾದಂಬರಿಗಳಲ್ಲಿ ನಿರ್ಮಿಸಿದ ಎಷ್ಟೋ ಪಾತ್ರಗಳಿಗೆ ಮಾದರಿಯಾದಳು.

ಈ ಸುಖದ ದಿನಗಳಲ್ಲಿ ಎರಡು ಮಹತ್‌ಕೃತಿಗಳನ್ನು ಬರೆದ: 'ಅನಾಕೆರಿನೀನಾ' ಮತ್ತು 'ವಾರ್ ಅಂಡ್ ಪೀಸ್' – ಕಾದಂಬರಿಗಳು ಅವು. ಮೊದಲನೆಯದು ಒಂದು ಅದಮ್ಯ ಪ್ರಣಯದ ದುರಂತ ಕತೆ; ಎರಡನೆಯದು ಇಡೀ ಮಾನವ ಜನಾಂಗದ ಹೋರಾಟದ ಕತೆ. ಬರ್ಬರತೆಯಿಂದ ನಾಗರಿಕತೆಗೆ, ರಕ್ತಪಾತದಿಂದ ಸಾಮರಸ್ಯಕ್ಕೆ, ಹಗೆತನದಿಂದ ಪ್ರೇಮಕ್ಕೆ – ಮಾನವತೆಗೆ ಹೋರಾಡುತ್ತಾ ಸಾಗಿದ ಪರಿಯನ್ನು ಮಹಾಕಾವ್ಯ ಸದೃಶವಾದ ಈ ಕಾದಂಬರಿಯಲ್ಲಿ ಕಾಣಬಹುದು.

1877ರಲ್ಲಿ ಅನಾಕೆರಿನೀನಾ ಕಾದಂಬರಿಯನ್ನು ಬರೆದು ಮುಗಿಸಿದ ಮೇಲೆ ಆತನ ಅಂತರಂಗದಲ್ಲಿ ಒಂದು ನೈತಿಕ ಆಂದೋಲನವೇ ನಡೆಯಿತು. 1879ರಲ್ಲಿ ಆತ ಬರೆದ 'ತಪ್ಪೊಪ್ಪಿಗೆ' (Confession) ಅವನ ಸಂದೇಹ ಹಾಗೂ ನಿಷ್ಠುರ ಸ್ವಾತ್ಮ ವಿಮರ್ಶೆಯು ದಾಖಲೆಯಾಗಿದೆ. ಅದರಲ್ಲಿ ಆತ ಒಪ್ಪಿಕೊಂಡಿದ್ದಾನೆ: ತನಗೆ ಸುಖವಾಗಿರಲು ಬೇಕಾದ ಎಲ್ಲ ಅನುಕೂಲಗಳೂ ಇವೆ; ಪ್ರೀತಿಯ ಹೆಂಡತಿ. ಸುಖವಾದ ಸಂಸಾರ. ಸಂಪತ್ತು. ಕೀರ್ತಿ. ಒಳ್ಳೆಯ ಆರೋಗ್ಯ ಎಲ್ಲವೂ ಇವೆ. ಹೀಗಿದ್ದೂ ತನಗೆ ಈ ಜೀವನ ಅರ್ಥಹೀನವೆಂದೂ. ಯಾರೋ ತನ್ನನ್ನು ಒಡ್ಡಿ ಆಡುವ ಒಂದು ಆಟವೆಂದೂ ಅನ್ನಿಸತೊಡಗಿದೆ. ಹೀಗೇ ಬದುಕುತ್ತಿರುವುದು ಸರಿಯೇ? ಇದಕ್ಕೊಂದು ಅರ್ಥ ಇದೆಯೇ? ಅನಿವಾರ್ಯವಾದ ಮೃತ್ಯು ನಾಶಮಾಡಲಾಗದ ಅರ್ಥವಂತಿಕೆಯೇನಾದರೂ ಇದಕ್ಕೆ ಉಂಟೆ?

ಮುಂದೆ ಕೆಲವು ವರ್ಷಗಳ ಕಾಲ ಆತ ಆಳವಾದ ಅಧ್ಯಯನದಲ್ಲಿ ಮುಳುಗಿದ. ಜಗತ್ತಿನ ವಿಚಾರವಂತರ ಒರೆಗಲ್ಲಿನ ಮೇಲೆ ತನ್ನ ಸಂದೇಹಗಳನ್ನು ಉಜ್ಜಿ ನೋಡಿದ. ಕ್ರೈಸ್ತಧರ್ಮವನ್ನು ವಿಶೇಷವಾಗಿ ಅಭ್ಯಾಸಮಾಡಿದ. ಅದರಿಂದೇನೂ ಪ್ರಯೋಜನವಾಗಲಿಲ್ಲ: ಪ್ರಚಲಿತ ಕ್ರೈಸ್ತ ಧರ್ಮಸಂಸ್ಥೆಗಳ ಮೇಲೆ ತಿರಸ್ಕಾರ ಬೆಳೆಯಿತು. ಚರ್ಚ್ ಕ್ರೈಸ್ತಧರ್ಮಕ್ಕೆ ಎಳ್ಳಷ್ಟೂ ಅನುಸಾರಿಯಾಗಿ ನಡೆಯುತ್ತಿಲ್ಲ. ಮನುಷ್ಯನ ಶ್ರೇಯಸ್ಸಿಗೆ ದಾರಿ ತೋರುವ ಪ್ರಯತ್ನವನ್ನು ಮಾಡುತ್ತಿಲ್ಲ. ಚರ್ಚ್ ಎಂಬುದೊಂದು ವ್ಯಾಪಾರಸಂಸ್ಥೆ

ಪಾದ್ರಿಗಳು ಆಳರಸರ ಜೀತದಾಳುಗಳೇ ಹೊರತು ಕ್ರಿಸ್ತನ ನಿಜವಾದ ಭಕ್ತರಲ್ಲ. ನಿಜವಾದ ಕ್ರಿಶ್ಚಿಯನ್ ಧರ್ಮವು ಈ ಚರ್ಚುಗಳಿಂದ ಎಂದೋ ನಿರ್ಮೂಲೋತ್ಪಾಟನವಾಗಿದೆ ಎಂದು ಸಾರಿದ.

ಚರ್ಚನ್ನು ನಿರಾಕರಿಸಿ ಟಾಲ್‌ಸ್ಟಾಯ್ ದೇವರತ್ತ ತಿರುಗಿದ; ಹೊಸ ಧರ್ಮದ ಪ್ರವಾದಿಯಾದ. ಎಲ್ಲ ಪೂಜಾರಿಗಳನ್ನೂ, ಪ್ರಜಾತಂತ್ರಗಳನ್ನೂ, ದೇಗುಲಗಳನ್ನೂ ನಿರಾಕರಿಸುವುದೇ ಆತನ ಹೊಸ ಸಿದ್ಧಾಂತದ ಉದ್ದೇಶವಾಯಿತು. ಟಾಲ್‌ಸ್ಟಾಯ್ ರೂಪಿಸಿಕೊಂಡ ಸಿದ್ಧಾಂತವನ್ನು ಸರಳವಾದ ಮಾತುಗಳಲ್ಲಿ ಹೀಗೆ ಹೇಳಬಹುದು: ಬದುಕಿನ ಉದ್ದೇಶ ನಮ್ಮೊಳಗಿನ ಕೀಳು ಸ್ತರದ ಪಾಶವೀ ಪ್ರವೃತ್ತಿಗಳನ್ನು ಪೋಷಿಸುವುದಲ್ಲ. ಹಿರಿದಾದುದ್ದರೊಂದಿಗೆ ಈ ಬದುಕನ್ನು ಬೆಸೆಯಬೇಕು. ಯಾರೊಂದಿಗೂ ಹಗೆತನ ಬೇಡ; ಕ್ರೋಧಕ್ಕೆ ಅವಕಾಶಕೊಡುವುದು ಬೇಡ; ಮತ್ತು ಹಿಂಸೆಗೆ ಅವಕಾಶ ಬೇಡ. ಇದು ಆತನ ಧರ್ಮದ ನೇತ್ಯಾತ್ಮಕ ರೂಪ. ಆದರೆ ವಾಸ್ತವವಾಗಿ ಆತನದು ಪ್ರತಿಭಟನೆಯ ಧರ್ಮವಾಗಿತ್ತು. ಶ್ರೀಮಂತರ ದುಂದುಗಾರಿಕೆಯ ವಿರುದ್ಧ, ಪೂಜಾರಿಗಳ ಕುತಂತ್ರದ ವಿರುದ್ಧ, ಜಾರ್ ದೊರೆಗಳ ದಬ್ಬಾಳಿಕೆಯ ವಿರುದ್ಧ, ಪ್ರತಿಭಟಿಸಿದ. ಧರ್ಮವನ್ನು, ಪೂಜಾರಿಗಳನ್ನು ಮತ್ತು ರಾಜರನ್ನು ಹೀಗೆ ದಿಟ್ಟತನದಿಂದ ಎದುರಿಸಿದ ಟಾಲ್‌ಸ್ಟಾಯ್ ನಿಜವಾದ ಅರ್ಥದಲ್ಲಿ ಕಮ್ಯೂನಿಸ್ಟ್ ಆದ; ಬೇರೊಂದು ಮಾತಿನಲ್ಲಿ ಹೇಳುವುದಾದರೆ, ಕ್ರಿಸ್ತನ ನಿಜವಾದ ಅನುಯಾಯಿ ಆದ. ತನ್ನ ಕೀರ್ತಿಯನ್ನು, ಐಶ್ವರ್ಯವನ್ನು, ಸ್ಥಾನಮಾನಗಳನ್ನು, ಕಡೆಗೆ ತನ್ನ ಪ್ರಾಣವನ್ನೂ ಕೂಡ ಮಾನವ ಸೇವೆಗೆ ತ್ಯಜಿಸಲು ಸಿದ್ಧನಾದ. ಶ್ರೀಮಂತಿಕೆಯನ್ನು ಸೂಚಿಸುವ ಬಟ್ಟೆಬರೆಗಳನ್ನು ವರ್ಜಿಸಿ, ಸಾಮಾನ್ಯ ರೈತರಂತೆ ಬಟ್ಟೆಹಾಕಿಕೊಂಡ. ಅವರಂತೆ ಬದುಕಿದ. ಶ್ರೀಮಂತಿಕೆಯ ಸುಖಗಳನ್ನು ವರ್ಜಿಸಿ ಸಾಮಾನ್ಯರ ನಿಲುವಿಗಿಳಿದು ಅವರ ಸುಖದುಃಖಗಳಲ್ಲಿ ಪಾಲುಗಾರನಾದ. ಹೀಗೆ ನಡೆದುಕೊಂಡು ಮನುಷ್ಯತ್ವವನ್ನು ಮಹತ್ತಾದ ನೈತಿಕ ನೆಲೆಗೆ ಏರಿಸಿದ.

ಅರವತ್ತನೆಯ ವಯಸ್ಸಿನಲ್ಲಿ ಟಾಲ್‌ಸ್ಟಾಯ್ ಮದ್ಯ–ಮಾಂಸ ಸೇವನೆಯನ್ನು ಸಂಪೂರ್ಣವಾಗಿ ವರ್ಜಿಸಿದ; ಮಾನವರು ವಿಶೇಷವಾಗಿ ಇಂದ್ರಿಯ ನಿಗ್ರಹವನ್ನು ಅಭ್ಯಾಸಮಾಡಬೇಕು ಎಂದು ಬೋಧಿಸಿದ. ಯಾಸ್ನಾಯಾ ಪೋಲ್ಯಾನಾದ ಸಾಮಾನ್ಯ ರೈತರೇ ಇವನ ಪ್ರಥಮ ಶಿಷ್ಯರಾದರು. ಟಾಲ್‌ಸ್ಟಾಯ್ ಮಾತಿಗೆ ಕಟ್ಟುಬಿದ್ದು, ಒಲ್ಲದ ಮನಸ್ಸಿನಿಂದ ತಮ್ಮ ಚುಟ್ಟಾಗಳನ್ನು ಒಪ್ಪಿಸಿ, ಇನ್ನು ಮುಂದೆ ಮದ್ಯಪಾನ ಮಾಡುವುದಿಲ್ಲವೆಂದು ಆಣೆಮಾಡಿದರು. ಆದರೆ ಸ್ವಲ್ಪಕಾಲದಲ್ಲೇ ಕದ್ದು ಮುಚ್ಚಿ ಸೇದುವ, ಯಾರಿಗೂ ಕಾಣದಂತೆ ಕುಡಿಯುವ ಚಟಕ್ಕೆ ಇಳಿದರು! ಟಾಲ್‌ಸ್ಟಾಯ್ ಎಲ್ಲ ರೀತಿಯ ಹಿಂಸೆಗಳನ್ನೂ ವಿರೋಧಿಸಿದ. ಯುದ್ಧಗಳನ್ನು ಖಂಡಿಸಿದ; ಯುದ್ಧದ ಹಿನ್ನೆಲೆಗಿರುವ ದೇಶಪ್ರೇಮ ಎಂಬುದೊಂದು ಸುಳ್ಳು ಭಾವಾತಿರೇಕ ಎಂದು ವರ್ಣಿಸಿದ.

ಅಪರಾಧಿಗಳನ್ನು ಶಿಕ್ಷಿಸುವುದರಿಂದ ಸುಧಾರಣೆ ಸಾಧ್ಯವಿಲ್ಲ ಎಂದು ವಾದಿಸಿದ. ಕ್ರೈಸ್ತಧರ್ಮವನ್ನು ಹತ್ತೊಂಬತ್ತನೆಯ ಶತಮಾನದ ಪರಿಭಾಷೆಯಲ್ಲಿ ವ್ಯಾಖ್ಯಾನ ಮಾಡಿದ. ಕ್ರಿಸ್ತ ಪ್ರಯತ್ನಪಟ್ಟದ್ದು ದೇವರ ರಾಜ್ಯದ ಸ್ಥಾಪನೆಗೆ: ಟಾಲ್‌ಸ್ಟಾಯ್ ಪ್ರಯತ್ನಪಟ್ಟದ್ದು ನಿಜವಾದ ಮಾನವರ ರಾಜ್ಯಸ್ಥಾಪನೆಗೆ.

ಜಗತ್ತು ಟಾಲ್‌ಸ್ಟಾಯ್ ಅನ್ನು ನೂತನ ಪ್ರವಾದಿ ಎಂದು ಕೊಂಡಾಡಿತು. ಆದರೆ ಅವನ ಮನೆ ಮಂದಿ ಅವನನ್ನು ಒಬ್ಬ ಹುಚ್ಚ ಎಂದು ಕರೆದರು. ಟಾಲ್‌ಸ್ಟಾಯ್ ಕ್ರಮೇಣ ತನ್ನ ಬುದ್ಧಿಯನ್ನು ಕಳೆದುಕೊಳ್ಳುತ್ತಿದ್ದಾನೆ ಅನ್ನಿಸಿತು ಅವನ ಹೆಂಡತಿಗೆ. ಮಾನವರೆಲ್ಲರೂ ಸಹ ಸೋದರರೆಂದು ಟಾಲ್‌ಸ್ಟಾಯ್ ಮಾತನಾಡಿದಾಗ, ಅವನ ಮಕ್ಕಳು ನಕ್ಕು ಮುಖತಿರುವಿದರು. ಸಂಪೂರ್ಣ ಸ್ವಾರ್ಥತ್ಯಾಗದ ಬದುಕು ಬುದ್ಧಿ-ಗೇಡಿನ ಸೂಚನೆ ಎಂದು ಆತನ ಮನೆಯವರೆಲ್ಲ ತಿಳಿದರು, ಬೇಕಾದರೆ ಟಾಲ್‌ಸ್ಟಾಯ್ ಒಬ್ಬನೇ ಎಲ್ಲವನ್ನೂ ತ್ಯಜಿಸಿ ನಿರ್ಲಿಪ್ತನಾಗಿ ಬದುಕಲಿ. ಆದರೆ ತನ್ನ ಮನೆಮಂದಿಯೆಲ್ಲ ಅವನಂತೆ ಬದುಕಬೇಕೆಂದು ನಿರೀಕ್ಷಿಸಲು ಟಾಲ್‌ಸ್ಟಾಯ್‌ಗೆ ಏನು ಅಧಿಕಾರ ? ಎಂದು ಪ್ರಶ್ನಿಸಿದರು. ಹೀಗಾಗಿ ಟಾಲ್‌ಸ್ಟಾಯ್ ತನ್ನ ಮನೆಯಲ್ಲೇ ಅಪರಿಚಿತನಾದ, ಏಕಾಂಗಿಯಾದ.

ವಯಸ್ಸಾದಂತೆ ಟಾಲ್‌ಸ್ಟಾಯ್‌ನ ಉಪದೇಶಗಳಲ್ಲಿ ಒಂದು ಬಗೆಯ ವಿಲಕ್ಷಣ ಸ್ವರ ಬೆರೆಯಿತು. ತನ್ನವರಿಂದ ಪರಿತ್ಯಕ್ತನಾದ ಟಾಲ್‌ಸ್ಟಾಯ್ ಕ್ರಮೇಣ ಎಲ್ಲ ಲೌಕಿಕ ವ್ಯವಹಾರಗಳನ್ನೂ ಕಡಿದುಕೊಂಡು ಬದುಕನ್ನು ಒಂದು ಬಗೆಯ ಅನುಭಾವಿಕ ಪ್ರಭೆಯಲ್ಲಿ ಕಾಣತೊಡಗಿದ. ಅವನ ದೃಷ್ಟಿ ಅವಾಸ್ತವಿಕ ನೈತಿಕ ನೆಲೆಗೆ ಏರಿತು. ಅವನ ಕಟ್ಟಕಡೆಯ ಕಾದಂಬರಿ 'ಪುನರುತ್ಥಾನ' ಇದನ್ನೇ ಪ್ರತಿಪಾದಿಸಿದೆ.

ದಿನಕಳೆದಂತೆ ಕಡೆಯ ಹತ್ತು ವರ್ಷಗಳು ಸಾಮಾಜಿಕ ರಾಜಕೀಯ ನೈತಿಕ ಆದರ್ಶಗಳ ಪ್ರತಿಪಾದನೆಗೆ ಮೀಸಲಾದುವು. ಧರ್ಮದಲ್ಲಿ ಸರ್ವೋದಯ, ಯುದ್ಧ, ಶಾಂತಿಸಮ್ಮೇಳನ, ನಿಶ್ಶಸ್ತ್ರೀಕರಣ, ಅಹಿಂಸೆ, ಅಪರಾಧಗಳು, ಸರ್ಕಾರದ ಧೋರಣೆಗಳು, ವಸಾಹತುಷಾಹಿ, ಪಾನನಿರೋಧ, ಧೂಮಪಾನದ ಅಪಾಯಗಳು, ಕಲೆಗಳಿಂದಾಗುವ ಹಾನಿ – ಇತ್ಯಾದಿ ಹಲವು ವಿಷಯಗಳನ್ನು ಕುರಿತು ಬರೆದ. ಜಗತ್ತಿನಲ್ಲಿ ಶಾಂತಿ ಸ್ಥಾಪನೆಯಾಗಬೇಕಾದರೆ ಮೊದಲು ಎಲ್ಲ ಬಗೆಯ ಸಮರ ಸಿದ್ಧತೆಗಳನ್ನೂ ಸೈನ್ಯಗಳನ್ನೂ ರದ್ದುಮಾಡಬೇಕೆಂದು ಸಲಹೆಮಾಡಿದ; ಧರ್ಮಸಂಸ್ಥೆಗಳ ಸುಲಿಗೆಯನ್ನು ಖಂಡಿಸಿದ. ಇವರ ಫಲವಾಗಿ ಅವನಿಗೆ ದೊರೆತದ್ದು ಸಾಂಪ್ರದಾಯಿಕ ಧರ್ಮ ಸಂಸ್ಥೆ ಚರ್ಚ್‌ನಿಂದ ಉಚ್ಚಾಟನೆ: ಮತ್ತು ಅಂದಿನ ಸರ್ಕಾರದ ಅಸಮಾಧಾನ.

ಬರುಬರುತ್ತಾ ಲೇಖಕನಾದ ಟಾಲ್‌ಸ್ಟಾಯ್ ದಾರ್ಶನಿಕನಾದ. 1910ನೆ ಅಕ್ಟೋಬರ್ 28ನೇಯ ತಾರೀಖು ಬೆಳಗಿನ ಜಾವ ಐದುಗಂಟೆಗೆ, ತನ್ನ 82ನೆ ವಯಸ್ಸಿನಲ್ಲಿ

ಮನೆಬಿಟ್ಟು ನಿರ್ಜನತೆಯಲ್ಲಿ ಶಾಂತಿಯನ್ನರಸಲು ಪಲಾಯನಮಾಡಿದ. ಸಾಮಾನ್ಯ ರೈತರಂತೆ ಉಡುಪುತೊಟ್ಟು, ಹಣ್ಣಾದ ಶರೀರವನ್ನು ಬಳಲಿಸಿ ಅಲೆದಾಡಿದ. ಅನು ಕಂಪೆಗೆ, ಕರುಣೆಗೆ ಬೆಲೆ ಕೊಟ್ಟ ಈ ಮನುಷ್ಯ, ಮನೆಮಂದಿಯ ಕನಿಕರವನ್ನು ತಿರಸ್ಕರಿಸಿ ದೂರ ದೂರ ಓಡಿದ. ಏಕಾಂಗಿಯಾಗಿ ಸಾಯಲು ಆಶಿಸಿದ. ಹಳ್ಳಿಯಿಂದ ಹಳ್ಳಿಗೆ ಅಲೆದ. ಒಮ್ಮೆ ದಾರಿಯಲ್ಲಿ ಕುಸಿದು ಬಿದ್ದ. ಮತ್ತೆ ಚೇತರಿಸಿಕೊಳ್ಳಲಿಲ್ಲ. ಕಡೆಯಲ್ಲಿ ಒಂದೆಡೆ ತನ್ನನ್ನು ಆರೈಕೆ ಮಾಡಿದ ವೈದ್ಯನಿಗೆ ಹೇಳಿದ: 'ಲಕ್ಷಾಂತರ ಜನ ನರಳುತಿದ್ದಾರೆ ಈ ಲೋಕದಲ್ಲಿ; ನನ್ನೊಬ್ಬನ ಚಿಂತೆ ನಿನಗೆ ಯಾಕೆ?' 1910ನೆ ನವಂಬರ್ ಹತ್ತನೆಯ ತಾರೀಕು ಭಾನುವಾರ, ಮನೆಮಂದಿಯಿಂದ ದೂರದೂರದ ಒಂದು ಹಳ್ಳಿಯಲ್ಲಿ ಟಾಲ್‌ಸ್ಟಾಯ್ ಕೊನೆಯುಸಿರೆಳೆದ.

ಟಾಲ್‌ಸ್ಟಾಯ್‌ನ ಶರೀರವನ್ನು ಯಾಸ್ನಾಯಾ ಪೋಲಾಯನ್ನಾಕ್ಕೆ ತರಲಾಯಿತು. ಆತ ಮೊದಲೇ ತನ್ನ ಮನೆಯವರಿಗೆ ಹೇಳಿದ್ದ: ತಾನು ಸತ್ತರೆ ತನ್ನ ಶರೀರವನ್ನು ಯಾವ ಚರ್ಚಿನ ಧಾರ್ಮಿಕ ವಿಧಿಯೂ ಇಲ್ಲದೆ, ತನ್ನ ಎಸ್ಟೇಟಿನ ಗುಡ್ಡದ ಓರೆಯಲ್ಲಿ ಸಮಾಧಿಮಾಡಬೇಕು ಎಂದು. ಮನೆಮಂದಿ ಈ ಕ್ರಾಂತಿಕಾರಿಯ ಮಾತನ್ನು ನಡೆಯಿಸಿಕೊಟ್ಟರು. ಮಾಸ್ಕೋಗೆ 230 ಕಿಲೋಮೀಟರು ದೂರದಲ್ಲಿರುವ ಯಾಸ್ನಾಯಾ ಪೋಲಾಯನ್ನಾದ ಎಸ್ಟೇಟಿನ ಮೂಲೆಯಲ್ಲಿರುವ ಟಾಲ್‌ಸ್ಟಾಯ್ ಸಮಾಧಿ ಜಗತ್ತಿನ ವಿಚಾರವಂತರಿಗೆ ಸಾಹಿತ್ಯಪ್ರೇಮಿಗಳಿಗೆ ಒಂದು ಯಾತ್ರಾಸ್ಥಳವಾಗಿದೆ. ಮೇಲೆ ವಿಸ್ತಾರ ವಾದ ಆಕಾಶ; ಕೆಳಗೆ ಎತ್ತರವಾದ ಹಸುರು ತೂಗುವ ಮರಗಳು; ಅವರಡಿಗೆ ಹಸಿರು ಹುಲ್ಲು ಬೆಳೆದ ಟಾಲ್‌ಸ್ಟಾಯ್ ಸಮಾಧಿ, ಏಕಾಕಿಯಾಗಿ ಜಗತ್ತಿನ ಮತ ಮೌಢ್ಯಗಳೊಂದಿಗೆ ಉದ್ದಕ್ಕೂ ಹೋರಾಡುತ್ತಾ ವಿಶ್ವಶಾಂತಿಯ ಕನಸು ಕಂಡ ಚೇತನಕ್ಕೆ ಒಂದು ಸಂಕೇತ ವಾಗಿದೆ.

**ಜಿ. ಎಸ್. ಶಿವರುದ್ರಪ್ಪ**

# ಕ್ರಿಶ್ಚಿಯನ್ ಬೋಧನೆ: ಒಂದು ಮುನ್ನುಡಿ

ಮನುಷ್ಯ ತನ್ನ ಹುಟ್ಟು–ಸಾವುಗಳ ನಡುವೆ ಯಾವ ಬದುಕನ್ನು ಬಾಳುತ್ತಾನೊ ಅದೇ ಅವನ ಇಡೀ ಅಸ್ತಿತ್ವ. ಆದ್ದರಿಂದ ಸುಖ ಸಂಪಾದನೆಯೆ ಅವನ ಐಹಿಕ ಜೀವನದ ಗುರಿ ಎಂದು ನಾನು ಐವತ್ತು ವರ್ಷ ಭಾವಿಸಿದ್ದೆ. ಆ ಸುಖವನ್ನು ಸಂಪಾದಿಸಲು ಪ್ರಯತ್ನವನ್ನೂ ಮಾಡಿದೆ; ಆದರೆ ವಯಸ್ಸು ಹೆಚ್ಚಿದ ಹಾಗೆ ಇಂಥ ಸುಖ ಇಲ್ಲ, ಅದು ಇರುವುದು ಸಾಧ್ಯವೂ ಇಲ್ಲ ಎನ್ನುವುದು ಸ್ಪಷ್ಟವಾಯಿತು. ನಾನು ಹುಡುಕಿ ಹೊರಟ ಸುಖ ನನಗೆ ಸಿಕ್ಕಲಿಲ್ಲ. ಅಷ್ಟೆ ಅಲ್ಲ. ಯಾವುದನ್ನು ಸಾಧಿಸಿದರೆ ಸುಖ ಸಿಗುತ್ತದೆ ಎಂದು ತಿಳಿದಿದ್ದೆನೊ ಅದನ್ನು ಸಾಧಿಸಿದ ಕೂಡಲೆ ಆ ಸುಖ ಮಾಯವಾಗುತ್ತಿತ್ತು. ನನ್ನ ದುಃಖ ದಿನದಿನಕ್ಕೂ ಹೆಚ್ಚಾಗುತ್ತ ಬಂತು; ನನ್ನ ಸಾವು ಅನಿವಾರ್ಯ ಎನ್ನುವುದು ಹೆಚ್ಚುಹೆಚ್ಚಾಗಿ ಸ್ಪಷ್ಟವಾಗುತ್ತ ಬಂತು; ದುಃಖಮಯವೂ ಅರ್ಥಶೂನ್ಯವೂ ಆದ ಈ ಜೀವನದಲ್ಲಿ ನನಗಾಗಿ ಕಾದಿರುವುದು ಕೇವಲ ನೋವು, ಬೇನೆ, ವೃದ್ಧಾಪ್ಯ ಹಾಗೂ ಸಾವು ಎನ್ನುವುದು ಅರ್ಥವಾಯಿತು. "ಇದು ಹೀಗೇಕೆ?" ಎಂದು ನನ್ನನ್ನು ನಾನೇ ಕೇಳಿಕೊಂಡೆ. ಯಾವ ಉತ್ತರವೂ ಸಿಗಲಿಲ್ಲ. ನಾನು ಕಂಗೆಟ್ಟೆ.

"ತನಗಾಗಿ ಯಾರೂ ಸುಖವನ್ನು ಬಯಸಬಾರದು: ಸುಖವನ್ನು ಬೇರೆಯವರಿಗಾಗಿ, ಅಂದರೆ ನಮ್ಮ ಹತ್ತಿರದವರಿಗಾಗಿ, ಎಲ್ಲ ಮಾನವರಿಗಾಗಿ ಬಯಸಬೇಕು" ಎಂದು ಕೆಲವರು ಹೇಳಿದರು. ಇದನ್ನು ನಂಬಲು ಪ್ರಯತ್ನಮಾಡಿದೆ. ಆದರೆ ಮನಸ್ಸಿಗೆ ಸಮಾಧಾನ ದೊರಕಲಿಲ್ಲ. ಕಾರಣ, ನಾನು ಎಷ್ಟು ಪ್ರಾಮಾಣಿಕವಾಗಿ ನನ್ನ ಸುಖವನ್ನು ಬಯಸಿದೆನೊ ಅಷ್ಟೇ ಪ್ರಾಮಾಣಿಕವಾಗಿ ಬೇರೆಯವರ ಸುಖವನ್ನು ಬಯಸುವುದು ನನಗೆ ಸಾಧ್ಯವಾಗಲಿಲ್ಲ. ಇದಕ್ಕೂ ಹೆಚ್ಚಾಗಿ ಉಳಿದವರೆಲ್ಲ ನನ್ನಂತೆಯೇ ದುಃಖ ಹಾಗೂ ಸಾವಿಗೆ ಗುರಿಯಾಗಿದ್ದುದರಿಂದ, ಅವರ ಸುಖಕ್ಕಾಗಿ ನಾನು ಮಾಡುವ ಪ್ರಯತ್ನಗಳೆಲ್ಲ ವ್ಯರ್ಥ ಎಂದು ಅನ್ನಿಸಿತು.

ನಾನು ಅಸಾಧಾರಣ ಮನುಷ್ಯನಾಗಿರುವುದರಿಂದ ಹೀಗೆ ಕಂಗೆಡುತ್ತಿದ್ದೇನೆ; ಬೇರೆಯ ಜನಕ್ಕೆ ತಾವೇಕೆ ಬದುಕುತ್ತಿದ್ದೇವೆ ಎಂದು ತಿಳಿದಿದೆ; ಅದಕ್ಕೆ ಅವರು ಕಂಗೆಡುವುದಿಲ್ಲ ಎನ್ನುವ ಯೋಚನೆ ಬಂತು; ನಾನು ಇನ್ನೂ ಕಂಗೆಟ್ಟುಹೋದೆ.

ಬೇರೆಯ ಜನರನ್ನು ಗಮನಿಸಲು ಪ್ರಾರಂಭಿಸಿದೆ. ಆದರೆ ತಾವೇಕೆ ಬದುಕಿದ್ದೇವೆ ಎನ್ನುವುದು ಅವರಿಗೆ ನನ್ನಷ್ಟೆ ತಿಳಿದಿತ್ತು. ತಮ್ಮ ಅಜ್ಞಾನವನ್ನು ಜೀವನದ ಗಡಿಬಿಡಿಯಲ್ಲಿ ಹುದುಗಿಹಾಕಲು ಅವರು ಪ್ರಯತ್ನಪಡುತ್ತಿದ್ದರು. ಇನ್ನು ಕೆಲವರು ತಾವು

ಮಕ್ಕಳಾರಭ್ಯ ಕಲಿತಿದ್ದ ಬೇರೆ ಬೇರೆ ಧರ್ಮಗಳಲ್ಲಿ ನಂಬಿಕೆ ಇಟ್ಟಿರುವುದಾಗಿ ಹೇಳಿದರು; ಆದರೆ ಅವರು ಯಾವುದರಲ್ಲಿ ನಂಬಿಕೆ ಇಟ್ಟಿದ್ದರೊ ಅದನ್ನು ನಂಬುವುದು ಅಸಾಧ್ಯವಾಗಿತ್ತು. ಅದು ಅಷ್ಟು ಮೂರ್ಖತನದ್ದಾಗಿತ್ತು. ಇದರ ಜೊತೆಗೆ ಅನೇಕರು ನಂಬಿದ್ದೇವೆ ಎಂದು ನಟಿಸುತ್ತಿದ್ದರೆ ವಿನಹ ಅವರ ಹೃದಯಾಂತರಾಳದಲ್ಲಿ ನಂಬಿಕೆ ಇರಲಿಲ್ಲ.

ಜೀವನದ ಗಡಿಬಿಡಿಯಲ್ಲಿ ನನ್ನನ್ನು ನಾನೆ ಮರೆಯುವುದು ಸಾಧ್ಯವಾಗಲಿಲ್ಲ; ಯಾವ ಗಡಿಬಿಡಿಯೂ ನನ್ನ ಮುಂದೆ ಮತ್ತೆ ಮತ್ತೆ ಬರುತ್ತಿದ್ದ ಪ್ರಶ್ನೆಯನ್ನು ಮುಚ್ಚಿಹಾಕಲು ಶಕ್ತವಾಗಲಿಲ್ಲ. ಎಳೆತನದಲ್ಲಿ ಕಲಿತಿದ್ದ ಧರ್ಮದಲ್ಲಿ ಮತ್ತೆ ಹೊಸದಾಗಿ ನಂಬಿಕೆ ಬೆಳೆಸಿಕೊಳ್ಳುವುದು ನನಗೆ ಸಾಧ್ಯವಾಗಲಿಲ್ಲ: ನಾನು ಪ್ರಬುದ್ಧನಾದ ಕೂಡಲೆ ಅದು ತನ್ನಂತಾನೆ ಮಾಯವಾಗಿ ಬಿಟ್ಟಿತ್ತು. ಹೆಚ್ಚು ಹೆಚ್ಚು ವ್ಯಾಸಂಗಮಾಡಿದ ಹಾಗೆಲ್ಲ ಸತ್ಯ ಎನ್ನುವುದು ಈ ಬೋಧನೆಗಳಲ್ಲಿಲ್ಲ ಎನ್ನುವುದು ನನಗೆ ಮನದಟ್ಟಾಯಿತು. ಅಲ್ಲಿದ್ದುದ್ದು (1) ಜನಗಳಿಗೆ ಮೋಸಮಾಡಿದವರ ಆಷಾಢಭೂತಿತನ ಮತ್ತು ಹಣ ಮಾಡಿಕೊಳ್ಳುವ ಬಯಕೆ: (2) ಮೋಸಕ್ಕೆ ಒಳಗಾದವರ ಮನೋದೌರ್ಬಲ್ಯ. ಮೊಂಡುತನ ಮತ್ತು ಭಯ.

ಇಂಥ ಬೋಧನೆಯ ವಿರೋಧಾಭಾಸಗಳು. ಸಣ್ಣತನ. ಮನುಷ್ಯರನ್ನು ನಿರಂತರ ಯಾತನೆಗೆ[1] ಗುರಿ ಮಾಡುವ ದೇವರನ್ನು ಒಪ್ಪುವ ಕ್ರೌರ್ಯ – ಇವೆಲ್ಲ ಹಾಗಿರಲಿ. ನನ್ನ ನಂಬಿಕೆಗೆ ಮುಖ್ಯವಾಗಿ ಅಡ್ಡಿ ಬಂದದ್ದು ಸತ್ಯ ತನ್ನಲ್ಲೇ ಇದೆ ಎಂದು ಹೇಳಿಕೊಳ್ಳುವ ಸಾಂಪ್ರದಾಯಿಕ ಕ್ರಿಶ್ಚಿಯನ್ ಧರ್ಮದ ಜೊತೆಜೊತೆಗೆ ಕ್ಯಾಥೊಲಿಕ್. ಲ್ಯೂಥೇರಿಯನ್ ಮತ್ತು ಸುಧಾರಿತ ಚರ್ಚುಗಳೂ ಇವೆ ಎನ್ನುವ ತಿಳುವಳಿಕೆ: ಇವೂ ಸತ್ಯ ತಮ್ಮಲ್ಲೇ ಇದೆ ಎಂದು ಹೇಳುತ್ತವೆ. ಹೀಗಿದ್ದರೂ ಪ್ರತಿಯೊಂದರ ಕ್ರಿಶ್ಚಿಯನ್ ಬೋಧನೆ ಮಾತ್ರ ಬೇರೆಯಾದದ್ದು! ಈ ಕ್ರಿಶ್ಚಿಯನ್ ಬೋಧನೆಗಳಲ್ಲದೆ ಇತರ ರೀತಿಯ ಧಾರ್ಮಿಕ ಬೋಧನೆಗಳಿವೆ ಎನ್ನುವುದೂ ನನಗೆ ತಿಳಿದಿತ್ತು. ಬೌದ್ಧರು. ಬ್ರಾಹ್ಮಣರು. ಮುಸಲ್ಮಾನರು. ಕನಪ್ಯೂಷಿಯುನ್ನಿನ ಅನುಯಾಯಿಗಳು. ಮತ್ತಿತರು – ಇವರೆಲ್ಲರೂ ಇದೇ ರೀತಿಯಲ್ಲಿ ಸತ್ಯ ತಮ್ಮಲ್ಲಿ ಮಾತ್ರ ಇದೆಯೆಂದೂ. ಉಳಿದೆಲ್ಲ ಬೋಧನೆಗಳು ಭ್ರಾಮಕವೆಂದೂ ಹೇಳುತ್ತಾರೆ.

ನನ್ನ ಎಳೆತನದ ನಂಬಿಕೆಗೆ ಮರಳಿ ಹೋಗುವುದು ಸಾಧ್ಯವಿರಲಿಲ್ಲ: ಬೇರೆ ದೇಶಗಳು ನಂಬಿದ್ದೇವೆ ಎಂದು ತೋರಿಸಿಕೊಳ್ಳುವ ಧರ್ಮಗಳನ್ನು ಒಪ್ಪುವುದೂ

---

[1] ಈ ವಿರೋಧಾಭಾಸ. ಅಸಂಬದ್ಧತೆ ಹಾಗೂ ಕ್ರೌರ್ಯಗಳನ್ನು **ಮತಧರ್ಮಶಾಸ್ತ್ರ ಸಿದ್ಧಾಂತಗಳ ವಿಮರ್ಶೆ** ಎನ್ನುವ ಪುಸ್ತಕದಲ್ಲಿ ವಿಶದವಾಗಿ ವಿವರಿಸಿದ್ದೇನೆ: ಇದರಲ್ಲಿ ಸಾಂಪ್ರದಾಯಿಕ ಮತಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ಎಲ್ಲ ಚರ್ಚ್ ಸಿದ್ಧಾಂತಗಳನ್ನೂ ಸೂತ್ರ ಸೂತ್ರವಾಗಿ ವಿವೇಚಿಸಿದ್ದೇನೆ.

— ಲಿಯೊ ಟಾಲ್‌ಸ್ಟಾಯ್

ಸಾಧ್ಯವಿರಲಿಲ್ಲ. ಏಕೆಂದರೆ ಈ ಧರ್ಮಗಳಲ್ಲೂ ಅದೇ ವಿರೋಧಾಭಾಸಗಳು, ಅಸಂಬದ್ಧತೆಗಳು, ಪವಾಡಗಳು, ಉಳಿದ ಧರ್ಮಗಳ ನಿರಾಕರಣೆಗಳಿದ್ದುವು. ಇದಕ್ಕೂ ಹೆಚ್ಚಾಗಿ ತಮ್ಮ ಬೋಧನೆಯಲ್ಲಿ ಕುರುಡು ನಂಬಿಕೆ ಇರಿಸಬೇಕು ಎನ್ನುವ ಅನ್ಯಾಯವಾದ ಹಠ ಅವುಗಳಲ್ಲಿತ್ತು.

ನನ್ನ ಪ್ರಶ್ನೆಗೆ ಉತ್ತರ ಇಲ್ಲ. ಈಗ ಇರುವ ಯಾವ ಧರ್ಮದಿಂದಲೂ ನನ್ನ ಯಾತನೆ ದೂರವಾಗುವುದಿಲ್ಲ ಎನ್ನುವುದು ನನಗೆ ಧೃಡವಾಯಿತು. ಇದರಿಂದ ನಾನೆಷ್ಟು ಕಂಗೆಟ್ಟೆನೆಂದರೆ ಆತ್ಮಹತ್ಯದ ಯೋಜನೆ ಕೂಡ ಬರತೊಡಗಿತು.

ಹೀಗಿದ್ದಾಗಲೆ ನನಗೆ ಮುಕ್ತಿಯ ಹಾದಿ ಕಂಡದ್ದು. ಸುವಾರ್ತೆಗಳಲ್ಲಿ ನನ್ನ ಪ್ರಶ್ನೆಗೆ ಉತ್ತರ ಸಿಕ್ಕುತ್ತದೆ ಎನ್ನುವ ಮಸುಕುಮಸುಕಾದ ನಂಬಿಕೆ ನನಗೆ ಎಳೆತನದಲ್ಲೂ ಇತ್ತು: ಮುಕ್ತಿ ಲಾಭವಾಗಿದ್ದು ಈ ನಂಬಿಕೆಯಿಂದ. ಅವುಗಳ ಬೋಧನೆಯಲ್ಲಿ ನನಗೆ ಸತ್ಯದ ಸುಳಿವು ಸಿಕ್ಕಿತು: (ಕ್ರಿಶ್ಚಿಯನ್ ಚರ್ಚ್ ಸಿದ್ಧಾಂತಗಳು ಈ ಸುವಾರ್ತೆಗಳನ್ನು ವಿಕೃತಗೊಳಿಸಿವೆ) ಸಮಸ್ಯೆಯ ಪರಿಹಾರಕ್ಕೆ ಕಡೆಯ ಪ್ರಯತ್ನ ಮಾಡಿದೆ. ಎಲ್ಲ ವ್ಯಾಖ್ಯಾನಗಳನ್ನೂ ಬದಿಗಿಟ್ಟು. ಈ ಸುವಾರ್ತೆಗಳನ್ನು ಓದಲು. ಅಭ್ಯಾಸಮಾಡಲು. ಅವುಗಳ ಅಂತರಾರ್ಥವನ್ನು ತಿಳಿಯಲು ಪ್ರಾರಂಭಿಸಿದೆ. ಎಷ್ಟೆಷ್ಟು ಆಳಕ್ಕಿಳಿದು ಅದರ ಅರ್ಥಮಾಡಿಕೊಂಡೆನೋ. ಅಷ್ಟಷ್ಟೂ ಹೊಸತಾದ ಒಂದು ಅರ್ಥ ಸ್ಫುರಿಸಿತು. ಇದು ಕ್ರಿಶ್ಚಿಯನ್ ಚರ್ಚ್‌ಗಳ ಬೋಧನೆಗಿಂತ ಭಿನ್ನವಾಗಿತ್ತು. ನಿಜ: ಆದರೆ ನನ್ನ ಪ್ರಶ್ನೆಗೆ ಉತ್ತರಕೊಟ್ಟಿತು. ಕೊನೆಗೆ ಈ ಉತ್ತರ ಸಂಪೂರ್ಣವಾಗಿ. ಸ್ಪಷ್ಟವಾಗಿ ಸಿಕ್ಕಿತು.

ಈ ಉತ್ತರ ಸ್ಪಷ್ಟವಾಗಿದ್ದುದಷ್ಟೇ ಅಲ್ಲ ಸಂದೇಹಾತೀತವಾಗಿತ್ತು. ಮೊದಲನೆಯದಾಗಿ ನನ್ನ ಹೃದಯದ ಹಾಗೂ ಬುದ್ಧಿಯ ಅಪೇಕ್ಷೆಗಳೊಡನೆ ಅದು ಸಂಪೂರ್ಣವಾಗಿ ತಾಳೆಯಾಯಿತು. ಎರಡನೆಯದಾಗಿ. ಮೇಲ್ನೋಟಕ್ಕೆ ಕಾಣಿಸಬಹುದಾದಂತೆ ನಾನು ತಿಳಿದುಕೊಂಡ ಅರ್ಥ ಸುವಾರ್ತೆಗಳ ತೀರಾ ವಿಶಿಷ್ಟವಾದ ವಿವರಣೆಯೇನೂ ಆಗಿರಲಿಲ್ಲ; ಅಥವಾ ಕೇವಲ ಕ್ರಿಸ್ತನ ದಿವ್ಯದರ್ಶನದ ವಿವರಣೆಯೂ ಆಗಿರಲಿಲ್ಲ. ಸುವಾರ್ತೆಗಳು ಬರುವುದಕ್ಕೆ ಮೊದಲು ಹಾಗೂ ಅವು ಬಂದನಂತರ ಮಾನವ ಜನಾಂಗದ ಅತ್ಯುತ್ತಮ ಪ್ರತಿನಿಧಿಗಳು ಜೀವನದ ಪ್ರಶ್ನೆಗೆ ಕೊಟ್ಟ ಉತ್ತರದಂತೆಯೇ ನನ್ನ ಉತ್ತರವೂ ಇತ್ತು. ಕುರುಡು ನಂಬಿಕೆಯ ಮೇಲೆ ಯಾವ ಧರ್ಮವನ್ನೂ ಒಪ್ಪದಿದ್ದ ಮೋಸೆಸ್. ಇಸಯ್ಯ. ಕನ್‌ಫ್ಯೂಷಿಯಸ್. ಪ್ರಾಚೀನ ಗ್ರೀಕರು. ಬುದ್ಧ. ಸಾಕ್ರೆಟೀಸ್. ಮತ್ತು ಇತ್ತೀಚಿನ ಪಾಸ್ಕಲ್. ಸ್ಪಿನೋಜ, ಫೀಷೆ, ಫ್ಯೂಯಿರ್‌ಬಾಕ್ ಮುಂತಾದವರು ಜೀವನದ ಅರ್ಥ ಏನು ಎನ್ನುವುದರ ಬಗ್ಗೆ ಪ್ರಾಮಾಣಿಕವಾಗಿ ಚಿಂತನೆಮಾಡಿ. ಮಾತನಾಡಿದ್ದಾರೆ. ಸುವಾರ್ತೆಗಳಿಂದ ಸಂಗ್ರಹಿಸಿದ ನನ್ನ ಸತ್ಯದ ತಿಳುವಳಿಕೆ ಬೇರೆಯವರ ತಿಳುವಳಿಕೆಯಿಂದ ಭಿನ್ನವಾಗಿರಲಿಲ್ಲ ಅಷ್ಟೆ ಅಲ್ಲ; ಆ ತಿಳುವಳಿಕೆಯಿಂದಾಗಿ ನಾನು ಹಿಂದಿನ ಹಾಗೂ ಇಂ

ಅತ್ಯುತ್ತಮ ವ್ಯಕ್ತಿಗಳ ಸಹಚರ್ಯದಲ್ಲಿದ್ದೆ. ಈ ಸತ್ಯದಲ್ಲಿ ನನ್ನ ನಂಬಿಕೆ ಬೆಳೆಯಿತು; ಅದರಿಂದ ಮತ್ತೆ ನನಗೆ ಅಭಯಪ್ರದಾನ ದೊರಕಿತು. ಅಂದಿನಿಂದ ಈ ಇಪ್ಪತ್ತು ವರ್ಷಗಳು ಸಂತೋಷವಾಗಿ ಬದುಕಿದ್ದೇನೆ: ಇದೇ ಬಗೆಯ ಸಂತೋಷದಿಂದ ನನ್ನ ಸಾವನ್ನೂ ಸಮೀಪಿಸುತ್ತಿದ್ದೇನೆ.

"ಜೀವನದ ಅರ್ಥ ಏನು?" ಎನ್ನುವ ಪ್ರಶ್ನೆಗೆ ದೊರೆತ ಉತ್ತರವನ್ನು ಉಳಿದವರ ಮುಂದೆ ಈಗ ಇಡುತ್ತಿದ್ದೇನೆ. ಈ ಉತ್ತರ ನನಗೆ ತುಂಬ ಸಂತೋಷವನ್ನೂ ನಿರಾಳವಾದ ಮನಸ್ಸನ್ನೂ ಕೊಟ್ಟಿದೆ.

ನನ್ನ ವಯಸ್ಸು, ನನ್ನ ದೇಹಾರೋಗ್ಯಗಳೆರಡೂ "ಸಾವು ದೂರವಿಲ್ಲ" ಎಂದು ಹೇಳುತ್ತಿವೆ. ಹೀಗಿರುವಾಗ ನನಗೆ ಯಾರ ದಾಕ್ಷಿಣ್ಯ ಯಾಕೆ? ಅಥವ, ಅಂಥದು ಇದ್ದರೆ ನನ್ನ ಈ ಧರ್ಮದ ವಿವರಣೆ ನನ್ನ ಯೋಗಕ್ಷೇಮಕ್ಕೆ ಸಹಕಾರಿಯಲ್ಲ ಎಂದು ಚೆನ್ನಾಗಿ ತಿಳಿದಿದ್ದೇನೆ. ಅಷ್ಟೇ ಅಲ್ಲ ನನ್ನಿಂದ ಕೇವಲ ಕಲಾಕೃತಿಗಳಷ್ಟನ್ನೇ ಬಯಸುವ–ಧಾರ್ಮಿಕ ಚರ್ಚೆಯನ್ನು ಅವರು ಒಲ್ಲರು – ನಾಸ್ತಿಕರನ್ನು ಈ ವಿವರಣೆ ಸುಮ್ಮನೆ ಕಲಕಿ, ದುಃಖವನ್ನು ಉಂಟುಮಾಡುತ್ತದೆ. ಇದೇ ರೀತಿಯಲ್ಲಿ ನಾನು ಧರ್ಮದ ಬಗ್ಗೆ ಏನು ಬರೆದರೂ ಗೊಂದಲಕ್ಕೆ ಒಳಗಾಗಿ ನನ್ನನ್ನು ಛೇದಿಸುವ ಆಸ್ತಿಕರೂ ದುಃಖಕ್ಕೆ ಒಳಗಾಗುತ್ತಾರೆ. ಅಲ್ಲದೆ, ನನ್ನ ಸಾವಿಗೆ ಮುಂಚೆ[2] ಈ ಬರವಣಿಗೆ ಜನಗಳ ಕಣ್ಣ ಮುಂದೆ ಬರುವುದು ಅಸಂಭವ.

ಆದ್ದರಿಂದ ನಾನು ಈಗ ಮಾಡುತ್ತಿರುವುದು ದುರಾಸೆಯಿಂದಾಗಲಿ, ಕೀರ್ತಿಯ ಬಯಕೆಯಿಂದಾಗಲಿ ಅಥವಾ ಇನ್ನು ಯಾವುದೇ ಪ್ರಾಪಂಚಿಕ ಲಾಭದಿಂದಾಗಲಿ ಪ್ರೇರಿತ ವಾಗಿಲ್ಲ. ಯಾರು ನನ್ನನ್ನು ಇಲ್ಲಿಗೆ ಕಳುಹಿಸಿದರೋ ಅವನ ಅಪೇಕ್ಷೆಯನ್ನು ನಾನು ಎಲ್ಲಿ ಪೂರ್ಣಗೊಳಿಸದೆ ವಿಫಲನಾಗುತ್ತೇನೊ ಎನ್ನುವ ಭಯವೊಂದೇ ಈ ಬರವಣಿಗೆಗೆ ಪ್ರೇರಕವಾಗಿರುವುದು : ಪ್ರತಿ ಗಂಟೆಯೂ ಅವನಲ್ಲಿ ಐಕ್ಯವಾಗುವುದನ್ನೇ ನಾನು ಕಾಯುತ್ತಿದ್ದೇನೆ.

ನಾನು ಕೇಳಿಕೊಳ್ಳುವುದು ಇಷ್ಟು : ನಾನು ಬರೆದಿರುವುದನ್ನು ಓದಿ ತಿಳಿಯ ಬಯಸುವವರು ನಾನು ಮಾಡಿರುವಂತೆ ಎಲ್ಲ ಪ್ರಾಪಂಚಿಕ ವಿಚಾರಗಳನ್ನೂ ಬದಿಗಿಟ್ಟು, ಆತುರಪಡದೆ ಕೋಪಕ್ಕೆ ಎಡೆಕೊಡದೆ, ಇದನ್ನು ಓದಿ, ತಿಳಿಯಬೇಕು. ಶಾಶ್ವತವಾದ ಸತ್ಯ ಹಾಗೂ ಒಳಿತಿನ ಮೂಲವಾದ ಆತನ ಇಚ್ಛಾಮಾತ್ರದಿಂದ ನಾವಿಲ್ಲಿಗೆ ಬಂದಿದ್ದೇವೆ :

---

2 ಟಾಲ್‌ಸ್ಟಾಯ್ ಧರ್ಮದ ಬಗ್ಗೆ ಬರೆದಿದ್ದುದು ಆಚ್ಚಾಗಲು ರಷ್ಯಾದ ಪರವಾನಗಿ ಇರಲಿಲ್ಲ; ಅದಕ್ಕೆ ಈ ಹೇಳಿಕೆ - [ಮೊದಲ ಪ್ರಕಟಣೆ 1898: ಬರೆದಿದ್ದುದು ಇದಕ್ಕೂ ಸುಮಾರು ಮುಂಚೆ]

ಸಶರೀರರಾಗಿ ನಾವಿಲ್ಲಿ ಇನ್ನು ಬಹುಕಾಲ ಉಳಿದಿರುವುದೂ ಇಲ್ಲ: ಇದನ್ನು ಓದುವವರು ಆತನನ್ನು ಮಾತ್ರ ತಮ್ಮ ಕಣ್ಣ ಮುಂದೆ ಇರಿಸಿಕೊಳ್ಳಬೇಕು. ನನ್ನ ವಾದ ಅವರಿಗೆ ಒಪ್ಪದೆ ಹೋದರೆ ತಿರಸ್ಕಾರ ಅಥವ ದ್ವೇಷದಿಂದಲ್ಲ—ಕರುಣೆ ಪ್ರೀತಿಗಳಿಂದ ನನ್ನನ್ನು ತಿದ್ದಲಿ. ನನ್ನ ವಾದ ಅವರಿಗೆ ಒಪ್ಪಿತವಾದರೆ ನಾನು ಹೇಳುತ್ತಿರುವ ಸತ್ಯ ನನ್ನದಲ್ಲ. ದೇವರದ್ದು ಎನ್ನುವ ನೆನಪು ಇರಿಸಿಕೊಳ್ಳಲಿ. ಸತ್ಯದ ಅರಿವು ಮೂಡಿದಾಗ ಎಲ್ಲರಲ್ಲೂ ಇದು ಕಾಣುತ್ತದೆ; ಅವರು ಅದನ್ನು ಹೇಳಿಯೂ ಹೇಳುತ್ತಾರೆ. ಸತ್ಯದ ಒಂದು ಭಾಗ ನನ್ನ ಮುಖಾಂತರ ಹೊರ ಬಂದಿರುವುದು ಒಂದು ಆಕಸ್ಮಿಕ. ಎಲ್ಲರಿಗೂ ಸಂಭವಿಸಬಹುದಾದ ಆಕಸ್ಮಿಕ. ಅಷ್ಟೆ.

# ಧರ್ಮ ಮತ್ತು ನೀತಿ[1]

ನೀವು ಕೇಳುವುದು: (1) ಧರ್ಮ ಎನ್ನುವ ಮಾತಿಗೆ ನನ್ನ ಅರ್ಥ ಏನು? ಮತ್ತು (2) ನಾನು ಈ ಮಾತನ್ನು ಅರ್ಥಮಾಡಿಕೊಂಡ ಪ್ರಕಾರ ಧರ್ಮಕ್ಕೆ ಯಾವ ಸಂಬಂಧವೂ ಇಲ್ಲದ ಒಂದು ನೀತಿ ಶಾಸ್ತ್ರ ಇರುವುದು ಸಾಧ್ಯವೇ?

ಪ್ರಶ್ನೆಗಳು ತುಂಬ ಮುಖ್ಯವಾದವು. ಅವುಗಳನ್ನು ತುಂಬ ಚೆನ್ನಾಗಿಯೂ ಕೇಳಿದ್ದೀರಿ. ನನಗೆ ಸಾಧ್ಯವಿದ್ದಮಟ್ಟಿಗೂ ಸರಿಯಾದ ಉತ್ತರ ಕೊಡಲು ಪ್ರಯತ್ನಿಸುತ್ತೇನೆ.

ಸಾಮಾನ್ಯವಾಗಿ **ಧರ್ಮ** ಎನ್ನುವ ಮಾತಿಗೆ ಮೂರು ಬಗೆಯ ಅರ್ಥ ಕೊಡುತ್ತಾರೆ:

ಧರ್ಮ ಎಂದರೆ ದೇವರು ಮಾನವನಿಗೆ ಕೊಟ್ಟಿರುವ ಒಂದು ವಿಶೇಷವಾದ, ದಿವ್ಯಜ್ಞಾನ; ಈ ಜ್ಞಾನಕ್ಕೆ ಅನುಗುಣವಾಗಿ ದೇವರನ್ನು ಪೂಜಿಸುವುದೆ ಧರ್ಮ ಎನ್ನುವುದು ಮೊದಲನೆಯ ಅರ್ಥ. ಒಂದಲ್ಲ ಒಂದು ಧರ್ಮದಲ್ಲಿ ನಂಬಿಕೆಯಿಟ್ಟಿರುವ ಜನ ಧರ್ಮಕ್ಕೆ ಈ ಅರ್ಥಕೊಟ್ಟು, ಅವರ ಧರ್ಮವೊಂದೆ ನಿಜವಾದದ್ದು ಎಂದು ಹೇಳುತ್ತಾರೆ.

ಧರ್ಮ ಎಂದರೆ ಸಂಗ್ರಹೀಕೃತವಾಗಿರುವ ಕೆಲವು ಮೂಢ ನಂಬಿಕೆಗಳು ಹಾಗೂ ಅವಕ್ಕೆ ಅನುಗುಣವಾದ ಒಂದು ಮೂಢ ಉಪಾಸನೆಯ ಕ್ರಮ ಎನ್ನುವುದು ಎರಡನೆಯ ಅರ್ಥ. ಧರ್ಮಕ್ಕೆ ಈ ಅರ್ಥವನ್ನು ಹಚ್ಚುವವರು ಸಾಮಾನ್ಯವಾಗಿ ನಾಸ್ತಿಕರು ಅಥವಾ ತಾವು ವಿವೇಚಿಸುತ್ತಿರುವ ಯಾವುದೇ ಒಂದು ಧರ್ಮವನ್ನು ಒಪ್ಪದವರು.

ಧರ್ಮ ಎಂದರೆ ಜನಸಾಮಾನ್ಯರಿಗೆ ಸಾಂತ್ವನ ನೀಡಲು. ಅವರ ರಾಗಾವೇಶಗಳನ್ನು ಅಂಕೆಯಲ್ಲಿಡಲು (ಅಂದರೆ. ಅವರನ್ನು ಹಿಡಿತದಲ್ಲಿಟ್ಟುಕೊಳ್ಳಲು) ಪ್ರಾಜ್ಞರು ಮಾಡಿರುವ ಪ್ರಮೇಯಗಳ ಹಾಗೂ ಕಾಯಿದೆಗಳ ಮೊತ್ತ ಎನ್ನುವುದು ಮೂರನೆಯ ಅರ್ಥ. ಇಂಥ ಜನ ಧರ್ಮದ ಬಗ್ಗೆ ಅಲಕ್ಷ್ಯದಿಂದಿದ್ದರೂ ಸರಕಾರ ನಡೆಸುವುದಕ್ಕೆ ಇದೊಂದು ಉಪಯುಕ್ತ ಸಾಧನ ಎಂದು ಪರಿಗಣಿಸುತ್ತಾರೆ.

---

1 ಜರ್ಮನ್ ನೈತಿಕ ಗೋಷ್ಠಿಯೊಂದು ಕೇಳಿದ ಪ್ರಶ್ನೆಗಳಿಗೆ ಟಾಲ್‌ಸ್ಟಾಯ್ ಕೊಟ್ಟ ಉತ್ತರ.

ಮೊದಲನೆಯ ಸೂತ್ರಕ್ಕನುಗುಣವಾಗಿ ಧರ್ಮ ಎನ್ನುವುದು ಖಂಡಿತವೂ ಸಿದ್ಧ ಸತ್ಯವೂ ಆದ ವಸ್ತುವಾಗಿರುವುದರಿಂದ ಜನ ಹಿತಕ್ಕಾಗಿ ಈ ಸತ್ಯವನ್ನು ಸಾಧ್ಯವಿರುವ ಎಲ್ಲ ರೀತಿಯಲ್ಲೂ ಪ್ರಚಾರ ಮಾಡುವುದು ಅಪೇಕ್ಷಣೀಯವಷ್ಟೇ ಅಲ್ಲ ಅಗತ್ಯವಾದದ್ದು.

ಎರಡನೆಯ ಸೂತ್ರಕ್ಕನುಗುಣವಾಗಿ ಧರ್ಮ ಎನ್ನುವುದು ಮೂಢ ನಂಬಿಕೆಗಳ ಮೊತ್ತವಾದದ್ದರಿಂದ ಜನಹಿತ ದೃಷ್ಟಿಯಿಂದ ಮನುಷ್ಯನನ್ನು ಸಾಧ್ಯವಿರುವ ಎಲ್ಲ ರೀತಿಯಿಂದಲೂ ಇದರಿಂದ ಮುಕ್ತಗೊಳಿಸಬೇಕಾದದ್ದು ಅಪೇಕ್ಷಣೀಯ ಹಾಗೂ ಅಗತ್ಯ.

ಮೂರನೆಯ ಸೂತ್ರಕ್ಕನುಗುಣವಾಗಿ ಧರ್ಮ ಎನ್ನುವುದು ಒಂದು ಉಪಯುಕ್ತವಾದ ಸಾಧನೆ. ತುಂಬ ಸುಸಂಸ್ಕೃತರಾದವರಿಗೆ ಅದರ ಅಗತ್ಯ ಇಲ್ಲ: ಆದರೆ ಜನ ಸಾಮಾನ್ಯರನ್ನು ಹಿಡಿತದಲ್ಲಿಟ್ಟುಕೊಂಡು, ಅವರಿಗೆ ಸಮಾಧಾನ ಕೊಡಲು ಇದು ಅವಶ್ಯಕವಾದ್ದರಿಂದ ಇದನ್ನು ಎತ್ತಿ ಹಿಡಿಯಬೇಕು.

ಮೊದಲನೆಯ ಸೂತ್ರ ಯಾವುದೋ ಒಂದು ಮಟ್ಟನ್ನು ಮಾತ್ರ ಬಲ್ಲವನು ಮಾಡಿದ ಸಂಗೀತದ ವಿವರಣೆಯಂತಿದೆ. ಅವನಿಗೆ ಸಂಗೀತ ಎಂದರೆ ಚೆನ್ನಾಗಿ ತಿಳಿದಿರುವ ಒಂದೇ ಒಂದು ಮಟ್ಟು: ಅದರ ಬಗ್ಗೆ ಅವನಿಗೆ ಅತಿ ಪ್ರೀತಿ. ಅದೊಂದನ್ನೇ ಸಾಧ್ಯವಿದ್ದಷ್ಟು ಜನಕ್ಕೆ ಕಲಿಸಬೇಕು ಎನ್ನುವುದು ಅವನ ಅಭಿಪ್ರಾಯ.

ಎರಡನೆಯದು ಸಂಗೀತ ಅರ್ಥವಾಗದೆ, ಆ ಕಾರಣದಿಂದ ಅದನ್ನು ದ್ವೇಷಿಸುವ ಮನುಷ್ಯನ ವಿವರಣೆಯಂತಿದೆ. ಸಂಗೀತ ಎಂದರೆ ಕಂಠದ ಮೂಲಕವೋ ಬಾಯಿಯ ಮೂಲಕವೋ ಶಬ್ದಗಳನ್ನು ಹೊರಡಿಸುವುದು ಅಥವ ಕೈಗಳಿಂದ ಕೆಲವೊಂದು ವಾದ್ಯಗಳನ್ನು ಬಡಿಯುವುದು ಎನ್ನುವ ಇವನ ದೃಷ್ಟಿಯಲ್ಲಿ ಇದು ಅನುಪಯುಕ್ತವಾದದ್ದರ ಜೊತೆಗೆ ಹಾನಿಕರವಾದದ್ದು. ಜನರನ್ನು ಆದಷ್ಟು ಬೇಗ ಇದರಿಂದ ದೂರ ಇಡುವುದು ಒಳ್ಳೆಯದು ಎನ್ನುವ ಅಭಿಪ್ರಾಯ ಇವನದು.

ನೃತ್ಯವನ್ನು ಕಲಿಸಲು ಸಂಗೀತ ಹೇಗೆ ಉಪಯುಕ್ತವೋ ಹಾಗೆ ಕವಾಯತು ಕಲಿಸಲೂ ಅದು ಉಪಯುಕ್ತವಾದದ್ದು: ಈ ಕಾರಣದಿಂದ ಅದನ್ನು ಉಳಿಸಿಕೊಳ್ಳಬೇಕು ಎನ್ನುವುದು ಮೂರನೆಯ ಅಭಿಪ್ರಾಯ.

ಈ ಎಲ್ಲ ಸೂತ್ರಗಳ ಅಪೂರ್ಣತೆಗೆ, ವಿಭಿನ್ನತೆಗೆ ಕಾರಣ ಒಂದೆ: ಸಂಗೀತದ ಮೂಲಭೂತ ಸ್ವಭಾವವನ್ನು ಅವು ಹಿಡಿಯಲು ಶಕ್ತವಾಗಿಲ್ಲ: ವಿವರಣೆಕಾರನ ದೃಷ್ಟಿಯಿಂದ ಅವು ಸಂಗೀತದ ಕೆಲವು ಲಕ್ಷಣಗಳನ್ನು ಮಾತ್ರ ಹೇಳುತ್ತವೆ. ಈ ಮಾತು ಧರ್ಮದ ಬಗ್ಗೆ ಇರುವ ಸೂತ್ರಗಳಿಗೂ ಅನ್ವಯಿಸುತ್ತದೆ.

ಅವುಗಳಲ್ಲಿ ಮೊದಲನೆಯದರ ಪ್ರಕಾರ, ಧರ್ಮ ಎನ್ನುವುದು ಸೂತ್ರಕಾರ ಪ್ರಮಾಣವಾಗಿ ನಂಬಿರುವುದು. ಎರಡನೆಯದರ ಪ್ರಕಾರ. ಧರ್ಮ ಎನ್ನುವುದು ಬೇರೆಯವರು ತಪ್ಪಾಗಿ ನಂಬಿರುವುದು. ಮೂರನೆಯದರ ಪ್ರಕಾರ. ಧರ್ಮ ಎನ್ನುವುದು ಸೂತ್ರಕಾರನ ದೃಷ್ಟಿಯಲ್ಲಿ ಇತರರು ವಿಶ್ವಾಸವಿಡಬೇಕಾದ ವಿಚಾರ.

ಮೇಲಿನ ಮೂರು ಸೂತ್ರಗಳಲ್ಲಿ ಯಾವುದೂ ಧರ್ಮದ ಸಾರವನ್ನು ಸ್ಪಷ್ಟೀಕರಿಸಿಲ್ಲ. ಅಲ್ಲಿ ಸ್ಪಷ್ಟವಾಗಿರುವುದು ಜನ ಯಾವುದನ್ನು ಧರ್ಮ ಎಂದು ತಿಳಿದಿದ್ದಾರೋ ಅದು: ಅಥವ, ಅವರು ವಿಶ್ವಾಸವಿಟ್ಟಿರುವ ಯಾವುದೋ ಒಂದು ಧರ್ಮ. ಅಷ್ಟೆ.

ಮೊದಲನೆಯ ಸೂತ್ರ ಧರ್ಮದ ಸ್ಥಳದಲ್ಲಿ ಸೂತ್ರಕಾರನ ನಂಬಿಕೆಯನ್ನು ಸ್ಥಾಪನೆ ಮಾಡಿದರೆ, ಎರಡನೆಯದು 'ಇದು ಧರ್ಮ' ಎಂದು ತಿಳಿದಿರುವ ಕೆಲವರ ನಂಬಿಕೆಯನ್ನು ತಂದಿಟ್ಟಿದೆ. ಮೂರನೆಯ ಸೂತ್ರ ಯಾರೋ ಸರಬರಾಜು ಮಾಡಿರುವ ಧರ್ಮದಲ್ಲಿ ಕೆಲವರು ಇಟ್ಟಿರುವ ನಂಬಿಕೆಯನ್ನು ಕಾಣಿಸುತ್ತದೆ.

ಆದರೆ ನಂಬಿಕೆ ಎಂದರೇನು? ಜನ ಯಾವುದೋ ಒಂದರಲ್ಲಿ ನಂಬಿಕೆಯಿಡುತ್ತಾರಲ್ಲ ಆ ನಂಬಿಕೆ ಏಕೆ ಬಂತು? ನಂಬಿಕೆ ಎಂದರೇನು. ಅದು ಬೆಳೆದದ್ದು ಹೇಗೆ?

ತಾವು ಸುಸಂಸ್ಕೃತರು ಎಂದು ತಿಳಿದಿರುವ ಇವೊತ್ತಿನ ಜನಕ್ಕೆ ಇದು ಸಮಸ್ಯೆಯೇ ಅಲ್ಲ. "ಪ್ರಾಕೃತಿಕ ಘಟನೆಗಳ ಅರ್ಥ ಹೊಳೆಯದಿದ್ದಾಗ ಮನುಷ್ಯ ಹೆದರಿದ: ಹೆದರಿ ಈ ಶಕ್ತಿಗಳಿಗೆ ವ್ಯಕ್ತಿರೂಪವನ್ನೂ ದೇವತ್ವವನ್ನೂ ಆರೋಪಿಸಿ ಅವನ್ನು ಪೂಜೆ ಮಾಡಲು ಆರಂಭಿಸಿದ; ಈ ತರದ ಮೂಢಭಯದಲ್ಲಿ ನಮ್ಮ ಧರ್ಮದ ಮೂಲ ಇದೆ" ಎಂದು ಅವರು ತಿಳಿದಿದ್ದಾರೆ.

ವಿಚಾರವನ್ನೇ ಮಾಡದೆ ಇವೊತ್ತಿನ ಸುಸಂಸ್ಕೃತ ಸಮುದಾಯ ಈ ಅಭಿಪ್ರಾಯವನ್ನು ಸುಮ್ಮನೆ ಒಪ್ಪಿಬಿಡುತ್ತಾರೆ. ವೈಜ್ಞಾನಿಕರೂ. ಅಷ್ಟೆ. ಈ ಅಭಿಪ್ರಾಯವನ್ನು ಖಂಡಿಸುವ ಬದಲು ಅವರೇ ಇದನ್ನು ಬಲವಾಗಿ ಸಮರ್ಥನೆ ಮಾಡುತ್ತಾರೆ. ಎಲ್ಲೋ ಆಗೊಂದು ಸಲ ಈಗೊಂದು ಸಲ ಧರ್ಮದ ಮೂಲ. ಧರ್ಮದ ಅರ್ಥ ಬೇರೆ ಎನ್ನುವ ದನಿಗಳು (ಮ್ಯಾಕ್ಸ್‌ಮ್ಯುಲರ್ ಮತ್ತಿತರರದು) ಕೇಳಿಬಂದರೂ "ಧರ್ಮ ಎಂದರೆ ಅಜ್ಞಾನ ಹಾಗೂ ಮೌಢ್ಯಗಳ ಆವಿಷ್ಕಾರ" ಎನ್ನುವ ಸಾಮಾನ್ಯ ಹಾಗೂ ಅವಿರೋಧಿತ ಒಪ್ಪಿಗೆಯ ನಡುವೆ ಅವು ಕಣ್ಣಿಗೆ ಬೀಳದೆ ಕಿವಿಗೆ ಕೇಳಿಸದೆ ಹೋಗುತ್ತವೆ.

ಬಹಳ ಹಿಂದೇನೂ ಅಲ್ಲ, ಹತ್ತೊಂಭತ್ತನೇ ಶತಮಾನದ ಮೊದಲ ಭಾಗದಲ್ಲಿ, ತುಂಬ ಮುಂದುವರಿದ ಜನ ಕೂಡ (ಅವರು ಹದಿನೆಂಟನೆಯ ಶತಮಾನದ ಕಡೆಯ ಭಾಗದ ವಿಶ್ವಜ್ಞಾನಿಗಳಂತೆ ಕ್ಯಾತೊಲಿಸಿಸಂ, ಪ್ರಾಟೆಸ್ಟಂಟಿಸಂ ಮತ್ತು ರೂಸೋ–

ಗ್ರೀಕ್‌ನ ಸಾಂಪ್ರದಾಯಿಕ ಮತವನ್ನು ತಿರಸ್ಕರಿಸಿರಬಹುದು) ಧರ್ಮ ಈಗಷ್ಟೆ ಅಲ್ಲ ಯಾವಾಗಲೂ ಮನುಷ್ಯನ ಜೀವನಕ್ಕೆ ಕೇವಲ ಅಗತ್ಯವಾದ ಗುಣ ಎನ್ನುವುದನ್ನು ಅಲ್ಲಗಳೆಯಲಿಲ್ಲ. ದೇವಾಸ್ತಿಕ್ಯರು ಇರಲಿ, (ಬರ್ನಾರ್ಡಿನ್ ಸೆಯಿಂಟ್–ಪಿಯರೆ, ಡಿಡೆರೊ ಮತ್ತು ರೂಸ್ಸೋವಿನಂಥವರು) ವಾಲ್ಟೇರ್ ದೇವರಿಗೊಂದು ಸ್ಮಾರಕ ಕಟ್ಟಿದ; ಪರಾತ್ಪರ ಶಕ್ತಿಗೆ ರಾಬ್‌ಸ್ಪಿಯರ್ ಒಂದು ಉತ್ಸವದ ದಿನ ಗೊತ್ತು ಮಾಡಿದ. ಆದರೆ ಈಗ, ನಮ್ಮ ಕಾಲದಲ್ಲಿ ಸುಸಂಸ್ಕೃತರು ಎಂದು ಭಾವಿಸಿಕೊಂಡಿರುವ ಜನ (ತೀರಾ ಕೆಳದರ್ಜೆಯ ದೃಷ್ಟಿಯನ್ನು ಇವರಷ್ಟು ಬೇಗ, ಚುರುಕಾಗಿ ಬೇರೆ ಯಾರು ಒಪ್ಪಿಕೊಂಡಾರು?) ಧರ್ಮ ಎನ್ನುವುದು 'ಮಾನವನ ಏಳಿಗೆಯ ಹಂತದಲ್ಲಿ ತನ್ನ ಜೀವಸತ್ವವನ್ನು ಕಳೆದುಕೊಂಡು, ಮುಂದಿನ ಏಳಿಗೆಗೆ ಕಾಲ್ತೊಡಕಾಗಿದೆ ಎಂದು ನಿರ್ಧರಿಸಿಬಿಟ್ಟಿದ್ದಾರೆ. ಆಗಸ್ಟ್ ಕಾಂಟನ ಆಳವಿಲ್ಲದ ಹುಡುಗಾಟಿಕೆಯ ಉಪದೇಶ ಇದನ್ನು ಸಾಧ್ಯವಾಗಿಸಿದೆ; ಅದಕ್ಕೆ ನಮ್ಮ ಕೃತಜ್ಞತೆ ಸಲ್ಲಬೇಕು! ಮಾನವ ಜನಾಂಗ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಹಂತಗಳನ್ನು ದಾಟಿ, ಈಗ ಅತಿ ಶ್ರೇಷ್ಠವಾದ ವೈಜ್ಞಾನಿಕ ಹಂತವನ್ನು ಹೊಕ್ಕಿರುವುದರಿಂದ ಎಲ್ಲ ಧರ್ಮಗಳೂ ಮನುಷ್ಯನ ಚೇತನಾಂಗದ ಅವಶೇಷ ಎಂದು ಅವರು ಒಪ್ಪಿ ಬಿಟ್ಟಿದ್ದಾರೆ; ಈ ಚೇತನಾಂಗ, ಮೊಲದ ಮೂರನೆಯ ಕೊಂಬಿನಂತೆ, ಈಗ ತನ್ನೆಲ್ಲ ಅರ್ಥವನ್ನೂ ಮಹತ್ವವನ್ನೂ ಕಳೆದುಕೊಂಡು ಬಿಟ್ಟಿದೆ.

ಅಜ್ಞಾತ ಪ್ರಾಕೃತಿಕ ಶಕ್ತಿಗಳು ಉಂಟುಮಾಡುವ ಭಯದಲ್ಲಿ ಮತ್ತು ಕಾಲ್ಪನಿಕ ದೈವಗಳ ಅಸ್ತಿತ್ವ ಹಾಗೂ ಉಪಾಸನೆಗಳ ನಂಬಿಕೆಯಲ್ಲಿ ಧರ್ಮದ ಮೂಲ ಇದೆ ಎಂದು ಹಿಂದೆ ಡಿಮೋಕ್ರೀಟಿಸ್ ಊಹಿಸಿದ್ದ; ಇತ್ತೀಚಿನ ಧಾರ್ಮಿಕ ಜಿಜ್ಞಾಸುಗಳು, ಇತಿಹಾಸಕಾರರು ಇದೇ ವಾದವನ್ನು ಒತ್ತಿ ಹೇಳುತ್ತಾರೆ.

ಅದೃಶ್ಯವೂ ಅಲೌಕಿಕವೂ ಆದ ಜೀವಿಗಳಲ್ಲಿ ಅಥವಾ ಅಂಥ ಒಂದು ಜೀವದಲ್ಲಿ ಇಡುವ ನಂಬಿಕೆ ಯಾವಾಗಲೂ ಅಜ್ಞಾತ ಪ್ರಾಕೃತಿಕ ಶಕ್ತಿಗಳ ಭಯದಿಂದಲೇ ಬರುತ್ತದೆ ಅನ್ನುವುದು ಸರಿಯಲ್ಲ. ಇದಕ್ಕೆ ಇತಿಹಾಸ ನೂರಾರು ಉದಾಹರಣೆಗಳನ್ನು ಒದಗಿಸುತ್ತದೆ. ತುಂಬ ಮುಂದುವರಿದವರೂ ವಿದ್ಯಾವಂತರೂ ಆದ (ಸೊಕ್ರೇಟಿಸ್, ಡಿಕಾರ್ಟ್, ನ್ಯೂಟನ್) ಆಗಿನ ಜನ ಒಂದು ಅಲೌಕಿಕ ಪರಾತ್ಪರ ಶಕ್ತಿಯ ಅಸ್ತಿತ್ವವನ್ನು ಗುರುತಿಸಿದ್ದುದು ಅಜ್ಞಾತ ಪ್ರಾಕೃತಿಕ ಶಕ್ತಿಗಳು ಅವರಲ್ಲಿ ಉಂಟು ಮಾಡಿದ ಭಯದಿಂದ ಅಲ್ಲ. ಇಂಥ ಜನ ಈಗ ನಮ್ಮಲ್ಲೂ ಇದ್ದಾರೆ. ಅಂದಮೇಲೆ "ಅದೃಶ್ಯವೂ ಅಲೌಕಿಕವೂ ಆದ ಜೀವರುಗಳ ಕಲ್ಪನೆ ಮನುಷ್ಯರಲ್ಲಿ ಯಾವ ಕಾರಣದಿಂದ, ಹೇಗೆ ಮೂಡಿತು?" ಅನ್ನುವ ಮುಖ್ಯ ಪ್ರಶ್ನೆಗೆ 'ಗೂಢ ಪ್ರಾಕೃತಿಕ ಶಕ್ತಿಗಳ ಬಗ್ಗೆ ಮನುಷ್ಯನಿಗೆ ಇದ್ದ ಮೂಢ ಭಯವೇ ಧರ್ಮದ ಹುಟ್ಟಿಗೆ ಕಾರಣವಾಯಿತು' ಎನ್ನುವುದು ಉತ್ತರವಲ್ಲ.

ಗುಡುಗು, ಮಿಂಚುಗಳಿಗೆ ಮನುಷ್ಯರು ಹೆದರಿದರೆ, ಅವರು ಹೆದರಿದ್ದು ಗುಡುಗು, ಮಿಂಚುಗಳಿಗೆ, ಅಷ್ಟೆ: ಆದರೆ ಎಲ್ಲೊ ಇದ್ದು, ಮನುಷ್ಯರತ್ತ ಬಾಣಗಳನ್ನೆಸೆಯುವ ಅಗೋಚರನೂ ಪ್ರಕೃತ್ಯತೀತನೂ ಆದ ಜೂಪಿಟರ್ ಅನ್ನು ಅವರೇಕೆ ಸೃಷ್ಟಿಸಬೇಕಾಗಿತ್ತು?

ಜನ ಸಾವಿನ ದೃಶ್ಯವನ್ನು ಕಂಡು ಹೆದರಿದರೆ ಸಾವಿನ ಬಗ್ಗೆ ಭೀತರಾಗುತ್ತಾರೆ: ಆದರೆ ಸತ್ತವರಿಗೆ ಆತ್ಮಗಳನ್ನು ಕೊಟ್ಟು, ಅವುಗಳೊಡನೆ ಕಾಲ್ಪನಿಕ ಸಂಬಂಧವನ್ನು ಅವರೇಕೆ ಬೆಳೆಸಬೇಕು? ಸಿಡಿಲಿಗೆ ಹೆದರಿ ಮನುಷ್ಯ ಅಡಗಿಕೊಳ್ಳಬಹುದು. ಸಾವಿನ ಹೆದರಿಕೆ ಸಾವನ್ನು ತಪ್ಪಿಸಿಕೊಳ್ಳುವಂತೆ ಅವರನ್ನು ಪ್ರೇರೇಪಿಸಬಹುದು. ಆದರೆ ನಿತ್ಯನೂ ಶಕ್ತಿಯುತನೂ ಆದ ದೈವದ ಮೇಲೆ ತಾವು, ತಮ್ಮದೆಲ್ಲ ನಿಂತಿದೆ ಎಂದು ಅವರು ಭಾವಿಸಿಕೊಂಡಿದ್ದರೆ, ಸತ್ತವರಿಗೆ ಸಾವಿಲ್ಲದ ಆತ್ಮಗಳನ್ನು ಕರುಣಿಸಿದ್ದರೆ, ಅವರು ಈ ಕೆಲಸವನ್ನು ಭಯದಿಂದ ಮಾಡಲಿಲ್ಲ; ಅದಕ್ಕೆ ಕಾರಣಗಳು ಬೇರೆ ಇರಬೇಕು. ಧರ್ಮದ ಮೂಲ ಈ ಕಾರಣಗಳಲ್ಲಿ ಅಡಗಿರಬೇಕು.

ಅಲ್ಲದೆ ಪ್ರತಿಯೊಬ್ಬನೂ, ತನ್ನ ಬಾಲ್ಯಾವಸ್ಥೆಯಲ್ಲಾದರೂ ಧಾರ್ಮಿಕ ಭಾವನೆಯನ್ನು ಅನುಭವಿಸಿರುತ್ತಾನೆ. ಈ ಅನ್ನಿಸಿಕೆ ತನಗೆ ಬಂದದ್ದು ಭಯುಗೊಳಿಸುವ, ಹೊರಗಣ ಭೌತಿಕ ಘಟನೆಗಳಿಂದ ಅಲ್ಲ ಎಂದು ಆತ ಸ್ವಾನುಭವದಿಂದಲೇ ಹೇಳಬಲ್ಲ. ಅಜ್ಞಾತ ಪ್ರಾಕೃತಿಕ ಶಕ್ತಿಗಳೊಡನೆ ಯಾವ ಸಂಬಂಧವೂ ಇರದ ಒಂದು ಒಳ ಪ್ರಜ್ಞೆಯಲ್ಲಿ ಈ ಭಾವನೆ ಜಾಗೃತವಾಯಿತು: ತನ್ನ ಅಸ್ತಿತ್ವದ ಅರ್ಥಹೀನತೆ, ಒಂಟಿತನ, ಹಾಗೂ ಪಾಪ ಪ್ರಜ್ಞೆಗಳನ್ನು ಈ ಭಾವನೆ ಅವನಲ್ಲಿ ಮೂಡಿಸಿರಬೇಕು. ಆದ್ದರಿಂದ ಮನುಷ್ಯನಲ್ಲಿ ಧರ್ಮಪ್ರಜ್ಞೆ ಬರುವುದಕ್ಕೆ ಅಗೋಚರ ಪ್ರಾಕೃತಿಕ ಶಕ್ತಿಗಳ ಬಗ್ಗೆ ಅವನಿಗಿರುವ ಮೂಢಭಯ ಕಾರಣವಲ್ಲ. ಈ ರೀತಿಯ ಭಯ ಯಾವುದೋ ಒಂದು ಬೆಳವಣಿಗೆಯ ಹಂತದಲ್ಲಿ ಅವನಲ್ಲಿ ಇದ್ದಿರಬಹುದು. ಆದರೆ ಹೊರಗಣ ಸಮೀಕ್ಷೆಯ ಬಲದಿಂದಾಗಲಿ, ಸ್ವಾನುಭವದ ಬಲದಿಂದಾಗಲಿ ನೋಡಿದಾಗ ಈ ಅನುಭವ ಭಯ ಹಾಗೂ ಹೆದರಿಗೆ ಸಂಬಂಧಪಟ್ಟುದಲ್ಲ ಎನ್ನುವುದು ಸ್ಪಷ್ಟ: ಸಾಂಸ್ಕೃತಿಕವಾಗಿ ಯಾರು ಎಷ್ಟು ಮುಂದುವರಿದರೂ ಇದನ್ನು ನಾಶಪಡಿಸಲಾರರು. ಕಾರಣ, ಅನಂತವಾದ ಈ ಪ್ರಪಂಚದಲ್ಲಿ ತನ್ನ ಪರಿಮಿತ ಸ್ವರೂಪದ ತನ್ನ ಪಾಪಭರಿತ ಜೀವನದ (ಅಂದರೆ, ತಾನು ಮಾಡಬಹುದಾಗಿದ್ದ ಹಾಗೂ ಮಾಡಬೇಕಾಗಿದ್ದ ಕೆಲಸಗಳನ್ನು ಮಾಡಲಿಲ್ಲ ಎನ್ನುವ ಅರಿವು) ಪ್ರಜ್ಞೆ ಅವನಲ್ಲಿ ಯಾವಾಗಲೂ ಇದ್ದದ್ದೇ: ಈ ಪ್ರಜ್ಞೆ ಮನುಷ್ಯ ಎಲ್ಲಿಯವರೆಗೆ ಇರುತ್ತಾನೋ ಅಲ್ಲಿಯವರೆಗೂ ಅವನಲ್ಲಿ ಇದ್ದೇ ಇರುತ್ತದೆ.

ತೀರಾ ಎಳೆತನದಲ್ಲಿ ಮತ್ತು ಮೊದಲ ಬಾಲ್ಯಾವಸ್ಥೆಯಲ್ಲಿ ಮನುಷ್ಯ ಪಶುಸ್ಥಿತಿಯಲ್ಲಿದ್ದು, ಆ ಪಶುಬಯಕೆಗಳ ತೃಪ್ತಿಯಲ್ಲೇ ಮುಂದೆ ನಡೆಯುತ್ತಾನೆ. ಈ ಅವಸ್ಥೆಯಿಂದ ಹೊರಬಂದ ಕೂಡಲೇ ಅವನಲ್ಲಿ ಯುಕ್ತಾಯುಕ್ತ ಜ್ಞಾನ ಬೆಳೆದು ತನ್ನ ಸುತ್ತ

ಬದುಕಿರುವುದೆಲ್ಲ, ಹಳತನ್ನು ಕಳಚಿ ಒಗೆದು ಹೊಸತಾಗಿ ಬೆಳೆಯುವುದನ್ನೂ, ಸಂಪೂರ್ಣ ನಾಶವಾಗದೆ ಉಳಿಯುವುದನ್ನೂ ಹಾಗೂ ಯಾವುದೋ ಒಂದು ಸ್ಥಿರವೂ ಸ್ಪಷ್ಟವೂ ಆದ ನಿಯಮಕ್ಕೆ ಹೊಂದಿಕೊಂಡು ಬಾಳುತ್ತಿರುವುದನ್ನೂ ಗಮನಿಸುತ್ತಾನೆ. ಹಾಗೆ ಗಮನಿಸಿದಾಗ, ಉಳಿದ ಪ್ರಪಂಚದಿಂದ ತನ್ನನ್ನು ತಾನೆ ಬೇರ್ಪಡಿಸಿಕೊಂಡು ನೋಡಲು ಕಲಿತಾಗ ಮರಣದಂಡನೆಗೆ ಗುರಿಯಾಗಿರುವವನು, ಅನಂತಕಾಲ ದೇಶಗಳಲ್ಲಿ ಗುರುತಿಲ್ಲದೆ ಮಟಾಮಾಯವಾಗುವವನು ತಾನೊಬ್ಬನೇ ಎನ್ನುವ ತಿಳಿವಳಿಕೆ ಅವನಿಗೆ ಬರುತ್ತದೆ. ಹಾಗೇ, ತಾನು ನಡೆದುಕೊಂಡದ್ದಕ್ಕಿಂತ ಉತ್ತಮವಾಗಿ ನಡೆದುಕೊಳ್ಳಬಹುದಾಗಿತ್ತು; ಆದರೆ ಅದನ್ನು ಮಾಡಲಿಲ್ಲ ಅನ್ನಿಸುತ್ತ ದೆ– ಅಂದರೆ ತನ್ನ ಕೃತ್ಯಕ್ಕೆ ತಾನು ಜವಾಬ್ದಾರ ಎನ್ನುವ ಅಂತರಂಗದ ತಳಮಳವನ್ನು ತಾನು ಒಬ್ಬನೆ, ಒಂಟಿಯಾಗಿ ಅನುಭವಿಸಬೇಕೆಂಬ ಪ್ರಜ್ಞೆ ಮೂಡುತ್ತದೆ. ಇದು ತಿಳಿದಾಗ, ಯಾವ ವಿಚಾರವಂತನೂ "ಶಾಶ್ವತವೂ, ಅನಂತವೂ, ಸ್ಪಷ್ಟರೂಪಿನದೂ ಆದ ಈ ವಿಶ್ವದಲ್ಲಿ ನನ್ನ ಕ್ಷಣಿಕ, ಅಸ್ಪಷ್ಟ ಹಾಗೂ ಅನಿಶ್ಚಿತ ಬದುಕಿನ ಅರ್ಥ ಏನು?" ಎಂದು ತನ್ನನ್ನು ತಾನೆ ಕೇಳಿಕೊಳ್ಳದೆ ಇರಲಾರ. ಇಂಥ ನೈಜ ಬಾಳಿನೊಳಗೆ ಕಾಲಿಟ್ಟಾಗ ಯಾರೂ ಈ ಪ್ರಶ್ನೆಯನ್ನು ಕಣ್ಣುತಪ್ಪಿಸಲಾಗು ವುದಿಲ್ಲ

ಈ ಪ್ರಶ್ನೆ ಪ್ರತಿಯೊಬ್ಬನ ಮುಂದೂ ಬರುತ್ತದೆ; ಒಬ್ಬೊಬ್ಬ ಒಂದೊಂದು ರೀತಿಯಲ್ಲಿ ಅದಕ್ಕೆ ಉತ್ತರ ಕೊಡುತ್ತಾನೆ. ಈ ಪ್ರಶ್ನೆಗೆ ಕೊಡುವ ಉತ್ತರದಲ್ಲಿ ಧರ್ಮದ ಮೂಲ ಇದೆ. ಅದರ ಸಾರವಿರುವುದೂ ಈ ಪ್ರಶ್ನೆಗೆ ಕೊಡುವ ಉತ್ತರದಲ್ಲೇ. "ನಾನು ಏಕೆ ಬದುಕಿದ್ದೇನೆ, ನನ್ನ ಸುತ್ತ ಇರುವ ಅನಂತ ವಿಶ್ವಕ್ಕೂ[2] ನನಗೂ ಏನು ಸಂಬಂಧ?"

ದೇವತೆಗಳ ಬಗ್ಗೆ, ಪ್ರಪಂಚದ ಹುಟ್ಟಿನ ಬಗ್ಗೆ ಹಾಗೂ ಉಪಾಸನೆಯ ಕ್ರಮದ ಬಗ್ಗೆ ಇರುವ ಎಲ್ಲ ಸಿದ್ಧಾಂತಗಳೂ, ಎಲ್ಲ ಆಧ್ಯಾತ್ಮಿಕ ಜಿಜ್ಞಾಸೆಗಳೂ – ನಾವು ಇದನ್ನೇ ಧರ್ಮ ಎಂದು ತಿಳಿಯುತ್ತೇವೆ – ಧರ್ಮದ ಇರವಿಗೆ ಒಂದು ಸೂಚನೆ ಅಷ್ಟೆ. ಜನಾಂಗಿಕ, ಭೌಗೋಳಿಕ ಹಾಗೂ ಚಾರಿತ್ರಿಕ ಸ್ಥಿತಿಗಳು ಬೇರೆಬೇರೆಯಾದ ಹಾಗೆ ಈ ಸೂಚನೆಯೂ ಬೇರೆ ಬೇರೆಯಾಗಿದೆ. ಒಂದು ಧರ್ಮ ಅತ್ಯುನ್ನತವಾಗಿರಬಹುದು ಅಥವಾ ಅತ್ಯಂತ ಅಸಂಸ್ಕೃತವಾಗಿರಬಹುದು: ಆದರೆ ಅದು ಮೂಲತಃ ಮಾಡುವ ಕೆಲಸ ಮನುಷ್ಯನಿಗೂ ಅವನ ಸುತ್ತಣ ವಿಶ್ವಕ್ಕೂ ಅಥವಾ ವಿಶ್ವಾದಿಕಾರಣಕ್ಕೂ ಸಂಬಂಧ ಕಲ್ಪಿಸುವುದು. ಧಾರ್ಮಿಕ ವಿಧಿ ಅಸಂಸ್ಕೃತವಾಗಿರಬಹುದು, ಚೊಕ್ಕವಾಗಿರ

---

[2] 'ವಿಶ್ವ' ಅನ್ನುವುದು ಈ ಬರಹದ ಉದ್ದಕ್ಕೂ ಅದರ ಮೂಲಾರ್ಥದಲ್ಲಿ, ಅಂದರೆ, ಭೌತಿಕ ಅಥವ ಆದಿಭೌತಿಕವಾದ, ಅಸ್ತಿತ್ವದಲ್ಲಿರುವ ಎಲ್ಲ ವಸ್ತು ಸಂಪದವನ್ನು ಒಳಗೊಂಡ ಅರ್ಥದಲ್ಲಿ ಬಳಸಲ್ಪಟ್ಟಿದೆ.

ಬಹುದು. ಆದರೆ ಅದು ಮೂಲತಃ ಈ ಕೆಲಸವನ್ನೇ ಮಾಡುತ್ತದೆ. ಧಾರ್ಮಿಕ ಬೋಧನೆಗಳೂ ಅಷ್ಟೆ. ಒಂದು ಧರ್ಮದ ಸಂಸ್ಥಾಪಕ ಮನುಷ್ಯನಾಗಿ ತನಗೂ ತನ್ನ ಸುತ್ತಣ ವಿಶ್ವಕ್ಕೂ, ಅದರ ಹುಟ್ಟು ಹಾಗೂ ಆದಿಕಾರಣಕ್ಕೂ ಒಂದು ಸಂಬಂಧವನ್ನು ಪರಿಭಾವಿಸಿಕೊಂಡು, ಅದಕ್ಕೆ ಅಭಿವ್ಯಕ್ತಿಕೊಟ್ಟ; ಈ ಸಂಬಂಧದ ಅಭಿವ್ಯಕ್ತಿ ಉಳಿದ ಜನರಿಗೂ ಅನ್ವಯಿಸಿತು.

ಧರ್ಮ ಸಂಸ್ಥಾಪಕರು ಇದ್ದ ಚಾರಿತ್ರಿಕ ಸನ್ನಿವೇಶ, ಅವರು ಸೇರಿದ್ದ ಜನಾಂಗ ಹಾಗೂ ಅವರ ಬೋಧನವನ್ನು ಒಪ್ಪಿಕೊಂಡ ದೇಶಗಳಿಗೆ ಅನುಗುಣವಾಗಿ ಈ ಸಂಬಂಧದ ಅಭಿವ್ಯಕ್ತಿ ಕೂಡ ಅನೇಕವಾಗಿದೆ. ಜೊತೆಗೆ ಜನಸಾಮಾನ್ಯರಿಗಿಂತ ನೂರಾರು ಏಕೆ ಸಾವಿರಾರು ವರ್ಷಗಳು ಮುಂದಿದ್ದ ಈ ಬೋಧಕರ ತಾತ್ವಿಕ ಅಭಿವ್ಯಕ್ತಿ ಅವರ ಅನುಯಾಯಿಗಳಿಂದ ಭಿನ್ನಭಿನ್ನವಾಗಿ ವಿವರಿಸಲ್ಪಟ್ಟಿತು; ಹಾಗೆ ವಿಕೃತವೂ ಆಯಿತು. ಆದ್ದರಿಂದಲೆ ಮನುಷ್ಯರಿಗೂ ವಿಶ್ವಕ್ಕೂ – ಅಂದರೆ ಧರ್ಮಕ್ಕೆ – ಇರುವ ಸಂಬಂಧ ಅಷ್ಟು ಅಸಂಖ್ಯವಾಗಿ ಕಾಣುತ್ತದೆ. ನಿಜವಾಗಿ ನೋಡಿದರೆ ಮನುಷ್ಯರಿಗೂ ಅವರ ಸುತ್ತಣ ವಿಶ್ವಕ್ಕೂ, ಅದರ ಕರ್ತೃವಿಗೂ ಕೇವಲ ಮೂರು ಮೂಲಭೂತ ಸಂಬಂಧಗಳಿವೆ: ಅವು (1) ಪ್ರಾಥಮಿಕವೂ ಖಾಸಗಿಯೂ ಆದ ಸಂಬಂಧ; (2) ಪೇಗನ್ ಜನರ ಸಾಮಾಜಿಕ ಅಥವಾ ಕುಟುಂಬ–ರಾಜ್ಯ ಸಂಬಂಧ; (3) ಕ್ರಿಶ್ಚಿಯನ್ ಅಥವಾ ದೈವೀ ಸಂಬಂಧ

ಸರಿಯಾಗಿ ವಿಚಾರಮಾಡಿದರೆ ಮನುಷ್ಯನಿಗೂ ಅವನ ಪ್ರಪಂಚಕ್ಕೂ ಇರುವುದು ಎರಡೇ ಮೂಲಭೂತ ಸಂಬಂಧಗಳು: ಅದು (1) ಖಾಸಗಿಯಾದದ್ದು: ಈ ದೃಷ್ಟಿಗೆ ಜೀವನದ ಅರ್ಥ ಕಾಣುವುದು ಬೇರೆಯಾಗಿ ಅಥವ ಇತರರೊಡನೆ ಕೂಡಿ ಗಳಿಸುವ ಸ್ವ–ಯೋಗ ಕ್ಷೇಮದಲ್ಲಿ; ಎರಡನೆಯದು, ಕ್ರಿಶ್ಚಿಯನ್ ದೃಷ್ಟಿ: ಮನುಷ್ಯನನ್ನು ಇಲ್ಲಿಗೆ ಕಳಿಸಿದ ಕರ್ತನ ಸೇವೆಯಲ್ಲೆ ಜೀವನದ ಅರ್ಥ ಇದೆ ಎಂದು ಈ ದೃಷ್ಟಿ ಹೇಳುತ್ತದೆ. ಈ ವರ್ಗೀಕರಣದಲ್ಲಿ ಹೇಳಿದ ಎರಡನೆಯ ಸಾಮಾಜಿಕ ಸಂಬಂಧ ಖಾಸಗಿ ಸಂಬಂಧದ ವಿಸ್ತರಣೆ ಅಷ್ಟೆ.

ಈ ಎರಡು ದೃಷ್ಟಿಗಳಲ್ಲಿ ಮೊದಲನೆಯದು ಅತಿ ಪ್ರಾಚೀನವಾದದು. ಅದೀಗ ನೈತಿಕವಾಗಿ ಅತ್ಯಂತ ಕೆಳದರ್ಜೆಯವರಲ್ಲಿ ಮಾತ್ರ ಕಾಣಸಿಗುತ್ತದೆ: ಮನುಷ್ಯ ಸ್ವತಂತ್ರ-ಚಾಲಿತ ವ್ಯಕ್ತಿಯೆಂದೂ, ಅವನಿರುವುದು ಸಾಧ್ಯವಿದ್ದಷ್ಟು ಸ್ವಂತ ಸುಖವನ್ನು ಸಂಪಾದಿಸುವುದಕ್ಕೆಂದೂ ಇದು ಭಾವಿಸುತ್ತದೆ; ಇಂಥ ಸಂಪಾದನೆಯಿಂದ ಬೇರೆಯವರಿಗೆ ಆಗಬಹುದಾದ ಸಂಕಟವನ್ನು ಅದು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಪ್ರಪಂಚದೊಡನೆ ಬೆಳೆಸಿಕೊಂಡ ಈ ಅನಾಗರೀಕ ಸಂಬಂಧದಿಂದಲೇ ಪ್ರಾಚೀನ ಪೇಗನ್ ಹಾಗೂ

ಇತ್ತೀಚಿನ ಧರ್ಮಗಳ ಅತ್ಯಂತ ಕೀಳು ರೂಪಗಳು ಬಂದಿರುವುದು: ಬೌದ್ಧಮತ,[3] ಟಾವೊಇಸಂ, ಇಸ್ಲಾಂ ಮತ್ತು ಕ್ರಿಶ್ಚಿಯನ್ ಧರ್ಮಗಳ ವಿಕೃತರೂಪ ಇರುವುದು ಇಲ್ಲಿ (ಇದೇ ತಾನೆ ಪ್ರಪಂಚವನ್ನು ಹೊಕ್ಕ ಹಸುಗೂಸು, ತನ್ನ ಮೊದಲ ಹಂತದ ಪೇಗನ್ ಬೆಳವಣಿಗೆಯಲ್ಲಿದ್ದ ಮಾನವ ಜನಾಂಗ, ನೈತಿಕವಾಗಿ ಅತ್ಯಂತ ಒರಟಾಗಿರುವವರು ಮತ್ತು ಕಾಡು ಜನರು ಈಗಲೂ ಈ ಅನಾಗರೀಕ ಸಂಬಂಧವಲ್ಲಿ ಬದುಕಿದ್ದಾರೆ). ಆಧುನಿಕ ಪ್ರೇತವಾದವೂ ಈ ಸಂಬಂಧದಿಂದಲೇ ಬಂದಿರುವುದು: ಅದರ ಬುಡಕ್ಕಿರುವುದು ಖಾಸಗಿ ವ್ಯಕ್ತಿತ್ವದ ಕ್ಷೇಮ ಚಿಂತನೆ ಹಾಗೂ ಖಾಸಗಿವ್ಯಕ್ತಿತ್ವದ ರಕ್ಷಣೆ. ಎಲ್ಲ ಪೇಗನ್ ಪಂಥಗಳು, ಅಂದರೆ, ಭವಿಷ್ಯ ನುಡಿಯುವಿಕೆ, ಮನುಷ್ಯರಂತೇ ಸುಖಿಸುವ ಜೀವಿಗಳಿಗೆ ದೈವತ್ವದ ಆರೋಪಣೆ, ಮನುಷ್ಯನ ಪರವಾಗಿ ಮಧ್ಯಸ್ಥಿಕೆ ಮಾಡುವ ಸಂತರು, ಮನುಷ್ಯನ ಐಹಿಕ-ಪ್ರಗತಿ ಹಾಗೂ ವಿಪತ್ತುಗಳ ನಿವಾರಣೆಗಾಗಿ ನಡೆಯುವ ಯಜ್ಞ ಗಳು. ಪ್ರಾರ್ಥನೆ – ಎಲ್ಲ ಈ ಜೀವನ ದೃಷ್ಟಿಯಿಂದ ಬಂದವು,

ಪೇಗನ್ ಸಂಬಂಧದ ಎರಡನೆಯ ರೂಪು ಸಾಮಾಜಿಕವಾದದ್ದು. ತನ್ನ ಬೆಳವಣಿಗೆಯ ಎರಡನೆಯ ಹಂತದಲ್ಲಿ ಮನುಷ್ಯ ಇದನ್ನು ಸಾಧಿಸುತ್ತಾನೆ. ಈ ಸಾಮಾಜಿಕ ಸಂಬಂಧ ಪ್ರಬುದ್ಧರಿಗೆ ಸಹಜವಾದದ್ದು. ಜೀವನದ ಅರ್ಥ ಇಲ್ಲಿ ಕಾಣಿಸುವುದು ಒಬ್ಬ ವ್ಯಕ್ತಿಯ ಯೋಗಕ್ಷೇಮದಲ್ಲಿ ಅಲ್ಲ; ಒಂದು ಗುಂಪಿನ ಯೋಗಕ್ಷೇಮದಲ್ಲಿ; ಒಂದು ಕುಟುಂಬ, ಪಂಗಡ, ದೇಶ, ಚಕ್ರಾಧಿಪತ್ಯ ಅಥವಾ ಇಡೀ ಮಾನವತೆಯ ಯೋಗಕ್ಷೇಮದಲ್ಲಿ. (ಮಾನವೋತ್ತಮವಾದಿಗಳ ಧರ್ಮಸಂಸ್ಥಾಪನೆಯ ಪ್ರಯತ್ನದಲ್ಲಿ .ಇದು ಕಾಣುತ್ತದೆ).

ಈ ಬಗೆಯ ಸಂಬಂಧವಲ್ಲಿ ಜೀವನದ ಅರ್ಥ ವ್ಯಕ್ತಿಯಿಂದ ಕುಟುಂಬ, ಪಂಗಡ ದೇಶ, ಅಥವ ಚಕ್ರಾಧಿಪತ್ಯಕ್ಕೆ ವರ್ಗಾಯಿಸಲ್ಪಟ್ಟಿದೆ. ಅಂದರೆ, ಯಾವುದೊ ಒಂದು ಗುಂಪಿನ ಯೋಗಕ್ಷೇಮ ಸಾಧನೆಯೇ ಜೀವನದ ಗುರಿ ಎಂದು ಅದು ತಿಳಿಯುತ್ತದೆ. ಸಾಮಾಜಿಕ ಹಾಗೂ ಪೇಟ್ರಿಯಾರ್ಕಲ್ ರೀತಿಯ ಧರ್ಮಗಳು ಬಂದದ್ದು ಈ ಬಗೆಯ ಜೀವನ ದೃಷ್ಟಿಯಿಂದ: ಚೀನಾ ಮತ್ತು ಜಪಾನಿನ ಧರ್ಮಗಳು, "ಆಯ್ದ ಜನದ" ಜೂಡಾಯಿಸಂ, ರೋಮಿನ ರಾಜ–ಧರ್ಮ, ನಮ್ಮ ಚರ್ಚ್ ಮತ್ತು ರಾಜ್ಯ ಧರ್ಮ (ಅನುಚಿತವಾಗಿ ಕ್ರಿಶ್ಚಿಯನ್ ಎಂದು ಕರೆದು ಅಗಸ್ಟೀನ್ ಇದನ್ನು ಈ ಮಟ್ಟಕ್ಕೆ ಎಳೆದ)

---

[3] ಬೌದ್ಧಮತ, ಈ ಜೀವನದ ಸುಖಗಳ ಜೊತೆಗೆ ಪ್ರಪಂಚವನ್ನೂ ತ್ಯಾಗಮಾಡಬೇಕು ಎನ್ನುವು ದೇನೊ ; ಜ; ಆದರೂ ಅದು ನಿಂತಿರುವುದು ಇಂಥದೆ ಸ್ವ-ಚಾಲಿತ ವ್ಯಕ್ತಿತ್ವ ಕಲ್ಪನೆಯ ಮೇಲೆ. ವ್ಯಕ್ತಿಗತ ಯೋಗಕ್ಷೇಮವೇ ಜೀವನದ ಗುರಿ ಎಂದು ಅದಾಗಲೇ ಒಪ್ಪಿದೆ ಒಂದು ವ್ಯತ್ಯಾಸ ಮಾತ್ರ ಇಲ್ಲಿದೆ: ಸರಳವಾದ ಪೇಗನ್ ಧರ್ಮ ಮನುಷ್ಯನಿಗೆ ಸುಖವಾಗಿ ಬದುಕುವ ಹಕ್ಕು ಇದೆ ಎನ್ನುತ್ತದೆ; ಆದರೆ ಪ್ರಪಂಚದಿಂದ ಮನುಷ್ಯನಿಗೆ ಕೇವಲ ದುಃಖವೆ ಉಂಟಾಗುವುದರಿಂದ, ಪ್ರಪಂಚ ಅಳಿದು ಹೋಗಲಿ ಎಂದು ಬೌದ ಮತ ಹೇಳುತ್ತದೆ ಬೌದ್ಧಮತ ನೇತ್ಯರ್ಥಕ ಪೇಗನ್ ಧರ್ಮ

– ಲಿಯೊ ಟಾಲ್‌ಸ್ಟಾಯ್

ಮತ್ತು ಮಾನವೋತ್ತಮತಾವಾದಿಗಳು ಈಗ ಸೂಚಿಸಿರುವ ಮಾನವ ಜನಾಂಗ ಧರ್ಮ – ಈ ಎಲ್ಲ ಮೇಲೆ ಕಾಣಿಸಿದ ಜೀವನ ದೃಷ್ಟಿಯಿಂದ ಬಂದವು.

ಚೀನಾ ಮತ್ತು ಜಪಾನ್ ದೇಶಗಳಲ್ಲಿ ಪೂರ್ವಜರಿಗೆ ಸಲ್ಲುವ ಪೂಜಾ ವಿಧಿಗಳು; ರೋಮ್‌ನಲ್ಲಿ ಚಕ್ರವರ್ತಿಗಳಿಗೆ ಸಲ್ಲುತ್ತಿದ್ದ ಪೂಜೆ; ಆಯ್ದ ಜನರಿಗೂ ದೇವರಿಗೂ ನಡೆದ ಒಪ್ಪಂದವನ್ನು ಉಳಿಸಿಕೊಳ್ಳಲು ಇರುವ ಜ್ಯೂ ಜನಾಂಗದ ಅನೇಕ ಸಂಪ್ರದಾಯಗಳು; ದೇಶದ ಹಿತಕ್ಕಾಗಿಯೊ ಯುದ್ಧದಲ್ಲಿ ಗೆಲುವಿಗಾಗಿಯೊ ನಡೆಯುವ ಕೌಟುಂಬಿಕ, ಸಾಮಾಜಿಕ ಮತ್ತು ಕ್ರಿಶ್ಚಿಯನ್ ಚರ್ಚ್ ಪ್ರಾರ್ಥನಾ ಪದ್ಧತಿಗಳು – ಈ ಎಲ್ಲವೂ ಮನುಷ್ಯನಿಗೂ ವಿಶ್ವಕ್ಕೂ ಇದೆ ಎಂದು ತಿಳಿದಿರುವ ಇಂಥ ಸಂಬಂಧದ ಮೇಲೆ ನಿಂತಿದೆ.

ಇಂಥ ಸಂಬಂಧದ ಬಗ್ಗೆ ಇರುವ ಮೂರನೆಯ ಗ್ರಹಿಕೆ ಕ್ರಿಶ್ಚಿಯನ್ ಗ್ರಹಿಕೆ. (ಎಲ್ಲ ವೃದ್ಧರಿಗೂ ಈ ಸಂಬಂಧ ಅನೈಚ್ಛಿಕವಾಗಿ ತಿಳಿದಿದೆ: ಮತ್ತು ನನ್ನ ಅಭಿಪ್ರಾಯದಲ್ಲಿ ಮಾನವತೆ ಈ ಸಂಬಂಧದ ಪ್ರಜ್ಞಾಹಂತಕ್ಕೆ ಈಗ ಕಾಲಿಟ್ಟಿದೆ) ಖಾಸಗಿ ಗುರಿಗಳನ್ನು ಸಾಧಿಸಿಕೊಳ್ಳುವುದರಲ್ಲಿ ಅಥವಾ ಗುಂಪು ಕಟ್ಟಿಕೊಂಡ ವ್ಯಕ್ತಿಗಳ ಗುರಿಗಳನ್ನು ಸಾಧಿಸುವುದರಲ್ಲಿ ಜೀವನದ ಅರ್ಥ ಇದೆ ಎಂದು ಈ ಗ್ರಹಿಕೆ ಹೇಳುವುದಿಲ್ಲ. ಯಾರ ಇಚ್ಛೆ ಮನುಷ್ಯನನ್ನೂ ಇಡೀ ವಿಶ್ವವನ್ನೂ – ಮನುಷ್ಯನಿಗಾಗಿ ಅಲ್ಲ ತನಗಾಗಿ – ಸೃಷ್ಟಿಮಾಡಿತೋ ಆ ಇಚ್ಛೆಯನ್ನು ಸೇವಿಸುವುದರಲ್ಲಿ ಜೀವನದ ಅರ್ಥ ಇದೆ ಎಂದು ಈ ದೃಷ್ಟಿ ಹೇಳುತ್ತದೆ.

ನಮಗೆ ತಿಳಿದಿರುವ ಅತ್ಯುನ್ನತ ಧಾರ್ಮಿಕ ಬೋಧನೆ ಬಂದಿರುವುದು ಪ್ರಪಂಚ ದೊಡನೆ ಈ ಬಗೆಯ ಸಂಬಂಧ ಇದ್ದಾಗ ಮಾತ್ರ. ಪೈಥಾಗೊರಸ್, ಥೇರಾಫಟೆ, ಎಸ್ಸೆ ಇವರ ಅನುಯಾಯಿಗಳಲ್ಲಿ ಹಾಗೂ ಈಜಿಪ್ಟಿನವರು; ಪರ್ಶಿಯನ್ನರು, ಬೌದ್ಧರು ಮತ್ತು ಟಾವೊ ಇವರ ಅತ್ಯುತ್ತಮ ಪ್ರಾತಿನಿಧಿಕ ವ್ಯಕ್ತಿಗಳಲ್ಲಿ ಈ ಬೋಧನೆಯ ಮೊಳಕೆ ಇತ್ತು. ಆದರೆ ಈ ಬೋಧನೆಗೆ ಪೂರ್ಣವೂ ನಿಷ್ಕೃಷ್ಟವೂ ಆದ ಅಭಿವ್ಯಕ್ತಿ ದೊರಕಿದ್ದು ನೈಜವೂ ಸಹಜವೂ ಆದ ಕ್ರಿಶ್ಚಿಯನ್ ಧರ್ಮದಲ್ಲಿ. ಜೀವನದ ಅರ್ಥವನ್ನು ಹೀಗೆ ಕಂಡುಕೊಂಡ ಎಲ್ಲ ಪ್ರಾಚೀನ ಧರ್ಮಗಳ ಸಂಸ್ಕಾರ ಪದ್ಧತಿಗಳು; ಏಕಮೂರ್ತಿ ವಾದಿಗಳು, ವಿಶ್ವವಾದಿಗಳು, ಕ್ವೇಕರ್‌ಗಳು, ಸರ್ಬಿಯಾದ ನಜರಾನಿಗಳು, ರಷ್ಯದ ದುಕೊಬಾರ್‌ರು, ಹಾಗೂ ಉಳಿದೆಲ್ಲ ವಿಚಾರವಾದಿ ಪಂಗಡಗಳು, ಅವರ ತತ್ವಗಳು, ಗೀತಗಳು, ಅಧಿವೇಶನಗಳು ಹಾಗೂ ಗ್ರಂಥಗಳು – ಈ ಸಮಸ್ತವೂ ಮನುಷ್ಯನಿಗೂ ವಿಶ್ವಕ್ಕೂ ಇರುವ ಈ ಸಂಬಂಧದ ಧಾರ್ಮಿಕ ಆವಿಷ್ಕಾರಗಳು.

ಮೃಗೀಯಾವಸ್ಥೆಯನ್ನು ದಾಟಿ ಬಂದ ಪ್ರತಿಯೊಬ್ಬನೂ ಗತ್ಯಂತರವಿಲ್ಲದೆ ಈ ಮೂರು ಬಗೆಯ ಸಂಬಂಧಗಳಲ್ಲಿ ಯಾವುದೊ ಒಂದನ್ನು ಆರಿಸಿಕೊಳ್ಳುತ್ತಾನೆ.

ಅವನು ಯಾವ ಪಂಗಡಕ್ಕಾದರೂ ಸೇರಿರಲಿ. ಅದು ಹೆಸರಿಗಷ್ಟೆ: ಅವನ ನಿಜವಾದ ಧರ್ಮ ಇರುವುದು ಅವನು ಆಯ್ದುಕೊಂಡಿರುವ ಸಂಬಂಧದಲ್ಲಿ.

ಪ್ರತಿಯೊಬ್ಬನೂ ತನಗೂ ವಿಶ್ವಕ್ಕೂ ಯಾವುದೊ ಒಂದು ಸಂಬಂಧವನ್ನು ಕಲ್ಪಿಸಿಕೊಳ್ಳುತ್ತಾನೆ: ಕಾರಣ ಇಂಥ ಸಂಬಂಧ ಕಲ್ಪಿಸಿಕೊಳ್ಳದೆ ಯಾವ ವಿಚಾರವಂತನೂ ಬದುಕಲಾರ. ನಮಗೆ ತಿಳಿದಿರುವಂತೆ ಮನುಷ್ಯ ತನಗೂ ವಿಶ್ವಕ್ಕೂ ಕೇವಲ ಮೂರು ರೀತಿಯ ಸಂಬಂಧಗಳನ್ನು ಯೋಜಿಸಿರುವುದರಿಂದ ಒಂದು ಸಂಗತಿ ಸ್ಪಷ್ಟವಾಗುತ್ತದೆ: ಪ್ರತಿಯೊಬ್ಬನೂ ಈ ಮೂರರಲ್ಲಿ ಒಂದು ಸಂಬಂಧವನ್ನು ಒಪ್ಪಿದ್ದಾನೆ: ಅವನಿಗೆ ಇಷ್ಟವಿರಲಿ ಇಲ್ಲದಿರಲಿ ಈ ಮೂರು ಮೂಲಭೂತ ಧರ್ಮಗಳಲ್ಲಿ ಒಂದಕ್ಕೆ ಸೇರಿದ್ದಾನೆ: ಮಾನವ ಜನಾಂಗ ನಡೆದಿರುವುದು ಕೇವಲ ಈ ಮೂರು ವಿಭಿನ್ನ ದಾರಿಗಳಲ್ಲಿ.

ಸುಸಂಸ್ಕೃತರು ಎಂದು ಭಾವಿಸಿಕೊಂಡಿರುವ ಕ್ರಿಶ್ಚಿಯನ್ನರ ಗುಂಪು "ನಾವೀಗ ಎಷ್ಟು ಮುಂದುವರಿದಿದ್ದೇವೆ ಎಂದರೆ ನಮಗೆ ಯಾವ ಧರ್ಮದ ಅಗತ್ಯವೂ ಇಲ್ಲ; ಯಾವ ಧರ್ಮಕ್ಕೂ ನಾವು ಸೇರಿದವರಲ್ಲ" ಎಂದು ಸಾಮಾನ್ಯವಾಗಿ ಘೋಷಿಸುತ್ತದೆ. ಹೀಗೆಂದರೆ ಅದರ ಅರ್ಥ ಏನಾಗಬಹುದು ಅನ್ನುವುದು ಅವರಿಗೆ ತಿಳಿದಿಲ್ಲ. ನಮ್ಮ ಕಾಲಕ್ಕೆ ಸಹಜವಾದ ಕ್ರಿಶ್ಚಿಯನ್ ಧರ್ಮವನ್ನು ಅವರು ತಿರಸ್ಕರಿಸಿದರೆ, ಅವರು ಜೋತು ಬೀಳುವುದು ಕೆಳಮಟ್ಟದ ಸಾಮಾಜಿಕ, ಕೌಟುಂಬಿಕ, ರಾಜ್ಯ ಧರ್ಮಕ್ಕೆ ಅಥವಾ ಪ್ರಾಥಮಿಕ ಪೇಗನ್ ಧರ್ಮಕ್ಕೆ. ಇದು ಅವರಿಗೆ ಗೋಚರವಾಗಿಲ್ಲ. ಧರ್ಮವಿಲ್ಲದ ಮನುಷ್ಯ– ಅಂದರೆ ವಿಶ್ವಕ್ಕೆ ಯಾವ ಸಂಬಂಧವನ್ನೂ ಹೊಂದಿಲ್ಲದವನು – ಹೃದಯವಿಲ್ಲದ ಮನುಷ್ಯನಂತೆ ಕಲ್ಪನಾತೀತ. ತನಗೂ ಒಂದು ಧರ್ಮವಿದೆ ಎಂದು ಅವನಿಗೆ ತಿಳಿಯದೆ ಇರಬಹುದು - ತನಗೂ ಒಂದು ಹೃದಯ ಇದೆ ಎಂದು ತಿಳಿಯದೆ ಇರುವ ಮನುಷ್ಯನಂತೆ. ಆದರೆ ಹೃದಯವಿಲ್ಲದೆ ಮನುಷ್ಯ ಹೇಗೆ ಬದುಕಲಾರನೋ ಹಾಗೆ ಧರ್ಮವಿಲ್ಲದೆಯೂ ಬದುಕಲಾರ.

ಧರ್ಮ ಎಂದರೆ ಮನುಷ್ಯ ತನ್ನ ಸುತ್ತಣ ಅನಂತ ವಿಶ್ವದೊಡನೆ ಅಥವ ಅದರ ಮೂಲ ಹಾಗೂ ಆದಿಕಾರಣಗಳ ಬಗ್ಗೆ ತಾಳುವ ಧೋರಣೆ: ಅವನ ಮತ್ತು ಇವುಗಳ ನಡುವಣ ಸಂಬಂಧವೇ ಧರ್ಮ. ವಿಚಾರವಂತನಾದವನು ಇವುಗಳೊಡನೆ ಎಂಥದಾದರೂ ಸಂಬಂಧವನ್ನು ಬೆಳಸಿಕೊಳ್ಳಲೇ ಬೇಕು.

ಆದರೆ ಬಹುಶಃ ನೀವು "ಮನುಷ್ಯನ ಹಾಗೂ ವಿಶ್ವದ ಸಂಬಂಧವನ್ನು ಸ್ಪಷ್ಟೀಕರಿಸುವ ಕೆಲಸ ತತ್ವ ಶಾಸ್ತ್ರದ್ದು; ಅಥವಾ (ತತ್ವಶಾಸ್ತ್ರವನ್ನು ವಿಜ್ಞಾನದ ಅಂಗ ಅಂದರೆ) ವಿಜ್ಞಾನದ್ದು: ಈ ಕೆಲಸ ಧರ್ಮಕ್ಕೆ ಹೊರತಾದದ್ದು", ಎಂದು ಹೇಳಬಹುದು ನನಗೆ ಹಾಗನಿಸುವುದಿಲ್ಲ. ವಿಜ್ಞಾನ (ಅಂದರೆ ತತ್ವಶಾಸ್ತ್ರವನ್ನು ಒಂದು ಉಪಾಂಗವಾಗಿ ಒಳಗೊಂಡ ವಿಶಾಲಾರ್ಥದ ವಿಜ್ಞಾನ) ಮನುಷ್ಯನ ಹಾಗೂ ವಿಶ್ವದ ಸಂಬಂಧವನ್ನು ಸ್ಪಷ್ಟೀಕರಿಸುತ್ತದೆ ಎನ್ನುವ ಭಾವನೆ ಶುದ್ಧ ತಪ್ಪು. ಅದು ಈ ಕೆಲಸವನ್ನು ಮಾಡಬಲ್ಲದು

ಎನ್ನುವ ತಪ್ಪು ಭಾವನೆಯೇ ಇವೊತ್ತು ಧರ್ಮ, ವಿಜ್ಞಾನ ಹಾಗೂ ನೀತಿಗಳ ಬಗ್ಗೆ ನಮ್ಮ ಸಮಾಜದ ಸುಸಂಸ್ಕೃತ ವರ್ಗದಲ್ಲಿರುವ ಗೊಂದಲಕ್ಕೆ ಮುಖ್ಯ ಕಾರಣ.

ತತ್ವಶಾಸ್ತ್ರವನ್ನೊಳಗೊಂಡ ವಿಜ್ಞಾನ ಕೂಡ ಮನುಷ್ಯನ ಹಾಗೂ ವಿಶ್ವದ ನಡುವಣ ಸಂಬಂಧವನ್ನು ಸ್ಪಷ್ಟೀಕರಿಸಲಾರದು. ಇದಕ್ಕೆ ಬಹುಶಃ ಒಂದು ಕಾರಣ ಸಾಕು; ವಿಜ್ಞಾನ ಅಥವಾ ತತ್ವಶಾಸ್ತ್ರ ಹುಟ್ಟುವುದಕ್ಕೆ ಮೊದಲೆ ಈ ಧರ್ಮ ಎನ್ನುವುದು ಇದ್ದಿರಬೇಕು. ಯಾಕೆಂದರೆ, ಇದರ ಗೈರುಹಾಜರಿಯಲ್ಲಿ ಮನುಷ್ಯ ಹಾಗೂ ವಿಶ್ವದ ಸಂಬಂಧ ಯಾವ ಬಗೆಯಲ್ಲೂ ಇದ್ದಿರಲಾರದು.

ಚಲನೆ ಎಂದರೆ ಏನು ಅನ್ನುವುದು ಮನುಷ್ಯನಿಗೆ ಗೊತ್ತು: ಆದರೆ ಕೇವಲ ಚಲನೆಯಿಂದ ಯಾವ ದಿಕ್ಕಿನಲ್ಲಿ ನಡೆಯಬೇಕು ಎನ್ನುವುದನ್ನು ತಿಳಿಯುವುದು ಅಸಾಧ್ಯ. ಇದು ಅಸಾಧ್ಯವಾದರೂ ಎಲ್ಲ ಚಲನೆಗಳೂ ಯಾವುದೋ ಒಂದು ದಿಕ್ಕಿನಲ್ಲಿ ಹೋಗುವುವ ಕ್ಕೆಂದೆ ಮಾಡುವ ಕ್ರಿಯೆಗಳು. ಅಂದರೆ, ಕೇವಲ ಚಾಲನೆ ದಿಕ್ಕನ್ನು ಗುರುತಿಸಿ ಕೊಡಲಾರದು. ಇದರಂತೆಯೇ ವಿಜ್ಞಾನ ಅಥವ ತತ್ವಶಾಸ್ತ್ರದಲ್ಲಿ ನಡೆಯುವ ಬೌದ್ಧಿಕ ಕ್ರಿಯೆ ತಾನು ಹಿಡಿದು ನಡೆಯಬೇಕಾದ ದಿಕ್ಕನ್ನು ಗುರುತಿಸಲಾರದು; ಆದರೂ ಈ ಬೌದ್ಧಿಕ ಕ್ರಿಯೆ ಅದಕ್ಕೆಂದೇ ಗೊತ್ತಾಗಿರುವ ಒಂದು ದಿಕ್ಕಿನಲ್ಲಿ ನಡೆಯುತ್ತದೆ. ಎಲ್ಲ ಬೌದ್ಧಿಕ ಕ್ರಿಯೆಗಳಿಗೂ ಒಂದು ದಿಕ್ಕನ್ನು ನಿರ್ದೇಶಿಸಿ ಕೊಡುವುದು ಧರ್ಮ. ಪ್ಲೇಟೋವಿನಿಂದ ಹಿಡಿದು ಷೋಪನ್ಹೋರ್ ವರೆಗಿನ ಎಲ್ಲ ತತ್ವಶಾಸ್ತ್ರಜ್ಞರೂ ಧರ್ಮ ತಮಗೆ ತೋರಿಸಿದ ಹಾದಿಯಲ್ಲೇ ನಡೆದರು; ಹಾಗೆ ನಡೆಯದೆ ಅವರಿಗೆ ಬೇರೆ ದಾರಿಯಿರ ಲಿಲ್ಲ. ಪ್ಲೇಟೊ ಹಾಗೂ ಅವನ ಅನುಯಾಯಿಗಳ ತತ್ವಶಾಸ್ತ್ರ ಪೇಗನ್ ಸಂಪ್ರ ದಾಯದ್ದು. ಬೇರೆಬೇರೆ ವ್ಯಕ್ತಿಗಳಿಗೆ ಮತ್ತು ಒಂದು ರಾಜ್ಯಕ್ಕೆ ಸೇರಿದ ವ್ಯಕ್ತಿಗಳ ಗುಂಪಿಗೆ ಸಾಧ್ಯವಿದ್ದಷ್ಟು ಯೋಗಕ್ಷೇಮವನ್ನು ಸಂಪಾದಿಸಿ ಕೊಡುವ ದಾರಿಗಳನ್ನು ಅದು ಮುಖ್ಯ ವಾಗಿ ಪರಿಶೀಲಿಸಿತು. ಇಂಥದೇ ಪೇಗನ್ ಜೀವನ ದೃಷ್ಟಿಯಿಂದ ಹೊರಟ ಮಧ್ಯಯುಗದ ಮಠೀಯ ಕ್ರಿಶ್ಚಿಯನ್ ತತ್ವಶಾಸ್ತ್ರ ವ್ಯಕ್ತಿಗೆ ಮೋಕ್ಷವನ್ನು ಹೇಗೆ ದೊರಕಿಸಿ ಕೊಡಬಹುದು ಎಂದು ವಿಚಾರ ಮಾಡಿತು. ಅಂದರೆ, ಭವಿಷ್ಯ ಜೀವನದಲ್ಲಿ ವ್ಯಕ್ತಿಗತ ಯೋಗಕ್ಷೇಮವನ್ನು ಸಾಧ್ಯವಿದ್ದಷ್ಟು ಸಂಪಾದಿಸಿಕೊಳ್ಳುವ ಮಾರ್ಗಾನ್ವೇಷಣೆ; ತನ್ನ ಮಠಾಚಾರ್ಯಪ್ರಭುತ್ವ ಕಾಲದಲ್ಲಿ ಮಾತ್ರ ಅದು ಸಾಮಾಜಿಕ ಯೋಗಕ್ಷೇಮದ ಬಗ್ಗೆ ಕೊಂಚ ಕೆಲಸಮಾಡಿತು.

ಆಧುನಿಕ ತತ್ವಶಾಸ್ತ್ರ-ಹೆಗೆಲ್ಲನದು ಮತ್ತು ಕಾಂಟ್‌ನದು – ಮೂಲತಃ ಜೀವನದ ಅರ್ಥವನ್ನು ರಾಜ್ಯ–ಸಾಮಾಜಿಕ ಧರ್ಮ ಸಂಬಂಧದಲ್ಲಿ ಕಾಣುತ್ತದೆ. ಯೆಹೂದ್ಯರ ವಿಶ್ವಶಾಸ್ತ್ರದಿಂದ ಮುಕ್ತವಾಗಲು ಬಯಸಿದ ಷೋಪನ್ಹೋರ್ ಮತ್ತು ಹಾರ್ಟ್‌ಮನ್‌ರ ನಿರಾಶಾವಾದಿ ತತ್ವಶಾಸ್ತ್ರ ಅನೈಚ್ಛಿಕವಾಗಿ ಬೌದ್ಧ ಧರ್ಮದ ನೆಲೆಗಟ್ಟನ್ನು ಒಪ್ಪಿಕೊಂಡಿತು.

ಮನುಷ್ಯನಿಗೂ ವಿಶ್ವಕ್ಕೂ ಯಾವ ಸಂಬಂಧವನ್ನು ಧರ್ಮ ಕಲ್ಪಿಸುತ್ತದೆಯೋ, ಅದರಿಂದ ಯಾವ ಪರಿಣಾಮಗಳು ಉಂಟಾಗುತ್ತವೋ, ಅದಷ್ಟನ್ನು ವಿಚಾರಿಸುವುದೇ

ತತ್ತ್ವಶಾಸ್ತ್ರದ ಕೆಲಸ. ಇದು ಎಂದೂ ಇದ್ದದ್ದು ಹೀಗೆ; ಇನ್ನು ಮುಂದೆ ಇರುವುದೂ ಹೀಗೆ. ಇಂಥ ಸಂಬಂಧ ಕಲ್ಪಿತವಾಗುವವರೆಗೆ ತತ್ತ್ವಶಾಸ್ತ್ರಕ್ಕೆ ಯಾವ ಕಾರ್ಯಕ್ಷೇತ್ರವೂ ಇರುವುದಿಲ್ಲ.

ಶಬ್ದದ ವಿರಳಾರ್ಥದಲ್ಲಿ ಪ್ರತ್ಯಕ್ಷ ಪ್ರಮಾಣವನ್ನು ಅಂಗೀಕರಿಸಿದ ವಿಜ್ಞಾನಕ್ಕೂ ಅಷ್ಟೆ. ಮನುಷ್ಯನಿಗೂ ವಿಶ್ವಕ್ಕೂ ಯಾವುದೋ ಒಂದು ಸಂಬಂಧವನ್ನು ಧರ್ಮ ಕಲ್ಪಿಸುತ್ತದೆ: ಇದರ ಪರಿಣಾಮವಾಗಿ ಕೆಲವು ವಸ್ತುಗಳ ಹಾಗೂ ಪ್ರಾಕೃತಿಕ ಘಟನೆಗಳ ಅಭ್ಯಾಸ ಹಾಗೂ ಪರಿಶೀಲನೆಯನ್ನು ವಿಜ್ಞಾನ ಕೈಗೊಳ್ಳುತ್ತದೆ. ವಿಜ್ಞಾನ ಯಾವತ್ತೂ ನಡೆದಿರುವುದು ಹೀಗೆಯೇ: ಅದು ಮುಂದೆ ನಡೆಯುವುದೂ ಹೀಗೆಯೇ.

ವಿಜ್ಞಾನ ಎಂದರೆ "ಎಲ್ಲದರ" ಅಭ್ಯಾಸ ಎನ್ನುವ ಬಾಲಿಶ ಭಾವನೆ ನಮ್ಮ ವೈಜ್ಞಾನಿಕರಲ್ಲಿದೆ. ಇದು ಅಸಾಧ್ಯದ ಕೆಲಸ ಕಾರಣ ಅಭ್ಯಸಿಸ ಬೇಕಾದ ವಸ್ತುಗಳ ಮೊತ್ತ ಅಸಂಖ್ಯವಾಗಿದೆ. ಆದ್ದರಿಂದ ಪರಿಶೀಲನೆಗಾಗಿ ಕಾದು ನಿಂತಿರುವ ಅಸಂಖ್ಯ ಮೊತ್ತದ ವಸ್ತುಗಳು, ಪ್ರಾಕೃತಿಕ ಘಟನೆಗಳು ಹಾಗೂ ವಿದ್ಯಮಾನಗಳಲ್ಲಿ ಕೆಲವನ್ನು ಕ್ರಮವಾಗಿ. ಅವುಗಳ ಪ್ರಾಮುಖ್ಯತೆಗೆ ಅನುಗುಣವಾಗಿ ಧರ್ಮ ಎತ್ತಿಕೊಡುತ್ತದೆ; ಯಾವತ್ತೂ ವಿಜ್ಞಾನ ಅಭ್ಯಸಿಸುವುದು ಈ ಧರ್ಮ ಸೂಚಿತವಾದ ವಸ್ತುಗಳನ್ನೇ: ಅದು ಮುಂದೆ ಮಾಡುವುದು ಈ ಬಗೆಯ ಅಭ್ಯಾಸವನ್ನೇ. ಅಂದರೆ, ವಿಜ್ಞಾನ ಎನ್ನುವುದು ಒಂದು ಅವಿಭಾಜ್ಯ ಶಾಸ್ತ್ರವಲ್ಲ: ಎಷ್ಟು ಬಗೆಯ ಧರ್ಮಗಳಿವೆಯೋ ಅಷ್ಟು ಬಗೆಯ ವಿಜ್ಞಾನಗಳಿವೆ. ಪ್ರತಿಯೊಂದು ಧರ್ಮವೂ ಪರಿಶೀಲನೆಗಾಗಿ ಒಂದು ವಸ್ತು ಶ್ರೇಣಿಯನ್ನು ಆಯ್ದು ಕೊಡುತ್ತದೆ. ಈ ಕಾರಣದಿಂದ ಬೇರೆಬೇರೆ ಕಾಲದ ಮತ್ತು ಜನಾಂಗದ ವಿಜ್ಞಾನ ಆಯಾಕಾಲದ ಮತ್ತು ಜನಾಂಗದ ಧಾರ್ಮಿಕ ಸ್ವಭಾವವನ್ನು ಹೊಂದಿರುತ್ತದೆ; ಅದು ಧಾರ್ಮಿಕ ದೃಷ್ಟಿಯಿಂದಲೇ ಈ ವಸ್ತುಗಳನ್ನು ಅಭ್ಯಾಸ ಮಾಡುತ್ತದೆ.

ರೆನೇಸನ್ಸ್ ಅಥವಾ ಪುನರುಜ್ಜೀವನ ಕಾಲದಲ್ಲಿ ಮರು ಹುಟ್ಟು ಪಡೆದು, ಈಗ ನಮ್ಮ ಸಮಾಜದಲ್ಲಿ ಕ್ರಿಶ್ಚಿಯನ್ ಎಂಬ ಹೆಸರಿನಿಂದ ಹುಲುಸಾಗಿ ಬೆಳೆಯುತ್ತಿರುವ ಪೇಗನ್ ವಿಜ್ಞಾನ ಯಾವ ವಿದ್ಯಮಾನಗಳನ್ನು ಹಾಗೂ ಯಾವ ಪ್ರಾಕೃತಿಕ ವಸ್ತುಗಳನ್ನು ಪರಿಶೀಲಿಸಿದರೆ ಮನುಷ್ಯನ ಕ್ಷೇಮ ಸಾಧನೆಗೆ ತುಂಬ ಪ್ರಯೋಜನ ಎನ್ನುವುದನ್ನು ತನಿಖೆ ಮಾಡಿತು; ಅದು ಮುಂದೆ ಮಾಡುವುದೂ ಅಷ್ಟೆ. ತನ್ನನ್ನು ತುಳಿದು ಹಾಕುತ್ತಿರುವ ದುಃಖದಿಂದ ಮನುಷ್ಯ ಹೇಗೆ ಬಿಡುಗಡೆ ಪಡೆಯಬಹುದು ಎನ್ನುವುದಷ್ಟನ್ನೇ ಬ್ರಾಹ್ಮಣ ಹಾಗೂ ಬೌದ್ಧ ತಾತ್ವಿಕ–ವಿಜ್ಞಾನಗಳು ತನಿಖೆ ಮಾಡಿದವು. ಹೀಬ್ರ್ಯೂ ವಿಜ್ಞಾನವೂ (ದಿ ಟಾಲ್‌ಮುಡ್) ಅಷ್ಟೆ. ದೇವರೊಡನೆ ಮಾಡಿಕೊಂಡ ಒಪ್ಪಂದವನ್ನೂ ಉಳಿಸಿಕೊಂಡು ಬರುವುದರ ಜೊತೆಗೆ, ಆಯ್ದ ಜನ ತಮ್ಮ ಅಂತಃಪ್ರೇರಣೆಯನ್ನು

ಎಂದೂ ಮರೆಯದ ಹಾಗೆ ಮಾಡಲು ಯಾವ ಕರಾರುಗಳನ್ನು ಪಾಲಿಸಬೇಕು, ಅವುಗಳನ್ನು ಹೇಗೆ ಅಭ್ಯಾಸ ಮಾಡಬೇಕು ಎನ್ನುವುದಕ್ಕಷ್ಟೆ ಅದು ಸೀಮಿತವಾಯಿತು. ಮಠೀಯ – ಚರ್ಚ್ ವಿಜ್ಞಾನ ಮನುಷ್ಯ ಹೇಗೆ ಮೋಕ್ಷಸಾಧನೆ ಪಡೆಯಬಹುದು ಎನ್ನುವುದಷ್ಟನ್ನೇ ತನಿಖೆಮಾಡಿತು: ಅದು ಮುಂದೆ ಮಾಡುವುದೂ ಈ ಕೆಲಸವನ್ನೇ. ಈಗ ತಾನೆ ಜನ್ಮ ತಾಳುತ್ತಿರುವ ನೈಜ ಕ್ರಿಶ್ಚಿಯನ್ ವಿಜ್ಞಾನ ಮನುಷ್ಯ ಯಾವ ಪರಾತ್ಪರ ಇಚ್ಛೆಯಿಂದ ಇಲ್ಲಿಗೆ ಬಂದನೋ ಆ ಪರಾತ್ಪರ ಇಚ್ಛೆಯ ಅಪೇಕ್ಷೆಗಳು ಯಾವುವು ಅವನ್ನು ಜೀವನದಲ್ಲಿ ಅನ್ವಯಿಸುವುದು ಹೇಗೆ ಎನ್ನುವುದನ್ನು ಪರಿಶೀಲಿಸುತ್ತದೆ.

ತತ್ವಶಾಸ್ತ್ರವಾಗಲೀ ವಿಜ್ಞಾನವಾಗಲೀ ಮನುಷ್ಯನ ಹಾಗೂ ವಿಶ್ವದ ನಡುವೆ ಒಂದು ಸಂಬಂಧವನ್ನು ಕಲ್ಪಿಸಲಾರದು: ಏಕೆಂದರೆ ತತ್ವಶಾಸ್ತ್ರ ಅಥವ ವಿಜ್ಞಾನ ಪ್ರಾರಂಭವಾಗುವುದಕ್ಕೆ ಮೊದಲೇ ಈ ಸಂಬಂಧ ಏರ್ಪಟ್ಟಿರಬೇಕಾಗುತ್ತದೆ. ಈ ಕೆಲಸ ಅವುಗಳ ಕೈಲಿ ಆಗದೇ ಇರುವುದಕ್ಕೆ ಇನ್ನೊಂದು ಕಾರಣ ಇದೆ. ತತ್ವಶಾಸ್ತ್ರವನ್ನೂ ಒಳಗೊಂಡ ವಿಜ್ಞಾನ ಪ್ರಾಕೃತಿಕ ಘಟನೆಗಳನ್ನು ಬೌದ್ಧಿಕವಾಗಿ ವಿಶ್ಲೇಷಿಸುತ್ತದೆ: ಈ ವಿಶ್ಲೇಷಣೆಯಲ್ಲಿ ವಿಶ್ಲೇಷಣಕಾರನ ನಿಲುವು ಹಾಗೂ ಸ್ವಂತ ಅನಿಸಿಕೆಗಳಿಗೆ ಯಾವ ಮಾನ್ಯತೆಯೂ ಇಲ್ಲ. ಆದರೆ ಮನುಷ್ಯನಿಗೂ ವಿಶ್ವಕ್ಕೂ ಇರುವ ಸಂಬಂಧ ಕೇವಲ ಬೌದ್ಧಿಕವಾದದ್ದಲ್ಲ: ಅದರೊಳಗೆ ಅವನ ಅನಿಸಿಕೆಗಳೂ ಅವನ ಚೇತನಾಂಶದ ಸಮಸ್ತ ಶಕ್ತಿಗಳೂ ಸಂಘಟಿತವಾಗಿವೆ. ನಿಜವಾಗಿ ಇರುವುದು ಒಂದೇ ಒಂದು: ಅದು ಭಾವನೆ: ಎಲ್ಲ ವಸ್ತುಗಳೂ ರಚಿತವಾಗಿರುವುದು ಪರಮಾಣುಗಳಿಂದ: ಜೀವನದ ಸತ್ವ ಇರುವುದು ಸತ್ ಅಥವಾ ಇಚ್ಛೆಯಲ್ಲಿ; ಅಥವಾ ಶಾಖ, ಬೆಳಕು, ಚಲನೆ ಮತ್ತು ವಿದ್ಯುಚ್ಛಕ್ತಿಗಳು ಒಂದೇ ಶಕ್ತಿಯ ಬೇರೆಬೇರೆ ರೂಪಗಳು – ಹೀಗೆಲ್ಲ ನೀವು ಒಬ್ಬನಿಗೆ ಬಿಡಿಸಿ, ವಿವರವಾಗಿ ತಿಳಿ ಹೇಳಬಹುದು: ಆದರೆ ಯಾವಾತ ಸ್ಪರ್ಶಾನುಭವಗಳಿಗೆ, ಸಂತೋಷ–ಸಂಕಟಗಳಿಗೆ, ಆಸೆ–ಭಯಗಳಿಗೆ ಎಚ್ಚರವಾಗಿರುತ್ತಾನೋ ಅವನಿಗೆ ಇಂಥ ವಿವರಣೆಯಿಂದ ವಿಶ್ವದಲ್ಲಿ ತನ್ನ ಸ್ಥಾನ ಏನು ಎನ್ನುವುದು ತಿಳಿಯಲಾರದು.

ಆ ಸ್ಥಾನ, ಅದಕ್ಕೆ ಅನುಗತವಾಗಿ ವಿಶ್ವದೊಡನೆ ಅವನಿಗಿರುವ ಸಂಬಂಧವನ್ನು ಹೇಳುವುದು ಧರ್ಮ. ಅದು ಹೇಳುತ್ತದೆ "ಪ್ರಪಂಚವಿರುವುದು ನಿನಗಾಗಿ: ಆದ್ದರಿಂದ ಜೀವನದಿಂದ ಏನೇನು ಸಾಧ್ಯವೋ ಅದೆಲ್ಲವನ್ನು ಪಡೆದುಕೊ." ಅಥವ, "ದೇವರಿಗೆ ಪ್ರೀತಿ ಪಾತ್ರವಾದ ದೇಶಕ್ಕೆ ನೀನು ಸೇರಿದವನು: ಆದ್ದರಿಂದ ಆ ದೇಶದ ಸೇವೆ ಮಾಡು, ದೇವರು ಆಜ್ಞಾಪಿಸಿರುವುದೆಲ್ಲವನ್ನು ನಡೆಸು. ಹಾಗೆ ನಡೆದುಕೊಂಡಾಗ ನೀನೂ ನಿನ್ನ ದೇಶದ ಜೊತೆಯಲ್ಲಿ ಸಾಧ್ಯವಿರುವ ಎಲ್ಲ ಸೌಖ್ಯವನ್ನೂ ಪಡೆಯುತ್ತೀ." ಅಥವ, "ನೀನು ಪರಾತ್ಪರ ಇಚ್ಛೆಯ ಒಂದು ಉಪಕರಣ. ಯಾವುದೋ ನಿರ್ದಿಷ್ಟ ಕಾರ್ಯ ಸಾಧನೆಗಾಗಿ ನೀನು ಕಳುಹಿಸಲ್ಪಟ್ಟಿದ್ದೀ; ಆ ಪರಾತ್ಪರ ಇಚ್ಛೆ ಏನೆಂದು ತಿಳಿದು,

ಅದರಂತೆ ನಡೆದುಕೊ. ಹಾಗೆ ಮಾಡಿದರೆ ನಿನಗೆ ಸಾಧ್ಯವಿರುವ ಅತ್ಯುತ್ತಮ ಒಳಿತನ್ನು ನೀನು ಮಾಡಿಕೊಂಡ ಹಾಗಾಗುತ್ತದೆ".

ತತ್ವಶಾಸ್ತ್ರ ಹಾಗೂ ವಿಜ್ಞಾನಗಳ ಹೇಳಿಕೆಗಳನ್ನು ಅರ್ಥಮಾಡಿಕೊಳ್ಳಲು ಪೂರ್ವ ಸಿದ್ಧತೆ, ಅಭ್ಯಾಸಗಳ ಅವಶ್ಯಕತೆಯಿದೆ: ಆದರೆ ಧಾರ್ಮಿಕ ಗ್ರಹಿಕೆಗೆ ಇವುಗಳ ಅಗತ್ಯವಿಲ್ಲ: ಪ್ರತಿಯೊಬ್ಬನಿಗೂ – ಅವನೆಷ್ಟೇ ಅಜ್ಞನಾಗಿರಲಿ – ಈ ಗ್ರಹಣ ಶಕ್ತಿ ಇದ್ದೇ ಇರುತ್ತದೆ.

ತನ್ನ ಸುತ್ತಣ ಪ್ರಪಂಚಕ್ಕೂ ತನಗೂ ಇರುವ ಸಂಬಂಧವನ್ನು ತಿಳಿದುಕೊಳ್ಳಲು ಮನುಷ್ಯನಿಗೆ ತಾತ್ವಿಕ ಅಥವಾ ವೈಜ್ಞಾನಿಕ ಜ್ಞಾನದ ಅಗತ್ಯವಿಲ್ಲ. (ಸಮೃದ್ಧಿಯಾದ ಜ್ಞಾನ ಒಂದು ರೀತಿಯಲ್ಲಿ ಅಡಚಣೆಯೂ ಹೌದು) ಆದರೆ, ಬಹುಶಃ ಸ್ವಲ್ಪ ಕಾಲಮಾತ್ರ ಪ್ರಾಪಂಚಿಕ ಚಿಂತೆಗಳನ್ನು ಬಿಟ್ಟು, ತನ್ನ ಭೌತಿಕ ಅಲ್ಪತೆಯನ್ನು ಮನಗಾಣಬೇಕಾಗ ಬಹುದು: ಇದರೊಡನೆ ಪ್ರಾಮಾಣಿಕತೆಯನ್ನೂ ಪಡೆದಿರಬೇಕು. ಸುವಾರ್ತೆಗಳಲ್ಲಿ ಹೇಳಿರುವಂತೆ ಈ ಗುಣಗಳು ಸಾಮಾನ್ಯವಾಗಿ ಮಕ್ಕಳಲ್ಲಿ ಮತ್ತು ಓದುಬರಹಗಳು ಹೆಚ್ಚೇನೂ ಇಲ್ಲದ, ತೀರ ಸರಳ ಜನಗಳಲ್ಲಿ ಕಾಣಸುತ್ತವೆ. ಇದರಿಂದಲೇ ತೀರ ಸರಳರೂ ಹೆಚ್ಚೇನೂ ಓದು ಬರಹ ಬಾರದವರೂ ಆದ ಜನ ಅತ್ಯುತ್ಕೃಷ್ಟವಾದ ಕ್ರಿಶ್ಚಿಯನ್ ಜೀವನ ದರ್ಶನವನ್ನು ಸ್ಪಷ್ಟವಾಗಿ, ಪ್ರಜ್ಞಾಪೂರ್ವಕವಾಗಿ ಹಾಗೂ ಸುಲಭವಾಗಿ ಜೀರ್ಣಿಸಿಕೊಳ್ಳುತ್ತಾರೆ. ಇದಕ್ಕೆ ವಿರುದ್ಧವಾಗಿ ಪಂಡಿತರೂ ಸುಸಂಸ್ಕೃತರೂ ಆದ ಜನ ಒಡ್ಡು ಪೇಗನ್ ಧರ್ಮದಲ್ಲೇ ಸಿಕ್ಕಿಕೊಂಡು ಕೊಳೆಯುತ್ತಾರೆ. ಕೆಲವು ಜನ ಇದ್ದಾರೆ. ಅವರು ತುಂಬ ಸುಸಂಸ್ಕೃತರು, ದೊಡ್ಡ ವಿದ್ವಾಂಸರು. ಅವರಿಗೆ ಜೀವನದ ಅರ್ಥ ಕಾಣಿಸುವುದು ಖಾಸಗಿ ಸುಖದಲ್ಲಿ ಅಥವಾ ದುಃಖದಿಂದ ಪಾರಾಗುವುದರಲ್ಲಿ. ಉದಾಹರಣೆಗೆ ಪ್ರಾಜ್ಞನೂ ಪಂಡಿತನೂ ಆದ ಷೋಪನ್ಹೋರ್ ಹೀಗೆ ಮಾಡಿದ. ತುಂಬ ವಿದ್ಯಾವಂತರಾದ ಕೆಲವು ಬಿಷಪ್‌ಗಳು ಆತ್ಮೋದ್ಧಾರಕ್ಕಾಗಿ ಸಂಸ್ಕಾರ, ದಯೆಗಳ ಮೊರೆ ಹೊಕ್ಕರು. ಆದರೆ ಅನಕ್ಷರಸ್ಥ ಎಂದು ಹೇಳಬಹುದಾದ ರಷ್ಯದ ಒಬ್ಬ ರೈತ ಬೌದ್ಧಿಕವಾಗಿ ಯಾವ ಪ್ರಯತ್ನವನ್ನೂ ಮಾಡದೆಯೇ, ಪ್ರಪಂಚದ ಮಹಾಜ್ಞಾನಿಗಳು (ಎಪಿಕ್ಟೆಟಸ್, ಮಾರ್ಕಸ್ ಆರಿಲಿಯಸ್, ಸೆನೆಕ) ಕಂಡುಕೊಂಡ ಜೀವನದ ಅರ್ಥವನ್ನು ತಾನೂ ಕಂಡುಕೊಳ್ಳುತ್ತಾನೆ. ಅಂದರೆ, ತಾನು ದೈವದ ಒಂದು ಸಾಧನ, ತಾನೊಬ್ಬ ದೇವಪುತ್ರ ಎಂದು ಒಪ್ಪಿಕೊಳ್ಳುತ್ತಾನೆ.

ಆದರೆ ನೀವು ಕೇಳಬಹುದು: "ಅ–ತಾತ್ವಿಕವೂ, ಅ–ವೈಜ್ಞಾನಿಕವೂ ಆದ ಈ ಜ್ಞಾನದ ಅಂತರಾರ್ಥ ಏನು? ತಾತ್ವಿಕವೂ ಅಲ್ಲದ ವೈಜ್ಞಾನಿಕವೂ ಅಲ್ಲದ ಈ ಜ್ಞಾನ ಯಾವುದು? ಅದನ್ನು ಸೂತ್ರೀಕರಿಸುವುದು ಹೇಗೆ?" ಈ ಪ್ರಶ್ನೆಗಳಿಗೆ ನಾನಿಷ್ಟೆ ಉತ್ತರ ಹೇಳಬಲ್ಲೆ: ಎಲ್ಲ ಬಗೆಯ ಜ್ಞಾನಗಳೂ ಧಾರ್ಮಿಕ ಜ್ಞಾನವನ್ನೇ ಅವಲಂಬಿಸಿರುವುದರಿಂದ, ಎಲ್ಲ ಬಗೆಯ ಜ್ಞಾನಗಳಿಗಿಂತ ಅದು ಮೊದಲು ಬಂದುದಾದ್ದರಿಂದ, ನಾವು

ಅದನ್ನು ವಿವರಿಸಲಾರೆವು; ಹಾಗೆ ಮಾಡುವುದಕ್ಕೆ ಆಗತ್ಯವಾದ ಸಲಕರಣೆಗಳು ಯಾವುವೂ ನಮ್ಮಲ್ಲಿಲ್ಲ. ಮತಧರ್ಮ ಶಾಸ್ತ್ರದ ಭಾಷೆಯಲ್ಲಿ ಈ ಜ್ಞಾನವನ್ನು ದಿವ್ಯದರ್ಶನ ಎನ್ನುತ್ತಾರೆ. ಈ 'ದಿವ್ಯದರ್ಶನ' ಎನ್ನುವ ಶಬ್ದಕ್ಕೆ ಯಾವ ಗೂಢಾರ್ಥವನ್ನೂ ನಾವು ಹಚ್ಚದಿದ್ದರೆ. ಆ ಶಬ್ದದ ಬಳಕೆ ಸರಿ ಎನ್ನಬಹುದು. ಏಕೆಂದರೆ ಈ ಜ್ಞಾನ ಓದಿನಿಂದಾಗಲೀ. ಒಬ್ಬನ ಅಥವ ಅನೇಕರ ಪ್ರಯತ್ನದಿಂದಾಗಲೀ ಬರುವುದಲ್ಲ. ಯಾವಾಗ ಒಬ್ಬ ಅಥವ ಹಲವರು ಸಾವಕಾಶವಾಗಿ ಮಾನವತೆಗೆ ಕಂಡುಬರುತ್ತಿರುವ ದೈವದ ಅಪಾರ ವಿವೇಕದ ಈ ಆವಿಷ್ಕಾರವನ್ನು ಒಪ್ಪಿಕೊಳ್ಳುತ್ತಾರೊ ಆಗ ಈ ಜ್ಞಾನ ಸಂಪಾದನೆಯಾಗುತ್ತದೆ.

ಜೀವನದ ಅರ್ಥ ಇರುವುದು ವ್ಯಕ್ತಿಯ ಖಾಸಗಿ ಯೋಗಕ್ಷೇಮದಲ್ಲಿ ಅಲ್ಲ ಎನ್ನುವುದು ಜನಗಳಿಗೆ ಹತ್ತುಸಾವಿರ ವರ್ಷಕ್ಕೆ ಮುಂಚೆ ಏಕೆ ತಿಳಿಯಲಿಲ್ಲ? ಕೌಟುಂಬಿಕ. ಸಾಮಾಜಿಕ. ರಾಷ್ಟ್ರೀಯ ಮತ್ತು ರಾಜ್ಯ ಜೀವನ ದೃಷ್ಟಿ ಯಾವುದೊ ಕಾಲದಲ್ಲಿ ಅವರ ತಿಳಿವಿಗೆ ಹೇಗೆ ಬಂತು? ನೆನಪಿನಲ್ಲಿ ಉಳಿದಿರುವ ಚರಿತ್ರೆಯ ಅವಧಿಯಲ್ಲೇ ಕ್ರಿಶ್ಚಿಯನ್ ದೃಷ್ಟಿ ಜನಗಳ ತಿಳಿವಿಗೆ ಏಕೆ ಬಂತು? ಈ ತಿಳಿವು ಯಾರೋ ಒಬ್ಬ ವ್ಯಕ್ತಿಗೆ ಅಥವ ಒಂದು ಜನಾಂಗಕ್ಕೆ, ಯಾವುದೋ ಒಂದು ಕಾಲದಲ್ಲಿ, ಒಂದು ರೂಪದಲ್ಲಿ ಏಕೆ ಬಂತು? ಈ ಪ್ರಶ್ನೆಗಳಿಗೆ ಒಂದುಕಾಲದಲ್ಲಿದ್ದ ಚಾರಿತ್ರಿಕ ಸನ್ನಿವೇಶಗಳು, ಜೀವನ, ಸ್ವಭಾವ ಮತ್ತು ಈ ಜೀವನ ದೃಷ್ಟಿಯನ್ನು ತಮ್ಮದಾಗಿ ಮಾಡಿಕೊಂಡು ಅದನ್ನು ಪ್ರಕಟಪಡಿಸಿದ ಜನಗಳ ವಿಶೇಷ ಗುಣಗಳು ಇತ್ಯಾದಿಗಳಲ್ಲಿ ಉತ್ತರ ಸಿಕ್ಕುವುದಿಲ್ಲ. "ಮೇಲೇರುತ್ತಿರುವ ಸೂರ್ಯ ಕೆಲವು ವಸ್ತುಗಳ ಮೇಲೆ ಬೆಳಕು ಚೆಲ್ಲುವುದಕ್ಕೆ ಮೊದಲು ಇನ್ನು ಕೆಲವು ವಸ್ತುಗಳ ಮೇಲೆ ಏಕೆ ಬೆಳಕು ಬೀರುತ್ತಾನೆ?" ಎನ್ನುವ ಪ್ರಶ್ನೆಗೆ ಉತ್ತರ ಹೇಳುವುದೂ ಒಂದೆ ಮೇಲಿನ ಪ್ರಶ್ನೆಗೆ ಉತ್ತರ ಹೇಳುವುದು ಒಂದೆ. ಸತ್ಯ ಸೂರ್ಯ ಮೇಲೆಮೇಲೆ ಏರಿದ ಹಾಗೆ ಪ್ರಪಂಚದ ಹೆಚ್ಚು ಹೆಚ್ಚು ಭಾಗವನ್ನು ಬೆಳಗುತ್ತಾನೆ; ಅವನ ಬೆಳಕಿನ ಕಿರಣಗಳು ಯಾವ ವಸ್ತುಗಳ ಮೇಲೆ ಮೊದಲು ಬೀಳುತ್ತವೋ ಅವುಗಳಿಂದ ಪ್ರತಿಫಲಿತ ವಾಗುತ್ತವೆ; ಕೆಲವು ವಸ್ತುಗಳು ಈ ಪ್ರತಿಫಲನ ಕಾರ್ಯಕ್ಕೆ ತುಂಬ ಸೂಕ್ತರೂಪದಲ್ಲಿರು ತ್ತವೆ ಎಂದು ಹೇಳುವ ಅಗತ್ಯ ಇಲ್ಲ. ಊರ್ಧ್ವಮುಖವಾದ ಈ ಸತ್ಯವನ್ನು ಬಿಂಬಿಸಲು ಕೆಲವು ವ್ಯಕ್ತಿಗಳಿಗೆ ಮಾತ್ರ ಸಾಧ್ಯ; ಆದರೆ ಇದಕ್ಕೆ ಅವಶ್ಯಕವಾದದ್ದು ವಿಶೇಷವಾದ ಬೌದ್ಧಿಕ ಗುಣಗಳಲ್ಲ, ಅನಾಸಕ್ತವಾದ ಹೃದಯದ ಗುಣಗಳು: ಇವು ಅನ್ವೇಷಣಶೀಲವಾದ ಮೇಧಾಶಕ್ತಿಯೊಡನೆ ಒಗ್ಗೂಡಿಕೊಂಡಿರುವುದು ಇಲ್ಲವೇ ಇಲ್ಲ ಎನ್ನಬಹುದು: ಧರ್ಮಸಂಸ್ಥಾಪಕರು ಯಾರೂ ತಾತ್ವಿಕ ಅಥವ ವೈಜ್ಞಾನಿಕ ಪಾಂಡಿತ್ಯಕ್ಕೆ ಗಮನೀಯ ರಾಗಿಲ್ಲ; ನಾವು ಕಂಡಂತೆ ಅವರು ಮೆರೆದಿರುವ ಗುಣಗಳು : ಪ್ರಾಪಂಚಿಕ ಚಿಂತೆಗಳನ್ನು ದೂರ ಮಾಡುವುದು; ವ್ಯಕ್ತಿಯ ಭೌತಿಕ ಅಲ್ಪತೆಯನ್ನು ಮನಗಾಣುವುದು ಮತ್ತು ಕೇವಲ ಪ್ರಾಮಾಣಿಕರಾಗಿರುವುದು.

ಕ್ರಿಶ್ಚಿಯನ್ ಭ್ರಾತೃಗಳ ಮುನ್ನಡೆಗೆ ಅಡ್ಡಿಯಾಗಿರುವ ಅನೇಕ ತಪ್ಪುಗಳಲ್ಲಿ ಅತಿ ಮುಖ್ಯವಾದದ್ದು ನಮ್ಮ ವೈಜ್ಞಾನಿಕರ ಆಲೋಚನಾಕ್ರಮ ಎಂದು ನನಗೆ ಅನಿಸುತ್ತದೆ. ಅವರೀಗ ಮೋಸೆಸ್‌ನ ಸ್ಥಾನದಲ್ಲಿದ್ದಾರೆ. ಅವರನ್ನು ಮುನ್ನಡೆಸುತ್ತಿರುವ ಜೀವನದೃಷ್ಟಿ ಪುನರುಜ್ಜೀವನ ಕಾಲದಲ್ಲಿ ಮತ್ತೆ ಸ್ಥಾಪಿತವಾದ ಪೇಗನ್ ಜೀವನ ದೃಷ್ಟಿ. ಈಗ ರೂಕ್ಷ ವಿಕಾರಕ್ಕೊಳಗಾಗಿರುವ ಕ್ರೈಸ್ತಧರ್ಮವನ್ನೇ ಅವರು ನೈಜವಾದ ಕ್ರೈಸ್ತಧರ್ಮ ಎಂದು ತಿಳಿದಿದ್ದಾರೆ. ಈ ವೈಜ್ಞಾನಿಕರು ಮಾನವ ಜನಾಂಗಕ್ಕೆ ಕ್ರೈಸ್ತಧರ್ಮದ ಅಗತ್ಯ ಇಲ್ಲ ಎಂದು ತೀರ್ಮಾನಿಸಿಬಿಟ್ಟಿದ್ದಾರೆ. ಅಷ್ಟೇ ಅಲ್ಲ. ಅವರು ಪ್ರಾಚೀನ ಪೇಗನ್ ರಾಜ್ಯ–ಸಾಮಾಜಿಕ ಜೀವನದೃಷ್ಟಿಯೇ ಅತ್ಯಂತ ಉತ್ಕೃಷ್ಟವಾದದ್ದೆಂದೂ. ಮಾನವತೆ ಅದಕ್ಕೇ ಹೇಗಾದರೂ ಅಂಟಿಕೊಂಡಿರಬೇಕೆಂದೂ ತಿಳಿದಿದ್ದಾರೆ. ಈ ದೃಷ್ಟಿಯನ್ನು ಹೊಂದಿರುವ ಇವರಿಗೆ ಕ್ರೈಸ್ತಧರ್ಮದ ಅರ್ಥ ತಿಳಿಯುವುದು ಹೇಗೆ? ಅವರು ಅದನ್ನು ತಿಳಿದುಕೊಳ್ಳುವ ಪ್ರಯತ್ನವನ್ನೂ ಮಾಡುವುದಿಲ್ಲ. ಮಾನವ ಜನಾಂಗ ಸಮೀಪಿಸುತ್ತಿರುವ ಅತ್ಯುನ್ನತ ಜೀವನದೃಷ್ಟಿಯ ಅರ್ಥ ಇವರಿಗೆ ತಿಳಿದೇ ಇಲ್ಲ.

ವಿಜ್ಞಾನಕ್ಕೂ ಕ್ರೈಸ್ತ ಧರ್ಮಕ್ಕೂ ತಾಳೆಯಾಗುವುದಿಲ್ಲ ಎನ್ನುವ ಕಾರಣದಿಂದ ವಿಜ್ಞಾನಿಗಳು ತಪ್ಪು ಇರುವುದು ಕ್ರೈಸ್ತ ಧರ್ಮದಲ್ಲೇ ಹೊರತೂ ವಿಜ್ಞಾನದಲ್ಲಿ ಅಲ್ಲ ಎಂದು ತೀರ್ಮಾನಿಸಿದ್ದಾರೆ. ಮೂಲಭೂತವಾದ ಈ ತಪ್ಪು ಆಗಿರುವುದು ಇಲ್ಲಿ. ಅಂದರೆ, ಅವರು ವಾಸ್ತವ ಸಂಗತಿಯನ್ನು ನಂಬುವುದಕ್ಕೆ ಇಷ್ಟಪಡುವುದಿಲ್ಲ: ಸಮಕಾಲೀನ ಸಮಾಜದಲ್ಲಿ ಸಾಕಷ್ಟು ಪ್ರಭಾವಶಾಲಿಯಾಗಿರುವ ಕ್ರೈಸ್ತಧರ್ಮ ವಿಜ್ಞಾನಕ್ಕಿಂತ ಹದಿನೆಂಟುನೂರು ವರ್ಷಗಳಿಗೆ ಮುಂಚೆ ಬಂದದ್ದು. ಆದರೆ ಈ ವಿಜ್ಞಾನಿಗಳ ಪ್ರಕಾರ ಕ್ರೈಸ್ತಧರ್ಮ ವಿಜ್ಞಾನಕ್ಕಿಂತ ಹದಿನೆಂಟುನೂರು ವರ್ಷಗಳ ಹಿಂದೆ ಬಿದ್ದಿದೆ!

ಅದಲುಬದಲಾಗಿರುವ ಈ ಪಾತ್ರಗಳಿಂದ ಒಂದು ಆಶ್ಚರ್ಯಕರವಾದ ಸಂಗತಿ ಸ್ಪಷ್ಟವಾಗುತ್ತದೆ: ಧರ್ಮ, ನೀತಿ ಅಥವ ಜೀವನದ ನೈಜ ಮೌಲ್ಯ ಹಾಗೂ ಅರ್ಥಗಳ ಬಗ್ಗೆ ವಿಜ್ಞಾನಿಗಳಲ್ಲಿ ಇರುವಷ್ಟು ಗೊಂದಲ ಬೇರೆ ಯಾರಲ್ಲೂ ಇಲ್ಲ. ಇದಕ್ಕೂ ಆಶ್ಚರ್ಯಕರವಾದ ಸಂಗತಿಯೆಂದರೆ ಭೌತಿಕ ಪ್ರಪಂಚದ ಘಟನೆಗಳನ್ನು ಇಷ್ಟು ಯಶಸ್ವಿಯಾಗಿ ಪರಿಶೀಲಿಸುತ್ತಿರುವ ಇಂದಿನ ವಿಜ್ಞಾನ ಮಾನವ ಜೀವನ ಯಾವ ದಿಕ್ಕಿನಲ್ಲಿ ನಡೆಯಬೇಕು ಎನ್ನುವುದರ ಬಗ್ಗೆ ಚೂರೂ ಸಹಾಯಕವಾಗಿಲ್ಲ; ಅದು ಇಲ್ಲಿ ನಿಜಕ್ಕೂ ಒಂದು ಕಾಲ್ತೊಡಕಾಗಿಯೇ ಉಳಿದಿದೆ.

ಆದ್ದರಿಂದಲೇ ನಾನು ಹೇಳುವುದು: ವಿಶ್ವದೊಡನೆ ಮನುಷ್ಯನ ಸಂಬಂಧ ಎಂಥದು ಎಂದು ನಿರ್ಣಯಿಸುವುದು ತತ್ವಜ್ಞಾನವೂ ಅಲ್ಲ. ವಿಜ್ಞಾನವೂ ಅಲ್ಲ: ಈ ಕೆಲಸ ಯಾವತ್ತೂ ನಡೆಯುವುದು ಧರ್ಮದಿಂದಲೇ.

ಆದ್ದರಿಂದ "ಧರ್ಮ ಅನ್ನುವ ಮಾತಿಗೆ ನನ್ನ ಅರ್ಥ ಏನು?" ಎಂದು ಕೇಳಿದ ನಿಮ್ಮ ಮೊದಲ ಪ್ರಶ್ನೆಗೆ ನನ್ನ ಉತ್ತರ ಇದು: "ಅನಂತವೂ ಅಪಾರವೂ ಆದ ವಿಶ್ವದೊಡನೆ

ಅಥವ ಅದರ ಮೂಲ ಹಾಗೂ ಆದಿಕಾರಣಗಳ ಬಗ್ಗೆ ಮನುಷ್ಯ ಕಲ್ಪಿಸಿಕೊಳ್ಳುವ ಸಂಬಂಧವೇ ಧರ್ಮ".

ಮೊದಲ ಪ್ರಶ್ನೆಗೆ ಕೊಟ್ಟಿರುವ ಉತ್ತರದಿಂದ ಸಹಜವಾಗಿಯೇ ಎರಡನೆಯ ಪ್ರಶ್ನೆಗೂ ಉತ್ತರ ದೊರಕುತ್ತದೆ.

ತನ್ನ ಸುತ್ತಣ ವಿಶ್ವದೊಡನೆ ಕಲ್ಪಿಸಿಕೊಳ್ಳುವ ಸಂಬಂಧವೇ ಧರ್ಮವಾಗಿದ್ದರೆ ನೀತಿ ಎನ್ನುವುದು ಮನುಷ್ಯರು ವಿಶ್ವದೊಡನೆ ಯಾವ ಸಂಬಂಧವನ್ನು ಹೊಂದಿರುತ್ತಾರೊ ಅವಕ್ಕೆ ಅನುಗುಣವಾಗಿ ನಡೆಯುವ ಅವರ ಕ್ರಿಯೆಗಳ ಸೂಚಿ ಹಾಗೂ ಸ್ಪಷ್ಟೀಕರಣ. ಯಾಕೆಂದರೆ ಈ ಸಂಬಂಧ ಜೀವನದ ಅರ್ಥವನ್ನು ನಿರ್ಣಯಿಸುತ್ತದೆ. ನಮಗೆ ತಿಳಿದಿರುವುದು ಕೇವಲ ಎರಡು ರೀತಿಯ ಮೂಲಭೂತವಾದ ಸಂಬಂಧಗಳು. (ಪೇಗನ್ ಸಾಮಾಜಿಕ ಸಂಬಂಧ ಖಾಸಗಿ ಸಂಬಂಧದ ವಿಸ್ತರಣೆ ಎಂದಿಟ್ಟುಕೊಂಡರೆ ಎರಡು: ಅದನ್ನೇ ಬೇರೆಯಾಗಿ ಗಣಿಸಿದರೆ ಮೂರು). ಇವಕ್ಕೆ ಅನುಗತವಾಗಿ ಕೇವಲ ಮೂರು ರೀತಿಯ ನೀತಿಶಾಸ್ತ್ರಗಳಿವೆ: ಪ್ರಾಥಮಿಕವೂ ರೂಕ್ಷವೂ ಖಾಸಗಿಯೂ ಆದದ್ದು: ಪೇಗನ್ ಕೌಟುಂಬಿಕ, ರಾಷ್ಟ್ರೀಯ ಅಥವಾ ಸಮಾಜಿಕವಾದದ್ದು; ಮತ್ತು ಕ್ರೈಸ್ತ ಅಥವಾ ದೈವಿಕ, ಅಂದರೆ ಮಾನವನಿಗೆ ಅಥವಾ ದೇವರಿಗೆ ನಡೆಸಬೇಕಾದ ಸೇವಾ ರೀತಿಯದು.

ಎಲ್ಲ ಪೇಗನ್ ಧರ್ಮಗಳೂ ವ್ಯಕ್ತಿಗತ ಯೋಗಕ್ಷೇಮ ಚಿಂತನೆಯನ್ನೇ ಮೂಲಾಧಾರ ವಾಗಿ ಇರಿಸಿಕೊಂಡಿರುವುದರಿಂದ ಅವುಗಳ ನೀತಿಶಾಸ್ತ್ರ ವ್ಯಕ್ತಿಗತ ಯೋಗಕ್ಷೇಮವನ್ನು ಸಾಧಿಸಲು ಸಹಾಯಕವಾದ ಎಲ್ಲ ಗುಣಗಳನ್ನೂ ಅವನ್ನು ಪಡೆಯಲು ಅಗತ್ಯವಾದ ಮಾರ್ಗಗಳನ್ನೂ ಸ್ಪಷ್ಟೀಕರಿಸುತ್ತದೆ. ಪ್ರಪಂಚದೊಡನಿರುವ ಈ ಬಗೆಯ ಸಂಬಂಧ ದಿಂದಲೇ ಎಲ್ಲ ಪೇಗನ್ ತತ್ವಗಳು ಬಂದಿರುವುದು : ಏಪಿಕ್ಯೂರನ ಬೋಧನೆಯು ಅತ್ಯಂತ ಕೀಳುರೂಪ: ಈ ಲೋಕದಲ್ಲೂ ಪರಲೋಕದಲ್ಲೂ ಅಸಭ್ಯ ಸುಖದ ವಾಗ್ದಾನವಾಡುವ ಮುಸಲ್ಮಾನರ ನೀತಿಶಾಸ್ತ್ರ: ಮೋಕ್ಷದ ಗುರಿಯನ್ನು ಹೊಂದಿರುವ ಕ್ರೈಸ್ತ – ಮಠೀಯ ನೀತಿಶಾಸ್ತ್ರ; ಅಂದರೆ ಪರಲೋಕದಲ್ಲಿ ಖಾಸಗಿ ಸುಖಕ್ಕೆ ಧಕ್ಕೆ ತಾರದ ಮೋಕ್ಷ ದೊರಕಿಸುತ್ತೇನೆ ಅನ್ನುವ ನೀತಿಶಾಸ್ತ್ರ. ಹೀಗೆಯೇ ಈ ಪ್ರಪಂಚಕ್ಕಷ್ಟೆ ಸೀಮಿತ ಗೊಂಡ ಪ್ರಯೋಜನವಾದಿಗಳ ವ್ಯಕ್ತಿಗತ ಯೋಗಕ್ಷೇಮದ ನೀತಿಶಾಸ್ತ್ರ.

ವ್ಯಕ್ತಿಗತ ಯೋಗಕ್ಷೇಮವನ್ನೆ ಗುರಿಯಾಗಿಟ್ಟುಕೊಂಡಿರುವ ಈ ಬೋಧನೆ ಸಹಜವಾಗಿಯೇ ವ್ಯಕ್ತಿಗತ ದುಃಖಗಳಿಂದ ಬಿಡುಗಡೆ ಪಡೆಯುವುದನ್ನು ಹೇಳುತ್ತದೆ. ಬೌದ್ಧ ಮತದ ನೀತಿಶಾಸ್ತ್ರದ ಕೀಳುರೂಪ ಹಾಗೂ ನಿರಾಶಾವಾದಿಯ ಪ್ರಾಪಂಚಿಕ ಸಿದ್ಧಾಂತ ಈ ಬಗೆಯ ಬೋಧನೆಯಿಂದ ಬಂದವು.

ಒಂದು ಗುಂಪಿನ ಯೋಗಕ್ಷೇಮವನ್ನು ಸಾಧಿಸುವುದೇ ಜೀವನದ ಗುರಿ ಎಂದು ಮನುಷ್ಯನಿಗೂ ವಿಶ್ವಕ್ಕೂ ಇರುವ ಪೇಗನ್ ಸಂಬಂಧ ತಿಳಿಯುವುದರಿಂದ ಮನುಷ್ಯ ಗುಂಪಿನ ಯೋಗಕ್ಷೇಮಕ್ಕಾಗಿ ದುಡಿಯಬೇಕು ಎನ್ನುವ ನೀತಿಶಾಸ್ತ್ರ ಬಂದಿದೆ. ಎಲ್ಲಿಯ ವರೆಗೆ ಗುಂಪಿಗೂ ಲಾಭವಾಗುತ್ತದೊ ಅಲ್ಲಿಯವರೆಗೂ ಈ ಬೋಧನೆ ವ್ಯಕ್ತಿಗತಯೋಗ ಕ್ಷೇಮಕ್ಕೆ ಪರವಾನಗಿ ಕೊಡುತ್ತದೆ: ಯಾಕೆಂದರೆ ಈ ಧರ್ಮದ ತಳಹದಿ ಇರುವುದು ಗುಂಪಿನ ಜೀವನದಲ್ಲಿ. ಈ ಬಗೆಯ ಸಂಬಂಧದಿಂದ ನಮಗೆ ಪರಿಚಿತವಾಗಿರುವ ರೋಮನ್ ಮತ್ತು ಗ್ರೀಕರ ಹಾಗೂ ಚೀನಾದೇಶದವರ ನೀತಿಶಾಸ್ತ್ರ ಬಂದಿದೆ: ಇಲ್ಲಿ ವ್ಯಕ್ತಿ ಸಮಾಜಕ್ಕಾಗಿ ತನ್ನನ್ನು ತಾನೆ ಅರ್ಪಿಸಿಕೊಳ್ಳುತ್ತಾನೆ. ಯೆಹೂದ್ಯರ ನೀತಿಶಾಸ್ತ್ರ ಬಂದಿರುವುದೂ ಈ ಸಂಬಂಧದಿಂದಲೆ: ಆಯ್ದ ಜನಗಳ ಯೋಗಕ್ಷೇಮಕ್ಕಾಗಿ ತನ್ನ ಖಾಸಗಿ ಯೋಗಕ್ಷೇಮವನ್ನು ಗೌಣವಾಗಿಸಿಕೊಳ್ಳಬೇಕು. ನಮ್ಮ ಕಾಲದ ಮಠೀಯ ಹಾಗೂ ರಾಜ್ಯದ ನೀತಿಶಾಸ್ತ್ರಗಳೂ ರಾಜ್ಯದ ಒಳಿತಿಗೆ ವ್ಯಕ್ತಿಯಿಂದ ತ್ಯಾಗವನ್ನು ಅಪೇಕ್ಷಿಸುತ್ತವೆ. ಬಹುಪಾಲು ಸ್ತ್ರೀಯರ ನೀತಿಶಾಸ್ತ್ರವೂ ಈ ಸಂಬಂಧದಿಂದ ಬಂದದ್ದೆ: ಅವರು ತಮ್ಮ ಇಡೀ ವ್ಯಕ್ತಿತ್ವವನ್ನು ಕುಟುಂಬದ. ಅದಕ್ಕೂ ಹೆಚ್ಚಾಗಿ ಮಕ್ಕಳ ಯೋಗ ಕ್ಷೇಮಕ್ಕಾಗಿ ಧಾರೆ ಎರೆಯುತ್ತಾರೆ.

ಪ್ರಾಚೀನ ಇತಿಹಾಸ ಹಾಗೂ ಸ್ವಲ್ಪಮಟ್ಟಿಗೆ ಮಧ್ಯಯುಗದ ಮತ್ತು ಆಧುನಿಕ ಕಾಲದ ಇತಿಹಾಸ ಇಂಥ ಕೌಟುಂಬಿಕ. ಸಾಮಾಜಿಕ ಅಥವಾ ರಾಷ್ಟ್ರೀಯ ನೀತಿಶಾಸ್ತ್ರ ದೃಷ್ಟಿಯಿಂದ ನಡೆದ ಕೃತಿ ವಿವರಣೆಯಿಂದ ತುಂಬಿ ಹೋಗಿವೆ.

ಮೂರನೆಯದಾದ ಕ್ರಿಶ್ಚಿಯನ್ ಸಂಬಂಧದಲ್ಲಿ ಮನುಷ್ಯ ತಾನು ಪರಾತ್ಪರ ಇಚ್ಛೆಯನ್ನು ನಡೆಸಲು ಕಳಿಸಲ್ಪಟ್ಟಿರುವ ಒಂದು ಸಾಧನ ಎಂದು ತಿಳಿಯುತ್ತಾನೆ. ಈ ಬೋಧನೆ ಪರಾತ್ಪರೇಚ್ಛೆಯ ಮೇಲೆ ಮನುಷ್ಯ ಹೇಗೆ ನಿಂತಿದ್ದಾನೆ. ಆ ಇಚ್ಛೆಯ ಆಜ್ಞಾಪನೆಗಳು ಯಾವುವು, ಅದರ ಪ್ರಕಾರವಾದ ಜೀವನದ ಅರ್ಥ ಏನು ಎಂದು ಹೇಳುತ್ತದೆ. ಈ ಸಂಬಂಧದಿಂದಲೇ ಮನುಷ್ಯನಿಗೆ ಗೊತ್ತಾಗಿರುವ ಅತ್ಯುಚ್ಚ ನೀತಿಬೋಧೆ ಬಂದಿದೆ: ತಮ್ಮ ಅತ್ಯಂತ ಮಹತ್ವಪೂರ್ಣ ರೂಪದಲ್ಲಿ ಪೈಥಾಗೊರಸ್ಸಿನ, ಸ್ಟೋಯಿಕ್‌ರ, ಬೌದ್ಧರ, ಬ್ರಾಹ್ಮಣರ, ಟಾವೋಯಿಸ್ಟರ ನೀತಿಶಾಸ್ತ್ರ ಹೇಳುವುದು ಈ ಬಗೆಯ ಸಂಬಂಧ ವನ್ನು. ತನ್ನ ನಿಜಾರ್ಥದಲ್ಲಿ ಕ್ರೈಸ್ತಬೋಧೆ ಹೇಳುವುದೂ ಇದನ್ನೇ. ಯಾರು ನಮಗೆ ಜೀವದಾನಮಾಡಿ ಕಳಿಸಿದನೋ ಅವನ ಇಚ್ಛಾಪೂರ್ತಿಗಾಗಿ ವ್ಯಕ್ತಿಗತ ಇಚ್ಛೆಯನ್ನು ತ್ಯಾಗಮಾಡಬೇಕು. ಇದರ ಸಾಧನೆಗಾಗಿ ವ್ಯಕ್ತಿಗತವಾದ ಯೋಗಕ್ಷೇಮವನ್ನಷ್ಟೇ ಅಲ್ಲ ಕೌಟುಂಬಿಕ, ಸಾಮಾಜಿಕ ಹಾಗೂ ರಾಷ್ಟ್ರೀಯ ಯೋಗಕ್ಷೇಮವನ್ನೂ ತ್ಯಾಜ್ಯ ಎಂದು ಭಾವಿಸಬೇಕು. ವಿಶ್ವದೊಡನೆ ಅಥವಾ ಅದರ ಮೂಲದೊಡನೆ ಬೆಳೆಸಿಕೊಳ್ಳುವ ಈ ಮೊದಲನೆಯ, ಎರಡನೆಯ ಅಥವಾ ಮೂರನೆಯ ರೀತಿಯ ಸಂಬಂಧದ ಮೇಲೆ ಪ್ರತಿಯೊಬ್ಬನ ಮುಚ್ಚುಮರೆಯಿಲ್ಲದ, ನೈಜ ನೀತಿಶಾಸ್ತ್ರ ನಿಂತಿದೆ. (ಅವನು ಹೇಳಿ

ಕೊಳ್ಳುವ. ಬೋಧಿಸುವ ನೀತಿಶಾಸ್ತ್ರ ಬೇರೆಯಾಗಿರಬಹುದು: ಅವನು ಬೇರೊಂದು ಬೆಳಕಿನಲ್ಲೇ ಕಾಣಿಸಿಕೊಳ್ಳಲು ಇಷ್ಟ ಪಡಬಹುದು: ಆದರೆ ಅದು ಅಮುಖ್ಯ).

ಸಾಧ್ಯವಿರುವಷ್ಟು ಯೋಗಕ್ಷೇಮ ಸಾಧನೆಯಲ್ಲೇ ತನ್ನ ಹಾಗೂ ವಿಶ್ವದ ಸಂಬಂಧ ಇದೆ ಎಂದು ಪರಿಭಾವಿಸುವ ಮನುಷ್ಯ ಬೇಕಾದ್ದನ್ನು ಹೇಳಬಹುದು: ಕುಟುಂಬಕ್ಕೋಸ್ಕರ, ಸಮಾಜಕ್ಕೋಸ್ಕರ. ದೇಶಕ್ಕೋಸ್ಕರ. ಮಾನವತೆಗೋಸ್ಕರ, ದೈವೇಚ್ಛೆಯನ್ನು ನಡೆಸುವುದಕ್ಕೋಸ್ಕರ ಬದುಕುವುದು ನೀತಿಶಾಸ್ತ್ರಕ್ಕನುಗುಣವಾದದ್ದು ಎನ್ನಬಹುದು. ತುಂಬ ಜಾಣ್ಮೆಯಿಂದ ಅವನು ಈ ಸೋಗು ಹಾಕಿ ಮನುಷ್ಯರನ್ನು ಮೋಸಗೊಳಿಸಬಹುದು. ಆದರೆ ಅವನ ಕಾರ್ಯಗಳೆಲ್ಲಕ್ಕೂ ಪ್ರೇರಕವಾಗಿರುವುದು ಕೇವಲ ಅವನ ವ್ಯಕ್ತಿಗತ ಯೋಗಕ್ಷೇಮ ಚಿಂತನೆ. ಯಾವಾಗಲಾದರೂ ಆಯ್ಕೆಯ ಪ್ರಸಂಗ ಬಂದರೆ ಅವನೆಂದೂ ತನ್ನ ವ್ಯಕ್ತಿತ್ವವನ್ನು ಕುಟುಂಬಕ್ಕಾಗಿಯಾಗಲಿ. ದೇಶಕ್ಕಾಗಿಯಾಗಲಿ. ದೈವೇಚ್ಛೆಗಾಗಿಯಾಗಲಿ ತ್ಯಾಗಮಾಡುವುದಿಲ್ಲ; ಅದಕ್ಕೆ ಬದಲಾಗಿ ಅವೆಲ್ಲವನ್ನೂ ತನ್ನ ಸ್ವಂತ ಹಿತಕ್ಕೆ ಬಲಿ ಕೊಡುತ್ತಾನೆ. ಎಲ್ಲಿಯವರೆಗೆ ಅವನು ಜೀವನದ ಅರ್ಥವನ್ನು ವ್ಯಕ್ತಿಗತ ಯೋಗಕ್ಷೇಮದಲ್ಲಿ ಕಾಣುತ್ತಾನೊ, ಎಲ್ಲಿಯವರೆಗೆ ಅವನ ಹಾಗೂ ವಿಶ್ವದ ನಡುವಣ ಸಂಬಂಧ ಬದಲಾಗುವುದಿಲ್ಲವೊ ಅಲ್ಲಿಯವರೆಗೆ ಅವನು ಬೇರೆಯ ರೀತಿಯಲ್ಲಿ ನಡೆದುಕೊಳ್ಳಲಾರ.

ಇದರಂತೆಯೆ ಯಾರು ತಮ್ಮ ಹಾಗೂ ಜೀವನದ ಸಂಬಂಧ ಇರುವುದು ಕುಟುಂಬಕ್ಕೆ, (ಸ್ತ್ರೀಯರಿಗೆ ಇದು ಹೆಚ್ಚು ಅನ್ವಯವಾಗುತ್ತದೆ) ಪಂಗಡಕ್ಕೆ ಅಥವ ದೇಶಕ್ಕೆ ಸೇವೆ ಮಾಡುವುದರಲ್ಲಿದೆ (ಇದು ಬೇರೊಬ್ಬರ ದಬ್ಬಾಳಿಕೆಗೆ ಒಳಗಾಗಿರುವ ಜನರಿಗೂ ಕೋಲಾಹಲದ ಕಾಲದಲ್ಲಿ ರಾಜಕೀಯವಾಗಿ ಕ್ರಿಯಾತ್ಮಕರಾಗಿರುವವರಿಗೂ ಅನ್ವಯಿಸುತ್ತದೆ) ಎನ್ನುತ್ತಾರೋ ಅವರ ನೀತಿ – ಅವರೆಷ್ಟೇ ತಾವು ಕ್ರಿಶ್ಚಿಯನ್ ಎಂದು ಸಾರಿಕೊಳ್ಳಲಿ – ಕುಟುಂಬಕ್ಕೆ ಅಥವ ದೇಶಕ್ಕೆ ಸೇರಿದ್ದು. ಯಾವಾಗಲಾದರೂ ಕೌಟುಂಬಿಕ ಅಥವಾ ಸಾಮಾಜಿಕ ಯೋಗಕ್ಷೇಮಕ್ಕೂ ಮತ್ತು ಖಾಸಗಿ ವ್ಯಕ್ತಿತ್ವ ಅಥವಾ ದೈವೇಚ್ಛೆಯ ಪೂರೈಕೆಗೂ ಘರ್ಷಣೆ ಒದಗಿದರೆ. ಅವನು ನಿಸ್ಸಂದೇಹವಾಗಿ ತನ್ನ ಯೋಗಕ್ಷೇಮದ ಪರವಾಗಿ ನಿಲ್ಲುತ್ತಾನೆ: ಏಕೆಂದರೆ ಅವನು ಬದುಕಿರುವುದೇ ತನ್ನ ಗುಂಪಿನ ಯೋಗಕ್ಷೇಮ ಸಾಧನೆಗಾಗಿ; ಅವನಿಗೆ ಜೀವನದ ಅರ್ಥಕಂಡುಬರುವುದು ಕೇವಲ ಇಂಥ ಸೇವೆಯಲ್ಲೆ. ಹೀಗೆಯೆ ಯಾರು ತನ್ನ ಹಾಗೂ ವಿಶ್ವದ ಸಂಬಂಧವಿರುವುದು ದೈವೇಚ್ಛೆಗೆ ಅನುಗುಣವಾಗಿ ನಡೆಯುವುದರಲ್ಲಿ ಎಂದು ತಿಳಿದಿರುತ್ತಾನೋ ಅವನು ಎಲ್ಲ ಮಾನವೀಯ ನೆಂಟಸ್ತಿಕೆಯನ್ನೂ ತ್ಯಾಜ್ಯಮಾಡುತ್ತಾನೆಯೇ ವಿನಹ ತನ್ನನ್ನು ಇಲ್ಲಿಗೆ ಕಳಿಸಿದ ದೈವೇಚ್ಛೆಗೆ ವಿರುದ್ಧವಾಗಿ ನಡೆಯಲಾರ. ನೀವು ಅವನಿಗೆ ಬೇಕಾದ್ದು ಹೇಳಬಹುದು: ಅವನ ವ್ಯಕ್ತಿತ್ವ, ಕುಟುಂಬ, ದೇಶ, ಚಕ್ರಾಧಿಪತ್ಯ ಅಥವ ಮಾನವ ಜನಾಂಗಕ್ಕೆ ಹಿತವಾದದ್ದನ್ನೇ ಮಾಡು ಎನ್ನಬಹುದು; ಆದರೆ ಅವನು ಅದನ್ನು ತಿರಸ್ಕರಿಸಿ, ವಿವೇಕ ಹಾಗು ಪ್ರೇಮಗಳು ಅವನಲ್ಲಿ ಮೂಡಿಸಿರುವ ದೈವೇಚ್ಛೆಗೆ ಅನುಗುಣ

ವಾಗಿಯೆ ನಡೆದುಕೊಳ್ಳುತ್ತಾನೆ: ಕೇವಲ ಈ ಬಗೆಯ ಅನುಸರಣೆಯಲ್ಲಿ ಅವನು ಜೀವನದ ಅರ್ಥ ಕಂಡುಕೊಳ್ಳುತ್ತಾನೆ.

ಧರ್ಮಕ್ಕೆ ಯಾವ ಸಂಬಂಧವೂ ಇಲ್ಲದ ನೀತಿಶಾಸ್ತ್ರವಿರುವುದು ಅಸಾಧ್ಯ: ಯಾಕೆಂದರೆ ನೀತಿ ಧರ್ಮದ ಪರಿಣಾಮವಾಗಿ ಬರುವಂಥದು. ಮನುಷ್ಯ ವಿಶ್ವದೊಡನೆ ಯಾವ ಸಂಬಂಧವನ್ನು ಬೆಳೆಸಿಕೊಳ್ಳುತ್ತಾನೊ ಅದರ ಮೇಲೆ ನೀತಿ ಶಾಸ್ತ್ರ ನಿಂತಿರುತ್ತದೆ—ಅಂದರೆ ನೀತಿ ಧರ್ಮದಲ್ಲಿ ಅಂತರ್ಗತವಾಗಿರುತ್ತದೆ. "ನನ್ನ ಜೀವನದ ಅರ್ಥ ಏನು?" ಎನ್ನುವ ಪ್ರಶ್ನೆಗೆ ಪ್ರತಿಯೊಂದು ಧರ್ಮವೂ ಒಂದು ಉತ್ತರ. ಧಾರ್ಮಿಕವಾಗಿ ಹೇಳುವುದಾದರೆ ಅದರಲ್ಲಿ ನೈತಿಕಾಂಶವೂ ಬರುತ್ತದೆ. ಜೀವನದ ಅರ್ಥ ವಿವರಿಸುವಾಗ ಇದು ಮೊದಲು ಬರಬಹುದು ಅಥವ ಅನಂತರ ಬರಬಹುದು. "ಜೀವನದ ಅರ್ಥ ಏನು?" ಎನ್ನುವ ಪ್ರಶ್ನೆಗೆ ಉತ್ತರ ಹೀಗಿರಬಹುದು: "ವ್ಯಕ್ತಿಯ ಯೋಗಕ್ಷೇಮ ಸಾಧನೆಯಲ್ಲಿ ಜೀವನದ ಅರ್ಥ ಇದೆ: ಆದ್ದರಿಂದ ನಿನಗೆ ಸಾಧ್ಯವಿರುವ ಎಲ್ಲ ಅನುಕೂಲಗಳನ್ನೂ ಪಡೆದುಕೋ"; ಅಥವ. "ಜೀವನದ ಅರ್ಥ ಇರುವುದು ಒಂದು ಗುಂಪಿನ ಯೋಗಕ್ಷೇಮದಲ್ಲಿ: ಆದ್ದರಿಂದ ನಿನ್ನ ಶಕ್ತಿಯನ್ನೆಲ್ಲ ಬಳಸಿ ಆ ಗುಂಪಿಗೆ ಸಹಾಯಕನಾಗು": ಅಥವ "ನಿನ್ನನ್ನು ಯಾರು ಇಲ್ಲಿಗೆ ಕಳಿಸಿದನೊ ಅವನ ಇಚ್ಛೆಗೆ ಅನುಗುಣವಾಗಿ ನಡೆಯುವುದರಲ್ಲಿ ಜೀವನದ ಅರ್ಥ ಇದೆ; ಆದ್ದರಿಂದ ನಿನ್ನ ಶಕ್ತಿಯನ್ನೆಲ್ಲ ಬಳಸಿ. ಆ ಇಚ್ಛೆ ಏನೆಂದು ತಿಳಿದು ಅದನ್ನು ಪೂರ್ಣಮಾಡು". ಅಥವ ಇದೇ ಪ್ರಶ್ನೆಗೆ ಈ ರೀತಿ ಉತ್ತರವನ್ನು ಕೊಡಬಹುದು: "ನಿನ್ನ ಜೀವನದ ಅರ್ಥ ಇರುವುದು ನಿನ್ನ ವ್ಯಕ್ತಿಗತ ಸುಖದಲ್ಲಿ: ಮನುಷ್ಯನ ಬದುಕಿನ ಗುರಿಯೇ ಅದು": "ನೀನು ಯಾವ ಗುಂಪಿಗೆ ಸೇರಿದವನು ಎಂದು ತಿಳಿದುಕೊಂಡಿದ್ದೀಯೋ ಆ ಗುಂಪಿಗೆ ಸಹಾಯಕನಾಗು: ಅದೇ ನಿನ್ನ ಧರ್ಮ": "ದೇವರನ್ನು ಸೇವಿಸುವುದರಲ್ಲಿ ನಿನ್ನ ಜೀವನದ ಅರ್ಥ ಇದೆ: ಅದನ್ನು ಮಾಡುವುದೇ ನಿನ್ನ ಧರ್ಮ."

ಜೀವನದ ಅರ್ಥ ಏನು ಎಂದು ಹೇಳುವ ಧರ್ಮದಲ್ಲೇ ನೀತಿಶಾಸ್ತ್ರವೂ ಸೇರಿದೆ. ಆದ್ದರಿಂದಲೇ ನೀತಿಶಾಸ್ತ್ರವನ್ನು ಧರ್ಮದಿಂದ ಬೇರ್ಪಡಿಸುವುದಕ್ಕೆ ಆಗುವುದಿಲ್ಲ: ಕ್ರೈಸ್ತಧರ್ಮಕ್ಕೆ ಸೇರದ ತತ್ವಜ್ಞಾನಿಗಳು ತಮ್ಮ ತತ್ವಶಾಸ್ತ್ರದ ಆಧಾರದ ಮೇಲೆ ಅತ್ಯುಚ್ಚವಾದ ನೀತಿಶಾಸ್ತ್ರವನ್ನು ಕಟ್ಟುವ ಪ್ರಯತ್ನ ಮಾಡುತ್ತಾರೆ: ಈ ಪ್ರಯತ್ನಗಳು ನೀತಿಶಾಸ್ತ್ರ ಧರ್ಮದಿಂದ ಭಿನ್ನವಾಗಿರುವುದು ಸಾಧ್ಯವಿಲ್ಲ 'ಎನ್ನುವುದನ್ನು ಸ್ಪಷ್ಟವಾಗಿ ತೋರಿಸುತ್ತವೆ. ಕ್ರೈಸ್ತ ನೀತಿಶಾಸ್ತ್ರ ಕೇವಲ ಅಗತ್ಯವಾದದ್ದು.' ಅದಿಲ್ಲದೆ ನಾವು ಬದುಕುವುದು ಸಾಧ್ಯವಿಲ್ಲ ಎನ್ನುವುದು ಈ ತತ್ವಜ್ಞಾನಿಗಳಿಗೆ ಗೊತ್ತು. ಅದರ ಇರುವಿಕೆ ಒಂದು ವಾಸ್ತವ ಸಂಗತಿ ಎಂದು ಬಲ್ಲ ಈ ಜನ ತಮ್ಮ ತತ್ವಶಾಸ್ತ್ರಕ್ಕೆ ಕ್ರೈಸ್ತ ನೀತಿಶಾಸ್ತ್ರವನ್ನು ಗಂಟು ಹಾಕುವ ಪ್ರಯತ್ನ ಮಾಡುತ್ತಾರೆ. ಇದನ್ನು ಅವರೆಷ್ಟು ಜಾಣ್ಮೆಯಿಂದ ಮಾಡುತ್ತಾರೆಂದರೆ ಕ್ರೈಸ್ತ ನೀತಿಶಾಸ್ತ್ರ ಅವರ ಪೇಗನ್ ಸಾಮಾಜಿಕ ತತ್ವಜ್ಞಾನದಿಂದಲೇ

ಬಂದದ್ದೇನೋ ಅನಿಸುವಂತೆ ಮಾಡುತ್ತಾರೆ. ಆದರೆ ಅವರ ಪ್ರಯತ್ನವೇ ಕ್ರಿಶ್ಚಿಯನ್ ನೀತಿಶಾಸ್ತ್ರ ಹಾಗೂ ಪೇಗನ್ ತತ್ತ್ವಜ್ಞಾನ ಪರಸ್ಪರ ಸಂಬಂಧವಿಲ್ಲದವು ಎಂದು ಸ್ಪಷ್ಟ ಪಡಿಸುತ್ತದೆ. ಅಷ್ಟೇ ಅಲ್ಲ, ಈ ನೀತಿ ಶಾಸ್ತ್ರಕ್ಕೂ ಅವರ ವ್ಯಕ್ತಿಗತ ಯೋಗಕ್ಷೇಮ, ದುಃಖದಿಂದ ವ್ಯಕ್ತಿಗತ ಬಿಡುಗಡೆ, ಸಾಮಾಜಿಕ ಯೋಗಕ್ಷೇಮ ಇತ್ಯಾದಿಗಳೆಲ್ಲಕ್ಕೂ ಯಾವ ಸಾಮ್ಯವೂ ಇಲ್ಲ ಎಂದು ತಿಳಿಯುತ್ತದೆ.

ನಾವು ಒಪ್ಪಿಕೊಳ್ಳುವ ಧಾರ್ಮಿಕ ಜೀವನ ದೃಷ್ಟಿಗೆ ಅನುಗುಣವಾಗಿ ಕ್ರಿಶ್ಚಿಯನ್ ನೈತಿಕತೆ "ಗುಂಪಿನ ಹಿತಕ್ಕಾಗಿ ಖಾಸಗಿ ವ್ಯಕ್ತಿತ್ವವನ್ನು ಬಿಟ್ಟುಕೊಡ ಬೇಕು" ಎಂದಷ್ಟೆ ಹೇಳುವುದಿಲ್ಲ: "ದೇವರ ಸೇವೆಗಾಗಿ ಗುಂಪಿನ ಹಿತವನ್ನು ವ್ಯಕ್ತಿತ್ವವನ್ನು ತ್ಯಾಗ ಮಾಡು" ಎನ್ನುತ್ತದೆ. ಆದರೆ ಪೇಗನ್ ತತ್ತ್ವಜ್ಞಾನ ಸಾಧ್ಯವಿದ್ದಷ್ಟು ಮಟ್ಟಿಗೂ ವ್ಯಕ್ತಿಗತವಾದ ಯೋಗಕ್ಷೇಮವನ್ನು ಅಥವ ಗುಂಪಿನ ಯೋಗಕ್ಷೇಮವನ್ನು ಸಾಧಿಸುವ ಮಾರ್ಗಗಳೇನು ಎಂದು ಪರಿಶೀಲಿಸುತ್ತದೆ. ಆದ್ದರಿಂದ ಇವೆರಡರಲ್ಲಿ ವೈದೃಶ್ಯತೆ ಬರುವುದು ಅನಿವಾರ್ಯ. ಈ ವೈದೃಶ್ಯವನ್ನು ಮುಚ್ಚಿಹಾಕಲು ಒಂದು ಮಾರ್ಗ ಇದೆ. ಅದು ಅಮೂರ್ತ ಸೋಪಾಧಿಕ ಭಾವನೆಗಳನ್ನು ಒಂದರ ಮೇಲೊಂದು ಪೇರಿಸಿ ನಮ್ಮನ್ನು ಅಸ್ಪಷ್ಟ ಅಧ್ಯಾತ್ಮ ಪ್ರಪಂಚದಲ್ಲಿ ತಳ್ಳಿಬಿಡುವುದು.

ಪುನರುಜ್ಜೀವನದ ಅನಂತರ ಬಂದ ಎಲ್ಲ ತತ್ತ್ವಶಾಸ್ತ್ರಜ್ಞರು ಮಾಡಿರುವುದು ಈ ಕೆಲಸವನ್ನೇ : ಕ್ರಿಶ್ಚಿಯನ್ ನೀತಿಶಾಸ್ತ್ರಕ್ಕೂ ಪೇಗನ್ ನೆಲೆಗಟ್ಟಿನ ಮೇಲೆ ನಿಂತಿರುವ ತತ್ತ್ವಶಾಸ್ತ್ರಕ್ಕೂ ತಾಳೆ ಹಾಕುವ ಅಸಾಧ್ಯದ ಕೆಲಸ. ಈ ಕಾರಣದಿಂದ ಆಧುನಿಕ ತತ್ತ್ವಶಾಸ್ತ್ರದಲ್ಲಿ ಭೀಕರ ಅವಾಸ್ತವಿಕತೆ, ಅಸ್ಪಷ್ಟತೆ, ನಿಗೂಢತೆಗಳು ತುಂಬಿಹೋಗಿವೆ; ಹಾಗೆ ಅದು ಜೀವನ ವಿಮುಖವೂ ಆಗಿದೆ. ಸ್ಪಿನೋಜ (ತಾನು ಕ್ರಿಶ್ಚಿಯನ್ ಎಂದು ಅವನು ಭಾವಿಸದಿದ್ದರೂ ಅವನ ತತ್ತ್ವಜ್ಞಾನ ನೈಜ ಕ್ರಿಶ್ಚಿಯನ್ ಮೂಲದಿಂದ ಬಂದದ್ದು) ಮತ್ತು ಕ್ಯಾಂಟ್ (ಮಹಾ ಮೇಧಾವಿಯಾದ ಈತ ತನ್ನ ನೀತಿಶಾಸ್ತ್ರ ಹಾಗೂ ಅಧ್ಯಾತ್ಮದ ನಡುವೆ ಯಾವ ಸಂಬಂಧವೂ ಇಲ್ಲ ಎಂದ) ಇವರಿಬ್ಬರನ್ನು ಬಿಟ್ಟು ಉಳಿದೆಲ್ಲ ತತ್ತ್ವ ಶಾಸ್ತ್ರಜ್ಞರೂ (ತೀಕ್ಷ್ಣಬುದ್ಧಿಯ ಷೋಪನ್ಹೋರ್ ಸೇರಿದಂತೆ) ತಮ್ಮ ನೀತಿಶಾಸ್ತ್ರ ಹಾಗೂ ಅಧ್ಯಾತ್ಮಕ್ಕೆ ಕೃತಕ ಕೊಂಡಿಗಳನ್ನು ಬೆಸೆಯುವ ಪ್ರಯತ್ನ ಮಾಡಿದರು.

ಕ್ರಿಶ್ಚಿಯನ್ ನೀತಿಶಾಸ್ತ್ರಕ್ಕೆ ತತ್ತ್ವಶಾಸ್ತ್ರದ ಅವಲಂಬನೆ ಬೇಡ: ಅದು ತನ್ನಷ್ಟಕ್ಕೆ ಧೃವವಾಗಿ ನಿಂತಿದೆ: ಅದಕ್ಕೆ ಕಾಲ್ಪನಿಕ ಊರುಗೋಲುಗಳ ಅಗತ್ಯವಿಲ್ಲ: ಆದ್ದರಿಂದ ಅದನ್ನು ಮೊದಲಿಗೆ ಒಪ್ಪಿಕೊಳ್ಳಬೇಕು ಅನ್ನುವ ಭಾವನೆಯಿದೆ. ಹೀಗೆಯೇ, ನೀತಿಶಾಸ್ತ್ರ ತನ್ನನ್ನು ವಿರೋಧಿಸದೆ ಇರಲಿ ಎಂದು ತತ್ತ್ವ ಶಾಸ್ತ್ರ ಕೆಲವು ಪ್ರಮೇಯಗಳನ್ನು ಮಂಡಿಸುತ್ತದೆ: ಈ ಪ್ರಮೇಯಗಳು ಅಲ್ಲಿಂದ ನೇರವಾಗಿ ಬಂದವು ಎಂದೂ ಅನಿಸುತ್ತವೆ. ಈ ಪ್ರಮೇಯಗಳನ್ನು ಅವುಗಳ ಅಮೂರ್ತ ಸ್ವರೂಪದಲ್ಲಿ ಪರಿಶೀಲಿಸಿದರೆ ಅವು

ಕ್ರಿಶ್ಚಿಯನ್ ನೀತಿಶಾಸ್ತ್ರವನ್ನು ಸಮರ್ಥಿಸುವಂತೆಯೇ ತೋರುತ್ತವೆ. ಆದರೆ ಅವನ್ನು ವ್ಯಾವಹಾರಿಕ ಜೀವನದ ಸಮಸ್ಯೆಗಳಿಗೆ ಅನ್ವಯಿಸಿದಾಗ ಅವುಗಳ ತಾತ್ವಿಕ ನೆಲಗಟ್ಟಿಗೂ ನೀತಿಶಾಸ್ತ್ರಕ್ಕೂ ಅವುಗಳಿಗೆ ಇರುವ ವ್ಯತ್ಯಾಸವಷ್ಟೇ ಅಲ್ಲ ವಿರೋಧವೂ ಚೆನ್ನಾಗಿ ಕಂಡುಬರುತ್ತದೆ.

ಅದೃಷ್ಟಹೀನ ನೀಚೆ – ಆತನೀಚೆಗೆ ತುಂಬ ಖ್ಯಾತಿ ಪಡೆದಿದ್ದಾನೆ – ಈ ವಿರೋಧಾಭಾಸವನ್ನು ಬಯಲು ಮಾಡಿ ದೊಡ್ಡ ಉಪಕಾರ ಮಾಡಿದ್ದಾನೆ. ಕ್ರಿಶ್ಚಿಯನ್ ಅಲ್ಲದ ಇಂದಿನ ತತ್ವಶಾಸ್ತ್ರದ ದೃಷ್ಟಿಯಿಂದ ನೋಡಿದರೆ ನೀತಿಶಾಸ್ತ್ರದ ಎಲ್ಲ ನಿಯಮಗಳು ಕೇವಲ ಅಸತ್ಯ ಹಾಗೂ ಬೂಟಾಟಿಕೆಯವು ಎಂದು ಅವನು ಹೇಳುವುದನ್ನು ಯಾರೂ ಅಲ್ಲಗಳೆಯಲಾರರು. ಅದಕ್ಕೆ ಮನುಷ್ಯ ಅತಿಮಾನವರನ್ನು ಸೃಷ್ಟಿಮಾಡಿಕೊಂಡು, ಅವರಲ್ಲಿ ತಾನು ಒಬ್ಬನಾಗುವುದು ಹೆಚ್ಚು ಲಾಭದಾಯಕ, ಸುಖದಾಯಕ ಹಾಗೂ ಯೋಗ್ಯವಾದದ್ದು ಎಂದು ಅವನು ಅಭಿಪ್ರಾಯಪಡುತ್ತಾನೆ: ಏಕೆಂದರೆ, ಎಲ್ಲರಂತೆ ಅವನೂ ಇದ್ದರೆ ಅತಿಮಾನವರು ಅವನನ್ನು ಕಾಲಕಸ ಮಾಡುತ್ತಾರೆ. ಪೇಗನ್ ಧಾರ್ಮಿಕ ದೃಷ್ಟಿಯ ಮೇಲೆ ರಚಿತವಾದ ಯಾವ ತತ್ವಶಾಸ್ತ್ರವೂ ಮನುಷ್ಯ ತಾನು ಬಯಸುವ, ಗ್ರಹಿಸುವ ಮತ್ತು ಸಾಧ್ಯ ಎಂದು ತಿಳಿಯುವ ವೈಯಕ್ತಿಕ, ಕೌಟುಂಬಿಕ ಅಥವಾ ಸಾಮಾಜಿಕ ಯೋಗಕ್ಷೇಮಕ್ಕಾಗಿ ಬದುಕುವುದಕ್ಕಿಂತ ಇನ್ನೊಬ್ಬನ ಯೋಗಕ್ಷೇಮಕ್ಕಾಗಿ ಬದುಕುವುದು ಹೆಚ್ಚು ಉಪಯುಕ್ತ, ಹೆಚ್ಚು ವಿವೇಕಯುಕ್ತವಾದದ್ದು ಎಂದು ಬೋಧಿಸಲಾರದು. ಯಾಕೆಂದರೆ ಇದು ಬಯಕೆ, ಗ್ರಹಿಕೆಗಳಿಗೆ ಹಾಗೂ ಮನುಷ್ಯನ ಕ್ಷುದ್ರ ಮಾನವೀಶಕ್ತಿಯ • ಅಳವಿಗೆ ಮೀರಿದ್ದು. ವ್ಯಕ್ತಿಗತ ಯೋಗಕ್ಷೇಮದಲ್ಲಿ – ಜೀವನದ ಅರ್ಥವನ್ನು ಕಾಣುವ ಯಾವ ತತ್ವಶಾಸ್ತ್ರವೂ ವಿಚಾರವಾದಿಯಾದ ಒಬ್ಬ ಮನುಷ್ಯನನ್ನು ತಾನು ಬಯಸಿದ, ಗ್ರಹಿಸಿದ, ನಿಸ್ಸಂದೇಹವಾಗಿ ತನ್ನ ಯೋಗಕ್ಷೇಮಕ್ಕೆ ಸಹಾಯಕವಾದದ್ದನ್ನು (ಇನ್ನೊಬ್ಬನ ಯೋಗಕ್ಷೇಮಕ್ಕಲ್ಲ ಏಕೆಂದರೆ ತನ್ನ ತ್ಯಾಗದಿಂದ ಬರುವ ಫಲ ಏನು ಎಂಬುದು ಅವನಿಗೆ ತಿಳಿಯುವುದು ಸಾಧ್ಯವೇ ಇಲ್ಲ) "ಅದು ಸರಿ ಅಥವಾ ಒಳ್ಳೆಯದು ಅಥವಾ ಅದೊಂದು ನಿರುಪಾಧಿಕ ವಿಧಿ" ಅನ್ನುವ ಕಾರಣದಿಂದ ಬಿಟ್ಟುಕೊಡುವಂತೆ ಖಂಡಿತ ಪ್ರೇರಿಸಲಾರದು.

ಪೇಗನ್ ತತ್ವಶಾಸ್ತ್ರ ಇದನ್ನು ಖಂಡಿತ ಮನದಟ್ಟುಮಾಡಿಕೊಡಲಾರದು. ಜನರನ್ನು ತನ್ನ ಹಿತಕ್ಕಾಗಿ ತುಳಿಯುವುದಕ್ಕಿಂತ ಮನುಷ್ಯ ತನ್ನ ಜೀವನವನ್ನು ಅವರ ಸೇವೆಗೆ ನಿವೇದಿಸಿಕೊಳ್ಳುವುದು ಉತ್ತಮತರವಾದದ್ದು ಎಂದು ಅದೆಂದೂ ಕಲಿಸಲಾರದು. ಎಲ್ಲ ಜನರೂ ಸಮಾನರು ಎಂದು ಸಾಧಿಸಬೇಕಾದರೆ ಮನುಷ್ಯ ತನ್ನ ಹಾಗೂ ವಿಶ್ವದ ಸಂಬಂಧವನ್ನು ಪುನಃ ಸ್ಪಷ್ಟೀಕರಿಸಿಕೊಳ್ಳಬೇಕು: ಇಲ್ಲಿ ಮನುಷ್ಯನಿಗೆ ಎರಡು ದಾರಿ ಇಲ್ಲವೇ ಇಲ್ಲ: ಅವನ ಜೀವನದ ಅರ್ಥ ಇರುವುದು ತನ್ನನ್ನು ಇಲ್ಲಿಗೆ ಕಳಿಸಿದ ದೈವದ ಇಚ್ಛೆಯಂತೆ ನಡೆದುಕೊಳ್ಳುವುದರಲ್ಲಿ: ಆ ದೈವದ ಇಚ್ಛೆ "ಮಾನವರ ಸೇವೆಯಲ್ಲಿ

ಮನುಷ್ಯನ ಜೀವ ನಡೆಯಲಿ" ಎನ್ನುತ್ತದೆ. ಮನುಷ್ಯ ಹಾಗೂ ವಿಶ್ವದ ಸಂಬಂಧ ಹೀಗೆ ಬದಲಾಗಬೇಕಾದರೆ ಅದು ಧರ್ಮದಿಂದಲೇ ಸಾಧ್ಯ.

ಪೇಗನ್ ವಿಜ್ಞಾನದ ಮೂಲ ದೃಷ್ಟಿಯಿಂದ ಕ್ರಿಶ್ಚಿಯನ್ ನೀತಿಶಾಸ್ತ್ರವನ್ನು ರಚಿಸುವ ಮತ್ತು ಇವೆರಡಕ್ಕೂ ಹೊಂದಾಣಿಕೆ ಮಾಡುವ ಪ್ರಯತ್ನಗಳು ಹೀಗಾಗುತ್ತವೆ. ಯಾವ ಕುತರ್ಕವೂ ಚಮತ್ಕಾರಿಕ ಆಲೋಚನೆಯೂ "ಇಂದಿನ ವಿಜ್ಞಾನ ನಿಂತಿರುವುದು. ಬದಲಿಸಲಾಗದ. ಎಲ್ಲರಿಗೂ ಅನ್ವಯವಾಗುವ ಒಂದು ಶಾಶ್ವತ ನಿಯಮದ ಮೇಲೆ" ಎನ್ನುವುದನ್ನು ಹೀಗಳೆಯಲಾರದು: ಬದುಕಿಗಾಗಿ ನಡೆಸುವ ಹೋರಾಟ ಹಾಗೂ ಸತ್ವವುಳ್ಳದ್ದು ಉಳಿಯುವುದೇ ಆ ನಿಯಮ. ಆದ್ದರಿಂದಲೇ ಪ್ರತಿಯೊಬ್ಬನೂ ತನ್ನ ಹಾಗೂ ತನ್ನ ಗುಂಪಿನ ಯೋಗಕ್ಷೇಮವನ್ನು ಸಾಧಿಸಲು ತಾನು ಸ್ವತಃ ಸತ್ವಯುತನಾಗುವುದರ ಜೊತೆಗೆ ತನ್ನ ಗುಂಪನ್ನೂ ಸತ್ವಯುತವಾಗಿಸಬೇಕಾಗುತ್ತದೆ. ಅಂದರೆ. ತಾನು ತನ್ನ ಗುಂಪು ನಾಶವಾಗಬಾರದು: ತನಗಿಂತ. ತನ್ನ ಗುಂಪಿಗಿಂತ ಅಶಕ್ತವಾದದ್ದು ನಶಿಸಿ ಹೋಗಬೇಕು – ಇದು ಅವನ ದೃಷ್ಟಿ.

ಈ ನಿಯಮಗಳನ್ನು ಮಾನವ ಜೀವನಕ್ಕೆ ಅನ್ವಯಿಸಿದಾಗ ಉಂಟಾಗುವ ತಾರ್ಕಿಕ ಪರಿಣಾಮಗಳು ಕೆಲವು ಪ್ರಕೃತಿ ವಿಜ್ಞಾನಿಗಳಲ್ಲಿ ಭೀತಿಯನ್ನು ತುಂಬಿವೆ. ಈ ಭೀತಿಯಿಂದ ಪಾರಾಗಲು ಹಾಗೂ ಈ ನಿಯಮದಿಂದ ಬಂದಿರುವ ಭಯೋಚ್ಚಾಟನೆ ಮಾಡಲು ಅವರು ಒಗಟಿನ ಮಾತುಗಳ ಮರೆಹೊಕ್ಕಿದ್ದಾರೆ. ಆದರೆ ಅವರ ಪ್ರಯತ್ನಗಳೆಲ್ಲ ಈ ನಿಯಮ ಪ್ರತಿಭಟನೆಯಿಂದ ಬದಲಾಗುವಂಥದ್ದಲ್ಲ ಎಂದು ಸ್ಪಷ್ಟಪಡಿಸುತ್ತವೆ; ಮನುಷ್ಯನೂ ಸೇರಿದಂತೆ ಪ್ರಾಣಿ–ಜೀವನ ಪ್ರಪಂಚವನ್ನೆಲ್ಲ ಈ ನಿಯಮ ಆಳುತ್ತದೆ.

ನಾನು ಈ ಲೇಖನವನ್ನು ಪ್ರಾರಂಭಿಸಿದ ಮೇಲೆ ಮಿ|| ಹಕ್ಸ್ಲಿ ಇಂಗ್ಲಿಷ್ ಗೋಷ್ಠಿಯೊಂದನ್ನು ಉದ್ದೇಶಿಸಿ 'ವಿಕಾಸವಾದ ಹಾಗೂ ನೀತಿಶಾಸ್ತ್ರ'ದ ಬಗ್ಗೆ ಓದಿದ ಲೇಖನ ರಷ್ಯನ್ ಭಾಷೆಯಲ್ಲಿ ಬಂದಿದೆ. ಈ ಘನ ವಿದ್ವಾಂಸರು ತಮ್ಮ ಲೇಖನದಲ್ಲಿ– ನಮ್ಮ ಪ್ರಸಿದ್ಧ ಪ್ರೊ|| ಬೆಕೆಟೋವ್ ಮತ್ತಿತರರು ಇದೇ ವಿಷಯವನ್ನು ಕುರಿತು ಬರೆದಿದ್ದಾರೆ; ಇಲ್ಲಿ ಅವರು ಹಿಂದಿನವರಿಗಿಂತ ಹೆಚ್ಚಿನ ಯಶಸ್ಸನ್ನೇನೂ ಗಳಿಸಿಲ್ಲ – ಬದುಕಿಗಾಗಿ ನಡೆಯುವ ಹೋರಾಟ ನೀತಿಶಾಸ್ತ್ರವನ್ನು ಉಲ್ಲಂಘಿಸುವುದಿಲ್ಲ ಎಂದು ತೋರಿಸುವ ಪ್ರಯತ್ನಮಾಡಿದ್ದಾರೆ. ಹಾಗೆ. ಬದುಕಿಗಾಗಿ ನಡೆಯುವ ಹೋರಾಟ ಜೀವನದ ಮೂಲಭೂತ ನಿಯಮಗಳಲ್ಲಿ ಹೇಗೆ ಒಂದೋ ಹಾಗೆ ನೀತಿಶಾಸ್ತ್ರವೂ ಒಂದು ಅಂಥ ನಿಯಮ: ಅದು ಇಲ್ಲಿ ಉಳಿಯಬಲ್ಲುದಷ್ಟೆ ಅಲ್ಲ ಪ್ರಗತಿಯನ್ನು ಕೂಡಾ ಸಾಧಿಸಬಲ್ಲದು ಎನ್ನುತ್ತಾರೆ. ಮಿ|| ಹಕ್ಸ್ಲಿಯವರ ಲೇಖನದಲ್ಲಿ ಅನೇಕ ರೀತಿಯ ಜೋಕುಗಳಿವೆ; ಕವನದ ತುಣುಕುಗಳಿವೆ: ಇವುಗಳಿಂದಾಗಿ ಅವರ ಬರವಣಿಗೆಯಲ್ಲಿ ವಾಗಾಡಂಬರ ಹಾಗೂ ಜಟಿಲತೆ ಎಷ್ಟರಮಟ್ಟಿಗೆ ಬಂದಿದೆಯೆಂದರೆ ಲೇಖನದ ಮೂಲಾರ್ಥವನ್ನು

ಗ್ರಹಿಸುವುದೇ ಭಾರಿ ತೊಡಕಾಗುತ್ತದೆ. ಆದರೂ ಅವರ ಅರ್ಥ ಹೀಗಿದೆ ಎನ್ನಬಹುದು: ವಿಕಾಸವಾದದ ನಿಯಮ ನೀತಿಯ ನಿಯಮಕ್ಕೆ ಪ್ರತಿಕೂಲವಾದದ್ದು: ಇದು ಪ್ರಾಚೀನ ಗ್ರೀಕರಿಗೂ ಹಿಂದುಗಳಿಗೂ ತಿಳಿದಿತ್ತು. ಈ ಜನಗಳ ತತ್ವಶಾಸ್ತ್ರ ಹಾಗೂ ಧರ್ಮಗಳು ಅವರ ಮೇಲೆ ನಿಸ್ವಾರ್ಥ ಸಿದ್ಧಾಂತವನ್ನು ಹೇರಿತು. ಲೇಖಕರ ಅಭಿಪ್ರಾಯದಲ್ಲಿ ಈ ಸಿದ್ಧಾಂತ ಸರಿಯಾದುದಲ್ಲ. ಸರಿಯಾದದ್ದು ಹೀಗಿದೆ: ಒಂದು ನಿಯಮ ಇದೆ: ಇದಕ್ಕೆ ಅನುಗುಣವಾಗಿ ಜೀವಿಗಳು ಒಂದರೊಡನೊಂದು ಹೋರಾಡುತ್ತವೆ: ಈ ಹೋರಾಟದಲ್ಲಿ ಅತ್ಯಂತ ಸತ್ವಶಾಲಿಯಾದವು ಉಳಿಯುತ್ತವೆ. ಲೇಖಕರು ಇದನ್ನು ವಿಶ್ವನಿಯಮ ಎಂದು ಕರೆಯುತ್ತಾರೆ. ಮನುಷ್ಯನೂ ಈ ನಿಯಮಕ್ಕೆ ಬದ್ಧನಾದವನು; ಅವನೀಗ ಏನಾಗಿದ್ದಾನೊ ಅದಕ್ಕೆ ಕಾರಣವಾಗಿರುವುದು ಈ ನಿಯಮ. ಅದಕ್ಕೆ ನಮ್ಮ ಕೃತಜ್ಞತೆ ಸಲ್ಲಬೇಕು. ಆದರೆ ಈ ನಿಯಮ ನೀತಿಶಾಸ್ತ್ರಕ್ಕೆ ವಿರುದ್ಧವಾದದ್ದು. ಇವೆರಡರ ಹೊಂದಾವಣೆ ಹೇಗೆ ಸಾಧ್ಯ? ಅದನ್ನು ಹೀಗೆ ಸಾಧಿಸಬಹುದು:

ಸಾಮಾಜಿಕ ಪ್ರಗತಿ ನಿಯಮ ಎನ್ನುವುದೊಂದಿದೆ: ಅದು ವಿಶ್ವನಿಯಮದ ಮುಂದುವರಿಕೆಯನ್ನು ತಡೆ ಹಿಡಿದು ಅದರ ಸ್ಥಾನದಲ್ಲಿ ಒಂದು ನೈತಿಕ ಪ್ರಕ್ರಿಯೆಯನ್ನು ಸ್ಥಾಪಿಸುತ್ತದೆ: ಇದು ಅತ್ಯಂತ ಸತ್ವಯುತರಾದವರ ಉಳಿವಿಕೆಗೆ ಸಹಾಯಕವಾಗುವ ಬದಲು ನೈತಿಕವಾಗಿ ಅತ್ಯುತ್ತಮರಾದವರ ಉಳಿವಿಕೆಗೆ ಸಹಾಯಕವಾಗುತ್ತದೆ. ಈ ನೈತಿಕ ಪ್ರಕ್ರಿಯೆ ಎಲ್ಲಿಂದ ಪ್ರವೇಶಿಸಿತು ಎನ್ನುವುದನ್ನು ಮಿ॥ ಹಕ್ಸ್ಲೆ ವಿವರಿಸುವುದಿಲ್ಲ; ಆದರೆ ಲೇಖನದ ಇಪ್ಪತ್ತನೆಯ ಅಡಿ ಟಿಪ್ಪಣಿಯಲ್ಲಿ ಈ ಪ್ರಕ್ರಿಯೆಗೆ ಇರುವ ತಳಹದಿ ಎಂಥದು ಎಂದು ಸೂಚಿಸುತ್ತಾರೆ. ಮೊದಲನೆಯದಾಗಿ ಮನುಷ್ಯರು ಪ್ರಾಣಿಗಳ ಹಾಗೆ ಸಮುದಾಯ ಜೀವನವನ್ನು ಬಯಸುವುದರಿಂದ ಸಮಾಜ ಘಾತುಕ ಗುಣಗಳು ತಮ್ಮಲ್ಲಿ ಬೆಳೆಯದಂತೆ ನೋಡಿಕೊಳ್ಳುತ್ತಾರೆ: ಎರಡನೆಯದಾಗಿ ಒಂದು ಸಮಾಜಕ್ಕೆ ಸೇರಿದ ವ್ಯಕ್ತಿಗಳು ಸಮಾಜ ಘಾತುಕ ಕ್ರಿಯೆಗಳನ್ನು ಬಲಪ್ರಯೋಗದಿಂದ ತಡೆಹಿಡಿಯುತ್ತಾರೆ. ತಾವು ಯಾವ ಗುಂಪಿನ ಸದಸ್ಯರೋ ಅದರ ಉಳಿವಿಕೆಗಾಗಿ ಜನ ತಮ್ಮ ರಾಗಾವೇಶಗಳನ್ನು ಹಿಡಿತದಲ್ಲಿಟ್ಟುಕೊಂಡಿರುವುದು ಒಂದು ಮತ್ತು ತಮ್ಮ ಗುಂಪಿನ ವ್ಯವಸ್ಥೆಯನ್ನು ಮುರಿದರೆ ತಮಗೆ ಶಿಕ್ಷೆಯಾಗುವುದು ಎಂಬ ಭೀತಿ ಇನ್ನೊಂದು — ಈ ಎರಡೂ ಹಕ್ಸ್ಲೆ ತೋರಿಸಬಯಸುವ ನೈತಿಕ ನಿಯಮಕ್ಕೆ ತಳಹದಿಯನ್ನು ಒದಗಿಸುತ್ತವೆ. . ಅಕೃತ್ರಿಮ ಸ್ವಭಾವದ ಮಿ॥ ಹಕ್ಸ್ಲೆಯವರಿಗೆ ಯಾವ ಮನುಷ್ಯ ಪೋಲಿಸ್ ಕಾಯಿದೆಗಳನ್ನು ಮುರಿಯುವುದಿಲ್ಲವೋ ಅವನೇ ನೈತಿಕ ನಿಯಮಪಾಲಕ ಎನ್ನುವ ಅಭಿಪ್ರಾಯ ಇದೆ! ಇಂಗ್ಲಿಷ್ ಸಮಾಜದ ಇವೊತ್ತಿನ ಗತಿ ನೋಡಿ: ಐರಿಷ್ ಜನತೆಯ ಸಮಸ್ಯೆ. ಇಂಗ್ಲಿಷ್ ಕೆಳವರ್ಗದ ದಾರಿದ್ರ್ಯ. ಸಂವೇದನಾ ಶೂನ್ಯರಾದ ಶ್ರೀಮಂತರ ವೈಭವ. ಅಫೀಮು ಪೆಂಡಗಳಲ್ಲಿ ಅದು ನಡೆಸುವ ವ್ಯಾಪಾರ. ಅದರ ಗುಪ್ತವ್ಯಸನಗಳು ಹಾಗೂ ಅದರ ಆಷಾಢಭೂತಿತನ — ಈ ಎಲ್ಲ ಹಕ್ಸ್ಲೆಯವರ

ನೈತಿಕ ನಿಯಮ ಎನ್ನುವುದಿದ್ದರೆ ಇರುತ್ತಿತ್ತೆ? ಒಂದು ಸಮಾಜವನ್ನು ಸುಸ್ಥಿತಿಯಲ್ಲಿಡಲು ಮನುಷ್ಯ ಕೆಲವು ಗುಣಗಳನ್ನು ಅಗತ್ಯವಾಗಿ ಹೊಂದಿರಬೇಕು: ಆದರೆ ಈ ಗುಣಗಳು ಸಾಮಾಜಿಕವಾಗಿ ಉಪಯುಕ್ತವಾಗಿದ್ದ ಮಾತ್ರಕ್ಕೆ ಅವು ನೈತಿಕವೂ ಹೌದು ಎನ್ನುವುದು ತಪ್ಪು: ಹಕ್ಸ್ಲೆಯವರು ಮಾಡಿರುವ ತಪ್ಪು ಇದು. ಯಾಕೆಂದರೆ ದರೋಡೆಕೋರರ ಗುಂಪಿನ ಸದಸ್ಯರು ಆ ಗುಂಪಿಗೆ ಉಪಯುಕ್ತರು. ಅಷ್ಟು. ಹೀಗೆಯೆ ನಮ್ಮ ಸಮಾಜದಲ್ಲೂ ಗಲ್ಲಿಗೆ ಹಾಕುವವರ. ಜೈಲಿಗೆ ಹಾಕುವವರ. ಸೈನಿಕರ. ಅಷಾಢ ಭೂತಿ ಪೂಜಾರಿಗಳ ಗುಣಕ್ಕೂ ಒಮ್ಮೊಮ್ಮೆ ಉಪಯುಕ್ತತೆ ಇದೆ.

ನೀತಿ ಎನ್ನುವುದು ನಿರಂತರವಾಗಿ ಬೆಳೆಯುತ್ತ. ವೃದ್ಧಿಸುತ್ತ ಹೋಗುವಂಥದು. ಆದ್ದರಿಂದಲೇ ಸಧ್ಯಸ್ಥಿತಿಯಲ್ಲಿರುವ ಸಾಮಾಜಿಕ ನಿಬಂಧನೆಗಳಿಗೆ ಅನುವರ್ತಿಯಾಗಿರುವುದೂ, ಅವುಗಳನ್ನು ನೇಣುಗಂಬ ಅಥವ ಖಡ್ಗದ ಸಹಾಯದಿಂದ ಎತ್ತಿಹಿಡಿಯುವುದೂ (ಇವು ನೀತಿಶಾಸ್ತ್ರದ ಸಾಧನಗಳು ಎಂದು ಮಿ॥ ಹಕ್ಸ್ಲೆ ಸೂಚಿಸುತ್ತಾರೆ) ನೀತಿಶಾಸ್ತ್ರದ ಉಳಿವಿಕೆಗಿಂತ ಅದರ ಅತಿಕ್ರಮಣಕ್ಕೆ ಸಹಾಯಕವಾದವು. ಸಧ್ಯಸ್ಥಿತಿಯಲ್ಲಿರುವ ವ್ಯವಸ್ಥಾನಿಯಮಗಳ ಭಂಗ ನೀತಿಶಾಸ್ತ್ರದ ನಿಯಮಗಳ ಭಂಗವಲ್ಲ: ಉದಾಹರಣೆಗೆ. ಯೇಸುಕ್ರಿಸ್ತ ಮತ್ತು ಅವನ ಅನುಯಾಯಿಗಳು ರೋಮನ್ ಪ್ರದೇಶವೊಂದರ ನಿಯಮಗಳನ್ನು ಉಲ್ಲಂಘಿಸಿದರು: ಹೀಗೆಯೇ. ಇಂದಿನ ಒಬ್ಬ ಮನುಷ್ಯ ಬಿಕ್ಷೆ ಕಾಯಿದೆಗಳಲ್ಲಿ ಪ್ರವೇಶಿಸದೆ ಇರುವುದು. ಸೈನ್ಯಕ್ಕೆ ಸೇರದೆ ಇರುವುದು. ಯುದ್ಧ ಸಿದ್ಧತೆಗಾಗಿ ಹಾಕುವ ಕಂದಾಯಗಳನ್ನು ತೆರದೆ ಇರುವುದು—ಇವೆಲ್ಲ ನಿಯಮೋಲ್ಲಂಘನೆಗಳೇ ಆದರೂ ಇವು ನೀತಿಶಾಸ್ತ್ರದ ನಿಯಮಗಳ ಉಲ್ಲಂಘನೆಯಲ್ಲ: ಅದಕ್ಕೆ ಬದಲಾಗಿ ಇವು ನೀತಿಶಾಸ್ತ್ರವೊಂದು ರೂಪುಗೊಳ್ಳಲು ಮಾಡಲೇಬೇಕಾದ ಕ್ರಿಯೆಗಳು.

ತನ್ನ ಸಹಜೀವಿಗಳನ್ನು ತಿನ್ನಬಾರದು ಎಂದು ತಿಳಿದಿರುವ ನರಭಕ್ಷಕ ಅದಕ್ಕೆ ಅನುಗುಣವಾಗಿ ನಡೆಯದಿದ್ದರೆ ಅವನು ತನ್ನ ಸಾಮಾಜಿಕ ವ್ಯವಸ್ಥೆಗೆ ಭಂಗತಂದ ಎಂದು ತಿಳಿಯಬೇಕು. ಸಾಮಾಜಿಕ ವ್ಯವಸ್ಥೆಯನ್ನು ಅತಿಕ್ರಮಿಸಿ ನಡೆಯುವ ಕ್ರಿಯೆ ಅನೈತಿಕವಾಗಬಹುದಾದರೂ, ನೀತಿಶಾಸ್ತ್ರವನ್ನು ವಿಸ್ತಾರಗೊಳಿಸಲು ನಡೆಯುವ ಪ್ರತಿಯೊಂದು ನೈಜ ನೈತಿಕ ಕ್ರಿಯೆಯೂ ಸಮಾಜ ವ್ಯವಸ್ಥೆಯ ನಿಯಮವನ್ನು ಅತಿಕ್ರಮಿಸಿಯೇ ನಡೆಯುತ್ತದೆ. ಆದ್ದರಿಂದ ಯಾವುದಾದರೂ ಒಂದು ಸಮಾಜದಲ್ಲಿ ಜನ ತಮ್ಮ ಖಾಸಗಿ ಯೋಗಕ್ಷೇಮವನ್ನು ಒತ್ತಟ್ಟಿಗಿಟ್ಟು ಗುಂಪಿನ ಉಳಿವಿಗಾಗಿ ಶ್ರಮಿಸಬೇಕು ಎನ್ನುವ ಕಾಯಿದೆ ಬಂದು. ಅವರು ಅದಕ್ಕೆ ಅನುಗುಣವಾಗಿ ನಡೆದುಕೊಂಡರೆ ಆ ಕಾಯಿದೆ ನೈತಿಕವಾದದ್ದಲ್ಲ: ಅದು ಸಾಮಾನ್ಯವಾಗಿ ಎಲ್ಲ ನೀತಿಶಾಸ್ತ್ರಕ್ಕೂ ವಿರುದ್ಧವಾದದ್ದು. ಹೌದು. ಕಾರಣ. ಇದು ಬಲಿಷ್ಠರಿಗಷ್ಟೆ ಉಳಿವು ಎಂದು ಹೇಳುವ ನಿಯಮದ ಗುಪ್ತ ರೂಪ, ಅಷ್ಟೆ: ವ್ಯಕ್ತಿಯಿಂದ ಗುಂಪಿಗೆ ವರ್ಗಾಯಿಸಲ್ಪಟ್ಟಿರುವ ಬಲಿಷ್ಠರಿಗಷ್ಟೆ

ಉಳಿವಿನ ಅದೃಷ್ಟ ಎನ್ನುವ ವಾದ. ಅದು ಹೋರಾಟಕ್ಕೆ ಮುಕ್ತಾಯವಲ್ಲ; ಬೀಸಿ ಹೊಡೆಯಲು ಹಿಂದೆ ಹೋಗಿರುವ ಕೈಯ ಚಮತ್ಕಾರ. ಅಷ್ಟೆ.

ಅಸ್ತಿತ್ವಕ್ಕಾಗಿ ಹೋರಾಟ ಹಾಗೂ ಬಲಿಷ್ಠರಿಗಷ್ಟೆ ಉಳಿಯುವ ಹಕ್ಕು ಎನ್ನುವ ನಿಯಮಗಳು ಜೀವನದ ಸಾರ್ವಕಾಲಿಕ ಸತ್ಯವಾದರೆ (ನಾವು ಮನುಷ್ಯನನ್ನೂ ಪ್ರಾಣಿ ವರ್ಗಕ್ಕೆ ಸೇರಿದವನು ಎಂದಾಗ ಹೀಗಾಗದೆ ಬೇರೆ ದಾರಿಯಿಲ್ಲ) ಸಾಮಾಜಿಕ ಪ್ರಗತಿಯ ಬಗ್ಗೆ ನಡೆಸುವ ಜಟಿಲ ವಾದಗಳು. ಅವುಗಳಿಂದ ನಮಗೆ ಅಗತ್ಯವಿದ್ದಾಗ ಹೇಗೋ ಎಲ್ಲಿಂದಲೋ ಮೂಡಿಬರುತ್ತಿದೆ ಎನ್ನುವ ನೈತಿಕ ನಿಯಮ—ಆ ವೈಜ್ಞಾನಿಕವಾದ ಶಾಶ್ವತ ಸತ್ಯಕ್ಕೆ ಭಂಗ ತರಲಾರದು.

ಮಿ॥ ಹಕ್ಸ್ಲೀಯವರು ಹೇಳುವಂತೆ ಸಾಮಾಜಿಕ ಪ್ರಗತಿ ಜನಗಳನ್ನು ಗುಂಪುಗೂಡಿಸಬಹುದು: ಆದರೆ ಹೋರಾಟ ಹಾಗೂ ಉಳಿವಿಕೆಯ ಪ್ರಶ್ನೆಗಳು ಕುಟುಂಬ, ಪಂಗಡ ಹಾಗೂ ರಾಷ್ಟ್ರಗಳಲ್ಲಿ ಬಂದೇ ಬರುತ್ತವೆ. ಆಗ ಇಲ್ಲಿ ನಡೆಯುವ ಹೋರಾಟ ಎರಡು ವ್ಯಕ್ತಿಗಳ ನಡುವೆ ನಡೆಯುವ ಹೋರಾಟಕ್ಕಿಂತ ಹೆಚ್ಚು ಅನೈತಿಕವೂ ಕ್ರೂರವೂ ಆಗಿರುತ್ತದೆ: ಇದನ್ನು ನಾವು ಇಂದಿನ ಜೀವನದಲ್ಲಿ ಕಾಣುತ್ತಿದ್ದೇವೆ. ನಾವು ಅಸಾಧ್ಯವಾದದ್ದನ್ನು ಸಾಧ್ಯ ಎಂದು ಪರಿಗಣಿಸಿದರೂ. ಇನ್ನೊಂದು ಸಾವಿರ ವರ್ಷಗಳಲ್ಲಿ ಕೇವಲ ಸಾಮಾಜಿಕ ಪ್ರಗತಿಯ ಮೂಲಕವೇ ಇಡೀ ಮಾನವ ಜನಾಂಗ ಒಂದಾಗಿ. ಒಂದು ದೇಶ, ಒಂದು ರಾಷ್ಟ್ರವಾದರೂ ವ್ಯಕ್ತಿಗಳು ಕೂಡಿ ಆಗಿರುವ ಈ ಘಟಕದಲ್ಲಿ ಕುಟುಂಬಗಳ, ಪಂಗಡಗಳ. ದೇಶಗಳ ಜನತೆಯ ನಡುವಣ ಹೋರಾಟ ಕಮ್ಮಿಯಾಗುವುದಿಲ್ಲ: ಅದು ಇನ್ನೊಂದು ಹೊಸ ರೂಪದಲ್ಲಿ ಪ್ರಾರಂಭವಾಗುತ್ತದೆ. ದೇಶಗಳ ರಾಷ್ಟ್ರಗಳ ನಡುವೆ ನಿಂತುಹೋಗಿರುವ ಕದನ ಮನುಷ್ಯ ಹಾಗೂ ಪ್ರಾಣಿವರ್ಗದ ಕದನದಲ್ಲಿ ಮುಂದುವರಿಯುತ್ತದೆ. ಈ ಹೋರಾಟ ನಿಂತು ಹೋಗುವುದು ಸಾಧ್ಯವೇ ಇಲ್ಲ. ಅಂದರೆ. ನಾವು ಒಪ್ಪಿಕೊಳ್ಳುವ ಕ್ರಿಶ್ಚಿಯನ್ ನೀತಿಶಾಸ್ತ್ರವನ್ನು ಈ ಕ್ರಿಯೆ ದೂರ ಇಟ್ಟಿರುತ್ತದೆ. ಎಲ್ಲೆಲ್ಲಿ ವ್ಯಕ್ತಿಗಳ. ಕುಟುಂಬಗಳ. ಜನಾಂಗಗಳ ಮತ್ತು ದೇಶಗಳ ಒಕ್ಕೂಟ ಇರುತ್ತದೊ ಅಲ್ಲೆಲ್ಲ ಇಂಥ ಹೋರಾಟ ಇದ್ದೇ ಇರುತ್ತದೆ. ಒಂದು ಕುಟುಂಬದ ಜನ ಅವರವರಲ್ಲಿಯೇ ಹೊಡೆದಾಡುಕೊಳ್ಳುವುದರ ಜೊತೆಗೆ ಹೊರಗಿನವರೊಡನೆಯೂ ಹೊಡೆದಾಡುತ್ತಾರೆ – ಬಹುಶಃ ಹೆಚ್ಚಿನ ಪ್ರಮಾಣದಲ್ಲಿ ಹಾಗೂ ಹೆಚ್ಚಿನ ದ್ವೇಷದಲ್ಲಿ. ರಾಜ್ಯಗಳಲ್ಲಿ ಆಗುವುದೂ ಹೀಗೆ. ಒಂದು ರಾಜ್ಯದಲ್ಲಿನ ಜನ ಹೊರರಾಜ್ಯದಲ್ಲಿದ್ದ ಜನಗಳ ಜೊತೆ ಹೇಗೆ ಹೋರಾಡುತ್ತಿದ್ದರೋ ಹಾಗೆ ಹೋರಾಡುತ್ತಾರೆ – ಬಹುಶಃ ಇನ್ನೊಂದು ರೂಪದಲ್ಲಿ. ಒಂದು ಪ್ರಸಂಗದಲ್ಲಿ ಬಾಣ ಹಾಗೂ ಕತ್ತಿಗಳು ಕೊಲೆ ನಡೆಸಿದರೆ, ಇನ್ನೊಂದು ಪ್ರಸಂಗದಲ್ಲಿ ಹಸಿವು ನಡೆಸುತ್ತದೆ. ಕುಟುಂಬ ಹಾಗೂ ರಾಜ್ಯಗಳಲ್ಲಿ ದುರ್ಬಲರು ಉಳಿದುಕೊಂಡರೆ, ಅವರು ಉಳಿದುಕೊಂಡದ್ದು ಸಾಮಾಜಿಕ ಸಂಘಟನೆಯ ಕಾರಣದಿಂದ ಅಲ್ಲ; ಅವರು ಉಳಿದುಕೊಂಡದ್ದು ಕುಟುಂಬ ಹಾಗೂ ರಾಜ್ಯಗಳಲ್ಲಿ ಸಂಘಟಿತವಾಗಿರುವ ಜನರ

ಹೃದಯದಲ್ಲಿನ ಪ್ರೀತಿ ಹಾಗೂ ಆತ್ಮತ್ಯಾಗಗಳಿಂದ. ಒಂದು ಕುಟುಂಬದ ಹೊರಗೆ ಇಬ್ಬರು ಮಕ್ಕಳಲ್ಲಿ ಶಕ್ತನಾದವನು ಒಬ್ಬನೇ ಉಳಿದು ಬದುಕಬಹುದು; ಆದರೆ ಒಳ್ಳೆಯ ತಾಯಿ ಇರುವ ಕುಟುಂಬದಲ್ಲಿ ಇಬ್ಬರೂ ಉಳಿದು ಬದುಕುತ್ತಾರೆ. ಈ ಉಳಿವಿಕೆ ಬರುವುದು ಕೌಟುಂಬಿಕ ಸಂಘಟನೆಯಿಂದ ಅಲ್ಲ. ತಾಯಿಯ ಪ್ರೀತಿ ಹಾಗೂ ಆತ್ಮ ತ್ಯಾಗಗಳಿಂದ. ಸಾಮಾಜಿಕ ಪ್ರಕ್ರಿಯೆಯಿಂದ ಪ್ರೀತಿಯೂ ಬರಲಾರದು; ಆತ್ಮ ತ್ಯಾಗದ ಗುಣವೂ ಬರಲಾರದು.

ಸಾಮಾಜಿಕ ಪ್ರಕ್ರಿಯೆಯಿಂದ ನೀತಿಶಾಸ್ತ್ರ ಬರುತ್ತದೆ ಅನ್ನುವುದು ಒಲೆಗಳನ್ನು ಮಾಡುವುದರಿಂದ ಶಾಖ ಬರುತ್ತವೆ ಎಂಬ ಹೇಳಿಕೆಯಷ್ಟೆ ಸತ್ಯ.

ಶಾಖ ಬರುವುದು ಸೂರ್ಯನಿಂದ. ಒಲೆಗಳಲ್ಲಿ ಶಾಖ ಹುಟ್ಟುವುದು ಸೌದೆಯಿಂದ (ಇದೂ ಸೂರ್ಯನ ಕೆಲಸದ ಫಲ). ಇದೇ ರೀತಿಯಲ್ಲಿ ನೀತಿಶಾಸ್ತ್ರ ಧರ್ಮದಿಂದ ಹುಟ್ಟಿಬರುವಂಥದು. ಯಾವಾಗ ಧಾರ್ಮಿಕ ಪ್ರಭಾವದ ಫಲ – ಇದೇ ನೀತಿ– ವಿಶೇಷ ರೀತಿಯ ಸಾಮಾಜಿಕ ಜೀವನದಲ್ಲಿ ಕಾಣಿಸಿಕೊಳ್ಳುವುದೋ ಆಗ ನೀತಿಶಾಸ್ತ್ರ ಮೂಡುತ್ತದೆ.

ಒಲೆಗಳಲ್ಲಿ ಉರಿ ಹಾಕಿದರೆ ಅವು ಬೆಚ್ಚಗಾಗುತ್ತವೆ; ಬೆಚ್ಚನೆಯ ವಾತಾವರಣವನ್ನು ಅವು ಉಂಟುಮಾಡುತ್ತವೆ. ಉರಿ ಹಾಕದಿದ್ದರೆ ಅವು ತಣ್ಣಗಿರುತ್ತವೆ; ಶೀತಲತೆಯನ್ನು ಕಡಿಮೆ ಮಾಡುವುದಿಲ್ಲ. ವಿವಿಧ ರೂಪಗಳ ಸಮಾಜದಲ್ಲಿ ಒಂದು ನೀತಿಶಾಸ್ತ್ರ ಇರಬಹುದು, ಅದು ನೈತಿಕ ಪ್ರಭಾವವನ್ನು ಬೀರಬಹುದು; ಅಥವಾ ಅದರಲ್ಲಿ ನೀತಿಶಾಸ್ತ್ರ ಇಲ್ಲದೆ ಇರಬಹುದು, ಹಾಗಾಗಿ ಅದು ಸಮಾಜದ ಮೇಲೆ ನೈತಿಕ ಪ್ರಭಾವವನ್ನು ಬೀರದೆ ಇರಬಹುದು.

ಕ್ರಿಶ್ಚಿಯನ್ ನೀತಿಶಾಸ್ತ್ರವನ್ನು ಪೇಗನ್ ಅಥವ ಸಾಮಾಜಿಕ ಜೀವನ ದೃಷ್ಟಿಯ ನೆಲೆಗಟ್ಟಿನ ಮೇಲೆ ನಿಲ್ಲಿಸುವುದಕ್ಕೆ ಆಗುವುದಿಲ್ಲ. ಕ್ರಿಶ್ಚಿಯನ್ ಅಲ್ಲದ ವಿಜ್ಞಾನ ದಿಂದಾಗಲಿ, ತತ್ವಶಾಸ್ತ್ರದಿಂದಾಗಲಿ ಅವಕ್ಕೆ ರೂಪಕೊಡಲು ಆಗುವುದಿಲ್ಲ. ಅವುಗಳೊ ಡನೆ ಕ್ರಿಶ್ಚಿಯನ್ ನೀತಿಶಾಸ್ತ್ರವನ್ನು ಹೊಂದಾಣಿಕೆ ಮಾಡುವುದೂ ಸಾಧ್ಯವಿಲ್ಲ.

ಸುಸಂಗತವೂ ವಿಚಾರಪ್ರಿಯವೂ ಆದ ಎಲ್ಲ ವೈಜ್ಞಾನಿಕ ಹಾಗೂ ತತ್ವಶಾಸ್ತ್ರ ಪದ್ಧತಿಗಳು ಈ ವಿಷಯವನ್ನು ತಿಳಿದುಕೊಂಡಿರುವುದು ಈ ರೀತಿಯಲ್ಲಿ: "ನಮ್ಮ ಹೇಳಿಕೆಗಳಿಗೂ ನೀತಿಶಾಸ್ತ್ರಕ್ಕೂ ಹೊಂದಾವಣಿಕೆಯಿಲ್ಲದಿದ್ದರೆ, ನೀತಿಶಾಸ್ತ್ರಕ್ಕೆ ನಷ್ಟ" ಎಂದು ಹೇಳಿ ಅವರ ತನಿಖೆಯನ್ನು ಮುಂದುವರಿಸಿದ್ದಾರೆ.

ಧರ್ಮದ ಆಧಾರವಿಲ್ಲದ ನೀತಿವಿಷಯಕ ಪ್ರಬಂಧಗಳೂ ಮತ್ತು ಲೌಕಿಕ ಪ್ರಶ್ನೋತ್ತರ ನೀತಿಪಾಠಗಳೂ ಇವೆ. ಜನಕ್ಕೆ ಇವನ್ನು ಕಲಿಸಿಯೂ ಕಲಿಸುತ್ತಾರೆ.

ಇವೇ ಜನತೆಯ ಮಾರ್ಗದರ್ಶಿಗಳು ಎಂದೂ ಕೆಲವರು ತಿಳಿದಿದ್ದಾರೆ. ಆದರೆ ಜನ ನಿಜವಾಗಿ ಮಾರ್ಗದರ್ಶನ ಪಡೆಯುವುದು ಈ ಪ್ರಬಂಧ ಹಾಗೂ ಪ್ರಶ್ನೋತ್ತರ ಪಾಠಗಳಿಂದಲ್ಲ. ಅವರು ಮಾರ್ಗದರ್ಶನ ಪಡೆಯುವುದು ಯಾವಾಗಲೂ ತಮ್ಮ ಸ್ವಾಮ್ಯದಲ್ಲಿದ್ದ ಈಗಲೂ ಇರುವ ಧರ್ಮದಿಂದ. ಈ ನೀತಿ ವಿಷಯಕ ಪ್ರಬಂಧಗಳು ಹಾಗೂ ಪ್ರಶ್ನೋತ್ತರ ಪಾಠಗಳು ಧರ್ಮದಿಂದ ಸಹಜವಾಗಿ ಬರುವ ಬೋಧನೆಯ ಖೋಟಾ ರೂಪಗಳು.

ಸಂಗೀತ ಜ್ಞಾನವಿಲ್ಲದ ಮನುಷ್ಯನೊಬ್ಬ ನಿರ್ದೇಶಕನ ಸ್ಥಾನವನ್ನು ಆಕ್ರಮಿಸಿ ಕೊಂಡು ಪರಿಣತ ಮೇಳಗಾಯಕರ ಮುಂದೆ ಹುಚ್ಚಾಪಟ್ಟೆ ಕೈಬೀಸಿ ಸಂಗೀತ ನಿರ್ವಹಣೆ ಮಾಡ ಹೊರಟರೆ ಏನಾಗುತ್ತದೋ ಅದೇ ಧರ್ಮದ ಆಧಾರವಿಲ್ಲದ ಲೌಕಿಕ ನೀತಿಶಾಸ್ತ್ರ ನಿಯಮಗಳಿಂದ ಆಗುವುದು. ಗಾಯಕರು ಬೇರೆ ನಿರ್ದೇಶಕರಿಂದ ಕಲಿತ ಅನುಭವದ ಮೇಲೆ ಸಂಗೀತವೇನೊ ಸ್ವಲ್ಪಕಾಲ ಮುಂದುವರಿಯುತ್ತದೆ. ಆದರೆ ಸಂಗೀತ ಜ್ಞಾನವಿಲ್ಲದ ಈ ಮನುಷ್ಯನ ಕೈ ಬೀಸುವಿಕೆಯಿಂದ ಏನೂ ಪ್ರಯೋಜನವಾಗುವುದಿಲ್ಲ. ಅಷ್ಟೆ ಅಲ್ಲ. ಸ್ವಲ್ಪ ಹೊತ್ತಿನಲ್ಲೇ ಇದರಿಂದ ಗಾಯಕರು ತಬ್ಬಿಬ್ಬಾಗಿ, ಮೇಳಗಾನ ಅವ್ಯವಸ್ಥಿತವಾಗುತ್ತದೆ. ಧರ್ಮದ ಆಧಾರವಿಲ್ಲದ ನೀತಿಶಾಸ್ತ್ರವನ್ನು ಕಲಿಸುವ ಪ್ರಯತ್ನ ಜನಗಳ ಮನಸ್ಸಿನಲ್ಲಿ ಇಂಥದೇ ಗೊಂದಲವನ್ನು ಉಂಟುಮಾಡುತ್ತದೆ. ಕ್ರೈಸ್ತ ಜನಾಂಗ ಈಗಾಗಲೇ ಸ್ವಲ್ಪ ರೂಢಿಸಿಕೊಂಡಿರುವ, ರೂಢಿಸಿಕೊಳ್ಳುತ್ತಿರುವ ಅತ್ಯುನ್ನತ ಧರ್ಮ ಇಂಥವರಿಂದ ಕೇವಲ ಗೊಂದಲಕ್ಕೆ ಒಳಗಾಗುತ್ತದೆ.

ನೀತಿಬೋಧೆ ಮೂಢನಂಬಿಕೆಗಳಿಂದ ಮುಕ್ತವಾಗಿರುವುದು ಅಪೇಕ್ಷಣೀಯ. ಆದರೆ ನೀತಿಬೋಧೆ ಮನುಷ್ಯ ವಿಶ್ವದೊಡನೆ ಅಥವ ದೇವರೊಡನೆ ಕಲ್ಪಿಸಿಕೊಳ್ಳುವ ಸಂಬಂಧದಿಂದ ಬರುವ ಪರಿಣಾಮ. ಈ ಸಂಬಂಧ ಅಭಿವ್ಯಕ್ತಗೊಳ್ಳುವ ರೀತಿ ನಮಗೆ ಮೂಢ ಎಂದು ಎನ್ನಿಸಿದರೆ ಈ ಸಂಬಂಧವನ್ನು ನಾವು ಇನ್ನೂ ಸ್ಪಷ್ಟವೂ ಖಚಿತವೂ ಯುಕ್ತವೂ ಆದ ಕ್ರಮದಲ್ಲಿ ವ್ಯಕ್ತಪಡಿಸುವ ಪ್ರಯತ್ನ ಮಾಡಬೇಕು. ಅಥವಾ ಈಗ ಅಪೂರ್ಣ ಅನ್ನಿಸಿದರೆ ಹಳೆಯ ಸಂಬಂಧವನ್ನು ಕಿತ್ತೊಗೆದು ಅದರ ಬದಲು ಇನ್ನೂ ಉನ್ನತವೂ ಸ್ಪಷ್ಟವೂ ಯುಕ್ತವೂ ಆದ ಸಂಬಂಧವನ್ನು ಕಲ್ಪಿಸಬೇಕು. ಏನೇ ಆದರೂ. ಯಾವ ಪ್ರಸಂಗದಲ್ಲೂ ನಾವು ಲೌಕಿಕವೂ ಧಾರ್ಮಿಕವಲ್ಲದ್ದೂ ಕುತರ್ಕ ಅಥವಾ ಇನ್ನೇತರ ಮೇಲೋ ನಿಲ್ಲಿಸಿದ ನೀತಿಶಾಸ್ತ್ರವನ್ನು ಒಪ್ಪಕೂಡದು.

ಮಕ್ಕಳು ಯಾವುದೊ ಹೂವನ್ನು ನೋಡಿ ಆನಂದ ಪಡುತ್ತಾರೆ; ಅದನ್ನು ಸ್ಥಳಾಂತರಿಸುವ ಬಯಕೆ ಅವರಿಗೆ ಬರುತ್ತದೆ; ಆದರೆ ಅದರ ಬೇರು ಅವಕ್ಕೆ ಅಷ್ಟು ಚೆಂದ ಕಾಣಿಸುವುದಿಲ್ಲ; ಅವರ ದೃಷ್ಟಿಯಲ್ಲಿ ಬೇರು ಅಸುಂದರ ಹಾಗೂ ಅನಾವಶ್ಯಕ. ಹೀಗೆ ಕಂಡಾಗ ಅವು ಹೂವನ್ನು ಬೇರಿನಿಂದ ಕಿತ್ತು ಬರಿಯ ನೆಲಕ್ಕೆ ಅಂಟಿಸುತ್ತಾರೆ.

ಧರ್ಮಕ್ಕೆ ಸಂಬಂಧವಿಲ್ಲದ ನೀತಿಶಾಸ್ತ್ರವನ್ನು ಹುಟ್ಟು ಹಾಕುವ ಪ್ರಯತ್ನಗಳೂ ಇಂಥವೆ. ಬೇರುಗಳಿಲ್ಲದೆ ನಿಜವಾದ ಹೂಗಳು ಹೇಗೆ ಇರುವುದು ಸಾಧ್ಯವಿಲ್ಲವೋ ಅದೇ ರೀತಿಯಲ್ಲಿ ಧರ್ಮ ಎನ್ನುವುದು ಇಲ್ಲದೆ ಸತ್ಯವೂ ಪ್ರಾಮಾಣಿಕವೂ ಆದ ನೀತಿಶಾಸ್ತ್ರ ಇರುವುದು ಸಾಧ್ಯವಿಲ್ಲ.

ಆದ್ದರಿಂದ ನಿಮ್ಮ ಎರಡು ಪ್ರಶ್ನೆಗಳಿಗೆ ಉತ್ತರವಾಗಿ ಹೀಗೆ ಹೇಳುತ್ತೇನೆ: 'ಧರ್ಮ ಎನ್ನುವುದು ಮನುಷ್ಯ ತನ್ನ ಪ್ರತ್ಯೇಕ ವ್ಯಕ್ತಿತ್ವ ಹಾಗೂ ಅನಂತ ವಿಶ್ವದೊಡನೆ ಅಥವ ಅದರ ಮೂಲದೊಡನೆ ನಿರ್ಮಿಸಿಕೊಂಡ ಒಂದು ವಿಶಿಷ್ಟ ಸಂಬಂಧ. ಜೀವನಕ್ಕೆ ಸದಾಕಾಲವೂ ಮಾರ್ಗದರ್ಶಿಯಾಗಿರುವ ನೀತಿಶಾಸ್ತ್ರ ಈ ಸಂಬಂಧದ ಪರಿಣಾಮ'.

[ಡಿಸೆಂಬರ್ 28, 1814]

# ವಿಚಾರ ಮತ್ತು ಧರ್ಮ

ನೀವು ಕೇಳುವುದು:

(1) ಬೌದ್ಧಿಕವಾಗಿ ಅಂತಹ ಪ್ರತಿಭಾಶಾಲಿಗಳಲ್ಲದವರು ಆಂತರಿಕ ಜೀವನದ ಬಗ್ಗೆ ತಾವು ಕಂಡುಕೊಂಡ ಸತ್ಯಗಳನ್ನು ವ್ಯಕ್ತಪಡಿಸಬಾರದೆ?

(2) ನಮ್ಮ ಆಂತರಿಕ ಜೀವನವನ್ನು ಪೂರ್ಣವಾಗಿ ಹಾಗೂ ಸ್ಪಷ್ಟವಾಗಿ ಅರ್ಥವಾಡಿ ಕೊಳ್ಳಲು ಪ್ರಯತ್ನಿಸುವುದು ಉಪಯುಕ್ತವಾದದ್ದೆ?

(3) ಒಳತೋಟಿಯ ಸಮಯದಲ್ಲಿ ಅಥವಾ ಸಂದೇಹಗಳು ಬಂದ ಸಮಯದಲ್ಲಿ ನಮ್ಮನ್ನು ಪ್ರೇರಿಸುತ್ತಿರುವುದು ಅಂತಃಸಾಕ್ಷಿಯೆ ಅಥವ ನಮ್ಮ ದುರ್ಬಲತೆಯ ಲಾಭ ಪಡೆವ ಬುದ್ಧಿಯೆ ಎಂದು ತೀರ್ಮಾನಿಸುವುದು ಹೇಗೆ? (ಸಂಕ್ಷಿಪ್ತತೆಯ ದೃಷ್ಟಿಯಿಂದ ಈ ಮೂರನೆಯ ಪ್ರಶ್ನೆಯನ್ನು ನನ್ನ ಮಾತುಗಳಲ್ಲಿ ಹೇಳಿದ್ದೇನೆ; ಇದರಿಂದ ನಿಮ್ಮ ಅರ್ಥಕ್ಕೇನು ಬಾಧಕವಾಗಿಲ್ಲ ಎಂದು ನನ್ನ ಭಾವನೆ).

ಈ ಮೂರು ಪ್ರಶ್ನೆಗಳೂ ಎರಡನೆಯ ಪ್ರಶ್ನೆಯಲ್ಲಿ ಅಡಕವಾಗಿದೆ ಎಂದು ನನಗೆ ತೋರುತ್ತದೆ. ನಮ್ಮ ಆಂತರಿಕ ಜೀವನ ನಮಗೆ ಪೂರ್ಣವಾಗಿ ಹಾಗೂ ಸ್ಪಷ್ಟವಾಗಿ ಅರ್ಥವಾಗದಿದ್ದರೆ, ನಾವು ಕಂಡುಕೊಂಡ ಸತ್ಯಗಳನ್ನು ವ್ಯಕ್ತಪಡಿಸಲಾರೆವು; ಹಾಗೆ ಸಂದೇಹದಲ್ಲಿದ್ದಾಗ ಯಾವುದು ಅಂತಃಸಾಕ್ಷಿ ಯಾವುದು ಮಿಥ್ಯಾತರ್ಕ ಎನ್ನುವುದನ್ನು ನಿರ್ಣಯಿಸಲು ನಮಗೆ ಯಾವ ಆಧಾರವೂ ಇರುವುದಿಲ್ಲ. ಬೌದ್ಧಿಕವಾಗಿ ಸಾಧ್ಯ ವಿರುವಷ್ಟು ಸ್ಪಷ್ಟತೆಯನ್ನು ಪಡೆದುಕೊಳ್ಳುವುದು ಸರಿಯಾದರೆ (ಈ ಶಕ್ತಿ ಚಿಕ್ಕದಿರ ಬಹುದು, ದೊಡ್ಡದಿರಬಹುದು) ನಾವು ಕಂಡುಕೊಂಡ ಸತ್ಯಗಳನ್ನು ವ್ಯಕ್ತಪಡಿಸುವುದೂ ಸರಿ; ಸುಸ್ಪಷ್ಟವಾಗಿ ವಿವರಿಸಿದ ಹಾಗೂ ಮಾತಿನಲ್ಲಿ ವ್ಯಕ್ತವಾದ ಈ ಸತ್ಯ ನಾವು ಸಂದೇಹದಲ್ಲಿದ್ದಾಗಲೋ ಅಥವ ಒಳತೋಟಿಯಲ್ಲಿದ್ದಾಗಲೋ ಮಾರ್ಗದರ್ಶನ ಮಾಡ ಬೇಕು. ಆದ್ದರಿಂದ ನಿಮ್ಮ ಮೂಲ ಪ್ರಶ್ನೆಗೆ ನನ್ನ ಉತ್ತರ ಅಸ್ತ್ಯರ್ಥದಲ್ಲಿದೆ: ಯಾವುದೊ ಒಂದು ಉದ್ದೇಶ ಸಾಧನೆಗಾಗಿ ಮನುಷ್ಯ ಇಲ್ಲಿಗೆ ಕಳುಹಿಸಲ್ಪಟ್ಟಿದ್ದಾನೆ. ಅದನ್ನು ಸಾಧಿಸುವುದಕ್ಕೆ ಮತ್ತು ತನ್ನ ಯೋಗಕ್ಷೇಮ ಸಿದ್ಧಿಗೆ (ಈ ಎರಡೂ ಯಾವಾಗಲೂ ಹೊಂದಾವಣೆಯಲ್ಲಿ ಇರುವಂಥವು) ಅವನು ತನ್ನೆಲ್ಲ ಬುದ್ಧಿಶಕ್ತಿಯನ್ನೂ ವಿನಿಯೋಗಿಸಿ ತಾನು ನಿಂತಿರುವ ಧರ್ಮದ ಆಧಾರಗಳನ್ನು ಸ್ಪಷ್ಟಪಡಿಸಿಕೊಳ್ಳಬೇಕು. ಅಂದರೆ, ತನ್ನ ಜೀವನದ ಗುರಿ ಏನು ಎಂದು ಅವನು ಸ್ಪಷ್ಟವಾಗಿ ತಿಳಿಯಬೇಕು.

ಒಂದು ಘನ ಅಡಿಗೆ ಇಷ್ಟು ಎಂದು ಹಣ ಪಡೆಯುವ ತೋಡು ಕೆಲಸದ ಅವಿದ್ಯಾವಂತ ಕೂಲಿಯಾಳುಗಳಲ್ಲಿ "ಗಣಿತದ ಲೆಕ್ಕಾಚಾರ ಮೋಸ ಮಾಡುತ್ತದೆ, ಅದನ್ನು

ನಂಬಬಾರದು" ಎನ್ನುವ ದೃಢ ಅಭಿಪ್ರಾಯ ಇದೆ. ಗಣಿತ ಶಾಸ್ತ್ರ ಅವರಿಗೆ ಗೊತ್ತಿಲ್ಲದೆ ಇರುವುದರಿಂದಲೋ ಅಗೆದದ್ದು ಎಷ್ಟು ಎಂದು ಲೆಕ್ಕ ಮಾಡುವವರು ಮಾಡುವ ಮೋಸ ದಿಂದಲೋ ಈ ಅವಿದ್ಯಾವಂತ ಜನ ಗಣಿತಶಾಸ್ತ್ರ ಪರಿಮಾಣಗಳ ಬೆಲೆ ಕಟ್ಟುವ ರೀತಿಯ ಬಗ್ಗೆಯೇ ಒಂದು ಅಪನಂಬಿಕೆ ಬೆಳೆಸಿಕೊಂಡಿದ್ದಾರೆ. ಅವರಲ್ಲಿ ಕೆಲವರಿಗಂತೂ ಇದು ಯಾವ ಸಾಕ್ಷಿಯೂ ಇಲ್ಲದೆ ಸಾಧಿತವಾಗಿರುವ ನಿರ್ವಿವಾದವಾದ ಸತ್ಯ. ಇದೇ ರೀತಿಯ ಅಭಿಪ್ರಾಯ ಅ–ಧಾರ್ಮಿಕ ಜನರಲ್ಲಿ ಇದೆ: "ಬುದ್ಧಿ ಧಾರ್ಮಿಕ ಪ್ರಶ್ನೆಗಳನ್ನು ಬಿಡಿಸಲಾರದು, ಈ ಪ್ರಶ್ನೆಗಳನ್ನು ಬಿಡಿಸಲು ಬುದ್ಧಿಯನ್ನು ಬಳಸುವುದೆ ಎಲ್ಲ ತಪ್ಪುಗಳ ಮೂಲ; ಧಾರ್ಮಿಕ ಪ್ರಶ್ನೆಗಳನ್ನು ಬುದ್ಧಿಯಿಂದ ಬಿಡಿಸ ಹೊರಡುವುದು ದುರಹಂಕಾರ"– ಈ ಅಭಿಪ್ರಾಯ ಹೊಂದಿರುವವರನ್ನು ನಾನು ಕ್ಷೇಮವಾಗಿ ಅ–ಧಾರ್ಮಿಕರು ಎನ್ನ ಬಹುದು.

"ಪೂರ್ಣ ಹಾಗೂ ಸ್ಪಷ್ಟವಾದ ತಿಳುವಳಿಕೆಗೆ ಪ್ರಯತ್ನಪಡಬೇಕೆ?" ಎನ್ನುವ ಪ್ರಶ್ನೆ ಇದರ ಅಗತ್ಯದ ಬಗ್ಗೆ ನಿಮಗಿರುವ ಸಂದೇಹವನ್ನು ವ್ಯಕ್ತಪಡಿಸುತ್ತದೆ; ಅದಕ್ಕೆಂದೆ ನಾನು ಈ ವಿಷಯವನ್ನು ಪ್ರಸ್ತಾಪಮಾಡಿದ್ದು. ಧಾರ್ಮಿಕ ಪ್ರಶ್ನೆಗಳ ಪರಿಹಾರಕ್ಕೆ ಬುದ್ಧಿಯನ್ನು ಬಳಸಲು ಆಗುವುದಿಲ್ಲ ಎನ್ನುವ ಅಭಿಪ್ರಾಯದಿಂದಲೆ ಇಂಥ ಅನುಮಾನ ಗಳು ಹುಟ್ಟುವುದು. ಗಣಿತಶಾಸ್ತ್ರ ಲೆಕ್ಕಾಚಾರದ ಪ್ರಶ್ನೆಗಳನ್ನು ನಿರ್ಧರಿಸಲಾರದು ಎನ್ನುವ ಅಭಿಪ್ರಾಯದಷ್ಟೆ ಈ ಅಭಿಪ್ರಾಯವೂ ವಿಚಿತ್ರವಾದದ್ದು, ಪೂರ್ಣ ತಪ್ಪಾದದ್ದು.

ತನ್ನನ್ನು ತಾನೆ ತಿಳಿದುಕೊಳ್ಳಲು ಮತ್ತು ವಿಶ್ವದೊಡನೆ ತನ್ನ ಸಂಬಂಧ ಎಂಥದು ಎಂದು ತಿಳಿದುಕೊಳ್ಳಲು ಮನುಷ್ಯನಿಗೆ ದೇವರು ಒಂದೇ ಒಂದು ಸಾಧನವನ್ನು ಕೊಟ್ಟಿದ್ದಾನೆ; ಅವನಿಗೆ ಅದನ್ನು ಬಿಟ್ಟು ಬೇರೆ ಯಾವ ಸಾಧನಗಳೂ ಇಲ್ಲ. ಅದು: ಬುದ್ಧಿ. ಈಗ ಇದ್ದಕ್ಕಿದ್ದ ಹಾಗೆ ಮನೆ, ಕುಟುಂಬ, ವ್ಯಾಪಾರ, ರಾಜಕೀಯ, ವೈಜ್ಞಾನಿಕ ಅಥವ ಕಲಾತ್ಮಕ ಸಮಸ್ಯೆಗಳಿಗೆ ಪರಿಹಾರ ಹುಡುಕುವಾಗ ಬುದ್ಧಿಯನ್ನು ಬಳಸಬಹುದು; ಆದರೆ ಮುಖ್ಯವಾಗಿ ಯಾವ ದೃಷ್ಟಿಯಿಂದ ಅವನಿಗೆ ಅದು ದತ್ತವಾಗಿ ಬಂತೋ ಅದನ್ನು ಸ್ಪಷ್ಟಪಡಿಸಿಕೊಳ್ಳಲು ಬಳಸುವಂತಿಲ್ಲ ಎಂದು ಜನ ಹೇಳುತ್ತಿದ್ದಾರೆ. ಅಂದರೆ ಹೀಗಾಯಿತು: ತುಂಬ ಮುಖ್ಯವಾದ ಕೆಲವು ಸತ್ಯಗಳಿವೆ: ಮನುಷ್ಯನ ಜೀವನ ನಿಂತಿರುವುದೇ ಈ ಸತ್ಯಗಳ ಮೇಲೆ; ಆದರೆ ಅವನ್ನು ತಿಳಿಯಲು ಅವನು ಬುದ್ಧಿಯನ್ನು ಬಳಸಕೂಡದು. ಬುದ್ಧಿಯ ಸಹಾಯವಿಲ್ಲದೆ ಮನುಷ್ಯ ಏನನ್ನೂ ತಿಳಿಯಲಾರದಿದ್ದರೂ ಈ ಸತ್ಯಗಳನ್ನು ಮಾತ್ರ ಅವನು ಬುದ್ಧಿಯನ್ನು ಒತ್ತಟ್ಟಿಗೆ ಇಟ್ಟು ತಿಳಿಯಬೇಕು! ಜನ "ಸ್ಫೂರ್ತಿಯಿಂದ, ಶ್ರದ್ಧೆಯಿಂದ ಗ್ರಹಿಸಿ" ಎನ್ನುತ್ತಾರೆ; ಆದರೆ ಬುದ್ಧಿಯನ್ನು ಒತ್ತಟ್ಟಿಗೆ ಇಟ್ಟರೆ ನಂಬುವು ದಾದರೂ ಹೇಗೆ? ಬುದ್ಧಿ "ಇದನ್ನು ನಂಬಬೇಡ; ಅದನ್ನು ನಂಬು" ಎಂದು ಹೇಳಿದಾಗ ಮಾತ್ರ ಒಬ್ಬ "ನಾನು ಇದನ್ನು ನಂಬುವುದಿಲ್ಲ; ಅದನ್ನು ನಂಬುತ್ತೇನೆ" ಎಂದು ಹೇಳಬಹುದು. ನೆಲಮಾಳಿಗೆಯಲ್ಲಿರುವ ಸಮಾಧಿಗಳ ಸುರಂಗದಲ್ಲಿ ಕತ್ತಲಿರು

ತ್ತವೆ; ದಾರಿ ಕಾಣುವುದಕ್ಕೆ ಮನುಷ್ಯ ದೀಪ ಹಿಡಿದು ಹೋಗುತ್ತಾನೆ. ಕತ್ತಲಿಂದ ಹೊರಬೀಳುವುದಕ್ಕೆ ಈ ದೀಪವನ್ನು ಆರಿಸಿ ಅವನು ಬೇರೇನನ್ನೋ ನಂಬುವುದು ಸರಿ ಎಂದು ಹೇಳುವುದೂ ಮನುಷ್ಯ ಬುದ್ಧಿಯನ್ನು ನಂಬಿ ನಡೆಯಬಾರದು ಎನ್ನುವುದೂ ಒಂದೇ.

ಎಲ್ಲ ಜನರೂ ಅಂತಹ ಬುದ್ಧಿಶಾಲಿಗಳಲ್ಲ; ಅಲ್ಲದೆ. ಎಲ್ಲರಿಗೂ ತಮ್ಮ ಭಾವನೆಗಳನ್ನು ವ್ಯಕ್ತಪಡಿಸುವ ಶಕ್ತಿಯೂ ಇರುವುದಿಲ್ಲ. ಇಂಥವರು ಧರ್ಮದ ಬಗ್ಗೆ ತಮ್ಮ ಭಾವನೆಗಳನ್ನು ವ್ಯಕ್ತಪಡಿಸಿದರೆ (ನೀವು ನಿಮ್ಮ ಪತ್ರದಲ್ಲಿ ಹೇಳುವಂತೆ) ತಪ್ಪುಗಳು ಆಗುವ ಅವಕಾಶ ಇರುತ್ತದೆ ಎಂದು ಜನ ಹೇಳುತ್ತಾರೆ. ಇದಕ್ಕೆ ಸುವಾರ್ತೆಯಲ್ಲಿರುವ ಉತ್ತರವೇ ನನ್ನ ಉತ್ತರ ಕೂಡ: "ಪ್ರಾಜ್ಞರಿಗೆ ತಿಳಿಯದೇ ಹೋಗಿದ್ದು ಮಕ್ಕಳಿಗೆ ತಿಳಿಯುತ್ತದೆ": ಈ ಹೇಳಿಕೆ (ನಮಗೆ ಸುವಾರ್ತೆಯಲ್ಲಿನ ಹೇಳಿಕೆಗಳು ಇಷ್ಟವಾಗದಿದ್ದಾಗ ಹೀಗೆ ಹೇಳುವುದು ರೂಢಿಯಾಗಿದೆ) ಉತ್ಪ್ರೇಕ್ಷೆ ಅಲ್ಲ: ಒಗಟಲ್ಲ; ಇದು ಸರಳವೂ ನಿರ್ವಿವಾದವೂ ಆದ ಸತ್ಯ: ಪ್ರತಿಯೊಬ್ಬನೂ ಅವನು ಅನುಸರಿಸಲೇಬೇಕಾದ ಒಂದು ಧರ್ಮದ ಜೊತೆಯಲ್ಲಿ ಹುಟ್ಟಿರುತ್ತಾನೆ; ಈ ಧರ್ಮ ಯಾವದೆಂದು ತಿಳಿಯಲು ಅಗತ್ಯವಾದ ಅಂಗಗಳೂ ಅವನಲ್ಲಿರುತ್ತವೆ. ಆದ್ದರಿಂದ ಪ್ರತಿಯೊಬ್ಬನಿಗೂ ಬುದ್ಧಿ ಎನ್ನುವುದು ಇದ್ದೇ ಇದೆ; ಈ ಬುದ್ಧಿ ಅವನು ಅನುಸರಿಸಬೇಕಾದ ಧರ್ಮ ಯಾವುದೆಂದು ತೋರಿಸಿಕೊಡುತ್ತದೆ. ಯಾರಿಗೆ ಈ ಧರ್ಮವನ್ನು ಅನುಸರಿಸಬೇಕು ಎನ್ನುವ ಇಚ್ಛೆ ಇಲ್ಲವೋ ಅವರಿಗೆ ಈ ಧರ್ಮ ಕಾಣಿಸುವುದಿಲ್ಲ. ಸತ್ಯವನ್ನು ಕಂಡುಕೊಳ್ಳುವುದಕ್ಕಾಗಿಯೇ ದತ್ತವಾಗಿರುವ ಬುದ್ಧಿಯನ್ನು ಬಳಸದೆ, ಅದನ್ನು ತಿರಸ್ಕರಿಸಿ ಈ ಜನ ಧರ್ಮವನ್ನು ಮಾನ್ಯ ಮಾಡುವುದಿಲ್ಲ. ಅದಕ್ಕೆ ಬದಲಾಗಿ ಕುರುಡು ನಂಬಿಕೆಯಿಂದ ಬುದ್ಧಿಯನ್ನು ತಿರಸ್ಕರಿಸಿದ ಇತರರ ಮಾರ್ಗವನ್ನು ಒಪ್ಪಿಕೊಳ್ಳುತ್ತಾರೆ.

ಮನುಷ್ಯ ಪಾಲಿಸಬೇಕಾದ ಧರ್ಮ ಮಗುವಿಗೆ ಕೂಡ ತಿಳಿಯುವಷ್ಟು ಸರಳವಾದದ್ದು: ಈ ಧರ್ಮ ಏನೆಂದು ಅವನು ಮತ್ತೆ ಪತ್ತೆ ಮಾಡುವ ಕಾರಣವೂ ಇಲ್ಲ. ನಮಗಿಂತಲೂ ಮುಂಚೆ ಇದ್ದವರು ಅದನ್ನು ಕಂಡುಹಿಡಿದು, ಅದಕ್ಕೆ ಅಭಿವ್ಯಕ್ತಿ ಕೊಟ್ಟಿದ್ದಾರೆ. ಆದ್ದರಿಂದ ಸಾಂಪ್ರದಾಯಿಕವಾಗಿ ವ್ಯಕ್ತವಾಗಿರುವ ಹೇಳಿಕೆಗಳನ್ನು ಸ್ವಬುದ್ಧಿಯಿಂದ ಪರೀಕ್ಷಿಸಿ ಅವನ್ನು ಒಪ್ಪುವುದು ಅಥವ ಬಿಡುವುದಷ್ಟೆ ಅವನಿಗೆ ಉಳಿದಿರುವ ಕೆಲಸ. ಆದರೆ ಧರ್ಮವನ್ನು ಅನುಸರಿಸದ ಜನರ ಮಾತಿನಂತೆ ಅವನು ನಡೆಯಬಾರದು: ಬುದ್ಧಿಯನ್ನು ಸಂಪ್ರದಾಯಕ್ಕೆ ಒರೆಹಚ್ಚಿ ನೋಡುವ ಬದಲು ಅವನು ಸಂಪ್ರದಾಯವನ್ನು ತನ್ನ ಬುದ್ಧಿಗೆ ಒರೆಹಚ್ಚಿ ನೋಡಬೇಕು. ಸಂಪ್ರದಾಯಗಳು ಮನುಷ್ಯನಿಂದ ಬಂದುವು; ಅವು ತಪ್ಪಾಗಿರಲು ಸಾಧ್ಯ. ಆದರೆ ಬುದ್ಧಿ ದೈವದತ್ತವಾದದ್ದು; ಅದು ತಪ್ಪಾಗಿರಲು ಸಾಧ್ಯವಿಲ್ಲ. ಆದ್ದರಿಂದ ಸತ್ಯವನ್ನು ತಿಳಿದು ಅದನ್ನು ಅಭಿವ್ಯಕ್ತಿಪಡಿಸುವುದಕ್ಕೆ ವಿಶೇಷ

ಗುಣಗಳ ಅಗತ್ಯವಿಲ್ಲ. ನಾವು ನಂಬಬೇಕಾದದ್ದು ಇಷ್ಟು: ಬುದ್ಧಿ ಕೇವಲ ಅತ್ಯುನ್ನತವಾದ ದೈವಿಕ ಗುಣಮಾತ್ರವಲ್ಲ: ಅದು ಸತ್ಯವನ್ನು ಸಾಧಿಸಲು ಮನುಷ್ಯನಿಗಿರುವ ಏಕೈಕ ಸಾಧನ.

ಸತ್ಯವಲ್ಲದ್ದನ್ನು ಸೃಷ್ಟಿಸಿ ವಿವರಿಸುವುದಕ್ಕೆ ವಿಶೇಷವಾದ ಜಾಣ್ಮೆ ಹಾಗೂ ಬುದ್ಧಿ ಶಕ್ತಿ ಬೇಕೇ ಹೊರತು ಸತ್ಯವನ್ನು ತಿಳಿದು ಹೇಳುವುದಕ್ಕಲ್ಲ. ಬುದ್ಧಿ ಹೇಳಿದ್ದನ್ನು ಕೈಬಿಟ್ಟು, ಯಾರೊ ನಿಜ ಎಂದು ಹೇಳಿದ್ದನ್ನೆಲ್ಲ ಕುರಿಗಳ ಹಾಗೆ ನಂಬಿ. ಸಂಕೀರ್ಣವೂ, ಅಸಹಜವೂ, ವಿರೋಧಾಭಾಸಪೂರ್ಣವೂ ಆದ ಹೇಳಿಕೆಗಳನ್ನು (ಇವು ಸೂತ್ರ, ದಿವ್ಯದರ್ಶನ ಹಾಗೂ ಸಿದ್ಧಾಂತಗಳ ಸೋಗಿನಲ್ಲಿರುತ್ತವೆ) ಒಪ್ಪಿಕೊಂಡು ಇವುಗಳಿಗೂ ಯಾವುದಾದರೂ ಒಂದು ಸತ್ಯಕ್ಕೂ ಸಂಬಂಧವನ್ನು ಕಲ್ಪಿಸಿ, ಅದನ್ನು ವ್ಯಕ್ತಪಡಿಸುವುದಕ್ಕೆ ಮಾತ್ರ ಅತಿ ಸೂಕ್ಷ್ಮವಾದ ಬುದ್ಧಿ ಹಾಗೂ ವಿಶೇಷ ಜಾಣ್ಮೆ ಬೇಕಾಗುತ್ತದೆ. ನಮ್ಮಲ್ಲಿ ಪ್ರಚಲಿತವಾಗಿರುವ ಯಾವುದಾದರೂ ಒಂದು ಕ್ರಿಶ್ಚಿಯನ್ ಚರ್ಚ್‌ನ ಧಾರ್ಮಿಕ ಶ್ರದ್ಧೆಯಲ್ಲಿ ಬೆಳೆದಿರುವ ಮನುಷ್ಯನ ಬಗ್ಗೆ ಯೋಚಿಸಿದರೆ ಸಾಕು. ಅದು ಕ್ಯಾಥೋಲಿಕ್, ರಷ್ಯೊ–ಗ್ರೀಕ್ ಸಾಂಪ್ರದಾಯಿಕ ಅಥವಾ ಪ್ರಾಟಸ್ಟೆಂಟ್ ಆಗಿರಲಿ: ಅವನಿದನ್ನು ಎಳೆಯ ವಯಸ್ಸಿನಿಂದಲೇ ಕಲಿತಿರಲಿ ಅವನೇನಾದರೂ ತನ್ನ ಕಲಿತ ಧರ್ಮದ ತತ್ವಗಳನ್ನು ವಿವರಿಸಿ, ಅವನ್ನು ಜೀವನಕ್ಕೆ ಹಚ್ಚಿ ನೋಡುವ ಪ್ರಯತ್ನ ನಡೆಸಿದರೆ ಅವನೆಂಥ ಸಂಕೀರ್ಣ ಬೌದ್ಧಿಕ ಕಸರತ್ತು ಮಾಡಬೇಕಾಗುತ್ತದೆ ಎಂದು ತಿಳಿಯುತ್ತದೆ. ಎಳೆ ವಯಸ್ಸಿನಿಂದಲೂ ಕಲಿತ ವಿದ್ಯೆಯ ಸೂಜಿಮದ್ದಿನ ಮೂಲಕ ಅವನಲ್ಲಿ ಬಂದಿರುವ ನಂಬಿಕೆಯಲ್ಲಿ ಎಷ್ಟು ವಿರೋಧಾಭಾಸ! ಅವುಗಳ ಹೊಂದಾಣಿಕೆ ಹೇಗೆ! ದೇವರು ಸೃಷ್ಟಿಕರ್ತ; ಅವನು ಮಂಗಳಸ್ವರೂಪದವನು; ಅವನು ಪಾಪಗಳ ಸೃಷ್ಟಿಕರ್ತ; ಅವನು ಮನುಷ್ಯರನ್ನು ದಂಡಿಸುತ್ತಾನೆ: ಕಾಣಿಕೆಗಳನ್ನು ಅಪೇಕ್ಷಿಸುತ್ತಾನೆ. ಇತ್ಯಾದಿ; ಮತ್ತೆ ನಾವು ಬಾಯಲ್ಲಿ ಪ್ರೀತಿಯ. ಕ್ಷಮಾಧರ್ಮದ ಮಾತನಾಡಿದರೂ ಜನಗಳನ್ನು ಕೊಲ್ಲುತ್ತೇವೆ. ಯುದ್ಧಮಾಡುತ್ತೇವೆ, ಬಡಬಗ್ಗರನ್ನು ಸುಲಿದು ತಿನ್ನುತ್ತೇವೆ. ಇತ್ಯಾದಿ.

ಪರಿಹಾರವೇ ಇಲ್ಲದ ಈ ವಿರೋಧಾಭಾಸಗಳ ಸಿಕ್ಕನ್ನು ಬಿಡಿಸುವುದಕ್ಕೆ ಅಥವ ಅವುಗಳಿಗೆ ಕಣ್ಣು ಮುಚ್ಚಿ ಕೂರಬೇಕಾದರೆ ಅಸಾಮಾನ್ಯ ಜಾಣ್ಮೆ ಹಾಗೂ ವಿಶೇಷ ಬೌದ್ಧಿಕ ಶಕ್ತಿ ಅಗತ್ಯ; ಆದರೆ ತನ್ನ ಜೀವನ ಧರ್ಮವನ್ನು ತಿಳಿಯಲು ಅಥವ. ನಿಮ್ಮ ಮಾತಿನಲ್ಲಿ ಹೇಳುವುದಾದರೆ, ತನ್ನ ಧರ್ಮವೇನು ಎಂದು ಪೂರ್ಣ ಹಾಗೂ ಸ್ಪಷ್ಟವಾಗಿ ತಿಳಿಯಲು ವಿಶೇಷ ಬೌದ್ಧಿಕ ಗುಣಗಳ ಅಗತ್ಯ ಇಲ್ಲ. ಬುದ್ಧಿಗೆ ವಿರುದ್ಧವಾದದ್ದನ್ನು ನಾವು ಒಪ್ಪಬಾರದು. ಹಾಗೆ ಅದರ ಅಸ್ತಿತ್ವವನ್ನು ಅಲ್ಲಗಳೆಯಬಾರದು. ನಮ್ಮ ಬೌದ್ಧಿಕತೆಯನ್ನು ನಿಷ್ಠೆಯಿಂದ ಕಾಪಾಡಿಕೊಂಡು ಅದರಲ್ಲಿ ಮಾತ್ರ ನಂಬಿಕೆಯಿಡಬೇಕು. ಯಾರಿಗಾದರೂ ತನ್ನ ಜೀವನದ ಅರ್ಥ ಅಸ್ಪಷ್ಟವಾಗಿದ್ದರೆ, ಬುದ್ಧಿ ಅದನ್ನು ತಿಳಿಸಿ

ಹೇಳಲು ಅಸಮರ್ಥ ಎಂದು ತಿಳಿಯಬಾರದು. ಅದು ಸೂಚಿಸುವುದು ಈ ಮನುಷ್ಯ ಕುರಿಯ ಹಾಗೆ ವಿಚಾರಹೀನವಾದದ್ದನ್ನು ಅತಿಯಾಗಿ ಒಪ್ಪಿಕೊಂಡಿದ್ದಾನೆಂದು. ಹಾಗೆ, ಬುದ್ಧಿ ಯಾವುದನ್ನು ತರ್ಕಿಸಿ ನೋಡಿಲ್ಲವೊ ಅದನ್ನು ಒತ್ತಟ್ಟಿಗೆ ಸರಿಸಬೇಕು ಎಂದು.

ಆದ್ದರಿಂದ ನಮ್ಮ ಆಂತರಿಕ ಜೀವನವನ್ನು ನಾವು ಸ್ಪಷ್ಟವಾಗಿ ತಿಳಿಯಲು ಪ್ರಯತ್ನಿಸಬೇಕೆ ಎನ್ನುವ ನಿಮ್ಮ ಮೂಲ ಪ್ರಶ್ನೆಗೆ ನನ್ನ ಉತ್ತರ ಇದು: ಜೀವನದಲ್ಲಿ ನಾವು ಮಾಡಬೇಕಾದ ಅತಿ ಮಹತ್ವದ ಹಾಗೂ ಅವಶ್ಯಕವಾದ ಕೆಲಸವೇ ಇದು. ನಮ್ಮನ್ನು ಇಲ್ಲಿಗೆ ಕಳುಹಿಸಿದ ದೈವದ ಸಂಕಲ್ಪವನ್ನು ಸಫಲಗೊಳಿಸುವುದರಲ್ಲಿ ನಮ್ಮ ಜೀವನದ ಅರ್ಥವಿರುವುದರಿಂದ ಇದು ಅವಶ್ಯಕವಾದದ್ದು; ಮಹತ್ವಪೂರ್ಣವಾದದ್ದು. ಆದರೆ ದೇವರ ಸಂಕಲ್ಪ ಏನೆಂದು ತಿಳಿಯುವುದು ಅಸಾಧಾರಣ ಪವಾಡಗಳ ಮೂಲಕ ಅಲ್ಲ: ಕಲ್ಲ ಹಲಗೆಯ ಮೇಲೆ ದೇವರು ಬರೆದ ನಿಯಮಗಳ ಮೂಲಕ ಅಲ್ಲ; ಪವಿತ್ರಾತ್ಮನ ಸಹಾಯದಿಂದ ಸಂಕಲಿತವಾದ, ತಪ್ಪೇ ಇರದ ಗ್ರಂಥದ ಮೂಲಕ ಅಲ್ಲ: ಸಂತನ ಅಥವ ಹಲವು ಸಂತರ ಕುರಿತೇಟಿಸ ಮಾತುಗಳಿಂದ ಅಲ್ಲ: ಅದು ಸಾಧ್ಯವಾಗುವುದು ಎಲ್ಲರೂ ಬುದ್ಧಿಯನ್ನು ಸಾಧನವಾಗಿ ಬಳಸಿ, ಹೆಚ್ಚುಹೆಚ್ಚಾಗಿ ಅರಿವಿಗೆ ಬರುತ್ತಿರುವ ಸತ್ಯಪ್ರಜ್ಞೆಯನ್ನು ಒಬ್ಬರಿಂದೊಬ್ಬರಿಗೆ ಮಾತು ಕೃತಿಗಳ ಮೂಲಕ ಹೇಳಿದಾಗ ಮಾತ್ರ. ಈ ಜ್ಞಾನ ಎಂದೂ ಪೂರ್ಣರೂಪದಲ್ಲಿ ಬಂದಿಲ್ಲ: ಬರುವುದೂ ಇಲ್ಲ. ಮಾನವ ಜನಾಂಗ ಬೆಳೆದಹಾಗೆಲ್ಲ ಇದು ವಿಕಸಿತವಾಗುತ್ತ ಹೋಗುತ್ತದೆ: ನಾವು ಹೆಚ್ಚು ಹೆಚ್ಚು ಬದುಕಿದಂತೆಲ್ಲ ಹೆಚ್ಚು ಹೆಚ್ಚು ಸ್ಪಷ್ಟವಾಗಿ ದೇವರ ಸಂಕಲ್ಪವನ್ನು ತಿಳಿಯಲು ಸಾಧ್ಯವಾಗುತ್ತದೆ; ಇದೇ ರೀತಿಯಲ್ಲಿ ಈ ಸಂಕಲ್ಪ ಸಾಧನೆಗೆ ನಾನೇನು ಮಾಡಬೇಕೆಂದೂ ತಿಳಿಯುತ್ತದೆ. ಆದ್ದರಿಂದ ಪ್ರತಿಯೊಬ್ಬನೂ (ತಾನು ಚಿಕ್ಕವನು ಎಂದು ಅವನಿಗೂ ಇತರರಿಗೂ ಅನ್ನಿಸಲಿ, ಅಡ್ಡಿಯಿಲ್ಲ: ತೀರಾ ಸಣ್ಣವರೆ ತೀರಾ ದೊಡ್ಡವರು) ತನ್ನ ತಿಳಿವಿಗೆ ಬಂದ ಎಲ್ಲ ಧಾರ್ಮಿಕ ಸತ್ಯಗಳನ್ನೂ ಸ್ಪಷ್ಟಪಡಿಸಿಕೊಳ್ಳಲು ಪ್ರಯತ್ನಿಸಿ, ಅವಕ್ಕೆ ಮಾತಿನಲ್ಲಿ ರೂಪಕೊಟ್ಟರೆ (ಮಾತಿನಲ್ಲಿ ರೂಪಕೊಡುವುದು ಸ್ಪಷ್ಟ ತಿಳಿವು ಮೂಡಿದೆ ಎನ್ನುವುದಕ್ಕೆ ಒಂದು ಖಚಿತವಾದ ಸಂಕೇತ) ಅವನು ಅತ್ಯಂತ ಮುಖ್ಯವೂ ಪವಿತ್ರವೂ ಆದ ಕರ್ತವ್ಯವನ್ನು ಮಾಡಿದ ಹಾಗೆ ಆಗುತ್ತದೆ.

ನನ್ನ ಉತ್ತರದಿಂದ ನಿಮಗೆ ಸ್ವಲ್ಪವಾದರೂ ತೃಪ್ತಿದೊರಕಿದ್ದರೆ ನನಗೆ ತುಂಬ ಸಂತೋಷ.

[ ನವೆಂಬರ್ 26, 1894]

# ಮಠೀಯ ಬಹಿಷ್ಕಾರ: ಪತ್ರ ವ್ಯವಹಾರ

"ಸತ್ಯಕಿಂತ ಕ್ರಿಶ್ಚಿಯನ್ ಧರ್ಮವನ್ನೇ ಹೆಚ್ಚಾಗಿ ಪ್ರೀತಿಸ ಹೊರಡುವವನು ಕ್ರಿಶ್ಚಿಯನ್ ಧರ್ಮಕ್ಕಿಂತ ಹೆಚ್ಚಾಗಿ ತನ್ನ ಪಂಗಡವನ್ನು ಅಥವ ಚರ್ಚ್‌ಅನ್ನು ಪ್ರೀತಿಸಲು ಷುರುಮಾಡಿ, ಕೊನೆಗೆ ಇವೆಲ್ಲಕ್ಕಿಂತ ಹೆಚ್ಚಾಗಿ ತನ್ನ ಬಗ್ಗೆಯೇ ಪ್ರೀತಿ ಬೆಳೆಸಿಕೊಳ್ಳುತ್ತಾನೆ".

— ಕೋಲ್‌ರಿಜ್

ಮಠೀಯ ಪ್ರತಿನಿಧಿ ಸಭೆ ನನ್ನ ಬಗ್ಗೆ ಹೊರಡಿಸಿದ ಆಜ್ಞೆಗೆ ಉತ್ತರ ಕೊಡುವ ಮನಸ್ಸು ನನಗೆ ಇರಲಿಲ್ಲ. ಆದರೆ ಇದಕ್ಕೆ ಸಂಬಂಧಪಟ್ಟಂತೆ ನನಗೆ ಪರಿಚಯವಿಲ್ಲದ ಅನೇಕರಿಂದ ತುಂಬ ಪತ್ರಗಳು ಬಂದಿವೆ: ಅವರಲ್ಲಿ ಕೆಲವರು ನಾನೆಂದೂ ತಿರಸ್ಕರಿಸದಿರುವ ಅನೇಕ ಸಂಗತಿಗಳನ್ನು ತಿರಸ್ಕರಿಸಿದ್ದೇನೆ ಎಂದು ತಿಳಿದು ನನ್ನನ್ನು ಬೈದಿದ್ದಾರೆ: ಇನ್ನು ಕೆಲವರು ನಾನೆಂದೂ ನಂಬಿಕೆ ಕಳೆದುಕೊಳ್ಳದೆ ಇರುವ ವಿಷಯಗಳ ಬಗ್ಗೆ ಬರೆದು ಅವು ಗಳಲ್ಲಿ ನಂಬಿಕೆಯಿಡುವುದು ಅಗತ್ಯ ಎಂದು ಎಚ್ಚರಿಸಿದ್ದಾರೆ: ಮತ್ತೆ ಕೆಲವರು ಬಹುಶಃ ನಮ್ಮಿಬ್ಬರ ದೃಷ್ಟಿಕೋನದಲ್ಲಿ ಇಲ್ಲದ ಸಹಮತಿಯನ್ನು ವ್ಯಕ್ತಪಡಿಸಿ, ನನ್ನ ಬಗ್ಗೆ ಸಹಾನುಭೂತಿ ಸೂಚಿಸಿದ್ದಾರೆ; ಅದಕ್ಕೆ ನಾನು ಅರ್ಹನಲ್ಲ. ಈ ಕಾರಣಗಳಿಂದ ನಾನು ಈ ಆಜ್ಞೆಯ ಬಗೆಗೂ – ಅದರಲ್ಲಿ ನ್ಯಾಯವಲ್ಲದ್ದೇನು ಎಂದು ಸೂಚಿಸಿ – ನನ್ನ ಅಪರಿಚಿತ ಪತ್ರ ಲೇಖಕರ ಅಭಿಪ್ರಾಯಗಳ ಬಗಗೂ ಉತ್ತರ ಕೊಡಲು ನಿರ್ಧರಿಸಿದ್ದೇನೆ.

ಒಟ್ಟಾರೆಯಾಗಿ ಮಠೀಯ ಪ್ರತಿನಿಧಿ ಸಭೆಯ ಆಜ್ಞೆಯಲ್ಲಿ ಅನೇಕ ದೋಷಗಳಿವೆ. ಅದು ಕಾನೂನು ಬಾಹಿರವಾದದ್ದು ಅಥವ ಉದ್ದೇಶ ಪೂರ್ವಕವಾಗಿ ಸಂಧಿಗ್ಧಾರ್ಥವುಳ್ಳದ್ದು: ಅದು ಅವಿಚಾರಕವೂ. ಆಧಾರರಹಿತವೂ ಅಸತ್ಯಕರವೂ ಅದದ್ದಷ್ಟೆ ಅಲ್ಲ: ಅದು ಮಾನಹಾನಿಯನ್ನುಂಟುಮಾಡಿ. ದುಷ್ಕೃತ್ಯಗಳನ್ನೂ ದುರ್ಭಾವನೆಗಳನ್ನೂ ಪ್ರೇರಿಸು ವಂಥದು.

ಅದು ಕಾನೂನು ಬಾಹಿರವಾದದ್ದು ಅಥವಾ ಉದ್ದೇಶಪೂರ್ವಕವಾಗಿ ಸಂಧಿಗ್ಧಾ-ರ್ಥವುಳ್ಳದ್ದು. ಕಾರಣ, ಚರ್ಚ್‌ನಿಂದ ಬಹಿಷ್ಕಾರ ಹಾಕುವ ಉದ್ದೇಶದಿಂದ ಈ ಆಜ್ಞೆ ಯನ್ನು ಮಾಡಿದ್ದರೆ, ಅದು ಚರ್ಚ್‌ನ ನಿಯಮಗಳಿಗೆ ಅನುಗುಣವಾಗಿ ನಡೆದ ಬಹಿಷ್ಕಾರ ಎನ್ನುವಂತಿಲ್ಲ; ಅಥವಾ ಯಾರು ಚರ್ಚ್ ಹಾಗೂ ಅದರ ಮಠೀಯ ಸಿದ್ಧಾಂತಗಳನ್ನು ನಂಬುವುದಿಲ್ಲವೋ ಅವರು ಚರ್ಚ್‌ಗೆ ಸೇರಿದವರಲ್ಲ ಎಂದು ಘೋಷಿಸುವುದಕ್ಕಷ್ಟೆ ಆದರೆ ಅದು ತೀರಾ ಸುಸ್ಪಷ್ಟವಾದ ವಿಷಯ. ಈಗ ಈ ಘೋಷಣೆ ನಿಜವಾಗಿ ಬಹಿಷ್ಕಾರವನ್ನು

ಸಾರದಿದ್ದರೂ ಅದೇ ಉದ್ದೇಶವನ್ನಿಟ್ಟು ಕೊಂಡಿದೆ; ಅಲ್ಲದೆ, ಅದೇ ಅರ್ಥದಲ್ಲಿ ಎಲ್ಲರಿಂದಲೂ ಗೃಹೀತವಾಗಿದೆ.

ಈ ಆಜ್ಞೆ ಸ್ವೇಚ್ಛಾನುಸಾರಿಯಾದದ್ದು. ಅದರಲ್ಲಿ ನಮೂದಿಸಿರುವ ಅಂಶಗಳನ್ನು ನಂಬಿದವನು ನಾನೊಬ್ಬನೆ ಎಂದು ಅದು ದೂರುತ್ತದೆ. ವಾಸ್ತವವಾಗಿ ಇಂಥ ಅಪನಂಬಿಕೆ ಅನೇಕ ವಿದ್ಯಾವಂತರಲ್ಲಿ ಇದೆ; ಅವರು ಅದನ್ನು ಮತ್ತೆ ಮತ್ತೆ ವ್ಯಕ್ತ ಮಾಡಿಯೂ ಇದ್ದಾರೆ. ಈಗಲೂ ಸಂಭಾಷಣೆ, ಭಾಷಣ, ಕಿರು ಹೊತ್ತಿಗೆ ಹಾಗೂ ಗ್ರಂಥಗಳಲ್ಲಿ ಅದನ್ನೇ ಹೇಳುತ್ತಿದ್ದಾರೆ.

ಅದು ಆಧಾರರಹಿತವಾದದ್ದು. ಮೋಸಘಾತುಕವಾದ ನನ್ನ ಬೋಧನೆ ವಿಶೇಷ ವಾಗಿ ಪ್ರಚಾರದಲ್ಲಿದ್ದು ಅನೇಕರನ್ನು ಅಪಮಾರ್ಗಕ್ಕೆ ಎಳೆಯುತ್ತಿರುವುದರಿಂದ ಈ ಆಜ್ಞೆಯನ್ನು ಪ್ರಕಟಪಡಿಸಬೇಕಾಯಿತು ಎನ್ನುತ್ತಾರೆ. ಆದರೆ ನನಗೆ ಗೊತ್ತು. ನನ್ನ ಅಭಿಪ್ರಾಯಗಳನ್ನು ಒಪ್ಪುವವರು ಒಂದು ನೂರು ಜನ ಕೂಡ ಇಲ್ಲ. ಧರ್ಮದ ಬಗ್ಗೆ ನಾನು ಬರೆದದ್ದು – ಇದಕ್ಕೆ ಸೆನ್ಸಾರಿನವರಿಗೆ ನನ್ನ ಕೃತಜ್ಞತೆ ಸಲ್ಲಬೇಕು – ಎಷ್ಟರ ಮಟ್ಟಿಗೆ ಪ್ರಚಾರದಲ್ಲಿದೆ ಎಂದು ತಿಳಿಯುವುದಕ್ಕೆ ನನಗೆ ಬಂದಿರುವ ಪತ್ರಗಳೇ ಸಾಕು: ಬಹಿಷ್ಕಾರ ಘೋಷಣೆಯನ್ನು ಓದಿರುವ ಬಹುಪಾಲು ಮಂದಿಗೆ ನಾನು ಧರ್ಮದ ಬಗ್ಗೆ ಏನು ಬರೆದಿದ್ದೇನೆ ಎನ್ನುವ ಕಲ್ಪನೆ ಕೂಡ ಇಲ್ಲ.

ಅದು ಅಸತ್ಯದಿಂದ ಕೂಡಿದೆ. ನನ್ನ ತಪ್ಪುಗಳನ್ನು ನನಗೆ ಮನದಟ್ಟುಮಾಡಿ ಕೊಡಲು ಚರ್ಚ್ ಪ್ರಯತ್ನಿಸಿತೆಂದೂ ಆದರೆ ಆ ಪ್ರಯತ್ನಗಳು ಯಶಸ್ವಿಯಾಗಲಿಲ್ಲ ವೆಂದೂ ಹೇಳುತ್ತದೆ. ಇಂಥದು ಯಾವುದೂ ನಡೆಯಲಿಲ್ಲ.

ಕಾನೂನು ಕಾಯಿದೆಗಳ ಮಾತಿನಲ್ಲಿ ಹೇಳುವುದಾದರೆ ಅದು ಮಾನಹಾನಿಕರ ವಾದದ್ದು. ನನಗೆ ನೋವನ್ನು ಉಂಟುಮಾಡುವ, ಸುಳ್ಳು ಎಂದು ತಿಳಿದಿದ್ದ ಹೇಳಿಕೆಗಳು ಇದರಲ್ಲಿವೆ.

ಕೊನೆಯದಾಗಿ ಇದು ದುರ್ಭಾವನೆಗಳನ್ನೂ ದುಷ್ಕೃತ್ಯಗಳನ್ನೂ ಪ್ರೇರಿಸುತ್ತದೆ; ಅಪ್ರಬುದ್ಧರೂ ಅವಿಚಾರಿಗಳೂ ಆದ ಜನದಲ್ಲಿ ಇದು ನಿರೀಕ್ಷಿತವಾಗಿಯೇ ನನ್ನ ಬಗ್ಗೆ ಕೋಪವನ್ನೂ ದ್ವೇಷವನ್ನೂ ಮೂಡಿಸಿದೆ. ನನಗೆ ಬಂದ ಪತ್ರಗಳಲ್ಲಿ ಇದು ಕೊಲೆಯ ಬೆದರಿಕೆ ಹಾಕುವ ಮಟ್ಟಕ್ಕೂ ಹೋಗಿದೆ. ಒಬ್ಬ ಬರೆಯುತ್ತಾನೆ: 'ನೀನೀಗ ಬಹಿಷ್ಕೃತ ನಾಗಿರುವುದರಿಂದ, ಸತ್ತ ಮೇಲೆ ನಿರಂತರವಾದ ನರಕವಾಸಕ್ಕೆ ಗುರಿಯಾಗುತ್ತೀ: ನಾಯಿಯ ಸಾವು ನಿನಗೆ ಬರುತ್ತದೆ; ಮುದಿ ದೆವ್ವ, ನಿನಗೆ ಬಹಿಷ್ಕಾರ……ನೀನು

ಹಾಳಾಗು'. ಇನ್ನೊಬ್ಬ ನನ್ನನ್ನು ಇನ್ನೂ ಯಾವ ಮಠದಲ್ಲೂ ಕೂಡಿ ಹಾಕದೆ ಇದ್ದುದಕ್ಕೆ ಸರಕಾರವನ್ನು ಶಪಿಸಿ, ತನ್ನ ಪತ್ರವನ್ನು ಬೈಗುಳದಿಂದ ತುಂಬಿದ್ದಾನೆ. ಮೂರನೆಯವನು "ಸರಕಾರ ನಿನ್ನನ್ನು ನಿರ್ಮೂಲ ಮಾಡದಿದ್ದರೆ, ನಾವೆ ನಿನ್ನ ಬಾಯಿ ಮುಚ್ಚುವಂತೆ ಮಾಡುತ್ತೇವೆ" ಎಂದು ಬರೆಯುತ್ತಾನೆ. ಶಾಪಗಳಿಂದ ಅವನ ಪತ್ರ ಮುಕ್ತಾಯವಾಗಿದೆ: 'ನೀಚ! ನೀನು ಹಾಳು ಬಿದ್ದು ಹೋಗು' ಎಂದು ನಾಲ್ಕನೆಯವನು ಬರೆಯುತ್ತಾ 'ಅದಕ್ಕೆ ನಾನು ಮಾರ್ಗವನ್ನು ಹುಡುಕುತ್ತೇನೆ'—ಎನ್ನುತ್ತಾನೆ. ಇದಾದನಂತರ ಅಶ್ಲೀಲ ಬೈಗಳು. ಮಠೀಯ ಆಜ್ಞೆ ಪ್ರಕಟವಾದ ಮೇಲೆ ನಾನು ಭೇಟಿ ಮಾಡಿದ ಕೆಲವರಲ್ಲಿ ಕೋಪದ ಚಿಹ್ನೆಗಳು ಕಾಣಿಸಿದುವು. ಆಜ್ಞೆ ಬಹಿರಂಗವಾಗಿ ಪ್ರಕಟವಾದ ದಿನ, ಫೆಬ್ರುವರಿ 25) ನಾನು ರಸ್ತೆಯೊಂದರಲ್ಲಿ ಹೋಗುತ್ತಿದ್ದಾಗ 'ನೋಡಿ! ಮನುಷ್ಯ ರೂಪದ ದೆವ್ವ ಅಲ್ಲಿ ಹೋಗುತ್ತಿದೆ' ಎಂದದ್ದು ಕೇಳಿಸಿತು. ಆ ಗುಂಪಿನಲ್ಲಿ ಇತರೇ ಪ್ರಕೃತಿಯ ಜನಗಳು ಇದ್ದಿದ್ದರೆ ಬಹುಶಃ ಅವರು ನನ್ನನ್ನು ಅಲ್ಲೇ ಹೊಡೆದು ಸಾಯಿಸುತ್ತಿದ್ದರು; ಕೆಲವು ವರ್ಷಗಳ ಹಿಂದೆ ಇಂಥ ಘಟನೆಯೊಂದು ಪ್ಯಾಂಟಿಲಿಮಾನ್ ಚರ್ಚ್‌ನ ಬಳಿ ನಡೆಯಿತು; ಆ ಮನುಷ್ಯ ಸತ್ತ.

ಒಟ್ಟಿನಲ್ಲಿ ಹೇಳುವುದಾದರೆ ಮಠೀಯ ಆಜ್ಞೆ ಅತ್ಯಂತ ದುಷ್ಟವಾದದ್ದು. ಅದರ ಅಡಿಯಲ್ಲಿ ಸಹಿ ಮಾಡಿರುವವರು ತಮ್ಮಂತೆ ನಾನೂ ಆಗಲಿ ಎಂದು ಪ್ರಾರ್ಥಿಸಿಕೊಂಡಿದ್ದಾರೆ; ಆದರೆ ಅದಕ್ಕೆ ಇದರಿಂದೇನೂ ಶೋಭೆ ಹೆಚ್ಚಿಲ್ಲ.

ಇದಿಷ್ಟೂ ಒಟ್ಟು ಆಜ್ಞೆಗೆ ಸಂಬಂಧಿಸಿದ್ದು. ವಿವರವಾಗಿ ಅದನ್ನು ನೋಡಿದಾಗ ಈ ಕೆಳಕಂಡ ತಪ್ಪುಗಳು ಕಾಣುತ್ತವೆ: 'ಹುಟ್ಟಿನಿಂದ ರಷ್ಯನ್ನನೂ ಕಲಿಕೆ ಹಾಗೂ ಜ್ಞಾನಸ್ನಾನದಿಂದ ಸಾಂಪ್ರದಾಯಿಕ ಕ್ರಿಶ್ಚಿಯನ್ನನೂ, ಪ್ರಪಂಚಕ್ಕೆ ಪರಿಚಿತ ಬರವಣಿಗಾರನೂ ಆದ ಕೌಂಟ್ ಟಾಲ್‌ಸ್ಟಾಯ್ ಬೌದ್ಧಿಕ ಅಹಂಕಾರಕ್ಕೆ ಮನಸೋತು ದೈವದ ಹಾಗೂ ತನ್ನ ಕ್ರಿಸ್ತನ ವಿರುದ್ಧವಾಗಿ, ತನ್ನ ಪವಿತ್ರ ಧಾರ್ಮಿಕ ಭಾಗ್ಯದ ವಿರುದ್ಧವಾಗಿ ದರ್ಪೋದ್ಧಿತ ನಿಲುವು ತಳೆದು, ಬಹಿರಂಗವಾಗಿ, ಎಲ್ಲರೆದುರು, ತನ್ನನ್ನು ಸಾಕಿ ವಿದ್ಯಾವಂತನನ್ನಾಗಿ ಮಾಡಿದ ಸಾಂಪ್ರದಾಯಿಕ ಚರ್ಚ್ ತಾಯಿಯನ್ನು ತೊರೆದಿದ್ದಾನೆ' ಎಂದು ಈ ಆಜ್ಞೆ ಹೇಳುತ್ತದೆ.

ಯಾವ ಚರ್ಚ್ ತನ್ನನ್ನು ಸಾಂಪ್ರದಾಯಿಕ ಎಂದು ಕರೆದುಕೊಳ್ಳುತ್ತದೋ ಅದನ್ನು ನಾನು ತ್ಯಜಿಸಿರುವುದು ಸತ್ಯ.

ಆದರೆ ನಾನು ಅದನ್ನು ತ್ಯಜಿಸಿದ್ದು ದೇವರ ವಿರುದ್ಧ ಸೆಟೆದು ನಿಲ್ಲುವುದಕ್ಕಲ್ಲ. ನನ್ನಾತ್ಮ ಶಕ್ತಿಯನ್ನೆಲ್ಲ ಒಗ್ಗೂಡಿಸಿ ಅವನನ್ನು ಸೇವಿಸುವುದಕ್ಕೆ. ಮಾತಿನಲ್ಲಿ ವ್ಯಕ್ತಪಡಿಸಲಾಗದಷ್ಟು ಪ್ರಿಯವಾಗಿದ್ದ ಚರ್ಚ್‌ಅನ್ನು, ನನ್ನ ಜನರ ಸಹಬಂಧುತ್ವವನ್ನು

ಬಿಟ್ಟು ಕೊಡುವುದಕ್ಕೆ ಮುಂಚೆ ಅದರ ತಾತ್ವಿಕ ಹಾಗೂ ಪ್ರಾಯೋಗಿಕ ಬೋಧನೆಗಳನ್ನು ಅನೇಕ ವರ್ಷಗಳ ಕಾಲ ಅಭ್ಯಾಸ ಮಾಡಿದ್ದೆ. ಚರ್ಚ್‌ನ ಪ್ರಾಮಾಣಿಕತೆಯನ್ನು ಸಂದೇಹಿಸಲು ನನಗೆ ಕೆಲವು ಕಾರಣಗಳು ಕಂಡುಬಂದವು. ತಾತ್ವಿಕ ಪರಿಶೀಲನೆಗಾಗಿ ನನಗೆ ಸಾಧ್ಯವಿದ್ದಷ್ಟು ಮಟ್ಟಿಗೆ ಚರ್ಚ್‌ನ ಬೋಧನೆಯನ್ನು ಓದಿ, ಅದರ ಮತ ಸಂಬಂಧವಾದ ಸಿದ್ಧಾಂತಗಳನ್ನು ವಿಮರ್ಶಾತ್ಮಕವಾಗಿ ಅಭ್ಯಾಸಮಾಡಿದೆ. ಪ್ರಯೋಗಕ್ಕೆ ಸಂಬಂಧಪಟ್ಟಂತೆ ಒಂದು ವರ್ಷಕ್ಕೂ ಹೆಚ್ಚಾಗಿ ಸೇವೆ ಹಾಗೂ ಉಪವಾಸಗಳ ಬಗ್ಗೆ ಚರ್ಚ್‌ನ ಎಲ್ಲ ಅಪ್ಪಣೆಗಳನ್ನು ಕಟ್ಟುನಿಟ್ಟಾಗಿ ಪಾಲಿಸಿದೆ. ಇಷ್ಟಾದನಂತರ ಚರ್ಚ್‌ನ ಉಪದೇಶ ತಾತ್ವಿಕವಾಗಿ ವಂಚಕತನದ್ದಷ್ಟೇ ಅಲ್ಲ ಅದು ಕೇಡನ್ನುಂಟುಮಾಡುವಂಥ ಸುಳ್ಳಿನಿಂದ ಕೂಡಿದೆ; ಪ್ರಾಯೋಗಿಕವಾಗಿ ಅದು ಅತ್ಯಂತ ಹೇಯಕರವಾದ ಅಂಧಶ್ರದ್ಧೆ ಹಾಗೂ ಮಾಯಾಮಂತ್ರಗಳಿಂದ ತುಂಬಿ ಹೋಗಿ, ಕ್ರಿಸ್ತ ಬೋಧನೆಯ ಅರ್ಥವನ್ನು ಇಡಿಯಾಗಿ ಮುಚ್ಚಿಹಾಕಿದೆ ಎನ್ನುವುದು ನನ್ನ ಮನಸ್ಸಿಗೆ ಸ್ಪಷ್ಟವಾಯಿತು. [1]

ನಾನು ನಿಜವಾಗಿಯೂ ಚರ್ಚ್‌ಅನ್ನು ತ್ಯಜಿಸಿದೆ; ಅದರ ಮತಾಚರಣೆಗಳನ್ನು ನಡೆಸುವುದು ಬಿಟ್ಟೆ; ಹಾಗೂ ನನ್ನ ಸಮೀಪದವರನ್ನು ಉದ್ದೇಶಿಸಿ ಒಂದು ಉಯಿಲನ್ನು ಬರೆದೆ. ನಾನು ಸತ್ತಮೇಲೆ ಚರ್ಚ್‌ನ ಸೇವಕರನ್ನು ನನ್ನ ಹತ್ತಿರಕ್ಕೆ ಬರಗೊಡಕೂಡದೆಂದೂ, ಯಾವ ಮಂತ್ರ ಅಥವ ಪ್ರಾರ್ಥನೆಗಳನ್ನೂ ಹೇಳದೆ ಅಸಹ್ಯವೂ ಅನುಪಯುಕ್ತವೂ ಆದದ್ದು ಉಳಿದವರಿಗೆ ತೊಂದರೆಯನ್ನುಂಟು ಮಾಡದಿರಲಿ ಎಂದು ಹೇಗೆ ದೂರಕ್ಕೆ ಸಾಗಿಸಿಬಿಡುತ್ತೇವೋ ಅದೇ ರೀತಿಯಲ್ಲಿ ನನ್ನ ಮೃತದೇಹವನ್ನು ಸಾಧ್ಯವಾದಷ್ಟು ಬೇಗ ಸಾಗಿಸಿಬಿಡಬೇಕೆಂದು ನಮೂದಿಸಿದೆ.

ನನ್ನ ಬಗ್ಗೆ ಅವರು ಕೆಲವು ಹೇಳಿಕೆಗಳನ್ನು ಕೊಟ್ಟಿದ್ದಾರೆ. ಅದರಲ್ಲಿ ನಾನು ನನ್ನ 'ಸಾಹಿತ್ಯಿಕ ಚಟುವಟಿಕೆಯನ್ನೂ, ದೇವರು ಕೊಟ್ಟಿರುವ ಪ್ರತಿಭೆಯನ್ನೂ ಜನಗಳಲ್ಲಿ

---

[1] ಪ್ರಾರ್ಥನಾ-ಗ್ರಂಥವನ್ನು ಓದಿ, ಸಾಂಪ್ರದಾಯಿಕ ಪುರೋಹಿತರು ತಪ್ಪದೆ ಆಚರಿಸುವ ವಿಧಿಗಳನ್ನು ನೋಡಿದರೆ ಸಾಕು ; ಇವೇ ಕ್ರಿಶ್ಚಿಯನ್ ದೈವದ ಉಪಾಸನೆ ಎಂದು ಅವರ ಎಣಿಕೆ. ಈ ಆಚರಣೆಗಳೂ ಜೀವನದ ಎಲ್ಲ ಘಟನೆಗಳಿಗೆ ಯೋಜಿಸಿದ ವಿವಿಧ ರೀತಿಯ ಮಂತ್ರತಂತ್ರ ಎಂದು ವಿದಿತವಾಗುತ್ತದೆ. ಮರಣ ಹೊಂದಿದ ಮಗುವೊಂದು ಸ್ವರ್ಗಕ್ಕೆ ಹೋಗಬೇಕಾದರೆ, ಅದಕ್ಕೆ ಅಭ್ಯಂಜನ ಹೇಗೆ ಮಾಡಿಸಬೇಕು, ಕೆಲವು ಮಂತ್ರೋಚ್ಚಾರಣೆ ಮಾಡುತ್ತಿದ್ದಾಗ ಅದನ್ನು ಹೇಗೆ ನೀರಿನಲ್ಲಿ ಅದ್ದಬೇಕು ; ಹೆರಿಗೆಯಾದ ಮೇಲೆ ತಾಯಿಯ ಹೊಲೆ ಕಳೆಯಲು ಮಂತ್ರಗಳ ಉಚ್ಚಾರಣೆ ಹೇಗೆ ಮಾಡಬೇಕು; ಒಬ್ಬ ಜೀವನದಲ್ಲಿ ಯಶಸ್ವಿಯಾಗಬೇಕಾದರೆ, ಹೊಸ ಮನೆಯಲ್ಲಿ ಸುಖವಾಗಿ ಇರಬೇಕಾದರೆ, ಹುಲುಸಾದ ಬೆಳೆ ಬರಬೇಕಾದರೆ, ಜಲಕ್ಷಾಮ ಹೋಗಬೇಕಾದರೆ, ಖಾಯಿಲೆ ವಾಸಿಯಾಗಬೇಕಾದರೆ, ಸಾವು ಸಮೀಪಿಸಿದವನು ಪರಲೋಕದಲ್ಲಿ ಸುಖವಾಗಿರಬೇಕಾದರೆ – ಈ ಎಲ್ಲಕ್ಕು ಇನ್ನು ಇಂಥ ಸಾವಿರ ಸಂದರ್ಭಗಳಲ್ಲಿ ಯಾವುದೇ ಒಂದು ಸ್ಥಳದಲ್ಲಿ, ಒಂದು ಗೊತ್ತಾದ ಕಾಣಿಕೆಗೆ, ಪುರೋಹಿತ ಗೊತ್ತಾದ ಕೆಲವು ಮಂತ್ರಗಳನ್ನು ಉಚ್ಚರಿಸುತ್ತಾನೆ.

ಲಿಯೊ ಟಾಲ್‌ಸ್ಟಾಯ್.

ಕ್ರಿಸ್ತನಿಗೆ ಹಾಗೂ ಚರ್ಚ್‌ಗೆ ವಿರುದ್ಧವಾದ ಬೋಧನೆ ಮಾಡುವುದರಲ್ಲಿ ವ್ಯಯಿಸುತ್ತಿದ್ದೇನೆ; ಮತ್ತು, 'ಪ್ರಪಂಚದಾದ್ಯಂತ, ಅದರಲ್ಲೂ ವಿಶೇಷವಾಗಿ ನಮ್ಮ ದೇಶದ ಒಳಗೆ, ಭಾರಿ ಪ್ರಮಾಣದಲ್ಲಿ ಈತ ಬರೆದ ಕೃತಿಗಳು ಹಾಗೂ ಪತ್ರಗಳನ್ನು ಇವನೂ ಇವನ ಶಿಷ್ಯರು ಪ್ರಕಟಪಡಿಸಿ ಸಾಂಪ್ರದಾಯಿಕ ಚರ್ಚ್‌ನ ಮತಸಂಬಂಧವಾದ ಸಿದ್ಧಾಂತಗಳಿಗೆ ಹಾಗೂ ಕ್ರಿಶ್ಚಿಯನ್ ಧರ್ಮದ ಸಾರಕ್ಕೇ ಕೊಡಲಿ ಪೆಟ್ಟು ಹಾಕುವ ಉದ್ದೇಶದಿಂದ ಉನ್ಮಾದಕವಾದ ಉಪದೇಶ ನೀಡುತ್ತಿದ್ದಾರೆ'—ಇದು ಸತ್ಯಕ್ಕೆ ದೂರವಾದದ್ದು. ನನ್ನ ಬೋಧನೆಗೆ ಪ್ರಚಾರ ಸಿಗಲಿ ಎಂದು ನಾನು ಯಾವತ್ತೂ ಶ್ರಮ ತೆಗೆದುಕೊಳ್ಳಲಿಲ್ಲ. ಕ್ರಿಸ್ತನ ಬೋಧನೆಯನ್ನು ನಾನು ಅರ್ಥ ಮಾಡಿಕೊಂಡಂತೆ ಬರೆದಿದ್ದೂ, ಈ ಬರವಣಿಗೆಯ ಪರಿಚಯ ಲಾಭ ಪಡೆಯಲು ಬಯಸಿದವರಿಂದ ಅದನ್ನು ಮುಚ್ಚಿಡದೆ ಇದ್ದದ್ದೂ ನಿಜ; ಆದರೆ ನಾನು ಅವನ್ನು ಎಂದೂ ಪ್ರಕಟಪಡಿಸಲಿಲ್ಲ. ಯಾರಾದರೂ ನಾನು ಕ್ರಿಸ್ತನ ಬೋಧನೆಯನ್ನು ಹೇಗೆ ಅರ್ಥಮಾಡಿಕೊಂಡಿದ್ದೇನೆ ಎಂದು ಕೇಳಿದಾಗ ಮಾತ್ರ ಈ ಬಗ್ಗೆ ಮಾತನಾಡಿದ್ದೇನೆ. ಕೇಳಿದಾಗ, ನನ್ನ ಯೋಚನೆಗಳನ್ನು ಅವರ ಮುಂದಿಟ್ಟೆ; ನನ್ನ ಬಳಿ ಪುಸ್ತಕಗಳಿದ್ದಾಗ ಅವನ್ನು ಕೊಟ್ಟೆ.

ಮತ್ತೆ ಇದನ್ನೂ ಹೇಳುತ್ತಾರೆ: 'ಸೃಷ್ಟಿಕರ್ತನೂ ಸಂರಕ್ಷಕನೂ ಆದ ದೇವರನ್ನು ಪವಿತ್ರ ತ್ರಿಮೂರ್ತಿತ್ವ ಕಲ್ಪನೆಯಲ್ಲಿ ಪೂಜಿಸುವುದನ್ನು ಈತ ಅಲ್ಲಗಳೆಯುತ್ತಾನೆ; ದೇವ-ಮಾನವನೂ ವಿಮೋಚಕನೂ, ಪ್ರಪಂಚದ ಉದ್ಧಾರಕನೂ, ನಮಗಾಗಿ ಯಾತನೆಯನ್ನು ಉಂಡು ಸತ್ತು ಮತ್ತೆ ಜೀವತಳೆದವನೂ, ನಮ್ಮ ಪ್ರಭುವೂ ಆದ ಯೇಸುಕ್ರಿಸ್ತನನ್ನು ಅಲ್ಲ ಗಳೆಯುತ್ತಾನೆ; ಮನುಷ್ಯನಾಗಿ ಯೇಸುಕ್ರಿಸ್ತ ನಿಷ್ಕಳಂಕ ಗರ್ಭದಿಂದ ಅವತರಿಸಿದುದನ್ನೂ, ಅವನ ಹುಟ್ಟುವ ಮುನ್ನ ಮತ್ತು ಅನಂತರ ಇದ್ದ ದೇವನ ಪರಮ ಪವಿತ್ರ ತಾಯಿಯ ಕನ್ಯಾವಸ್ಥೆಯನ್ನೂ ಅಲ್ಲಗಳೆಯುತ್ತಾನೆ'. ಅರ್ಥಾತೀತವಾದ ತ್ರಿಮೂರ್ತಿತ್ವ; ನಮ್ಮ ಕಾಲದಲ್ಲಿ ಅರ್ಥಹೀನವಾದ ಮೊದಲ ಮಾನವನ ಪತನದ ಕಥೆ; ಮಾನವರನ್ನು ಉದ್ಧಾರ ಮಾಡಲು ಕನ್ಯೆಯಿಂದ ಜನಿಸಿದ ದೇವರೊಬ್ಬನ ಬಗ್ಗೆ ಇರುವ ದೇವದೂಷಕ ಕಥೆ; ಇವೆಲ್ಲವನ್ನೂ ನಾನು ಅಲ್ಲಗಳೆಯುವುದು ನಿಜ. ಆದರೆ ದೇವರು ಒಂದು ಚೈತನ್ಯ ವಾಗಿ, ದೇವರು ಒಂದು ಪ್ರೇಮವಾಗಿ, ಎಲ್ಲದರ ಮೂಲಕಾರಣ. ಈ ದೇವರನ್ನು ನಾನೆಂದೂ ಅಲ್ಲಗಳೆದಿಲ್ಲವಷ್ಟೆ ಅಲ್ಲ; ಈ ದೇವರೊಬ್ಬನಿಗೆ ನಾನು ನಿಜವಾದ ಅಸ್ತಿತ್ವವನ್ನು ಆರೋಪಿಸಿ, ಇಡೀ ಜೀವನದ ಅರ್ಥ ಇರುವುದು ಈ ದೇವರ ಸಂಕಲ್ಪ ವನ್ನು ಪೂರ್ಣಗೊಳಿಸುವುದರಲ್ಲಿ ಎನ್ನುತ್ತೇನೆ. ಅವನ ಸಂಕಲ್ಪ ವ್ಯಕ್ತವಾಗಿರುವುದು ಕ್ರಿಶ್ಚಿಯನ್ ಬೋಧನೆಯಲ್ಲಿ ಎಂದೂ ಹೇಳುತ್ತೇನೆ.

ಅವರು ಇದನ್ನೂ ಹೇಳಿದ್ದಾರೆ: 'ಈತ ಮರಣದ ಆಚೆಗಿರುವ ಜೀವನವನ್ನೂ ಪಾಪಫಲವನ್ನೂ ಒಪ್ಪುವುದಿಲ್ಲ.' ಎರಡನೆಯ ಅವತಾರ, ನಿರಂತರ ಯಾತನೆಯ ನರಕ, ದೆವ್ವಗಳು, ಅನಂತ ಸುಖದ ಸ್ವರ್ಗ – ಇವೇ ಮರಣದ ಆಚೆಗಿನ ಜೀವನದ

ಅರ್ಥ ಎಂದಾದರೆ ಅಂಥ ಜೀವನ ಇದೆ ಎಂದು ನಾನು ಒಪ್ಪುವುದಿಲ್ಲ. ಆದರೆ ಇಲ್ಲಿ ಮತ್ತೆ ಎಲ್ಲ ಕಡೆಗಳಲ್ಲಿ ಈಗ ಮತ್ತೆ ಯಾವಾಗಲೂ ಅನಂತವಾದ ಜೀವನ ಹಾಗೂ ಪಾಪಫಲ ಇದೆ ಎನ್ನುವುದನ್ನು ನಾನು ಒಪ್ಪುತ್ತೇನೆ. ಮರಣದ ಹೊಸ್ತಿಲಲ್ಲಿರುವ ನನಗೆ ಇದು ಎಷ್ಟು ಒಪ್ಪಿತವಾದದ್ದೆಂದರೆ ನನ್ನ ದೇಹದ ಸಾವನ್ನು ಬಯಸಿದಂತೆ ನನ್ನ ಭಾವನೆಗಳನ್ನು ನಾನೆ ನಿಯಂತ್ರಿಸಿಕೊಳ್ಳಬೇಕಾಗುತ್ತದೆ. ಅಂದರೆ, ಹೊಸ ಜೀವನದಲ್ಲಿ ಹುಟ್ಟುವ ಬಯಕೆ ಪ್ರತಿಯೊಂದು ಒಳ್ಳೆಯ ಕೆಲಸವೂ ನನ್ನ ಅನಂತ ಜೀವನದ ಯೋಗಕ್ಷೇಮವನ್ನು ವೃದ್ಧಿಗೊಳಿಸುತ್ತದೆ ಮತ್ತು ಪ್ರತಿಯೊಂದು ಕೆಟ್ಟ ಕೆಲಸವೂ ಅದನ್ನು ಕ್ಷೀಣಗೊಳಿಸುತ್ತದೆ ಎಂದು ನಾನು ನಂಬುತ್ತೇನೆ.

ನಾನು ಎಲ್ಲ ಮತಸಂಸ್ಕಾರಗಳನ್ನೂ ತಿರಸ್ಕರಿಸುತ್ತೇನೆ ಎಂದು ಹೇಳಿದ್ದಾರೆ. ಅದು ನಿಜ. ಎಲ್ಲ ಮತ ಸಂಸ್ಕಾರಗಳೂ ಅಸಂಸ್ಕೃತವಾದ, ಕೀಳುಮಟ್ಟದ ಮಾಯಾ ಮಂತ್ರದ ಜಾತಿಯವು. ಅವು ದೇವರ ಕಲ್ಪನೆಗೂ ಕ್ರಿಶ್ಚಿಯನ್ ಬೋಧನೆಗೂ ಇಷ್ಟಿಷ್ಟೂ ಹೊಂದಾಣಿಕೆಯಾಗದವು; ಅಲ್ಲದೆ ಸುವಾರ್ತೆಯಲ್ಲಿನ ಅನೇಕ ಆಣತಿಗಳಿಗೆ ಅವು ಭಂಗ ತರುವಂಥವು. ಬುದ್ಧಿಪೂರ್ವಕವಾಗಿ ಕ್ರಿಶ್ಚಿಯನ್ ಮತವನ್ನು ಸ್ವೀಕರಿಸಿದ ವಯಸ್ಕರ ಸ್ನಾನದೀಕ್ಷೆಗೆ ಇರಬಹುದಾದ ಅರ್ಥವನ್ನು ಪೂರ್ಣವಾಗಿ ವಿಕಾರಗೊಳಿಸಿರುವುದು ಮಕ್ಕಳ ಸ್ನಾನದೀಕ್ಷೆಯಲ್ಲಿ ಕಾಣುತ್ತದೆ. ವಿವಾಹ ಪೂರ್ವದಲ್ಲೆ ಲೈಂಗಿಕ ಸಂಬಂಧಗಳನ್ನಿಟ್ಟುಕೊಂಡಿದ್ದರೆಂದು ಗೊತ್ತಿರುವ ಜನರಿಗೆ ವಿವಾಹ ಸಂಸ್ಕಾರವನ್ನು ನೀಡುವುದು, ವಿವಾಹ ವಿಚ್ಛೇದನಕ್ಕೆ ಅನುಮತಿ ಕೊಡುವುದು, ವಿವಾಹ ವಿಚ್ಛೇದಿತರ ವಿವಾಹವನ್ನು ವಿಧಿಪೂರ್ವಕವಾಗಿ ನಡೆಸುವುದು – ಇವರಲ್ಲಿ ಸುವಾರ್ತೆಯ ಮಾತುಗಳ ಹಾಗೂ ಅರ್ಥದ ನೇರ ಉಲ್ಲಂಘನೆ ಕಾಣುತ್ತದೆ.

ನಿಯತಕಾಲದಲ್ಲಿ ನಡೆಯುವ ಪಾಪನಿವೇದನೆ ಜನರ ಅನೈತಿಕತೆಯನ್ನು ಪ್ರೋತ್ಸಾಹಿಸಿ, ಪಾಪದ ಭಯವನ್ನು ಕಳೆದು ಬಿಡುತ್ತದೆ; ಅದೊಂದು ಅಪಾಯಕರವಾದ ಮೋಸ.

ಅಂತ್ಯಾಭ್ಯಂಜನ ಹಾಗೂ ಎಣ್ಣೆಯೊತ್ತುವುದರಲ್ಲಿ ಅಸಂಸ್ಕೃತ ಮಾಟದ ಕ್ರಮಾನುಸರಣೆಗಳಿವೆ. ಪ್ರತಿಮೆಗಳ ಪೂಜ್ಯ ಅವಶೇಷಗಳ ಉಪಾಸನೆಯಲ್ಲಿ, ಪ್ರಾರ್ಥನಾಗ್ರಂಥವನ್ನು ತುಂಬಿರುವ ಎಲ್ಲ ವಿಧಿ, ಪ್ರಾರ್ಥನೆ ಹಾಗೂ ಉಚ್ಚಾಟನ ಮಂತ್ರಗಳಲ್ಲಿ ಈ ಮಾಟದ ಅಂಶ ಇದೆ. ಪ್ರಭು ಭೋಜನ ಸಂಸ್ಕಾರದಲ್ಲಿ ದೇಹವನ್ನು ದೇವರಾಗಿಸಿ, ಕ್ರಿಶ್ಚಿಯನ್ ಬೋಧೆಯನ್ನು ವಿಕೃತಗೊಳಿಸಿರುವುದು ಕಾಣುತ್ತದೆ. ಯಾರೂ ಯಾರನ್ನೂ ಗುರು, ತಂದೆ, ಅಥವ ಯಜಮಾನ ಎನ್ನುವುದನ್ನು ಸ್ಪಷ್ಟವಾಗಿ ಕೂಡದೆಂದಿರುವ

ಕ್ರಿಸ್ತವಾಣಿಯನ್ನು ದೀಕ್ಷಾಕ್ರಮ (ಮೋಸಮಾಡುವುದಕ್ಕೆ ನಡೆಯುವ ಸಿದ್ಧತೆ) ನೇರವಾಗಿ ಉಲ್ಲಂಘಿಸುತ್ತದೆ.[2]

ಅಂತಿಮವಾಗಿ ನಾನು ಮಾಡಿರುವ ಮಹಾಪಾಪ ಇದು ಎಂದು ಹೇಳಲಾಗಿದೆ: 'ಸಾಂಪ್ರದಾಯಿಕ ಜನತೆಯ ಪರಮ ಪವಿತ್ರ ಧಾರ್ಮಿಕ ವಸ್ತುಗಳನ್ನು ಹೀಗಳೆಯುವುದರ ಜೊತೆಗೆ, ದೀಕ್ಷೆಗಳಲ್ಲಿ ಪರಮೋನ್ನತವಾದ ಪ್ರಭು ಸಂಸ್ಕಾರ ದೀಕ್ಷೆಯನ್ನು[3] ಗೇಲಿ ಮಾಡುವುದಕ್ಕೂ ಈತ ಹಿಂಜರಿದಿಲ್ಲ'. ಈ ದೀಕ್ಷೆಯನ್ನು ನಡೆಸುವಾಗ ಪೂಜಾರಿ ಏನೇನು ಮಾಡುತ್ತಾನೆ ಎನ್ನುವುದನ್ನು ಸರಳವಾಗಿ, ವಸ್ತುನಿಷ್ಠವಾಗಿ ವಿವರಿಸಲು ನಾನು ಹಿಂಜರಿಯಲಿಲ್ಲ ಎನ್ನುವುದು ದಿಟ. ಆದರೆ ಈ ದೀಕ್ಷೆ ಪವಿತ್ರವಾದದ್ದು, ಅದು ಹೇಗೆ ನಡೆಯುತ್ತದೋ ಹಾಗೆ ಅದನ್ನು ಸರಳವಾಗಿ ವಿವರಿಸುವುದು – ಪಾಷಂಡತನ ಎನ್ನುವುದು ಅಸತ್ಯದ ಮಾತು. ಅಡ್ಡತಡಿಕೆಯನ್ನು ಅಡ್ಡತಡಿಕೆ ಎನ್ನದೆ ಪವಿತ್ರ ಅಂತರಪಟ,[4] ಬಟ್ಟಲನ್ನು ಬಟ್ಟಲು ಎನ್ನದೆ ಮಧುಕಲಶ ಎಂದು ಕರೆಯದಿದ್ದರೆ 'ಪಾಷಂಡತನ' ಎನ್ನುವುದು ಸರಿಯಲ್ಲ. ಆದರೆ ಮಕ್ಕಳನ್ನೂ ಸರಳಬುದ್ಧಿಯ ಜನರನ್ನೂ (ಮೋಸದ, ಮೋಹಿನಿ ವಿದ್ಯೆಯ ಎಲ್ಲ ಸಾಧನಗಳನ್ನೂ ಬಳಸಿ) ಪ್ರಭುದೀಕ್ಷೆಯ ಹೆಸರಿನಲ್ಲಿ, ವಂಚಿಸುವುದು ಅತ್ಯಂತ ಭಯಂಕರವಾದ, ಹೇಯಕರವಾದ ಧರ್ಮದೂಷಣೆ. ಕೆಲವು ಶಬ್ದಗಳನ್ನು ಉಚ್ಚರಿಸುತ್ತಿದ್ದಾಗ ಒಂದು ಗೊತ್ತಾದ ರೀತಿಯಲ್ಲಿ ಬ್ರೆಡ್ ಅನ್ನು ಮುರಿದು; ಮದ್ಯದ ಬಟ್ಟಲಿನಲ್ಲಿ ಹಾಕಿದರೆ,[5] ದೇವರು ಈ ಬ್ರೆಡ್ಡಿನ ಚೂರುಗಳಲ್ಲಿ ಪ್ರತ್ಯಕ್ಷನಾಗುತ್ತಾನೆ, ಪೂಜಾರಿ ಯಾರ ಹೆಸರು ಹಿಡಿದು ಕೂಗಿ ಒಂದು ತುಣುಕನ್ನು ತೆಗೆಯುತ್ತಾನೋ ಆ ಮನುಷ್ಯ ಆರೋಗ್ಯ ದೃಢಕಾಯನಾಗಿರುತ್ತಾನೆ; ಮತ್ತು ಯಾರಾದರೂ ಸತ್ತವರ

---

[2] ಆದರೆ ನೀವು ಗುರು ಎಂದು ಕರೆಸಿಕೊಳ್ಳಬೇಡಿ : ನಿಮಗಿರುವ ಯಜಮಾನ ಒಬ್ಬನೆ; ಉಳಿದವರೆಲ್ಲ ನಿಮ್ಮ ಸಹೋದರರು. ಈ ನೆಲದ ಮೇಲಿರುವ ಯಾರನ್ನೂ ತಂದೆ ಎಂದು ಕರೆಯಬೇಡಿ; ನಿಮ್ಮ ತಂದೆ ಇರುವುದು ದೇವಲೋಕದಲ್ಲಿ, ಅವನು ಒಬ್ಬನೆ. ಯಜಮಾನರೆಂದೂ ಕರೆಸಿಕೊಳ್ಳಬೇಡಿ; ನಿಮ್ಮ ಯಜಮಾನ ಒಬ್ಬನೆ, ಅವನೇ ಕ್ರಿಸ್ತ –ಮ್ಯಾಥ್ಯೂಸ್ xxiii. 8–10.

[3] **ಪುನರುತ್ಥಾನದ** ಪುಸ್ತಕ i, ಅಧ್ಯಾಯ xxxix ನೋಡಿ. ಹಾಗೆ, ಟಾಲ್‌ಸ್ಟಾಯ್ ಅನ್ನು ಬಹಿಷ್ಕರಿಸಲು ಕಾರಣವಾಗಿರಬಹುದಾದ ಪವಿತ್ರ ಮತೀಯ ಪ್ರತಿನಿಧಿಗಳ ಗುರುವಿನ ವರ್ಣನೆಯನ್ನು ಅಧ್ಯಾಯ xxvii, ಪುಸ್ತಕ ii ದಲ್ಲಿ ನೋಡಿ.

[4] ರುಸ್ಸೊ–ಗ್ರೀಕ್ ಚರ್ಚ್ ಅಂತರಪಟ ಪಾಶ್ಚಿಮಾತ್ಯ ಶಿಲುಬೆ–ತೆರೆ ಮತ್ತು ಬಲಿಪೀಠದ ಕಂಬಸಾಲಿನಂಥದು.

[5] ಗ್ರೀಕ್ ಚರ್ಚ್‌ನಲ್ಲಿ ಸಂಸ್ಕಾರಿಕ ಬ್ರೆಡ್ ಅನ್ನು ಪ್ರಭು ಸಂಸ್ಕಾರ ದೀಕ್ಷೆ ಪಡೆಯುವವನಿಗೆ ಕೊಡುವುದಕ್ಕೆ ಮುಂಚೆ ಮದ್ಯದಲ್ಲಿ ಅದ್ದುತ್ತಾರೆ. ಈ ಲೇಖನದಲ್ಲಿ ಹೆಸರಿಸಿರುವ ಅನೇಕ ಆಚರಣೆಗಳು ( ಸ್ನಾನ ದೀಕ್ಷೆ. ಅಂತ್ಯಮಜ್ಜನ ಇತ್ಯಾದಿ) ಇಂಗ್ಲೆಂಡಿನ ಚರ್ಚ್‌ನಲ್ಲಿ ಇಲ್ಲ. ಅಥವಾ ಬೇರೆ ರೀತಿಯಲ್ಲಿ ಆಚರಿಸಲ್ಪಡುತ್ತವೆ.

ಹೆಸರು ಹಿಡಿದು ಕೂಗಿ ಒಂದು ತುಣುಕನ್ನು ತೆಗೆದರೆ ಅವನು ಪರಲೋಕದಲ್ಲಿ ಸುಖಿ ವಾಗಿರುತ್ತಾನೆ; ಯಾರು ಈ ಒಂದು ತುಣುಕನ್ನು ತಿನ್ನುತ್ತಾನೋ ಅವನಲ್ಲಿ ದೇವರೆ ಪ್ರತ್ಯಕ್ಷವಾಗುತ್ತಾನೆ ಎಂದು ಮಕ್ಕಳಿಗೂ ಸರಳ ಮನುಸ್ಸಿನ ಜನರಿಗೂ ಆಶ್ವಾಸನೆ ಕೊಡುವುದಿದೆಯಲ್ಲ ಅದು ಪಾಷಂಡತನ.

ನಿಜವಾಗಿಯೂ ಇದು ಭಯಂಕರವಾದದ್ದು!

ಕ್ರಿಸ್ತನ ವ್ಯಕ್ತಿತ್ವವನ್ನು ನಮಗೆ ಅರ್ಥಮಾಡಿಸಲು ಅವರು ಹೊರಟಿದ್ದಾರೆ; ಆದರೆ ಇಲ್ಲಿ ಅವನ ಬೋಧನೆಯಷ್ಟೂ ಮಾಯವಾಗಿದೆ; ಅದೆಲ್ಲ ಸ್ನಾನ, ಎಣ್ಣೆಮಜ್ಜನ, ಸಂಜ್ಞೆ, ಉಚ್ಚಾಟನೆ, ಬ್ರೆಡ್ಡಿನ ತುಣುಕು ತಿನ್ನುವುದು ಇತ್ಯಾದಿಗಳಲ್ಲಿ ಮಾಟ–ಮಂತ್ರದ ರೂಪತಾಳಿವೆ. ಹಾಗಾಗಿ ನಿಜವಾದ ಬೋಧನೆ, ದೌಷ್ಟ್ಯವನ್ನು ನಾಶಮಾಡುವ, ವಿಕೃತಗೊಳಿಸದಿದ್ದರೆ ಜನರನ್ನು ಸರಳವಾಗಿ, ಸುಲಭವಾಗಿ ರಕ್ಷಿಸುವ ಬೋಧನೆ ಅಲ್ಲಿ ಇಲ್ಲವೆ ಇಲ್ಲ. ಯಾರಾದರೂ ಯಾವಾಗಲಾದರೂ "ಕ್ರಿಸ್ತನ ತತ್ವಗಳಿರು ವುದು ಈ ಮಾಟ–ಮಂತ್ರ, ಬಹಿರಂಗ ಪ್ರಾರ್ಥನೆ, ಸಾರ್ವಜನಿಕ ಪೂಜಾ ವಿಧಾನ, ದೀಪಗಳು ಮತ್ತು ಪ್ರತಿಮೆಗಳಲ್ಲಿ ಅಲ್ಲ; ಅವಿರುವುದು ಪರಸ್ಪರ ಪ್ರೀತಿಯಲ್ಲಿ, ಕೇಡಿಗೆ ಕೇಡನ್ನು ಹಿಂತಿರುಗಿಸದೆ ಇರುವುದರಲ್ಲಿ, ಒಬ್ಬರನ್ನೊಬ್ಬರು ಕೊಲ್ಲದಿರುವುದರಲ್ಲಿ, ಒಬ್ಬರ ಮೇಲೊಬ್ಬರು ತೀರ್ಪು ಕೊಡದೆ ಇರುವುದರಲ್ಲಿ" ಎಂದು ನೆನಸಿದರೆ ಸಾಕು! ಮೋಸ ಯಾರಿಗೆ ಲಾಭದಾಯಕವಾಗಿದೆಯೋ ಅವರ ಕೋಪ ಉರಿಯೇಳುತ್ತದೆ. ಅರ್ಥಕ್ಕೆ ಮೀರಿದ ಔದ್ಧಟ್ಯದಿಂದ ಅವರು ಚರ್ಚ್‌ಗಳಲ್ಲಿ, ಮತ್ತೆ ಗ್ರಂಥಗಳಲ್ಲಿ, ವರ್ತಮಾನ ಪತ್ರಿಕೆಗಳಲ್ಲಿ, ಪ್ರಶ್ನೋತ್ತರ ಪಾಠಗಳಲ್ಲಿ ಯೇಸುಕ್ರಿಸ್ತ ಆಣೆ ಇಟ್ಟುಕೊಳ್ಳುವುದನ್ನು (ನಿಷ್ಠೆ ಯನ್ನು ಸಾರುವಾಗ ಹಾಗೂ ನ್ಯಾಯಾಲಯದಲ್ಲಿ ಪ್ರಮಾಣ ಮಾಡುವಾಗ) ನಿಷೇಧಿಸಿಲ್ಲ, ಕೊಲೆಮಾಡುವುದನ್ನು ನಿಷೇಧಿಸಿಲ್ಲ (ಗಲ್ಲಿಗೇರಿಸುವಾಗ ಹಾಗೂ ಯುದ್ಧಗಳಲ್ಲಿ) ಎಂದು ಬಹಿರಂಗವಾಗಿ ಘೋಷಿಸುತ್ತಾರೆ. ಸೈತಾನನಷ್ಟೆ ಚಾತುರ್ಯದಿಂದ 'ದುಷ್ಟತನವನ್ನು, ಎದುರಿಸಬಾರದು' ಎನ್ನುವ ಈ ಜನರು ಕ್ರಿಸ್ತನ ಶತ್ರುಗಳು. [6]

ವಂಚನೆ ಯಾರಿಗೆ ಲಾಭದಾಯಕವೋ ಅವರು ಕೇವಲ ವಯಸ್ಕರನ್ನು ಮಾತ್ರ ಮೋಸಗೊಳಿಸುವುದಿಲ್ಲ; ಅವರು ಮಕ್ಕಳನ್ನೂ, – ಮಕ್ಕಳನ್ನು ಮೋಸ ಮಾಡಿದವರಿಗೆ ದುಃಖ ಕಟ್ಟಿಟ್ಟಿದ್ದು ಎಂದು ಯೇಸು ಹೇಳಿದ ಮಕ್ಕಳನ್ನು – ಮೋಸಮಾಡುತ್ತಾರೆ. ಇದು ಅತ್ಯಂತ ಭಯಂಕರವಾದದ್ದು. ಯೇಸುಕ್ರಿಸ್ತ ತೋರಿಸಿಕೊಟ್ಟ ಸತ್ಯವನ್ನು ಇವರು ತಮ್ಮ ಅಲ್ಪ ಲಾಭಕ್ಕಾಗಿ ಜನದ ಕಣ್ಣಿಂದ ಮರೆಮಾಚಿಸುವಂಥ ಭಯಂಕರ ಪಾಪಕಾರ್ಯ ಮಾಡಿದ್ದಾರೆ; ಆ ಸತ್ಯ ಇವರು ಗಳಿಸಿಕೊಳ್ಳುವ ಲಾಭಕ್ಕಿಂತ ಸಾವಿರ ಪಾಲು

---

6 ಕಾರ್ಕೊವಿನ ಬಿಷಪ್, ಆ್ಯಂಬ್ರೊಸಿಯುಸ್‌ನ ಭಾಷಣ. – ಲಿಯೊ ಟಾಲ್‌ಸ್ಟಾಯ್

ಹೆಚ್ಚಿನ ಒಳಿತನ್ನು ಮಾಡುತ್ತದೆ. ಒಂದು ಹಳೆಯ ಕೋಟು, ಹತ್ತು ಕಾಸನ್ನು ಕೊಂಡು ಹೋಗುವುದಕ್ಕೋಸ್ಕರ ಐದಾರು ಜನದ ಒಂದು ಇಡೀ ಸಂಸಾರವನ್ನು ಕೊಲ್ಲುವ ದರೋಡೆಕಾರನಂತೆ ಇವರು ವರ್ತಿಸುತ್ತಿದ್ದಾರೆ. ಪ್ರಾಣ ಉಳಿಸಿದ್ದಿದ್ದರೆ ಅವರು ತಮ್ಮೆಲ್ಲ ಬಟ್ಟೆಗಳನ್ನೂ ಹಣವನ್ನೂ ಕೊಡುತ್ತಿದ್ದರು; ಆದರೆ ಅವನು ಬೇರೆ ರೀತಿಯಲ್ಲಿ ವರ್ತಿಸಲು ಕಲಿತಿಲ್ಲ.

ಧರ್ಮವಂಚಕರೂ ಹಾಗೆ. ತಮ್ಮ ಮೋಸಗಳಿಂದ ಜನರನ್ನು ಹಾಳುಮಾಡದೆ ಇರುವಂತಿದ್ದರೆ ಈಗಿರುವುದಕ್ಕಿಂತ ಹತ್ತು ಪಟ್ಟು ಸುಖವಾಗಿ, ಅತ್ಯಂತ ವೈಭವದಲ್ಲಿ ಇವರನ್ನು ಇಡಬಹುದು. ಆದರೆ ಇವರು ಬೇರೆ ರೀತಿಯಲ್ಲಿ ವರ್ತಿಸಲಾರರು. ಅದೇ ಅತಿ ಭಯಂಕರವಾದದ್ದು. ಆದ್ದರಿಂದಲೆ ನಾವು ಅವರ ಮೋಸದ ಮುಖವಾಡವನ್ನು ಕಿತ್ತುಹಾಕಬೇಕು. ಏನಾದರೂ ಪವಿತ್ರ ಎನ್ನುವುದಿದ್ದರೆ ಅದು ಅವರು ಹೇಳುವ ಮತ ಸಂಸ್ಕಾರಗಳಲ್ಲ; ಅವರ ಧರ್ಮ ವಂಚನೆ ಪತ್ತೆಯಾದಾಗೆಲ್ಲ ಅದಕ್ಕಿರುವ ಸೋಗಿನ ಮುಖವಾಡವನ್ನು ಕಿತ್ತೆಸೆಯುವ ಕರ್ತವ್ಯ ಇದೆಯಲ್ಲ ಅದೇ ಪವಿತ್ರವಾದದ್ದು.

ಜುವಾಷ್ ಒಬ್ಬ ತನ್ನ ದೇವರ ಪ್ರತಿಮೆಗೆ ಹುಳಿ ಮೊಸರನ್ನು ಮೆತ್ತಿದರೆ ಅಥವ ಅದನ್ನು ಹೊಡೆದರೆ ನಾನು ಅವನ ಧರ್ಮಕ್ಕೆ ಯಾವ ಅಪಮಾನವನ್ನು ಮಾಡದೆ ಶಾಂತತೆಯಿಂದ ಸುಮ್ಮನಿರಬಲ್ಲೆ. ಏಕೆಂದರೆ ನನಗೆ ಅಪರಿಚಿತವಾದ ಯಾವುದೋ ಅಂಧಶ್ರದ್ಧೆಯಲ್ಲಿ ಇವನ್ನೆಲ್ಲ ಮಾಡುತ್ತಾನೆ; ಅಲ್ಲದೆ, ನನಗೆ ಯಾವುದು ಪವಿತ್ರವೋ ಅದರ ಗೊಡವೆಗೆ ಅವನು ಬರುವುದಿಲ್ಲ. ಆದರೆ ನಾನು ಯಾವ ದೇವರ ಬಲದಿಂದ ಬದುಕಿದ್ದೇನೊ, ಯಾವ ಕ್ರಿಸ್ತನ ಬೋಧೆ ನನಗೆ ಜೀವ ಕೊಟ್ಟಿದೆಯೋ, ನನ್ನಂತೆ ಉಳಿದವರೆಲ್ಲರಿಗೂ ಕೊಡಬಲ್ಲದೋ ಅದರ ಹೆಸರಿನಲ್ಲಿ, ರೂಕ್ಷ ಕುರುಡು ನಂಬಿಕೆಗಳನ್ನೂ ಅಸಹ್ಯವಾದ ಯಕ್ಷಿಣೀ ವಿದ್ಯೆಯನ್ನೂ ಪ್ರಚಾರ ಮಾಡಿದರೆ ನಾನು ತೆಪ್ಪಗಿರಲಾರೆ; ಪೂಜಾರಿಗಳು ಮಾಡುತ್ತಿರುವುದು ಇದೇ ಕೆಲಸವನ್ನು.

ಅವರು ಮಾಡುತ್ತಿರುವುದನ್ನು ನಾನು ಮುಚ್ಚುಮರೆಯಿಲ್ಲದೆ ಹೇಳುತ್ತಿದ್ದೇನೆ; ಹಾಗೆ ಹೇಳುವುದು ನನ್ನ ಕರ್ತವ್ಯ; ದೇವರಲ್ಲೂ ಕ್ರಿಶ್ಚಿಯನ್ ಬೋಧನೆಯಲ್ಲೂ ನಂಬಿಕೆಯಿಟ್ಟಿರುವ ನಾನು ಹಾಗೆ ಹೇಳದೆ ಸುಮ್ಮನಿರಲಾರೆ. ಅವರ ವಂಚನೆಯನ್ನು ನಾನು ಬಯಲು ಮಾಡಿದರೆ ಅದನ್ನು 'ಪಾಷಂಡತನ' ಎನ್ನುತ್ತಾರೆ; ಇದು ಅವರ ಮೋಸ ಎಷ್ಟು ಗಾಢವಾದದ್ದು ಎಂದು ತೋರುತ್ತದೆ. ಯಾರು ದೇವರಲ್ಲೂ ಕ್ರಿಸ್ತನ ಬೋಧನೆಯಲ್ಲೂ ನಂಬಿಕೆಯಿಟ್ಟಿದ್ದಾರೋ ಅವರೆಲ್ಲ ಈ ಮೋಸವನ್ನು ಬಯಲಿಗೆಳೆಯಲು ಇನ್ನೂ ಹೆಚ್ಚಿನ ಪ್ರಯತ್ನ ಮಾಡಬೇಕು. ಈ ಮೋಸ ನಿಜವಾದ ದೇವರನ್ನು ಜನರ ಕಣ್ಣಿಂದ ಮರೆಸಿದೆ ಎನ್ನುವುದನ್ನು ತಿಳಿಯಪಡಿಸಬೇಕು.

ಗೂಳಿಗಳನ್ನೂ ಕುರಿಗಳನ್ನೂ ವ್ಯಾಪಾರಿಗಳನ್ನೂ ಕ್ರಿಸ್ತ ದೇವಸ್ಥಾನದಿಂದ ಹೊರಗೆ ಓಡಿಸಿದ: ಈ ಜನ ಅದನ್ನೂ ಪಾಷಂಡತನ ಎನ್ನುತ್ತಾರೇನೊ? ಅವನೇನಾದರೂ

ಈಗ ಬಂದು ತನ್ನ ಹೆಸರಿನಲ್ಲಿ ಚರ್ಚುಗಳಲ್ಲಿ ನಡೆಯುತ್ತಿರುವುದನ್ನು ನೋಡಿದರೆ ಸಕಾರಣವೂ ಇನ್ನೂ ಭಯಂಕರವೂ ಆದ ಕೋಪದಿಂದ ಅಸಹ್ಯಕರವಾದ ಈ ಬಲಿಪೀಠದ ವಸ್ತುಗಳು,[7] ಭಲ್ಲೆಗಳು, ಶಿಲುಬೆಗಳು. ಪಾನಪಾತ್ರೆಗಳು, ಮೇಣದ ಬತ್ತಿಗಳು. ಪ್ರತಿಮೆಗಳು ಮತ್ತೆ ಇಂಥ ಅನೇಕ ವಸ್ತುಗಳನ್ನು ಅವನು ಹೊರಕ್ಕೆ ಬಿಸಾಡುವುದು ಖಂಡಿತ. ಇವುಗಳ ಸಹಾಯದಿಂದಲೇ ಪೂಜಾರಿಗಳು ತಮ್ಮ ಯಕ್ಷಿಣಿ ವಿದ್ಯೆಯನ್ನು ನಡೆಸಿ, ಮಾನವತೆಯ ಕಣ್ಣಿಂದ ದೇವರನ್ನೂ ಅವನ ಸತ್ಯವನ್ನೂ ಮರೆಸಿ ಹಾಕಿರುವುದು.

ಇದು ಮಠೀಯ ಪ್ರತಿನಿಧಿಗಳ ಆಜ್ಞೆಯಲ್ಲಿ ನನ್ನ ಬಗ್ಗೆ ಇರುವ ಸತ್ಯ ಅಸತ್ಯಗಳ ವರದಿ. ಅವರು ಯಾವುದನ್ನು ತಾವು ನಂಬುತ್ತೇವೆ ಎನ್ನುತ್ತಾರೋ ಅದರಲ್ಲಿ ನನಗೆ ಖಂಡಿತವಾಗಿಯೂ ನಂಬಿಕೆಯಿಲ್ಲ.

ಇದು ನನ್ನ ನಂಬಿಕೆ: ನಾನು ದೇವರನ್ನು ನಂಬುತ್ತೇನೆ. ಅವನು ಚೈತನ್ಯ ಸ್ವರೂಪಿ, ಪ್ರೇಮಮಯಿ. ಎಲ್ಲದರ ಆದಿಕಾರಣ; ನಾನು ಅವನನ್ನು ತಿಳಿದಿರುವುದು ಹೀಗೆ. ಅವನು ನನ್ನೊಳಗೆ ಇದ್ದಾನೆ ನಾನು ಅವನೊಳಗೆ ಇದ್ದೇನೆ ಎಂದು ನಾನು ನಂಬುತ್ತೇನೆ. ದೈವೇಚ್ಛೆ ಎನ್ನುವುದು ಮನುಷ್ಯನಾದ ಯೇಸುಕ್ರಿಸ್ತನ ಬೋಧನೆಯಲ್ಲಿ ಅತ್ಯಂತ ಸ್ಪಷ್ಟವಾಗಿ ಎಲ್ಲರೂ ತಿಳಿಯಬಲ್ಲಂತೆ ನಿರೂಪಿತವಾಗಿದೆ. ಯೇಸುವನ್ನು ದೇವರು ಎನ್ನುವುದೂ ಅವನನ್ನು ಪ್ರಾರ್ಥಿಸುವುದೂ ನನ್ನ ಪ್ರಕಾರ ಪಾಷಂಡತನ. ಮನುಷ್ಯನ ನಿಜವಾದ ಯೋಗಕ್ಷೇಮವಿರುವುದು ದೈವೇಚ್ಛೆಯನ್ನು ಪೂರ್ಣಗೊಳಿಸುವುದರಲ್ಲಿ; ಮನುಷ್ಯರು ಒಬ್ಬರನ್ನೊಬ್ಬರು ಪ್ರೀತಿಸಬೇಕು, ತಮ್ಮ ಬಗ್ಗೆ ಇತರರು ಹೇಗೆ ನಡೆದು ಕೊಳ್ಳಬೇಕೆಂದು ಬಯಸುತ್ತಾರೋ ಅದೇ ರೀತಿಯಲ್ಲಿ ಅವರು ಇತರರ ಬಗ್ಗೆ ನಡೆದು ಕೊಳ್ಳಬೇಕು ಎನ್ನುವುದು ಅವನ ಇಚ್ಛೆ. ಇದೇ ಧರ್ಮ, ಇದೇ ಪ್ರವಾದಿಗಳ ದಾರಿ ಎಂದು ಸುವಾರ್ತೆ ಹೇಳುತ್ತದೆ. ಆದ್ದರಿಂದ ಪ್ರತಿಯೊಬ್ಬನ ಜೀವನದ ಅರ್ಥ ಇರುವುದು ಅವನಲ್ಲಿನ ಪ್ರೇಮವನ್ನು ಹಿಗ್ಗಿಸಿಕೊಳ್ಳುವುದರಲ್ಲಿ ಎಂದು ನಾನು ನಂಬುತ್ತೇನೆ. ಈ ಹಿಗ್ಗಿದ ಪ್ರೇಮ ಈ ನೆಲದ ಬಾಳಿನಲ್ಲೇ ಮನುಷ್ಯನ ಸುಖವನ್ನೂ ಹೆಚ್ಚಿಸುತ್ತದೆ ಮರಣಾನಂತರ ಪ್ರೇಮಪಾತ್ರಕ್ಕೆ ಅನುಗುಣವಾಗಿ ಅವನು ಸುಖವನ್ನು ಹೊಂದುತ್ತಾನೆ; ಈ ನೆಲದ ಮೇಲೆ ಸ್ವರ್ಗಸಾಮ್ರಾಜ್ಯವನ್ನು ಸ್ಥಾಪಿಸಲು ಇದಕ್ಕಿಂತ ಯಾವುದೂ ಹೆಚ್ಚಿಗೆ ಸಹಾಯಮಾಡಲಾರದು: ಸ್ವರ್ಗ ಸಾಮ್ರಾಜ್ಯ ಎಂದರೆ ಈಗ ನಿರಂಕುಶವಾಗಿ ಆಳುತ್ತಿರುವ ವೈಮನಸ್ಯ, ವಂಚನೆ ಹಾಗೂ ಆಸೆಗಳ ಸ್ಥಾನದಲ್ಲಿ ಅನಿರ್ಬಾಧಿತವಾದ ಒಮ್ಮತ,

---

[7] ಇಲ್ಲಿ ಹೇಳಿರುವ ಬಲಿಪೀಠದ ವಸ್ತ್ರಗಳನ್ನು ಪವಿತ್ರ ಅವಶೇಷಗಳ ಮೇಲೆ ಹೊದ್ದಿಸಿರುತ್ತಾರೆ; ಪ್ರಭುಭೋಜನ ವಿಧಿಯನ್ನೂ ಇದಿಲ್ಲದೆ ಆಚರಿಸುವಂತಿಲ್ಲ. 'ಭಲೆ'ಗಳು ಚಿಕ್ಕ ಆಕಾರದವು. ಕ್ರಿಸ್ತನ ಪಕ್ಕೆಯನ್ನು ಭೇದಿಸಿದ ನೆನಪಿನಲ್ಲಿ ಪೂಜಾರಿ ಈ ಭಲ್ಲೆಯಿಂದ ಪವಿತ್ರ ಬ್ರೆಡ್ ಅನ್ನು ಚೂರು ಮಾಡುತ್ತಾನೆ.

ಸತ್ಯ ಹಾಗೂ ಭ್ರಾತೃ ಪ್ರೇಮಗಳು ನೆಲೆಸುವ ಜೀವನವ್ಯವಸ್ಥೆ. ನಮ್ಮಲ್ಲಿರುವ ಪ್ರೇಮ ಬೆಳೆಯಬೇಕಾದರೆ ಅದಕ್ಕೆ ಇರುವುದು ಒಂದೇ ಮಾರ್ಗ: ಪ್ರಾರ್ಥನೆ. ಆದರೆ ಯೇಸುಕ್ರಿಸ್ತ ನಿಷೇಧಿಸಿರುವ ಚರ್ಚುಗಳಲ್ಲಿ ನಡೆಯುವ ಬಹಿರಂಗ ಪ್ರಾರ್ಥನೆ ಅಲ್ಲ; ಯೇಸು ತೋರಿಸಿರುವಂಥ ಏಕಾಂತ ಪ್ರಾರ್ಥನೆ.[8]

ನನ್ನ ನಂಬಿಕೆಗಳು ಅನೇಕರಲ್ಲಿ ಕೋಪವನ್ನೊ ದುಃಖವನ್ನೊ ಅಸಂತೋಷವನ್ನೊ ಉಂಟುಮಾಡಬಹುದು: ಅನೇಕರಿಗೆ ಇದು ಕಾಲ್ತೊಡಕಾಗಿರಬಹುದು, ನುಂಗಲಾರದ ತುತ್ತಾಗಿರಬಹುದು; ಆದರೆ ನನ್ನ ರೂಪವನ್ನು ನಾನು ಹೇಗೆ ಬದಲಿಸಿಕೊಳ್ಳಲಾರೆನೋ ಹಾಗೆ ಈ ನಂಬಿಕೆಗಳನ್ನೂ ಬದಲಿಸಿಕೊಳ್ಳಲಾರೆ. ನನ್ನ ಬದುಕನ್ನು ನಾನೆ ಬಾಳಬೇಕು; ಮತ್ತೆ ನನ್ನ ಸಾವನ್ನು (ಅದೇನು ತುಂಬ ದೂರ ಇಲ್ಲ) ನಾನೊಬ್ಬನೇ ಒಂಟಿಯಾಗಿ ಎದುರಿಸಬೇಕು. ಆದ್ದರಿಂದ ಈಗ, ಯಾವ ಈಶ್ವರೇಚ್ಛೆಯಿಂದ ಬಂದೆನೋ ಅಲ್ಲಿಗೆ ವಾಪಸ್ಸಾಗಲು ಸಿದ್ಧನಾಗುತ್ತಿರುವಾಗ, ನಾನು ನಂಬಿರುವುದಕ್ಕಿಂತ ಬೇರೆ ರೀತಿಯಲ್ಲಿ ನಂಬಲಾರೆ. ನನ್ನ ಧರ್ಮವೆ ಎಲ್ಲ ಕಾಲಕ್ಕೂ ನಿರ್ವಿವಾದವಾದಿ ಸತ್ಯವಾದದ್ದು ಎಂದೇನೂ ನಾನು ತಿಳಿದಿಲ್ಲ; ಆದರೆ ನನ್ನ ಹೃದಯ–ಬುದ್ಧಿಗಳಿಗೆ ಇದಕ್ಕಿಂತ ಚೊಕ್ಕವಾಗಿ ಹಿಡಿಸುವ, ಇದಕ್ಕಿಂತ ಸರಳವೂ ಸ್ಪಷ್ಟವೂ ಆದ ಧರ್ಮ ನನಗೆ ಕಾಣುತ್ತಿಲ್ಲ. ಅಂಥ ದೇನಾದರೂ ಕಂಡರೆ ನಾನು ಅದನ್ನು ಕೂಡಲೆ ಒಪ್ಪಿಕೊಳ್ಳುತ್ತೇನೆ: ಯಾಕೆಂದರೆ ಸತ್ಯವೊಂದೇ ದೇವರಿಗೆ ಪ್ರಿಯವಾದದ್ದು. ಆದರೆ ಮೊಟ್ಟೆಯಿಂದ ಹೊರಬಿದ್ದ ಗರಿಗೆದರಿ ಹಾರುವ ಹಕ್ಕಿ ಪುನಃ ಹೇಗೆ ಮೊಟ್ಟೆಯನ್ನು ಪ್ರವೇಶಿಸಲಾರದೊ ಅದೇ ರೀತಿಯಲ್ಲಿ ನಾನು ತುಂಬ ಯಾತನೆಯನ್ನು ಉಂಡು ಹೊರಬಂದಿರುವ ಮೊದಲ ನಂಬಿಕೆಗೆ ಹಿಂದಿರುಗಲಾರೆ.

'ಯಾರು ಸತ್ಯಕ್ಕಿಂತ ಹೆಚ್ಚಾಗಿ ಕ್ರೈಸ್ತ ಧರ್ಮವನ್ನು ಪ್ರೀತಿಸಲು ಶುರು ಮಾಡುತ್ತಾನೋ ಅವನು ಕ್ರೈಸ್ತಧರ್ಮಕ್ಕಿಂತ ಹೆಚ್ಚಾಗಿ ತನ್ನ ಪಂಗಡವನ್ನು ಅಥವ

---

8 'ಕಪಟಿಗಳು ಪ್ರಾರ್ಥನೆ ಮಾಡುವಂತೆ ನೀನು ಪ್ರಾರ್ಥಿಸಬೇಡ. ಜನರ ಕಣ್ಣಿಗೆ ಕಾಣಲಿ ಎಂದು ಆರಾಧನಾ ಮಂದಿರಗಳಲ್ಲಿ ರಸ್ತೆಯಂಚಿನಲ್ಲಿ ನಿಂತು ಪ್ರಾರ್ಥಿಸುವದು ಅವರಿಗೆ ಪ್ರಿಯವಾದದ್ದು; ನಾನು ಸತ್ಯವಾಗಿ ಹೇಳುತ್ತಿದ್ದೇನೆ: ಅವರಿಗೆ ಅವರ ಫಲ ದೊರೆಯುತ್ತದೆ. ಆದರೆ ನೀನು ಪ್ರಾರ್ಥಿಸುವಾಗ ರಹಸ್ಯವಾಗಿ, ಕೋಣೆಯ ಕದ ಹಾಕಿದ ಮೇಲೆ ನಿನ್ನ ತಂದೆಯನ್ನು ಪ್ರಾರ್ಥಿಸು; ರಹಸ್ಯವಾಗಿಯೆ ನಿನ್ನನ್ನು ಗಮನಿಸುವ ತಂದೆ ನಿನ್ನನು ಬಹಿರಂಗವಾಗಿ ಬಹುಮಾನಿಸುತ್ತಾನೆ. ಆದರೆ ಮಾಡುವಾಗ ವಿಧರ್ಮಿಗಳು ಮಾಡುವಂತೆ ವ್ಯರ್ಥ ಪುನರುಚ್ಚಾರಣೆಯಲ್ಲಿ ಕಾಲ ಕಳೆಯಬೇಡ: ಹೆಚ್ಚು ಮಾತಾಡಿದಷ್ಟು ದೇವರಿಗೆ ಹೆಚ್ಚು ಕೇಳಿಸುತ್ತದೆಂದು ಅವರು ತಿಳಿದಿದ್ದಾರೆ. ಆದ್ದರಿಂದ ನೀನು ಅವರ ಹಾಗೆ ಮಾಡಬೇಡ: ಯಾಕೆಂದರೆ ನೀನು ಕೇಳುವುದಕ್ಕೂ ಮುಂಚೆ, ನಿನಗೆ ಏನು ಬೇಕು ಎನ್ನುವುದು ನಿನ್ನ ತಂದೆಗೆ ಗೊತ್ತು. ನೀನು ಈ ರೀತಿಯಲ್ಲಿ ಪ್ರಾರ್ಥಿಸು: 'ನಮ್ಮ ತಂದೆ.' ಇಶಾ ದಿ_ಮ್ಯಾಥ್ಯೂಸ್. vi. 5-13 (ಏಪ್ರಿಲ್ 4. 1901)

ಚರ್ಚ್‌ನ್ನು ಪ್ರೀತಿಸಲು ಪ್ರಾರಂಭಿಸಿ, ಕಡೆಯಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ತನ್ನನ್ನೇ ಪ್ರೀತಿಸ ತೊಡಗುತ್ತಾನೆ' ಎಂದು ಕೋಲ್‌ರಿಜ್ ಹೇಳಿದ್ದಾನೆ.

ನಾನು ಇದಕ್ಕೆ ವಿರುದ್ಧ ದಿಕ್ಕಿನಲ್ಲಿ ಪ್ರಯಾಣ ಮಾಡಿದೆ. ನನ್ನ ಸಾಂಪ್ರದಾಯಿಕ ಧರ್ಮವನ್ನು ನನ್ನ ಮನಶ್ಶಾಂತಿಗೆ ಹೆಚ್ಚಾಗಿ ಪ್ರೀತಿಸಲು ಶುರುಮಾಡಿದೆ, ಅನಂತರ ನನ್ನ ಚರ್ಚ್‌ಗಿಂತ ಹೆಚ್ಚಾಗಿ ಕ್ರೈಸ್ತ ಧರ್ಮವನ್ನು ಪ್ರೀತಿಸತೊಡಗಿದೆ; ಆದರೆ ಈಗ ಪ್ರಪಂಚದಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ಸತ್ಯವನ್ನು ಪ್ರೀತಿಸುತ್ತೇನೆ. ನನಗೆ ಸತ್ಯ ಎಂದರೆ ನಾನು ಈವರೆಗೆ ಕ್ರೈಸ್ತ ಧರ್ಮವನ್ನು ಅರ್ಥ ಮಾಡಿಕೊಂಡಿರುವ ರೀತಿ, ಅಷ್ಟೆ. ನಾನು ನಂಬಿರುವುದು ಈ ಕ್ರೈಸ್ತ ಧರ್ಮವನ್ನು – ನಾನಿದರಲ್ಲಿ ಎಷ್ಟು ನಂಬಿಕೆಯಿಟ್ಟಿದ್ದೇನೋ ಅಷ್ಟರ ಮಟ್ಟಿಗೆ ನಾನು ಸುಖಿ, ನಾನು ಶಾಂತ; ಇದೇ ಸುಖ, ಇದೇ ಶಾಂತಿಗಳಿಂದ ಮೃತ್ಯುವನ್ನೂ ಸ್ವಾಗತಿಸುತ್ತೇನೆ.

# ಧರ್ಮ ಮತ್ತು ಅದರ ತಿರುಳು

ಎಲ್ಲ ಮಾನವ ಸಮುದಾಯಗಳಲ್ಲಿಯೂ ಒಂದೊಂದು ವೇಳೆ ಧರ್ಮ ತನ್ನ ಮೊದಲಿನ ಉದ್ದೇಶದಿಂದ ದೂರ ಸರಿದು, ಬರುಬರುತ್ತ ಆ ಉದ್ದೇಶವನ್ನೇ ಮರೆತು, ಕಡೆಗೆ ಕಂದಾಚಾರಗಳಲ್ಲಿ ಕಲ್ಲಾಗಿ ಉಳಿದುಬಿಡುತ್ತದೆ. ಆಗ ಜನರ ಬದುಕಿನ ಮೇಲೆ ಧರ್ಮದಿಂದ ಒದಗುವ ಪ್ರಭಾವ ಕಡಿಮೆಯಾಗುತ್ತಾ ಬರುತ್ತದೆ.

ಇಂಥ ಸಮಯದಲ್ಲಿ ವಿದ್ಯಾವಂತರಾದ ಅಲ್ಪಸಂಖ್ಯಾತರು ವ್ಯವಸ್ಥಿತವಾದ ಧಾರ್ಮಿಕ ಬೋಧೆಗಳಲ್ಲಿ ಶ್ರದ್ಧೆಯಿಡುವುದು ಕಷ್ಟವಾಗುತ್ತದೆ; ಆದರೂ ಅವನ್ನು ಅನುಸರಿಸುತ್ತಿರುವಂತೆ ತೋರಿಬರುತ್ತಾರೆ. ಕಾರಣವೆಂದರೆ ತಾವು ಹಾಗೆ ತೋರಿಸಿಕೊಳ್ಳುವುದು ಅಗತ್ಯವೆಂದು ಅವರ ವಿಶ್ವಾಸ. ತಮ್ಮ ತೋರಿಕೆಯಿಂದಾಗಿ ಬಹುಸಂಖ್ಯಾತರಾದ ಜನ ಸುವ್ಯವಸ್ಥಿತವಾದ ಜೀವನಕ್ರಮದಲ್ಲಿ ನಿಲ್ಲುತ್ತಾರೆಂದು ಅವರ ಎಣಿಕೆ. ಆದರೆ ಜನತೆ ವ್ಯವಸ್ಥಿತ ಧರ್ಮಕ್ಕೆ ಅಂಟಿಕೊಂಡಿರುವುದು ಆಲಸ್ಯದಿಂದ. ಧರ್ಮದ ಆದೇಶದಂತೆ ತಮ್ಮ ಬಾಳನ್ನು ರೂಪಿಸಿಕೊಳ್ಳುವುದಿಲ್ಲ; ಸಂಪ್ರದಾಯ, ಸಾಮಾಜಿಕ ನಿಯಮಗಳಷ್ಟೇ ಅವರ ಬಾಳನ್ನು ರೂಪಿಸುವುದು.

ಹಲವಾರು ಮಾನವ ಜನಾಂಗಗಳಲ್ಲಿ ಮತ್ತೆ ಮತ್ತೆ ಇದು ನಡೆದಿದೆ. ಆದರೆ ಇದೀಗ ಕ್ರೈಸ್ತಸಮಾಜದಲ್ಲಿ ನಡೆಯುತ್ತಿರುವುದು ಹಿಂದೆ ಎಂದೂ ನಡೆದಿರಲಿಲ್ಲ. ಜನತೆಯ ಮೇಲೆ ತುಂಬ ಪ್ರಭಾವ ಬೀರುವ ಸಿರಿವಂತರು, ಅಧಿಕಾರಿಗಳು, ವಿದ್ಯಾವಂತರು ಬಳಕೆಯಲ್ಲಿರುವ ಧರ್ಮದಲ್ಲಿ ಶ್ರದ್ಧೆಯನ್ನು ಕಳೆದುಕೊಂಡಿರುವುದು ಮಾತ್ರವಲ್ಲದೆ ಯಾವುದೇ ಧರ್ಮದ ಅಗತ್ಯವೇ ತಮಗಿಲ್ಲ ಎಂದುಕೊಂಡಿದ್ದಾರೆ. ಸಾಮಾನ್ಯವಾಗಿ ಜನ ಅನುಸರಿಸುವ ಧರ್ಮದ ವಿಚಾರದಲ್ಲಿ ಶಂಕೆತೋರಿದವರು ಬಳಕೆಯಲ್ಲಿರುವ ಬೋಧೆಗಿಂತ ಹೆಚ್ಚು ಸ್ಪಷ್ಟವೂ ವಿಚಾರಾರ್ಹವೂ ಆದ ಬೋಧೆಯನ್ನು ಒಪ್ಪಿಕೊಳ್ಳಬೇಕೆಂದು ಈ ಜನ ಪ್ರಭಾವ ಬೀರಬೇಕು. ಅದಕ್ಕೆ ಬದಲು ಇವರ ಪ್ರಭಾವದಿಂದಾಗಿ ಜನರಲ್ಲಿ ಸಾಮಾನ್ಯವಾಗಿ ಧರ್ಮವೆಂದರೆ ಹಳೆಯಕಾಲದ ಕಥೆ, ಇಂದು ಅದರ ಪ್ರಯೋಜನವಿರದು ಮಾತ್ರವಲ್ಲ—ಮನುಷ್ಯದೇಹದಲ್ಲಿ ಅಪೆಂಡಿಕ್ಸ್ ಇದ್ದಂತೆ—ಅಪಾಯಕಾರಿಯಾದ ಸಾಂಘಿಕ ಅಂಗವೂ ಹೌದು ಎನ್ನುವ ಭಾವನೆ ಬೆಳೆದಿದೆ.

ಈ ಜನಕ್ಕೆ ಧರ್ಮವೆಂದರೆ ಆಂತರಿಕ ಅನುಭವಕ್ಕೆ ಬರುವ ವಿಚಾರವಲ್ಲ, ಹೊರಗಿನ ಪ್ರಸಂಗ, ಜನರಿಗೆ ಘಟಿಸುವ ಮತ್ತು ಹೊರಚಿಹ್ನೆಗಳಿಂದ ತಿಳಿಯಬಹುದಾದ ಒಂದು ರೋಗ ಅಷ್ಟೆ.

ಇವರಲ್ಲಿ ಕೆಲವರ ಪ್ರಕಾರ, ಧರ್ಮವು ಆರಂಭವಾದುದು ಪ್ರಕೃತಿಯ ಬೇರೆ ಬೇರೆ ವಿಭಾಗಗಳಿಗೆ ಚೈತನ್ಯವನ್ನು ಆರೋಪಿಸುವ ಹವ್ಯಾಸದಿಂದ; ಇನ್ನು ಕೆಲವರ ಪ್ರಕಾರ ಅದು ಆರಂಭವಾದುದು ತೀರಿಕೊಂಡ ಪಿತೃಗಳೊಂದಿಗೆ ಸಂಪರ್ಕವನ್ನಿರಿಸಿಕೊಳ್ಳುವ ಬಯಕೆಯಿಂದ; ಮತ್ತೆ ಕೆಲವರ ಪ್ರಕಾರ, ಪ್ರಕೃತಿಯ ಶಕ್ತಿಗಳಿಂದ ಒದಗುವ ಭಯದಿಂದ. ನಮ್ಮ ಕಾಲದ ಪಂಡಿತರು ಹೀಗೆ ಹೇಳುತ್ತಾರೆ: ಮರ, ಕಲ್ಲು, ಇವಕ್ಕೆ ಚೈತನ್ಯವಿರದು ಎಂದು ವಿಜ್ಞಾನ ಸ್ಪಷ್ಟಪಡಿಸಿದೆ, ಬದುಕಿರುವವರು ಮಾಡುವುದನ್ನು ತೀರಿಕೊಂಡವರು ಅರಿಯರು, ಪ್ರಕೃತಿಯ ಪ್ರಸಂಗಗಳನ್ನು ಪ್ರಾಕೃತಿಕ ಕಾರಣಗಳಿಂದಲೇ ವಿವರಿಸಬಹುದು; ಆದುದರಿಂದ ಧರ್ಮದ ಅಗತ್ಯವೂ ಇಲ್ಲ, ಧಾರ್ಮಿಕ ನಂಬಿಕೆಗಳಿಂದ ಇಲ್ಲಿಯತನಕ ಜನ ತಮ್ಮನ್ನು ಕಟ್ಟುಕಟ್ಟಳೆಗಳಿಂದ ಬವಣೆಗೊಳಿಸಿಕೊಳ್ಳುತ್ತಿದ್ದಂತೆ ಬವಣೆಗೊಳಿಸಬೇಕಾದ ಅಗತ್ಯವೂ ಇಲ್ಲ. ಈ ಪಂಡಿತರ ಅಭಿಪ್ರಾಯದಂತೆ ಕತ್ತಲೆಯ ಕಾಲವೊಂದಿದ್ದಿತು. ಅದೇ ಧಾರ್ಮಿಕಯುಗ. ಮಾನವ ಅದನ್ನು ಹಿಂದೆಯೇ ಕೈಬಿಟ್ಟಿದ್ದಾನೆ; ಅಲ್ಲಲ್ಲಿ ಅವಶೇಷಗಳು ಉಳಿದಿವೆಯಷ್ಟೆ. ಇದಾದನಂತರ ಆಧ್ಯಾತ್ಮಿಕಯುಗ ಬಂದಿತು: ಅದರಿಂದಲೂ ನಾವು ಹೊರಬಂದಿದ್ದೇವೆ. ಜ್ಞಾನಿಗಳಾದ ನಾವಿರುವುದು ವಿಜ್ಞಾನ ಯುಗದಲ್ಲಿ. ಇಲ್ಲಿ ವಿಜ್ಞಾನವು ಧರ್ಮಕ್ಕೆ ಬದಲು ಕೆಲಸಮಾಡುತ್ತದೆ; ಧಾರ್ಮಿಕ ಅಂಧಶ್ರದ್ಧೆಗಳಿಗೆ ಬಲಿಯಾಗಿ ಮಾನವಕೋಟಿ ಯಾವ ಪ್ರಗತಿಯನ್ನು ಸಾಧಿಸಲು ಸಾಧ್ಯವಿರಲಿಲ್ಲವೋ ಅದನ್ನು ಸಾಧಿಸುವ ಸಾಧ್ಯತೆ ವಿಜ್ಞಾನಕ್ಕಿದೆ.

1901ರ ಆದಿಭಾಗದಲ್ಲಿ ಬೆರ್ತೆಲೊ ಎಂಬ ಫ್ರೆಂಚ್ ವಿದ್ವಾಂಸ ಒಂದು ಭಾಷಣವನ್ನು ಮಾಡಿದ; ಅದರಲ್ಲಿ ಧರ್ಮದ ಯುಗ ಕಳೆಯಿತೆಂದೂ, ಧರ್ಮಕ್ಕೆ ಬದಲು ವಿಜ್ಞಾನ ಬಂದಿದೆಯೆಂದೂ ತಿಳಿಸಿದ. ನಾನು ಈ ಭಾಷಣವನ್ನು ಪ್ರಸ್ತಾಪಿಸುತ್ತಿರುವುದು ನನ್ನ ಕೈಗೆ ಬಂದ ಸಾಮಗ್ರಿಗಳಲ್ಲಿ ಅದೇ ಮೊದಲನೆಯದೆಂಬ ಕಾರಣದಿಂದ; ವಿಶ್ವವಿಖ್ಯಾತ ನಾದ ವಿದ್ವಾಂಸನೊಬ್ಬನು ಸಭ್ಯ ಜನಾಂಗದ ಕೇಂದ್ರಸ್ಥಾನದಲ್ಲಿ ಮಾಡಿದ ಭಾಷಣವೆಂಬ ಕಾರಣದಿಂದ. ಆದರೆ ಈ ವಿಚಾರದ ಧಾಟಿ ಎಡಬಿಡದೆ ಎಲ್ಲೆಲ್ಲಿಯೂ ತಾತ್ತ್ವಿಕ ಉದ್ಗ್ರಂಥಗಳಿಂದ ಹಿಡಿದು ವೃತ್ತಪತ್ರಿಕೆಗಳ ವಿವರಗಳವರೆಗೆ ಕಂಡುಬರುತ್ತದೆ.

ಆ ಭಾಷಣದಲ್ಲಿ ಬೆರ್ತೆಲೊ ಹೇಳಿದ. ಮೊದಲು ಮಾನವರನ್ನು ಚಾಲಿಸುತ್ತಿದ್ದ ಯಂತ್ರಗಳು ಎರಡಿದ್ದುವು: ಬಲಾತ್ಕಾರ ಮತ್ತು ಧರ್ಮ; ಆದರೆ ಈ ಯಂತ್ರಗಳ ಅಗತ್ಯ ಇಂದು ಇಲ್ಲ, ಅವುಗಳ ಸ್ಥಾನದಲ್ಲಿ ವಿಜ್ಞಾನ ಬಂದಿದೆ. ವಿಜ್ಞಾನವೆಂದರೆ, ಬೆರ್ತೆಲೋವಿನ (ಮತ್ತು ವಿಜ್ಞಾನದ ಎಲ್ಲ ಆರಾಧಕರ) ಪ್ರಕಾರ, ಮನುಷ್ಯನ ತಿಳುವಳಿಕೆಗೆ ಬರಬಲ್ಲ ಎಲ್ಲ ವಿವರಗಳನ್ನೂ ಒಳಗೊಂಡಿರುವ, ಸುಸಂಗತವಾದ ಯೋಜಿಸಿದ, ಪರಸ್ಪರ ವ್ಯವಸ್ಥಿತವಾದ, ದತ್ತಾಂಶಗಳನ್ನು ಯಥಾವತ್ತಾಗಿ ಪಡೆಯಲು ಅನುಕೂಲವಾದ ಸಂವಿಧಾನಗಳನ್ನು ಪಡೆದ ವಿಜ್ಞಾನ. ಆದರೆ ಇಂಥ ಯಾವ ವಿಜ್ಞಾನವೂ ದಿಟವಾಗಿ ಇರದು; ಈಗ ನಾವು ವಿಜ್ಞಾನವೆಂದು ಕರೆಯುವುದು ಅಡ್ಡಾದಿಡ್ಡಿ ಪಡೆದ, ಅಸಂಬದ್ಧವಾದ

ತಿಳುವಳಿಕೆ; ಅವರಲ್ಲಿ ಎಷ್ಟೋ ವಿವರಗಳು ಏನೇನೂ ಉಪಯೋಗವಿಲ್ಲದವು. ನಿರ್ವಿವಾದವಾದ ಸತ್ಯವನ್ನು ತಿಳಿಸುವ ಬದಲು ಭ್ರಮೆಗಳನ್ನೇ ಉಂಟುಮಾಡುವಂಥವು, ಈವತ್ತು ನಿಜವೆಂದು ಕಂಡು ನಾಳೆ ಸುಳ್ಳೆನಿಸಿಕೊಳ್ಳುವುವು. ಆದುದರಿಂದ ಬೆರ್ತೆಲೊ ಯಾವುದು ಧರ್ಮದ ಸ್ಥಾನವನ್ನು ಆಕ್ರಮಿಸಿಕೊಳ್ಳಬೇಕೆಂದು ಹೇಳುತ್ತಾನೋ ಅದಿನ್ನೂ ಸಿದ್ಧವಾಗಿಲ್ಲ. ಹೀಗಾಗಿ ಬೆರ್ತೆಲೊ ಮತ್ತು ಅವನ ನಿಲುವನ್ನು ಅನುಮೋದಿಸುವವರು ಧರ್ಮಕ್ಕೆ ಬದಲು ವಿಜ್ಞಾನ ಬಂದಿದೆಯೆಂದು ಹೇಳುವುದು ಸ್ವೇಚ್ಛೆಯ ಮಾತು, ನಿರ್ದಿಷ್ಟವಾದ ಮತವನ್ನು ನಂಬುವ ಶ್ರದ್ಧೆಯಂತೆಯೇ ನಿರ್ದಿಷ್ಟವಾದ ವಿಜ್ಞಾನವನ್ನು ನಂಬುವ ಅಸಮರ್ಥನೀಯವಾದ ಶ್ರದ್ಧೆಯನ್ನವಲಂಬಿಸಿದ ಮಾತು.

ಆದರೂ ವಿದ್ಯಾವಂತರೆನಿಸಿಕೊಳ್ಳುವ ಮಂದಿ, ತಮ್ಮನ್ನು ತಾವು ವಿದ್ಯಾವಂತರೆಂದು ತಿಳಿದಿರುವ ಮಂದಿ, ಇಂಥದೊಂದು ವಿಜ್ಞಾನ ಈಗಾಗಲೇ ಇದೆಯೆಂದೂ, ಇದು ಧರ್ಮದ ಸ್ಥಾನವನ್ನು ಆಕ್ರಮಿಸಿಕೊಳ್ಳಲು ಸಾಧ್ಯವೆಂದೂ, ಆಕ್ರಮಿಸಿಕೊಳ್ಳಬೇಕೆಂದೂ, ಆಗಲೇ ಆಕ್ರಮಿಸಿಕೊಂಡಿದೆಯೆಂದೂ ದೃಢವಾಗಿ ನಂಬುತ್ತಾರೆ.

'ಧರ್ಮ ನಿರುಪಯುಕ್ತವಾದುದು; ವಿಜ್ಞಾನವನ್ನು ಬಿಟ್ಟು ಇನ್ನು ಏನನ್ನು ನಂಬಿದರೂ ಅದು ಮೌಢ್ಯ. ನಮಗೆ ಏನೇನು ಅಗತ್ಯವೋ ಅದನ್ನೆಲ್ಲಾ ವಿಜ್ಞಾನ ತೀರಿಸುತ್ತದೆ, ಬದುಕಿನಲ್ಲಿ ವಿಜ್ಞಾನವನ್ನೇ ಅವಲಂಬಿಸಬೇಕು'. ವಿಜ್ಞಾನಿಗಳು ಹೀಗೆಯೇ ಅಂದುಕೊಂಡಿರುವುದು, ಹೀಗೆಯೇ ಹೇಳುವುದು. ತಾವು ವಿಜ್ಞಾನಕ್ಕೆ ದೂರವಾದರೂ ವಿಜ್ಞಾನಿಗಳ ಸುತ್ತ ನೆರೆದಿರುವ ಜನಜಂಗುಳಿ ಅವರನ್ನು ನಂಬಿ ಅವರು ಧರ್ಮವೊಂದು ಕುರುಡುನಂಬಿಕೆ ಎಂದಾಗ, ಬದುಕಿನಲ್ಲಿ ವಿಜ್ಞಾನವನ್ನೇ ಹಿಡಿಯಬೇಕು ಎಂದಾಗ ಅವರೊಂದಿಗೆ ಸೇರಿಕೊಳ್ಳುತ್ತಾರೆ. ಎಂದರೆ ಬದುಕನ್ನು ರೂಪಿಸಬೇಕಾದುದು ಏನೂ ಇಲ್ಲವೆಂದೇ ಆಯಿತು; ವಿಜ್ಞಾನದ ಗುರಿ ಇರುವುದನ್ನೆಲ್ಲ ಅಧ್ಯಯನಮಾಡುವುದಷ್ಟೆ, ಬದುಕಿಗೆ ದಾರಿತೋರಿಸಬೇಕೆನ್ನುವ ಆದರ್ಶ ಅದಕ್ಕಿಲ್ಲ.

## 2

ಧರ್ಮದ ಅಗತ್ಯವಿಲ್ಲವೆಂದೂ, ವಿಜ್ಞಾನವು ಅದರ ಸ್ಥಾನವನ್ನು ಆಕ್ರಮಿಸಿಕೊಳ್ಳುವುದೆಂದೂ ಇಲ್ಲವೇ ಈಗಾಗಲೇ ಆಕ್ರಮಿಸಿಕೊಂಡಿದೆಯೆಂದೂ ನಮ್ಮ ಯುಗದ ವಿದ್ಯಾವಂತರ ತೀರ್ಮಾನ. ಆದರೆ ಇಷ್ಟಂತೂ ದಿಟ : ಹಿಂದಿನಂತೆಯೇ ಇಂದೂ, ಧರ್ಮವಿಲ್ಲದೆ ಯಾವ ಮಾನವ ಸಮಾಜವಾಗಲೀ ಯಾವ ಬುದ್ಧಿವಂತ ಮನುಷ್ಯನಾಗಲೀ ಇರಲಿಲ್ಲ, ಇರಲಾರ. ಬುದ್ಧಿವಂತ ಮನುಷ್ಯ ಎಂದಿದ್ದೇನೆ; ಬುದ್ಧಿಯಿಲ್ಲದ ಮನುಷ್ಯ, ಪಶುಗಳಂತೆ, ಧರ್ಮವಿಲ್ಲದೆ ಇರಲು ಸಾಧ್ಯ. ಆದರೆ ಬುದ್ಧಿಯಿರುವ ಮನುಷ್ಯ ಧರ್ಮವಿಲ್ಲದೆ ಬದುಕಲಾರ. ಏಕೆಂದರೆ ಅವನಿಗೆ ಅಗತ್ಯವಾದ ಮಾರ್ಗದರ್ಶನ ದೊರೆಯುವುದು

ಧರ್ಮದಿಂದಲೇ; ಏನುಮಾಡಬೇಕು, ಏನನ್ನು ಮೊದಲು ಮಾಡಬೇಕು, ಏನನ್ನು ಅನಂತರ ಮಾಡಬೇಕು ಎಂದೆಲ್ಲ ತಿಳಿಸುವುದು ಧರ್ಮವೇ, ಅವನ ಸ್ವಭಾವದಲ್ಲಿ ಬುದ್ಧಿಯೇ ಮುಖ್ಯಲಕ್ಷಣವಾದುದರಿಂದ ಅವನು ಧರ್ಮವಿಲ್ಲದೆ ಇರಲಾರ. ತಂತಮ್ಮ ಸದ್ಯದ ಬಯಕೆಗಳನ್ನು ತೀರಿಸಿಕೊಳ್ಳುವ ಪ್ರವೃತ್ತಿಯಿರುವ ಪ್ರಾಣಿಗಳನ್ನು ಬಿಟ್ಟು ಪ್ರತಿಯೊಂದು ಪ್ರಾಣಿಯೂ ತನ್ನ ಕೆಲಸದ ನೇರವಾದ ಪ್ರತಿಕ್ರಿಯೆ ಏನು ಎನ್ನುವುದನ್ನು ಗಮನಿಸಿಯೇ ಕೆಲಸಮಾಡುತ್ತದೆ. ತನಗೆ ಸಾಧ್ಯವಿರುವ ಸಂವಿಧಾನದಿಂದ ಈ ಪ್ರತಿ ಕ್ರಿಯೆಗಳನ್ನು ಗಮನಿಸಿ ಪ್ರಾಣಿಯು ಆ ಪ್ರತಿಕ್ರಿಯೆಗಳಿಗೆ ಅನುಸಾರವಾಗಿ ತನ್ನ ಕೆಲಸವನ್ನು ನಿಯೋಜಿಸಿಕೊಳ್ಳುತ್ತದೆ; ಈ ವಿಚಾರವನ್ನು ಗಮನಿಸಿ ಹಿಂದುಮುಂದು ನೋಡದೆ ಒಂದೇ ಬಗೆಯಾಗಿ ಕೆಲಸವನ್ನು ಕೈಗೊಳ್ಳುತ್ತದೆ. ನಿದರ್ಶನಕ್ಕೆ ತುಂಬಿಯು ಜೇನಿಗಾಗಿ ಹಾರಾಡಿ, ಗೂಡಿನಲ್ಲಿ ಶೇಖರಿಸಿಕೊಳ್ಳುತ್ತದೆ; ಏಕೆಂದರೆ ಚಳಿಗಾಲದಲ್ಲಿ ತನಗೂ ತನ್ನ ಮರಿಗಳಿಗೂ ಆಹಾರಬೇಕಷ್ಟೆ. ಇಷ್ಟು ವಿವರಗಳನ್ನು ಬಿಟ್ಟು ಅದಕ್ಕೆ ಇನ್ನಾವುದೂ ತಿಳಿಯದು, ತಿಳಿಯುವ ಸಾಧ್ಯತೆಯೂ ಇಲ್ಲ. ಹಾಗೆಯೇ ಹಕ್ಕಿ ತನ್ನ ಗೂಡನ್ನು ಕಟ್ಟುವಾಗ, ಉತ್ತರದಿಂದ ದಕ್ಷಿಣಕ್ಕೆ ಪ್ರವಾಸ ಹೊರಟು ಹಿಂದಕ್ಕೆ ಬರುವಾಗ ಇಂಥ ವಿವರಗಳನ್ನೇ ಗಮನಿಸುವುದು. ನೇರವಾದ, ಸದ್ಯದ ಅಗತ್ಯದಿಂದಲ್ಲದೆ ಮುಂದೆ ಬರುವ ಫಲವನ್ನು ನಿರೀಕ್ಷಿಸಿಕೊಂಡು ಯಾವ ಪ್ರಾಣಿಯೂ ಏನು ಕೆಲಸವನ್ನು ಮಾಡಿದರೂ ಹೀಗೆಯೇ ಮಾಡುವುದು. ಆದರೆ ಮನುಷ್ಯನ ಮಟ್ಟಿಗೆ ಹೀಗಲ್ಲ. ಪ್ರಾಣಿಗೂ ಮನುಷ್ಯನಿಗೂ ವ್ಯತ್ಯಾಸ ಇದು : ಪ್ರಾಣಿಯಲ್ಲಿ ತಿಳುವಳಿಕೆಯ ಸಾಮರ್ಥ್ಯ ನಾವು ಸಹಜಪ್ರವೃತ್ತಿ ಎಂದು ಏನನ್ನು ಕರೆಯುತ್ತೇವೆಯೋ ಅಷ್ಟಕ್ಕೆ ಮಾತ್ರ ಸೀಮಿತವಾಗಿರು ತ್ತದೆ; ಆದರೆ ಮನುಷ್ಯನಲ್ಲಿ ಈ ಸಾಮರ್ಥ್ಯ ಮುಖ್ಯವಾಗಿ ವಿಚಾರ ಶಕ್ತಿಯಾಗುತ್ತದೆ. ಜೇನನ್ನು ಸಂಗ್ರಹಿಸುವ ತುಂಬಿಗೆ, ಜೇನನ್ನು ಸಂಗ್ರಹಿಸುವುದು ಒಳ್ಳೆಯದೋ ಕೆಟ್ಟದೋ ಎನ್ನುವ ಶಂಕೆಯೇ ಇರುವುದಿಲ್ಲ; ಆದರೆ ತನ್ನ ಬೆಳೆಯನ್ನು ಅಥವಾ ಹಣ್ಣುಗಳನ್ನು ಸಂಗ್ರಹಿಸುವ ಮನುಷ್ಯ ಮುಂದಿನ ಬೆಳೆಗೆ ಇದು ಅಡ್ಡಿಯೋ ಏನೋ ಎಂದಾಗಲೀ, ತನ್ನ ನೆರೆಯವನ ಆಹಾರವನ್ನು ತಾನು ದೋಚಿಕೊಳ್ಳುತ್ತಿದ್ದೇನೆಯೋ ಏನೋ ಎಂದಾ ಗಲೀ ವಿಚಾರಮಾಡದೆ ಇರುವುದು ಸಾಧ್ಯವಿಲ್ಲ. ತಾನು ಈಗ ಸಾಕುತ್ತಿರುವ ಮಕ್ಕಳು ದೊಡ್ಡವರಾದಮೇಲೆ ಹೇಗಿರುತ್ತಾರೆ. ಎಂದು ಮೊದಲಾಗಿ ಅವನು ಆಲೋಚಿಸದೆ ಇರುವುದೂ ಆಗದು. ಸಂಭವನೀಯ ಪ್ರತಿಕ್ರಿಯೆಗಳ ವೈಫಲ್ಯ ಅಗಾಧವಾಗಿದೆ. ಅವೆಲ್ಲ ತನ್ನ ಅರಿವಿಗೆ ಬರಲೇ ಬೇಕು, ಎನ್ನುವಷ್ಟೇ ಕಾರಣದಿಂದ, ವಿಚಾರಶೀಲನಾದ ಮನುಷ್ಯ ಜೀವನದಲ್ಲಿ ಆಚಾರವ್ಯವಹಾರವನ್ನು ಕುರಿತ ಅತಿ ಮುಖ್ಯ ಸಮಸ್ಯೆಗಳನ್ನೆಲ್ಲ ನಿರ್ಣಯ ವಾಗಿ ಪರಿಹರಿಸುವುದು ಸಾಧ್ಯವಿಲ್ಲ. ಪ್ರತಿಯೊಬ್ಬ ವಿಚಾರಶೀಲನಾದ ಮನುಷ್ಯನಿಗೂ ಇದು ಗೊತ್ತು. ಅಥವಾ ಈ ಭಾವನೆಯಂತೂ ಇರುತ್ತದೆ– ಬದುಕಿನ ಮುಖ್ಯ ಸಮಸ್ಯೆ ಗಳನ್ನು ವೈಯಕ್ತಿಕ ಪ್ರವೃತ್ತಿಗಳ ಆಧಾರದ ಮೇಲೆ, ಅಥವಾ ತನ್ನ ಕೆಲಸದ ಸದ್ಯ ಪ್ರತಿಕ್ರಿಯೆಯನ್ನು ಮಾತ್ರ ಪರಿಶೀಲಿಸಿ ಪರಿಹರಿಸುವುದಾಗದು, ಎಂದು. ಏಕೆಂದರೆ

ತಾನು ನಿರೀಕ್ಷಿಸಬಹುದಾದ ಪ್ರತಿಕ್ರಿಯೆಗಳು ತೀರ ಹೆಚ್ಚಾಗಿರುತ್ತವೆ, ತೀರ ವಿಭಿನ್ನವಾಗಿರುತ್ತವೆ, ಪರಸ್ಪರ ವಿರುದ್ಧವಾಗಿರುವುದೂ ಉಂಟು; ತನಗೂ ಬೇರೆಯವರಿಗೂ ಅವುಗಳಿಂದ ಅನುಕೂಲವಾದರೂ ಆಗಬಹುದು, ಪ್ರತಿಕೂಲವಾದರೂ ಆಗಬಹುದು. ಒಂದು ಕಥೆಯಿದೆ–ಒಬ್ಬ ದೇವತೆ ಭೂಮಿಗಿಳಿದು, ಪಾಪಭೀರುಗಳಾದ ಸಂಸಾರಸ್ಥರ ಮನೆಯೊಂದನ್ನು ಹೊಕ್ಕು ತೊಟ್ಟಿಲಲ್ಲಿದ್ದ ಮಗುವನ್ನು ಕೊಂದನಂತೆ. ಅವರು ಏಕೆಂದು ಕೇಳಲು ಈ ಮಗು ಬೆಳೆದ ಮೇಲೆ ಮಹಾಪಾಪಿಯಾಗುತ್ತಿದ್ದನೆಂದೂ, ಅವನಿಂದ ಸಂಸಾರದ ಸುಖ ನಾಶವಾಗುತ್ತಿದ್ದಿತೆಂದೂ ಹೇಳಿದನಂತೆ. ಆದರೆ ಯಾವ ಜೀವ ಪ್ರಯೋಜಕ, ಯಾವ ಜೀವ ಅಪ್ರಯೋಜಕ ಅಥವಾ ವಿನಾಶಕಾರಿ ಎನ್ನುವ ಪ್ರಶ್ನೆ ಮಾತ್ರವೇ ಅಲ್ಲ. ಸದ್ಯದ ಫಲ ಪ್ರತಿಕ್ರಿಯೆಗಳನ್ನು ಗಮನಿಸಿ ಬುದ್ಧಿವಂತನಾದ ಮನುಷ್ಯ ಬದುಕಿನ ಯಾವ ಮುಖ್ಯ ಸಮಸ್ಯೆಯನ್ನೂ ಪರಿಹರಿಸಲಾರ. ಪ್ರಾಣಿಯೊಂದರ ಕ್ರಿಯೆಗಳಿಗೆ ದಾರಿತೋರಿಸುವ ಯಾವ ವಿವರಗಳೂ ವಿಚಾರಶೀಲನಾದ ಮನುಷ್ಯನನ್ನು ತೃಪ್ತಿಗೊಳಿಸಲಾರವು. ಪ್ರಾಣಿಗಳ ನಡುವೆ ತಾನೂ ಪ್ರಾಣಿ, ಅಂದಿಗೆ ಮಾತ್ರ ತನ್ನ ಬದುಕು ಎಂದು ಮನುಷ್ಯ ಅಂದುಕೊಳ್ಳಬಹುದು: ಅಥವಾ ತಾನು ಒಂದು ಸಂಸಾರದ, ಸಮಾಜದ, ಅಥವಾ ರಾಷ್ಟ್ರದ ಅಂಗ, ನೂರಾರು ವರ್ಷಗಳು ಉಳಿಯುವವನು ಅಂದುಕೊಳ್ಳಬಹುದು; ಶಾಶ್ವತವಾಗಿ ಇರುವ ಇಡೀ ಅನಂತವಿಶ್ವದ ಒಂದು ಅಂಗ ಎಂದೂ ಅಂದುಕೊಳ್ಳಬಹುದು (ಅಥವಾ ಅಂದುಕೊಳ್ಳಬೇಕು. ಏಕೆಂದರೆ ವಿಚಾರಶೀಲತೆ ಇದನ್ನು ಅನಿವಾರ್ಯವಾಗಿಯೇ ಮನದಟ್ಟುಮಾಡಿಕೊಡುತ್ತದೆ). ಆದುದರಿಂದ ವಿಚಾರವಂತರಾದ ಜನ ತಮ್ಮ ಕೆಲಸಗಳ ಮೇಲೆ ಪ್ರಭಾವಬೀರುವ ಬದುಕಿನ ತೀರ ಸಣ್ಣ ಪ್ರಸಂಗಗಳನ್ನು, ಸಂಖ್ಯಾಶಾಸ್ತ್ರದಲ್ಲಿ ಕರೆಯುವಂತೆ, ಸಂಕಲನ ಮಾಡಬೇಕು; ಯಾವಾಗಲೂ ಮಾಡಿಯೇ ಇದ್ದಾರೆ. ಹಾಗೆಂದರೆ, ಸದ್ಯದ ಬದುಕಿನ ವಿವರಗಳೊಂದಿಗೆ ತಮ್ಮ ಸಂಬಂಧಗಳನ್ನು ಏರ್ಪಡಿಸಿಕೊಳ್ಳುವುದರ ಜೊತೆಗೆ ಅನಂತ ಕಾಲ, ಅನಂತ ದೇಶದ ವಿಶಾಲ ವಿಶ್ವವನ್ನು ಒಂದೆಂದು ಪರಿಗಣಿಸಿ ಅದರೊಂದಿಗೆ ಸಂಬಂಧವನ್ನು ಏರ್ಪಡಿಸಿಕೊಳ್ಳಬೇಕು. ಹೀಗೆ, ತಾನು ಯಾವುದರ ಅಂಗ ಎಂದು ಕೊಳ್ಳುತ್ತಾನೋ, ಯಾವುದರಿಂದ ತನ್ನ ಕೆಲಸಗಳಿಗೆ ಮಾರ್ಗದರ್ಶನವನ್ನು ಪಡೆದುಕೊಳ್ಳುತ್ತಾನೋ ಆ ಸಂಪೂರ್ಣದೊಂದಿಗೆ ಸಂಬಂಧವನ್ನು ಸಿದ್ಧಪಡಿಸಿಕೊಳ್ಳುವುದೇ ಧರ್ಮ. ಆದುದರಿಂದ ಧರ್ಮವೆನ್ನುವುದು ಎಂದೂ ವಿಚಾರವಂತನಾದ ಮನುಷ್ಯನ, ವಿಚಾರಶೀಲವಾದ ಮಾನವ ಸಮುದಾಯದ ಬದುಕಿಗೆ ಅಗತ್ಯವಾದ, ಅನಿವಾರ್ಯವಾದ ನೆಲೆಯಾಗಿದೆ; ಹಾಗಾಗದೆ ಇರುವುದು ಸಾಧ್ಯವಿಲ್ಲ.

## 3

ಪಶುಗಳಿಗೂ ಮನುಷ್ಯನಿಗೂ ಅಂತರವನ್ನು ತೋರಿಸುವ ಪರಮ (ಎಂದರೆ ಧಾರ್ಮಿಕ) ಚೈತನ್ಯವನ್ನು ಕಳೆದುಕೊಳ್ಳದ ಎಲ್ಲ ಮನುಷ್ಯರೂ ಧರ್ಮವನ್ನು ಹೀಗೆಯೇ

ಅರ್ಥಮಾಡಿಕೊಂಡಿರುವುದು. ಧರ್ಮ ಎನ್ನುವ ಮಾತು ದೇವತೆಗಳನ್ನು ಪೂಜಿಸುವುದು (relegere, religens) ಎನ್ನುವ ಮೂಲದಿಂದಲೋ ಅಥವಾ ಸಾಮಾನ್ಯವಾಗಿ ಜನ ತಿಳಿದಿರುವಂತೆ 'ಬಂಧನ' (religare) (ಮೇಲಿನ ಶಕ್ತಿಗಳೊಂದಿಗೆ) ಎನ್ನುವ ಮೂಲದಿಂದಲೋ ಬಂದಿದೆ. ಧರ್ಮಕ್ಕೆ ತುಂಬ ಪುರಾತನವಾದ ಪ್ರಚಲಿತ ವಾದ ನಿರೂಪಣೆಯೆಂದರೆ 'ಧರ್ಮವು ಮನುಷ್ಯನ ಮತ್ತು ದೇವರ ನಡುವೆ ಕೊಂಡಿ' ಎನ್ನುವುದು. ವಾವೆನಾರ್ಗ್ "ದೇವರ ಬಗ್ಗೆ ಮನುಷ್ಯನ ಕರ್ತವ್ಯ: ಇದು ಧರ್ಮ" ಎಂದು ಹೇಳಿದ್ದಾನೆ. ಷ್ಲೀರ್‌ಮಾಖರ್ ಮತ್ತು ಫಾಯರ್‌ಬಾಕ್ ಇದೇ ಅರ್ಥವನ್ನು ಹೇಳಿದ್ದಾರೆ. ದೇವರಿಗೆ ತಾನು ಅಧೀನ ಎನ್ನುವ ಅರಿವು ಮನುಷ್ಯನಿಗೊದಗಿದರೆ ಅದೇ ಧರ್ಮದ ಬುನಾದಿ ಎಂದು ಅವರ ನಂಬಿಕೆ. "ಪ್ರತಿಯೊಬ್ಬ ಮನುಷ್ಯನಿಗೂ ದೇವರಿಗೂ ನಡುವೆ ಇರುವ ವ್ಯವಹಾರವೇ ಧರ್ಮ" ಎಂದು ಜೇಯರ್ಸ್ಲೋ ಹೇಳಿದ್ದಾನೆ. "ಜೀವದ ಆಗತ್ಯ ಮತ್ತು ಬುದ್ಧಿಶಕ್ತಿಯ ಫಲ ಇವೆರಡೂ ಕೂಡಿದರ ಧರ್ಮವಾಗುತ್ತದೆ" ಎಂದು ಬಿ. ಕಾನ್‌ಸ್ಟಂಟ್ ಬರೆದಿದ್ದಾನೆ. "ಮನುಷ್ಯನು ತಾನು ಅತಿಮಾನವ ಮತ್ತು ನಿಗೂಢ ಶಕ್ತಿಗಳ ಅಧೀನ ಎಂದು ತಿಳಿದುಕೊಂಡು ಈ ಶಕ್ತಿಗಳೊಂದಿಗೆ ತನ್ನ ಸಂಬಂಧವನ್ನು ಅರಿತುಕೊಳ್ಳುವ ವಿಶೇಷ ಸಂವಿಧಾನವೇ ಧರ್ಮ" ಎಂದ ಗಾಬ್ಲೆಟ್ ಡಿ'ಅಲ್ವೀಲಾ. "ಮನುಷ್ಯನ ಜೀವ ಮತ್ತು ವಿಶ್ವದ ಮೇಲೆ ತನ್ನ ಮೇಲೆ ಒಡೆತನವಿರುವುದೆಂದು ಬಗೆದ ಅಚಿಂತ್ಯಾದ್ಭುತ ಶಕ್ತಿ ಇವುಗಳ ನಡುವೆ ಇರುವ ಸಂಬಂಧದ ಆಧಾರದ ಮೇಲೆ ಮಾನವಜೀವನವನ್ನು ರೂಪಿಸಿಕೊಳ್ಳು ವುದು ಧರ್ಮ. ಈ ಶಕ್ತಿಯೊಂದಿಗೆ ಮನುಷ್ಯ ತಾದಾತ್ಮ್ಯವನ್ನೂ ಅರಿತುಕೊಂಡಿರ ಬೇಕು" ಎನ್ನುತ್ತಾನೆ. ಎ. ರೆವಿಲ್.

ಹೀಗೇ ಧರ್ಮದ ಸಾರವನ್ನು ಜನ ಯಾವಾಗಲೂ ತಿಳಿದುಕೊಂಡಿರುವುದು (ಈ ಕಾಲದಲ್ಲಿ ಮನುಷ್ಯನ ಪರಮಲಕ್ಷಣವನ್ನು ಕೈಬಿಡದ ಮನುಷ್ಯರೂ ತಿಳಿದುಕೊಂಡಿ ರುವುದು) -- ಮನುಷ್ಯ ತನ್ನ ಮತ್ತು ತನ್ನಮೇಲೆ ಶಕ್ತಿಬೀರುವ ಅನಂತ ತತ್ತ್ವ ಅಥವಾ ತತ್ತ್ವಗಳ ನಡುವೆ ನಂಟನ್ನು ಪಡೆದುಕೊಳ್ಳುವುದು. ಈ ನಂಟು (ಬೇರೆಬೇರೆ ರಾಷ್ಟ್ರಗಳು ಬೇರೆ ಬೇರೆ ಯುಗಗಳಲ್ಲಿ ಇದನ್ನು ಬೇರೆ ಬೇರೆಯಾಗಿ ಗ್ರಹಿಸಿದ್ದಾರೆ) ಪ್ರಪಂಚದಲ್ಲಿ ಮನುಷ್ಯರ ಗುರಿಯನ್ನು ಯಾವಾಗಲೂ ನಿರ್ಧರಿಸಿದೆ; ಇದರಿಂದ ಅವರ ನಡವಳಿಕೆಗೆ ಮಾರ್ಗದರ್ಶನ ಸಹಜವಾಗಿಯೇ ಹೊರಹೊಮ್ಮಿದೆ. ಯೆಹೂದಿಯು ಅನಂತ ವಸ್ತುವಿನೊಂದಿಗೆ ತನ್ನ ನಂಟನ್ನು ಅರಿತುಕೊಂಡುದು ಹೀಗೆ: ಎಲ್ಲ ಜನಾಂಗ ಗಳಿಂದಲೂ ದೇವರು ಯಾವ ಜನಾಂಗವನ್ನು ಆರಿಸಿಕೊಂಡನೋ ಆ ಜನಾಂಗದವನು ತಾನು, ದೇವರೊಂದಿಗೆ ತನ್ನ ಜನಾಂಗದವರು ಯಾವ ಒಪ್ಪಂದವನ್ನು ಮಾಡಿಕೊಂಡರೋ ಅದನ್ನು ತಾನು ದೇವರೆದುರು ನಿರ್ವಹಿಸಬೇಕು. ಗ್ರೀಕನು ಅರ್ಥಮಾಡಿಕೊಂಡುದು ಹೀಗೆ: ಶಾಶ್ವತತೆಯ ಪ್ರತಿನಿಧಿಗಳಾದ ದೇವತೆಗಳ ಅಧೀನ ತಾನಾದುದರಿಂದ, ಅವರಿಗೆ

ತೃಪ್ತಿಯಾಗುವಂತೆ ತಾನು ನಡೆದುಕೊಳ್ಳಬೇಕು. ತಾನು ಅನಂತಬ್ರಹ್ಮದ ಆವಿಷ್ಕಾರ. ಜೀವನವನ್ನು ಪರಿತ್ಯಾಗಮಾಡಿ ಆ ಪರಾತ್ಪರ ವಸ್ತುವಿನೊಂದಿಗೆ ಕೂಡಿಕೊಳ್ಳಲು ಪ್ರಯತ್ನಪಡಬೇಕು ಎಂದು ಬ್ರಾಹ್ಮಣನ ನಂಬಿಕೆ. ಬೌದ್ಧನು ತಿಳಿದುಕೊಂಡಿರುವುದು ಹೀಗೆ: ಅನಂತದೊಂದಿಗೆ ತನ್ನ ನಂಟು ಕಾಣಿಸಿಕೊಳ್ಳುವುದು ಒಂದು ಜನ್ಮದಿಂದ ಇನ್ನೊಂದು ಜನ್ಮಕ್ಕೆ ಸಾಗುತ್ತಾ ಅನಿವಾರ್ಯವಾಗಿ ಅನುಭವಿಸುವ ದುಃಖದಲ್ಲಿ; ಕಾಮುಗಳಿಂದ ಆಸೆಗಳಿಂದ ಈ ದುಃಖಗಳು ಉಂಟಾಗುತ್ತವೆ; ಎಲ್ಲ ಕಾಮುಗಳನ್ನೂ ಆಸೆಗಳನ್ನೂ ನಾಶಪಡಿಸಿ ನಿರ್ವಾಣವನ್ನು ಪಡೆಯುವುದು ತನ್ನ ಕರ್ತವ್ಯ. ಮನುಷ್ಯನ ಮತ್ತು ಅವನು ಸಂಬಂಧವನ್ನು ಪಡೆದಿರುವೆನೆಂದುಕೊಂಡ ಅನಂತಜೀವನದ ನಡುವೆ ಯಾವುದಾದರೊಂದು ನಂಟನ್ನು ಏರ್ಪಡಿಸಿಕೊಂಡು ಅದರಿಂದ ತನ್ನ ನಡವಳಿಕೆಯನ್ನು ಆಳವಡಿಸಿಕೊಳ್ಳುವುದೇ ಧರ್ಮ. ಯಾವ ಧರ್ಮವಾಗಲೀ ಮಾಡುವುದು ಇದನ್ನೇ. ಆದುದರಿಂದ, ಯಾವುದಾದರೂ ಧರ್ಮ (ವಿಗ್ರಹಾರಾಧನೆ ಅಥವಾ ಮಂತ್ರವಿದ್ಯೆಯಂಥವು) ಮನುಷ್ಯನ ಮತ್ತು ಅನಂತದ ನಡುವೆ ಯಾವ ಸಂಬಂಧವನ್ನೂ ಏರ್ಪಡಿಸಲಾರದಿದ್ದರೆ ಅದು ದಿಟವಾದ ಧರ್ಮವೇ ಅಲ್ಲ. ಅದರ ಅವನತಿ ಅಷ್ಟೆ. ಧರ್ಮವು ಮನುಷ್ಯನ ಮತ್ತು ದೇವರ ನಡುವೆ ಯಾವುದಾದರೊಂದು ಬಗೆಯ ನಂಟನ್ನು ನಮ್ಮ ವಿಚಾರಶಕ್ತಿ ಅಥವಾ ಇಂದಿನ ಜ್ಞಾನಕ್ಕೆ ಅನುಗುಣವಲ್ಲದ ಮಾತುಗಳಿಂದ ಏರ್ಪಡಿಸುವುದಾದರೆ, ಅಂಥ ಮಾತುಗಳನ್ನು ನಾವು ನಿಜವಾಗಿ ನಂಬಲಾರೆವಾದರೆ, ಅದು ಕೂಡ ದಿಟವಾದ ಧರ್ಮವಲ್ಲ. ಕೃತಕವಾದುದು. ಮನುಷ್ಯನ ಬದುಕನ್ನು ಅನಂತಜೀವನದೊಂದಿಗೆ ಕೂಡಿಸಲಾಗದಿದ್ದರೆ ಅದೂ ಧರ್ಮವಲ್ಲ. ಮನುಷ್ಯನ ನಡವಳಿಕೆಗೆ ಸ್ಪಷ್ಟವಾದ ದಾರಿಯನ್ನು ಒದಗಿಸಲು ನೇರವಾಗದ ಪ್ರಣಾಳಿಕೆಗಳನ್ನು ನಂಬುವುದೂ ಧರ್ಮವಾಗಲಾರದು.

ಮನುಷ್ಯನು ತನ್ನನ್ನು ಸುತ್ತರಿದಿರುವ ಅನಂತ ಜೀವನದೊಂದಿಗೆ ವಿಚಾರ ಮತ್ತು ಜ್ಞಾನಕ್ಕೆ ಸರಿಯಾದ ಸಂಬಂಧವನ್ನು ಕಲ್ಪಿಸಿಕೊಂಡು. ಆ ಸಂಬಂಧದಿಂದ ತನ್ನ ಬದುಕನ್ನು ಆ ಅನಂತ ಶಕ್ತಿಯೊಂದಿಗೆ ಕೂಡಿಸಿಕೊಂಡು ತನ್ನ ನಡವಳಿಕೆಯನ್ನು ರೂಪಿಸಿಕೊಂಡರೆ ಅದು ಧರ್ಮ.

4

ಧರ್ಮವಿರದಿದ್ದ ಯುಗವಾಗಲೀ ಪ್ರದೇಶವಾಗಲೀ ಎಂದೂ ಇರಲೇ ಇಲ್ಲ. ಹೀಗಾದರೂ ಇಂದಿನ ಓದಿದ ಜನ. ಪಿತ್ತಕೋಶವು ಎಡಗಡೆ ಇದೆ ಎಂದು ಹೇಳಿದ ಮೋಲಿಯರನ ಅನಿಯತ ಪ್ರವೃತ್ತಿಯ ವೈದ್ಯನಂತೆ, 'ನಾವು ಅದನ್ನೆಲ್ಲ ಬದಲಾಯಿಸಿಬಿಟ್ಟಿದ್ದೇವೆ' ಎಂದು ಹೇಳುತ್ತಾರೆ: ನಾವು ಧರ್ಮವಿಲ್ಲದೆ ಬದುಕಬಹುದು. ಬದುಕಬೇಕು ಎಂದು ಅವರ ಎಣಿಕೆ. ಆದರೆ ಧರ್ಮ ಹಿಂದಿದ್ದಂತೆಯೇ ಇರುತ್ತದೆ; ಹೃದಯವಿಲ್ಲದೆ

ಮಾನವ ಜೀವನ ಸಾಧ್ಯವಿಲ್ಲದಿರುವಂತೆ ಧರ್ಮವಿಲ್ಲದೆಯೂ ಸಾಧ್ಯವಿಲ್ಲ, ಏಕೆಂದರೆ ಮಾನವ ಸಮುದಾಯಕ್ಕೆ ಇದು ಪ್ರಮುಖಪ್ರೇರಕ, ಹೃದಯ. ಹಲವಾರು ಬೇರೆ ಬೇರೆ ಧರ್ಮಗಳಿವೆ; ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆ ದೇಶಗಳಲ್ಲಿ, ಆಯಾ ರಾಷ್ಟ್ರದ ಬೆಳವಣಿಗೆಯನ್ನು ಅನುಸರಿಸಿ ಮನುಷ್ಯನ ಮತ್ತು ಅನಂತ ಶಕ್ತಿಯ, ದೇವತೆಯ ಅಥವಾ ದೇವತೆಗಳ ನಡುವೆ ಇರುವ ಸಂಬಂಧದ ಅಭಿವ್ಯಕ್ತಿ ವಿಭಿನ್ನವಾಗಿರುತ್ತದೆ. ಆದರೆ ಮನುಷ್ಯರು ಮೊಟ್ಟಮೊದಲು ವಿಚಾರಶೀಲರಾದಾಗಿನಿಂದಲೂ, ಮಾನವ ಸಮುದಾಯ ದಲ್ಲಿ ಎಲ್ಲಿಯೂ ಯಾವಾಗಲೂ ಧರ್ಮವಿಲ್ಲದೆ ಬದುಕುವುದಾಗಿಲ್ಲ.

ರಾಷ್ಟ್ರಜೀವನದಲ್ಲಿ ಕೆಲವೊಮ್ಮೆ ಬಳಕೆಯಲ್ಲಿರುವ ಧರ್ಮ ಕುಲಗೆಟ್ಟು, ಬದುಕಿ ಗಿಂತ ತೀರ ಹಿಂದುಳಿದು, ಬದುಕಿಗೆ ದಾರಿತೋರಿಸಲಾಗದೆ ಇರುವ ಸಮಯ ಇರುತ್ತದೆ. ಆದರೆ ಹೀಗೆ ಜನರ ಬದುಕಿನ ಮೇಲೆ ಧರ್ಮದ ಪ್ರಭಾವ ಮರೆಯಾಗುವುದು (ಎಲ್ಲ ಧರ್ಮಗಳಲ್ಲಿಯೂ ಕೆಲವು ಬಾರಿ ಆಗುತ್ತದೆ) ತಾತ್ಕಾಲಿಕವಷ್ಟೆ. ಬದುಕಿರುವುದೆಲ್ಲ ಇದ್ದಂತೆಯೇ. ಧರ್ಮವೂ ಹುಟ್ಟುತ್ತದೆ, ಬೆಳೆಯುತ್ತದೆ, ಮುದಿಯಾಗುತ್ತದೆ, ಸಾಯು ತ್ತದೆ, ಮತ್ತು ಜೀವತಳೆಯುತ್ತದೆ; ಜೀವತಳೆಯುವಾಗ ಹಿಂದಿನ ಸ್ಥಿತಿಗಿಂತ ಇನ್ನಷ್ಟು ಪರಿಪೂರ್ಣವಾಗಿರುತ್ತದೆ. ಧರ್ಮದಲ್ಲಿ ಉನ್ನತಮಟ್ಟದ ಬೆಳವಣಿಗೆಯ ಕಾಲವಾದೊಡನೆ ಮುಪ್ಪಡರುವ, ನಿಃಸತ್ತ್ವವಾಗುವ ಕಾಲಗಳು ಕ್ರಮವಾಗಿ ಬರುತ್ತವೆ ಇವು ಕಳೆದ ನಂತರ ಪುನರುದ್ಧಾರದ ಸಮಯ ಬಂದು ಹಿಂದಿನದಕ್ಕಿಂತ ಹೆಚ್ಚು ಜಾಣ್ಮೆಯ, ಹೆಚ್ಚು ಸ್ಪಷ್ಟವಾದ ಧಾರ್ಮಿಕ ತತ್ತ್ವಗಳು ಬಳಕೆಗೆ ಬರುತ್ತವೆ. ಈ ಬೆಳವಣಿಗೆ, ಮುಪ್ಪು, ಪುನರುದ್ಧಾರ ಈ ಕಾಲಗಳು ಎಲ್ಲ ಧರ್ಮಗಳಲ್ಲಿಯೂ ಒದಗುತ್ತವೆ. ಪ್ರೌಢವಾದ ಬ್ರಾಹ್ಮಣಧರ್ಮದಲ್ಲಿ, ಮುಪ್ಪು ಒದಗಿ ಮೂಲಬೋಧೆಗೆ ಅನುಗುಣವಲ್ಲದ ಜಡ, ಸ್ಥೂಲ ಆಚಾರಗಳು ಮೈದಳೆದು ನಿಂತಾಗ ಒಂದು ಕಡೆ ಬ್ರಾಹ್ಮಣ ಧರ್ಮದ್ದೇ ಪುನುರುದ್ಧಾರ ಒದಗಿತು. ಇನ್ನೊಂದು ಕಡೆ ಬೌದ್ಧಧರ್ಮದ ಉದಾತ್ತ ಉಪದೇಶಗಳು ಒದಗಿದುವು; ಮಾನವಸಮುದಾಯ ಅನಂತದೊಂದಿಗೆ ಇರಿಸಿಕೊಂಡ ನಂಟನ್ನು ಅರಿತು ಕೊಳ್ಳಲು ಇವು ನೆರವಾದುವು. ಇಂಥದೇ ಅವನತಿ ಗ್ರೀಕರ, ರೋಮನ್ನರ ಧರ್ಮ ಗಳಲ್ಲಿಯೂ ಆಯಿತು; ಆಗ ಅವನತಿಯ ತೀರ ಕೆಳಮಟ್ಟದನಂತರ ಕ್ರೈಸ್ತಧರ್ಮ ಕಾಣಿಸಿಕೊಂಡಿತು. ಮತ–ಕ್ರೈಸ್ತಧರ್ಮವು ಬೈಸಾಂಟಿಯಂನಲ್ಲಿ ಮೂರ್ತಿಪೂಜೆ, ಅನೇಕ ದೇವತಾವಾದಗಳಾಗಿ ಕುಲಗೆಟ್ಟಾಗ ಅಲ್ಲಿಯೂ ಇದೇ ನಡೆಯಿತು. ಕುಲಗೆಟ್ಟ ಕ್ರೈಸ್ತ ಧರ್ಮವನ್ನು ಸರಿದೂಗಲು ಒಂದೆಡೆ ಪೌಲೀಶಿಯನ್ ಪಂಥ ತಲೆದೋರಿತು. ಇನ್ನೊಂದೆಡೆ (ತ್ರಿಮೂರ್ತಿವಾದ, ಮೇರಿ ಆರಾಧನೆಗಳಿಗೆ ತೀರ ವಿರುದ್ಧವಾಗಿ) ಏಕದೇವತಾ ವಾದವನ್ನೇ ಮೂಲ ಪ್ರಣಾಳಿಕೆಯಾಗಿ ಉಳ್ಳ ಮಹಮ್ಮದೀಯ ಧರ್ಮ ತಲೆಯೆತ್ತಿ ಕೊಂಡಿತು. ಮಧ್ಯಯುಗದ ಪೋಪ್‌ಪರವಾದ ಕ್ರೈಸ್ತಧರ್ಮದಲ್ಲಿಯೂ, ಹೀಗೆಯೇ ಆಯಿತು; ಸುಧಾರಣೆ ಒದಗಿದುದು ಆಗಲೇ. ಬಹಳ ಜನರ ಮೇಲೆ ಧರ್ಮದ ಪ್ರಭಾವ

ಶಿಥಿಲವಾಗುವ ಕಾಲ ಎಲ್ಲ ಧಾರ್ಮಿಕ ಬೋಧೆಗಳು ಬದುಕುವುದಕ್ಕೂ ಬೆಳೆಯುವುದಕ್ಕೂ ಅಗತ್ಯವಾದ ಹಿನ್ನೆಲೆ. ಇದು ಒದಗುವುದು ಏಕೆಂದರೆ ಪ್ರತಿಯೊಂದು ಧಾರ್ಮಿಕ ಬೋಧೆಯೂ, ಎಷ್ಟೇ ಸ್ಥೂಲವಾಗಿರಲಿ, ಮನುಷ್ಯನಿಗೂ ಅನಂತಕ್ಕೂ ನಂಟನ್ನು ಏರ್ಪಡಿಸುವುದೇ ಆಗಿರುತ್ತದೆ; ಇದು ಎಲ್ಲ ಮನುಷ್ಯರಿಗೂ ಸಮನೇ. ಎಲ್ಲ ಧರ್ಮಗಳಲ್ಲಿಯೂ ಅನಂತದ ಮುಂದೆ ಮನುಷ್ಯರು ತೀರ ನಿಕೃಷ್ಟರೇ: ಆದುದರಿಂದ ಪ್ರತಿಯೊಂದು ಧರ್ಮವೂ ದೇವರೆಂದು ತಾನು ತಿಳಿದುದರ ಮುಂದೆ ಎಲ್ಲ ಮನುಷ್ಯರೂ ಸಮರೆಂದು ಹೇಳುತ್ತದೆ. ಆ ದೇವರೆಂಬುದು ಏನೇ ಇರಬಹುದು, ಮಿಂಚು, ಗಾಳಿ, ಮರ, ಪ್ರಾಣಿ, ವೀರ, ತೀರಿಕೊಂಡ ಅರಸ, ಅಥವಾ ರೋಮ್‌ನಲ್ಲಿದ್ದಂತೆ ಜೀವಂತನಾದ ಮನುಷ್ಯನೇ ಇರಬಹುದು. ಹೀಗೆ ಮನುಷ್ಯರೆಲ್ಲ ಸಮಾನರು ಎನ್ನುವ ನಿಲುವು ಅನಿವಾರ್ಯವಾಗಿ ಮೂಲಭೂತವಾಗಿ ಎಲ್ಲ ಧರ್ಮಗಳಲ್ಲಿಯೂ ಬರುತ್ತದೆ. ಆದರೆ ಯಾವ ಕಾಲದಲ್ಲಿಯೂ ಎಲ್ಲಿಯೂ ನಿಜಜೀವನದಲ್ಲಿ ಮನುಷ್ಯರ ಸಮಾನತೆ ಇರಲಿಲ್ಲ, ಈಗಲೂ ಇಲ್ಲ. ಹೊಸ ಧಾರ್ಮಿಕ ಬೋಧೆ (ಎಲ್ಲ ಮನುಷ್ಯರೂ ಸಮರೆಂಬ ತತ್ತ್ವವನ್ನು ಯಾವಾಗಲೂ ಒಳಗೊಂಡೇ ಇರುತ್ತದೆ) ಕಾಣಿಸಿಕೊಂಡೊಡನೆ ಅಸಮಾನತೆಯಿಂದ ಲಾಭಪಡೆಯುವ ಜನ ಈ ಬೋಧೆಯನ್ನೇ ಕುಲಗೆಡಿಸಿ ಅದರ ಸಾರವನ್ನು ಅಡಗಿಸಿಬಿಡುತ್ತಾರೆ. ಹೊಸ ಧಾರ್ಮಿಕ ಬೋಧೆ ಕಾಣಿಸಿಕೊಂಡಾಗಲೆಲ್ಲ ಹೀಗೆಯೇ ಆಗಿದೆ. ಬಹುಮಟ್ಟಿಗೆ ಇದು ನಡೆದಿರುವುದು ಅರಿವಿನ ನೆಲೆಯಲ್ಲಲ್ಲ; ಅಸಮಾನತೆ ಲಾಭದಾಯಕವಾಗಿರುವ ಆಡಳಿತವರ್ಗದವರು, ಶ್ರೀಮಂತರು ಇವರು ತಮ್ಮ ನಿಲುವನ್ನು ಬದಲಿಸದೆ ಧಾರ್ಮಿಕ ಬೋಧೆಯ ಬಲವನ್ನು ಪಡೆಯಲೆಂದು ಈ ಧಾರ್ಮಿಕ ಬೋಧೆಗೆ ಅಸಮಾನತೆಯನ್ನು ಹೇಳುವ ವ್ಯಾಖ್ಯಾನವನ್ನು ಸೇರಿಸಲು ಸರ್ವಪ್ರಯತ್ನ ಮಾಡುತ್ತಾರೆ. ಆಗ, ಸಹಜವಾಗಿಯೇ, ಕೆಲವರು ಇತರರ ಮೇಲೆ ತಮ್ಮ ಧರ್ಮವ್ಯಾಖ್ಯಾನವನ್ನು ಹೇರಿ, ಅದು ತಮ್ಮ ಕರ್ತವ್ಯವೆಂದೂ ಅಂದುಕೊಳ್ಳುವಷ್ಟು ಕುಲಗೆಟ್ಟಿರುವ ಧರ್ಮ ಸಾಮಾನ್ಯ ಜನರನ್ನು ಮುಟ್ಟಿದಾಗ, ಅಧಿಕಾರವನ್ನು ಚಲಾಯಿಸುವವರಿಗೆ ತಲೆಬಾಗಿಸಿ ನಡೆದುಕೊಳ್ಳಬೇಕೆನ್ನುವ ಭಾವನೆ, ಅದು ತಮ್ಮ ಧರ್ಮದ ಆದೇಶವೆನ್ನುವ ಭಾವನೆ ಅವರಲ್ಲಿ ಬರುತ್ತದೆ.

## 5

ಎಲ್ಲ ಮಾನವ ವ್ಯವಹಾರವೂ ಮೂರು ಮೂಲ ಪ್ರವೃತ್ತಿಗಳಿಂದ ಒದಗುತ್ತದೆ – ಭಾವ, ವಿಚಾರ, ಸೂಚನೆ; ಕಡೆಯದು ವೈದ್ಯರಿಂದ 'ಪ್ರೇರಿತಸ್ವಾಪ' (hypnotism) ಎನ್ನುವುದೇ. ಕೆಲವೊಮ್ಮೆ ಮನುಷ್ಯ ಬರಿಯ ಭಾವಗಳ ಪ್ರಭಾವದಿಂದಲೇ ಕೆಲಸ ಮಾಡುತ್ತಾನೆ – ತನಗೆ ಇಷ್ಟವಾದುದನ್ನು ಮಾತ್ರ ಪಡೆದುಕೊಳ್ಳಲು ಹೆಣಗಾಡುತ್ತಾನೆ. ಕೆಲವೊಮ್ಮೆ ಕೇವಲ ವಿಚಾರದ ಆಧಾರದ ಮೇಲೇ ಕೆಲಸಮಾಡುತ್ತಾನೆ: ಅವನು ಮಾಡತಕ್ಕದು ಏನು ಎನ್ನುವುದನ್ನು ಗಮನಿಸಿ. ಕೆಲವೊಮ್ಮೆ, ಇದೇ ಬಹುವೇಳೆ, ತಾನೇ ಸೂಚಿಸಿ

ಕೊಂಡಂತೆ ಅಥವಾ ಇತರರು ಸೂಚಿಸಿದಂತೆ ಕೆಲಸಮಾಡುತ್ತಾನೆ; ತನ್ನ ಅರಿವಿಲ್ಲದೆಯೇ ಈ ಸೂಚನೆಗೆ ಅಧೀನನಾಗುತ್ತಾನೆ. ಬದುಕಿನ ಸಾಮಾನ್ಯ ಸಂದರ್ಭಗಳಲ್ಲಿ ಮನುಷ್ಯನ ಕೆಲಸವನ್ನು ನಿರ್ಧರಿಸಲು ಇವು ಮೂರೂ ಕೆಲಸಮಾಡುತ್ತವೆ. ಯಾವುದಾದರೊಂದು ಕ್ರಿಯೆಯತ್ತ ಅವನನ್ನು ಸೆಳೆಯುವುದು ಭಾವ; ವರ್ತಮಾನ ಸಂದರ್ಭ, ಹಿಂದಿನ ಅನುಭವ ಮತ್ತು ಮುಂದಿನ ನಿರೀಕ್ಷೆ ಇವುಗಳನ್ನು ಗಮನಿಸಿ ವಿಚಾರ ಕೆಲಸದ ಗೊತ್ತುಗುರಿಯನ್ನು ನಿರ್ಧರಿಸುತ್ತದೆ; ಮತ್ತು ಸೂಚನೆಯು ಭಾವ, ವಿಚಾರಗಳಿಂದ ವಿಭಿನ್ನವಾಗಿದ್ದುಕೊಂಡು, ಭಾವ ಪ್ರಚೋದಿಸಿದ ಮತ್ತು ವಿಚಾರ ಅನುಮೋದಿಸಿದ ಕೆಲಸವನ್ನು ಮಾಡಲು ಕಾರಣವಾಗುತ್ತದೆ. ಭಾವವಿಲ್ಲದೆಡೆ ಮನುಷ್ಯ ಯಾವ ಕೆಲಸಕ್ಕೂ ತೊಡಗುವುದಿಲ್ಲ; ವಿಚಾರ ಇರದಿದ್ದರೆ ಮನುಷ್ಯ ಒಡನೆಯೇ ವಿರುದ್ಧ ಭಾವಗಳಿಗೆ ಬಲಿಯಾಗುತ್ತಾನೆ, ಕೆಲವು ಅವನಿಗೂ ಇತರರಿಗೂ ಅಪಾಯಕಾರಿಗಳಾಗಿರಬಹುದು; ತನ್ನ ಅಥವಾ ಇತರರ ಸೂಚನೆಗೆ ವಶವಾಗುವ ಸಾಮರ್ಥ್ಯವಿರದಿದ್ದರೆ ಮನುಷ್ಯ ಯಾವುದಾದರೂ ಕೆಲಸಕ್ಕೆ ತನ್ನನ್ನು ಉಜ್ಜುಗಿಸಿದ ಭಾವವನ್ನು ಎಡಬಿಡದೆ ಅನುಭವಿಸಬೇಕಾಗುತ್ತದೆ, ಅಥವಾ ಆ ಭಾವದ ಔಚಿತ್ಯವನ್ನು ಕುರಿತು ನಿಶ್ಚಯಿಸಿಕೊಳ್ಳಲು ವಿಚಾರವನ್ನು ಸತತವೂ ಕ್ರಿಯಾಶೀಲವನ್ನಾಗಿರಿಸಿಕೊಳ್ಳಬೇಕಾಗುತ್ತದೆ. ಆದುದರಿಂದ ಮನುಷ್ಯನ ಕೆಲಸ ಎಷ್ಟೇ ಸಣ್ಣದಾಗಲೀ ಅದಕ್ಕೆ ಇವು ಮೂರೂ ಪ್ರಭಾವಗಳೂ ಅತ್ಯಗತ್ಯ. ಮನುಷ್ಯ ಒಂದೆಡೆಯಿಂದ ಮತ್ತೊಂದೆಡೆಗೆ ಹೋಗುವಾಗ ಇದನ್ನು ಕಾಣಬಹುದು. ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಬೇಕೆಂಬ ಭಾವ ಪ್ರಚೋದಿಸುತ್ತದೆ; ವಿಚಾರ ಈ ಅಪೇಕ್ಷೆಯನ್ನು ಅನುಮೋದಿಸುತ್ತದೆ ಮತ್ತು ಅದನ್ನು ನಿರ್ವಹಿಸಲು ಸಂವಿಧಾನವನ್ನು ನಿರ್ಧರಿಸುತ್ತದೆ (ಈ ಸಂದರ್ಭದಲ್ಲಿ ನಿರ್ದಿಷ್ಟವಾದೊಂದು ದಾರಿಯಲ್ಲಿ ನಡೆಯುವುದು); ದೇಹದ ಮಾಂಸಖಂಡಗಳು ಇದಕ್ಕೆ ತಲೆಬಾಗಿ, ಮನುಷ್ಯ ಆ ದಾರಿಯಲ್ಲಿ ನಡೆದು ಹೋಗುತ್ತಾನೆ. ಅವನು ಹೋಗುತ್ತಿರುವಾಗ ಅವನ ಭಾವಕ್ಕೂ ವಿಚಾರಕ್ಕೂ ಬಿಡುವು, ಅವು ಬೇರೆ ಕೆಲಸಗಳನ್ನು ನೋಡಿಕೊಳ್ಳಬಹುದು. ಸೂಚನೆಗೆ ವಶವಾಗುವ ಸಾಮರ್ಥ್ಯವಿರದಿದ್ದರೆ ಇದು ಸಾಧ್ಯವಾಗುತ್ತಿರಲಿಲ್ಲ. ಎಲ್ಲ ಮನುಷ್ಯ ವ್ಯವಹಾರಗಳಲ್ಲಿಯೂ ನಡೆಯುವುದು ಇದೇ. ಉಳಿದವುಗಳ ನಡುವೆ ತುಂಬ ಮುಖ್ಯವಾದ ವ್ಯವಹಾರ, ಎಂದರೆ ಧಾರ್ಮಿಕ ವ್ಯವಹಾರದಲ್ಲಿಯೂ ನಡೆಯುವುದು ಇದೇ. ಮನುಷ್ಯನು ದೇವರೊಂದಿಗೆ ತನ್ನ ಸಂಬಂಧವನ್ನು ಏರ್ಪಡಿಸಿಕೊಳ್ಳಬೇಕೆಂಬ ಬಯಕೆಯನ್ನು ಭಾವ ಮೂಡಿಸುತ್ತದೆ; ಸಂಬಂಧ ಹೇಗಿರಬೇಕೆಂಬುದನ್ನು ವಿಚಾರ ನಿರ್ಧರಿಸುತ್ತದೆ; ಆ ಸಂಬಂಧದಿಂದ ಹೊರಹೊಮ್ಮುವ ಕ್ರಿಯೆಗಳಲ್ಲಿ ತೊಡಗಲು ಸೂಚನೆ ನೆರವಾಗುತ್ತದೆ. ಧರ್ಮ ಕುಲಗೆಡದಿರುವವರೆಗೆ ಇದು ನಡೆಯುತ್ತದೆ. ಕುಲಗೆಡತೊಡಗಿತೆಂದರೆ ಸಾಕು, ಸೂಚನೆಯ ಪಾತ್ರ ಬರುಬರುತ್ತಾ ಪ್ರಬಲವಾಗಿ ಬೆಳೆಯುತ್ತದೆ; ಭಾವದ, ವಿಚಾರದ ಪಾತ್ರ ಕುಗ್ಗುತ್ತದೆ. ಸೂಚನೆಯ ಸಂವಿಧಾನಗಳು ಯಾವಾಗಲೂ, ಎಲ್ಲೆಲ್ಲಿಯೂ ಒಂದೇ ಬಗೆ. ಮನುಷ್ಯನು ಸೂಚನೆಗೆ ತುಂಬ ಸುಲಭವಾಗಿ ವಶನಾಗುವ ವೇಳೆಯಲ್ಲಿ

(ಎಳೆತನದಲ್ಲಿ, ಸಾವು–ಹುಟ್ಟು–ಮದುವೆ ಮೊದಲಾದ ಮುಖ್ಯ ಸಂದರ್ಭಗಳಲ್ಲಿ) ಅವನನ್ನು ಉಪಯೋಗಿಸಿಕೊಳ್ಳುವುದು: ಕಲೆಯ ಮೂಲಕ (ವಾಸ್ತುಶಿಲ್ಪ, ಶಿಲ್ಪ, ವರ್ಣಚಿತ್ರ, ಸಂಗೀತ, ನಾಟಕ) ಅವನ ಮೇಲೆ ಕೆಲಸಮಾಡುವುದು; ಮತ್ತು ಅವನ ಸಂವೇದನೆ ಸೂಕ್ಷ್ಮವಾದಾಗ (ಅರ್ಧಪ್ರೇರಿತಸ್ವಾಪದ ಅವಸ್ಥೆಯಲ್ಲಿ ಆಗುವಂತೆ) ಸೂಚಕರು ಇಷ್ಟಪಟ್ಟಿದ್ದನ್ನು ಅವನಲ್ಲಿ ನೆಡುವುದು.

ಪುರಾತನವಾದೆಲ್ಲ ಧರ್ಮಗಳಲ್ಲಿಯೂ ಇದನ್ನು ಕಾಣಬಹುದು. ಉದಾತ್ತಧರ್ಮವಾದ ಬ್ರಾಹ್ಮಣಧರ್ಮವು ನೂರಾರು ದೇವತೆಗಳನ್ನು ಹಲವಾರು ದೇಗುಲಗಳಲ್ಲಿ ಗಾಯನ, ಪೂರದ ಹೊಗೆಗಳೊಂದಿಗೆ ಪೂಜೆಮಾಡುವ ಸಂಪ್ರದಾಯವಾಗಿ ಕುಲಗೆಟ್ಟಾಗ; ಪ್ರವಾದಿಗಳು ಬೋಧಿಸಿದ ಪ್ರಾಚೀನ ಯೆಹೂದೀ ಧರ್ಮ ಸೊಗಸಾದ ದೇವಾಲಯದಲ್ಲಿ ಗಾಯನ ಉತ್ಸವಗಳೊಂದಿಗೆ ದೇವರನ್ನು ವೈಭವದಿಂದ ಪೂಜೆ ಮಾಡುವ ಪದ್ಧತಿಯಾಗಿ ಮಾರ್ಪಟ್ಟಾಗ; ಉದಾತ್ತವಾದ ಬೌದ್ಧಧರ್ಮವು ಹಲವಾರು ವಿಹಾರಗಳಲ್ಲಿ, ಬುದ್ಧನ ಮೂರ್ತಿಗಳು ಹಲವಾರು ವಿಧಿಗಳಲ್ಲಿ ಮಾರ್ಪಟ್ಟು ಕಡೆಗೆ ನಿಗೂಢವಾದ ಲಾಮಾ ಪಂಥವಾದಾಗ; ಮಂತ್ರ–ವಿದ್ಯೆ, ತಂತ್ರಗಳಾಗಿ ತಾವೋಧರ್ಮ ಮಾರ್ಪಟ್ಟಾಗ ಇದೇ ಕಾಣಬರುತ್ತದೆ.

ಎಲ್ಲ ಧಾರ್ಮಿಕ ಬೋಧೆಗಳೂ ಕುಲಗೆಡಲಾರಂಭಿಸಿದಾಗ ಯಾವಾಗಲೂ ಅವುಗಳ ಪಾಲಕರು ಜನ ನಂಬಬೇಕೆಂದು ಏನನ್ನು ಬಯಸುವರೋ ಅದನ್ನು ಅವರಲ್ಲಿ ಮೂಡಿಸಲು, ಸೂಚನೆಯನ್ನು ಒದಗಿಸಲು ವಿಶ್ವಪ್ರಯತ್ನವನ್ನು ಮಾಡುತ್ತಾರೆ; ಅದಕ್ಕೆ ಮೊದಲೇ ಜನರಲ್ಲಿ ವಿಚಾರಶಕ್ತಿ ಕ್ಷೀಣವಾಗಿರುವಂತೆ ಮಾಡುತ್ತಾರೆ. ಎಲ್ಲ ಧರ್ಮಗಳಲ್ಲಿಯೂ ಈ ಮೂರನ್ನೇ ಸೂಚಿಸುವ ಅಗತ್ಯ ಕಂಡು ಬಂದಿತು; ಧರ್ಮ ಕುಲಗೆಟ್ಟಾಗ ಯಾವ ಯಾವ ವಿಕಾರಗಳು ಒದಗಬಹುದೋ ಅವಕ್ಕೆಲ್ಲ ಈ ಮೂರೇ ಮೂಲ. ಮೊದಲನೆಯದಾಗಿ, ಮನುಷ್ಯನಿಗೂ ದೇವತೆಗೂ (ಅಥವಾ ದೇವತೆಗಳಿಗೂ) ನಡುವೆ ಮಧ್ಯಸ್ಥಿಕೆ ವಹಿಸಬಲ್ಲ ಒಂದು ನಿರ್ದಿಷ್ಟ ಬಗೆಯ ಜನರಿದ್ದಾರೆ ಎಂಬ ಸೂಚನೆ. ಎರಡನೆಯದಾಗಿ, ಹೀಗೆ ಮನುಷ್ಯನಿಗೂ ದೇವರಿಗೂ ನಡುವೆ ಮಧ್ಯಸ್ಥಿಕೆ ವಹಿಸಿದ ಜನ ಹೇಳಿದುದನ್ನು ದೃಢಪಡಿಸಲು ಪವಾಡಗಳು ನಡೆಯುತ್ತವೆ, ಹಿಂದೆ ನಡೆದಿವೆ ಎನ್ನುವ ಸೂಚನೆ. ಮೂರನೆಯದಾಗಿ, ದೇವತೆಯ (ಅಥವಾ ದೇವತೆಗಳ) ನಿಶ್ಚಿತ ಸಂಕಲ್ಪವನ್ನು ತಿಳಿಯಪಡಿಸುವ ಕೆಲವು ಪದಗಳಿವೆ (ಇವನ್ನು ಬಾಯಿಮಾತಿನಿಂದ ಪುರಶ್ಚರಣ ಮಾಡುತ್ತಾರೆ ಇಲ್ಲವೇ ಗ್ರಂಥಗಳಲ್ಲಿ ಬರೆದಿಡುತ್ತಾರೆ). ಈ ಕಾರಣದಿಂದ ಇವು ಪವಿತ್ರವಾದುವು, ನಿರ್ಮಿಷ್ಟವಾದುವು ಎನ್ನುವ ಸೂಚನೆ. ಪ್ರೇರಿತಸ್ವಾಪದ ಪ್ರಭಾವದಲ್ಲಿ ಈ ಪ್ರಣಾಳಿಕೆಗಳು ಅಂಗೀಕೃತವಾದುವೆಂದರೆ ಸಾಕು, ಮನುಷ್ಯ ಮತ್ತು ದೇವರ ನಡುವೆ ಮಧ್ಯಸ್ಥಿಕೆ ಮಾಡುವವರು ಹೇಳಿದುದೆಲ್ಲ ಪವಿತ್ರ ಸತ್ಯ ಎಂದು ಪರಿಗಣಿಸಲ್ಪಡುತ್ತದೆ. ಆಗ ಧರ್ಮವನ್ನು ಕುಲಗೆಡಿಸುವುದರ ಮುಖ್ಯ ಉದ್ದೇಶವು ಕೈಗೂಡುತ್ತದೆ. ಆ

ಉದ್ದೇಶವೆಂದರೆ – ಎಲ್ಲ ಮನುಷ್ಯರೂ ಸಮ ಎನ್ನುವ ತತ್ತ್ವವನ್ನು ಮರೆಮಾಚುವುದು, ಅತಿಯಾದ ಅಸಮಾನತೆಯನ್ನು ಏರ್ಪಡಿಸುವುದು, ನಿರೂಪಿಸುವುದು; ವರ್ಣಗಳಲ್ಲಿ ಜನರನ್ನು ವಿಂಗಡಿಸುವುದು, ದೇವರಿಂದ ಆರಿಸಲ್ಪಟ್ಟ ಜನಾಂಗ ಮತ್ತು ಪಾಷಂಡರು ಎನ್ನುವ ಭೇದ, ಆಸ್ತಿಕರು ನಾಸ್ತಿಕರು, ಸಂತರು ಪಾಪಿಗಳು ಎನ್ನುವ ವಿಂಗಡಣೆ. ಕ್ರೈಸ್ತಧರ್ಮದಲ್ಲಿ ಇದೇ ಆಗಿದೆ, ಆಗುತ್ತಿದೆ. ಮನುಷ್ಯರಲ್ಲಿ ಸಂಪೂರ್ಣ ಅಸಮಾನತೆಯನ್ನು ಒಪ್ಪಿಕೊಂಡಿದ್ದಾರೆ; ಅವರನ್ನು (ಅವರವರ ಗ್ರಹಣಶಕ್ತಿ ಮತ್ತು ಪ್ರವಚನಸಾಮರ್ಥ್ಯದ ಆಧಾರದ ಮೇಲೆ) ಸನ್ಯಾಸಿಗಳು –-ಗೃಹಸ್ಥರು ಎಂದು ವಿಂಗಡಿಸಿರುವುದು ಮಾತ್ರವಲ್ಲ, (ಅವರವರ ಸಾಮಾಜಿಕ ನೆಲೆಯನ್ನು ಗಮನಿಸಿ) ಬಲ ಇರುವವರು, ಅವರ ಬಲಕ್ಕೆ ಮಣಿಯಬೇಕಾದವರು ಎನ್ನುವ ವಿಭಾಗವನ್ನೂ ಮಾಡಿದ್ದಾರೆ; ದೇವರೇ ಈ ವಿಭಾಗವನ್ನು ವಿಧಿಸಿದನೆಂಬ ಪಾಲ್ ಬೋಧನೆಗೆ ಅನುಸಾರವಾಗಿದೆ.

## 6

ಮನುಷ್ಯರಲ್ಲಿ ಸನ್ಯಾಸಿಗಳು ಗೃಹಸ್ಥರು ಎಂದು ಮಾತ್ರವಲ್ಲ. ಸಿರಿವಂತರು ಬಡವರು, ಒಡೆಯರು ಊಳಿಗದವರು ಎನ್ನುವ ಅಸಮಾನತೆಯನ್ನು. ಉಳಿದ ಧರ್ಮಗಳು ಮಾಡಿದಂತೆಯೇ, ಮರೀಯ ಕ್ರೈಸ್ತಧರ್ಮವೂ ಸ್ಪಷ್ಟವಾಗಿ ಕಣ್ಣು ಕುಕ್ಕುವಂತೆ ಮಾಡಿದೆ. ಆದರೆ ಸುವಾರ್ತೆಗಳಲ್ಲಿ ಕಂಡುಬರುವ ಕ್ರೈಸ್ತಧರ್ಮದ ಅತಿ ಪ್ರಾಚೀನ ರೂಪವನ್ನು ಗಮನಿಸಿದರೆ, ಬೇರೆ ಧರ್ಮಗಳಲ್ಲಿ ಬಳಸುವ ಕುಲಗೆಡಿಸುವ ಸಂವಿಧಾನಗಳನ್ನು ಇಲ್ಲಿ ಮೊದಲೇ ಊಹಿಸಿಕೊಂಡು, ಅವುಗಳ ವಿರುದ್ಧ ಎಚ್ಚರಿಕೆಯನ್ನು ನೀಡಿರುವುದು ತಿಳಿಯುತ್ತದೆ. ಪುರೋಹಿತ ವರ್ಗದವರ ವಿರುದ್ಧ ಯಾವೊಬ್ಬನೂ ಇನ್ನೊಬ್ಬನಿಗೆ ಗುರುವಾಗಲಾರ ('ಯಾರನ್ನೂ ನಿನ್ನ ತಂದೆಯೆನ್ನದಿರು, ನೀವೂ ಗುರುವೆಂದು ಅನ್ನಿಸಿಕೊಳ್ಳದಿರಿ') ಎಂದು ಸ್ಪಷ್ಟವಾಗಿ ಹೇಳಿದೆ. ಪುಸ್ತಕಗಳಿಗೆ ಪಾವಿತ್ರ್ಯವನ್ನು ಆರೋಪಿಸುವುದರ ವಿರುದ್ಧ ಹೀಗೆ ಹೇಳಿದರು: ಅರ್ಥಮುಖ್ಯ, ಶಬ್ದವಲ್ಲ ಮನುಷ್ಯ ಪರಂಪರೆಯನ್ನು ಮನುಷ್ಯ ನಂಬಬಾರದು. ನಿಯಮ ಮತ್ತು ಪ್ರವಾದಿಗಳು ಹೇಳುವುದೆಲ್ಲ (ಎಂದರೆ ಪವಿತ್ರವೆನಿಸಿಕೊಳ್ಳುವ ಪುಸ್ತಕಗಳೆಲ್ಲ ಹೇಳುವುದು) ಇಷ್ಟೆ– ಬೇರೆಯವರು ನಮಗೆ ಏನು ಮಾಡಬೇಕೆಂದು ಬಯಸುವೆವೋ ನಾವು ಅವರಿಗೆ ಅದನ್ನು ಮಾಡಬೇಕು, ಎಂದು. ಪವಾಡಗಳ ವಿರುದ್ಧವಾಗಿ ಏನೂ ಹೇಳದಿದ್ದರೆ, ಸುವಾರ್ತೆಗಳಲ್ಲಿಯೇ ಯೇಸುಕ್ರಿಸ್ತನೇ ಮಾಡಿದನೆನ್ನಲಾದ ಪವಾಡಗಳನ್ನು ವರ್ಣಿಸಿದ್ದಾರೆ, ಇದಂತೂ ಬೋಧೆಯ ಸ್ವರೂಪದಿಂದ ಸ್ಪಷ್ಟವಾಗಿದೆ – ಏಸುವು ತನ್ನ ಬೋಧೆಯ ಪ್ರಾಮಾಣ್ಯಕ್ಕೆ ಅವಲಂಬಿಸಿದ್ದು ಪವಾಡಗಳನ್ನಲ್ಲ, ಬೋಧೆಯ ಗುಣಾಂಶಗಳನ್ನೇ ('ಯಾವ ಮನುಷ್ಯನಾದರೂ ತನ್ನ ಸಂಕಲ್ಪವನ್ನು ನಡೆಸಲು ಸಂಕಲ್ಪಿಸಿದರೆ ಆಗ ಅವನಿಗೆ ತಿಳಿಯುತ್ತದೆ ಈ ಬೋಧೆಯು ದೇವರದ್ದೋ ಅಥವಾ ನನ್ನ ಮಟ್ಟಿಗೆ ನಾನೇ ಹೇಳಿದುದೋ ಎಂಬುದು'). ಎಲ್ಲಕ್ಕಿಂತ ಮಿಗಿಲಾಗಿ, ಕ್ರೈಸ್ತಧರ್ಮವು ಎಲ್ಲ ಮನುಷ್ಯರ ಸಮಾನತೆಯನ್ನು

ಉದ್ಘೋಷಿಸುತ್ತದೆ: ಮನುಷ್ಯನು ಅನಂತದೊಂದಿಗೆ ಪಡೆದಿರುವ ನಂಟಿನಿಂದ ಮಾತ್ರವೇ ಅನುಮಾನಿಸಿದುದಲ್ಲ. ಎಲ್ಲ ಮನುಷ್ಯರೂ ದೇವರ ಮಕ್ಕಳು ಎಂದು ಪರಿಗಣಿಸಿ ಅವರೆಲ್ಲರ ಭ್ರಾತೃತ್ವ ಮೂಲಸಿದ್ಧಾಂತವಾದುದರಿಂದ.

ಆದುದರಿಂದ, ಮನುಷ್ಯರಲ್ಲಿರುವ ಸಮಾನತೆಯ ಅರಿವನ್ನು ನಾಶಮಾಡುವಷ್ಟು ಕ್ರೈಸ್ತಧರ್ಮವನ್ನು ಕುಲಗೆಡಿಸಲು ಸಾಧ್ಯವಿರದು ಎಂದೆನಿಸಬಹುದು. ಆದರೆ ಮನುಷ್ಯನ ಮನಸ್ಸು ತುಂಬ ಸೂಕ್ಷ್ಮ. ಮತ್ತು (ಅರಿವಿಲ್ಲದೆಯೋ ಅಥವಾ ಅರ್ಧಮರ್ಧ ಅರಿವಿದ್ದೋ) ಸುವಾರ್ತೆಯಲ್ಲಿ ಕಂಡುಬರುವ ಎಚ್ಚರಿಕೆಯನ್ನೂ ಮನುಷ್ಯರ ನಡುವೆ ಇರುವ ಸಮಾನತೆಯ ತಿಳಿ ನಿರೂಪಣೆಯನ್ನೂ ನಿಷ್ಕ್ರಿಯವಮಾಡುವ ಹೊಸ ಹಂಚಿಕೆಯನ್ನು ಹವಣಿಸಿದರು. ಈ ಹಂಚಿಕೆ ಏನೆಂದರೆ. ಕೆಲವು ಬರಹಗಳು ಅಪೌರುಷೇಯವಾದುವು ಎನ್ನುವ ಮತ್ತು ಚರ್ಚ್ ಎಂದು ಕರೆದುಕೊಳ್ಳುವ ಕೆಲವು ಮನುಷ್ಯರೂ ನಿರ್ದುಷ್ಟರು ಎನ್ನುವ ಅಧ್ಯಾರೋಪ: ಈ ಮನುಷ್ಯರೇ ಅಪೌರುಷೇಯವಾದ ಬೋಧೆಯನ್ನು ತಾವು ಆರಿಸಿದ ಜನಕ್ಕೆ ತಿಳಿಯಪಡಿಸುವ ಹಕ್ಕುಳ್ಳವರು ಎನ್ನುವ ಕಲ್ಪನೆ.

ಸುವಾರ್ತೆಗಳಲ್ಲಿ ಸ್ವಲ್ಪ ಸೇರ್ಪಡೆಯನ್ನೂ ಸೃಷ್ಟಿಸಿದರು – ಕ್ರಿಸ್ತನು ಆಕಾಶಕ್ಕೆ ಏರಿಹೋಗುವಾಗ ಕೆಲವರಿಗೆ ವಿಶಿಷ್ಟವಾದ ಹಕ್ಕನ್ನು ಕೊಟ್ಟನಂತೆ; ಈ ಹಕ್ಕು ಇತರರಿಗೆ ದಿವ್ಯವಾದ ಬೋಧೆಯನ್ನು ಕೊಡಲು ಮಾತ್ರವಲ್ಲ (ಸುವಾರ್ತೆಯ ಅಕ್ಷರಾನುಗತವಾದ ಅರ್ಥದಂತೆ, ಅವನು ಆಗಲೇ ಅವರಿಗೆ ಹಾವುಗಳಿಂದಲೂ ವಿಷದಿಂದಲೂ ಕೊಲ್ಲಲ್ಪಡದೆ ಇರುವ ಗುಣವನ್ನೂ ಕೊಟ್ಟನಂತೆ, ಇದನ್ನು ಸಾಮಾನ್ಯವಾಗಿ ಬಳಸಿಕೊಂಡಿಲ್ಲ ಅಷ್ಟೆ.) ಯಾವ ಜನರು ರಕ್ಷಿಸಲ್ಪಡತಕ್ಕವರು ಯಾರು ಅಲ್ಲ ಎಂಬುದನ್ನೂ ಇವರು ನಿಶ್ಚಯಿಸುವ ಹಕ್ಕೂ ಇದರಲ್ಲಿ ಸೇರಿದೆ: ಮೇಲಾಗಿ ಇತರರಿಗೆ ಈ ಸಾಮರ್ಥ್ಯವನ್ನು ಕೊಡುವ ಹಕ್ಕೂ ಸೇರಿದೆ. ಇದರ ಫಲ, ಚರ್ಚ್ ಎನ್ನುವ ಕಲ್ಪನೆ ದೃಢವಾಗಿ ತಳವೂರಿದಮೇಲೆ ಸುವಾರ್ತೆಯಲ್ಲಿ ಕ್ರಿಸ್ತಬೋಧೆ ಕುಲಗೆಡುವ ವಿರುದ್ಧ ಮಾಡಿರುವ ಎಚ್ಚರಿಕೆಯೆಲ್ಲ ನಿಷ್ಕ್ರಿಯವಾಯಿತು: ಏಕೆಂದರೆ ಚರ್ಚ್ ವಿಚಾರಕ್ಕಿಂತಲೂ ಪವಿತ್ರವೆನಿಸಿಕೊಂಡ ಬರಹಗಳಿಗಿಂತಲೂ ಮಿಗಿಲಾದುದು. ವಿಚಾರ ದೋಷಗಳಿಗೆ ಆಕರವೆಂದು ಪರಿಗಣಿತವಾಯಿತು. ಸುವಾರ್ತೆಗಳನ್ನು ಸಾಮಾನ್ಯಬುದ್ಧಿಗೆ ತಿಳಿಯುವಂತೆ ಅಲ್ಲದೆ ಚರ್ಚ್ ಜನಕ್ಕೆ ಅನುಕೂಲವಾಗುವಂತೆ ವಿವರಿಸಲಾಯಿತು.

ಹೀಗೆ ಧರ್ಮವನ್ನು ಕುಲಗೆಡಿಸುವ ಮೊದಲಿನ ಮೂರುವಿಧಾನಗಳು – ಪುರೋಹಿತವರ್ಗ, ಪವಾಡಗಳು, ಧರ್ಮಗ್ರಂಥಗಳ ಅಪೌರುಷೇಯತ್ವ – ಕ್ರೈಸ್ತಧರ್ಮದಲ್ಲಿ ಸಂಪೂರ್ಣವಾಗಿ ಮೂಡಿಬಂದವು. ದೇವರಿಗೂ ಮನುಷ್ಯನಿಗೂ ನಡುವೆ ಮಧ್ಯಸ್ಥಿಕೆಯನ್ನು ವಹಿಸುವ ಜನ ಅಂಗೀಕೃತರಾದರು. ಏಕೆಂದರೆ ಚರ್ಚ್ ಈ ಮಧ್ಯಸ್ಥರ ಅಗತ್ಯವನ್ನೂ ಅಧಿಕಾರವನ್ನೂ ಒಪ್ಪಿಕೊಂಡಿತು: ಪವಾಡಗಳ ಪ್ರಾಮಾಣ್ಯವೂ ಅಂಗೀಕೃತ

ವಾಯಿತು, ಏಕೆಂದರೆ ನಿರ್ದೋಷವಾದ ಚರ್ಚ್ ಇದನ್ನು ಸಮರ್ಥಿಸಿತು: ಬೈಬಲ್ಲಿನ ಪಾವಿತ್ರ್ಯವೂ ಅಂಗೀಕೃತವಾಯಿತು. ಏಕೆಂದರೆ ಚರ್ಚ್ ಅದನ್ನು ಒಪ್ಪಿಕೊಂಡಿತು.

ಉಳಿದೆಲ್ಲ ಧರ್ಮಗಳು ಕುಲಗೆಟ್ಟಂತೆಯೇ ಕ್ರೈಸ್ತಧರ್ಮವೂ ಕುಲಗೆಟ್ಟಿತು. ಆದರೆ ಇದೊಂದು ವ್ಯತ್ಯಾಸವಿದ್ದಿತು–ದೇವರ ಮಕ್ಕಳೆಂಬ ಕಾರಣದಿಂದ ಎಲ್ಲ ಮನುಷ್ಯರೂ ಸಮ ಎನ್ನುವ ಮೂಲ ತತ್ತ್ವವನ್ನು ಕ್ರೈಸ್ತಧರ್ಮ ಸ್ಪಷ್ಟವಾಗಿ ನಿರೂಪಿಸಿತಾಗಿ, ಈ ಮೂಲಭೂತವಾದ ತತ್ತ್ವವನ್ನು ಮರೆಮಾಚಲು ಇಡೀ ಬೋಧೆಯನ್ನೇ ಪ್ರಬಲವಾಗಿ ಕುಲಕೆಡಿಸಬೇಕಾದ ಅಗತ್ಯವಿದ್ದಿತು. ಚರ್ಚ್ ಎನ್ನುವ ಕಲ್ಪನೆಯ ನೆರವಿನಿಂದ ಈ ಧರ್ಮದಲ್ಲಿ ಬೇರೆ ಯಾವ ಧರ್ಮಕ್ಕಿಂತ ಹೆಚ್ಚಾಗಿ ಇದು ನಡೆದಿದೆ. ಚರ್ಚ್ ಕ್ರೈಸ್ತ ಧರ್ಮ ಬೋಧಿಸಿರುವಷ್ಟು ಅನೈತಿಕ, ವಿಚಾರಗಳಿಗಾಗಲೀ ವರ್ತಮಾನ ಜ್ಞಾನದ ನೆಲೆಗಾಗಲೀ ತೀರ ಅಸಂಬದ್ಧ ತತ್ತ್ವಗಳು ಬೇರೆ ಯಾವ ಧರ್ಮದಲ್ಲಿಯೂ ಇಲ್ಲ. ಸೂರ್ಯನಿಗಿಂತ ಮುಂಚೆ ಬೆಳಕು ಸೃಷ್ಟವಾಯಿತು. ಆರು ಸಾವಿರ ವರ್ಷಗಳ ಹಿಂದೆ ಜಗತ್ಸೃಷ್ಟಿಯಾಯಿತು, ನಾವೆಯಲ್ಲಿ ಎಲ್ಲ ಪ್ರಾಣಿಗಳನ್ನೂ ಅಳವಡಿಸಲಾಯಿತು ಎನ್ನುವ ಹಳೆಯ ಒಡಂಬಡಿಕೆಯಲ್ಲಿ ಬರುವ ಅಸಂಬದ್ಧ ವಿವರಗಳಿರಲಿ; ಅಥವಾ ದೇವರ ಆಣತಿಯಂತೆ ಮಕ್ಕಳನ್ನೂ ಇಡೀ ಜನಸಮುದಾಯವನ್ನೂ ಕೊಲ್ಲಬೇಕೆಂಬ ಶಾಸನದಂಥ ಹಲವು ಅನೈತಿಕ ಘೋರ ವಿವರಗಳಿರಲಿ: ಹಲವಾರು ಅಸಂಬದ್ಧ ಧಾರ್ಮಿಕ ತತ್ತ್ವಗಳಿದ್ದರೂ ಧರ್ಮದಲ್ಲಿ ಮುಖ್ಯವಿಧಿಯೆಂದರೆ ತನ್ನ ದೇವರನ್ನೇ ತಿನ್ನುವುದೆಂಬಷ್ಟು ಅಸಂಬದ್ಧವಾದುದು ಬೇರೆಯಾವುದೂ ಇರದು ಎಂದು ವೋಲ್ಟೇರ್ ವರ್ಣಿಸಿದ ಅಸಂಬದ್ಧ ಸಂಸ್ಕಾರ (ಸ್ಯಾಕ್ರಮೆಂಟ್) ವಿಚಾರವೂ ಇರಲಿ: ಅವನ್ನೆಲ್ಲ ಹೇಳುವುದು ಬೇಡ. ಆದರೆ ದೇವರ ತಾಯಿ ತಾಯಿಯೂ ಹೌದು ಕನ್ಯೆಯೂ ಹೌದು ಎನ್ನುವುದಕ್ಕಿಂತ. ಆಕಾಶ ತೆರೆದು ಅದರಿಂದ ಧ್ವನಿ ಹೇಳಿತು ಎನ್ನುವುದಕ್ಕಿಂತ. ಕ್ರಿಸ್ತನು ಆಕಾಶಕ್ಕೆ ಹಾರಿ ಅಲ್ಲೆಲ್ಲಿಯೋ ತನ್ನ ತಂದೆಯ ಬಲಭಾಗದಲ್ಲಿ ಕೂರುವನು ಎನ್ನುವುದಕ್ಕಿಂತ, ದೇವರು ಒಂದೂ ಹೌದು ಮೂರು ಹೌದು (ಬ್ರಹ್ಮ, ವಿಷ್ಣು, ಶಿವರಂತೆ ಮೂರುದೇವತೆಗಳಲ್ಲ, ಒಂದೇ ದೇವತೆ ಆದರೂ ಮೂರು) ಎನ್ನುವುದಕ್ಕಿಂತ ಹೆಚ್ಚು ಅಸಂಬದ್ಧವಾದುದು ಯಾವುದು? ಅದಾಮ್ ಮಾಡಿದ ಪಾಪಕ್ಕೆ ಸಿಟ್ಟುಗೊಂಡು ಎಲ್ಲ ಮನುಷ್ಯರನ್ನೂ ಶಿಕ್ಷಿಸುತ್ತಿರುವ, ತನ್ನ ಮಗನನ್ನು ಕೊಂದು ಜನ ನರಕಕ್ಕೆ ಹೋಗುವರು ಎಂದು ಮೊದಲೇ ತಿಳಿದಿದ್ದರೂ ಅವರನ್ನು ರಕ್ಷಿಸಲು ತನ್ನ ಮಗನನ್ನು ಕಳುಹಿಸಿದ ಅನ್ಯಾಯಕಾರಿ ದೇವರು ಎಂದು ಹೇಳಿದ ಭೀಕರ ತತ್ತ್ವಕ್ಕಿಂತಲೂ ಅಸಂಬದ್ಧವಾದುದು ಯಾವುದು? ಜ್ಞಾನಸ್ನಾನದಿಂದ ಪಾಪಮುಕ್ತಿಯಾಗುತ್ತದೆ ಎಂದೋ, ಮೇಲೆ ಹೇಳಿದುದೆಲ್ಲ ದಿಟವಾಗಿ ನಡೆದುದೆಂದು ನಂಬಬೇಕು ಎಂದೋ, ಜನ ಮುಕ್ತರಾಗಲಿ ಎಂದೇ ದೇವರ ಮಗ ಜನರಿಂದ ಕೊಲ್ಲಲ್ಪಟ್ಟನೆಂದೋ, ಇದನ್ನೆಲ್ಲ ನಂಬದಿದ್ದವರನ್ನು ದೇವರು ನಿರಂತರವಾದ ಯಾತನೆಗಳಿಂದ ಶಿಕ್ಷಿಸುವನೆಂದೋ ಹೇಳುವ ತತ್ತ್ವಗಳಿಗಿಂತ ಅಸಂಬದ್ಧವಾದುದು ಯಾವುದು?

ಹಲವಾರು ಪವಿತ್ರ ಅವಶೇಷಗಳು, ದೇವಮಾತೆಯರ ಮೂರ್ತಿಗಳು, ತನ್ನದೇ ವೈಶಿಷ್ಟ್ಯವಿರುವ ಹಲವಾರು ಸಂತರಲ್ಲಿ ಕಾಮ್ಯಪ್ರಾರ್ಥನೆಗಳನ್ನು ಸಲ್ಲಿಸುವುದು ಮೊದಲಾದುವು ಈ ಧರ್ಮದ ಮುಖ್ಯ ಪ್ರಣಾಳಿಕೆಗಳಿಗೆ ಸೇರ್ಪಡೆಗಳು ಎಂದು ಕೆಲವರು ಬಗೆಯುತ್ತಾರೆ. ಇವನ್ನೂ, ಪ್ರಾಟೆಸ್ಟೆಂಟರ ಪೂರ್ವನಿಯಮನ ಸಿದ್ಧಾಂತವನ್ನೂ ಪರಿಗಣಿಸದೆ ಬಿಟ್ಟರೂ, ಎಲ್ಲರೂ ಒಪ್ಪುವ ನೈಸೀನ್‌ಕ್ರೀಡ್‌ನಲ್ಲಿ ನಿರೂಪಿಸಿರುವ ಈ ಧರ್ಮದ ಮೂಲತತ್ತ್ವಗಳೇ ಅಸಂಬದ್ಧ, ಅನೈತಿಕ; ಸದ್ಭಾವನೆಗೂ ಸಾಮಾನ್ಯ ಬುದ್ಧಿಗೂ ವಿರುದ್ಧವಾದುವು. ಜನರು ತುಟಿಗಳಿಂದ ಯಾವುದಾದರೂ ಮಾತಿನ ರೂಪವನ್ನು ಉಚ್ಚರಿಸಬಹುದು, ಆದರೆ ಅರ್ಥವಿಲ್ಲದ ವಿಚಾರಗಳನ್ನು ನಂಬಲಾರರು. 'ಜಗತ್ತು ಆರು ಸಾವಿರವರ್ಷಗಳ ಹಿಂದೆ ಸೃಷ್ಟಿಯಾಯಿತು' ಎಂದೋ 'ದೇವರು ಒಂದು ಮತ್ತು ಮೂರು' ಎಂದೋ, 'ಕ್ರಿಸ್ತನು ಆಕಾಶಕ್ಕೆ ಹಾರಿಹೋಗಿ ತನ್ನ ತಂದೆಯ ಪಕ್ಕದಲ್ಲಿ ಕುಳಿತ' ನೆಂದೋ ನಾನು ನಂಬುತ್ತೇನೆ ಎಂದು ಬಾಯಿಂದ ಹೇಳಬಹುದು. ಆದರೆ ಇವನ್ನು ಯಾರೂ ನಂಬಲಾರರು, ಏಕೆಂದರೆ ಆ ಪದಗಳಿಗೆ ಅರ್ಥವಿಲ್ಲ; ಆದುದರಿಂದ ಕುಲಗೆಟ್ಟಿರುವ ಕ್ರೈಸ್ತಧರ್ಮವನ್ನು ಅನುಸರಿಸುತ್ತಿರುವ ಆಧುನಿಕ ವಿಶ್ವದ ಜನರು ದಿಟವಾಗಿ ಏನನ್ನೂ ನಂಬುವುದಿಲ್ಲ.

ಇದೇ ನಮ್ಮ ಯುಗದ ವಿಚಿತ್ರಲಕ್ಷಣ.

## 7

ನಮ್ಮ ಕಾಲದ ಜನ ಯಾವುದನ್ನೂ ನಂಬುವುದಿಲ್ಲ; ಆದರೂ 'ಹಿಬ್ರೂಗಳಿಗೆ ಪತ್ರ' (ಇದನ್ನು ಪಾಲ್ ಬರೆದುದೆಂದು ತಪ್ಪಾಗಿ ತಿಳಿದಿದ್ದಾರೆ) ದಿಂದ ಆರಿಸಿಕೊಂಡ ಅಸತ್ಯ ನಿರೂಪಣೆಯನ್ನು ಬಳಸಿಕೊಂಡು ತಮಗೆ ಶ್ರದ್ಧೆಯಿದೆಯೆಂದು ತಿಳಿದುಕೊಂಡಿದ್ದಾರೆ. ಈ ನಿರೂಪಣೆಯಂತೆ ಶ್ರದ್ಧೆ 'ನಿರೀಕ್ಷಿಸುವ ಪದಾರ್ಥಗಳ ಸಾರ, ಕಾಣಿಸದ ವಸ್ತುಗಳಿಗೆ ಪ್ರಮಾಣ' (ಹಿಬ್ರೂ 11, 1). ಆದರೆ – ಶ್ರದ್ಧೆಯೆನ್ನುವುದು ಪದಾರ್ಥವಲ್ಲ, ಬಾಹ್ಯವಸ್ತುವಲ್ಲ, ಮಾನಸಿಕಸ್ಥಿತಿ ಎಂಬುದನ್ನು ಪರಿಗಣಿಸದಿದ್ದರೂ – 'ಕಾಣಿಸದ ವಸ್ತುಗಳಿಗೆ ಪ್ರಮಾಣ' ವಾಗಲಾರದು ಶ್ರದ್ಧೆ, ಏಕೆಂದರೆ ಪತ್ರದಲ್ಲಿ ಹೇಳಿರುವ ಪ್ರಮಾಣ ಈ ಸಂದರ್ಭದಲ್ಲಿ ಕೇವಲ ನಂಬಿಕೆ; ನಂಬಿಕೆ, ಶ್ರದ್ಧೆ ಎರಡೂ ಬೇರೆಬೇರೆ.

ಶ್ರದ್ಧೆ ನಿರೀಕ್ಷೆಯೂ ಅಲ್ಲ, ನಂಬಿಕೆಯೂ ಅಲ್ಲ; ಜೀವದ ಒಂದು ವಿಶೇಷ ಸ್ಥಿತಿ. ಪ್ರಪಂಚದಲ್ಲಿ ತನ್ನ ಸ್ಥಾನದ ಕಾರಣದಿಂದ ಕೆಲವು ಕೆಲಸಗಳನ್ನು – ಮಾಡಲೇಬೇಕು, ಎನ್ನುವ ಅರಿವೇ ಶ್ರದ್ಧೆ. ಮನುಷ್ಯ ತನ್ನ ಶ್ರದ್ಧೆಗನುಗುಣವಾಗಿ ಕೆಲಸಮಾಡುತ್ತಾನೆ; ನಮ್ಮ ರಷ್ಯನ್ ಕ್ಯಾಟಿಕಸಂನಲ್ಲಿ ಹೇಳಿರುವಂತೆ ಕಾಣುವುದನ್ನೂ ಕಾಣದಿದ್ದುವನ್ನೂ ನಂಬುತ್ತಾನೆ ಎಂಬ ಕಾರಣದಿಂದಲ್ಲ, ತನ್ನ ನಿರೀಕ್ಷೆಯನ್ನು ಮುಟ್ಟಲು ಆಸೆಪಡುತ್ತಾನೆ ಎಂದೂ ಅಲ್ಲ, ಪ್ರಪಂಚದಲ್ಲಿ ತನ್ನ ಸ್ಥಾನವನ್ನು ಸ್ಪಷ್ಟಪಡಿಸಿಕೊಂಡು ಆ ಸ್ಥಾನಕ್ಕನುಗುಣವಾಗಿ

ಸಹಜವಾಗಿಯೇ ಕೆಲಸಮಾಡುತ್ತಾನೆ. ರೈತ ಭೂಮಿಯನ್ನೂಳುತ್ತಾನೆ, ನಾವಿಕ ಸಮುದ್ರ ಪ್ರಯಾಣಕ್ಕೆ ಹೊರಡುತ್ತಾನೆ. ಅಲ್ಲವೇ? ಕ್ಯಾಟಕಿಸಂ ಹೇಳುವಂತೆ. ಕಾಣದಿದ್ದುದನ್ನೂ, ಅವನು ನಂಬುತ್ತಾನೆ ಎಂದಲ್ಲ. ತನ್ನ ಕೆಲಸಕ್ಕೆ ಪ್ರತಿಫಲವನ್ನು ಬಯಸುತ್ತಾನೆ ಎಂದಲ್ಲ (–ಈ ಬಯಕೆ ಇರುತ್ತದೆ, ಆದರೆ ಇದೇ ಅವನ ಕೆಲಸಕ್ಕೆ ಮಾರ್ಗದರ್ಶಿಯಾಗದು), ಆದರೆ ಅವರ ಪ್ರವೃತ್ತಿಗನುಗುಣವಾದ ಕೆಲಸ ಅದು ಎನ್ನುವ ಕಾರಣದಿಂದ. ಹೀಗೆಯೇ ಧಾರ್ಮಿಕಶ್ರದ್ಧೆಯುಳ್ಳ ಮನುಷ್ಯ ಒಂದು ನಿರ್ದಿಷ್ಟರೀತಿಯಲ್ಲಿ ಕೆಲಸಮಾಡುತ್ತಾನೆ, ಕಣ್ಣಿಗೆ ಕಾಣದುದನ್ನು ನಂಬುತ್ತಾನೆ ಎಂದಾಗಲೀ ಕೆಲಸಕ್ಕೆ ಪ್ರತಿಫಲವನ್ನು ಅಪೇಕ್ಷಿಸುತ್ತಾನೆ ಎಂದಾಗಲೀ ಅಲ್ಲ. ವಿಶ್ವದಲ್ಲಿ ತನ್ನ ಸ್ಥಾನವನ್ನು ಕಂಡುಕೊಂಡು ಆ ಸ್ಥಾನಕ್ಕನುಗುಣವಾಗಿ ಸಹಜವಾಗಿಯೇ ಕೆಲಸಮಾಡುತ್ತಾನೆ. ಸಮಾಜದಲ್ಲಿ ತನ್ನ ಸ್ಥಾನ ಕಾರ್ಮಿಕನದು, ಕುಶಲಕರ್ಮಿಯದು, ಅಧಿಕಾರಿಯದು, ವರ್ತಕನದು, ಎಂದು ಒಬ್ಬ ಮನುಷ್ಯ ನಿರ್ಧರಿಸಿ ಕೊಂಡರೆ ಅವನು ಆ ಕೆಲಸವನ್ನು ಮಾಡುತ್ತಾನೆ. ಸಾಮಾನ್ಯವಾಗಿ ಮನುಷ್ಯರು, ಜಗತ್ತಿನಲ್ಲಿ ತಂತಮ್ಮ ಸ್ಥಾನಗಳನ್ನು ಒಂದಲ್ಲ ಒಂದು ರೀತಿಯಲ್ಲಿ ನಿರ್ದೇಶಿಸಿಕೊಂಡಮೇಲೆ ಆ ನಿರ್ದೇಶನದ ಪ್ರಕಾರ ಸಹಜವಾಗಿ, ಅನಿವಾರ್ಯವಾಗಿ ಕೆಲಸಮಾಡುತ್ತಾರೆ; ಕೆಲವು ಬಾರಿ ನಿರ್ದೇಶನಕ್ಕಿಂತ ಅಸ್ಪಷ್ಟ ಅರಿವು ಎನ್ನಬಹುದು. ನಿದರ್ಶನಕ್ಕೆ ಒಬ್ಬ ಮನುಷ್ಯ ದೇವರು ಆರಿಸಿಕೊಂಡ ರಾಷ್ಟ್ರಕ್ಕೆ ಸೇರಿದವನು ತಾನೆಂದು ತನ್ನ ಸ್ಥಾನವನ್ನು ನಿರ್ದೇಶಿಸಿಕೊಂಡಿದ್ದಾನೆನ್ನಿ; ದೇವರ ರಕ್ಷಣೆಯನ್ನು ಸಂಪೂರ್ಣವಾಗಿ ಪಡೆಯಬೇಕಾದರೆ ಅವನ ಆದೇಶವನ್ನು ನಡೆಯಿಸಬೇಕು; ಆದುದರಿಂದ ಆ ಆದೇಶಗಳನ್ನು ನಡೆಯಿಸುವ ಹಾಗೆ ತನ್ನ ಬಾಳನ್ನು ಬಾಳುವನು. ಇನ್ನೊಬ್ಬ ಮನುಷ್ಯ ತಾನು ಈಗಾಗಲೇ ಹಲವಾರು ಜನ್ಮಗಳನ್ನೆತ್ತಿದ್ದೇನೆ, ಮುಂದೆ ಹಲವಾರು ಜನ್ಮಗಳನ್ನು ಕಳೆಯಬೇಕು ಎನ್ನುವ ನಂಬಿಕೆಯ ಮೇಲೆ ತನ್ನ ಸ್ಥಾನವನ್ನು ನಿರ್ದೇಶಿಸಿಕೊಂಡನೆನ್ನಿ. ತನ್ನ ಕರ್ಮಗಳ ಮೇಲೆ ಬಹುಮಟ್ಟಿಗೆ ಭವಿಷ್ಯ ಒಳಿತೋ ಕೆಟ್ಟದ್ದೋ ಎಂಬುದು ನಿರ್ಧರವಾಗುತ್ತದೆ ಎನ್ನುವುದೂ ಅವನ ನಂಬಿಕೆಯಾದುದರಿಂದ. ಈ ನಿರ್ದೇಶನಕ್ಕೆ ತಕ್ಕಂತೆ ಬಾಳನ್ನು ಅಳವಡಿಸಿಕೊಳ್ಳುತ್ತಾನೆ. ಮೂರನೆಯ ಮನುಷ್ಯ ಅಣುಗಳು ಅಕಸ್ಮಾತ್ತಾಗಿ ಸೇರಿ ಅದರಲ್ಲಿ ತಾತ್ಕಾಲಿಕವಾಗಿ ಚೈತನ್ಯ ಕಾಣಿಸಿಕೊಂಡು, ಮುಂದೆ ಅದು ಅವಶ್ಯವಾಗಿ ಎಂದೆಂದಿಗೂ ತೀರಿಹೋಗಲೇ ಬೇಕು ಎಂದು ನಂಬಿ ತನ್ನ ಸ್ಥಾನವನ್ನು ನಿರ್ದೇಶಿಸಿ ಕೊಂಡರೆ, ಮೇಲಿನ ಇಬ್ಬರಿಗಿಂತಲೂ ಅವನ ಬಾಳು ಬೇರೆಯಾಗಿಯೇ ಇರುತ್ತದೆ.

ಈ ಮನುಷ್ಯರ ವರ್ತನೆಗಳು ಅತ್ಯಂತ ವಿಭಿನ್ನವಾಗಿರುತ್ತವೆ. ಏಕೆಂದರೆ ಅವರವರು ತಂತಮ್ಮ ಸ್ಥಾನಗಳನ್ನು ವಿಭಿನ್ನವಾಗಿ ನಿರ್ದೇಶಿಸಿಕೊಂಡಿದ್ದಾರೆ, ಎಂದರೆ ಅವರ ಶ್ರದ್ಧೆಗಳು ವಿಭಿನ್ನವಾದುವು. ಶ್ರದ್ಧೆಯೆಂದರೆ ಧರ್ಮವೇ, ಒಂದು ವ್ಯತ್ಯಾಸ ಅಷ್ಟೆ – ಧರ್ಮವೆಂದರೆ ನಮ್ಮಿಂದ ಹೊರಗೆ ಕಾಣಿಸಿಕೊಳ್ಳುವುದು ಎನ್ನುವ ಇಂಗಿತವಿದೆ, ಶ್ರದ್ಧೆಯೆಂದರೆ ಅದೇ ಆದರೂ ಮನುಷ್ಯ ತನ್ನೊಳಗೆ ಅದನ್ನು ಅನುಭವಿಸುತ್ತಾನೆ.

ಅನಂತವಿಶ್ವದೊಂದಿಗೆ ತನ ನಂಟನ್ನು ಅರಿತುಕೊಳ್ಳುವುದು ಶ್ರದ್ಧೆ: ಈ ನಂಟಿನಿಂದಲೇ ಕೆಲಸದ ದಾರಿ ನಿರ್ಧರವಾಗುತ್ತದೆ. ಆದುದರಿಂದ ದಿಟವಾದ ಶ್ರದ್ಧೆ ಯಾವಾಗಲೂ ವಿಚಾರಹೀನವಾಗಲಾರದು, ನಮ್ಮ ಇಂದಿನ ಜ್ಞಾನಕ್ಕೆ ಅಸಂಬದ್ಧವೆನಿಸಲಾರದು. ಜನಗಳು ಅಂದುಕೊಳ್ಳುವಂತೆ (ಫ್ರೆಂಚ್ ಕ್ರೈಸ್ತ ಗುರುವೊಬ್ಬ ಸೂಚಿಸಿದ "ಅಸಂಬದ್ಧವಾಗಿರುವುದರಿಂದ ಅದನ್ನು ನಾನು ನಂಬುತ್ತೇನೆ" ಎಂದು) ಅತಿಪ್ರಾಕೃತ. ಅಸಂಬದ್ಧ ಇವು ಶ್ರದ್ಧೆಯ ಲಕ್ಷಣವಾಗಲಾರವು. ದಿಟವಾದ ಶ್ರದ್ಧೆಯಿಂದ ಬಂದ ಮಾತನ್ನು ಪ್ರಮಾಣ ಮಾಡಲಾಗದೇ ಇರಬಹುದು; ಆದರೆ ಅದರಲ್ಲಿ ವಿಚಾರಕ್ಕಾಗಲೀ ಮಾನವ ಜ್ಞಾನಕ್ಕಾಗಲೀ ವಿರುದ್ಧವಾದುದು ಏನೂ ಇರದು, ಜೀವನದಲ್ಲಿ ಶ್ರದ್ಧೆ ಮೂಡಿಸಿದ ಭಾವನೆಗಳಿರದಿದ್ದರೆ ವಿಚಾರಶೂನ್ಯ, ಸ್ವವಿರುದ್ಧ ಎನಿಸಬಹುದು.

ಉದಾಹರಣೆಗೆ ಪ್ರಾಚೀನ ಯೆಹೂದಿ ಪರಾತ್ಪರನಾದ, ಶಾಶ್ವತನಾದ, ಸರ್ವಶಕ್ತನಾದ ದೇವರು ವಿಶ್ವವನ್ನೂ ಪ್ರಪಂಚವನ್ನೂ ಪ್ರಾಣಿಗಳನ್ನೂ ಮನುಷ್ಯರನ್ನೂ ಸೃಷ್ಟಿ ಮಾಡಿ, ತನ್ನ ನಿಯಮಗಳನ್ನು ಅನುಸರಿಸುವ ಜನರನ್ನು ತಾನು ಕಾಪಿಡುತ್ತೇನೆ ಎಂದು ಆಶ್ವಾಸನೆಯನ್ನು ಕೊಟ್ಟನೆಂದು ನಂಬುತ್ತಾನೆ. ವಿಚಾರಶೂನ್ಯವಾದುದನ್ನಾಗಲೀ ತನ್ನ ಜ್ಞಾನಕ್ಕೆ ಅಳವಡದುದನ್ನಾಗಲೀ ಏನನ್ನೂ ಅವನು ನಂಬುವುದಿಲ್ಲ. ಅದಕ್ಕೆ ಬದಲಾಗಿ ಈ ಶ್ರದ್ಧೆ ಬದುಕಿನ ಹಲವಾರು ವಿವರಗಳನ್ನು ಅವನಿಗೆ ಮನದಟ್ಟುಮಾಡಿಕೊಟ್ಟಿದೆ; ಈ ಶ್ರದ್ಧೆಯಿಲ್ಲದಿದ್ದರೆ ಬದುಕಿನ ವಿವರಗಳು ಅರ್ಥವಾಗುವುದೇ ಇಲ್ಲ ಅವನಿಗೆ.

ಹೀಗೆಯೇ ಹಿಂದುವು ನಮ್ಮೆಲ್ಲರ ಆತ್ಮಗಳೂ ಪ್ರಾಣಿಗಳಲ್ಲಿ ನೆಲೆಸಿದ್ದು, ಅವುಗಳ ಒಳ್ಳೆಯ ಅಥವಾ ಕೆಟ್ಟ ಬಾಳ್ವಿಕೆಯಂತೆ ಮೇಲ್ಮಟ್ಟದ ಅಥವಾ ಕೆಳಮಟ್ಟದ ಪ್ರಾಣಿಗಳಾಗಿ ಸಂಕ್ರಮಿಸುವುವೆಂದು ನಂಬುತ್ತಾನೆ: ಈ ಶ್ರದ್ಧೆಯ ಆಧಾರದ ಮೇಲೆ ಹಲವಾರು ಸಂಗತಿಗಳನ್ನು ತನಗೆ ತಾನೇ ವಿವರಿಸಿಕೊಳ್ಳುತ್ತಾನೆ: ಅದಿಲ್ಲದಿದ್ದರೆ ವಿವರಗಳು ಅವನಿಗೆ ಅರ್ಥವಾಗುವುದಿಲ್ಲ.

ಹೀಗೆಯೇ ಬದುಕು ಪಾಪವೆಂದೂ, ಬದುಕಿನ ಗುರಿ ಆಸೆಗಳ ನಾಶದಿಂದ ಒದಗುವ ಶಾಂತಿಯೆಂದೂ ನಂಬುವವನ ವಿಚಾರವೂ. ವಿಚಾರಶೂನ್ಯವೆನಿಸಿದುದನ್ನು ಏನನ್ನೂ ಅವನು ನಂಬುವುದಿಲ್ಲ; ಅದಕ್ಕೆ ವಿರುದ್ಧವಾಗಿ, ಆ ಶ್ರದ್ಧೆಯಿರದಿದ್ದರೆ ಇರುವುದಕ್ಕಿಂತಲೂ ಶ್ರದ್ಧೆಯಿದ್ದರೆ ಅವನ ಜೀವನದೃಷ್ಟಿ ಹೆಚ್ಚು ವಿಚಾರಶೀಲವಾಗಿರುತ್ತದೆ.

ದೇವರು ಎಲ್ಲ ಮನುಷ್ಯರ ಆಧ್ಯಾತ್ಮಿಕ ತಂದೆಯೆಂದೂ, ತಾನು ದೇವರ ಮಗನೆಂದೂ ಎಲ್ಲ ಮನುಷ್ಯರೂ ಸೋದರರೆಂದೂ ಬಗೆದಾಗ ಮಾತ್ರ ಮನುಷ್ಯನ ಸರ್ವೋತ್ಕೃಷ್ಟತೆ ಸಿದ್ಧವಾಗುವುದೆಂದೂ ನಂಬುವ ದಿಟವಾದ ಕ್ರೈಸ್ತನ ವಿಚಾರದಲ್ಲಿಯೂ ಇದು ನಿಜ.

ಈ ಎಲ್ಲ ಶ್ರದ್ಧೆಗಳನ್ನೂ ಪ್ರಮಾಣೀಕರಿಸುವುದಾಗದು; ಆದರೆ ತಮ್ಮಲ್ಲಿ ಅವು ವಿಚಾರಶೂನ್ಯಗಳೇನಲ್ಲ. ಅಷ್ಟಲ್ಲದೆ, ಬದುಕಿನ ಪ್ರಸಂಗಗಳಿಗೆ ವಿಚಾರಯುಕ್ತವಾದ ಅರ್ಥವನ್ನು ಅವು ಒದಗಿಸುತ್ತವೆ; ಅವಿಲ್ಲದೆ ಬದುಕಿನ ಪ್ರಸಂಗಗಳು ವಿಚಾರಶೂನ್ಯ, ವಿಸಂಗತ ಎನಿಸುವುವು. ಮೇಲಾಗಿ ಈ ಎಲ್ಲ ಶ್ರದ್ಧೆಗಳೂ, ವಿಶ್ವದಲ್ಲಿ ಮನುಷ್ಯನ ಸ್ಥಾನವನ್ನು ನಿರ್ದೇಶಿಸಿ ಆ ಸ್ಥಾನಕ್ಕೆ ಸರಿಯಾದ ವರ್ತನೆಯನ್ನು ಅನಿವಾರ್ಯವಾಗಿಯೇ ನಿರೀಕ್ಷಿಸುತ್ತವೆ. ಆದುದರಿಂದ ಯಾವುದಾದರೂ ಧಾರ್ಮಿಕ ಬೋಧೆ ವಿಚಾರಶೂನ್ಯವಾದ ವಾಕ್ಯಗಳನ್ನೇ ಉಪದೇಶಿಸುತ್ತ ಏನನ್ನೂ ವಿವರಿಸದೆ, ಮನುಷ್ಯನು ಬದುಕನ್ನು ಅರಿತು ಕೊಳ್ಳುವಲ್ಲಿ ಗೊಂದಲವನ್ನು ಮಾತ್ರ ಮಾಡುವುದಾದರೆ, ಅದು ಶ್ರದ್ಧೆಯೇ ಅಲ್ಲ, ಶ್ರದ್ಧೆಯ ವಿಕಾರ ರೂಪ. ಅದರಲ್ಲಿ ಆಗಲೇ ಶ್ರದ್ಧೆಯ ದಿಟವಾದ ಲಕ್ಷಣ ಕಾಣೆಯಾಗಿದೆ; ಮನುಷ್ಯರಿಂದ ಏನನ್ನೂ ನಿರೀಕ್ಷಿಸುವುದಕ್ಕೆ ಬದಲಾಗಿ ಅವರು ಬೇಕಾದಂತೆ ಬಳಸಬಹು ದಾದ ಸಾಧನವಾಗಿಬಿಟ್ಟಿದೆ. ದಿಟವಾದ ಶ್ರದ್ಧೆ ಮತ್ತು ಅದರ ವಿಕಾರ ಇವುಗಳಲ್ಲಿನ ಮುಖ್ಯಭೇದಗಳಲ್ಲಿ ಒಂದೆಂದರೆ ವಿಕಾರವಾದ ಶ್ರದ್ಧೆಯಲ್ಲಿ ಮನುಷ್ಯ ತನ್ನ ಪ್ರಾರ್ಥನೆ ಬಲಿಗಳಿಗೆ ಬದಲು ದೇವರು ತನ್ನ ಬಯಕೆಗಳನ್ನು ತೀರಿಸಬೇಕು ಎಂದು ನಿರೀಕ್ಷಿಸುತ್ತಾನೆ; ದೇವರು ಮನುಷ್ಯನನ್ನು ಸೇವಿಸಬೇಕು. ಆದರೆ ದಿಟವಾದ ಶ್ರದ್ಧೆಯಲ್ಲಿ ಮನುಷ್ಯನು ಎಂದುಕೊಳ್ಳುವುದು ದೇವರು ತನ್ನ ಸಂಕಲ್ಪದ ಪೂರೈಕೆಯನ್ನು ನಮ್ಮಿಂದ ನಿರೀಕ್ಷಿಸು ತ್ತಾನೆ ಎಂದು: ಮನುಷ್ಯನು ದೇವರನ್ನು ಸೇವಿಸಬೇಕು ಎಂದು.

ನಮ್ಮ ಕಾಲದ ಜನರಲ್ಲಿ ಈ ಶ್ರದ್ಧೆಯೇ ಇಲ್ಲದಿರುವುದು – ಅದು ಹೇಗಿದ್ದೀತು ಎಂಬ ಅರಿವೂ ಅವರಿಗಿರದು. ಶ್ರದ್ಧೆಯೆಂದರೆ, ಅವರ ದೃಷ್ಟಿಯಲ್ಲಿ, ಶ್ರದ್ಧೆಯೇ ಸಾರ ವೆಂದು ಯಾವುದು ಅವರಿಗೆ ಬಂದಿದೆಯೋ ಅದನ್ನು ಬಾಯಿಂದ ಪುನರುಚ್ಚರಿಸುವುದು, ಅಥವಾ ತಮ್ಮ ಬಯಕೆಗಳನ್ನು ತೀರಿಸಿಕೊಳ್ಳಲು ಚರ್ಚ್–ಕ್ರೈಸ್ತಧರ್ಮ ಯಾವ ವಿಧಿಗಳನ್ನು ಹೇಳುತ್ತದೆಯೋ ಅದನ್ನು ಮಾಡುವುದು.

## 8

ನಮ್ಮ ಪ್ರಪಂಚದಲ್ಲಿ ಜನ ಶ್ರದ್ಧೆಯಿಲ್ಲದೆ ಬದುಕುತ್ತಾರೆ. ಒಂದು ಭಾಗ, ವಿದ್ಯಾವಂತರಾದ, ಶ್ರೀಮಂತರಾದ ಅಲ್ಪಸಂಖ್ಯಾತರು, ಚರ್ಚ್ ಸಂಮೋಹನದಿಂದ ಮುಕ್ತ ರಾದವರು, ಅವರು ಯಾವುದನ್ನೂ ನಂಬರು. ಪ್ರತಿಶ್ರದ್ಧೆಯನ್ನು ಅಸಂಬದ್ಧವೆಂದೋ ಜನರನ್ನು ದಾಸ್ಯದಲ್ಲಿರಿಸುವ ಉಪಾಯವೆಂದೋ ಪರಿಗಣಿಸುವವರು. ಬಹುಸಂಖ್ಯಾತ ರಾದ, ಬಡವರಾದ, ಅವಿದ್ಯಾವಂತರಾದವರು ಇನ್ನೊಂದು ಭಾಗ. ಕೆಲವರನ್ನು ಬಿಟ್ಟರೆ ಈ ಗುಂಪಿನಲ್ಲಿರುವವರು ದಿಟವಾಗಿ ಋಜುಮಾರ್ಗದವರು. ಚರ್ಚ್‌ನ ಸಂಮೋಹನದಲ್ಲಿಯೇ ಇರುವವರಾದುದರಿಂದ ಅವರಿಗೆ ಶ್ರದ್ಧೆಯೆಂದು ಏನು ಸೂಚನೆ ಬಂದಿದೆಯೋ ಅದನ್ನು ನಂಬುವವರು. ಆ ಸೂಚನೆ ನಿಜವಾಗಿ ಶ್ರದ್ಧೆಯಲ್ಲ, ಏಕೆಂದರೆ

ಜನರಿಗೆ ಪ್ರಪಂಚದಲ್ಲಿ ತಮ್ಮ ಸ್ಥಾನ ಏನು ಎಂದು ತಿಳಿಸುವುದರ ಬದಲು ಅದನ್ನು ಇದು ಮರೆಮಾಚುತ್ತದೆ.

ಈ ಸಂದರ್ಭ, ನಂಬದೆ ಇರುವ ಮತ್ತು ಋಜುಮಾರ್ಗದವರಲ್ಲದ ಅಲ್ಪಸಂಖ್ಯಾತರೊಂದಿಗೆ ಸಂಮೋಹನಕ್ಕೊಳಗಾದ ಬಹುಸಂಖ್ಯಾತರ ಸಂಬಂಧಗಳು ಇವೇ ನಮ್ಮ ಕ್ರೈಸ್ತರೆನಿಸಿಕೊಳ್ಳುವ ಪ್ರಪಂಚದ ಜೀವನವನ್ನು ರೂಪಿಸುವುವು. ಈ ಜೀವನ – ಸಂಮೋಹನದ ಸಾಧನವನ್ನು ತಮ್ಮ ಕೈಯಲ್ಲಿರಿಸಿಕೊಂಡಿರುವ ಅಲ್ಪಸಂಖ್ಯಾತರದ್ದು ಹಾಗೂ ಸಂಮೋಹನಕ್ಕೊಳಗಾದ ಬಹುಸಂಖ್ಯಾತರದ್ದು – ಭಯಾನಕವಾದುದು: ಕಾರಣ ಆಡಳಿತವರ್ಗದವರ ಕ್ರೌರ್ಯ ಮತ್ತು ಅನೈತಿಕತೆ, ಮತ್ತು ಕಾರ್ಮಿಕ ಬಹುಸಂಖ್ಯಾತ ವರ್ಗದವರ ದಲಿತ ಮತ್ತು ಸಂಭ್ರಾಂತ ಪರಿಸ್ಥಿತಿ. ಧಾರ್ಮಿಕ ಅವನತಿಯ ಯಾವ ಕಾಲದಲ್ಲಿಯೂ, ಎಲ್ಲ ಧರ್ಮಗಳ – ತತ್ರಾಪಿ ಕ್ರೈಸ್ತಧರ್ಮದ – ಮುಖ್ಯ ಲಕ್ಷಣವಾದ ಸರ್ವಮಾನವ ಸಮಾನತೆಯ ತತ್ತ್ವ ನಮ್ಮ ಕಾಲದಲ್ಲಿ ಇಳಿದಿರುವಷ್ಟು ಕೆಳಗೆ ಇಳಿದಿರಲಿಲ್ಲ.

ಮನುಷ್ಯ ಮನುಷ್ಯರಲ್ಲಿ ನಮ್ಮ ಕಾಲದಲ್ಲಿ ಕಂಡುಬರುತ್ತಿರುವ ಕ್ರೌರ್ಯಕ್ಕೆ ಮುಖ್ಯ ಕಾರಣ – ಧರ್ಮದ ಸಂಪೂರ್ಣ ಅಭಾವವನ್ನು ಬಿಟ್ಟು – ಜನರಿಂದ ತಮ್ಮ ಕ್ರಿಯೆಗಳ ಫಲವನ್ನು ಮರೆಮಾಚುವ ಜೀವನದ ಸುಸಂಸ್ಕೃತ ಜಟಿಲತೆ. ಅಟ್ಟಿಲಾಗಳು, ಚೆಂಗೀಸ್ ಖಾನರು ಮತ್ತು ಅವರ ಅನುಯಾಯಿಗಳು ಎಷ್ಟೇ ಕ್ರೂರರಾಗಿದ್ದಿರಲಿ ಜನರನ್ನು ಎದುರಿಗೇ ಕೊಲ್ಲುವ ಕೆಲಸ ಅವರಿಗೆ ಅಪ್ರಿಯವಾಗಿದ್ದಿರಬೇಕು, ಈ ಮಾರಣದ ಫಲ (ಸತ್ತವರ ನೆಂಟರ ಆಕ್ರಂದನ, ಶವಗಳು ಎದುರಿಗೇ ಇರುವುದು) ಇನ್ನೂ ಅಪ್ರಿಯವಾಗಿದ್ದಿರಬೇಕು. ಅವರ ಕ್ರೌರ್ಯದ ಫಲ ಅವರ ಕ್ರೌರ್ಯವನ್ನು ಕಡಮೆಮಾಡುತ್ತಿದ್ದಿತು. ಆದರೆ ಈಗ ನಾವು ಜನರನ್ನು ಕೊಲ್ಲುವುದು ಎಷ್ಟು ಜಟಿಲವಾದ ತಂತ್ರದಿಂದ ಎಂದರೆ, ನಮ್ಮ ಕ್ರೌರ್ಯದ ಫಲ ನಮ್ಮಿಂದ ದೂರವಾಗಿದ್ದು ಅದರ ಅರಿವೇ ನಮಗಿರುವುದಿಲ್ಲ. ನಮ್ಮ ಕ್ರೌರ್ಯವನ್ನು ಕಡಮೆಮಾಡುವ, ತಡೆಗಟ್ಟುವ ಫಲಗಳೇ ಇಲ್ಲ; ಹೀಗಾಗಿ ಒಂದು ವರ್ಗದ ಜನ ಇನ್ನೊಂದು ವರ್ಗದವರ ಮೇಲೆ ತೋರಿಸುವ ಕ್ರೌರ್ಯ ಹೆಚ್ಚುತ್ತಲೇ ಇದೆ; ಈ ಹೆಚ್ಚಳ ಈಗ ಯಾವ ಪ್ರಮಾಣದಲ್ಲಿದೆಯೋ ಅದು ಹಿಂದೆ ಯಾವ ಕಾಲದಲ್ಲಿಯೂ ಇರಲಿಲ್ಲ.

ನಾನು ಅಂದುಕೊಳ್ಳುತ್ತೇನೆ, ಈಗ ಯಾರಾದರೂ – ನಿರೋವಿನಂಥ ವಿಖ್ಯಾತನಾದ ಪಾಪಿಯೇ ಎಂದು ಹೇಳುವುದಿಲ್ಲ – ಯಾರಾದರೂ ವ್ಯಾಪಾರಮಾಡುವ ಸಾಮಾನ್ಯ ಮನುಷ್ಯನಿಗೆ ಮನುಷ್ಯ ರಕ್ತದ ಒಂದು ಕೊಳವನ್ನು ಏರ್ಪಡಿಸಬೇಕೆಂಬ ಬಯಕೆ ಬಂದಿತೆನ್ನಿ. ಶ್ರೀಮಂತರಾದ ರೋಗಿಗಳು ಈ ಕೊಳದಲ್ಲಿ ಸ್ನಾನಮಾಡಿದರೆ ರೋಗ ಗುಣವಾಗುತ್ತದೆ ಎಂದು ತಜ್ಞರಾದ ವೈದ್ಯರು ಸೂಚಿಸಿದರೆನ್ನಿ. ಈ ವ್ಯಾಪಾರಿ

ಇಂಥದೊಂದು ಕೊಳವನ್ನು ನಿರ್ಮಿಸುವುದಕ್ಕೆ ಯಾವ ಅಡ್ಡಿಯೂ ಇರದು; ಅವನು ಸರ್ವಸಮ್ಮತವಾದ, ಗಂಭೀರವೆನಿಸಿದ ಸಂವಿಧಾನಗಳನ್ನು ಅನುಸರಿಸಬೇಕಷ್ಟೆ. ನಿದರ್ಶನಕ್ಕೆ ಜನರು ರಕ್ತಸುರಿಯುವಂತೆ ಹಿಂಸೆಯನ್ನು ಬಳಸದೆ. ಹಾಗೆ ರಕ್ತಸುರಿಸದೆ ಬದುಕುವುದೇ ದುಸ್ತರವೆನ್ನುವ ಸ್ಥಿತಿಗೆ ಅವರನ್ನು ತರುವುದು. ಈ ಕೆಲಸಕ್ಕೆ ಪುರೋಹಿತರನ್ನೂ ವಿಜ್ಞಾನಿಗಳನ್ನೂ ಬಳಸಿಕೊಳ್ಳುವುದು, ಪುರೋಹಿತರು ಹೊಸ ಕೊಳವನ್ನು ಶುದ್ಧಿ ಮಾಡುವುದಕ್ಕೆ (ಮದ್ದುಗುಂಡುಗಳನ್ನು. ಕಾರಾಗೃಹಗಳನ್ನು ವಧ್ಯಸ್ಥಾನಗಳನ್ನು ಮಾಡು ವಂತೆ). ವಿಜ್ಞಾನಿಗಳು ಈ ಸಂಸ್ಥೆಯ ಅಗತ್ಯ ಮತ್ತು ಉಪಯೋಗಗಳನ್ನು ಪ್ರಮಾಣೀಕರಿಸುವುದಕ್ಕೆ (ಯುದ್ಧ. ವೇಶ್ಯಾಗೃಹಗಳ ಅಗತ್ಯವನ್ನು ಹೀಗೆ ಪ್ರಮಾಣೀ ಕರಿಸಿದ್ದಾರೆ ಅವರು.)

ಎಲ್ಲ ಧರ್ಮದ ಮೂಲತತ್ವ – ಮನುಷ್ಯರ ಸಮಾನತೆ – ಮರೆತುಹೋಗಿದೆ. ಅದನ್ನು ಅಲಕ್ಷ್ಯಮಾಡಿದ್ದಾರೆ. ಬಳಕೆಯಲ್ಲಿರುವ ಧರ್ಮದ ಅಸಂಬದ್ಧ ನಂಬಿಕೆಗಳಲ್ಲಿ ಹುದುಗಿಸಿಬಿಟ್ಟಿದ್ದಾರೆ; ವಿಜ್ಞಾನದಲ್ಲಿ ಈ ಅಸಮಾನತೆಯು ಜೀವನಕ್ಕೆ ಅತ್ಯವಶ್ಯವಾದ ಪರಿಸ್ಥಿತಿ (ಬದುಕಿನ ಹೋರಾಟ. ಶಕ್ತನಾದವನ ಉಳಿವು ಮೊದಲಾದ ಸಿದ್ಧಾಂತಗಳಲ್ಲಿ) ಎಂಬ ಪರಿಗಣನೆಯಿದೆ. ಹೀಗಾಗಿ ಅಲ್ಪಸಂಖ್ಯಾತರಾದ ಆಡಳಿತವರ್ಗದವರ ಅನುಕೂಲಕ್ಕಾಗಿ ಮಿಲಿಯಗಟ್ಟಳೆ ಜನರು ಸಾಯುವುದು ತುಂಬ ಉಪಯುಕ್ತವಾದ ಅಗತ್ಯವಾದ ಪ್ರಸಂಗ ಎಂದು ತಿಳುವಳಿಕೆಯಿದೆ: ಇದು ನಡೆಯುತ್ತಲೇ ಇದೆ.

ಈ ಕಾಲದ ಜನ ಹತ್ತೊಂಬತ್ತನೆಯ ಶತಮಾನದಲ್ಲಿ ತಾಂತ್ರಿಕ ವಿಜ್ಞಾನ ಸಾಧಿ ಸಿರುವ ಸೊಗಸಾದ. ಅಪೂರ್ವವಾದ. ಅದ್ಭುತವಾದ ಪ್ರಗತಿಯನ್ನು ನೋಡಿ ಸಾಕಷ್ಟು ಸಂತೋಷವನ್ನು ಹೇಗೆ ವ್ಯಕ್ತಪಡಿಸಬೇಕೆಂಬುದನ್ನು ಅರಿಯರು.

ಪ್ರಕೃತಿಯ ಶಕ್ತಿಗಳ ಮೇಲೆ ಪ್ರಭುತ್ವವನ್ನು ಪಡೆದುಕೊಳ್ಳಲು ಹತ್ತೊಂಬತ್ತನೆಯ ಶತಮಾನದಲ್ಲಿ ನಡೆದಷ್ಟು ಭೌತಿಕಪ್ರಗತಿ ಇತಿಹಾಸದಲ್ಲಿ ಮೊದಲಿಂದೂ ನಡೆದಿಲ್ಲವೆನ್ನು ವುದೇನೋ ನಿಃಸಂಶಯವಾದುದು. ಆದರೆ ವೃದ್ಧಿಯಾಗುತ್ತಲೇ ಇರುವ ಪಾಶವೀ ಸ್ವಭಾವವನ್ನು ತಳೆದ ನಮ್ಮ ಕ್ರೈಸ್ತಜನರು ನಿದರ್ಶಿಸುತ್ತಿರುವಂತೆ ಮನುಷ್ಯನ ಪಶು ಪ್ರವೃತ್ತಿಗಳನ್ನು ತಡೆಗಟ್ಟುವ ಯಾವುದೇ ಶಕ್ತಿಯ ಅಂಕುಶಕ್ಕೂ ಒಳಗಾಗದ ಅನೈತಿಕ ಜೀವನದ ನಿದರ್ಶನವೂ. ಇತಿಹಾಸದಲ್ಲಿ ಖಂಡಿತ ಕಾಣಲಾರೆವು. ಹತ್ತೊಂಬತ್ತನೆಯ ಶತಮಾನದಲ್ಲಿ ಸಾಧಿಸಿರುವ ಭೌತಿಕ ಪ್ರಗತಿ ದಿಟವಾಗಿಯೂ ದೊಡ್ಡದು: ಆದರೆ ಈ ಪ್ರಗತಿಯನ್ನು ನಾವು ಕೊಂಡಿರುವುದು, ಕೊಳ್ಳುತ್ತಿರುವುದು. ಹೀಗೆ – ಮಾನವರು ಹಿಂದೆಂದೂ (ಜೆಂಗಿಸ್ ಖಾನ್. ಅತ್ತಿಲ, ನೀರೋಗಳ ಕಾಲದಲ್ಲಿ ಕೂಡ) ನೀತಿನಿಯಮಗಳ ಅತಿಸರಳ ಅಗತ್ಯವನ್ನು ಹೀಗೆ ಕಡೆಗಾಣಿಸಿರಲಿಲ್ಲ; ನಾವು ಈಗ ಕಡೆಗಾಣಿಸುತ್ತಿರುವುದೇ ಪ್ರಗತಿಯ ಬೆಲೆ.

ಅಯಸ್ಕವಚಗಳು, ಹೊಗೆಬಂಡಿಗಳು, ಮುದ್ರಣ ಯಂತ್ರಗಳು. ಸುರಂಗಗಳು. ಧ್ವನಿ ಮುದ್ರಿಕೆಗಳು, ರೊಯನ್ಟ್‌ಜೆನ್ ಕಿರಣಗಳು ಮೊದಲಾದುವು ತುಂಬ ಒಳ್ಳೆಯವೆನ್ನುವು ದರಲ್ಲಿ ಏನೂ ಸಂಶಯವಿರದು. ಅವು ಮಾತ್ರವಲ್ಲದೆ. ಮಾನವ ಜೀವಗಳೂ ಒಳ್ಳೆ ಯವೇ – ರಸ್ಕಿನ್ ಹೇಳುವಂತೆ ಬೇರೆ ಯಾವುದಕ್ಕೂ ಹೋಲಿಸಲಾಗವಷ್ಟು ಒಳ್ಳೆಯವು. ಆದರೆ ಅಯಸ್ಕವಚಗಳನ್ನು, ಹೊಗೆಬಂಡಿಗಳನ್ನು, ಸುರಂಗಗಳನ್ನು ಪಡೆದುಕೊಳ್ಳಲು ಈ ಜೀವಗಳನ್ನು ನಿಷ್ಕರುಣೆಯಿಂದ ವಿನಾಶಗೊಳಿಸುತ್ತಿದ್ದಾರೆ. ಮೇಲೆ ಹೇಳಿದ ಸಾಧನೆಗಳು ಜೀವನವನ್ನು ಸುಂದರಗೊಳಿಸುವುದರ ಬದಲು ಕುರೂಪಗೊಳಿಸುತ್ತಿವೆ. ಇದಕ್ಕೆ ಸಾಮಾನ್ಯವಾಗಿ ಹೇಳುವ ಸಮಾಧಾನ ಇದು – ಈಗ ನಡೆಯುತ್ತಿರುವ ಮಾನವ ಜೀವನದ ವಿನಾಶವನ್ನು ತಡೆಗಟ್ಟಲು ಈಗಾಗಲೇ ಸಾಧನೆಗಳನ್ನು ಕಂಡುಹಿಡಿಯು ತ್ತಿದ್ದಾರೆ, ಮುಂದೆ ಅವು ಪ್ರಯೋಜನಕ್ಕೆ ಬರುತ್ತವೆ. ಆದರೆ ಇದು ದಿಟವಲ್ಲ. ಮನುಷ್ಯರು ಎಲ್ಲಿಯವರೆಗೆ ಎಲ್ಲ ಮನುಷ್ಯರನ್ನೂ ತಮ್ಮ ಸೋದರರಂತೆ ಕಾಣುವುದಿಲ್ಲವೋ ಎಲ್ಲ ವಸ್ತುಗಳಿಗಿಂತ ಮಾನವ ಜೀವ ಪವಿತ್ರತಮವಾದುದು – ಯಾವ ಕಾರಣಕ್ಕಾಗಲೀ ಅದನ್ನು ಬಲಿಗೊಡಲಾಗದು ಅದನ್ನು ಉಳಿಸುವುದೇ ನಮ್ಮ ಕರ್ತವ್ಯಗಳಲ್ಲಿ ಆದ್ಯವಾದುದು – ಎಂದು ಪರಿಗಣಿಸುವುದಿಲ್ಲವೋ, ಮನುಷ್ಯರು ಪರಸ್ಪರವಾಗಿ ಧಾರ್ಮಿಕ ಭಾವನೆಯಿಂದ ನೋಡುವುದಿಲ್ಲವೋ, ಅಲ್ಲಿಯವರೆಗೆ ವೈಯಕ್ತಿಕ ಲಾಭಕ್ಕಾಗಿ ಒಬ್ಬರನ್ನೊಬ್ಬರು ನಾಶಗೊಳಿಸುತ್ತಲೇ ಇರುತ್ತಾರೆ. ಕೆಲವೇನೂರು ಪೌನುಗಳನ್ನು – ತನ್ನ ಅಧೀನದಲ್ಲಿರುವ ಕೆಲವು ಜೀವಗಳನ್ನು ಬಳಸಿಕೊಂಡು – ವೆಚ್ಚ ಮಾಡಿದರೆ ಒಂದು ಕೆಲಸ ಆಗುವಾಗ, ಅದೇ ಕೆಲಸಕ್ಕೆ ಸಾವಿರಾರು ಪೌನುಗಳನ್ನು ವೆಚ್ಚ ಮಾಡುವಷ್ಟು ಮೂರ್ಖರು ಯಾರೂ ಇರುವುದಿಲ್ಲ. ಚಿಕಾಗೋದ ರೈಲು ಮಾರ್ಗಗಳಲ್ಲಿ ಪ್ರತಿವರ್ಷವೂ ಅಷ್ಟೇ ಸಂಖ್ಯೆಯ ಜನ ಯಂತ್ರಗಳಿಗೆ ಸಿಕ್ಕಿ ಗಾಯಗೊಳ್ಳು ತ್ತಾರೆ. ಈ ರೈಲು ಮಾರ್ಗಗಳ ಒಡೆಯರು. ಸಹಜವಾಗಿಯೇ. ಈ ಜನ ಹೀಗೆ ಗಾಯಗೊಳ್ಳದೇ ಇರುವಂತೆ ಮಾಡುವ ಸಾಧನಗಳನ್ನು ಬಳಸುವುದಿಲ್ಲ, ಏಕೆಂದರೆ ಈ ಸಾಧನೆಗಳ ವೆಚ್ಚದ ಮೇಲೆ ತಗಲುವ ಬಡ್ಡಿಗಿಂತಲೂ ಗಾಯಗೊಂಡವರಿಗೆ ಮತ್ತು ಅವರ ಸಂಸಾರಕ್ಕೆ ಕೊಡುವ ವಾರ್ಷಿಕವೇತನ ಕಡಿಮೆಯಾಗಿರುತ್ತದೆಯೆಂದು ಅವರು ಲೆಕ್ಕಾಚಾರ ಮಾಡಿಕೊಂಡಿರುತ್ತಾರೆ.

ಬಹುಶಃ, ತಮ್ಮ ಲಾಭಕ್ಕೆಂದು ಮಾನವಜೀವಗಳನ್ನು ಹಾಳುಮಾಡುವ ಈ ಜನ ಸಾರ್ವಜನಿಕ ಅಭಿಪ್ರಾಯಕ್ಕೆ ನಾಚಬಹುದು, ಅಥವಾ ಬೇರೆ ಯಾವುದಾದರೂ ನಿರ್ಬಂಧದಿಂದ ಈ ಸಾಧನಗಳನ್ನು ಬಳಸಬಹುದು. ಆದರೆ ಎಲ್ಲಿಯವರೆಗೆ ಮನುಷ್ಯರು ಧಾರ್ಮಿಕರಾಗಿರುವುದಿಲ್ಲವೋ, ತಮ್ಮ ಕೆಲಸವನ್ನು ದೇವರ ದೃಷ್ಟಿಯಲ್ಲಿ ಸರಿಯೆನಿಸುವಂತೆ ಮಾಡದೆ ಮನುಷ್ಯರ ದೃಷ್ಟಿಗೆ ಹಿಡಿಸುವಂತೆ ಮಾಡುವರೋ, ಅಲ್ಲಿಯವರೆಗೆ ಒಂದು ಕಡೆ ಜನರ ಪ್ರಾಣ ಉಳಿಯುವ ಸಾಧನೆಗಳನ್ನು ಬಳಸಿ, ಉಳಿದ ಕಡೆಗಳಲ್ಲಿ ತಾವು ಲಾಭ ಗಳಿಸಲು ಮಾನವಜೀವಿಗಳು ಅತ್ಯುತ್ತಮ ಸಾಮಗ್ರಿಯೆಂದು ಬಗೆಯುವರು.

ಪ್ರಕೃತಿಯನ್ನು ಜಯಿಸುವುದು, ಮಾನವಜೀವಗಳನ್ನು ಉಳಿಸದೆ ರೈಲುಮಾರ್ಗ ಗಳನ್ನೂ, ಹೊಗೆಹಡಗುಗಳನ್ನೂ ವಸ್ತುಸಂಗ್ರಹಾಲಯಗಳನ್ನೂ ಏರ್ಪಡಿಸುವುದು ಸುಲಭ. ಈಜಿಪ್ಟಿನ ಫೇರೋ ಅರಸರು ತಮ್ಮ ಪಿರಮಿಡ್ಡುಗಳ ವಿಚಾರದಲ್ಲಿ ಹೆಮ್ಮೆ ಯಿಂದಿದ್ದರು: ಅವು ಎದ್ದು ನಿಲ್ಲಲು ಮಿಲಿಯಗಟ್ಟಳೆ ಗುಲಾಮರ ಬದುಕು ಬಲಿಯಾಯಿತು ಎಂಬುದನ್ನು ಮರೆತು ನಾವೂ ಅವನ್ನು ನೋಡಿ ಸಂತೋಷಪಡುತ್ತೇವೆ. ಹಾಗೆಯೇ, ನಮ್ಮ ಪ್ರದರ್ಶನಾಲಯಗಳು, ಆಯುಸ್ಕವಜಗಳು, ಸಮುದ್ರಾಂತರ ಸಂಪರ್ಕ ವ್ಯವಸ್ಥೆ ಇವನ್ನೆಲ್ಲ ನೋಡಿ ಸಂತೋಷಪಡುತ್ತೇವೆ: ಅವಕ್ಕೆ ನಾವು ಯಾವ ಬೆಲೆಯನ್ನು ಕೊಡುತ್ತಿದ್ದೇವೆ ಎಂಬುದನ್ನು ಮರೆತು. ಇವೆಲ್ಲವೂ ಗುಲಾಮರಿಂದಲ್ಲದೆ ಸ್ವತಂತ್ರ ಜನರಿಂದ ಸಿದ್ಧವಾಗುವವರೆಗೆ ನಾವು ಹೆಮ್ಮೆಪಡಬಾರದು.

ಕ್ರೈಸ್ತರಾಷ್ಟ್ರಗಳು ಅಮೆರಿಕನ್ ಇಂಡಿಯನ್ ಜನರನ್ನು, ಹಿಂದುಗಳನ್ನು, ಆಫ್ರಿಕ ಜನರನ್ನು ಗೆದ್ದು ವಶದಲ್ಲಿರಿಸಿಕೊಂಡಿವೆ: ಈಗ ಚೀನೀಯರನ್ನು ಗೆಲ್ಲಲು, ಆಕ್ರಮಿಸಿ ಕೊಳ್ಳಲು ಉದ್ಯುಕ್ತವಾಗಿವೆ. ಹಾಗೆ ಮಾಡುತ್ತಿರುವುದು ಅವರಿಗೆ ಹೆಮ್ಮೆ. ಆದರೆ ಈ ವಿಜಯ, ಆಕ್ರಮಣಗಳು ಆಕ್ರಮಿತ ರಾಷ್ಟ್ರಗಳಿಗಿಂತ ಕ್ರೈಸ್ತರಾಷ್ಟ್ರಗಳು ಆಧ್ಯಾತ್ಮಿಕವಾಗಿ ಉತ್ತಮ ಎನ್ನುವ ಕಾರಣದಿಂದಲ್ಲ; ವಾಸ್ತವವಾಗಿ ಇವರು ಆಧ್ಯಾತ್ಮಿಕವಾಗಿ ಅಧಮರು ಎನ್ನುವ ಕಾರಣದಿಂದ. ಹಿಂದುಗಳನ್ನೂ ಚೀನೀ ಜನರನ್ನೂ ಪರಿಗಣಿಸದೆ ಬಿಟ್ಟರೂ, ಜೂಲು ಜನರಲ್ಲಿಯೂ ಕೆಲವು ಕ್ರಿಯೆಗಳನ್ನು ವಿಧಿಸುವ, ಕೆಲವು ಕ್ರಿಯೆಗಳನ್ನು ನಿಷೇಧಿಸುವ ಧಾರ್ಮಿಕ ನಿಯಮಗಳಿದ್ದುವು, ಈಗಲೂ ಇವೆ; ನಮ್ಮ ಕ್ರೈಸ್ತ ರಾಷ್ಟ್ರಗಳಲ್ಲಿಯಾದರೆ ಯಾವುವೂ ಇಲ್ಲ. ರೋಮ್ ಎಲ್ಲ ಧರ್ಮಗಳಿಂದಲೂ ಮುಕ್ತವಾದ ಸಮಯದಲ್ಲಿಯೇ ರೋಮ್ ಜಗತ್ತನ್ನು ಗೆದ್ದಿತು. ಅದೇ – ಇನ್ನೂ ಹೆಚ್ಚಿನ ಪ್ರಮಾಣದಲ್ಲಿ – ಈಗ ಕ್ರೈಸ್ತರಾಷ್ಟ್ರಗಳ ವಿಚಾರದಲ್ಲಿಯೂ ದಿಟ. ಇವೆಲ್ಲವೂ ಒಂದೇ ನೆಲೆಯಲ್ಲಿವೆ – ಧರ್ಮ ವನ್ನು ನಿರಾಕರಿಸಿರುವ ನೆಲೆಯಲ್ಲಿ. ಆದುದರಿಂದ ತಮ್ಮತಮ್ಮಲ್ಲಿ ಜಗಳವಿದ್ದರೂ ಒಗ್ಗಟ್ಟಿನಿಂದ ಕೂಡಿ ದರೋಡೆಗಾರರ ಸಮಿತಿಗಳನ್ನು ಮಾಡಿಕೊಂಡಿದ್ದಾರೆ; ಇವರಲ್ಲಿ ಕಳ್ಳತನ, ದರೋಡೆ: ಹಿಂಸೆ. ಕೊಲೆ ಇವು ವೈಯಕ್ತಿಕವಾಗಿಯೂ ಸಮೂಹಿಕವಾಗಿಯೂ ನಡೆಯುತ್ತಲೇ ಇವೆ; ಅಂತಃಸಾಕ್ಷಿಯ ಆಕ್ಷೇಪ ಎಳ್ಳಷ್ಟೂ ಇರದು; ಚೀನದಲ್ಲಿ ಮೊನ್ನೆ ನಡೆದಂತೆ ಆತ್ಮ ಸಂತೋಷದಿಂದಲೇ ನಡೆಯುತ್ತವೆ. ಕೆಲವರು ಯಾವುದನ್ನೂ ನಂಬು ವುದಿಲ್ಲ; ಅದೇ ಅವರ ಹೆಮ್ಮೆ. ಇತರರು ತಮ್ಮ ಪ್ರಯೋಜನಕ್ಕಾಗಿ ಸಾಮಾನ್ಯಜನರನ್ನು ಶ್ರದ್ಧೆಯೆಂಬ ಸಂಮೋಹನದಲ್ಲಿ ಸಿಕ್ಕಿಸುವರೋ ಅದನ್ನು ನಂಬುವೆವೆಂದು ನಾಟಕ ಆಡುತ್ತಾರೆ. ಮತ್ತೆ ಕೆಲವರು – ಇವರೇ ಬಹುಸಂಖ್ಯಾತರು, ಒಟ್ಟಾರೆ ಸಾಮಾನ್ಯ ಜನರು – ತಮ್ಮನ್ನು ಮುಟ್ಟಿದ ಸಂಮೋಹಕ ಸೂಚನೆಗಳನ್ನೇ ಶ್ರದ್ಧೆಯಿಂದ ಸ್ವೀಕರಿಸಿ ಬಲಿಷ್ಠರಾದ, ಶ್ರದ್ಧೆಯಿಲ್ಲದ ಸಂಮೋಹಕರು ತಮ್ಮಿಂದ ಏನನ್ನು ನಿರೀಕ್ಷಿಸುತ್ತಾರೋ ಅದನ್ನು ಅಡಿಯಾಳುಗಳಂತೆ ಮಾಡುತ್ತಾರೆ.

ಈ ಸಂಮೋಹಕರು ನಿರೀಕ್ಷಿಸುವುದು ನೀರೋ ಮತ್ತು ಅವನಂತೆ ತಮ್ಮ-ಬದುಕಿನ ಬಯಲನ್ನು ಹೇಗಾದರೂ ತುಂಬಲೆತ್ನಿಸುವವರು ಎಂದೂ ನಿರೀಕ್ಷಿಸಿರುವುದನ್ನೇ. ಅದು ತಮ್ಮ ಉನ್ಮತ್ತ. ಉತ್ಕಟ ಸುಖಲೋಲುಪತೆಯ ತೃಪ್ತಿಯನ್ನು ಮನುಷ್ಯರನ್ನು ದಾಸ್ಯದಲ್ಲಿ ಇರಿಸಿಕೊಳ್ಳುವುದನ್ನು ಬಿಟ್ಟು ಬೇರೆ ಯಾವುದರಿಂದಲೂ ಸುಖಲೋಲುಪತೆ ಸಿದ್ಧಿಸದು: ದಾಸ್ಯ ಹೆಚ್ಚಾದೊಡನೆ ಸುಖಲೋಲುಪತೆಯೂ ಹೆಚ್ಚುತ್ತದೆ: ಸುಖಲೋಲು-ಪತೆಯು ಹೆಚ್ಚಿದಂತೆ ಅನಿವಾರ್ಯವಾಗಿಯೇ ದಾಸ್ಯವನ್ನೂ ಹೆಚ್ಚಿಸುತ್ತದೆ. ಏಕೆಂದರೆ ಹೊದಿಯಲು ಬಟ್ಟೆಯಿಲ್ಲದೆ ಉಣ್ಣಲು ಅನ್ನವಿಲ್ಲದೆ. ಬಯಕೆಗಳಿಂದ ಬದ್ಧರಾದ ಜನ ಮಾತ್ರವೇ ತಮ್ಮ ಬಾಳಿನುದ್ದಕ್ಕೂ ತಮಗೆ ಬೇಕಾದುದನ್ನು ಮಾಡಿಕೊಳ್ಳದೆ ತಮ್ಮ ಒಡೆಯರ ಸುಖಕ್ಕೆ ಬೇಕಾದುದನ್ನು ಮಾತ್ರ ಮಾಡುವರು.

## 9

ಸೃಷ್ಟಿಪ್ರಕರಣ (ಜೆನಿಸಿಸ್)ದ ಆರನೆಯ ಅಧ್ಯಾಯದಲ್ಲಿ ಗಂಭೀರವಾದ ಒಂದು ಭಾಗವಿದೆ; ಅದರಲ್ಲಿ ಗ್ರಂಥಕರ್ತೃವು ಹೇಳಿರುವುದು – ಪ್ರಳಯಕ್ಕೆ ಮೊದಲು. ದೇವರು ಮನುಷ್ಯರು ತನ್ನನ್ನು ಸೇವಿಸಲೆಂದು ಕೊಟ್ಟ ಚೈತನ್ಯವನ್ನು ತಮ್ಮ ಬಯಕೆಗಳನ್ನು ತೀರಿಸಿಕೊಳ್ಳುವುದರಲ್ಲೇ ಬಳಸುತ್ತಿರುವುದನ್ನು ಕಂಡು. ಸಿಟ್ಟಾಗಿ. ಅವರನ್ನು ಸೃಷ್ಟಿ-ಮಾಡಿದುದೇ ತಪ್ಪಾಯಿತೆಂದು ಪಶ್ಚಾತ್ತಾಪಪಟ್ಟು. ಅವರನ್ನು ಸಂಪೂರ್ಣವಾಗಿ ನಾಶಗೊಳಿಸುವ ಮುನ್ನ ಅವರ ಬಾಳುವೆಯನ್ನು ನೂರ ಇಪ್ಪತ್ತುವರ್ಷಗಳಿಗೆ ಮೊಟಕು ಮಾಡಿದ – ಎಂದು. ಬೈಬಲ್ ಪ್ರಕಾರವೂ ಇದೇ ದೇವರನ್ನು ಸಿಟ್ಟಿಗೆಬ್ಬಿಸಿ ಮನುಷ್ಯನ ಆಯುಷ್ಯವನ್ನು ಕಡಿಮೆಮಾಡಿತು; ನಮ್ಮ ಕ್ರೈಸ್ತರಾಷ್ಟ್ರಗಳಲ್ಲಿ ಈಗ ನಡೆಯುತ್ತಿರುವುದೂ ಇದೆ.

ಜನರು ವಿಶ್ವದೊಂದಿಗೆ ತಂತಮ್ಮ ಸಂಬಂಧವನ್ನು ನಿರ್ದೇಶಿಸಿಕೊಳ್ಳುವ ಶಕ್ತಿಯೇ ವಿಚಾರ: ಎಲ್ಲ ಮನುಷ್ಯರೂ ವಿಶ್ವದೊಂದಿಗೆ ಒಂದೇ ಸಂಬಂಧದಲ್ಲಿರುವುದರಿಂದ ಧರ್ಮ – ಎಂದರೆ ಆ ಸಂಬಂಧವನ್ನು ವಿವರಿಸುವುದು – ಜನರನ್ನು ಒಟ್ಟುಗೂಡಿಸುತ್ತದೆ. ಜನರಲ್ಲಿ ಒಗ್ಗಟ್ಟು ಭೌತಿಕವಾಗಿಯೂ ಆಧ್ಯಾತ್ಮಿಕವಾಗಿಯೂ ಪಡೆಯಬಹುದಾದ ಅತ್ಯುತ್ಕೃಷ್ಟ ಸುಖವನ್ನು ಒದಗಿಸುತ್ತದೆ.

ಮಾನವಕೋಟಿ ಮುಟ್ಟಲು ಶ್ರಮಿಸುತ್ತಿರುವ ಆದರ್ಶವೆಂದರೆ – ಅತ್ಯುತ್ತಮ ಮತ್ತು ಪರಿಪೂರ್ಣ ವಿಚಾರದೊಂದಿಗೆ ಸಂಪೂರ್ಣ ಏಕತೆ. ಎಂದರೆ ಸಂಪೂರ್ಣ ಹಿತ. ಯಾವುದಾದರೂ ಸಮಾಜದ ಎಲ್ಲ ಜನರು ವಿಶ್ವ ಎನ್ನುವುದೇನು ಅದರ ನಿವಾಸಿಗಳು ಯಾರು ಎಂದು ಪ್ರಶ್ನೆಗಳನ್ನು ಕೇಳಿದರೆ ಎಲ್ಲ ಧರ್ಮಗಳೂ ಒಂದೇ ಉತ್ತರವನ್ನು ಕೊಟ್ಟು ಮನುಷ್ಯರನ್ನು ಒಂದುಗೂಡಿಸುತ್ತವೆ; ಹೀಗೆ ಒಂದುಗೂಡಿಸಿ ಹಿತದ ಸಾಧನೆಗೆ ಹತ್ತಿರ ಒಯ್ಯುತ್ತವೆ. ವಿಚಾರವು ತನ್ನ ಸಹಜ ಕ್ರಿಯೆಯಿಂದ (ಎಂದರೆ ಮನುಷ್ಯನು

ದೇವರೊಂದಿಗೆ ಇರಿಸಿಕೊಳ್ಳುವ ಸಂಬಂಧವನ್ನು. ಈ ಸಂಬಂಧಕ್ಕೆ ಅನುಗುಣವಾದ ಕ್ರಿಯೆ ಏನಿರಬೇಕೆಂದೂ ನಿರ್ಧರಿಸುವುದು) ದೂರ ಹೋಗಿ ಶರೀರಕ್ಕಾಗಿಯೂ. ಇತರ ಮನುಷ್ಯರೊಂದಿಗೂ, ಪ್ರಾಣಿಗಳೊಂದಿಗೂ, ವಿರಸಕ್ಕಾಗಿಯೂ ಬಳಸಿಕೊಂಡರೆ, ಮನುಷ್ಯ ಸ್ವಭಾವಕ್ಕೆ ವಿರುದ್ಧವಾದ, ಮನುಷ್ಯನು ಯಾವ ಉದ್ದೇಶಕ್ಕೆ ಸೃಷ್ಟವಾಗಿದ್ದಾನೆಯೋ ಅವಕ್ಕೆ ವಿರುದ್ಧವಾದ ಈ ಪಾಪ ಜೀವನವನ್ನು ಸಮರ್ಥಿಸುವುದಕ್ಕಾಗಿ ಅದನ್ನು ಬಳಸಿಕೊಂಡರೆ, ಬಹುಮಂದಿ ಮನುಷ್ಯರು ಈಗ ದುಃಖಪಡುತ್ತಿರುವ ಘೋರವಾದ ವಿಪತ್ತುಗಳು ಒದಗುತ್ತವೆ; ವಿಚಾರಶೀಲವಾದ, ಸಜ್ಜೀವನಕ್ಕೆ ಹಿಂದಿರುಗುವೆವೆನ್ನುವುದು ಅಸಾಧ್ಯವಾಗಿಬಿಡುತ್ತದೆ.

ನಮ್ಮ ಇಂದಿನ ಪ್ರಖ್ಯಾತ ಕ್ರೈಸ್ತ ರಾಷ್ಟ್ರಗಳಲ್ಲಿ ಜನ ಧರ್ಮವೇ ಇಲ್ಲದೆ ಬದುಕುತ್ತಿದ್ದಾರೆ; ಇವರಲ್ಲಿ ತುಂಬ ಪ್ರಗತಿಪರರಾದ ಜನ ಧರ್ಮದ ಅಗತ್ಯವಿಲ್ಲವೆಂದೂ. ಧರ್ಮವಿಲ್ಲದೆ ಬಾಳುವುದೇ ಒಳಿತೆಂದೂ ತಾವೇ ನಂಬಿದ್ದಾರೆ, ಇತರರಿಗೆ ಸೂಚನೆ ಕೊಡುತ್ತಿದ್ದಾರೆ. ಇವರು ಸತ್ಯವನ್ನು ಕಂಡುಕೊಂಡಿರುವುದಕ್ಕಿಂತ ಸ್ಥೂಲವಾದ ಧಾರ್ಮಿಕ ಬೋಧೆಗಳಿಂದ ಒಂದುಗೂಡಿದ ಪೇಗನ್ ಜನರೇ ಹತ್ತಿರ ಇದ್ದಾರೆ. ಬೆಳೆಯುತ್ತಿರುವ ಜ್ಞಾನದೊಂದಿಗೆ ಮತ್ತು ವಿಚಾರದ ನಿರೀಕ್ಷೆಯೊಂದಿಗೆ ತಮ್ಮ ಶ್ರದ್ಧೆ ವಿಸಂಗತವಾಗಿರುವುದನ್ನು ಗಮನಿಸಿದಾಗ ತಮ್ಮ ರಾಷ್ಟ್ರದ ಆಧ್ಯಾತ್ಮಿಕ ನೆಲೆಗೆ ಸರಿಹೋಗುವಂತೆ, ತಮ್ಮ ಜನರು ಒಪ್ಪುವಂತೆ ಹೊಸದೊಂದು ಧರ್ಮವನ್ನು ಪೇಗನ್ ಜನರಲ್ಲಿ ಕೆಲವರು ಏರ್ಪಡಿಸಿಕೊಳ್ಳುತ್ತಾರೆ, ಇಲ್ಲವೇ ಮಾರ್ಪಡಿಸಿಕೊಳ್ಳುತ್ತಾರೆ. ಆದರೆ ನಮ್ಮ ಪ್ರಪಂಚದ ಜನ – ಕೆಲವರು ಧರ್ಮವೆಂದರೆ ಸಾಮಾನ್ಯಜನರನ್ನು ದಾಸ್ಯದಲ್ಲಿರಿಸಿಕೊಳ್ಳುವ ಉಪಾಯವೆಂದೂ. ಇನ್ನು ಕೆಲವರು ಧರ್ಮ ಅಸಂಬದ್ಧವೆಂದೂ, ಮತ್ತೆ ಕೆಲವರು (ರಾಷ್ಟ್ರದ ಬಹುಮಂದಿ) ಮೋಸದ ಸಮ್ಮೋಹನದಲ್ಲಿ ಬದುಕಿರುತ್ತ ತಮ್ಮಲ್ಲಿ ನಿಜವಾದ ಧರ್ಮ ಇದೆಯೆಂದು ಬಗೆಯುವರು – ಮುಂದಿನ ಹೆಜ್ಜೆ ಇಡಲು ಇಷ್ಟಪಡರು; ಸತ್ಯದ ಕಡೆ ನಡೆಯಲು ಅಶಕ್ತರು.

ದೈಹಿಕ ಜೀವನಕ್ಕೆ ಸಂಬಂಧಪಟ್ಟ ವಿಚಾರಗಳಲ್ಲಿ ಅನುಕೂಲಗಳನ್ನು ಏರ್ಪಡಿಸಿಕೊಂಡುದಕ್ಕೆ, ಮತ್ತು ತಮ್ಮ ಸುಸಂಸ್ಕೃತ, ಜಡ ವಿಚಾರಗಳಿಗೆ (ಇಲ್ಲಿ ತಮ್ಮನ್ನು ತಾವು ಸಮರ್ಥಿಸಿಕೊಳ್ಳುವುದು ಮಾತ್ರ ಅವರ ಉದ್ದೇಶವಲ್ಲ, ಇತಿಹಾಸದ ಯಾವ ಯುಗದಲ್ಲಿದ್ದ ಇತರ ಜನರಿಗೆಲ್ಲ ತಾವು ಉತ್ತಮರು ಎಂದು ಸಾಧಿಸುವುದೂ ಉದ್ದೇಶ) ಹೆಮ್ಮೆಪಡುತ್ತ ಅಜ್ಞಾನದಲ್ಲಿ ಮತ್ತು ಅನೈತಿಕತೆಯಲ್ಲಿ ಘನೀಭೂತರಾಗಿದ್ದಾರೆ. ಆದರೆ ಮಾನವಕೋಟಿ ಹಿಂದೆಂದೂ ಮುಟ್ಟದಿರುವಷ್ಟು ಉನ್ನತ ನೆಲೆಯಲ್ಲಿ ತಾವು ನಿಂತಿದ್ದೇವೆಂದು ಅವರ ಸಂಪೂರ್ಣ ನಂಬಿಕೆ; ಅಜ್ಞಾನದ ಮತ್ತು ಅನೈತಿಕತೆಯ ದಾರಿಯಲ್ಲಿ, ಇಡುವ ಒಂದೊಂದು ಹೆಜ್ಜೆಯೂ ಜ್ಞಾನ ಮತ್ತು ಪ್ರಗತಿಗಳ ಕಡೆ ಏರುವುದೆಂದೂ ಅವರ ವಿಶ್ವಾಸ.

## 10

ಮನುಷ್ಯ ಸಹಜವಾಗಿಯೇ ತನ್ನ ದೈಹಿಕ (ಭೌತಿಕ) ಮತ್ತು ವೈಚಾರಿಕ (ಆಧ್ಯಾತ್ಮಿಕ) ಕ್ರಿಯೆಗಳನ್ನು ಸಮನ್ವಯಮಾಡಲು ಇಷ್ಟಪಡುತ್ತಾನೆ. ಯಾವುದಾದರೊಂದು ರೀತಿಯಲ್ಲಿ ಈ ಸಮನ್ವಯವನ್ನು ಸಾಧಿಸಿಕೊಳ್ಳುವವರೆಗೆ ಅವನಿಗೆ ಶಾಂತಿಯಿರದು. ಇದನ್ನು ಎರಡು ಬೇರೆ ಬೇರೆ ಬಗೆಗಳಲ್ಲಿ ಸಾಧಿಸಿಕೊಳ್ಳಬಹುದು. ಒಂದು. ಮನುಷ್ಯನು ತನ್ನ ವಿಚಾರಶಕ್ತಿಯಿಂದ ಯಾವುದಾದರೊಂದು ಕೆಲಸದ ಅಗತ್ಯವನ್ನೋ ಅಪೇಕ್ಷಿತತೆಯನ್ನೋ ನಿರ್ಧರಿಸಿ. ಅನಂತರ ಅದರಂತೆ ಮಾಡುವುದು: ಇನ್ನೊಂದು. ಮನುಷ್ಯನು ತನ್ನ ಭಾವದ ಪ್ರಭಾವದಿಂದ ಕೆಲಸಮಾಡುವುದು, ಆಮೇಲೆ ತಾನು ಮಾಡಿದುದಕ್ಕೆ ಬೌದ್ಧಿಕ ವಿವರಣೆಗಳನ್ನೋ ಸಮರ್ಥನೆಗಳನ್ನೋ ಸೃಷ್ಟಿಮಾಡುವುದು.

ಮೊದಲನೆಯ ಸಂವಿಧಾನ, ಎಂದರೆ ತನ್ನ ಕೆಲಸವನ್ನು ವಿಚಾರಕ್ಕೆ ಹೊಂದಿಸಿಕೊಳ್ಳುವುದು. ಯಾವುದಾದರೂ ಧರ್ಮವನ್ನು ಪಡೆದಿರುವವರ ಲಕ್ಷಣ: ಆ ಧರ್ಮದ ಬೋಧೆಗಳ ಆಧಾರದ ಮೇಲೆ ತಾವು ಯಾವುದನ್ನು ಮಾಡಬೇಕು ಯಾವುದನ್ನು ಮಾಡಬಾರದು ಎಂದು ನಿರ್ಧರಿಸುತ್ತಾರೆ. ಎರಡನೆಯ ಸಂವಿಧಾನ ಸಾಮಾನ್ಯವಾಗಿ ಧಾರ್ಮಿಕರಲ್ಲದವರ ಲಕ್ಷಣ; ಅವರಿಗೆ ಕೆಲಸಗಳ ಗುಣವನ್ನು ಅಳೆಯುವ ಮಾನವಿರದು. ಅವರು ಯಾವಾಗಲೂ ತಮ್ಮ ವಿಚಾರ ಮತ್ತು ಕೆಲಸಗಳಿಗೆ ಹೊಂದಾಣಿಕೆಯನ್ನು ಕಲ್ಪಿಸುತ್ತಾರೆ, ಕೆಲಸವನ್ನು ವಿಚಾರಕ್ಕೆ ವಶಮಾಡಿ ಅಲ್ಲ, ಆದರೆ (ಭಾವದ ಬಲದಿಂದ ಕೆಲಸಮಾಡಿದ ಮೇಲೆ) ತಾವು ಮಾಡಿದುದನ್ನು ಸಮರ್ಥಿಸಲು ವಿಚಾರವನ್ನು ಬಳಸಿಕೊಂಡು.

ಧಾರ್ಮಿಕ ಮನುಷ್ಯ – ತನ್ನಲ್ಲಿ ಮತ್ತು ಇತರರ ಕೆಲಸದಲ್ಲಿ ಯಾವುದು ಒಳ್ಳೆಯದು, ಯಾವುದು ಕೆಟ್ಟದು ಎಂಬುದನ್ನೂ, ಏಕೆ ಒಂದು ಒಳ್ಳೆಯದು ಇನ್ನೊಂದು ಕೆಟ್ಟದು ಎಂಬುದನ್ನು ತಿಳಿದು – ವಿಚಾರದ ನಿರೀಕ್ಷೆಗೆ ಮತ್ತು ತನ್ನ ಅಥವಾ ಇತರರ ಕೆಲಸಗಳಿಗೆ ವಿರೋಧವನ್ನು ಗಮನಿಸಿದಾಗ, ತನ್ನ ಇಡೀ ವಿಚಾರಶಕ್ತಿಯನ್ನೆಲ್ಲ ಉಪಯೋಗಿಸಿ ಈ ವಿರೋಧವನ್ನು ಅಳಿಸಲು ಸಾಧನೆಗಳನ್ನು ಕಂಡುಹಿಡಿಯುತ್ತಾನೆ: ವಿಚಾರದ ನಿರೀಕ್ಷೆಗಳಿಗೆ ತನ್ನ ಕೆಲಸವನ್ನು ಎಷ್ಟು ಸಮಂಜಸವಾಗಿ ಹೊಂದಿಸಬಹುದು ಎಂದು ಅವನು ಕಲಿತುಕೊಳ್ಳುತ್ತಾನೆ. ಆದರೆ ಧರ್ಮವಿಲ್ಲದ ಮನುಷ್ಯ – ಕೆಲಸಗಳಿಂದ ಬರುವ ಸುಖವನ್ನು ಬಿಟ್ಟು ಕೆಲಸಗಳ ಗುಣಾಂಶಗಳನ್ನು ನಿರ್ಧರಿಸುವ ಮಾನವಿಲ್ಲದುದರಿಂದ – ಭಾವಗಳ ಬಲೆಗೆ ಬೀಳುತ್ತಾನೆ (ಇವು ತುಂಬ ವಿಭಿನ್ನವಾಗಿರುತ್ತವೆ, ಪರಸ್ಪರ ವಿರುದ್ಧವಾಗಿರುತ್ತವೆ), ತನ್ನ ಪ್ರಯತ್ನವಿಲ್ಲದೆ ವಿರೋಧಾಭಾಸಗಳಿಗೆ ಬೀಳುತ್ತಾನೆ, ಹೀಗೆ ವಿರೋಧಾಭಾಸಗಳಿಗೆ ಬಿದ್ದು ಅವನ್ನು ಪರಿಹರಿಸಲು ಅಥವಾ ಮರೆಮಾಚಲು ಸುದೀರ್ಘವಾದ, ಜಾಣತನದ, ಆದರೆ ಯಾವಾಗಲೂ ಅಸತ್ಯದ ವಾದಗಳನ್ನು ಮಂಡಿಸುತ್ತಾನೆ. ಆದುದರಿಂದ, ದಿಟವಾಗಿ ಧಾರ್ಮಿಕನಾದ ಮನುಷ್ಯನ ವಿಚಾರ

ಯಾವಾಗಲೂ ಸರಳ, ನೇರ, ಸತ್ಯಪೂರಿತವಾಗಿರುತ್ತದೆ; ಧರ್ಮವಿಲ್ಲದವನ ಮನಸ್ಸಿನ ವ್ಯಾಪಾರ ಸೂಕ್ಷ್ಮ. ಜಟಿಲ, ಅಸತ್ಯ.

ತುಂಬ ಬಳಕೆಯ ಉದಾಹರಣೆಯನ್ನು ಎತ್ತಿಕೊಳ್ಳುತ್ತೇನೆ. ಕೆಟ್ಟ ನಡತೆಗೆ ಅಂಟಿಕೊಂಡ ಮನುಷ್ಯನದು, ಎಂದರೆ ಶೀಲವಿಲ್ಲದವನದು, ತನ್ನ ಹೆಂಡತಿಗೆ ನಿಷ್ಠನಲ್ಲದವನದು ಅಥವಾ ಮದುವೆಯಾಗದೆ ಪಾಪದಲ್ಲಿ ತೊಡಗುವವನದು. ಅವನು ಧಾರ್ಮಿಕ ಮನುಷ್ಯನಾದರೆ ತಾನು ಮಾಡುವುದು ತಪ್ಪೆಂದು ಅವನಿಗೆ ತಿಳಿದಿರುತ್ತದೆ, ತನ್ನ ವಿಚಾರದ ಶಕ್ತಿಯನ್ನೆಲ್ಲ ಈ ಪಾಪದಿಂದ ಬಿಡಿಸಿಕೊಳ್ಳುವುದು ಹೇಗೆಂದು ಕಂಡು ಹಿಡಿಯುವುದರಲ್ಲಿ ವೆಚ್ಚಮಾಡುತ್ತಾನೆ. ಜಾರರೊಂದಿಗೆ ಜಾರಿಣಿಯರೊಂದಿಗೆ ವ್ಯವಹಾರವನ್ನು ಬಿಡುತ್ತಾನೆ. ತನ್ನ ಕೆಲಸವನ್ನು ಹೆಚ್ಚಿಸಿಕೊಳ್ಳುತ್ತಾನೆ, ಸಂಯಮದ ಜೀವನವನ್ನು ತನಗಾಗಿ ವಿಧಿಸಿಕೊಳ್ಳುತ್ತಾನೆ, ಹೆಂಗಸನ್ನು ಕಾಮದ ಸಾಮಗ್ರಿಯೆಂದು ಕಾಣುವುದನ್ನು ಬಿಡುತ್ತಾನೆ, ಇತ್ಯಾದಿ ಇತ್ಯಾದಿ. ಇವೆಲ್ಲ ತುಂಬ ಸರಳವೇ; ಎಲ್ಲರಿಗೂ ಅರ್ಥವಾಗುತ್ತದೆ. ಆದರೆ ಕಾಮುಕನಾದ ಮನುಷ್ಯ ಧಾರ್ಮಿಕನಾಗಿರದಿದ್ದರೆ ಒಡನೆಯೇ ಅವನು ಹೆಂಗಸರನ್ನು ಪ್ರೀತಿಸುವುದು ತುಂಬ ಒಳ್ಳೆಯದೆಂದು ಸ್ಥಿರಪಡಿಸಲು ಎಲ್ಲ ಬಗೆಯ ಉಪಾಯಗಳನ್ನೂ ಹುಡುಕುತ್ತಾನೆ. ಆಗ ಜೀವಗಳ ಸಖ್ಯವನ್ನು ಕುರಿತು, ಸೌಂದರ್ಯವನ್ನು ಕುರಿತು, ಪ್ರೇಮದ ಸ್ವಾತಂತ್ರ್ಯವನ್ನು ಕುರಿತು ಎಲ್ಲ ವಿಧವಾದ ಜಟಿಲ, ಕುಯುಕ್ತಿಯ, ಸೂಕ್ಷ್ಮ ವಾದಗಳು ಸಿದ್ಧವಾಗುತ್ತವೆ. ಇವು ಹರಡಿದಂತೆಲ್ಲ ಸಮಸ್ಯೆಯನ್ನು ಮುಸುಕುತ್ತವೆ, ಸಾರಭೂತವಾದ ಸತ್ಯವನ್ನು ಅಡಗಿಸುತ್ತವೆ.

ಧರ್ಮವಿಲ್ಲದವರ ವ್ಯವಹಾರ ಎಲ್ಲ ಕ್ರಿಯಾಕ್ಷೇತ್ರಗಳಲ್ಲಿಯೂ ಚಿಂತನಕ್ಷೇತ್ರಗಳಲ್ಲಿಯೂ ಇದೇ ಇರುತ್ತದೆ. ಮೂಲಭೂತವಾಗಿರುವ ವಿರೋಧಾಭಾಸವನ್ನು ಮುಚ್ಚಲು ಜಟಿಲ ಮತ್ತು ಸೂಕ್ಷ್ಮ ತರ್ಕಗಳು ರಾಶಿರಾಶಿಯಾಗಿ ಬೀಳುತ್ತವೆ. ಅಗತ್ಯವಿಲ್ಲದ ಕಸ ಮನಸ್ಸನ್ನು ತುಂಬಿ, ಯಾವುದು ಮುಖ್ಯವೋ ಸಾರವೋ ಅದರಿಂದ ಮನುಷ್ಯರ ಗಮನ ಬೇರೆಡೆ ಹರಿದು, . ಮೋಸದಲ್ಲಿ ಕಲ್ಲಾಗಿ ನಿಲ್ಲುತ್ತಾರೆ. ಪ್ರಪಂಚದ ಜನ ತಮ್ಮ ಅರಿವಿಲ್ಲದೆ ಇದರಲ್ಲಿಯೇ ಬದುಕಿದ್ದಾರೆ.

ಸುವಾರ್ತೆ ಹೇಳುತ್ತದೆ: 'ಮನುಷ್ಯರು ಬೆಳಕಿಗಿಂತಲೂ ಕತ್ತಲೆಯನ್ನೇ ಪ್ರೀತಿಸಿದರು. ಏಕೆಂದರೆ ಅವರ ಕೆಲಸಗಳು ಪಾಪದವು. ಕೆಟ್ಟ ಕೆಲಸವನ್ನು ಮಾಡುವ ಒಬ್ಬೊಬ್ಬನೂ ಬೆಳಕನ್ನು ದ್ವೇಷಿಸುವವನು; ಅವನ ಕೆಲಸಗಳನ್ನು ನಿಂದಿಸಿಯಾರೆಂದು ಅವನು ಬೆಳಕಿನ ಕಡೆ ಬರುವುದೇ ಇಲ್ಲ.'

ಆದುದರಿಂದ. ನಮ್ಮ ಪ್ರಪಂಚದ ಜನ, ಧರ್ಮವಿಲ್ಲದ್ದರಿಂದ ಕ್ರೂರವಾದ ಪಾಶವೀ ಅನೈತಿಕ ಜೀವನವನ್ನು ಏರ್ಪಡಿಸಿಕೊಂಡು, ತಮ್ಮ ಮನಸ್ಸಿನ ಜಟಿಲವಾದ, ಸೂಕ್ಷ್ಮವಾದ

ಅಪ್ರಯೋಜಕವಾದ (ತಮ್ಮ ಜೀವನ ರೀತಿಯ ಪಾಪವನ್ನು ಬಚ್ಚಿಡುವಂಥ) ಕ್ರಿಯೆಯನ್ನು ಅನಗತ್ಯವಾಗಿ ಸಂಕೀರ್ಣಗೊಳಿಸಿ, ಗೊಂದಲಕ್ಕೀಡುಮಾಡಿ ಬಳಸುತ್ತಾರೆ; ಅವರಲ್ಲಿ ಬಹುಮಂದಿಗೆ ಒಳ್ಳೆಯದನ್ನು ಕೆಟ್ಟದ್ದರಿಂದ, ಸತ್ಯವನ್ನು ಅಸತ್ಯದಿಂದ ಬೇರ್ಪಡಿಸುವುದೇ ಆಗದು.

ನಮ್ಮ ಪ್ರಪಂಚದ ಜನ ನೇರವಾಗಿ ಸರಳವಾಗಿ ಕಾಣುವ ಒಂದೇ ಒಂದು ಸಮಸ್ಯೆಯಾಗಲೀ ಇಲ್ಲ. ಎಲ್ಲ ಸಮಸ್ಯೆಗಳೂ – ಆರ್ಥಿಕ, ರಾಷ್ಟ್ರೀಯ, ರಾಜಕೀಯ, ರಾಯಭಾರದ, ವೈಜ್ಞಾನಿಕ (ತತ್ತ್ವಶಾಸ್ತ್ರ, ಧರ್ಮಗಳ ಸಮಸ್ಯೆಗಳನ್ನು ಹೇಳುವುದೇ ಬೇಡ) – ಕೃತಕವಾಗಿ, ತಪ್ಪಾಗಿ ನಿರೂಪಿತವಾಗುತ್ತವೆ. ಜಟಿಲ ಮತ್ತು ಅನಗತ್ಯ ವಾದಗಳಿಂದ ಮುಚ್ಚಲ್ಪಟ್ಟಿರುತ್ತವೆ (ಅರ್ಥಗಳನ್ನೂ ಶಬ್ದಗಳನ್ನೂ ಸೂಕ್ಷ್ಮವಾಗಿ ಎಳೆದಾಡಿ ವಿತಂಡವಾದವಾಗಿಸುತ್ತಾರೆ); ಈ ಸಮಸ್ಯೆಗಳ ವಾದಗಳೆಲ್ಲ ಒಂದೇ ಒಂದು ಸ್ಥಳದ ಸುತ್ತ ತಿರುಗುತ್ತವೆ – ಅದಕ್ಕೆ ಯಾವುದರೊಡನೆಯೂ ಸಂಬಂಧವಿರದು. ಸಂಬಂಧ ಪಟ್ಟಿಕೆಯಿಲ್ಲದೆ ತಿರುಗುವ ಗಾಲಿಗಳಂತೆ ಅವು ಸ್ಪಷ್ಟವಾದ ಒಂದೇ ಉದ್ದೇಶವನ್ನು ಬಿಟ್ಟು ಏನನ್ನೂ ಮಾಡಲಾರವು. ಮನುಷ್ಯರು ಬದುಕುತ್ತಿರುವ ಮಾಡುತ್ತಿರುವ ಪಾಪವನ್ನು ತನ್ನಿಂದಲೂ ಇತರರಿಂದಲೂ ಮರೆಮಾಚುತ್ತವೆ.

## II

ಈಗ ನಾವು ವಿಜ್ಞಾನವೆಂದು ಕರೆಯುವ ಕ್ಷೇತ್ರದಲ್ಲಿ ಒಂದೇ ಲಕ್ಷಣ ಕಾಣಬರುತ್ತಿದೆ; ಜ್ಞಾನದ ವಿವಿಧ ಕ್ಷೇತ್ರಗಳನ್ನು ಅನುಸಂಧಾನಮಾಡುವ ಸಲುವಾಗಿ ಮನುಷ್ಯರು ನಡೆಸುತ್ತಿರುವ ಮಾನಸಿಕ ಪ್ರಯತ್ನಕ್ಕೆ ಅಡ್ಡಿಬರುತ್ತಿದೆ ಇದು. ಈ ಲಕ್ಷಣವೆಂದರೆ ಈ ಎಲ್ಲ ವೈಜ್ಞಾನಿಕ ಅನ್ವೇಷಣೆಗಳೂ ಪರಿಹಾರಕ್ಕೆ ಬಾಯ್ಬಿಡುತ್ತಿರುವ ಮುಖ್ಯಪ್ರಶ್ನೆಯನ್ನು ಎದುರಿಸುವುದೇ ಇಲ್ಲ. ಅಕ್ಕಪಕ್ಕದ ಪ್ರಶ್ನೆಗಳನ್ನು ಮಾತ್ರ ಎತ್ತಿಕೊಂಡು ಯಾವ ನಿರ್ದಿಷ್ಟ ಫಲವನ್ನೂ ಕಾಣದೆ, ಮುಂದರಿಯುತ್ತ ಹೆಚ್ಚಿನ ಗೊಂದಲದ ಪ್ರಶ್ನೆಯಾಗುತ್ತದೆ. ವಿಜ್ಞಾನದಲ್ಲಿ ಹೀಗಿರದೆ ಇರುವುದು ಸಾಧ್ಯವೂ ಇಲ್ಲ. ಏಕೆಂದರೆ ಈ ವಿಜ್ಞಾನ ತನ್ನ ಅನ್ವೇಷಣೆಯ ವಸ್ತುಗಳನ್ನು ಆರಿಸಿಕೊಳ್ಳುವುದು ಅಪ್ಪಾದಿಡ್ಡಿಯಾಗಿ; ಯಾವುದನ್ನು ಅಧ್ಯಯನಮಾಡಬೇಕು, ಏತಕ್ಕೆ, ಯಾವುದನ್ನು ಮೊದಲು ಯಾವುದನ್ನು ಅನಂತರ ಎಂದು ನಿರ್ಣಯಿಸುವ ಧಾರ್ಮಿಕ ಕಲ್ಪನೆಯ ಅಗತ್ಯದ ಮೇಲಲ್ಲ, ನಿವರ್ತನಕ್ಕೆ. ಈಗ ಜನಪ್ರಿಯವಾಗುತ್ತಿರುವ ಸಮಾಜಶಾಸ್ತ್ರ, ರಾಜಕೀಯ ಅರ್ಥಿಕಶಾಸ್ತ್ರಗಳಲ್ಲಿ ದಿಟವಾಗಿ ಒಂದೇ ಪ್ರಶ್ನೆಯಿರುವಂತೆ ತೋರುತ್ತದೆ: "ಇತರರು ತಮಗಾಗಿ ಕೆಲಸಮಾಡುತ್ತಿದ್ದರೂ ಕೆಲವರು ಏತಕ್ಕೆ, ಹೇಗೆ ಯಾವ ಕೆಲಸವನ್ನೂ ಮಾಡುವುದಿಲ್ಲ?" ಎಂಬುದು. (ಇನ್ನೊಂದು ಪ್ರಶ್ನೆ ಇರುವಂತಿದ್ದರೆ ಅದು: "ಒಟ್ಟಿಗೆ ಕೆಲಸ ಮಾಡುವುದು ಹೆಚ್ಚು ಪ್ರಯೋಜನ ಕಾರಿಯಾದರೂ ಜನ ಏತಕ್ಕೆ ಬೇರೆಬೇರೆಯಾಗಿ ಕೆಲಸಮಾಡುತ್ತ, ಒಬ್ಬರನ್ನೊಬ್ಬರು

ಅಡ್ಡಿಪಡಿಸುತ್ತಾರೆ?" ಎಂಬುದು. ಆದರೆ ಈ ಪ್ರಶ್ನೆ ಮೊದಲನೆಯದರಲ್ಲಿಯೇ ಸೇರುತ್ತದೆ. ಏಕೆಂದರೆ ಸಮಾನತೆಯಿರುವುದಿದ್ದರೆ ಹಗರಣವೂ ಇರದು). ಅದೊಂದೇ ಪ್ರಶ್ನೆಯೇ ಇರುವುದಾದರೂ. ಆದರೆ ವಿಜ್ಞಾನ ಅದನ್ನು ನಿರೂಪಿಸುವುದೂ ಇಲ್ಲ. ಅದಕ್ಕೆ ಸಮಾಧಾನ ಹೇಳಲು ಯತ್ನಿಸುವುದೂ ಇಲ್ಲ; ಎಲ್ಲೋ ದೂರದಿಂದ ವಾದಮಾಡ ತೊಡಗುತ್ತದೆ. ಈ ಮೂಲಭೂತವಾದ ಸಮಸ್ಯೆಗೆ ಪರಿಹಾರವನ್ನಾಗಲೀ, ಪರಿಹಾರಕ್ಕೆ ನೆರವನ್ನಾಗಲೀ ಪಡೆಯದಂತೆ ವಾದ ಮುಂದುವರಿಯುತ್ತದೆ. ಹಿಂದೆ ಹೇಗಿದ್ದಿತು, ಮುಂದೆ ಹೇಗಿರುತ್ತದೆ ಎಂದು ವಾದವಿವಾದಗಳನ್ನಾರಂಭಿಸುತ್ತಾರೆ; ಭೂತ–ಭವಿಷ್ಯತ್ತು ಗಳು ಆಕಾಶದಲ್ಲಿ ನಕ್ಷತ್ರಪಥಗಳಿರುವಂತೆ ಅಚಲವಾಗಿ ನಿಲ್ಲುವುವೆಂದು ಬಗೆಯುತ್ತಾರೆ; ಮೌಲ್ಯ, ಬಂಡವಾಳ, ಲಾಭ, ಬಡ್ಡಿ ಎಂದು ಮೊದಲಾದ ಅಪ್ರಾಕೃತ ಕಲ್ಪನೆಗಳನ್ನು ಏರ್ಪಡಿಸುತ್ತಾರೆ: ವಾದಿಗಳಲ್ಲಿ ಬುದ್ಧಿವಂತಿಕೆಯ ಜಟಿಲ ಆಟ ನಡೆಯುತ್ತದೆ (ಈಗ ನೂರು ವರ್ಷಗಳು ನಡೆದಿದೆ). ವಾಸ್ತವವಾಗಿ ಈ ಪ್ರಶ್ನೆಯನ್ನು ಸುಲಭವಾಗಿ, ಸರಳ ವಾಗಿ ಪರಿಹರಿಸಬಹುದು.

ಇದರ ಪರಿಹಾರ ಇಷ್ಟೆ – ಎಲ್ಲ ಮನುಷ್ಯರೂ ಸೋದರರು, ಸಮಾನರು ಎಂದ ಮೇಲೆ ಒಬ್ಬನು ಇನ್ನೊಬ್ಬನೊಂದಿಗೆ ಅವನು ತನ್ನೊಂದಿಗೆ ಹೇಗೆ ವ್ಯವಹರಿಸಬೇಕೆಂದು ಬಯಸುವನೋ ಹಾಗೆ ವ್ಯವಹರಿಸಬೇಕು. ಆದುದರಿಂದ ಸಮಸ್ಯೆಯ ಪರಿಹಾರ ವೆಂದರೆ ಅಸತ್ಯವಾದ ಧಾರ್ಮಿಕ ನಿಯಮವನ್ನು ನಾಶಗೊಳಿಸಿ ಸತ್ಯವಾದ ಧಾರ್ಮಿಕ ನಿಯಮವನ್ನು ಮತ್ತೆ ಸ್ಥಾಪಿಸುವುದೇ. ಆದರೆ ಕ್ರೈಸ್ತಸಮಾಜದ ಪ್ರಗತಿಪರರಾದ ಜನ ಈ ಪರಿಹಾರವನ್ನು ಒಪ್ಪಿಕೊಳ್ಳುವುದಿಲ್ಲ; ಅಷ್ಟೇ ಅಲ್ಲ ಈ ಪರಿಹಾರ ಇರುವುದನ್ನು ಜನರಿಂದ ಮರೆಮಾಚಲು ಯತ್ನಿಸುತ್ತಾರೆ; ತಾವು ವಿಜ್ಞಾನವೆಂದು ಕರೆದುಕೊಳ್ಳುವ ನಿರರ್ಥಕ ಬುದ್ಧಿವಂತಿಕೆಯ ಆಟದಲ್ಲಿ ನಿರತರಾಗುತ್ತಾರೆ.

ನ್ಯಾಯಾಂಗ ಕ್ಷೇತ್ರದಲ್ಲಿಯೂ ಇದೇ ಆಗುತ್ತದೆ. ಒಂದೇ ಮುಖ್ಯವಾದ ಪ್ರಶ್ನೆ ಯಿರುವಂತೆ ತೋರುತ್ತದೆ: "ಇತರರಿಗೆ ಹಿಂಸೆಕೊಟ್ಟು, ಅವರನ್ನು ಶೋಷಿಸಿ, ಸೆರೆ ಹಿಡಿದು, ಯುದ್ಧಕ್ಕೆ ಕಳುಹಿಸಿ, ಕೊಲೆ ಮಾಡುವ ಜನ ಹೇಗಾದರೂ ಇದ್ದಾರು?" ಆ ಪ್ರಶ್ನೆಗೆ ಅನುಗುಣವಾದ ಒಂದೇ ದೃಷ್ಟಿಯಿಂದ -- ಎಂದರೆ ಧಾರ್ಮಿಕ ದೃಷ್ಟಿಯಿಂದ – ಸಮಸ್ಯೆಯನ್ನು ಪರಿಶೀಲಿಸಿದರೆ ಪರಿಹಾರ ಸುಲಭವಾಗಿ ದೊರೆಯುತ್ತದೆ. ಧಾರ್ಮಿಕ ದೃಷ್ಟಿಯಿಂದ ಮನುಷ್ಯ ತನ್ನ ನೆರೆಯವರನ್ನು ಹಿಂಸೆಗೆ ಒಳಪಡಿಸಬಾರದು; ಆದುದರಿಂದ ಪ್ರಶ್ನೆಯ ಪರಿಹಾರಕ್ಕೆ ಒಂದೇ ಒಂದು ಅಗತ್ಯ – ಹಿಂಸೆಯನ್ನು ಸಮರ್ಥಿಸುವ ಎಲ್ಲ ಕುತರ್ಕಗಳನ್ನೂ, ಕುರುಡು ನಂಬಿಕೆಗಳನ್ನೂ ನಾಶಪಡಿಸಿ, ಹಿಂಸೆಯ ಸಂಭವವನ್ನು ನಿರಾಕರಿಸುವಂಥ ಧಾರ್ಮಿಕ ತತ್ತ್ವಗಳನ್ನು ಮನುಷ್ಯರಲ್ಲಿ ಮೂಡಿಸುವುದು.

ಆದರೆ ಪ್ರಗತಿಪರರಾದ ಜನ ಇದನ್ನು ಮಾಡುವುದಕ್ಕೆ ಬದಲು ಈ ಪರಿಹಾರದ ಸಂಭವವಾಗಲೀ ಅಗತ್ಯವಾಗಲೀ ಬೇರೆಯವರಿಗೆ ತಿಳಿಯದಿರಲಿ ಎಂದು ತಮ್ಮ ಬುದ್ಧಿವಂತಿಕೆಯನ್ನೆಲ್ಲ ವೆಚ್ಚಮಾಡುತ್ತಾರೆ. ಆಸ್ತಿಪಾಸ್ತಿಗಳ ಬಗ್ಗೆ, ಅಪರಾಧಗಳ ಬಗ್ಗೆ, ಪೋಲೀಸ್, ಚರ್ಚ್, ವ್ಯಾಪಾರ ಮತ್ತೆ ಏನೇನೋ ನ್ಯಾಯಾಂಗ ವಿಚಾರಗಳನ್ನು ಕುರಿತು ಬೆಟ್ಟದಷ್ಟು ಪುಸ್ತಕಗಳನ್ನು ಬರೆಯುತ್ತಾರೆ; ತಾವು ಮಾಡುತ್ತಿರುವುದು ಉಪಯುಕ್ತ ಮಾತ್ರವಲ್ಲ, ಮುಖ್ಯವೂ ಹೌದು ಎನ್ನುವ ಸಂಪೂರ್ಣ ವಿಶ್ವಾಸದಿಂದ ಅವುಗಳ ಬಗ್ಗೆ ವ್ಯಾಖ್ಯಾನ ನಡೆಸುತ್ತಾರೆ, ವಾದ-ವಿವಾದಗಳನ್ನೆಬ್ಬಿಸುತ್ತಾರೆ. 'ಮನುಷ್ಯರಲ್ಲಿ, ಸಹಜವಾಗಿಯೇ ಎಲ್ಲರೂ ಸಮಾನರಾಗಿರುವಾಗ ಕೆಲವರು ಇತರರನ್ನು ನಿರ್ಣಯಿಸಿ, ಪ್ರಚೋದಿಸಿ, ಶೋಷಿಸಿ, ವಧಿಸುವುದೇತಕ್ಕೆ?' ಎಂಬ ಪ್ರಶ್ನೆಗೆ ಅವರ ಉತ್ತರವೇನಿರದು; ಈ ಪ್ರಶ್ನೆ ಇರುವುದನ್ನು ಅವರು ಗಮನಿಸುವುದಿಲ್ಲ. ಅವರ ಪ್ರಕಾರ ಈ ಹಿಂಸೆ ನಡೆಯುವುದು ಮನುಷ್ಯರಿಂದಲ್ಲ, ರಾಷ್ಟ್ರವೆಂಬ ಕಾಲ್ಪನಿಕ ವಸ್ತುವಿನಿಂದ. ಹಾಗೆಯೇ ಜ್ಞಾನದ ಎಲ್ಲ ಪ್ರಕಾರಗಳಲ್ಲಿಯೂ ಈಗಿನ ವಿದ್ಯಾವಂತರಾದ ಜನ ಮುಖ್ಯವಾದ ಪ್ರಶ್ನೆಗಳನ್ನು ಎದುರಿಸದೆ ಮೌನವಾಗಿದ್ದು, ಅವಶ್ಯವಾಗಿರುವ ವಿರೋಧಾಭಾಸವನ್ನು ಮರೆಮಾಚುತ್ತಾರೆ.

ಇತಿಹಾಸದ ಕ್ಷೇತ್ರದಲ್ಲಿ ಒಂದೇ ಮುಖ್ಯವಾದ ಪ್ರಶ್ನೆ ; "ಕಾರ್ಮಿಕರು (ಇಡೀ ಮಾನವಕೋಟಿಯ ಸಾವಿರದಲ್ಲಿ ಒಂಭೈನೂರು ತೊಂಬತ್ತೊಂಬತ್ತು ಭಾಗವಾಗಿರುವ ಕಾರ್ಮಿಕರು) ಹೇಗೆ ಜೀವಿಸಿದರು?". ಈ ಪ್ರಶ್ನೆಗೆ ಉತ್ತರರೂಪವಾಗಿ ನಾವು ಏನನ್ನೂ ಪಡೆಯುವುದಿಲ್ಲ; ಹನ್ನೊಂದನೆಯ ಲೂಯಿಯ ಹೊಟ್ಟೆನೋವು. ಇಂಗ್ಲೆಂಡಿನ ಎಲಿಸಬೆತ್ ಅಥವಾ ರಷ್ಯದ ಭಯಂಕರ ಇವಾನ್ ಮಾಡಿದ ಘೋರಕೃತ್ಯಗಳು, ಅವರ ಮಂತ್ರಿಗಳು, ಸಾಹಿತಿಗಳು, ಈ ದೊರೆಗಳ, ಅವರ ಅರಸಿಯರ. ಮಂತ್ರಿಗಳ ಸಂತೋಷಕ್ಕೆಂದು ಬರೆದ ಪದ್ಯಗಳು ಇವುಗಳನ್ನು ಕುರಿತು ಬೆಟ್ಟದಷ್ಟು ಪುಸ್ತಕಗಳನ್ನು ಇತಿಹಾಸಕಾರರು ಬರೆದರೂ ಈ ಪ್ರಶ್ನೆಯನ್ನು ಮಾತ್ರ ಕಡೆಗಾಣಿಸುತ್ತಾರೆ. ಇದು ಒಂದು ಬಗೆಯ ಇತಿಹಾಸಕಾರರ ಬರವಣಿಗೆಯಾದರೆ. ಇನ್ನೊಂದು ಬಗೆಯವರು ಒಂದು ಜನ ಯಾವ ರೀತಿಯ ದೇಶದಲ್ಲಿದ್ದರು, ಅವರ ಆಹಾರವೇನು. ಅವರು ಮಾರಾಟ ಮಾಡಿದ್ದು ಏನನ್ನು, ಅವರ ಉಡುಗೆ ಹೇಗಿತ್ತು—ಈ ವಿಚಾರವಾಗಿ ಬರೆಯುತ್ತಾರೆ. ಸಾಮಾನ್ಯವಾಗಿ ಇವೆಲ್ಲ ಜನರ ನಿಜವಾದ ಜೀವನದ ಮೇಲೆ ಯಾವ ಪ್ರಭಾವವನ್ನೂ ಬೀರಲಾರದ ವಿವರಗಳು; ಇವೆಲ್ಲ ಆ ಜನರ ಧರ್ಮದ ಪ್ರತಿಕ್ರಿಯೆಗಳು. ಆದರೆ ಈ ಬಗೆಯ ಇತಿಹಾಸಕಾರರು ಅವರ ಧರ್ಮವೇ ಅವರು ಯಾವ ಆಹಾರವನ್ನು ತಿಂದರು, ಯಾವ ಉಡುಪನ್ನು ತೊಟ್ಟರು ಎಂಬುದರ ಪ್ರತಿಕ್ರಿಯೆ ಎಂದು ನಂಬುತ್ತಾರೆ.

ಆದರೂ 'ಕಾರ್ಮಿಕರು ಹೇಗೆ ಜೀವಿಸಿದರು?' ಎಂಬ ಪ್ರಶ್ನೆಗೆ ಉತ್ತರ ಜನರ ಜೀವನದ ಮುಖ್ಯ ನೆಲೆ ಧರ್ಮ ಎಂಬುದನ್ನು ಪರಿಗ್ರಹಿಸುವವರೆಗೂ ಬರುವುದಿಲ್ಲ.

ಅದುದರಿಂದ ಸಮಸ್ಯೆಗೆ ಉತ್ತರ ದೊರೆಯುವುದು ರಾಷ್ಟ್ರಗಳು ನಂಬುವ ಧರ್ಮಗಳನು ಅಧ್ಯಯನ ಮಾಡುವುದರಿಂದಲೇ. ಏಕೆಂದರೆ ಇವೇ ಅವರ ಬದುಕಿನ ಪರಿಸ್ಥಿತಿಗೆ ಅವರನ್ನು ತಂದಿರುವುವು.

ಪ್ರಾಕೃತ ಇತಿಹಾಸದ ಅಧ್ಯಯನದಲ್ಲಿ ಮನುಷ್ಯರು ಸಾಮಾನ್ಯ ತಿಳಿವಳಿಕೆಯನ್ನು ಕತ್ತಲೆಗೊಳಿಸಬೇಕಾದ ಅಗತ್ಯವಿಲ್ಲ ಎನಿಸಬಹುದು. ಆದರೆ ಇಲ್ಲಿಯೂ, ಸಮಸಾಮಯಿಕ ವಿಜ್ಞಾನ ಅಳವಡಿಸಿಕೊಂಡಿರುವ ಮನೋಧರ್ಮವನ್ನನುಸರಿಸಿ. "ಜಂಗಮ ವಿಶ್ವ (ಸಸ್ಯಗಳು. ಪ್ರಾಣಿಗಳು) ಯಾವುದು? ಅದರ ವಿಭಾಗಗಳೇನು?" ಎನ್ನುವ ಪ್ರಶ್ನೆಗೆ ಸಹಜವಾದ ಉತ್ತರಗಳನ್ನು ಕೊಡುವ ಬದಲು ನಿರರ್ಥಕವಾದ. ಗೊಂದಲದ ಹರಟೆ ಯನ್ನು ಆರಂಭಿಸುತ್ತಾರೆ; (ಬೈಬಲ್‌ನಲ್ಲಿ ಬರುವ ಸೃಷ್ಟಿವಿವರವನ್ನು ಮುಖ್ಯವಾಗಿ ವಿರೋಧಿಸುತ್ತ) ಪ್ರಾಣಿಗಳು ಬಂದುದು ಹೇಗೆ ಎಂದು ಚರ್ಚೆಯನ್ನಾರಂಭಿಸುತ್ತಾರೆ. ದಿಟವಾಗಿ ಇದನ್ನು ತಿಳಿಯಬೇಕಾದ ಅಗತ್ಯವಿಲ್ಲ. ತಿಳಿಯುವುದು ಸಾಧ್ಯವೂ ಇಲ್ಲ; ಏಕೆಂದರೆ ಈ ಉಗಮ – ನಾವು ಹೇಗೆ ವಿವರಿಸಿದರೂ – ಅನಂತಕಾಲ ಅನಂತದೇಶಗಳಲ್ಲಿ ನಮ್ಮಿಂದ ಎಂದೂ ಅಡಗಿರುತ್ತದೆ. ಆದರೆ ಈ ವಿಚಾರವಾಗಿ ಸಿದ್ಧಾಂತಗಳೂ, ವಾದವಿವಾದಗಳೂ, ಉಪಸಿದ್ಧಾಂತಗಳೂ ಮಿಲಿಯನ್‌ಗಟ್ಟಳೆ ಪುಸ್ತಕಗಳನ್ನು ತುಂಬಿ ಸೃಷ್ಟಿಯಾಗಿವೆ. ಇವು ಮುಟ್ಟಿರುವ ಅನಿರೀಕ್ಷಿತವಾದ ನಿರ್ಧಾರವೆಂದರೆ – ಬದುಕಿನ ಹೋರಾಟವೇ ಮನುಷ್ಯನು ತಲೆಬಾಗಿಸಬೇಕಾದ ಜೀವನ ನಿಯಮ ಎನ್ನುವುದು.

ಇದಕ್ಕಿಂತ ಹೆಚ್ಚಾಗಿ, ಯಾವ ಧಾರ್ಮಿಕ ತತ್ತ್ವಗಳ ಮಾರ್ಗದರ್ಶನವೂ ಇಲ್ಲವಾಗಿ, ಈ ಪ್ರಾಯೋಗಿಕ ವಿಜ್ಞಾನಗಳು – ತಂತ್ರವಿಜ್ಞಾನ, ವೈದ್ಯ ಮುಂತಾದುವು – ಅನಿವಾರ್ಯ ವಾಗಿಯೇ ತಮ್ಮ ಉದ್ದೇಶದಿಂದ ಅಡ್ಡವಾಗಿ, ತಪ್ಪುದಾರಿ ಹಿಡಿಯುತ್ತವೆ. ಹೀಗೆ ತಂತ್ರವಿಜ್ಞಾನವನ್ನು ಬಳಸುವುದು ಜನರ ಶ್ರಮವನ್ನು ಕಡಮೆಮಾಡುವುದಕ್ಕಲ್ಲ, ಸಿರಿ ವಂತರಿಗೆ ಬೇಕಾದ ಪ್ರಗತಿ ಸಾಧನಗಳನ್ನು ಮಾಡುವುದಕ್ಕೆ; ಇವು ಈ ಕಾರಣದಿಂದ ಸಿರಿವಂತ—ಬಡವರ ನಡುವೆ ಒಡೆಯ—ಸೇವಕರ ನಡುವೆ ಅಂತರವನ್ನು ಹೆಚ್ಚುಮಾಡು ತ್ತವೆ. ಈ ಉತ್ಪಾದನೆಗಳಿಂದ ಪ್ರಗತಿಗಳಿಂದ ಆಗುವ ಅನುಕೂಲ ಅಷ್ಟಿಷ್ಟು – ಚೂರು ಪಾರು – ಕಾರ್ಮಿಕ ವರ್ಗವನ್ನು ಮುಟ್ಟುವುದೇ ಆದರೆ, ಆ ಜನರಿಗಾಗಿ ಇದು ಎಂದಲ್ಲ, ಅದನ್ನು ಅವರಿಂದ ಸಹಜವಾಗಿಯೇ ತಪ್ಪಿಸುವುದಾಗದು ಎಂದು.

ವೈದ್ಯವಿಜ್ಞಾನದ ಕಥೆಯೂ ಇದೇ. ತನ್ನ ತಪ್ಪುದಾರಿಯಲ್ಲಿ ಅದು ಎಷ್ಟು ದೂರ ಸಾಗಿದೆಯೆಂದರೆ, ಸಿರಿವಂತರು ಮಾತ್ರ ಅದನ್ನು ಬಳಸಿಕೊಳ್ಳಬಲ್ಲರು ಎನ್ನುವ ಸ್ಥಿತಿಯನ್ನು ಮುಟ್ಟಿದೆ. ಜನರಲ್ಲಿ ಬಹುಸಂಖ್ಯಾತರು ತನ್ನ ಜೀವನ ಸಂವಿಧಾನದಿಂದಲೂ ಬಡತನದಿಂದಲೂ (ಬಡವರ ಬದುಕನ್ನು ಸುಧಾರಿಸಬೇಕೆಂಬ ಪ್ರಶ್ನೆಯನ್ನೇ ಕಡೆಗಾಣಿಸು ವುದರ ಫಲವಾಗಿ) ಅದನ್ನು ಬಳಸಿಕೊಳ್ಳಬೇಕೆಂದರೆ, ವೈದ್ಯವಿಜ್ಞಾನ ತನ್ನ ನಿಜವಾದ

ಉದ್ದೇಶದಿಂದ ಎಷ್ಟು ಅಡ್ಡದಾರಿ ಹಿಡಿದಿದೆ ಎಂದು ಸ್ಪಷ್ಟವಾಗಿ ತೋರಿಸುವಂಥ ಸಂವಿಧಾನಗಳನ್ನು ಅನುಸರಿಸಬೇಕಾಗುತ್ತದೆ.

ಮೂಲಭೂತವಾದ ಪ್ರಶ್ನೆಗಳನ್ನು ಮರೆಮಾಚುವುದು. ಕುಲಗೆಡಿಸ್ಸುವುದು ತತ್ತ್ವಶಾಸ್ತ್ರವೆಂದು ನಾವು ಏನನ್ನು ಕರೆಯುತ್ತೇವೆಯೋ ಅಲ್ಲಿ ತುಂಬ ಎದ್ದು ಕಾಣುತ್ತವೆ. ತತ್ತ್ವಶಾಸ್ತ್ರ ಪರಿಹರಿಸಬೇಕಾದ ಒಂದೇ ಮುಖ್ಯ ಸಮಸ್ಯೆ – 'ನಾನು ಮಾಡಬೇಕಾದುದೇನು?' ಎನ್ನುವುದು. ಕ್ರೈಸ್ತರಾಷ್ಟ್ರಗಳ ತತ್ತ್ವಶಾಸ್ತ್ರದಲ್ಲಿ ಈ ಸಮಸ್ಯೆಗೆ ಉತ್ತರಗಳು— ಸ್ಪಿನೋಸ, ಕ್ಯಾಂಟ್ (ಅವನ ಕ್ರಿಟೀಕ್ ಆಫ್ ಪ್ಯೂರ್ ರೀಸನ್‌ನಲ್ಲಿ), ಶೋಪೆನ್‌ಹೋ. ಮತ್ತು ತತ್ರಾಪಿ ರೂಸೋ ಇವರು ಮಾಡಿದಂತೆ ಅನಗತ್ಯವಾದ, ಗೊಂದಲದ ಹಲವಾರು ವಿವರಗಳನ್ನು ಕಲೆಸಿಕೊಂಡು ಬರುವುವಾದರೂ – ಬಂದೇನೋ ಬಂದಿವೆ. ಆದರೆ ಈಚೆಗೆ, (ಇರುವುದೆಲ್ಲ ವಿಚಾರ ಶುದ್ಧವಾದುದು ಎಂದು ಹೇಳಿದ) ಹೆಗಲ್ ನಿಂದೀಚೆಗೆ, 'ನಾವು ಮಾಡಬೇಕಾದುದೇನು?' ಎನ್ನುವ ಪ್ರಶ್ನೆ ಹಿನ್ನೆಲೆಗೆ ಸರಿದಿದೆ; ತತ್ತ್ವಶಾಸ್ತ್ರವು ತನ್ನೆಲ್ಲ ಗಮನವನ್ನೂ ವಸ್ತುಗಳು ಹೇಗಿವೆಯೆಂದು ಅಧ್ಯಯನಮಾಡುವುದರ ಕಡೆಗೂ, ಪೂರ್ವನಿಶ್ಚಿತ ಸಿದ್ಧಾಂತಕ್ಕೆ ವಸ್ತುಗಳನ್ನು ಹೊಂದಿಸುವುದರ ಕಡೆಗೂ ಹರಿಸಿದೆ. ಕೆಳಗೆ ಇಳಿಯುವಲ್ಲಿ ಇದು ಮೊದಲ ಹೆಜ್ಜೆ. ಮುಂದಿನ ಹೆಜ್ಜೆ, ಮಾನವ ಚಿಂತನೆಯನ್ನು ಇನ್ನೂ ಕೆಳಮಟ್ಟಕ್ಕೆ ಇಳಿಸುವುದು, ಸಸ್ಯಗಳಲ್ಲಿ, ಪ್ರಾಣಿಗಳಲ್ಲಿ ಕಂಡು ಬರುವುದೆಂಬುದಷ್ಟೇ ಕಾರಣಕ್ಕಾಗಿ ಬದುಕಿನ ಹೋರಾಟವೇ ಮೂಲಭೂತವಾದ ನಿಯಮವೆಂದು ಅಂಗೀಕರಿಸಿದುದು. ಈ ಸಿದ್ಧಾಂತದ ಪ್ರಭಾವದಲ್ಲಿ, ದುರ್ಬಲರಾದವರು ನಾಶವಾಗುವುದು ನಿಯಮ, ಅದನ್ನು ತಡೆಗಟ್ಟಬಾರದು ಎನ್ನುವ ನಂಬಿಕೆ ಒದಗಿಬಂದಿತು. ಕಡೆಗೆ, ತತ್ತ್ವವಿಜ್ಞಾನದಲ್ಲಿ ಕಟ್ಟಕಡೆಯ ಮಾತು ನೀಚೆಯದು ಎಂದು ಪ್ರಗತಿಪರರಾದ ಜನ ಒಪ್ಪಿಕೊಂಡಾಗ, ಮೂರನೆಯ ಹೆಜ್ಜೆ ಇಡಲ್ಪಟ್ಟಿತು. ಅರ್ಧಮರ್ಧ ಸಮಬುದ್ಧಿಯಿದ್ದ ನೀಚೆ ತನ್ನ ತತ್ತ್ವಗಳು ಮೌಲಿಕವೆಂದು ಕಾಣಿಸಲು ವ್ಯರ್ಥಪ್ರಯತ್ನವನ್ನು ಮಾಡಿದ; ಆದರೆ ಅವನ ಬರಹಗಳು ಏನೇನೂ ಆಧಾರವಿಲ್ಲದ ಅನೈತಿಕ, ಆಗಾಗ ತೋರಿದ ಗೀಚಾಟ ಅಷ್ಟೆ; ಅದರಲ್ಲಿ ಸಂಪೂರ್ಣವಾದುದಾಗಲೀ ಸುಸಂಬದ್ಧವಾದುದಾಗಲೀ ಏನೂ ಇರದು. 'ನಾವು ಮಾಡಬೇಕಾದುದೇನು?' ಎನ್ನುವ ಪ್ರಶ್ನೆಗೆ ಉತ್ತರವಾಗಿ ಈಗ ಈ ಬುದ್ಧಿವಾದವನ್ನು ಸ್ಪಷ್ಟವಾಗಿಯೇ ಕೊಡುತ್ತಾರೆ – 'ನಿನಗೆ ಬೇಕಾದಂತೆ ಬಾಳು; ಬೇರೆಯವರ ಬದುಕನ್ನು ಗಮನಿಸಬೇಕಾಗಿಲ್ಲ'.

ನಮ್ಮ ಕ್ರೈಸ್ತ ಮಾನವಕೋಟಿ ಯಾವ ಭಯಾನಕ ಮೋಹ, ಪಾಶವೀ ಸ್ಥಿತಿಗೆ ಇಳಿದಿದೆಯೆಂದು ಯಾರಾದರೂ ಸಂಶಯಪಡುವುದಾದರೆ – ಈಚೆಗೆ ದಕ್ಷಿಣ ಆಫ್ರಿಕ, ಚೀನಗಳಲ್ಲಿ ನಡೆದ, ಕ್ರೈಸ್ತಪಾದ್ರಿಗಳು ಸಮರ್ಥಿಸಿದ, ಪ್ರಪಂಚದ ಮಹಾಪುರುಷರ ಸಾಧನೆಗಳೆಂದು ಹೊಗಳಿದ, ಪಾಪಕೃತ್ಯಗಳನ್ನು ಹೇಳದೆ ಬಿಟ್ಟರೂ – ನೀಚೆಯ ಬರಹಗಳು ಪಡೆದಿರುವ ಅದ್ಭುತವಾದ ಜನಮನ್ನಣೆಯೊಂದೇ ಸಾಕು ಇದನ್ನು ಪ್ರಮಾಣೀಕರಿಸು

ವುದಕ್ಕೆ. ಯಾವನೋ ಧೈರ್ಯಶಾಲಿಯಾದ. ಆದರೆ ಅಷ್ಟು ವ್ಯುತ್ಪತ್ತಿಯಿಲ್ಲದ. ಬುದ್ಧಿ ನೆಟ್ಟಗಿಲ್ಲದ ಜರ್ಮನ್‌ದೇಶೀಯನೊಬ್ಬ ಅಹಂಪ್ರತಿಷ್ಠೆಯ ಗೀಳಿನಿಂದ. ಮೆಚ್ಚಿಸಬೇಕೆಂಬ ಉದ್ದೇಶದಿಂದಲೇ ಅಸಂಬದ್ಧವಾಗಿ ಬರೆಯುತ್ತಾನೆ. ಜನರ ಗಮನವನ್ನು ಸೆಳೆಯು ತಕ್ಕ ವಿದ್ವತ್ತಾಗಲೀ ಪ್ರಾಮಾಣ್ಯವಾಗಲೀ ಅವುಗಳಲ್ಲಿಲ್ಲ. ಕ್ಯಾಂಟ್. ಲೀಬ್ನಿಟ್ಸ್. ಹ್ಯೂಂ. ಇವರ ಕಾಲದಲ್ಲಿ. ಹೋಗಲಿ ಈಗ್ಗೆ ಐವತ್ತು ವರ್ಷಗಳ ಹಿಂದೆ ಕೂಡ. ಇಂಥ ಬರಹಗಳು. ಜನರ ಗಮನವನ್ನು ಸೆಳೆಯುವುದಿರಲಿ. ಪ್ರಕಟವೂ ಆಗುತ್ತಿರಲಿಲ್ಲ. ನಮ್ಮ ಕಾಲದಲ್ಲಿ ಯಾದರೋ ವಿದ್ಯಾವಂತರೆಂದುಕೊಂಡ ಜನ ಈ ಹೆರ್ ನೀಚೆಯ ಪ್ರಲಾಪದಿಂದ ಸಂತೋಷಪಡುತ್ತಿದ್ದಾರೆ. ಅವನ ವಿಚಾರವಾಗಿ ಚರ್ಚೆಮಾಡುತ್ತಾರೆ, ಅವನ ಅಭಿ ಪ್ರಾಯಗಳನ್ನು ವಿವರಿಸುತ್ತಾರೆ. ಎಲ್ಲ ಭಾಷೆಗಳಲ್ಲಿ ಅವನ ಪುಸ್ತಕಗಳ ಅಸಂಖ್ಯಾತ ಪ್ರತಿಗಳು ಅಚ್ಚಾಗುತ್ತವೆ.

ತುರ್ಜನೀಫ್ ತಮಾಷೆಗೆ ಹೇಳುತ್ತಾನೆ : 'ತಿರುಗುಮುರುಗು ಔಪಚಾರಿಕ ಪದಗಳು' ಎಂಬುವು ಇರುತ್ತವೆ: ಪ್ರತಿಭೆಯಿಲ್ಲದ ಜನ ಗಮನವನ್ನು ಸೆಳೆಯಬೇಕೆನ್ನುವವರು ಇವನ್ನು ಬಳಸುತ್ತಾರೆ ಎಂದು. ನೀರು ತೇವ ಎಂದು ಎಲ್ಲರಿಗೂ ಗೊತ್ತಷ್ಟೆ. ಆದರೆ ಇದ್ದಕ್ಕಿದ್ದಂತೆ ಯಾರೋ ನೀರು—ಮಂಜಲ್ಲ. ನೀರೇ—ಒಣಗಿರುತ್ತದೆ ಎಂದು ಗಂಭೀರ ವಾಗಿಯೇ ಹೇಳಿದರೆ, ಈ ಅಭಿಪ್ರಾಯವನ್ನು. ವಿಶ್ವಾಸದಿಂದ ಮಂಡಿಸಿದರೆ ಅದು ಎಲ್ಲರ ಗಮನವನ್ನು ಸೆಳೆಯುತ್ತದೆ.

'ಹಾಗೆಯೇ, ತನ್ನ ಕಾಮನೆಗಳನ್ನು ನಿಗ್ರಹಿಸಿಕೊಳ್ಳುವುದು, ಆತ್ಮತ್ಯಾಗ ಇವು ಶೀಲ ಎಂದು ಜಗತ್ತಿಗೇ ಗೊತ್ತು. (ನೀಚೆ ತಾನು ಸೆಣೆಸುತ್ತಿರುವನೆಂದು ಭಾವಿಸಿರುವ) ಕ್ರೈಸ್ತರು ಮಾತ್ರವಲ್ಲ, ಬ್ರಾಹ್ಮಣರು, ಬೌದ್ಧರು, ಕಂಫ್ಯೂಷಿಯಸ್ ಅನುಯಾಯಿಗಳು, ಪ್ರಾಚೀನ ಪರ್ಶಿಯ ಧರ್ಮಕ್ಕೆ ಸೇರಿದವರು ಮೊದಲಾದ ಎಲ್ಲ ಮಾನವರೂ ಒಪ್ಪಿರುವ ಶಾಶ್ವತ, ಪರಮೋತ್ಕೃಷ್ಟ ನಿಯಮ. ಆದರೆ ಇದ್ದಕ್ಕಿದ್ದಂತೆ ಒಬ್ಬ ಮನುಷ್ಯ ಕಾಣಿಸಿಕೊಂಡು ಆತ್ಮತ್ಯಾಗ. ನಮ್ರತೆ, ವಿನಯ, ಪ್ರೀತಿ ಇವು ಮಾನವಕೋಟಿಯನ್ನು ಹಾಳುಮಾಡುತ್ತಿವೆ (ಉಳಿದೆಲ್ಲ ಧರ್ಮಗಳನ್ನು ಮರೆತು ಆತ ಕ್ರೈಸ್ತಧರ್ಮವೊಂದನ್ನು ಪ್ರಸ್ತಾಪಿಸುತ್ತಾನೆ) ಎಂದು ಘೋಷಿಸುತ್ತಾನೆ. ಈ ಮಾತು ಮೊದಲು ಜನರಿಗೆ ದಿಗ್ಭ್ರಮೆಯನ್ನುಂಟು ಮಾಡುವುದು ಸಹಜವೇ. ಆದರೆ ಸ್ವಲ್ಪ ಆಲೋಚನೆ ಮಾಡಿದ ಮೇಲೆ, ಅವನ ಈ ಅಸ್ಪಷ್ಟ ನಿಲುವಿಗೆ ಅವನ ಗ್ರಂಥಗಳಲ್ಲಿ ಸಮರ್ಥನೆಯನ್ನು ಕಾಣದಿದ್ದಾಗ ವಿಚಾರಶೀಲ ನಾದ ಮನುಷ್ಯ ಆ ಪುಸ್ತಕಗಳನ್ನು ಬದಿಗೊತ್ತಬೇಕು ತಾನೆ? ಈಗೀಗ ಯಾವ ಅಸಂಬದ್ಧ ಪ್ರಲಾಪವನ್ನಾದರೂ ಪ್ರಕಾಶಪಡಿಸುವವರಿದ್ದಾರೆಂದು ಆಶ್ಚರ್ಯಪಡಬೇಕು ತಾನೆ? ಆದರೆ ನೀಚೆಯ ಪುಸ್ತಕಗಳಿಗೆ ಹೀಗಾಗಲಿಲ್ಲ. ಹಲವಾರು ಮಂದಿ ಪ್ರಚ್ಛನ್ನ ವಿದ್ಯಾವಂತರು 'ಅತಿಮಾನವ' ಸಿದ್ಧಾಂತವನ್ನು ಗಂಭೀರವಾಗಿ ಚರ್ಚಿಸುತ್ತಾರೆ, ಅದರ ಪ್ರತಿಪಾದಕನನ್ನು ಮಹಾದಾರ್ಶನಿಕನೆಂದೂ. ದೇಕಾರ್ತ್, ಲೀಬ್ನಿಟ್ಸ್, ಕ್ಯಾಂಟ್ ಇವರ ಉತ್ತರಾಧಿಕಾರಿಯೆಂದೂ ಹೊಗಳುತ್ತಾರೆ.

ಇದೆಲ್ಲ ಏಕಾಯಿತೆಂದರೆ, ಈ ಕಾಲದ ಪ್ರಪ್ರಸ್ನ–ವಿದ್ಯಾವಂತರಿಗೆ ಶೀಲ ಅಥವಾ ಅದರ ಮುಖ್ಯ ಆಧಾರಗಳಾದ ಆತ್ಮತ್ಯಾಗ ಮತ್ತು ಪ್ರೀತಿ ಇವುಗಳನ್ನಾಗಲೀ, ತಾವು ನಡೆಸುತ್ತಿರುವ ಪಾಶವೀ ಜೀವನವನ್ನು ತಡೆಗಟ್ಟುವ ಅಥವಾ ನಿಂದಿಸುವ ಯಾವುದೇ ವಿವರವನ್ನಾಗಲೀ ನೆನಪಿಗೆ ತಂದುಕೊಳ್ಳುವುದು ಹಿತವೆನಿಸುವುದಿಲ್ಲ. ಅಹಂಕಾರವನ್ನು ಮತ್ತು ಕ್ರೌರ್ಯವನ್ನು ಪ್ರತಿಪಾದಿಸುವ ಯಾವುದೇ ಸಿದ್ಧಾಂತವನ್ನಾಗಲೀ – ಅದರ ಪ್ರತಿಪಾದನೆ ಎಷ್ಟೇ ದುರ್ಬಲವಾಗಿ, ಅಸ್ಪಷ್ಟವಾಗಿ, ಅಸಂಬದ್ಧವಾಗಿರಲಿ – ಸ್ವಾಗತಿಸುತ್ತಾರೆ. ಏಕೆಂದರೆ ಈ ಸಿದ್ಧಾಂತವು ಇತರರ ಬದುಕಿನ ಆಧಾರದ ಮೇಲೆ ತಮ್ಮ ಸುಖವನ್ನೂ ಹಿರಿಮೆಯನ್ನೂ ಸ್ಥಾಪಿಸಿಕೊಳ್ಳುವುದನ್ನು ಸಮರ್ಥಿಸುತ್ತವೆ; ಅವರು ಬದುಕಿರುವುದು ಈ ನೆಲೆಯಲ್ಲಿಯೇ.

## 12

ಕ್ರಿಸ್ತನು ಪಂಡರನ್ನೂ ಪುರೋಹಿತರನ್ನೂ ಜರಿದ – ಸ್ವರ್ಗಸಾಮ್ರಾಜ್ಯದ ಕೀಲಿಯನ್ನು ತಾವು ಇರಿಸಿಕೊಂಡು ತಾವೂ ಪ್ರವೇಶಿಸುವುದಿಲ್ಲ, ಇತರರನ್ನೂ ಪ್ರವೇಶಿಸಗೊಡುವುದಿಲ್ಲ ಎಂದು.

ಈ ಕಾಲದ ವಿದ್ಯಾವಂತ ಪಂಡರು ಮಾಡುತ್ತಿರುವುದೂ ಇದನ್ನೇ. ಅವರು ಈಗ ಇರಿಸಿಕೊಂಡಿರುವುದು ಸ್ವರ್ಗಸಾಮ್ರಾಜ್ಯದ ಕೀಲಿಯನ್ನಲ್ಲ. ಜ್ಞಾನಸಾಮ್ರಾಜ್ಯದ ಕೀಲಿಯನ್ನು. ತಾವೂ ಪ್ರವೇಶಿಸುವುದಿಲ್ಲ, ಇತರರಿಗೂ ಪ್ರವೇಶಕ್ಕೆ ಅವಕಾಶಕೊಡುವುದಿಲ್ಲ.

ಶ್ರೌತಿಗಳೂ ಪುರೋಹಿತರೂ ಎಲ್ಲ ಬಗೆಯ ಮೋಸದಿಂದ, ಸಂಮೋಹನದಿಂದ ಜನರಲ್ಲಿ ಕ್ರೈಸ್ತಮತವು ಸರ್ವಜನಸಮಾನತೆಯನ್ನು ಬೋಧಿಸುವುದಿಲ್ಲವೆಂಬ ಭಾವನೆಯನ್ನು ಬೇರೂರಿಸಿದ್ದಾರೆ; ಈ ಭಾವನೆ ಈಗಿನ ಬದುಕಿನ ಬಗೆಯನ್ನೇ ಹಾಳುಮಾಡುವಂಥದು. ಆದರೆ, ಇದಕ್ಕೆ ವಿರುದ್ಧವಾಗಿ ಇರುವ ವಸ್ತುಸ್ಥಿತಿಯನ್ನು ಉತ್ತೇಜಿಸುವುದೆಂದು ಇವರು ತಿಳಿಸುತ್ತಿದ್ದಾರೆ. ನಕ್ಷತ್ರಗಳಲ್ಲಿ ನಾವು ಭೇದವೆಣಿಸುವಂತೆ, ಜನರಲ್ಲಿಯೂ ಭೇದವೆಣಿಸಿ, ಅವರು ಬೇರೆ ಬೇರೆ ವರ್ಗಗಳಿಗೆ ಸೇರಿದವರೆಂಬ ತಿಳುವಳಿಕೆಯನ್ನು ರೂಢಿಸುತ್ತಿದ್ದಾರೆ. ಇರುವ ಯಾವುದೇ ಆಡಳಿತವೂ ದೇವರಿಂದಲೇ ನಿಯಮಿತವಾದುದೆಂದೂ, ಅದನ್ನು ಚಾಚು ತಪ್ಪದೆ ಸೇವಿಸಬೇಕೆಂದೂ ಇವರ ವಾದ. ವಾಸ್ತವವಾಗಿ ದಲಿತರಿಗೆ ಇವರು ಸೂಚಿಸುವುದು ಅವರ ಹೀನಸ್ಥಿತಿ ದೇವರ ಸಂಕಲ್ಪದ ಫಲ ಎಂದು, ವಿನಯದಿಂದ ನಯದಿಂದ ಅದನ್ನು ಸ್ವೀಕರಿಸಿಕೊಳ್ಳಬೇಕು ಎಂದು. ಅವರ ಮೇಲೆ ದಬ್ಬಾಳಿಕೆ ನಡೆಸುವ ಜನ ಇಷ್ಟು ವಿನಯದಿಂದ, ನಯದಿಂದ ಇರಬೇಕಾದುದಿಲ್ಲ! ಚಕ್ರವರ್ತಿಗಳಾಗಿ, ರಾಜರಾಗಿ, ಪೋಪ್, ಜಗದ್ಗುರುಗಳಾಗಿ, ಬಿಷಪ್‌ಗಳಾಗಿ, ಬಗೆಬಗೆಯ ಲೌಕಿಕ ಮತ್ತು ಆಧ್ಯಾತ್ಮಿಕ ಗುರುಗಳಾಗಿ ಇತರರನ್ನು ತಮ್ಮ ಪ್ರವಚನದಿಂದಲೂ

ಶಿಕ್ಷೆಯಿಂದಲೂ ತಿದ್ದಬೇಕು: ಆದರೆ ತಾವೇ ಶ್ರೀಮಂತಿಕೆಯಲ್ಲಿ ವೈಭವದಲ್ಲಿ ವಾಸಿಸಬಹುದು; ಆಡಳಿತಕ್ಕೆ ಸಿಕ್ಕವರು ಅವರ ಸುಖಲೋಲುಪತೆಗಳನ್ನು ಒದಗಿಸುವುದು ಕರ್ತವ್ಯವೆಂದು ತಿಳಿಯಬೇಕು. ಈ ಅಸತ್ಯಬೋಧನೆಯಿಂದಾಗಿ. ಆಡಳಿತವರ್ಗದವರು ಜನಗಳ ಮೇಲೆ ಆಡಳಿತ ನಡೆಸುತ್ತಾರೆ. ಜನರು ಆ ಅಧಿಕಾರಿಗಳ ಸೋಮಾರಿತನ, ವೈಭವ, ಪಾಪಗಳಿಗೆ ಸಾಧನಗಳನ್ನು ಒದಗಿಸಬೇಕು. ಈ ಸಂಮೋಹನದಿಂದ ಬಿಡುಗಡೆಯಾದ ಒಂದೇ ವರ್ಗದ ಜನ – ವಿಜ್ಞಾನಿಗಳು – ಸಾಮಾನ್ಯಜನರನ್ನು ಈ ದಬ್ಬಾಳಿಕೆಯಿಂದ ಬಿಡಿಸ ಬಲ್ಲವರು; ಹಾಗೆ ಮಾಡುವ ಅಪೇಕ್ಷೆ ತಮಗಿದೆಯೆಂದು ಅವರು ಹೇಳಿಕೊಂಡರೂ ಮಾಡುವುದೇನೂ ಇಲ್ಲ: ಈ ಉದ್ದೇಶವನ್ನು ತೀರಿಸುವ ಕೆಲಸಮಾಡದೆ ಅದಕ್ಕೆ ವಿಪರೀತವಾದುದನ್ನೇ ಮಾಡುತ್ತಾರೆ; ಹಾಗೆ ಮಾಡಿ ಜನಸೇವೆಯಾಯಿತೆಂದು ಬಗೆಯುತ್ತಾರೆ.

ಈ ಜನ – ಸಾಮಾನ್ಯಜನತೆಯನ್ನು ತಮ್ಮ ವಶದಲ್ಲಿರಿಸಿಕೊಂಡಿರುವ ಈ ಜನ ಯಾವುದಕ್ಕೆ ತುಂಬ ಬೆದರುತ್ತಾರೆ ಎಂದು ಸ್ಥೂಲವಾಗಿ ನೋಡಿದರೂ – ಜನತೆಯನ್ನು ದಿಟವಾಗಿ ಸಂಚಾಲಿಸುವುದು ಯಾವುದು, ಜನತೆ ಈಗಿರುವ ನೆಲೆಯಲ್ಲೇ ಇರುವಂತೆ ಅದುಮಿಡುವುದು ಯಾವುದು ಎಂಬುದನ್ನು ತಿಳಿದಿದ್ದು ತಮ್ಮೆಲ್ಲ ಬಲವನ್ನೂ ಈ ಸಾಮರ್ಥ್ಯಮೂಲದ ಕಡೆ ಹರಿಸುತ್ತಾರೆ ಎಂದು ಯಾರಾದರೂ ಅಂದುಕೊಳ್ಳಬಹುದು. ಆದರೆ ಅವರು ಹೀಗೇನು ಮಾಡುವುದಿಲ್ಲ; ಮೇಲಾಗಿ, ಇಂಥ ಕ್ರಿಯೆ ವ್ಯರ್ಥವೆಂದು ಅವರ ಎಣಿಕೆ.

ಈ ಜನ ವಸ್ತುಸ್ಥಿತಿಯನ್ನು ಕಾಣಲಿಚ್ಛಿಸುವುದಿಲ್ಲ ಎನ್ನಬಹುದು. ತುಂಬ ಶ್ರಮ ವಹಿಸಿ, ಆಸ್ಥೆಯಿಂದ ಜನರಿಗೆ ಹಲವಾರು ಬಗೆಯ ಎಲ್ಲ ಕೆಲಸಗಳನ್ನೂ ಮಾಡು ತ್ತಾರೆ, ಆದರೆ ಯಾವುದು ಮುಖ್ಯವಾಗಿ ಉಪಯುಕ್ತವೋ ಅದನ್ನು ಮಾತ್ರ ಮಾಡುವು ದಿಲ್ಲ. ಅವರ ಕೆಲಸ ಹೇಗೆಂದರೆ ಒಬ್ಬ ಮನುಷ್ಯ ಹೊಗೆ ಬಂಡಿಯನ್ನು ಓಡಿಸಲು ತನ್ನೆಲ್ಲ ಬಲವನ್ನೂ ಉಪಯೋಗಿಸುವಂತೆ; ಅವನು ಮಾಡಬೇಕಾದುದು ಇಷ್ಟೆ – ಹೊಗೆ ಬಂಡಿಯ ಚಾಲಕನು ಯಾವಾಗಲೂ ಏನನ್ನು ಮಾಡುತ್ತಾನೋ ಅದನ್ನು ನೋಡಿ ಕೊಂಡಿದ್ದು ಇಂಜಿನ್ನೊಳ ಹೊಕ್ಕು ಅದನ್ನು ಮಾಡುವುದು – ಆವಿಯು ಕೊಳವಿಯೊಳಗೆ ಹೋಗುವಂತೆ ಒಂದು ಲಿವರನ್ನು ಅಲ್ಲಾಡಿಸುವುದು. ಆವಿಯೆನ್ನುವುದು ಮನುಷ್ಯರ ಬದುಕಿನ ಆಧ್ಯಾತ್ಮಿಕ ಕಲ್ಪನೆ. ಅಧಿಕಾರದಲ್ಲಿರುವವರು ಎಷ್ಟು ಕಾತರತೆಯಿಂದ ಈ ಚಾಲಕ ಶಕ್ತಿಯ ಮೇಲೆ ತಮ್ಮ ಹಿಡಿತವನ್ನು ಉಳಿಸಿಕೊಳ್ಳಲು ಯತ್ನಿಸುತ್ತಾರೆ (ಏಕೆಂದರೆ ಇದರಿಂದಲೇ ಒಡೆಯರು ಜನತೆಯನ್ನು ಆಳುವುದು) ಎಂಬುವನ್ನು ಪ್ರಗತಿಪರರಾದ ಜನ ನೋಡಬೇಕು; ಜನರನ್ನು ದಾಸ್ಯದಿಂದ ಬಿಡಿಸಲು ಯಾವ ರೀತಿ ಯಲ್ಲಿ ಶ್ರಮಪಡಬೇಕು ಎಂಬುದನ್ನು ಅರ್ಥಮಾಡಿಕೊಳ್ಳಬೇಕು.

ತರ್ಕಿಯ ಸುಲ್ತಾನನು ಕಾಪಾಡುವುದು ಏನನ್ನು? ನೆರವಿಗೆಂದು ಅವನು ಯಾವುದಕ್ಕೆ ಅಂಟಿಕೊಳ್ಳುತ್ತಾನೆ? ರಷ್ಯದೇಶದ ಚಕ್ರವರ್ತಿ ಯಾವುದಾದರೂ ಪಟ್ಟಣಕ್ಕೆ ಬಂದೊಡನೆ ಮೊಟ್ಟಮೊದಲು ಯಾವುದಾದರೊಂದು ವಿಗ್ರಹಕ್ಕೆ ಅಥವಾ ಅವಶೇಷಕ್ಕೆ ಪ್ರಣಾಮ ಸಲ್ಲಿಸುವುದೇತಕ್ಕೆ? ಜರ್ಮನಿಯ ಕೈಸರ್ – ಇಷ್ಟೊಂದು ಹೆಮ್ಮೆಪಡುವ ಸಂಸ್ಕೃತಿಯ ಬಣ್ಣಗಳನ್ನು ಬಳಿದುಕೊಂಡಿದ್ದರೂ – ತನ್ನ ಭಾಷಣಗಳಲ್ಲೆಲ್ಲ, ಸಂದರ್ಭವಿರಲಿ ಇಲ್ಲದಿರಲಿ, ದೇವರು, ಕ್ರಿಸ್ತ, ಧರ್ಮದ ಪಾವಿತ್ರ್ಯ, ವ್ರತ ಮೊದಲಾದುವುಗಳ ವಿಚಾರ ಪ್ರಸ್ತಾಪಮಾಡುವುದೇತಕ್ಕೆ? ಕಾರಣ ಇಷ್ಟೆ: ತಮ್ಮ ಬಲವೆಲ್ಲ ಸೈನ್ಯವನ್ನವಲಂಬಿಸಿದೆಯೆಂದೂ, ಸೈನ್ಯವು (ಸೈನ್ಯವೆಂಬುದು ಇರುವ ಸಂಭವವೇ) ಧರ್ಮವನ್ನವಲಂಬಿಸಿದೆಯೆಂದೂ ಇವರೆಲ್ಲರಿಗೆ ತಿಳಿದಿದೆ. ಸಿರಿವಂತರು ಸಾಮಾನ್ಯವಾಗಿ ಶ್ರದ್ಧಾಳುಗಳು (ಶ್ರದ್ಧೆಯನ್ನು ಹಿಡಿದಿರುವ, ಚರ್ಚಿಗೆ ಹೋಗುವ ಭಾನುವಾರ ವ್ರತವನ್ನು ಆಚರಿಸುವ ನಾಟಕ ಆಡುತ್ತಾರೆ); ಏಕೆಂದರೆ ಆತ್ಮಸಂರಕ್ಷಣೆಯ ಪ್ರವೃತ್ತಿ ಅವರನ್ನು ಎಚ್ಚರಿಸುತ್ತದೆ: ಸಮಾಜದಲ್ಲಿ ತಮ್ಮ ಲಾಭದಾಯಕವಾದ ಸ್ಥಾನ ತಮ್ಮ ಧಾರ್ಮಿಕ ನೆಲೆಯೊಂದಿಗೆ ಸೇರಿಕೊಂಡಿದೆ ಎಂದು.

ಅವರ ಹಕ್ಕುಗಳು ಯಾವರೀತಿಯಲ್ಲಿ ಧಾರ್ಮಿಕ ಡಂಭಾಚಾರದ ಮೇಲೆ ನಿಂತಿವೆ ಎನ್ನುವುದು ಅನೇಕ ವೇಳೆ ಈ ಜನರಿಗೆ ತಿಳಿಯದು. ಆದರೆ ಆತ್ಮಸಂರಕ್ಷಣೆಯ ಪ್ರವೃತ್ತಿ ಅವರ ಶಕ್ತಿ ಯಾವ ದುರ್ಬಲ ಸ್ಥಾನದ ಮೇಲೆ ನಿಂತಿದೆಯೋ ಅದನ್ನು ತಿಳಿಯಪಡಿಸುತ್ತದೆ, ಎಚ್ಚರಿಕೆ ನೀಡುತ್ತದೆ. ಸರಿ, ಆ ಸ್ಥಾನವನ್ನು ಮೊಟ್ಟಮೊದಲೇ ರಕ್ಷಿಸಿಕೊಳ್ಳಲು ತೊಡಗುತ್ತಾರೆ. ಕೆಲವು ನಿರ್ದಿಷ್ಟ ಮಿತಿಗಳೊಳಗೆ ಈ ಜನ ಸಮಾಜವಾದಕ್ಕೆ ಕ್ರಾಂತಿಯ ಪ್ರಚಾರಕ್ಕೆ ಅವಕಾಶ ನೀಡುತ್ತಾರೆ. ಆದರೆ ಧರ್ಮದ ಮೂಲಾಧಾರವನ್ನು ಮಾತ್ರ ಮುಟ್ಟಗೊಡಿಸುವುದಿಲ್ಲ.

ಆದುದರಿಂದ ಈಗಿನ ಪ್ರಗತಿಪರರಾದ ಜನ – ವಿದ್ವಾಂಸರು, ಲಿಬರಲ್‌ಗಳು, ಸಮಾಜವಾದಿಗಳು, ಕ್ರಾಂತಿಕಾರರು, ಅರಾಜಕರು – ಜನರನ್ನು ಚಾಲಿಸುವ ಶಕ್ತಿ ಯಾವುದು ಎಂಬುದನ್ನು ಅರಿಯಲು ಇತಿಹಾಸವೂ ಮನಃಶಾಸ್ತ್ರವೂ ಸಾಕಾಗುವುದಿಲ್ಲ. ಎಂದಮೇಲೆ, ಮೂಲಚಾಲಕಶಕ್ತಿ ಭೌತಿಕಪರಿಸ್ಥಿತಿಗಳಲ್ಲಿಲ್ಲ, ಧರ್ಮದಲ್ಲಿಯೇ ಇರುವುದು ಎಂದು ಸಿದ್ಧವಾಗುತ್ತದೆ.

ಆದರೂ, ಹಲವಾರು ರಾಷ್ಟ್ರಗಳ ಜೀವನಸ್ಥಿತಿಗತಿಗಳನ್ನು ಕುರಿತು ಚೆನ್ನಾಗಿ ತಿಳಿದಿರುವ ಮತ್ತು ಗಾಢವಾಗಿ ಚರ್ಚಿಸುವ ಈ ಬುದ್ಧಿವಂತರಾದ, ಪ್ರಗತಿಪರರಾದ ಜನ ಕಣ್ಣಿಗೆ ಬಡಿಯುವಂತೆ ಸ್ಪಷ್ಟವಾದುದನ್ನು ಮಾತ್ರ ತಿಳಿಯರು ಎನ್ನುವುದು ಆಶ್ಚರ್ಯ. ಈ ಜನ ಬೇಕೆಂದೇ ಅಲ್ಪಸಂಖ್ಯಾತರಲ್ಲಿ ತಮ್ಮ ಸ್ಥಾನ ಲಾಭದಾಯಕವಾಗುವುದೆಂಬ ಕಾರಣದಿಂದ ಜನರು ತಮ್ಮ ಧಾರ್ಮಿಕ ಮೌಢ್ಯದಲ್ಲಿರಲಿ, ಎನ್ನುವುದಾದರೆ ಅದು

ಘೋರವಾದ, ಅಸಹ್ಯವಾದ ದ್ರೋಹ. ಹೀಗೆ ಮಾಡುವ ಜನರನ್ನೇ ಕ್ರಿಸ್ತನು ಹಳಿದಿದ್ದು – ಅವನು ಹಳಿದುದು ಈ ಜನರನ್ನು ಮಾತ್ರ: ಹಳಿದುದು ಏಕೆಂದರೆ ಇವರು ಜನರ ನಡುವೆ ತರುವಷ್ಟು ಪಾಪವನ್ನು ಯಾವ ದೈತ್ಯರೂ ದುಷ್ಕರ್ಮಿಗಳೂ ತರಲಾರರು.

ಆದರೆ ಅವರು ಸತ್ಯವಂತರಾಗಿದ್ದರೆ. ಹೀಗೆ ಆಶ್ಚರ್ಯಕರವಾದ ರೀತಿಯಲ್ಲಿ ವಿಚಾರದ ಗ್ರಹಣವಾಗುವುದಕ್ಕೆ ಒಂದೇ ವಿವರಣೆ: ಜನತೆಯು ಅಸತ್ಯವಾದ ಧರ್ಮದಿಂದ ಸಂಮೋಹಿತವಾಗಿರುವಂತೆಯೇ ಈಗಿನ ಕಾಲದ ಪ್ರಜ್ಞಸ್ನ ವಿದ್ಯಾವಂತರು ಅಸತ್ಯವಾದ ವಿಜ್ಞಾನದಿಂದ ಸಂಮೋಹಿತರಾಗಿದ್ದಾರೆ. ಮಾನವಕೋಟಿಯನ್ನು ಮೊದಲಿನಂತೆ ಈಗಲೂ ನಡೆಯಿಸುತ್ತಿರುವ ಜೀವನಾಡಿ ಈಗ ತೀರ ನಿಷ್ಪ್ರಯೋಜಕವಾಗಿದೆಯೆಂದೂ ಅದರ ಬದಲು ಇನ್ನೇನನ್ನಾದರೂ ಏರ್ಪಡಿಸಬೇಕೆಂದೂ ಈ ಅಸತ್ಯ ವಿಜ್ಞಾನ ನಿರ್ಧರಿಸಿದೆ.

## 13

ಈ ಪುರೋಹಿತರ –'ಎಂದರೆ ನಮ್ಮ ಕಾಲದ ವಿದ್ಯಾವಂತರ – ಮೋಹ ಅಥವಾ ಮೋಸ ನಮ್ಮ ಯುಗದ ವಿಶೇಷ ಲಕ್ಷಣ; ಈಗ ಕ್ರೈಸ್ತಸಮಾಜ ವಾಸಿಸುತ್ತಿರುವ ಶೋಚನೀಯ ಸ್ಥಿತಿಗೆ ಮತ್ತು ಅದು ಆಳ ಆಳವಾಗಿ ಇಳಿಯುತ್ತಿರುವ ಪಶುಭಾವಕ್ಕೆ ಇದೇ ಕಾರಣ.

ಜನಸಾಮಾನ್ಯರು ನಂಬಿರುವ ಅಸತ್ಯ ಧಾರ್ಮಿಕ ನಂಬಿಕೆಗಳು ಅಷ್ಟೇನು ಮುಖ್ಯವಾದುವಲ್ಲ; ಹ್ಯೂಂ, ವೋಲ್ಟೈರ್, ರೂಸೋ ಮೊದಲಾದವರು ಮಾಡಿದಂತೆ ಅವುಗಳ ವಿರುದ್ಧ ನೇರವಾಗಿ ಹೋರಾಡುವುದು ಅನಗತ್ಯ, ಅಪ್ರಯೋಜಕ – ಹೀಗೆಂದು ನಮ್ಮ ಯುಗದ ಸುಸಂಸ್ಕೃತ ವಿದ್ಯಾವಂತರು ಹೇಳುವುದು ವಾಡಿಕೆಯಾಗಿದೆ. ಅವರ ಆಲೋಚನೆಯಂತೆ ವಿಜ್ಞಾನ—ಎಂದರೆ ಜನಗಳಲ್ಲಿ ಅವರು ಹರಡುವ ಅಸಂಬದ್ಧ, ಪ್ರಾಸಂಗಿಕ ವಿವರಗಳು—ತಾನಾಗಿ ಆ ಗುರಿಯನ್ನು ಮುಟ್ಟುತ್ತದೆ: ಭೂಮಿಯಿಂದ ಸೂರ್ಯನಿಗೆ ಎಷ್ಟು ಮಿಲಿಯನ್ ಮೈಲಿಗಳು ಮತ್ತು ಸೂರ್ಯನಲ್ಲಿ ನಕ್ಷತ್ರಗಳಲ್ಲಿ ಯಾವ ಯಾವ ಲೋಹಗಳಿವೆ ಎಂಬುದನ್ನೆಲ್ಲ ಅರಿತುಕೊಂಡ ಮನುಷ್ಯ ಕ್ರೈಸ್ತ ತತ್ತ್ವಗಳಲ್ಲಿ ನಂಬುವುದನ್ನು ಬಿಡುತ್ತಾನೆ.

ಈ ನೈಜವಾದ ಅಥವಾ ಬೂಟಾಟಿಕೆಯ ನಿರೂಪಣೆ ಅಥವಾ ನಂಬಿಕೆ ಮಹಾಮೋಹವನ್ನು ಅಥವಾ ಘೋರವಾದ ಮೋಸವನ್ನು ಮುಸುಕಿರುತ್ತದೆ. ಬಾಲ್ಯದ ಮೊದಲ ದಿನಗಳಿಂದ ಎಂದರೆ ಸೂಚನೆಗೆ ಸುಲಭವಾಗಿ ಒಗ್ಗುವ ವಯಸ್ಸಿನಿಂದ (ಮಕ್ಕಳ ತರಪೇತಿ ಮಾಡುವವರು ಮಕ್ಕಳಿಗೆ ಈ ವಯಸ್ಸಿನಲ್ಲಿ ಏನನ್ನು ಸೂಚಿಸುತ್ತೇವೆ ಎಂಬು

ದರ ಬಗ್ಗೆ ತುಂಬ ಎಚ್ಚರದಿಂದಿರಬೇಕು) ಮಗುವನ್ನು ಈ ಅಸಂಬದ್ಧ, ಅನೈತಿಕ, ಕ್ರೈಸ್ತ
ನೆಂದು ಕರೆದುಕೊಳ್ಳುವ ಧರ್ಮದಿಂದ ಸಂಮೋಹನಗೊಳಿಸುತ್ತಾರೆ: ನಮ್ಮ ತರ್ಕಕ್ಕಾಗಲೀ,
ಜ್ಞಾನಕ್ಕಾಗಲೀ ಈ ಧರ್ಮವನ್ನು ಹೊಂದಿಸುವುದು ಕಷ್ಟ. ಮಗುವಿಗೆ ಆರೋಗ್ಯವಂತ
ನಾದ ಯಾವ ಮನುಷ್ಯನೂ ಒಪ್ಪಲಾರದ ತ್ರಿತತ್ತ್ವಗಳ ಸಿದ್ಧಾಂತವನ್ನು ಹೇಳಿಕೊಡು
ತ್ತಾರೆ; ಮಾನವಕೋಟಿಯನ್ನು ಉದ್ಧಾರಮಾಡಲು ಮೂವರು ದೇವತೆಗಳಲ್ಲಿ ಒಬ್ಬ
ಭೂಮಿಗೆ ಇಳಿದುಬರುವನೆಂದೂ, ಅವನ ಪುನರುತ್ಥಾನವನ್ನೂ ಅವನ ಸ್ವರ್ಗಾರೋಹಣ
ವನ್ನೂ ಹೇಳಿಕೊಡುತ್ತಾರೆ. ಅವನು ಎರಡನೆಯ ಬಾರಿ ಬರುವುದನ್ನು ನಿರೀಕ್ಷೆಮಾಡ
ಬೇಕೆಂದೂ ಈ ಸಿದ್ಧಾಂತಗಳನ್ನು ನಂಬದಿದ್ದರೆ ಅನಂತವಾದ ಯಾತನೆಗಳು ಒದಗುವು
ವೆಂದೂ ಹೇಳಿಕೊಡುತ್ತಾರೆ. ತನಗೆ ಬೇಕಾದುದಕ್ಕಾಗಿ ಪ್ರಾರ್ಥನೆಮಾಡುವುದನ್ನು ಕಲಿಸು
ತ್ತಾರೆ. ಹೀಗೆ ಹಲವಾರು ವಿವರಗಳನ್ನು ಮಗು ಕಲಿಯುತ್ತದೆ. (ಯುಕ್ತಿಗೆ ಸಮ
ಸಾಮಯಿಕ ಜ್ಞಾನಕ್ಕೆ ಮತ್ತು ಆತ್ಮಸಾಕ್ಷಿಗೆ ಒಗ್ಗದ) ಈ ವಿವರಗಳೆಲ್ಲವೂ ಮಗುವಿನ
ಮನಸ್ಸಿನಮೇಲೆ ದೃಢವಾಗಿ ಮುದ್ರೆಯೊತ್ತಿದಮೇಲೆ, ಹೀಗೆ 'ಸತ್ಯ'ಗಳೆಂದು ಒಪ್ಪಿ
ಕೊಂಡ ಅರಗಿಸಿಕೊಂಡ ಸಿದ್ಧಾಂತಗಳಿಂದ ಹೊರಹೊಮ್ಮುವ ಈ ವಿರೋಧಾಭಾಸ
ಗಳ ನಡುವೆ ಅವನು ತನ್ನ ದಾರಿಯನ್ನು ತಾನೇ ಕಂಡುಹಿಡಿದುಕೊಳ್ಳಬೇಕಾಗುತ್ತದೆ. ಈ
ವಿರೋಧಾಭಾಸಗಳನ್ನು ಹೊಂದಿಸುವುದು ಹೇಗೆ ಎಂದು ಅವನಿಗೆ ಯಾರೂ ಹೇಳಿ
ಕೊಡುವುದಿಲ್ಲ; ಪುರಾಣಕಾರರು ಅವನ್ನು ಹೊಂದಿಸಲೆತ್ನಿಸಿದರಂತೂ ವಿಷಯದಲ್ಲಿ
ಮೊದಲಿಗಿಂತ ಇನ್ನಷ್ಟು ಹೆಚ್ಚು ಗೊಂದಲ ಸಿದ್ಧವಾಗುತ್ತದೆ. ಹೀಗೆ ಕ್ರಮಕ್ರಮವಾಗಿ
ಮನುಷ್ಯನಿಗೆ ಯುಕ್ತಿಯನ್ನು ನಂಬಬಾರದು ಎಂದು ಅನಿಸುತ್ತದೆ (ಪುರಾಣಕಾರರು ಈ
ನಿಲುವನ್ನು ಸಮರ್ಥಿಸುತ್ತಾರೆ) ; ಆದುದರಿಂದ ಏನಾದರೂ ಸಂಭವನೀಯವೇ. ಒಳ್ಳೆಯ
ದನ್ನು ಕೆಟ್ಟದ್ದರಿಂದ, ಅಸತ್ಯವನ್ನು ಸತ್ಯದಿಂದ ಬೇರ್ಪಡಿಸಬಲ್ಲ ಯಾವ ಸಾಮರ್ಥ್ಯವೂ
ಮನುಷ್ಯನಿಗಿಲ್ಲವೆಂದು ತೋರುತ್ತದೆ; ತನಗೆ ಅತಿ ಮುಖ್ಯವಾದ ಕೆಲಸಗಳಲ್ಲಿ ಯುಕ್ತಿ
ಯನ್ನು ಅವಲಂಬಿಸುವುದಕ್ಕಿಂತ ಬೇರೆಯವರು ಹೇಳಿದುದನ್ನು ಅವಲಂಬಿಸಿದರೆ ಒಳಿತು
ಎನಿಸುತ್ತದೆ. ಇಂಥ ವಿದ್ಯಾಭ್ಯಾಸವು ಮನುಷ್ಯನ ಆಧ್ಯಾತ್ಮಿಕ ಪ್ರಪಂಚದ ಎಂಥ
ಘೋರ ವಿಕಾರ ಎನ್ನುವುದು ಸ್ಪಷ್ಟವಾಗುತ್ತದೆ. ಮಗು ಬೆಳೆದನಂತರ ಸಂಮೋಹನದ
ಸಂವಿಧಾನಗಳು ಅವನ ಮೇಲೆ ಕೆಲಸಮಾಡಿ ಈ ವಿಕಾರವನ್ನು ಇನ್ನಷ್ಟು ಬೇರೂರಿಸುತ್ತದೆ.
ಪುರೋಹಿತರ ನೆರವಿನಿಂದ ಈ ಸಂಮೋಹನ ಸತತವಾಗಿ ಜನರ ಮೇಲೆ ಪ್ರಭಾವ
ಬೀರುತ್ತದೆ.

ಚಿಕ್ಕಂದಿನಿಂದಲೂ ಅದರಲ್ಲಿಯೇ ಬೆಳೆದು, ಪ್ರೌಢವಯಸ್ಸಿನಲ್ಲಿ ಅದನ್ನು ಹಿಡಿದು,
ತನ್ನ ಮನಸ್ಸಿನ ವಿಕಾರವೇ ಆದ, ತನ್ನ ಯುಕ್ತಿಯನ್ನು ನಂಬಬಾರದೆಂದು ಮನವೊಲಿಸಿದ
ಈ ಸಂಮೋಹನದಿಂದ ಯಾವನಾದರೂ ಬಲವಾದ ಚೈತನ್ಯವಿರುವ ಮನುಷ್ಯ
ಬಹುವಾದ ಶ್ರಮದಿಂದ, ಕಷ್ಟದಿಂದ ಯಶಸ್ವಿಯಾಗಿ ಪಾರಾದನೆನ್ನಿ; ಆಗಲೂ ಅವಶೇಷ

ಗಳನ್ನು ಬಿಡದೆ ಇದು ಹೋಗುವುದಿಲ್ಲ. ಭೌತಿಕ ಪ್ರಪಂಚದಲ್ಲಿ ಯಾವುದಾದರೂ ಪ್ರಾಣಿಗೆ ಪ್ರಬಲವಾದ ವಿಷವುಣಿಸಿದರೆ ಅದು ಜಾಡನ್ನು ಬಿಡದೆ ಹೋಗುತ್ತದೆಯೆ? ಈ ಮೋಸದ ಸಂಮೋಹನದಿಂದ ತನ್ನನ್ನು ತಾನು ಬಿಡಿಸಿಕೊಂಡು, ತಾನು ಹೊಸದಾಗಿ ಹೊರಬಂದ ಅಸತ್ಯವನ್ನು ದ್ವೇಷಿಸುತ್ತಿರುವ ಮನುಷ್ಯನು ಮಾನವಕೋಟಿಯ ಪ್ರಗತಿ ಪಥದಲ್ಲಿ ಎಲ್ಲ ಧರ್ಮಗಳೂ ಅಡ್ಡಿಗಳೇ ಎಂದು ಬಗೆದರೆ ಸಹಜವೇ. ಈ ಅಭಿಪ್ರಾಯ ವನ್ನು ತಳೆದು ಈ ಮನುಷ್ಯನು–ತನ್ನ ಗುರುಗಳಂತೆ–ತಾನೂ ತತ್ತ್ವಶೂನ್ಯನಾಗುತ್ತಾನೆ. ಎಂದರೆ ಆತ್ಮಸಾಕ್ಷಿಯಿಲ್ಲದೆ. ಬದುಕಿನಲ್ಲಿ ಬಯಕೆಗಳಿಂದಲೆ ಮಾರ್ಗದರ್ಶನ ಮಾಡಿಸಿ ಕೊಳ್ಳುತ್ತಾನೆ. ಇದಕ್ಕಾಗಿ ತನ್ನನ್ನು ತಾನು ಎಂದೂ ನಿಂದಿಸಿಕೊಳ್ಳುವುದಿಲ್ಲ: ಮನುಷ್ಯನು ಮುಟ್ಟಬಹುದಾದ ಅತ್ಯುಚ್ಚ ನೆಲೆಯಲ್ಲಿ ತಾನಿದ್ದೇನೆ ಎಂದು ಸಮಾಧಾನ ಪಟ್ಟು ಕೊಳ್ಳುತ್ತಾನೆ.

ಪ್ರಬಲವಾದ ಮನಸ್ಸಿರುವ ಮಂದಿಗೆ ಇದು ಒದಗಬಹುದು. ಅಷ್ಟು ಪ್ರಬಲರಲ್ಲ ದವರು, ಶಂಕೆಗಳಿಂದ ಆತುರರಾದರೂ, ತಾವು ಹುಟ್ಟಿ ಬೆಳೆದ ಮೋಸದಿಂದ ಎಂದೂ ಬಿಡುಗಡೆಯನ್ನು ಪಡೆಯಲಾರರು. ತಾವು ಒಪ್ಪಿಕೊಂಡ ಸಿದ್ಧಾಂತಗಳನ್ನು ಸಮರ್ಥಿ ಸಲು ಹಲವಾರು ಕುಯುಕ್ತಿಯ, ಅಸ್ಪಷ್ಟ ವಾದಗಳನ್ನು ಹಿಡಿದು ಅಥವಾ ಸೃಷ್ಟಿಮಾಡಿ, ಶಂಕೆಗಳ ಮಂಜಿನ, ವಿತಂಡವಾದಗಳ, ಆತ್ಮವಂಚನೆಯ ಪರಿಸರದಲ್ಲೇ ವಾಸಿಸುತ್ತ, ಇವರು ಜನತೆಯನ್ನು ದಿಗ್ಭ್ರಮೆಪಡಿಸುವುದು, ಅವರ ಜ್ಞಾನೋದಯಕ್ಕೆ ವಿರೋಧಿಸು ವುದು ಇವುಗಳೊಂದಿಗೆ ಸಹಕರಿಸುತ್ತಾರೆ.

ಆದರೆ ಬಹುಮಂದಿ ಮನುಷ್ಯರು ತಮ್ಮ ಮೇಲೆ ಬಳಸಲಾದ ಸಂಮೋಹನ ದೊಂದಿಗೆ ಸೆಣಸುವ ಬಲವಾಗಲೀ ಅವಕಾಶವಾಗಲೀ ಇಲ್ಲದೆ ಈಗಿರುವಂತೆಯೇ – ಬದುಕಿನ ದಿಟವಾದ ಧಾರ್ಮಿಕ ಅರಿವಾದ ಮಾನವನಿಃಶ್ರೇಯಸವಿಲ್ಲದೆ – ತಲೆಮಾರುಗಳಲ್ಲಿ ಬದುಕುತ್ತಾರೆ, ಸಾಯುತ್ತಾರೆ; ತಮ್ಮನ್ನು ಆಳುವ, ತಮ್ಮನ್ನು ವಂಚಿಸುವ ವರ್ಗಗಳಿಗೆ ವಿನಮ್ರ ಸಾಧನಗಳಾಗಿ ಉಳಿಯುತ್ತಾರೆ.

ಈ ಘೋರ ವಂಚನೆಯನ್ನೇ ಮುಂದರಿದ, ವಿದ್ಯಾವಂತರಾದ ಮಂದಿ ಅಮುಖ್ಯ ವೆಂದೂ, ನೇರವಾಗಿ ಎದುರಿಸಲು ಅನರ್ಹವೆಂದೂ ಪರಿಗಣಿಸುವುದು. ಈ ನಿಶ್ಚಯ ವನ್ನು ನಿರೂಪಿಸುವವರು ಸತ್ಯವಂತರಾದರೆ ಅಸತ್ಯವಾದ ವಿಜ್ಞಾನದ ಸಂಮೋಹನದಲ್ಲಿ ಅವರೇ ಬಿದ್ದಿದ್ದಾರೆನ್ನುವುದೇ ವಿವರಣೆ. ಅವರು ಸತ್ಯವಂತರಲ್ಲದಿದ್ದರೆ ಅದನ್ನು ಹೀಗೆ ವಿವರಿಸಬೇಕು – ಸ್ಥಿರವಾಗಿ ಬೇರೂರಿದ ನಂಬಿಕೆಗಳ ವಿರುದ್ಧ ಹೋರಾಡುವುದು ಅಪ್ರಯೋಜಕ, ಕೆಲವುವೇಳೆ ಅಪಾಯಕಾರಿ. ವಿವರಣೆ ಏನಾದರೂ, ಅಸತ್ಯವಾದ ಧರ್ಮವನ್ನು ಹಿಡಿಯುವುದರಿಂದ ತೊಂದರೆಯಿಲ್ಲ, ತೊಂದರೆಯಿದ್ದರೂ ಮುಖ್ಯವಲ್ಲ – ಎನ್ನುವುದೂ, ಆದುದರಿಂದ ಧಾರ್ಮಿಕ ವಂಚನೆಗಳನ್ನು ನಾಶಪಡಿಸದೆ ಜ್ಞಾನವನ್ನು ಹರಡುವುದು ಸಾಧ್ಯ ಎನ್ನುವುದೂ ದಿಟವಲ್ಲ.

ಮಾನವಕೋಟಿಯು ತನ್ನ ಕಷ್ಟಗಳಿಂದ ಪಾರಾಗುವುದು ಹೀಗೆ ಮಾತ್ರ ಸಾಧ್ಯ – ಪುರೋಹಿತರು ಹಿಡಿದಿರುವ ಸಂಮೋಹನದಿಂದ ಬಿಡುಗಡೆ ಹೊಂದುವುದು ಮತ್ತು ವಿದ್ಯಾವಂತರು ಯಾವ ಕಡೆ ನಡೆಸುತ್ತಿದ್ದಾರೋ ಅವರಿಂದ ಬಿಡುಗಡೆ ಹೊಂದುವುದು. ಪೂರ್ತಿ ಸೀಸೆಗೆ ಏನನ್ನಾದರೂ ಸುರಿಯಬೇಕೆಂದರೆ ಮೊದಲು ಅದರಲ್ಲಿರುವುದನ್ನು ಖಾಲಿ ಮಾಡಬೇಕು. ಹಾಗೆಯೇ. ಅಸತ್ಯವಾದ ಶ್ರದ್ಧೆಯ ವಂಚನೆಯಿಂದ ಜನರನ್ನು ಮೊದಲು ಮುಕ್ತರನ್ನಾಗಿ ಮಾಡಬೇಕು: ಅನಂತರ ಅವರು ದಿಟವಾದ ಎಂದರೆ ಸರಿಯಾದ (ಮಾನವ ಕೋಟಿಯ ವಿಕಾಸಕ್ಕನುಗುಣವಾದ)–ಧರ್ಮವನ್ನು ಹಿಡಿದು ಎಲ್ಲದರ ಮೂಲದ ಕಡೆ–ಎಂದರೆ ದೇವರ ಕಡೆ ಒಲಿಯುವರು: ಈ ಸಂಬಂಧದಿಂದ ತಮ್ಮ ಕೆಲಸಗಳಿಗೆ ಮಾರ್ಗದರ್ಶನವನ್ನು ಪಡೆದುಕೊಳ್ಳುತ್ತಾರೆ.

## 14

'ಆದರೆ ಸತ್ಯವಾದ ಧರ್ಮವೊಂದು ಇದೆಯೇ? ಧರ್ಮಗಳಲ್ಲಿ ಅನಂತ ವೈವಿಧ್ಯವಿದೆ. ಅವುಗಳಲ್ಲಿ ಒಂದನ್ನು. ನಮ್ಮ ರುಚಿಗೆ ಹೆಚ್ಚು ಸರಿಯೆನ್ನುವ ಕಾರಣದಿಂದ, ಸತ್ಯವಾದುದೆಂದು ಕರೆಯುವುದು ನ್ಯಾಯವೆ?'—ಧರ್ಮದ ಹೊರಗಣ ರೂಪಗಳನ್ನು ಯಾವುದೋ ರೋಗದಂತೆ ಕಾಣುವವರು ಹೀಗೆ ಕೇಳುತ್ತಾರೆ: ಆ ರೋಗದಿಂದ ತಾವು ನರಳುತಿಲ್ಲವೆಂದೂ ಇತರರು ಇನ್ನೂ ನರಳುತ್ತಿದ್ದಾರೆಂದೂ ಅವರ ಎಣಿಕೆ. ಆದರೆ ಇದು ಸರಿಯಲ್ಲ. ಧರ್ಮಗಳು ಹೊರಗಣ ರೂಪದಲ್ಲಿ ಬೇರೆಬೇರೆಯೇ ಆದರೂ ಮೂಲಭೂತವಾದ ತತ್ತ್ವಗಳಲ್ಲಿ ಎಲ್ಲ ಒಂದೇ. ಈ ಮೂಲಭೂತವಾದ ತತ್ತ್ವಗಳೇ ನಿಜವಾದ ಧರ್ಮ: ಅದೇ ಎಲ್ಲ ಮನುಷ್ಯರಿಗೂ ಸಹಜವಾದುದು: ಅದನ್ನು ಅಂಗೀಕರಿಸಿದರೇ ಮನುಷ್ಯರು ಅವರ ಸಂಕಟಗಳಿಂದ ಪಾರಾಗುವುದು.

ಮಾನವಕೋಟಿ ಬಹುಕಾಲ ಬದುಕಿದೆ. ತಲೆಮಾರುಗಳಲ್ಲಿ ಪ್ರಾಯೋಗಿಕವಾದ ಪರಿಕರಗಳನ್ನು ಉತ್ತಮಗೊಳಿಸಿರುವಂತೆಯೇ. ಅವರ ಜೀವನಕ್ಕೆ ತಳಹದಿಯಾದ ಆಧ್ಯಾತ್ಮಿಕ ತತ್ತ್ವಗಳನ್ನೂ ಈ ತತ್ತ್ವಗಳಿಂದ ಹೊರ ಬಂದ ಆಚಾರ ನಿಯಮಗಳನ್ನೂ ಉತ್ಪಾದನೆಮಾಡಿ ಉತ್ತಮಗೊಳಿಸದೆ ಇಲ್ಲ. ಕುರುಡರು ಇವನ್ನು ಕಾಣುವುದಿಲ್ಲವೆಂದ ಮಾತ್ರಕ್ಕೆ ಇವು ಇಲ್ಲವೇ ಇಲ್ಲ ಎಂದಾಗುವುದಿಲ್ಲ.

ಎಲ್ಲ ಮನುಷ್ಯರಿಗೂ ಸಮಾನವಾದ, ನಮ್ಮ ಕಾಲದ ಈ ಧರ್ಮ ಇರುವುದು ತಂತಮ್ಮ ವೈಶಿಷ್ಟ್ಯಗಳನ್ನೂ ವಿಕಾರಗಳನ್ನೂ ಅಳವಡಿಸಿಕೊಂಡ ಯಾವುದೋ ಮತದಂತೆ ಅಲ್ಲ: ನಮಗೆ ತಿಳಿದಿರುವ, ಪ್ರಪಂಚದ ಜನರಲ್ಲಿ ಹತ್ತರಲ್ಲಿ ಒಂಬತ್ತು ಪಾಲು ಅನುಸರಿಸುವ ವಿಶಾಲ ವ್ಯಾಪ್ತ ಧರ್ಮಗಳಲ್ಲೆಲ್ಲ ಒಂದೇ ಬಗೆಯಾಗಿರುವ ತತ್ತ್ವಗಳಿಂದ ಕೂಡಿದ ಧರ್ಮದಂತೆ. ಮನುಷ್ಯರು ಇನ್ನೂ ಸಂಪೂರ್ಣವಾಗಿ ಪಶುಗಳಾಗಿರದಿದ್ದರೆ ಅದಕ್ಕೆ ಕಾರಣ ಎಲ್ಲ ರಾಷ್ಟ್ರಗಳ ಉತ್ತಮ ಜನರು ಇದೇ ಧರ್ಮವನ್ನು ಅರಿವಿಲ್ಲದಿದ್ದರೂ

ಹಿಡಿದು ಅನುಸರಿಸುತ್ತಿರುವುದು. ಮನುಷ್ಯರು ಅರಿವಿನಿಂದ ಈ ಧರ್ಮವನ್ನು ಅನುಸರಿಸಲು ಇರುವ ಅಡ್ಡಿಯೆಂದರೆ ಪುರೋಹಿತರು ಮತ್ತು ವಿಜ್ಞಾನಿಗಳ ನೆರವಿನಿಂದ ಮನುಷ್ಯರ ಮೇಲೆ ಸಂಮೋಹಕವಾದ ವಂಚನೆ ನಡೆಯುತ್ತಿರುವುದೇ.

ಈ ನಿಜವಾದ ಧರ್ಮದ ತತ್ತ್ವಗಳು ಜನರಿಗೆ ಎಷ್ಟು ಸಹಜವಾಗಿದೆಯೆಂದರೆ ಅವನ್ನು ಅವರ ಮುಂದೆ ಇರಿಸಿದೊಡನೆಯೇ ತಮಗೆ ಚೆನ್ನಾಗಿ ಪರಿಚಿತವಾಗಿದ್ದಂತೆ, ಸ್ವಯಂ ಸಿದ್ಧವಾದುವಂತೆ ಜನ ಅವನ್ನು ಒಪ್ಪಿಕೊಳ್ಳುವರು. ನಮ್ಮ ಪಾಲಿಗೆ ನಿಜವಾದ ಧರ್ಮವೆಂದರೆ ಕ್ರೈಸ್ತಧರ್ಮವು ಯಾವ ತತ್ತ್ವಗಳಲ್ಲಿ ಬ್ರಾಹ್ಮಣಧರ್ಮ, ಕಂಫೂಷಿಯನ್ ಧರ್ಮ, ತಾವೋಧರ್ಮ, ಹಿಬ್ರೂಧರ್ಮ, ಬೌದ್ಧಧರ್ಮ, ಕಡೆಗೆ ಮಹಮದೀಯ ಧರ್ಮ- ಇವುಗಳ ಮೂಲತತ್ತ್ವಗಳಲ್ಲಿ – ಬಾಹ್ಯ ಆಚಾರಗಳಲ್ಲಲ್ಲ – ಹೊಂದಿಕೊಳ್ಳುವುದೋ ಅಷ್ಟು ಮಾತ್ರ. ಇದೇ ರೀತಿ ಬ್ರಾಹ್ಮಣಧರ್ಮ, ಕಂಫೂಷಿಯನ್ ಧರ್ಮ ಮೊದಲಾದುವುಗಳನ್ನನುಸರಿಸುವವರ ಪಾಲಿಗೆ – ನಿಜವಾದ ಧರ್ಮವೆಂದರೆ ಬೇರೆ ಎಲ್ಲ ಧರ್ಮಗಳೊಂದಿಗೆ ಹೊಂದಿಕೊಳ್ಳುವ ಮೂಲಭೂತ ತತ್ತ್ವಗಳು. ಈ ತತ್ತ್ವಗಳು ತುಂಬ ಸರಳವಾಗಿರುತ್ತವೆ, ಅರ್ಥವಾಗುವಂತೆ, ಸ್ಪಷ್ಟವಾಗಿರುತ್ತವೆ.

ಈ ತತ್ತ್ವಗಳು ಇವು: ಎಲ್ಲ ವಸ್ತುಗಳಿಗೂ ಉಗಮವಾದ ದೇವರೊಬ್ಬನಿದ್ದಾನೆ; ಆ ದೈವ ಉಗಮದ ಕಿಡಿಯೊಂದು ಮನುಷ್ಯನಲ್ಲಿದ್ದುಕೊಂಡು, ಮನುಷ್ಯ ತನ್ನ ಬದುಕಿನ ಬಗೆಯಿಂದ ಅದನ್ನು ಹೆಚ್ಚಿಸಿಕೊಳ್ಳಬಹುದು, ಕಡಮೆಮಾಡಿಕೊಳ್ಳಬಹುದು: ಇದನ್ನು ಹೆಚ್ಚಿಸಿಕೊಳ್ಳಬೇಕಾದರೆ ಮನುಷ್ಯ ತನ್ನ ಕಾಮನೆಗಳನ್ನು ನಿಗ್ರಹಿಸಿ, ತನ್ನಲ್ಲಿನ ಪ್ರೀತಿಯನ್ನು ಹೆಚ್ಚಿಸಿಕೊಳ್ಳಬೇಕು: ಇದನ್ನು ಸಾಧಿಸುವ ಪ್ರಾಯೋಗಿಕವಾದ ಸಂವಿಧಾನ ಇತರರು ನಿಮಗೆ ಏನನ್ನು ಮಾಡಬೇಕೆಂದು ನಿರೀಕ್ಷಿಸುವರೋ ಅದನ್ನು ನೀವು ಇತರರಿಗೆ ಮಾಡುವುದು. ಈ ತತ್ತ್ವಗಳೆಲ್ಲ ಬ್ರಾಹ್ಮಣ ಧರ್ಮ, ಹಿಬ್ರೂಧರ್ಮ, ಕಂಫೂಷಿಯನ್ ಧರ್ಮ, ಮಹಮದೀಯ ಧರ್ಮ ಇವುಗಳಿಗೆ ಸಮನಾದುವು. (ಬೌದ್ಧಧರ್ಮವು ದೇವರ ನಿರೂಪಣೆಯನ್ನು ಒದಗಿಸುವುದಿಲ್ಲವಾದರೂ ಮನುಷ್ಯ ಯಾವುದರೊಂದಿಗೆ ಬೆರೆಯುತ್ತಾನೋ ನಿರ್ಯಾಣ ಮುಟ್ಟಿದಾಗ ಯಾವುದರಲ್ಲಿ ಮರೆಯಾಗುತ್ತಾನೋ ಅದನ್ನು ಒಪ್ಪಿಕೊಳ್ಳುತ್ತದೆ. ಮನುಷ್ಯ ಬೆರೆಯುವ, ನಿರ್ಯಾಣದಲ್ಲಿ ಮರೆಯಾಗುವ ಈ ಉಗಮ ಹಿಬ್ರೂಧರ್ಮ ಕ್ರೈಸ್ತಧರ್ಮ, ಮಹಮ್ಮದೀಯಧರ್ಮಗಳಲ್ಲಿ ದೇವರೆನ್ನುವುದೇ).

'ಆದರೆ ಅದು ಧರ್ಮವಲ್ಲ' ಎನ್ನುತ್ತಾರೆ ಈ ಕಾಲದ ಜನ: ಧರ್ಮದ ಮುಖ್ಯ ಲಕ್ಷಣವೆಂದರೆ ಅತಿಪ್ರಾಕೃತವಾದುದು, ಎಂದರೆ ಅರ್ಥವಿಲ್ಲದುದು, ಎಂದೇ ಅವರ ಎಣಿಕೆ. ಅವರು ಎನ್ನುತ್ತಾರೆ: 'ಅದನ್ನು ತತ್ತ್ವಶಾಸ್ತ್ರ, ನೀತಿಶಾಸ್ತ್ರ, ತರ್ಕ ಎಂದು ಏನಾದರೂ ಕರೆಯಿರಿ. ಧರ್ಮವಂತೂ ಅಲ್ಲ', ಎಂದು. ಅವರ ಪ್ರಕಾರ ಧರ್ಮ ಅಸಂಬದ್ಧವಾಗಿರಬೇಕು, ತಟ್ಟನೆ ತಿಳಿಯುವಂತಿರಬಾರದು. ಆದರೆ, ಪ್ರತಿಯೊಂದು

ಧರ್ಮದ ಮೂಲಭೂತವಾದ ಲಕ್ಷಣವೆಂದು ಏನನ್ನು ಹೇಳುವರೋ ಆ ಅಸಂಬದ್ಧ ಪವಾಡಗಳು, ಅತಿಪ್ರಾಕೃತ ಪ್ರಸಂಗಗಳು ಎಲ್ಲವೂ ಈ ತತ್ತ್ವಗಳಿಂದಲೇ – ಅಥವಾ ಈ ತತ್ತ್ವಗಳನ್ನು ಧಾರ್ಮಿಕ ಸಿದ್ಧಾಂತಗಳೆಂದು ಬೋಧಿಸಿದುದರಿಂದಲೇ – ದೀರ್ಘ ಕಾಲದ ವಿಕಾರದಿಂದಾಗಿ ವಿಸ್ತೃತವಾದುವು. ಅತಿಪ್ರಾಕೃತ ಮತ್ತು ವಿಚಾರಹೀನವಾದುವೇ ಧರ್ಮದ ಮುಖ್ಯ ಲಕ್ಷಣವೆನ್ನುವುದು. ಕೊಳೆತ ಸೇಬಿನ ಹಣ್ಣುಗಳಷ್ಟನ್ನೇ ನೋಡಿ ಕಹಿ ಮತ್ತು ಹೊಟ್ಟೆಗೆ ತೊಂದರೆಮಾಡುವುದೇ ಸೇಬು ಎನಿಸಿಕೊಳ್ಳುವ ಹಣ್ಣಿನ ಮುಖ್ಯ ಲಕ್ಷಣ ಎನ್ನುವ ಹಾಗೆ.

ಎಲ್ಲ ವಸ್ತುಗಳ ಉಗಮದೊಂದಿಗೆ ಮನುಷ್ಯನ ಸಂಬಂಧವನ್ನೂ, ಆ ಸಂಬಂಧದಿಂದ ಸಿದ್ಧವಾಗುವ ಮಾನವ ಜೀವಿತೋದ್ದೇಶವನ್ನೂ ನಿರೂಪಿಸುವುದೇ ಧರ್ಮ. ಈ ಉದ್ದೇಶದಿಂದ ಹೊರಹೊಮ್ಮಿದ ಆಚಾರ ಸಂಹಿತೆಯನ್ನೂ ಧರ್ಮ ಒದಗಿಸುತ್ತದೆ. ಎಲ್ಲ ಮತಗಳಲ್ಲಿಯೂ ಮೊದಲ ತತ್ತ್ವಗಳು ಒಂದೇ ಆಗಿರುವ ವಿಶ್ವಧರ್ಮವು ಧರ್ಮದ ತಿಳುವಳಿಕೆಯ ಅಗತ್ಯಗಳನ್ನು ಪೂರ್ಣವಾಗಿ ತೀರಿಸುತ್ತದೆ. ಅಂಶವು ಪೂರ್ಣದೊಂದಿಗೆ ಪಡೆದಿರುವ ಸಂಬಂಧವೇ ಮನುಷ್ಯನು ದೇವರೊಂದಿಗೆ ಪಡೆದಿರುವ ಸಂಬಂಧ ಎಂದು ಇದು ನಿರ್ದೇಶಿಸುತ್ತದೆ: ಈ ಸಂಬಂಧದಿಂದ, ತನ್ನಲ್ಲಿರುವ ದೈವೀ ಅಂಶವನ್ನು ಹೆಚ್ಚಿಸುವುದೇ ಮನುಷ್ಯನ ಉದ್ದೇಶ, ಎಂಬುದನ್ನು ಅನುಮಾನಿಸುತ್ತದೆ: ಈ ಉದ್ದೇಶದಲ್ಲಿ ಅಡಗಿರುವ ಪ್ರಾಯೋಗಿಕ ಅಗತ್ಯ 'ಇತರರು ನಿನಗೆ ಏನು ಮಾಡಬೇಕೆಂದು ಆಶಿಸುವೆಯೋ ನೀನು ಅವರಿಗೆ ಅದನ್ನು ಮಾಡು' ಎನ್ನುವ ನಿಯಮಕ್ಕೆ ಹೊಂದಿಕೊಳ್ಳುತ್ತದೆ.

ಜನರಿಗೆ ಸಾಮಾನ್ಯವಾಗಿ ಸಂಶಯ ಬರುತ್ತದೆ. ನನಗೇ ಒಮ್ಮೆ ಸಂಶಯ ಬಂದಿತ್ತು: 'ಇತರರು ನಿನಗೆ ಏನು ಮಾಡಬೇಕೆಂದು ಆಶಿಸುವೆಯೋ ನೀನು ಅವರಿಗೆ ಅದನ್ನು ಮಾಡು' ಎನ್ನುವ ಕಲ್ಪನಾತ್ಮಕವಾದ ನಿಯಮವು 'ಉಪವಾಸವಿರು, ಪ್ರಾರ್ಥನೆ ಮಾಡು, ತೀರ್ಥ ತೆಗೆದುಕೋ, ಎಂದು ಮೊದಲಾದ ಸರಳ ನಿಯಮಗಳಂತೆ ವಿಧಿಗಳಾಗಬಲ್ಲುವೇ? ಕೆಲಸಕ್ಕೆ ಮಾರ್ಗದರ್ಶನ ಮಾಡಬಲ್ಲುವೇ? ಎಂದು. ಈ ಸಂಶಯಕ್ಕೆ ಸಮಾಧಾನ, ನಿದರ್ಶನಕ್ಕೆ, ಒಬ್ಬ ರಷ್ಯನ್ ರೈತನ ಆಧ್ಯಾತ್ಮಿಕ ಸ್ಥಿತಿಯನ್ನು ಗಮನಿಸಿದರೆ ಒದಗುತ್ತದೆ. ಅವನು ಬಾಯಲ್ಲಿರುವ ತೀರ್ಥವನ್ನು ಗೊಬ್ಬರದ ರಾಶಿಯಲ್ಲಿ ಉಗುಳುವುದಿಲ್ಲ: ಅದಕ್ಕೆ ಬದಲು ಸಾಯಲೂ ಸಿದ್ಧನಾಗಿರುತ್ತಾನೆ; ಆದರೆ ಮನುಷ್ಯರ ಆಣತಿಯಂತೆ ತನ್ನ ಸೋದರರನ್ನು ಕೊಲ್ಲಲೂ ಸಿದ್ಧನಾಗಿರುತ್ತಾನೆ.

ಇತರರು ನಿನಗೆ ಏನು ಮಾಡಬೇಕೆಂದು ಬಯಸುವೆಯೋ ನೀನು ಅದನ್ನು ಅವರಿಗೆ ಮಾಡು ಎನ್ನುವ ನಿಯಮದಿಂದ ಹೊರಹೊಮ್ಮುವ ಅಗತ್ಯಗಳನ್ನು– ಸೋದರ ಮನುಷ್ಯನನ್ನು ಕೊಲ್ಲದಿರುವುದು, ಬಯ್ಯದಿರುವುದು, ವ್ಯಭಿಚಾರ ಮಾಡದಿರು

ವುದು, ಸೇಡುತೀರಿಸಿಕೊಳ್ಳದಿರುವುದು. ತನ್ನ ಕಾಮನೆಯನ್ನು ತೀರಿಸಿಕೊಳ್ಳಲು ತನ್ನ ಸೋದರರ ದೀನ ಸ್ಥಿತಿಯನ್ನು ಬಳಸಿಕೊಳ್ಳದಿರುವುದು ಇತ್ಯಾದಿ ಇತ್ಯಾದಿ – ಇಂಥ ಅಗತ್ಯಗಳನ್ನು ಮನುಷ್ಯರಲ್ಲಿ ದೃಢವಾಗಿ ಮೂಡಿಸುವುದಿಲ್ಲವೇಕೆ? ನಂಬಿಕೆಯ ಮೇಲೆ, ಸ್ಪಷ್ಟವಾದ ಯಾವ ಆಂತರಿಕ ಅರಿವಿನ ಮೇಲಲ್ಲದೆ, ಶ್ರದ್ಧೆಯನ್ನು ಮೂಡಿಸಿಕೊಂಡ ಈಗಿನ ಜನಕ್ಕೆ ತೀರ್ಥದ ಪಾವಿತ್ರ್ಯ. ಮೂರ್ತಿಯ ಪಾವಿತ್ರ್ಯ ಮೊದಲಾದುವು ಹೇಗೆ ವಿಧಿಗಳೋ, ಅನುಲ್ಲಂಘನೀಯಗಳೋ ಹಾಗೆಯೇ ಇವನ್ನೂ ಮೂಡಿಸುವುದಿಲ್ಲವೇಕೆ?

## 15

ನಮ್ಮ ಕಾಲದ ಎಲ್ಲ ಜನರಿಗೂ ಸಮನಾದ ಧಾರ್ಮಿಕ ಸತ್ಯಗಳು ಎಷ್ಟು ಸರಳ, ಸ್ಪಷ್ಟ, ಪ್ರತಿಯೊಬ್ಬನ ಹೃದಯಕ್ಕೆ ಹತ್ತಿರ ಆಗಿವೆಯೆಂದರೆ ತಂದೆತಾಯಿಯರು. ಅರಸರು. ಉಪಾಧ್ಯಾಯರು ಮಕ್ಕಳಿಗೂ ದೊಡ್ಡವರಿಗೂ—(ತಾವೇ ನಂಬದಂಥ) ತ್ರಿತತ್ತ್ವ. ಕನ್ಯಾಮಾತೆಯರು. ಪಾಪಪರಿಹಾರ. ಆಕಾಶಕ್ಕೆ ಹಾರಿಹೋಗುವ ಇಂದ್ರರು. ತ್ರಿಮೂರ್ತಿಗಳು. ಬುದ್ಧರು. ಮಹಮ್ಮದರು ಇಂಥ ಓಬೀರಾಯನ ಕಾಲದ ಅಸಂಬದ್ಧ ಸಿದ್ಧಾಂತಗಳ ಬದಲು—ದೇವರ ಚೈತನ್ಯ ಮನುಷ್ಯನಲ್ಲಿದೆ ಎನ್ನುವಂಥ ಸರಳ. ಸ್ಪಷ್ಟ ಸತ್ಯವನ್ನೂ. ಅದರ ಪ್ರಾಯೋಗಿಕ ನಿಯಮವಾದ 'ಮನುಷ್ಯನು ತಾನು ಇತರರಿಂದ ಏನನ್ನು ನಿರೀಕ್ಷಿಸುತ್ತಾನೋ ತಾನು ಇತರರಿಗೆ ಅದನ್ನು ಮಾಡಬೇಕು' ಎನ್ನುವುದನ್ನೂ ತಿಳಿಯಪಡಿಸಿದರೆ ಮಾನವಕೋಟಿಯ ಇಡೀ ಜೀವನವೇ ಬದಲಾದೀತು. 'ಆದಾಮನ ಪಾಪಕ್ಕೆ ಪ್ರಾಯಶ್ಚಿತ್ತಮಾಡಿಸಿ ಮೇಲೆತ್ತಲು ದೇವರು ತನ್ನ ಮಗನನ್ನು ಕಳುಹಿಸಿದ', 'ಅವನೇ ಚರ್ಚನ್ನು ಸ್ಥಾಪಿಸಿದ; ಎಲ್ಲರೂ ಅದನ್ನು ತಲೆಬಾಗಿ ಒಪ್ಪಿಕೊಳ್ಳಬೇಕು' ಎಂಬ ತತ್ತ್ವಗಳನ್ನೂ ಈ ನಂಬಿಕೆಗಳಿಂದ ಹೊರಹೊಮ್ಮುವ ನಿಯಮಗಳನ್ನೂ ಯಾವಾಗ ಎಲ್ಲಿ ಪ್ರಾರ್ಥನೆ ಮಾಡಬೇಕು. ಬಲಿ ಕೊಡಬೇಕು. ಯಾವ ಯಾವ ಆಹಾರವನ್ನು ಯಾವಾಗ ಸೇವಿಸಬಾರದು. ಯಾವ ದಿನ ಕೆಲಸದಿಂದ ವಿರತರಾಗಿರಬೇಕು. ಎಂಬ ವಿಧಿಗಳನ್ನೂ, ಈಗ ಮಕ್ಕಳಲ್ಲಿ ಮೂಡಿಸುತ್ತಿರುವಂತೆಯೇ ಹಿರಿಯರಲ್ಲಿ ಬೇರೂರಿಸುತ್ತಿರುವಂತೆಯೇ ಈಗ ನಿಷ್ಪ್ರಯೋಜಕವಾದ. ಅಸಂಭಾವ್ಯವಾದ ಕಥೆಗಳನ್ನು ಹೇಳಿ ಅವುಗಳಿಂದ ಅರ್ಥವಿಲ್ಲದ ಆಚಾರಗಳನ್ನೂ ವಿಧಿಗಳನ್ನೂ ಸಿದ್ಧಪಡಿಸುತ್ತಿರುವಂತೆಯೇ ಅವರಲ್ಲಿ 'ದೇವರ ಚೈತನ್ಯದ. ಆವಿಷ್ಕಾರ ಮನುಷ್ಯನಲ್ಲಿದೆ, ಇದರ ಬಲವನ್ನು ನಮ್ಮ ಬದುಕಿನಿಂದ ಹೆಚ್ಚಿಸಿಕೊಳ್ಳಬಹುದು' ಈ ತತ್ತ್ವವನ್ನೂ ಅದರಿಂದ ಸ್ವಾಭಾವಿಕವಾಗಿ ಸಿದ್ಧವಾಗುವ ವಿವರಗಳನ್ನೂ ಮೂಡಿಸಿದರೆ. ಆಗ ಈ ಅರ್ಥವಿಲ್ಲದ ಹಗರಣ. ವಿರಸಗಳಿಗೆ ಬದಲು (ರಾಯಭಾರಿಗಳು. ಅಂತರಾಷ್ಟ್ರೀಯ ನ್ಯಾಯ. ಶಾಂತಿಸಮ್ಮೇಳನಗಳು. ರಾಜಕೀಯಾರ್ಥಿಕಶಾಸ್ತ್ರಜ್ಞರು. ಹಲವು ಬಗೆಯ ಸಮಾಜಶಾಸ್ತ್ರಜ್ಞರು ಇವರ ನೆರವಿಲ್ಲದೆಯೇ) ಮಾನವಕೋಟಿ ಒಂದೇ ಧರ್ಮದ ಮಾರ್ಗದರ್ಶನದಲ್ಲಿ ಶಾಂತವಾಗಿ, ಐಕಮತ್ಯದಿಂದ. ಸುಖವಾಗಿ ಜೀವಿಸುವ ಕಾಲ ದೂರ ಇರುವುದಿಲ್ಲ.

ಆದರೆ ಇಂಥದೇನನ್ನೂ ಈಗ ಮಾಡುತ್ತಿಲ್ಲ. ಅಸತ್ಯ ಧರ್ಮದ ವಂಚನೆಯನ್ನು ನಾಶಮಾಡಿಲ್ಲ ಮಾತ್ರವಲ್ಲ, ಸತ್ಯಧರ್ಮವನ್ನು ಬೋಧಿಸುತ್ತಿಲ್ಲ ಮಾತ್ರವಲ್ಲ. ಅದಕ್ಕೆ ವಿರುದ್ಧವಾಗಿ ಸತ್ಯವನ್ನು ಒಪ್ಪಿಕೊಳ್ಳುವ ಸಂಭವದಿಂದ ಜನ ದೂರ ದೂರ ಸರಿಯುತ್ತಿದ್ದಾರೆ.

ಯಾವುದು ಹೀಗೆ ಸಾಧ್ಯವೋ ಸಹಜವೋ ಅಗತ್ಯವೋ ಅದನ್ನು ಜನ ಮಾಡದೇ ಇರುವುದರ ಮುಖ್ಯಕಾರಣ ಏನೆಂದರೆ. ಈ ಕಾಲದವರು ಧರ್ಮವಿಲ್ಲದೆ ಇಷ್ಟುಕಾಲ ಬದುಕಿದರಾಗಿ ತಮ್ಮ ಇರವನ್ನು ಕಾಪಾಡಿಕೊಳ್ಳಲು ಹಿಂಸೆ. ಮದ್ದು. ಗುಂಡು. ಸೆರೆಮನೆ. ವಧ್ಯಸ್ಥಾನಗಳ ಬಳಕೆಯಾಗಿ ಹೋಗಿದೆ ಅವರಿಗೆ: ಅದೇ ಜೀವನ ವ್ಯವಸ್ಥೆಯೇ ಸಹಜ. ಅದೊಂದೇ ಸಾಧ್ಯ ಎಂದು ಬಗೆದಿದ್ದಾರೆ. ಇರುವ ವ್ಯವಸ್ಥೆಯಿಂದ ಲಾಭ ಪಡೆಯುತ್ತಿರುವವರು ಮಾತ್ರ ಹಾಗೆ ಭಾವಿಸುತ್ತಾರೆಂದಲ್ಲ. ಅದರಿಂದ ತೊಂದರೆ ಪಡುತ್ತಿರುವವರೂ ತಮ್ಮ ಮೇಲೆ ಬೀರಲಾದ ಸಂಮೋಹನದಿಂದ ಎಷ್ಟು ಜಡರಾಗಿದ್ದಾರೆಂದರೆ ಮಾನವ ಸಮಾಜದಲ್ಲಿ ಒಳ್ಳೆಯ ವ್ಯವಸ್ಥೆಗೆ ಹಿಂಸೆ ಒಂದೇ ಮಾರ್ಗ ಎಂದು ಅವರೂ ನಂಬುತ್ತಾರೆ. ಜನ ತಮ್ಮ ಬವಣೆಯ ಕಾರಣಗಳೇನು ಎಂದು ಅರಿತುಕೊಳ್ಳುವುದಕ್ಕೂ. ಸರಿಯಾದ ವ್ಯವಸ್ಥೆಯನ್ನು ಏರ್ಪಡಿಸುವುದಕ್ಕೂ ಅಡ್ಡಿಯಾಗಿರುವುದು ಎಲ್ಲರ ಹಿತ ಹಿಂಸೆಯಿಂದ ಎನ್ನುವ ವ್ಯವಸ್ಥೆ. ಅದರ ರಕ್ಷಣೆ.

ಅದರ ಫಲವೇನು? ದುಷ್ಟನಾದ ಅಥವಾ ಸೇಡುಳ್ಳ ವೈದ್ಯ ಅಪಾಯಕಾರಿಯಾದ ಗಾಯದೊಡೆತವನ್ನು ಒಳಗೇ ತಳ್ಳಿ. ಅದರಿಂದ ರೋಗಿಯನ್ನು ವಂಚಿಸಿ ರೋಗ ಉಲ್ಬಣವಾಗುವಂತೆ. ಗುಣ ಅಸಾಧ್ಯವಾಗುವಂತೆ ಮಾಡಿದರೆ ಹೇಗೋ ಹಾಗೆ.

ಜನತೆಯನ್ನು ದಾಸ್ಯದಲ್ಲಿಟ್ಟು. 'ನಾವಾದ ಮೇಲೆ ಪ್ರಳಯ' ಎಂದು ಭಾವಿಸುವ. ಹೇಳುವ ಆಡಳಿತವರ್ಗದ ಜನರಿಗೆ, ದಾಸ್ಯದಲ್ಲಿರುವ ಜನರನ್ನು. ಸೈನ್ಯದಿಂದ. ಪುರೋಹಿತ ವರ್ಗದಿಂದ. ಸೈನಿಕರಿಂದ, ಪೋಲೀಸರಿಂದ. ಮದ್ದುಗುಂಡು – ಸೆರೆಮನೆ – ದುಡಿಮೆ ಮನೆ–ವಧ್ಯಸ್ಥಾನಗಳ ಬೆದರಿಕೆಯಿಂದ ಮೌಢ್ಯದಲ್ಲಿ ದಾಸ್ಯದಲ್ಲಿ ಇರುವಂತೆ ಮಾಡುವುದು ಅವರನ್ನು ಆಳರಸರು ಉಪಯೋಗಿಸಿಕೊಳ್ಳಲು ಅಡ್ಡಿಮಾಡದಂತೆ ತಡೆಯುವುದು ಅನುಕೂಲವೇ. ಆಳುವ ಜನ ಇದನ್ನು ಒಳ್ಳೆಯ ವ್ಯವಸ್ಥೆಯೆಂದು ಕರೆದು ಇದನ್ನೇ ಮಾಡುತ್ತಾರೆ: ಆದರೆ ಒಳ್ಳೆಯ ಸಾಮಾಜಿಕ ವ್ಯವಸ್ಥೆಗೆ ಇದು ಅಡ್ಡಿಮಾಡುವಂತೆ ಬೇರೇನೂ ಮಾಡದು. ದಿಟವಾಗಿ. ಒಳ್ಳೆಯ ವ್ಯವಸ್ಥೆಯನ್ನು ಏರ್ಪಡಿಸುವ ಬದಲು ಪಾಪದ ಏರ್ಪಾಡೇ ಇದು.

ಎಲ್ಲ ವಿರೋಧವಿದ್ದರೂ ಎಲ್ಲರಲ್ಲಿಯೂ ಇನ್ನೂ ಇರುವ ಧಾರ್ಮಿಕ ತತ್ತ್ವಗಳ ಅವಶೇಷಗಳನ್ನು ಇನ್ನೂ ಉಳಿದಿರುವ ಕ್ರೈಸ್ತರಾಷ್ಟ್ರೀಯರ ಮುಂದೆ ಇರುವ ನಿರಂತರ

ನಿದರ್ಶನಗಳು ಜನರಲ್ಲಿ ವ್ಯವಸ್ಥೆಯನ್ನೂ ನೀತಿಯನ್ನೂ ಕಾಪಾಡುವ ಪೋಣೆಯನ್ನು ಹೊತ್ತ ಜನ ನಡೆಸುತ್ತಿರುವ ಪಾಪಕೃತ್ಯಗಳು – ಯುದ್ಧ, ವಧೆ, ಸೆರೆಮನೆ, ತೆರಿಗೆ, ಮಾದಕ ವಸ್ತುಗಳ ಮಾರಾಟ, ಅಫೀಮು ಮಾರಾಟ – ಈ ನಿದರ್ಶನಗಳಿರದಿದ್ದರೆ ಜನ ಈಗ ಮಾಡುತ್ತಿರುವ ಮೋಸ, ಹಿಂಸೆ, ಕೊಲೆ ಮೊದಲಾದ ಪಾಪಕೃತ್ಯಗಳಲ್ಲಿ ನೂರಕ್ಕೆ ಒಂದು ಪಾಲೂ ಮಾಡುತ್ತಿರಲಿಲ್ಲ. ಈಗ ಅವರು ಇಂಥ ಕೆಲಸಗಳು ಒಳ್ಳೆಯವು, ಮನುಷ್ಯರು ಸಹಜವಾಗಿಯೇ ಮಾಡುವಂಥವು ಎನ್ನುವ ಸಮಾಧಾನದಿಂದ ಮಾಡ್ತಾ ತ್ತಿದ್ದಾರೆ.

ಮನುಷ್ಯಜೀವನವನ್ನು, ವ್ಯಕ್ತಿಗಾಗಲೀ ಮನುಷ್ಯ ಸಮಾಜಕ್ಕಾಗಲೀ, ಉತ್ತಮ ಗೊಳಿಸುವ ಒಂದೇ ಒಂದು ವಿಧಾನವೆಂದರೆ ಪರಿಪೂರ್ಣತೆಯೆಡೆ ಆಂತರಿಕವಾದ, ನೈತಿಕ ಬೆಳವಣಿಗೆ; ಇದು ಜೀವನದ ನಿಯಮ. ಹೊರಗಣ ಕ್ರಿಯೆಗಳಿಂದ – ಎಂದರೆ ಹಿಂಸೆಯಿಂದ – ತಮ್ಮ ಬಾಳನ್ನು ಉತ್ತಮಗೊಳಿಸಿಕೊಳ್ಳಬೇಕೆಂಬ ಮನುಷ್ಯರ ಪ್ರಯತ್ನ ವೆಲ್ಲ ಯಶಸ್ವಿಯಾದ ಪ್ರಚಾರವಾಗುತ್ತದೆ ಅಷ್ಟೆ, ಪಾಪಕೃತದ ನಿದರ್ಶನ ಅಷ್ಟೆ. ಆದುದರಿಂದ ಅವು ಜೀವನವನ್ನು ಉತ್ತಮಗೊಳಿಸಲಾರವು; ಅಷ್ಟೇ ಅಲ್ಲ, ಪಾಪವನ್ನು ಹೆಚ್ಚಿಸುತ್ತವೆ. ಮಂಜಿನ ಚೆಂಡಿನಂತೆ ದೊಡ್ಡದಾಗುತ್ತ ದೊಡ್ಡದಾಗುತ್ತ ಜನರಿಗ ತಮ್ಮ ಜೀವನವನ್ನು ಉತ್ತಮಗೊಳಿಸಿಕೊಳ್ಳಲು ಇರುವ ಒಂದೇ ಒಂದು ಮಾರ್ಗದಿಂದ ಅವರನ್ನು ಹೆಚ್ಚು ಹೆಚ್ಚು ದೂರ ಒಯ್ಯುತ್ತದೆ.

ವ್ಯವಸ್ಥೆ, ನೀತಿ ಇವುಗಳ ಪಾಲಕರು ನ್ಯಾಯದ ಹೆಸರಿನಲ್ಲಿ ಮಾಡುತ್ತಿರುವ ಹಿಂಸೆ ಮತ್ತು ಅಪರಾಧ ಹೆಚ್ಚಾದಂತೆಲ್ಲ, ಕ್ರೂರವಾದಂತೆಲ್ಲ, ಮತ್ತು ಧರ್ಮವೆಂದು ಎದುರಿಗೆ ಬಂದ ಅಸತ್ಯದ ಸಂಮೋಹನ ಇದನ್ನು ಹೆಚ್ಚು ಹೆಚ್ಚಾಗಿ ಸಮರ್ಥಿಸಿದಂತೆಲ್ಲ ಜನರಲ್ಲಿ 'ಜೀವನ ನಿಯಮವೆಂದರೆ ನೆರೆಯವರ ಬಗ್ಗೆ ಪ್ರೀತಿ, ಉಪಕಾರ ಅಲ್ಲ; ನೆರೆಯವರೊಂದಿಗೆ ಸೆಣಸಿ ಅವರನ್ನು ಕಬಳಿಸುವುದು' ಎನ್ನುವ ನಂಬಿಕೆ ಬೇರೂರು ತ್ತದೆ.

ಈ ಭಾವನೆಯಲ್ಲಿ ಅವರು ಹೆಚ್ಚು ಬೇರೂರಿದಂತೆಲ್ಲ (ಇದು ಅವರನ್ನು ಪಶುಗಳ ನೆಲೆಗೆ ಇಳಿಸುತ್ತದೆ), ಅವರು ಬಾಳುತ್ತಿರುವ ಮತ್ತು ಸಂಮೋಹಕ ಸಮಾಧಿಯಿಂದ ಎಚ್ಚರಿಸುವುದು ಕಷ್ಟವಾಗುತ್ತದೆ; ಎಲ್ಲ ಮಾನವರಿಗೂ ಸಮನಾದ ನಮ್ಮ ಕಾಲದ ಸತ್ಯಧರ್ಮವೇ ಅವರ ಜೀವನದ ಆಧಾರ ಎಂದು ಒಪ್ಪಿಸುವುದೂ ಕಷ್ಟವಾಗುತ್ತದೆ.

ವಿಷವೃತ್ತವೊಂದು ಏರ್ಪಟ್ಟಿದೆ – ಧರ್ಮದ ಅಭಾವದಿಂದಾಗಿ ಹಿಂಸೆಯ ಮೇಲೆ ನಿಂತ ಪಶುಜೀವನ ಸಾಧ್ಯವಾಗುತ್ತದೆ; ಹಿಂಸೆಯ ಮೇಲೆ ನಿಂತ ಪಶುಜೀವನದಿಂದಾಗಿ ಸಂಮೋಹನದಿಂದ ಮುಕ್ತಿಯೂ, ಸತ್ಯಧರ್ಮದ ಸ್ವೀಕಾರವೂ ಹೆಚ್ಚು ಹೆಚ್ಚು ಅಸಾಧ್ಯ ವಾಗುತ್ತದೆ. ಆದುದರಿಂದ ಜನ ನಮ್ಮ ಕಾಲದಲ್ಲಿ ಯಾವುದು ಸಹಜವೋ, ಸಾಧ್ಯವೋ,

ಅಗತ್ಯವೋ ಅದನ್ನು ಮಾಡುವುದಿಲ್ಲ; ವಂಚನೆಯನ್ನು ಧರ್ಮದ ಆಭಾಸವನ್ನು ನಾಶ ಗೊಳಿಸುವುದಿಲ್ಲ; ಸದ್ಧರ್ಮವನ್ನು ಅರಗಿಸಿಕೊಳ್ಳುವುದಿಲ್ಲ. ಉಪದೇಶಿಸುವುದಿಲ್ಲ.

## 16

ಈ ವಿಷವೃತ್ತದಿಂದ ಯಾವುದಾದರೂ ನಿರ್ಗಮನ ಸಾಧ್ಯವೇ? ಸಾಧ್ಯವಿದ್ದರೆ ಹೇಗೆ?

ಮೊಟ್ಟಮೊದಲಲ್ಲಿ ಹೀಗೆ ತೋರುತ್ತದೆ – ಜನಗಳ ಪ್ರಯೋಜನಕ್ಕಾಗಿಯೇ ಅವರ ಜೀವನದಲ್ಲಿ ಮಾರ್ಗದರ್ಶನ ಮಾಡುವ ಕರ್ತವ್ಯವನ್ನು ಹೊತ್ತಿರುವ ಸರ್ಕಾರಗಳು ನಮ್ಮನ್ನು ಈ ವೃತ್ತದಿಂದ ಹೊರಗೆ ಹಾಯಿಸಬೇಕು – ಎಂದು. ಹಿಂಸೆಯ ಮೇಲೆ ನಿಂತ ಜೀವನ ವ್ಯವಸ್ಥೆಯನ್ನು ಮಾರ್ಪಡಿಸಬೇಕು. ಈ ವ್ಯವಸ್ಥೆಗೆ ಬದಲಾಗಿ ಪರಸ್ಪರ ಸೇವೆ. ಪ್ರೀತಿಯ ಮೇಲೆ ನಿಂತ ವಿಚಾರಶೀಲ ವ್ಯವಸ್ಥೆಯನ್ನು ಏರ್ಪಡಿಸಬೇಕು. ಎಂದು ಪ್ರಯತ್ನಪಟ್ಟಿರುವವರೆಲ್ಲ ಇದನ್ನೇ ಹೇಳಿರುವುದು. ಕ್ರೈಸ್ತ ಸುಧಾರಕರೂ. ಐರೋಪ್ಯ ಕಮ್ಯೂನಿಸಂ ವಾದದ ಪ್ರವರ್ತಕರೂ. ಹೀಗೆಯೇ ಭಾವಿಸಿದ್ದರು. ಜನರ ಹಿತದೃಷ್ಟಿ ಯಿಂದ ಶಾಲೆಗಳಲ್ಲಿ ಮಕ್ಕಳಿಗೆ ಸರ್ಕಾರವು ಸೇನಾಶಾಸ್ತ್ರಗಳನ್ನೂ ಸೇನಾವ್ಯಾಯಾಮ ಗಳನ್ನೂ ಹೇಳಿಕೊಡಬಾರದೆಂದೂ. ಹಿರಿಯರ ಸೇವಾ ಸಾಧನೆಗಳನ್ನು ಪುರಸ್ಕರಿಸ ಬಾರದೆಂದೂ. ಕಿರಿಯರಿಗೂ ಹಿರಿಯರಿಗೂ ಮರ್ಯಾದೆ. ವಿಶ್ವಾಸಗಳ ನಿಯಮಗಳನ್ನು ಕಲಿಸಬೇಕೆಂದೂ ಪ್ರೇಮದ ಸಾಹಸಗಳಿಗೆ ಪುರಸ್ಕಾರವನ್ನೂ ಉತ್ತೇಜನವನ್ನೂ ಕೊಡ ಬೇಕೆಂದೂ ಹೇಳಿದ ಸುಪ್ರಸಿದ್ಧ ಚೀನೀ ಸುಧಾರಕ ಮೋ–ಟಿ ಹೀಗೆಯೇ ಭಾವಿಸಿದ್ದನು. ಹೀಗೆಯೇ ಹಲವಾರು ಧಾರ್ಮಿಕರಾದ ಧೈತ – ಸುಧಾರಕರು ಆಲೋಚಿಸಿದ್ದರು, ಆಲೋಚಿಸುತ್ತಿದ್ದಾರೆ. ಇವರಲ್ಲಿ ಸುತೇವ್ ನಿಂದ ಆರಂಭಿಸಿ. ಅಸತ್ಯ ಧರ್ಮವನ್ನು ಬಹಿ ಷ್ಕರಿಸಿ ನಿರ್ದುಷ್ಟವಾದ ಕ್ರೈಸ್ತಧರ್ಮವನ್ನೇ ಪ್ರಚುರಪಡಿಸಬೇಕೆಂದು ಚಕ್ರವರ್ತಿಗೆ ಮನವಿ ಯೊಂದನ್ನು ಐದುಬಾರಿ ಸಲ್ಲಿಸಿದ್ದ ಮುದುಕನವರೆಗೆ ಹಲವರನ್ನು ನಾನು ಬಲ್ಲೆ.

ಸರ್ಕಾರ ಇರುವುದು ಜನರ ಹಿತಕ್ಕಾಗಿ ಎನ್ನುವ ಕಾರಣದಿಂದ. ಹೀಗಿರುವಾಗ ಆ ಹಿತವನ್ನು ಸಾಧಿಸಲು. ಜನರಿಗೆ ಯಾವ ತೊಂದರೆಯನ್ನೂ ಮಾಡದೆ ತುಂಬ ಫಲ ಕಾರಿಯಾದ ಪ್ರತಿಕ್ರಿಯೆಯನ್ನೇ ಉಂಟುಮಾಡುವ ಒಂದೇ ಒಂದು ಸಾಧನವನ್ನು ಬಳಸಲು ಸರ್ಕಾರ ಅಪೇಕ್ಷಿಸಬೇಕೆಂದು ಜನ ಬಗೆದರೆ ಸಹಜವೇ. ಆದರೆ ಸರ್ಕಾರ ಇದನ್ನು ಮಾಡುವ ಹೊಣೆಯನ್ನೇನು ಹೊತ್ತುಕೊಂಡಿಲ್ಲ. ತದ್ವಿರುದ್ಧವಾಗಿ ಎಲ್ಲೆಲ್ಲಿಯೂ ಯಾವಾಗಲೂ ಈರ್ಷ್ಯೆಯಿಂದಲೋ ಎನ್ನುವಂತೆ ತಾತ್ಕಾಲಿಕವಾಗಿ ಬಳಕೆಯಲ್ಲಿರುವ ಅಸತ್ಯವಾದ. ನಿಷ್ಪ್ರಯೋಜಕವಾದ ಧರ್ಮವನ್ನೇ ಎತ್ತಿಹಿಡಿಯುತ್ತದೆ: ಜನರಿಗೆ ಸದ್ಧರ್ಮದ ಸೂತ್ರಗಳನ್ನು ತಿಳಿಯಹೇಳಲು ತೊಡಗುವವರನ್ನು ಎಲ್ಲ ವಿಧದಲ್ಲಿಯೂ ಹಿಂಸಿಸುತ್ತದೆ. ದಿಟವಾಗಿ. ಹೀಗಾಗದೆ ಇರುವುದು ಸಾಧ್ಯವಿಲ್ಲ. ಏಕೆಂದರೆ ಸರ್ಕಾರ

ಇರುವ ಧರ್ಮಗಳ ಅಸತ್ಯವನ್ನು ಬಯಲಿಗೆಳೆದು, ಸದ್ಧರ್ಮವನ್ನು ಪ್ರಚಾರಪಡಿಸಿ ತೆಂದರೆ. ಅದು ರೆಂಬೆಯ ಮೇಲೆ ಕೂತವನು ತಾನು ಕುಳಿತಿರುವ ರೆಂಬೆಯನ್ನೇ ಕಡಿಯಲೆತ್ನಿಸುವ ಹಾಗಾಗುತ್ತದೆ.

ಆದರೆ ಸರ್ಕಾರ ಈ ಕೆಲಸವನ್ನು ಮಾಡದಿದ್ದರೆ ಅಸತ್ಯ ಧರ್ಮದಿಂದ ತಮ್ಮನ್ನು ತಾವು ಬಿಡಿಸಿಕೊಂಡು. ತಮ್ಮ ವಿದ್ಯಾಭ್ಯಾಸಕ್ಕೆ. ಉಪಪತ್ತಿಗೆ ಯಾರ ಶ್ರಮ ಕಾರಣ ವಾಯಿತೋ ಆ ಸಾಮಾನ್ಯಜನರ ಸೇವೆಮಾಡುತ್ತೇವೆಂದು ಹೇಳಿಕೊಳ್ಳುವ ವಿದ್ಯಾವಂತ ಜನರಾದರೂ ಮಾಡುತ್ತಾರೆ ಎಂದು ನಿರೀಕ್ಷಿಸಬಹುದು. ಆದರೆ, ಸರ್ಕಾರದಂತೆಯೇ, ಈ ಜನರೂ ಏನನ್ನೂ ಮಾಡುವುದಿಲ್ಲ. ಏಕೆಂದರೆ, ಮೊದಲನೆಯದಾಗಿ ಸರ್ಕಾರವೇ ರಕ್ಷಿಸುತ್ತಿರುವ ಮೋಸವನ್ನು ಬಯಲಿಗೆಳೆದರೆ ಆಡಳಿತವರ್ಗದವರ ಮುನಿಸಿಗೆ ಪಕ್ಕಾಗಿ ಹಿಂಸೆಯನ್ನೂ ಅಪ್ರಿಯವನ್ನೂ ಅನುಭವಿಸಬೇಕಾದೀತೆಂಬ ಭಯ; ತಾನಾಗಿ ಮರೆ ಯಾಗುತ್ತದೆ ಈ ಮೋಸ ಎಂಬ ನಂಬಿಕೆ ಬೇರೆ. ಎರಡನೆಯದಾಗಿ, ಎಲ್ಲ ಧರ್ಮವೂ ನಿಷ್ಪ್ರಯೋಜಕವಾದ ತಪ್ಪು ಎನ್ನುವ ಭಾವನೆಯಿದ್ದು ತಾವು ಮಾಡಬೇಕಾದ ವಂಚನೆಯ ಬದಲಿಗೆ ಜನರಿಗೆ ಏನನ್ನು ಕೊಡಬೇಕು ಎನ್ನುವುದು ತಿಳಿಯದಿರುವುದು.

ವಿದ್ಯಾವಂತರಾದ, ಅಧಿಕಸಂಖ್ಯೆಯಲ್ಲಿರುವ ಜನ ಚರ್ಚ್ ಮತ್ತು ಸರ್ಕಾರದ ವಂಚನೆಯ ಸಂಮೋಹನದ ಪ್ರಭಾವದಲ್ಲಿದ್ದಾರೆ; ಆದುದರಿಂದ ತಮ್ಮಲ್ಲಿ ಬೇರೂರಿರುವ ಧರ್ಮದ ಆಭಾಸವೇ ನಿಜವಾದ ಧರ್ಮ ಎಂದು ನಂಬಿದ್ದಾರೆ; ಬೇರೊಂದು ಧರ್ಮ ಇರದು. ಇರಲಾರದು ಎಂದು ಅವರ ನಂಬಿಕೆ. ಈ ಜನತೆ ನಿರಂತರವಾದ. ಪ್ರಬಲವಾದ ಸಂಮೋಹನದ ಪ್ರಭಾವದಲ್ಲಿರುತ್ತದೆ. ಪುರೋಹಿತವರ್ಗವೂ ಸರ್ಕಾರವೂ ತಮ್ಮನ್ನು ಯಾವ ಜಡಸ್ಥಿತಿಯಲ್ಲಿ ಇರಿಸಿವೆಯೋ ಅದೇ ಸ್ಥಿತಿಯಲ್ಲಿಯೇ ತಲೆಮಾರುಗಳವರೆಗೆ ಹುಟ್ಟುತ್ತಾರೆ. ಬದುಕುತ್ತಾರೆ. ಸಾಯುತ್ತಾರೆ. ಆ ಪ್ರಭಾವದಿಂದ ಮುಕ್ತರಾದರೆಂದರೆ ಅವರು ಧರ್ಮವನ್ನೇ ನಿರಾಕರಿಸುವ ವಿಜ್ಞಾನಿಗಳ ಬಲೆಗೆ ಬೀಳುವುದು ಖಂಡಿತ – ಅವರ ಗುರುಗಳ ಪ್ರಭಾವ ಎಷ್ಟು ನಿರರ್ಥಕ. ಅಪಾಯಕಾರಿಯೋ ಇವರ ಪ್ರಭಾವವೂ ಅಷ್ಟೇ ನಿರರ್ಥಕ, ಅಪಾಯಕಾರಿ.

ಹೀಗಾಗಿ ಕೆಲವರಿಗೆ ಇದು ಲಾಭವಿಲ್ಲದ ಕೆಲಸ. ಇತರರಿಗೆ ಅಸಾಧ್ಯ.

## 17

ನಿರ್ಗಮನವೇ ಸಾಧ್ಯವಿಲ್ಲ ಎನಿಸುತ್ತದೆ.

ಹೌದು, ಧರ್ಮಬಾಹಿರರಿಗೆ ಈ ಸ್ಥಿತಿಯಿಂದ ನಿರ್ಗಮನವೇ ಇಲ್ಲ. ಇರುವುದು ಸಾಧ್ಯವೂ ಇಲ್ಲ. ಉನ್ನತ. ಆಡಳಿತವರ್ಗಗಳಿಗೆ ಸೇರಿದವರು, ಜನತೆಯ ಹಿತವನ್ನೇ ಬಯಸುತ್ತೇವೆಂದು ತೋರಿಸಿಕೊಂಡರೂ, ಜನತೆ ಬದುಕುತ್ತಿರುವ ಜಡತೆ. ದಾಸ್ಯಗಳನ್ನು ತೊಡೆದು ಹಾಕಲು ಯಾವ ಪ್ರಯತ್ನವನ್ನೂ ಮಾಡುವುದಿಲ್ಲ; ಪ್ರಾಪಂಚಿಕ ಪ್ರಯೋಜನ ಗಳಿಂದಾಗಿ ಅವರು ಮಾಡುವುದೂ ಸಾಧ್ಯವಿಲ್ಲ. ಈ ಜಡತೆ. ದಾಸ್ಯಗಳಿರುವುದರಿಂದಲೇ

ಮೇಲಿನ ವರ್ಗದ ಜನ ಇವರನ್ನು ಆಳಲಾಗುವುದು. ಹಾಗೆಯೇ ಗುಲಾಮರಾಗಿರುವ ಜನರೂ. ಪ್ರಾಪಂಚಿಕ ಪ್ರಯೋಜನಗಳಿಂದಲೇ ಪ್ರಚೋದಿತರಾಗಿ. ತಮ್ಮ ಕಷ್ಟದ ಸ್ಥಿತಿ ಇನ್ನೂ ಕಷ್ಟಕರವಾಗದಿರುವಂತೆ ನೋಡಿಕೊಳ್ಳುತ್ತಾರೆ: ಅಸತ್ಯದ ಬೋಧೆಯನ್ನು ಬಯಲಿಗೆಳೆದು ಸತ್ಯವನ್ನು ಬೋಧಿಸಿ. ಆದರಿಂದ ಮೇಲಿನ ವರ್ಗದವರೊಡನೆ ಸೆಣಸಲು ಇಷ್ಟಪಡುವುದಿಲ್ಲ. ಈ ಎರಡೂ ಬಗೆಯ ಜನರಿಗೆ ಹೀಗೆ ಮಾಡಲು ಯಾವ ಆಸಕ್ತಿಯೂ ಇಲ್ಲ: ಬುದ್ಧಿವಂತರಾದರೆ ಹಾಗೆ ಮಾಡಲು ಪ್ರಯತ್ನವನ್ನೇ ಪಡುವುದಿಲ್ಲ.

ಆದರೆ ಧಾರ್ಮಿಕ ಜನರ ವಿಚಾರ ಬೇರೆ. ಸಮಾಜ ಎಷ್ಟೇ ಕುಲಗೆಟ್ಟಿರಲಿ. ಇಂಥ ಜನ ತಮ್ಮ ಬದುಕಿನಿಂದ ಧರ್ಮದ ಪವಿತ್ರಜ್ಯೋತಿಯನ್ನು ಯಾವಾಗಲೂ ಕಾಪಾಡಿಕೊಳ್ಳುತ್ತಾರೆ: ಈ ಧರ್ಮವಿಲ್ಲದೆ ಮಾನವಜೀವನವೇ ಅಸಾಧ್ಯವಷ್ಟೆ. ಈ ಜನರನ್ನು ಗಮನಕ್ಕೇ ತಂದುಕೊಳ್ಳದ ಕಾಲ ಇರುತ್ತದೆ (ನಮ್ಮ ಕಾಲ ಅಂಥದೇ): ಅವರನ್ನು ಎಲ್ಲರೂ ದೂಷಿಸುವವರೇ ಮೂದಲಿಸುವವರೇ (ನಮ್ಮ ರಷ್ಯದಲ್ಲಿದ್ದಂತೆ:) ಅವರ ಬದುಕನ್ನು ಗುರುತಿಸುವವರೂ ಯಾರೂ ಇರುವುದಿಲ್ಲ. ದೇಶಾಂತರದಲ್ಲಿ. ಸೆರೆಮನೆಗಳಲ್ಲಿ. ಶಿಕ್ಷೆಗೆ ಗುರಿಯಾದ ಸೇನೆಗಳಲ್ಲಿರುತ್ತಾರೆ ಇವರು. ಆದರೂ ಅವರು ಬದುಕುತ್ತಾರೆ: ಮತ್ತು ಮಾನವ ಕೋಟಿಯ ವಿಚಾರಶೀಲ ಬದುಕು ಇವರನ್ನೇ ಅವಲಂಬಿಸಿದೆ. ಈ ಧಾರ್ಮಿಕಜನರೇ – ಎಷ್ಟು ಅಲ್ಪಸಂಖ್ಯೆಯಲ್ಲಿರಲಿ – ಜನತೆಯನ್ನು ಕಟ್ಟಿನಲ್ಲಿ ಇರಿಸಿಕೊಂಡಿರುವ ಮೋಹಕವೃತ್ತವನ್ನು ಹರಿಯಬಲ್ಲವರು. ಹರಿಯುವವರು. ಅವರು ಅದನ್ನು ಮಾಡಬಲ್ಲರು. ಏಕೆಂದರೆ ಪ್ರಾಪಂಚಿಕ ಮನುಷ್ಯ ಸಮಾಜದ ವರ್ತಮಾನ ವ್ಯವಸ್ಥೆಯನ್ನು ಎದುರಿಸಿದಾಗ ಒದಗುವ ಎಲ್ಲ ಅನುಕೂಲಗಳೂ ಅಪಾಯಗಳೂ ಧಾರ್ಮಿಕ ಮನುಷ್ಯನಿಗೇನು ಅಡ್ಡ ಬರುವುದಿಲ್ಲ: ಮೇಲಾಗಿ. ಅಸತ್ಯದ ವಿರುದ್ಧ ಹೋರಾಡಲು ಅವನ ಉತ್ಸಾಹವನ್ನು ಹೆಚ್ಚಿಸುತ್ತವೆ: ತಾನು ದೈವೀಸತ್ಯವೆಂದು ಬಗೆದುದನ್ನು ಮಾತಿನಲ್ಲಿಯೂ ಕೆಲಸದಲ್ಲಿಯೂ ತೋರಿಸಲು ಪ್ರಚೋದಿಸುತ್ತವೆ. ಆಡಳಿತ ವರ್ಗಕ್ಕೆ ಸೇರಿದವನಾದರೆ, ತನ್ನ ಲಾಭದಾಯಕ ಸ್ಥಿತಿಯನ್ನು ಗಮನಿಸಿ ಸತ್ಯವನ್ನು ಮರೆಮಾಚಬೇಕೆಂಬ ಬಯಕೆ ಅವನಿಗೆ ಇರದೇ ಇರುವುದು ಮಾತ್ರವಲ್ಲ, ಈ ಲಾಭಗಳನ್ನು ಮನಸಾರೆ ದ್ವೇಷಿಸುತ್ತ ಅವುಗಳಿಂದ ಬಿಡುಗಡೆ ಹೊಂದಲು ತನ್ನಲ್ಲಿ ಸಾಮರ್ಥ್ಯವನ್ನು ಬಳಸುತ್ತಾನೆ, ಸತ್ಯವನ್ನು ಬೋಧಿಸುತ್ತಾನೆ – ಏಕೆಂದರೆ. ದೇವರನ್ನು ಸೇವಿಸಬೇಕೆಂಬುದನ್ನು ಬಿಟ್ಟು ಅವನಿಗೆ ಇನ್ನು ಬೇರೆ ಯಾವ ಜೀವಿತೋದ್ದೇಶವೂ ಇರದು. ದಾಸ್ಯದ ವರ್ಗಗಳಿಗೆ ಸೇರಿದವನಾದರೆ, ಅದೇ ರೀತಿಯಲ್ಲಿಯೇ. ತನ್ನ ಸ್ಥಿತಿಯಲ್ಲಿರುವವರಿಗೆ ಸಹಜವಾದ ತನ್ನ ಭೌತಿಕಜೀವನದ ನೆಲೆಯನ್ನು ಉತ್ತಮಗೊಳಿಸಿಕೊಳ್ಳಬೇಕೆಂಬ ಬಯಕೆಯನ್ನು ಬದಿಗೊತ್ತಿಬಿಡುತ್ತಾನೆ: ಅಸತ್ಯವನ್ನು ಬಯಲಿಗೆಳೆದು ಸತ್ಯವನ್ನು ಸಮರ್ಥಿಸಿ ದೇವರ ಸಂಕಲ್ಪವನ್ನು ಪೂರೈಸುವುದಷ್ಟೇ ಅಂಥವನ ಗುರಿ. ತನ್ನ ಬಾಳಿನಲ್ಲಿ ಮೂಡಿಸಿಕೊಂಡ ಈ ಉದ್ದೇಶಕ್ಕನುಗುಣವಾಗಿ ಬದುಕಲು ಯಾವ ಕಷ್ಟವೂ ಬೆದರಿಕೆಯೂ ಅಡ್ಡಿಬರುವುದಿಲ್ಲ. ಎರಡೂ ವರ್ಗದ

ಜನರು ಹೀಗೆ. ಪ್ರಾಪಂಚಿಕ ಮನುಷ್ಯ ಐಶ್ವರ್ಯವನ್ನು ಪಡೆಯಲು, ತಾನು ಲಾಭವನ್ನು ನಿರೀಕ್ಷಿಸಿದ ಅರಸನನ್ನು ಒಲಿಸಲು ಎಷ್ಟು ಶ್ರಮಪಡುವನೋ ಎಷ್ಟು ಕಷ್ಟಗಳನ್ನನು-ಭವಿಸುವನೋ, ಅಷ್ಟೇ ಸಹಜವಾಗಿ ಕೆಲಸಮಾಡುತ್ತಾರೆ. ಪ್ರತಿಯೊಬ್ಬ ಧಾರ್ಮಿಕ ಮನುಷ್ಯನೂ ಕೆಲಸಮಾಡುವುದು ಹೀಗೇ: ಏಕೆಂದರೆ ಧರ್ಮದಿಂದ ಜ್ಞಾನೋದಯವನ್ನು ಪಡೆದ ಮನುಷ್ಯಜೀವ, ಧರ್ಮಬಾಹಿರರಾದ ಜನ ಬದುಕುವಂತೆ, ಕೇವಲ ಪ್ರಾಪಂಚಿಕ ಜೀವನದಲ್ಲಿಯೇ ಬದುಕುವುದಿಲ್ಲ: ಶಾಶ್ವತವಾದ, ಅನಂತವಾದ, ಜೀವನದಲ್ಲಿ ಬದುಕುತ್ತದೆ. ಅದಕ್ಕೆ ಈ ಜೀವನದ ಕಷ್ಟ, ಮರಣಗಳು, ಭೂಮಿಯನ್ನು ಉಳುತ್ತಿರುವ ರೈತನ ಕೈಮೇಲಿನ ಬೊಬ್ಬೆಗಳಂತೆ, ಮೈಯ ಆಯಾಸದಂತೆ ಗೌಣವಾದುವು.

ಜನರನ್ನು ಈಗ ಸೆರೆಹಿಡಿದಿರುವ ಮಾಯಾ ವೃತ್ತವನ್ನು ಹರಿದು ಎಸೆಯುವವರು ಇವರೇ. ಅವರು ಎಷ್ಟೇ ಅಲ್ಪಸಂಖ್ಯೆಯಲ್ಲಿರಲಿ, ಅವರ ಸಾಮಾಜಿಕ ಸ್ಥಿತಿಗತಿಗಳು ಎಷ್ಟೇ ಕೆಳದರ್ಜೆಯದಾಗಿರಲಿ, ವಿದ್ಯೆಯಲ್ಲಿ ಅಥವಾ ಸಾಮರ್ಥ್ಯದಲ್ಲಿ ಎಷ್ಟೇ ಬಡತನವಿರಲಿ ಈ ಜನ – ಒಣಗಿದ ಹುಲ್ಲುಗಾವಲನ್ನು ಬೆಂಕಿ ಆವರಿಸುವುದು ಎಷ್ಟು ಖಚಿತವೋ ಅಷ್ಟೇ ಖಚಿತವಾಗಿ – ಬಹುಕಾಲ ಧರ್ಮವಿಲ್ಲದೆ ಒಣಗಿನಿಂತು ಈಗ ಹೊಸ ಬದುಕಿಗೆ ಹಾತೊರೆಯುತ್ತಿರುವ ಜನರ ಹೃದಯವನ್ನು ಬೆಳಗಿಸಿ, ಇಡೀ ಪ್ರಪಂಚದಲ್ಲಿ ಜ್ಯೋತಿಯನ್ನು ಹೊತ್ತಿಸುತ್ತದೆ.

ಧರ್ಮವೆಂದರೆ ಯಾವುದೋ ಕಾಲದಲ್ಲಿ ಜರುಗಿತೆನ್ನುವ ಅತಿ ಪ್ರಾಕೃತಪ್ರಸಂಗದಲ್ಲಿ ಒಮ್ಮೆಗೇ ನಿಶ್ಚಿತವಾದ ಯಾವುದೋ ನಂಬಿಕೆಯಲ್ಲ: ಕೆಲವು ಪ್ರಾರ್ಥನೆಗಳ ಮತ್ತು ವಿಧಿಗಳ ಅಗತ್ಯದಲ್ಲಿ ಮೂಡಿಬಂದ ನಂಬಿಕೆಯೂ ಅಲ್ಲ. ಅಥವಾ, ವಿಜ್ಞಾನಿಗಳು ಹೇಳುವಂತೆ, ಪ್ರಾಚೀನ ಮೌಢ್ಯದಿಂದ ಉಂಟಾದ ಕುರುಡುನಂಬಿಕೆಗಳು ಇಂದಿನ ಕಾಲಕ್ಕೆ ಅರ್ಥಹೀನವೆನಿಸಿದರೂ ಜೀವನಕ್ಕೆ ಅನ್ವಯವಾಗುವುವಲ್ಲವೆನಿಸಿದರೂ ಉಳಿದು ಬಂದಿರುವುದಲ್ಲ. ಮನುಷ್ಯನು ಶಾಶ್ವತಜೀವನ ಮತ್ತು ದೇವರೊಂದಿಗೆ ಇರಿಸಿಕೊಳ್ಳುವ ನಿರ್ದಿಷ್ಟ ಸಂಬಂಧವೇ ಧರ್ಮ: ಯುಕ್ತಿ ಮತ್ತು ವರ್ತಮಾನಜ್ಞಾನ ಇವುಗಳೊಂದಿಗೆ ಹೊಂದಿಸಿಕೊಂಡ ಸಂಬಂಧ: ಮಾನವಕೋಟಿಯನ್ನು ತನ್ನ ಪೂರ್ವೋದ್ದಿಷ್ಟ ಗುರಿಯ ಕಡೆ ಮುನ್ನಡೆಸುವ ಒಂದೇ ಒಂದು ಸಾಧನ ಇದು.

ಜಾಣ್ಮೆಯ ಹಿಬ್ರೂ ಗಾದೆಯೊಂದು ಹೇಳುತ್ತದೆ : 'ಮನುಷ್ಯನ ಜೀವ ದೇವರ ದೀಪ' ಎಂದು. ದೇವರ ದೀಪ ಅವನ ಜೀವದಲ್ಲಿ ಬೆಳಗುವವರೆಗೂ ಅವನು ದುರ್ಬಲನಾದ ದುಃಖಿಯಾದ ಪ್ರಾಣಿ. ಆದರೆ ದೀಪ ಬೆಳಗಿತೆಂದರೆ (ಧರ್ಮದಿಂದ ಜ್ಞಾನೋ-ದಯವನ್ನು ಪಡೆದ ಜೀವಗಳಲ್ಲೇ ಇದು ಬೆಳಗುವುದು) ಮನುಷ್ಯ ಪ್ರಪಂಚದಲ್ಲಿ ಅತ್ಯಂತ ಪ್ರಬಲನಾದ ಜೀವಿಯಾಗುತ್ತಾನೆ. ಹೀಗಾಗದೆ ಇರುವುದು ಸಾಧ್ಯವಿಲ್ಲ: ಏಕೆಂದರೆ ಅವನಲ್ಲಿ ಕೆಲಸಮಾಡುವುದು **ಅವನ** ಶಕ್ತಿಯಲ್ಲ, ದೇವರ ಶಕ್ತಿ.

ಹೀಗೆ, ಇದೇ ಧರ್ಮವೆನ್ನುವುದು; ಇಲ್ಲಿಯೇ ಅದರ ಸಾರ ಅಡಗಿರುವುದು.

# ಕ್ರಿಶ್ಚಿಯನ್ ಧರ್ಮ ಮತ್ತು ರಾಷ್ಟ್ರಪ್ರೇಮ

## ಪೀಠಿಕೆ

ಕಳೆದ ವರ್ಷದ (1893) ಅಕ್ಟೋಬರ್‌ನಲ್ಲಿ ಫ್ರಾನ್ಸ್‌ನಲ್ಲಿ ನಡೆದ ಫ್ರಾಂಕೋ-ರಷ್ಯನ್ ಸಮಾರಂಭಗಳು ಮೊದಮೊದಲು. ಮಿಕ್ಕವರಿಗೆ ಎನಿಸಿರಬಹುದಾದಂತೆಯೇ ನನಗೂ ಮೋಜಿನವು ಎನಿಸಿತ್ತು. ಆದರೆ ಅನಂತರ ಗೊಂದಲವುಂಟಾಗಿ. ಕೊನೆಗೆ ಕೋಪವೇ ಬಂದಿತು – ಅದನ್ನು ಪತ್ರಿಕೆಗೆ ಒಂದು ಸಣ್ಣ ಲೇಖನವಾಗಿ ಬರೆಯಬೇಕೆಂದೂ ಎನಿಸಿತು. ಆದರೆ ಈ ವಿಚಿತ್ರ ವ್ಯಾಪಾರದ ಮುಖ್ಯ ಕಾರಣಗಳನ್ನು ಹೆಚ್ಚು ಗಂಭೀರವಾಗಿ ಆಲೋಚಿಸಿದಂತೆ ನಾನೀಗ ಮುಂದಿಡುವ ತೀರ್ಮಾನಗಳನ್ನು ಕೈಗೊಂಡೆ.

ರಷ್ಯನರೂ ಫ್ರೆಂಚರೂ ಅನೇಕ ಶತಮಾನಗಳಿಂದ ಪರಸ್ಪರರನ್ನು ತಿಳಿದಿದ್ದಾರೆ; ಕೆಲವು ವೇಳೆ ಇಬ್ಬರೂ ಸೌಹಾರ್ದಭಾವದಿಂದ ನಡೆದುಕೊಂಡಿದ್ದರೂ ಅವುಗಳ ಸರ್ಕಾರಗಳಿಂದಾಗಿ. ದುರದೃಷ್ಟವಶಾತ್. ಬಹುವೇಳೆ ಪರಸ್ಪರ ದ್ವೇಷಭಾವವನ್ನೇ ತೋರ್ಪಡಿಸಿಕೊಂಡಿದ್ದಾರೆ. ಆದರೆ ಈಗ ಇದ್ದಕ್ಕಿದ್ದಂತೆ ಈ ಪರಿಸ್ಥಿತಿಯು ಬದಲಾಯಿಸಿದೆ. ಇದಕ್ಕೆ ಕಾರಣ ಫ್ರೆಂಚ್ ಸೈನ್ಯದ ತುಕುಡಿಯೊಂದು ಎರಡು ವರ್ಷಗಳ ಹಿಂದೆ ಕ್ರೋನ್‌ಸ್ಟಾಟನ್ನು ಸಂದರ್ಶಿಸಿದಾಗ ಆ ತುಕಡಿಯ ಅಧಿಕಾರಿಗಳು ಅಲ್ಲಿನ ನಾನಾ ಪ್ರದೇಶಗಳಲ್ಲಿ ಚೆನ್ನಾಗಿ ತಿಂದು. ನಾನಾ ರೀತಿಯ ಮದ್ಯಗಳ ರುಚಿನೋಡಿ ಅನೇಕ ಬಗೆಯ ಸುಳ್ಳು ಮಾತುಗಳನ್ನೂ ಮೂರ್ಖತನದ ನುಡಿಗಳನ್ನೂ ಕೇಳುತ್ತ ಆಡುತ್ತ ಕಾಲಕಳೆದುದು; ಹಾಗೆಯೆ ಅಂತಹುದೇ ರಷ್ಯನ್ ಸೈನ್ಯ ತುಕುಡಿಯೊಂದು ಟೌಲಾನನ್ನು ಕಳೆದ ವರ್ಷ ಸಂದರ್ಶಿಸಿದಾಗ ಅದರ ಅಧಿಕಾರಿಗಳು ಪ್ಯಾರಿಸ್‌ಗೆ ಹೋಗಿ ಚೆನ್ನಾಗಿ ತಿಂದು ಕುಡಿದು ಮಾಡುವಾಗ ಮತ್ತಷ್ಟು ಹೆಚ್ಚಿನ ಮೂರ್ಖತನದ ಸುಳ್ಳು ಮಾತುಗಳನ್ನು ಆಡಿ ಕೇಳಿದುದು. ಇದರಿಂದ ಆಗ ಅಲ್ಲಿ ಹಾಜರಿದ್ದವರೂ, ಅಲ್ಲಿರದಿದ್ದರೂ ಆ ವಿಷಯವಾಗಿ ವೃತ್ತಪತ್ರಿಕೆಗಳಲ್ಲಿ ಓದಿ ಕೇಳಿದ್ದವರೂ – ಎಂದರೆ ಲಕ್ಷಾಂತರ ರಷ್ಯನರೂ ಫ್ರೆಂಚರೂ – ಇದ್ದಕ್ಕಿದ್ದಂತೆಯೇ ತಾವು ಪರಸ್ಪರರನ್ನು ತುಂಬ ಮೆಚ್ಚಿಕೊಳ್ಳುತ್ತೇವೆನ್ನುವ ಭಾವನೆಗೊಳಗಾದರು: ಎಂದರೆ ಫ್ರೆಂಚರೆಲ್ಲರೂ ರಷ್ಯನರೆಲ್ಲರನ್ನೂ ರಷ್ಯನರೆಲ್ಲರೂ ಫ್ರೆಂಚರೆಲ್ಲರನ್ನೂ ಪ್ರೀತಿಸುವರೆಂಬ ಭಾವನೆಯುದು. ಈ ಭಾವನೆಗಳನ್ನು ಅಕ್ಟೋಬರ್ ಸಮಾರಂಭದ ಕಾಲದಲ್ಲಿ ಫ್ರಾನ್ಸ್‌ನಲ್ಲಿ ತುಂಬ ವಿಶೇಷವಾಗಿ ವ್ಯಕ್ತಪಡಿಸಲಾಯಿತು.

'ಸೆಲ್ಸ್‌ಕಿ ವೆಸ್ಟಾನಿಕ್' ('ಗ್ರಾಮಾಂತರ ವಾರ್ತೆಗಳು') ಎನ್ನುವ ಪತ್ರಿಕೆಯಲ್ಲಿ ರಷ್ಯನ್ ನಾವಿಕರಿಗೆ ದೊರೆತ ಸ್ವಾಗತವನ್ನು ಹೀಗೆ ವರ್ಣಿಸಲಾಗಿದೆ (ಈ ಪತ್ರಿಕೆಯು ಇತರ ಪತ್ರಿಕೆಗಳಿಂದ ಸುದ್ದಿಗಳನ್ನು ಸಂಗ್ರಹಿಸುತ್ತದೆ):

'ರಷ್ಯನ್ ಮತ್ತು ಫ್ರೆಂಚ್ ನೌಕೆಗಳು ಭೇಟಿಯಾದಾಗ, ಗೌರವಸೂಚಕ ಕುಶಾಲ ತೋಪುಗಳನ್ನು ಹಾರಿಸುವುದಲ್ಲದೆ 'ರಷ್ಯಾ ಚಿರಾಯುವಾಗಲಿ'. 'ಫ್ರಾನ್ಸ್ ಚಿರಾಯು ವಾಗಲಿ': ಮುಂತಾಗಿ ಉತ್ಸಾಹದಿಂದ ಕೂಗಿ ಪರಸ್ಪರರನ್ನು ಸ್ವಾಗತಿಸಿದರು.

ಖಾಸಗಿ ಉಗಿಹಡಗುಗಳಲ್ಲಿ ರಷ್ಯನ್ ರಾಷ್ಟ್ರಗೀತೆಯಾದ 'ಜಾರ್ ದೊರೆಗಳನ್ನು ದೇವರು ಕಾಪಾಡಲಿ ಹಾಗೂ ಫ್ರಾನ್ಸ್‌ನ 'ಮಾರ್ಸೆಲೀಸ್' ಅನ್ನೂ ಬ್ಯಾಂಡ್‌ಗಳು ನುಡಿ ಸಿದುವು; ಅದಲ್ಲದೆ, ಖಾಸಗಿ ದೋಣಿಗಳಲ್ಲಿನ ಜನರು ಹ್ಯಾಟುಗಳನ್ನೂ ಚಾವುಟಿಗಳನ್ನೂ ಕರವಸ್ತ್ರಗಳನ್ನೂ ಪುಷ್ಪಗುಚ್ಛಗಳನ್ನೂ ಹಿಡಿದು ಬೀಸಿದರು. ಅನೇಕ ಸಾಗಾಣಿಕೆಯ ಹಡಗುಗಳ ತುಂಬ ರೈತಾಪಿ ಗಂಡಸರೂ ಹೆಂಗಸರೂ ಮಕ್ಕಳೂ ಪುಷ್ಪಗುಚ್ಛಗಳನ್ನು ಹಿಡಿದು ನಿಂತಿದ್ದರು; ಮಕ್ಕಳೂ ತಮ್ಮ ಕೈಗಳಲ್ಲಿದ್ದ ಹೂಗಳನ್ನು ಆಡಿಸುವುದಲ್ಲದೆ ತಮ್ಮ ಶಕ್ತಿಯಿದ್ದಷ್ಟು 'ರಷ್ಯ ಚಿರಾಯುವಾಗಲಿ' ಎಂದು ಕೂಗಿದರು. ಜನರ ಈ ಬಗೆಯ ಉತ್ಸಾಹೋದ್ರೇಕಗಳನ್ನು ಕಂಡಾಗ ನಮ್ಮ ಕಡೆಯ ನಾವಿಕರ ಕಣ್ಣುಗಳಲ್ಲಿ ನೀರು ತಾನಾಗಿ ಹರಿಯಿತು.

ಟೌಲಾನ್‌ನಲ್ಲಿ ಫ್ರೆಂಚ್ ಯುದ್ಧ ನೌಕೆಗಳನ್ನೆಲ್ಲ ಬಂದರಿನಲ್ಲಿ ಎರಡು ಸಾಲಿನಲ್ಲಿ ನಿಲ್ಲಿಸಿದಾಗ ಅವುಗಳ ಮಧ್ಯೆ ನಮ್ಮ ಸೈನ್ಯತುಕಡಿಯು ಅಡ್ಮಿರಲ್ ಅವರ ಉಕ್ಕುನೌಕೆಯ ನಾಯಕತ್ವದಲ್ಲಿ ಸಾಗಿದಾಗ ಇತರ ಹಡಗುಗಳೂ ಹಿಂಬಾಲಿಸಿದುವು. ಆಗ ವಿಶೇಷವಾದ ಪವಿತ್ರ ಕ್ಷಣವು ಉಂಟಾಯಿತು.

ರಷ್ಯನ್ ಧ್ವಜನೌಕೆಯು ಫ್ರೆಂಚ್ ತುಕಡಿಯ ಗೌರವಾರ್ಥವಾಗಿ ಹದಿನೈದು ಕುಶಾಲ ತೋಪುಗಳನ್ನು ಹಾರಿಸಿದಾಗ, ಫ್ರೆಂಚ್ ಧ್ವಜನೌಕೆಯು ಅದಕ್ಕೆ ಇಮ್ಮಡಿಯಾದ ಮೂವತ್ತು ತೋಪುಗಳನ್ನು ಹಾರಿಸಿ ಮರು ಗೌರವವನ್ನು ಸೂಚಿಸಿತು. ಫ್ರೆಂಚ್ ನೌಕೆಯೊಳಗಿಂದ ರಷ್ಯಾದ ರಾಷ್ಟ್ರಗೀತೆಯ ನುಡಿಗಳು ಹೊಮ್ಮಿ ಆಕಾಶವನ್ನೆಲ್ಲ ವ್ಯಾಪಿಸಿತು. ಫ್ರೆಂಚ್ ನಾವಿಕರು ತಮ್ಮ ಹಡಗಿನ ಕುಕ್ಕುಂಭಿಗಳನ್ನು ಹತ್ತಿ ಹಾಯಿಗಳನ್ನು ಸಜ್ಜುಗೊಳಿಸುವಾಗ ಎರಡೂ ಕಡೆಗಳಿಂದಲೂ ಇತರ ಹಡಗುಗಳಿಂದಲೂ ಸ್ವಾಗತದ ಕೂಗುಗಳು ಘೋಷಿಸಿ ದುವು. ನಾವಿಕರ ಟೋಪಿಗಳೂ, ಹ್ಯಾಟುಗಳೂ, ಇತರ ಪ್ರೇಕ್ಷಕರ ಕರವಸ್ತ್ರಗಳೂ ಶ್ರೇಷ್ಠ ಅತಿಥಿಗಳ ಗೌರವಾರ್ಥವಾಗಿ ರಭಸದಿಂದ ಗಾಳಿಯಲ್ಲಾಡಿದುವು. ನೀರಿನೆಡೆ ಯಿಂದ, ಭೂಮಿಯಡೆಯಿಂದ, ಎಲ್ಲೆಡೆಗಳಿಂದಲೂ ಏಕಕಂಠದಿಂದ 'ರಷ್ಯಕ್ಕೆ ಜಯವಾಗಲಿ' 'ಫ್ರಾನ್ಸ್‌ಗೆ ಜಯವಾಗಲಿ' ಎಂಬ ಕೂಗು ಹೊರಟು ದಿಗಂತವನ್ನು ವ್ಯಾಪಿಸಿತು.

ನೌಕಾಪಡೆಯ ಸಂಪ್ರದಾಯದಂತೆ ಅಡ್ಮಿರಲ್ ಅವೆಲಾನ್ ಅವರು ತಮ್ಮ ಅಧಿಕಾರಿಗಳೊಂದಿಗೆ ತೀರಕ್ಕೆ ಹೋಗಿ ಸ್ಥಳೀಯ ಅಧಿಕಾರ ವರ್ಗವನ್ನು ಸ್ವಾಗತಿಸಿದರು. ಅವರು ಭೂಮಿಯ ಮೇಲೆ ಪದಾರ್ಪಣ ಮಾಡುವಾಗ ಫ್ರೆಂಚ್‌ನ ನೌಕಾಪಡೆಯ ಅಧಿಕಾರಿವರ್ಗ ಹಾಗೂ ಟೌಲಾನ್ ಬಂದರಿನ ಹಿರಿಯ ಅಧಿಕಾರಿಗಳು ಅವರನ್ನು ಎದುರುಗೊಂಡರು. ಗೌರವಾರ್ಥ ತೋಪುಗಳ ಆರ್ಭಟ ಹಾಗೂ ಘಂಟಾನಾದಗಳ ನಡುವೆ ಸ್ನೇಹಪರ ಹಸ್ತಲಾಘವ ಕಾರ್ಯಕ್ರಮವು ನಡೆಯಿತು. ನೌಕಾಪಡೆಯ ಬ್ಯಾಂಡ್ 'ಜಾರ್ ದೊರೆಗಳನ್ನು ದೇವರು ಕಾಪಾಡಲಿ' ಎಂಬ ರಾಷ್ಟ್ರಗೀತೆಯನ್ನು ನುಡಿಸುವಾಗ ಅದರ ಶಬ್ದವು ಜನಸ್ತೋಮದ 'ಜಾರ್‌ಗಳು ಚಿರಾಯುವಾಗಲಿ' 'ರಷ್ಯಾ ಚಿರಾಯುವಾಗಲಿ' ಕೂಗಿನಲ್ಲಿ ಮುಳುಗಿಹೋಯಿತು. ಈ ಕೂಗು ಒಟ್ಟಾಗಿ ಸೇರಿ ಬ್ಯಾಂಡ್ ವಾದನ ಹಾಗೂ ತೋಪುಗಳ ಆರ್ಭಟಗಳ ಸದ್ದನ್ನೂ ಅಡಗಿಸಿತು.

ಆ ಕ್ಷಣದಲ್ಲಿ ಅಲ್ಲಿ ನೆರೆದಿದ್ದ ಅಪಾರ ಜನಸಮುದಾಯದ ಉತ್ಸಾಹವು ತುತ್ತತುದಿಗೇರಿತು; ಅಲ್ಲಿ ಸೇರಿದ್ದ ಜನರ ಹೃದಯಾಂತರಾಳದ ಭಾವನೋದ್ವೇಗವನ್ನು ಯಾವ ಶಬ್ದವೂ ಸಮರ್ಪಕವಾಗಿ ಅಭಿವ್ಯಕ್ತಿಗೊಳಿಸಲಾರದೆಂದು ವೀಕ್ಷಕರು, ಅಭಿಪ್ರಾಯಪಡುತ್ತಾರೆ. ಶಿರೋವಸ್ತ್ರವಿಲ್ಲದ ಅಡ್ಮಿರಲ್ ಅವೆಲಾನ್ ಅವರು ರಷ್ಯನ್ ಮತ್ತು ಫ್ರೆಂಚ್ ನೌಕಾಪಡೆಯ ಅಧಿಕಾರಿಗಳೊಡನೆ ನೌಕಾಪಡೆಯ ಆಡಳಿತ ಕೇಂದ್ರದತ್ತ ನಡೆದರು; ಅಲ್ಲಿ ಫ್ರಾನ್ಸ್‌ನ ನೌಕಾಯಾನ ಸಚಿವರು ಇವರ ಬರವನ್ನು ಎದುರುನೋಡುತ್ತಿದ್ದರು.

ಅಡ್ಮಿರಲ್ ಅವರನ್ನು ಸ್ವಾಗತಿಸಿದಾಗ ಸಚಿವರು ಹೀಗೆ ನುಡಿದರು :

'ಕ್ರಾನ್ಸ್‌ಟಾಟ್ ಮತ್ತು ಟೌಲಾನ್‌ಗಳು ರಷ್ಯನ್ ಹಾಗೂ ಫ್ರೆಂಚ್ ಜನರಲ್ಲಿ ಪರಸ್ಪರ ಹರಿಯುವ ಸೌಹಾರ್ದಕ್ಕೆ ಸಾಕ್ಷಿಯಾದ ಎರಡು ಸ್ಥಳಗಳಾಗಿವೆ. ನೀವು ಹೋದಲ್ಲೆಲ್ಲ ನಿಮ್ಮನ್ನು ಆತ್ಮೀಯ ಸ್ನೇಹಿತರಂತೆ ಜನರು ಸ್ವಾಗತಿಸುತ್ತಾರೆ. ನಿಮ್ಮನ್ನೂ ನಿಮ್ಮೊಡನೆ ಬಂದಿರುವವರನ್ನೂ "ಹಿರಿಯ ಹಾಗೂ ಉದಾತ್ತ ರಾಷ್ಟ್ರವೊಂದರ" ಪ್ರತಿನಿಧಿಗಳೆಂದು ಫ್ರೆಂಚ್ ಜನತೆ ಮತ್ತು ಸರ್ಕಾರಗಳು ಸ್ವಾಗತಿಸುತ್ತವೆ.'

ಇದಕ್ಕೆ ಉತ್ತರವೀಯುವಾಗ ಅಡ್ಮಿರಲ್ ಅವರು ತಾವು ಅನುಭವಿಸುವ ಕೃತಜ್ಞತಾ ಭಾವನೆಯನ್ನು ಮಾತುಗಳ ಮೂಲಕ ಹೇಳಲು ಅಸಾಧ್ಯವೆಂದರು. 'ರಷ್ಯನ್ ತುಕಡಿಯಷ್ಟೇ ಅಲ್ಲದೆ ಇಡೀ ರಷ್ಯಾ ರಾಷ್ಟ್ರವೇ ನೀವು ನಮ್ಮನ್ನು ಸ್ವಾಗತಿಸಿದ ರೀತಿಗಾಗಿ ಕೃತಜ್ಞವಾಗಿರುತ್ತದೆ' ಎಂದೂ ಅವರು ಹೇಳಿದರು.

ಸ್ವಲ್ಪಕಾಲ ಸಂಭಾಷಣೆಯನ್ನು ನಡೆಸಿ ಸಚಿವರಿಂದ ಬೀಳ್ಕೊಳ್ಳುವಾಗ ಅಡ್ಮಿರಲ್ ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿ ಹೀಗೆಂದರು: 'ನಿಮ್ಮಿಂದ ಬೀಳ್ಕೊಳ್ಳುವಾಗ

ಎಲ್ಲ ರಷ್ಯನರ ಹೃದಯದಲ್ಲಿ ಮುದ್ರಿತವಾಗಿರುವ "ರಷ್ಯಾ–ಫ್ರಾನ್ಸ್ ಚಿರಾಯುವಾಗಲಿ" ಎಂಬ ಮಾತುಗಳನ್ನು ಹೇಳದೆ ಹೋಗಲಾರೆ. [1]

ಟೌಲಾನ್‌ನಲ್ಲಿ ದೊರೆತ ಸ್ವಾಗತದ ರೀತಿಯಿದು. ಪ್ಯಾರಿಸ್‌ನಲ್ಲಿ ಸ್ವಾಗತ ಹಾಗೂ ಸಂಭ್ರಮಗಳು ಮತ್ತಷ್ಟು ವೈಭವಪೂರ್ಣವಾಗಿದ್ದುವು.

ಪ್ಯಾರಿಸ್‌ನ ಸ್ವಾಗತದ ಬಗ್ಗೆ ವರದಿ ಮಾಡುವಾಗ ಪತ್ರಿಕೆಗಳು ಅದನ್ನು ಹೀಗೆ ವರ್ಣಿಸಿದುವು:

'ರಷ್ಯನ್ ನಾವಿಕರು ಬಂದಿಳಿಯಬೇಕಾದ ಬೂಲ್‌ವಾ ಇಟಾಲಿಯನ್ಸ್‌ನ ಕಡೆಗೆ ಎಲ್ಲ ದೃಷ್ಟಿಗಳೂ ಕೇಂದ್ರೀಕರಿಸಿದ್ದುವು. ಕೊನೆಗೂ ದೂರದಲ್ಲಿ ಉದ್ವೇಗಪೂರ್ಣ ಕೂಗು ಮತ್ತು ಕರತಾಡನಗಳ ಬಿರುಗಾಳಿಯ ಅರ್ಭಟವು ಕೇಳಿಸಿತು. ಬರುಬರುತ್ತ ಈ ಅರ್ಭಟವು ಹೆಚ್ಚು ಜೋರಾಗಿಯೂ ಸ್ಪಷ್ಟವಾಗಿಯೂ ಕೇಳಿಸತೊಡಗಿತು: ಬಿರುಗಾಳಿಯು ಸಮೀಪಿಸುತ್ತಿದ್ದುದು ಸ್ಪಷ್ಟವಾಗಿತ್ತು. ಚೌಕದಲ್ಲಿ ನೂಕು ನುಗ್ಗಲು ತೀವ್ರವಾಯಿತು. ಅತಿಥಿ ಪಡೆಗಾಗಿ ದಾರಿ ಬಿಡಿಸಲು ಪೋಲೀಸರು ನುಗ್ಗಿದರೂ. ಜನಸಂದಣಿಯನ್ನು ನಿಯಂತ್ರಿಸುವುದು ಅವರಿಗೆ ಕಷ್ಟವೇ ಆಯಿತು. ಜನರ ಒತ್ತಡ ಹಾಗೂ ಉಬ್ಬರಗಳು ಅವರ್ಣನೀಯ ...... ಕೊನೆಗೆ ಮೆರವಣಿಗೆಯ ಮುಂಭಾಗವು ಚೌಕದಲ್ಲಿ ಕಾಣಿಸಿತು. ಆ ಕ್ಷಣದಲ್ಲಿಯೇ 'ರಷ್ಯಾ ಚಿರಾಯುವಾಗಲಿ. ರಷ್ಯಾ ಚಿರಾಯು ವಾಗಲಿ' ಎಂಬ ಕೂಗು ಕಿವಿಗಡಚಿಕ್ಕುವಂತೆ ವ್ಯಾಪಿಸಿತು. ಎಲ್ಲರ ಹ್ಯಾಟುಗಳೂ ಹಾರಾಡಿ ಧುವು: ಕಿಟಕಿಗಳಲ್ಲಿ. ಮಾಳಿಗೆಗಳಲ್ಲಿ, ಕೊನೆಗೆ ಸೂರುಗಳ ಮೇಲೆ ದಟ್ಟವಾಗಿ ನಿಂತಿದ್ದ ಜನರು ಹ್ಯಾಟುಗಳನ್ನೂ ಧ್ವಜಗಳನ್ನೂ ಕರವಸ್ತ್ರಗಳನ್ನೂ ಬೀಸಿದರು. ಉನ್ಮತ್ತರಾಗಿ ಕರತಾಡನ ಮಾಡಿದರು, ವರ್ಣಮಯವಾದ ಪುಟ್ಟ ಪುಟ್ಟ ಹೂಕುಚ್ಚಗಳ ಮೋಡವನ್ನೇ ಮೇಲಿನಿಂದ ಇಳಿಯಬಿಟ್ಟರು. ಚೌಕದಲ್ಲಿ ನಿಂತಿದ್ದ ಜನರ ಮೇಲಿಂದ ಕರವಸ್ತ್ರಗಳ ಹ್ಯಾಟ್‌ಗಳ ಧ್ವಜಗಳ ಸಮೂಹವು ಪ್ರಕ್ಷುಬ್ಧಗೊಂಡ ಸಮುದ್ರದಂತೆ ಹಾರಾಡಿದುವು. ಜನಸಮೂಹದ ಸಾವಿರಾರು ಕಂಠಗಳು 'ರಷ್ಯಾ ಚಿರಾಯುವಾಗಲಿ' 'ರಷ್ಯಾ ಚಿರಾಯುವಾಗಲಿ' ಎಂದು ಚೀರಿದುವು. ತಮ್ಮ ಪ್ರೀತಿಯ ಅತಿಥಿಗಳನ್ನು ಆದಷ್ಟು ಚೆನ್ನಾಗಿ ಕಾಣಬೇಕೆಂದು ಬಹಳ ಆಸೆಯಿಂದ ತಮ್ಮ ಕೈಗಳನ್ನು ಅವರೆಡೆಗೆ ಚಾಚುತ್ತ, ಸಾಧ್ಯವಾದ ರೀತಿಯಲ್ಲೆಲ್ಲ ತಮ್ಮ ಸೌಹಾರ್ದ ಭಾವನೆಯನ್ನು ವ್ಯಕ್ತಪಡಿಸಿದರು. [2]

ಮತ್ತೊಬ್ಬ ವರದಿಗಾರರು ಆ ಜನರ ಉತ್ಸಾಹವು ಜ್ವರತಪ್ತವಾದಂತೆ ಕಾಣಿಸಿತೆಂದು ಬರೆಯುತ್ತಾರೆ. ಆಗ ಪ್ಯಾರಿಸ್‌ನಲ್ಲಿದ್ದ ರಷ್ಯನ್ ಪತ್ರಿಕೋದ್ಯೋಗಿಯೊಬ್ಬರು ನಾವಿಕರ ಮೆರವಣಿಗೆಯನ್ನು ಈ ರೀತಿ ವರ್ಣಿಸುತ್ತಾರೆ:

---

1 ಸೆಲ್ಸ್ಕಿ ವೆಸ್ತ್ನಿಕ್, 1893, ನಂ. 41

2 'ನೋವೋ ವ್ರೆಮ್ಯಾ' ಎಂಬ ಪತ್ರಿಕೆಯಿಂದ ಉದ್ಧೃತ

'ಆ ಘಟನೆಯು ನಿಜವಾಗಿಯೂ ಜಾಗತಿಕ ಪ್ರಾಮುಖ್ಯವನ್ನು ಹೊಂದಿದ್ದಂತೆಯೂ ಅದ್ಭುತವಾಗಿಯೂ, ಕಣ್ಣೀರು ಹನಿಸುವಂತೆಯೂ ಇದ್ದುದಲ್ಲದೆ ಜನರನ್ನು ಸಹೋದರ ರಂತೆ ಕಾಣುವ ಪ್ರೇಮಭಾವದಿಂದಲೂ ರಕ್ತಪಾತ-ಹಿಂಸೆಗಳ ಬಗ್ಗೆ ಹಾಗೂ ಪ್ರೀತಿಯ ತಾಯಿಯಿಂದ ಮಗುವನ್ನು ಬೇರ್ಪಡಿಸುವಂತಹ ಹೇಯಕೃತ್ಯಗಳ ಬಗ್ಗೆ ದ್ವೇಷಭಾವ ದಿಂದಲೂ ಹೃದಯವು ಕಂಪಿಸಿ, ತಮ್ಮ ಆತ್ಮಗಳು ಉನ್ನತವಾದ ಭಾವನೆಯಿಂದ ಪುನೀತವಾದಂತೆ ತಮಗಾಯಿತೆಂದು ಜನರು ಹೇಳುತ್ತಾರೆ. ನಾನೇ ಈ ಕೆಲವು ಗಂಟೆಗಳಿಂದ ಉನ್ಮತ್ತ ಸ್ಥಿತಿಯಲ್ಲಿದ್ದಂತಿದ್ದೇನೆ. ಜರಿಯ ಕಸೂತಿಯ ವಸ್ತ್ರಗಳನ್ನು ಧರಿಸಿದ ಫ್ರೆಂಚ್ ಸರ್ಕಾರದ ಪ್ರತಿನಿಧಿಗಳ ಮಧ್ಯೆ ಪುರಸಭಾ ಸದಸ್ಯರ ಪೋಷಾಕುಗಳ ನಡುವೆ ಗೇರ್ ಡಿ ಲೋನ್ಸ್‌ನಲ್ಲಿ ನಿಂತಿರುವಾಗ 'ರಷ್ಯಾ ಚಿರಾಯುವಾಗಲಿ, ಜಾರ್‌ಗಳು ಚಿರಾಯುವಾಗಲಿ' ಕೂಗನ್ನು ಕೇಳಿದಾಗ ಮತ್ತೆ ಮತ್ತೆ ಈ ನಮ್ಮ ರಾಷ್ಟ್ರಗೀತೆಯ ವಾದನವನ್ನು ಕೇಳಿದಾಗ, ನನಗೆ ವಿಚಿತ್ರವಾದ ಅನುಭವವಾಯಿತು, ಭಾವನೆಯ ಪೂರ ದಲ್ಲಿ ತೇಲಿಹೋದಂತಾಯಿತು. ನಾನೆಲ್ಲಿದ್ದೇನೆ? ಏನು ಸಂಭವಿಸಿದೆ? ಯಾವ ಮಾಂತ್ರಿಕ ಶಕ್ತಿಯು ಎಲ್ಲರನ್ನೂ ಒಂದೇ ಭಾವನೆಯ ತಂತುವಿನಿಂದ, ಪರಸ್ಪರ ಅರಿವಿನಿಂದ ಬಂಧಿ ಸಿದೆ? ಪವಿತ್ರ ಸಂದರ್ಭಗಳಲ್ಲಿ ಮಾತ್ರ ಜನರಲ್ಲಿ ಉಂಟಾಗುವ ಉನ್ನತ ಆದರ್ಶ, ಪ್ರೇಮ–ಸೋದರ ಭಾವಗಳ ದೇವತೆಯ ಜೊತೆಗಿರುವಂತೆ ಇಂಥ ಸಂದರ್ಭಗಳಲ್ಲಿ ಎಲ್ಲರಲ್ಲೂ ಅನುಭವಕ್ಕೆ ಬರುವುದಿಲ್ಲವೇ? ಎಲ್ಲರ ಹೃದಯವೂ ಸುಂದರವಾದ ಪವಿತ್ರ ಹಾಗೂ ಉನ್ನತವಾದ ಯಾವುದೋ ಒಂದರಿಂದ ತುಂಬಿಹೋಗಿದೆ, ಆ ಭಾವನೆಯನ್ನು ಸಮರ್ಪಕವಾಗಿ ಹೇಳಲು ಲೇಖನಿಗೆ ಶಕ್ತಿಸಾಲದು; ನಾನು ಕಂಡದ್ದರ, ಅನುಭವಿಸಿದ್ದರ ಜೊತೆಗೆ ಹೋಲಿಸಿದರೆ ಮಾತುಗಳು ದುರ್ಬಲವೆನಿಸುತ್ತವೆ. ಇದು ಆನಂದಮಯ ಸ್ಥಿತಿಯಲ್ಲ–ಆ ಶಬ್ದವು ತುಂಬ ಸಾಧಾರಣವಾದುದು–ಅದು ಆನಂದಕ್ಕಿಂತ ಮಿಗಿ ಲಾದುದು, ಹೆಚ್ಚು ರಮಣೀಯವಾದುದು, ಹೆಚ್ಚು ತೀವ್ರವಾದ ಆಳವಾದ ಸಂತೋಷ ವನ್ನುಂಟುಮಾಡುವಂತಹದು ಮತ್ತು ಹೆಚ್ಚು ವೈವಿಧ್ಯಪೂರ್ಣವಾದುದು. ಅಡ್ಮಿರಲ್ ಅವೆಲಾನ್ ಅವರು ಎರಡನೆಯ ಮಹಡಿಯ ಮೇಲೆ ಕಾಣಿಸಿಕೊಂಡಾಗ ಹೇಗಿದ್ದಿತು ಎಂಬುವ ವರ್ಣನೆಗೆ ಮೀರಿದ ಅನುಭವವಾಗಿತ್ತು. ಇಂಥ ಸಂದರ್ಭಗಳಲ್ಲಿ ಮಾತುಗಳು ನಿರುಪಯುಕ್ತ. ಪ್ರಾರ್ಥನೆಯ ಕಾಲದಲ್ಲಿ, ಚರ್ಚಿನ ಮೇಳವು "ಓ ದೇವರೇ, ನಿನ್ನ ಜನರನ್ನು ಕಾಪಾಡು", ಎಂದು ಹಾಡುತ್ತಿದ್ದಾಗ, ಬೀದಿಯಲ್ಲಿ ವಾದ್ಯವಾದ್ಯಗಳ ಗೋಷ್ಠಿ ಯೊಂದು ನುಡಿಸುತ್ತಿದ್ದ ಮಾರ್ಸೆಲೇಸ್‌ನ ವಿಜೃಂಭಿತ ನಾದವು ಎಲ್ಲೆಡೆಗೂ ಹರ ಡಿತು. ಆ ನಾದ ತರಂಗಗಳು ಶಬ್ದಗಳಿಗೆ ಅಸಾಧ್ಯವಾದ ಅದ್ಭುತ ಪರಿಣಾಮವನ್ನುಂಟು ಮಾಡಿದುವು.'[3]

---

[3] 'ನೋವೋ ವ್ರೆಮ್ಯಾ', 1893.

## 2

ಫ್ರಾನ್ಸ್‌ದೇಶದಲ್ಲಿ ಪ್ರವಾಸಕ್ಕಾಗಿ ಬಂದ ರಷ್ಯನ್ ನಾವಿಕರು ಹದಿನೈದು ದಿನಗಳ ಕಾಲ ಒಂದಾದ ಮೇಲೊಂದರಂತೆ ಸಮಾರಂಭಗಳಲ್ಲಿ ಪಾಲ್ಗೊಂಡರು: ಪ್ರತಿ ಸಮಾರಂಭದಲ್ಲಿಯೂ ಅವರು ತಿಂದು, ಕುಡಿದು, ಮಾತಾಡುವುದರಲ್ಲಿ ತೊಡಗಿದ್ದರು. ಅವರು ಬುಧವಾರ ಎಲ್ಲಿ ಏನು ಕುಡಿದರು, ಶನಿವಾರದಂದು ಎಲ್ಲಿ ಏನು ಪಾನಮಾಡಿದರು, ಆಗ ಆಡಿದ ಮಾತುಗಳಾವುವು ಎಂಬುದರ ವರದಿಯನ್ನು ರಷ್ಯದ ಎಲ್ಲೆಡೆಗಳಿಗೂ ತಂತಿಯ ಮೂಲಕ ಕಳಿಸಲಾಗುತ್ತಿತ್ತು. ರಷ್ಯಾದೇಶದ ಕ್ಯಾಪ್ಟನ್ ಒಬ್ಬರು ಫ್ರಾನ್ಸ್‌ಗೆ ಶುಭಕೋರಿ ಮದ್ಯಪಾನವನ್ನು ಪ್ರಾರಂಭಿಸಿದ ವಿಷಯವನ್ನು ತಕ್ಷಣವೇ ಪ್ರಪಂಚದಾದ್ಯಂತ ಬಿತ್ತರಿಸಲಾಯಿತು. ಆಗ ಎದುರಿಗಿದ್ದ ರಷ್ಯದ ಅಡ್ಮಿರಲ್ ಅವರು 'ಸುಂದರ ಫ್ರಾನ್ಸ್‌ಗೆ ಶುಭಕೋರಿ' ಎಂದು ಮದ್ಯಪಾನ ಪ್ರಾರಂಭಿಸಿದ ಮಾತುಗಳನ್ನು ಜಗತ್ತಿನ ಉದ್ದಗಲಕ್ಕೂ ಪ್ರಸಾರಮಾಡಲಾಯಿತು. ಇಷ್ಟೇ ಅಲ್ಲ. ಆಗ ಪತ್ರಿಕೆಗಳ ಉತ್ಸಾಹವೆಷ್ಟಿದ್ದಿತೆಂದರೆ ಪಾನಸಮಾರಂಭಗಳ ಬಗ್ಗೆ ಮಾತ್ರವಲ್ಲ ಔತಣ ಕೂಟಗಳಲ್ಲಿ ಯಾವ ಯಾವ ಖಾದ್ಯಗಳ ತಯಾರಿ ನಡೆದಿತ್ತು, ಅಲ್ಲಿ ಉಪಯೋಗಿಸಿದ್ದ ಮಾಂಸವು ಯಾವ ಯಾವ ಪ್ರಾಣಿಗಳದ್ದು ಇತ್ಯಾದಿಗಳೆಲ್ಲದರ ವಿವರಣೆಯನ್ನೂ ವರದಿಮಾಡುತ್ತಿದ್ದುವು.

ಒಂದು ಪತ್ರಿಕೆಯಲ್ಲಿ ಔತಣವೊಂದನ್ನು ಕಲಾತ್ಮಕವೆಂದು ವರ್ಣಿಸಲಾಗಿತ್ತು. ಅದರ ಮುಂದಿನ ಸಂಚಿಕೆಯಲ್ಲಿ ಔತಣಕೂಟದ ಬಗ್ಗೆ ಹೇಳುತ್ತ "ಅಲ್ಲಿನ ಅಡಿಗೆಯ ವಿಷಯದಲ್ಲಿ ಹೇಳಬೇಕೆಂದರೆ ಅದು ಪರಿಪೂರ್ಣವಾಗಿತ್ತು" ಎಂದುದಲ್ಲದೆ ಅಂದು ತಯಾರಿಸಿದ್ದ ಖಾದ್ಯಗಳ ಪಟ್ಟಿಯನ್ನು ಸೇರಿಸಲಾಗಿತ್ತು. ಅದರ ಮಾರನೆಯ ದಿನದ ಪತ್ರಿಕೆಯಲ್ಲಿ ಬೇರೊಂದು ಅಡಿಗೆಗಳ ಪಟ್ಟಿಯನ್ನೇ ಕೊಡಲಾಗಿತ್ತು. ಈ ರೀತಿ ಪ್ರತಿ ಸಮಾರಂಭದಲ್ಲಿ ತಯಾರಿಸಿದ್ದ ಅಡುಗೆಗಳ ಪಟ್ಟಿಯ ಜೊತೆಗೆ ಅಲ್ಲಿ ಹೀರಿದ ಒಂದು ಬಗೆಯ ವೋಡ್ಕಾ, ಒಂದು ರೀತಿಯಾದ ಬೋರ್ಗೋನ್ ವಯುಕ್ಸ್, ಗ್ರಾಂಡ್ ಮೋಟ್ ಇತ್ಯಾದಿ ಮದ್ಯಗಳ ಹೆಸರುಗಳನ್ನೂ ನಮೂದಿಸಲಾಗಿತ್ತು. ಒಂದು ಇಂಗ್ಲಿಷ್ ಪತ್ರಿಕೆಯಲ್ಲಿ ಈ ಸಮಾರಂಭಗಳಲ್ಲಿ ಕುಡಿದ ಮದ್ಯಗಳ ಪ್ರಮಾಣವನ್ನು ಕೊಡಲಾಗಿತ್ತು; ಆ ಪ್ರಮಾಣವೆಷ್ಟಿದ್ದಿತೆಂದರೆ ರಷ್ಯ ಮತ್ತು ಫ್ರಾನ್ಸ್ ದೇಶಗಳ ಎಲ್ಲ ಕುಡುಕರು ಸೇರಿದರೂ ಅಷ್ಟು ಸ್ವಲ್ಪ ಕಾಲದಲ್ಲಿ ಅಷ್ಟೊಂದು ಮದ್ಯವನ್ನು ಕುಡಿಯಲು ಸಾಧ್ಯವಾಗುತ್ತಿರಲಿಲ್ಲ.

ಭಾಷಣಗಳ ವರದಿಯೂ ಆಗುತ್ತಿತ್ತು, ಆದರೆ ಭಾಷಣಗಳಿಗಿಂತ ಖಾದ್ಯಗಳೇ ವೈವಿಧ್ಯಪೂರ್ಣವಾಗಿರುತ್ತಿದ್ದುವು; ಭಾಷಣಗಳಲ್ಲಿ ಹೇಳಿದ ಮಾತುಗಳನ್ನೇ ಬೇರೆಯ ಕ್ರಮದಲ್ಲಿ ಹೇಳಿರುತ್ತಿದ್ದರು ಅಷ್ಟೆ. ಈ ಎಲ್ಲ ಮಾತುಗಳ ಅರ್ಥವೂ ಒಂದೇ: ನಾವು ಪರಸ್ಪರ ತುಂಬ ಪ್ರೀತಿಸುತ್ತೇವೆ. ಒಬ್ಬರಿಗೆ ಇನ್ನೊಬ್ಬರ ಬಗ್ಗೆ ಇಂತಹ ಪ್ರೀತಿಯಿದೆಯೆಂಬುದು ತಕ್ಷಣ ಹೊಳೆದಾಗ ನಮಗಾಗುವ ಆನಂದ ಅಷ್ಟಿಷ್ಟಲ್ಲ. ನಮ್ಮ ಗುರಿಯು

ಯುದ್ಧವಾಗಲೀ ಪ್ರತೀಕಾರವಾಗಲೀ ಅಥವಾ ನಾವು ಕಳೆದುಕೊಂಡಿರುವ ಪ್ರದೇಶಗಳನ್ನು ಮತ್ತೆ ಪಡೆಯುವುದಾಗಲೀ ಆಗಿಲ್ಲ. ನಮ್ಮ ಗುರಿಯೆಂದರೆ ಶಾಂತಿ, ಶಾಂತಿಯು ಪ್ರಸನ್ನತೆ, ಶಾಂತಿಯಿಂದಾಗುವ ಸುಭದ್ರತೆ. ಯೂರೋಪಿನ ಸುಖ ಮತ್ತು ಶಾಂತಿಗಳು ರಷ್ಯಾದ ಸಾರ್ವಭೌಮ ಸಾಮ್ರಾಜ್ಞಿಯರು ಧೀರ್ಘಕಾಲ ಬಾಳಲಿ: ನಾವು ಅವರನ್ನೂ ಶಾಂತಿಯನ್ನೂ ಪ್ರೀತಿಸುತ್ತೇವೆ! ಗಣರಾಜ್ಯದ ಅಧ್ಯಕ್ಷರೂ ಅವರ ಪತ್ನಿಯೂ ದೀರ್ಘಕಾಲ ಬಾಳಲಿ; ನಾವು ಅವರನ್ನೂ ಪ್ರೀತಿಸುತ್ತೇವೆ: ಹಾಗೆಯೇ ಶಾಂತಿಯನ್ನು. ಫ್ರಾನ್ಸ್ ಮತ್ತು ರಷ್ಯಾ ದೇಶಗಳೂ, ಅವುಗಳ ಯುದ್ಧ ನೌಕೆಗಳೂ ಸೈನ್ಯಗಳೂ ದೀರ್ಘಕಾಲ ಬಾಳಲಿ: ನಾವು ಸೈನ್ಯವನ್ನು ಪ್ರೀತಿಸುತ್ತೇವೆ, ಶಾಂತಿಯನ್ನೂ ಪ್ರೀತಿಸುತ್ತೇವೆ, ಈ ಸೈನ್ಯ ತುಕಡಿಯ ದಳಪತಿಯವರನ್ನೂ ಪ್ರೀತಿಸುತ್ತೇವೆ.

ಭಾಷಣಗಳು ಕೊನೆಯಾಗುತ್ತಿದ್ದುದು ಪಲ್ಲವಿಯಂತಿದ್ದ 'ಟೌಲಾನ್–ಕ್ರೋನ್ಸ್ಟಾಟ್' ಅಥವಾ 'ಕ್ರೋನ್ಸ್ಟಾಟ್ – ಟೌಲಾನ್' ಎಂಬ ಪದಗಳೊಡನೆ. ಅಷ್ಟೊಂದು ವೈವಿಧ್ಯಪೂರ್ಣ ಖಾದ್ಯಗಳನ್ನೂ ಮದ್ಯಗಳನ್ನೂ ಭಕ್ಷಿಸಿದ್ದ ಆ ಊರುಗಳ ಹೆಸರುಗಳನ್ನು ಉಚ್ಚರಿಸುವಾಗ ಈ ಎರಡೂ ರಾಷ್ಟ್ರಗಳ ಪ್ರತಿನಿಧಿಗಳು ಮಾಡಿದ ಉದಾತ್ತವಾದ ವೀರಕೃತ್ಯಗಳನ್ನು ನೆನೆಸಿಕೊಳ್ಳುತ್ತಿರುವಂತೆ ತೋರುತ್ತಿತ್ತು – ಆ ಶಬ್ದಗಳನ್ನುಚ್ಚರಿಸಿದಾಗ ಮಿಕ್ಕಾವುದನ್ನೂ ಹೇಳದಿದ್ದರೂ ಎಲ್ಲವೂ ಅರ್ಥವಾಗುತ್ತಿತ್ತು. ನಾವು ಪರಸ್ಪರರನ್ನು ಪ್ರೀತಿಸುತ್ತೇವೆ. ಶಾಂತಿಯನ್ನು ಪ್ರೀತಿಸುತ್ತೇವೆ: ಕ್ರೋನ್ಸ್ಟಾಟ್ – ಟೌಲಾನ್ ಇದಕ್ಕೆ ಇನ್ನೇನನ್ನು ತಾನೇ ಸೇರಿಸಬಹುದು?...... ಅದೂ ಎರಡೂ ರಾಷ್ಟ್ರಗೀತೆಗಳನ್ನು ಒಟ್ಟಿಗೇ ವಾದ್ಯವೃಂದವು ನುಡಿಸುವಾಗ? ಒಂದು ಜಾರ್ ದೊರೆಯನ್ನು ಹೊಗಳಿ ಅವನಿಗೆ ಸರ್ವಸುಖಗಳನ್ನೂ ನೀಡುವಂತೆ ದೇವರನ್ನು ಪ್ರಾರ್ಥಿಸುತ್ತಿದ್ದರೆ, ಮತ್ತೊಂದು ಜಾರ್ ದೇಶಗಳನ್ನಷ್ಟೇ ಅಲ್ಲ ಎಲ್ಲ ರಾಜರನ್ನೂ ಶಪಿಸಿ ಅವರನ್ನು ನಾಶಪಡಿಸುವಂತೆ ಪ್ರಾರ್ಥಿಸುತ್ತಿತ್ತು.

ತಮ್ಮ ಪ್ರೀತಿಯ ಭಾವನೆಯನ್ನು ಸುಂದರವಾಗಿ ಅಭಿವ್ಯಕ್ತಿಗೊಳಿಸಿದವರಿಗೆ ಅನೇಕ ಉನ್ನತ ಸ್ಥಾನಗಳೂ ಪದವಿಗಳೂ ದೊರೆತವು. ಇಂತಹುದೇ ಮತ್ತೆ ಕೆಲವರಿಗೆ ಅಥವಾ ಅವರ ತೀವ್ರವಾದ ಪ್ರೇಮಭಾವಕ್ಕಾಗಿ, ವಿಚಿತ್ರವಾದ ಅನಿರೀಕ್ಷಿತವಾದ ಕಾಣಿಕೆಗಳು ದೊರೆತವು. ಈ ರೀತಿಯಲ್ಲಿ ಫ್ರೆಂಚ್ ತುಕಡಿಯು ರಷ್ಯದ ಜಾರ್‌ಗೆ ಒಂದು ಬಗೆಯ ಚಿನ್ನದ ಹೊತ್ತಗೆಯೊಂದನ್ನು ನೀಡಿತು. ಅದರಲ್ಲಿ ಪ್ರಾಯಶಃ 'ಏನನ್ನೂ ಬರೆದಿರಲಿಲ್ಲ, ಬರೆದಿದ್ದರೂ ಅದು ಯಾರಿಗೂ ತಿಳಿಯಬೇಕಾದಂತಹುದಲ್ಲ; ರಷ್ಯನ್ ತುಕಡಿಯ ದಳಪತಿಗೆ ಇದಕ್ಕಿಂತಲೂ ವಿಶಿಷ್ಟತರವಾದ ಕಾಣಿಕೆಯನ್ನು ನೀಡಲಾಯಿತು. ಇತರ ಅನೇಕ ಅನಿರೀಕ್ಷಿತ ಕಾಣಿಕೆಗಳೊಂದಿಗೆ ಅಲ್ಯೂಮಿನಿಯಂನಿಂದ ತಯಾರಿಸಿ ಹೂವುಗಳಿಂದ ಅಲಂಕರಿಸಲ್ಪಟ್ಟ ನೇಗಿಲೊಂದನ್ನು ನೀಡಲಾಯಿತು.

ಈ ವಿಚಿತ್ರ ನಡವಳಿಕೆಯ ಜೊತೆಗೆ ಹೆಚ್ಚು ವಿಚಿತ್ರವೆನಿಸುವ ಧಾರ್ಮಿಕವಿಧಿಗಳೂ ಸಾರ್ವಜನಿಕ ಪ್ರಾರ್ಥನೆಗಳೂ ಸೇರಿದುವು: ಇವುಗಳಿಗೆಲ್ಲ ಬಹುದಿವಸಗಳಿಂದ ಫ್ರಾನ್ಸ್ ಬಗ್ಗಿಹೋಗಿರುವಂತೆ ಕಂಡಿತು. ಅಷ್ಟು ಅಲ್ಪಾವಧಿಯಲ್ಲಿ ಅಷ್ಟೊಂದು ಸಂಖ್ಯೆಯಲ್ಲಿ ಪ್ರಾರ್ಥನೆಗಳು ಕನ್‌ಕಾರ್‌ಡಾಟ್‌ನಿಂದ[4] ಈಚೆಗೆ ನಡೆದಿರಲಿಲ್ಲ. ಫ್ರೆಂಚರು ಇದ್ದಕ್ಕಿದ್ದಂತೆಯೇ ಭಕ್ತರಾಗಿಬಿಟ್ಟರು: ತಾವು ಹಿಂದೆ ಮೂಢನಂಬಿಕೆಯ ಸಾಧನಗಳೆಂದು ತಮ್ಮ ಶಾಲೆಗಳಿಂದ ತೆಗೆದು ಹಾಕಿದ್ದ ಪಟಗಳನ್ನೇ ತುಂಬ ಜಾಗರೂಕತೆಯಿಂದ ರಷ್ಯನ್ ನಾವಿಕರ ಕೋಣೆಗಳಲ್ಲಿ ತೂಗುಹಾಕಿ ನಿರಂತರವಾಗಿ ಪ್ರಾರ್ಥನೆ ಸಲ್ಲಿಸಿದರು. ಎಲ್ಲ ಕಡೆಗಳಲ್ಲಿಯೂ ನಡೆಯಬೇಕಾಗಿದ್ದ ಪ್ರಾರ್ಥನೆಗಳನ್ನು ಕಾರ್ಡಿನಲ್‌ಗಳೂ ಬಿಷಪ್‌ರೂ ನಿಗದಿಗೊಳಿಸಿದ್ದಲ್ಲದೆ ತಾವೇ ವಿಚಿತ್ರರೀತಿಯಲ್ಲಿ ಪ್ರಾರ್ಥನೆಗಳನ್ನು ಸಲ್ಲಿಸಿದರು.

ಹೀಗೆ ಟೌಲಾನ್‌ನಲ್ಲಿ ಒಬ್ಬ ಬಿಷಪ್‌ರು 'ಜೊರಿಗಿಬೆರಿ' ಎಂಬ ಉಕ್ಕುನೌಕೆಯ ಕಾರ್ಯಾರಂಭದಂದು ಶಾಂತಿದೇವತೆಯನ್ನು ಕುರಿತು ಮಾಡಿದ ಪ್ರಾರ್ಥನೆಯು ಸಮಯ ಬಿದ್ದರೆ ಯುದ್ಧದೇವತೆಗೂ ಅನ್ವಯಿಸುವಂತಿತ್ತು. ಹೊಸದಾಗಿ ಕಾರ್ಯಾರಂಭ ಮಾಡಿದ ನೌಕೆಯನ್ನು ಕುರಿತು ಆತ ಈ ರೀತಿ ಹೇಳಿದ: ಅದರ ಗುರಿಯಾವುದೋ ದೇವರೇ ಬಲ್ಲ ತನ್ನ ದೈತ್ಯಗರ್ಭದಿಂದ ಸಾವನ್ನುಗುಳುತ್ತದೆಯೋ ತಿಳಿಯದು. ಆದರೆ ಶಾಂತಿದೇವತೆಯನ್ನು ಈದಿನ ಪ್ರಾರ್ಥಿಸಿದ ನಂತರ ಮುಂದೆ ಯುದ್ಧ ದೇವತೆಯನ್ನು ಬಿಡಬೇಕಾದ ಪ್ರಸಂಗ ಬಂದರೆ. ಈ ದಿನ ಯಾವ ಯುದ್ಧನೌಕೆಗಳ ಪರಸ್ಪರ ಸೋದರ ಭಾವದಿಂದ ನಮ್ಮವರೊಂದಿಗೆ ಒಂದಾಗಿದ್ದಾರೆಯೋ ಆ ನೌಕೆಗಳೊಡನೆ 'ಜೊರಿಗಿಬೆರಿ'ಯು ಸೇರಿ ಶತ್ರುಗಳನ್ನೆದುರಿಸುತ್ತದೆಂಬುದು ನಮಗೆ ನಿಶ್ಚಿತವಾಗಿ ಮನವರಿಕೆಯಾಗಿದೆ. ಆದರೆ ಹಾಗಾಗದಂತೆ ಇಂದಿನ ಸಮಾರಂಭವು ನಮಗೆ ಗ್ರಾಂಡ್ ಡ್ಯೂಕ್ ಕಾನ್‌ಸ್ಟಾಂಟೈನ್[5] 'ಕ್ವಿರಿನಾಲ್'ನ ಕಾರ್ಯಾರಂಭದಂದು ಇಲ್ಲಿದ್ದ ಪ್ರಸಂಗದ ನೆನಪಿನಂತೆ ಶಾಂತಿಯುತವಾಗಿ ಮನಸ್ಸಿನಲ್ಲುಳಿಯಲಿ, ಫ್ರಾನ್ಸ್ ಹಾಗೂ ರಷ್ಯಾಗಳ ಸ್ನೇಹವು ಈ ಎರಡು ದೇಶಗಳೂ ಶಾಂತಿರಕ್ಷಕರಾಗುವಂತೆ ಮಾಡಲಿ. ...

ಈ ಮಧ್ಯೆ ಸಾವಿರಾರು ತಂತಿಗಳು ರಷ್ಯಾದಿಂದ ಫ್ರಾನ್ಸಿಗೂ ಫ್ರಾನ್ಸ್‌ನಿಂದ ರಷ್ಯಾಕ್ಕೂ ಹಾರಾಡುತ್ತಿದ್ದುವು. ಫ್ರೆಂಚ್ ಮಹಿಳೆಯರು ರಷ್ಯನ್ ಮಹಿಳೆಯರಿಗೆ ಶುಭಾಶಯಗಳನ್ನರ್ಪಿಸಿದಾಗ ರಷ್ಯನ್ ಮಹಿಳೆಯರು ಫ್ರೆಂಚ್ ಮಹಿಳೆಯರಿಗೆ ಕೃತಜ್ಞತೆ

---

4 ಕನ್‌ಕಾರ್‌ಡಾಟ್ (Concordat) ಎಂದರೆ ಚರ್ಚ್‌ಗೂ ಸರ್ಕಾರಕ್ಕೂ ನಡೆಯುವ ಒಪ್ಪಂದ. ಇಲ್ಲಿ ಸೂಚಿಸಲ್ಪಟ್ಟಿರುವುದು 1801 ರಲ್ಲಿ ನಡೆದ ನೆಪೋಲಿಯನ್ ಹಾಗೂ ಪೋಪ್‌ಪಯಸ್ ಇವರ ನಡುವಣ ಒಪ್ಪಂದವನ್ನು.

5 ಕಾನ್‌ಸ್ಟಾಂಟೈನ್ ನಿಕೋಲೆವಿಚ್ ಮೊದಲ ನಿಕೋಲಾಸ್‌ನ ಎರಡನೆಯ ಮಗ. ಅವನು ಮುಖ್ಯ ಸೇನಾಪತಿ ಹಾಗೂ ನೌಕಾಪಡೆಯ ಅಡ್ಮಿರಲ್ ಆಗಿದ್ದು, 1857 ರಲ್ಲಿ ಟೌಲಾನ್‌ಗೆ ಭೇಟಿಯಿತ್ತಿದ್ದ.

ಗಳನ್ನು ಸೂಚಿಸಿದರು. ರಷ್ಯನ್ ನಟವರ್ಗವೊಂದು ಫ್ರೆಂಚ್ ನಟರಿಗೆ ಶುಭಕೋರಿದಾಗ, ತಮ್ಮ ಹೃದಯಾಳದಲ್ಲಿ ಅವರ ಶುಭಾಶಯಗಳನ್ನು ಇರಿಸಿಕೊಂಡಿರುವುದಾಗಿ ಫ್ರೆಂಚ್ ನಟರು ಅವರಿಗೆ ತಿಳಿಸಿದರು. ಯಾವುದೋ ಒಂದು ಊರಿನ ಜಿಲ್ಲಾ ನ್ಯಾಯಾಲಯದಲ್ಲಿದ್ದ ಕಾನೂನು ಪದವೀಧರರು ಫ್ರೆಂಚ್ ರಾಷ್ಟ್ರದ ಬಗೆಗೆ ತಮಗಾಗಿರುವ ಆನಂದವನ್ನು ವ್ಯಕ್ತಪಡಿಸಿದರು. ಯಾರೋ ಒಬ್ಬರು ದಳಪತಿ ಮತ್ತೊಬ್ಬ ದಳಪತಿಯ ಪತ್ನಿಗೆ ಕೃತಜ್ಞತೆಯನ್ನರ್ಪಿಸಿದರು. ಆಗ ಆಕೆ ಈ ದಳಪತಿಗೆ ತಾವು ರಷ್ಯನ್ ರಾಷ್ಟ್ರದ ಬಗ್ಗೆ ಪಡೆದಿರುವ ಆಳವಾದ ಭಾವನೆಯನ್ನು ತೋಡಿಕೊಂಡರು. ರಷ್ಯನ್ ಮಕ್ಕಳು ಫ್ರೆಂಚ್ ಮಕ್ಕಳಿಗೆ ಪದ್ಯದಲ್ಲಿ ಶುಭಾಶಯಗಳನ್ನರ್ಪಿಸಿದಾಗ, ಫ್ರೆಂಚ್ ಮಕ್ಕಳು ಗದ್ಯ ಪದ್ಯಗಳೆರಡರಲ್ಲೂ ಉತ್ತರಿಸಿದರು. ಶಿಕ್ಷಕರೂ ಹಾಗೂ ಸಾಹಿತಿಗಳೂ ಶಿಕ್ಷಣ ಮಂತ್ರಿಗಳ ನೇತೃತ್ವದಲ್ಲಿ ಫ್ರೆಂಚ್ ಶಿಕ್ಷಣಮಂತ್ರಿಗಳಿಗೆ ತಾವು ಫ್ರಾನ್ಸ್ ಜನತೆಯ ಬಗ್ಗೆ ತಾವು ಇದ್ದಕ್ಕಿದ್ದಂತೆ ಪಡೆದ ಪ್ರೇಮಭಾವವನ್ನು ವ್ಯಕ್ತಪಡಿಸಿದರು. ಪ್ರಾಣರಕ್ಷಕ ಸಂಘವು ಫ್ರೆಂಚ್ ಜನತೆಯ ಬಗ್ಗೆ ತಮ್ಮ ಆಳವಾದ ಪ್ರೀತಿಯನ್ನು ಸೂಚಿಸಿದರು, ಅಂತೆಯೇ ಕಜಾನ್ ಪುರಸಭೆಯೂ ಇಂತಹುದೇ ನಿರ್ಣಯವನ್ನು ಅನುಮೋದಿಸಿತು. ಫ್ರಾನ್ಸ್‌ನ ಎಲ್ಲ ಆರ್ಚಿಬಿಷಪ್ ಹಾಗೂ ಕಾರ್ಡಿನಲ್‌ಗಳ ಹೃದಯಗಳಲ್ಲಿ ರಷ್ಯದ ಬಗ್ಗೆ ಮೂರನೆಯ ಅಲೆಕ್ಸಾಂಡರ್ ಚಕ್ರವರ್ತಿಗಳ ಬಗ್ಗೆ ಹಾಗೂ ಅವರ ರಾಜಕುಟುಂಬದ ಬಗ್ಗೆ ಎಂತಹ ಪ್ರೇಮವು ಅಂತರ್ಗತವಾಗಿದೆಯೆಂಬುದನ್ನೂ, ರಷ್ಯನ್ ಹಾಗೂ ಫ್ರೆಂಚ್ ಗುರುಗಳಿಗೆ ಪರಮ ಪವಿತ್ರ ವರ್ಜಿನ್ ಮೇರಿಯ ಬಗ್ಗೆ ಭಕ್ತಿಯಿದೆಯಾದ್ದರಿಂದ ತಮ್ಮಿರ್ವರ ಮತಗಳು ಒಂದೇ ಎಂದೂ ಅರಾಸ್‌ನ ಧಾರ್ಮಿಕಗುರುವರ್ಗವು ರಷ್ಯದ ಪರಮಪೂಜ್ಯ ರಾಜಪುರೋಹಿತರಿಗೆ ತಿಳಿಸಿತು: ಅದಕ್ಕೆ ಪ್ರತ್ಯುತ್ತರವಾಗಿ ಪರಮಪೂಜ್ಯ ರಾಜಪುರೋಹಿತರು ಚಕ್ರವರ್ತಿ ಕುಟುಂಬಕ್ಕಾಗಿ ಫ್ರೆಂಚ್ ಗುರುವರ್ಗವು ಸಲ್ಲಿಸಿದ ಪ್ರಾರ್ಥನೆಯು ತಮ್ಮ ಜಾರ್ ಚಕ್ರವರ್ತಿಗಳ ಬಗ್ಗೆ ಪ್ರೇಮಾದರಗಳನ್ನು ಪಡೆದ ರಷ್ಯನ್ ಜನರೆಲ್ಲರ ಹೃದಯಗಳಲ್ಲಿ ಸಂತೋಷಕರವಾಗಿ ಮಾರ್ದನಿಸುತ್ತಿದೆಯೆಂದೂ, ರಷ್ಯನರು ಪರಮ ಪೂಜ್ಯ ವರ್ಜಿನಳನ್ನು (Virgin) ಹೇಗೆ ಪೂಜಿಸುತ್ತಾರೆಯೋ ಅಂತೆಯೇ ಜೀವಿತಕಾಲದಲ್ಲಾಗಲೀ ಸಾವಿನಲ್ಲಾಗಲೀ ಫ್ರೆಂಚ್‌ರಲ್ಲಿ ನಂಬಿಕೆಯಿಟ್ಟಿದ್ದಾರೆಂದೂ ತಿಳಿಸಿದರು. ಎಲ್ಲ ರೀತಿಯ ದಳಪತಿಗಳು, ತಂತಿ ಕಚೇರಿಯ ಗುಮಾಸ್ತವರ್ಗ, ಹಾಗೂ ಸಗಟುವ್ಯಾಪಾರಿಗಳೆಲ್ಲರೂ ಇಂತಹುದೇ ಪ್ರಕಟಣೆಗಳನ್ನು ಮಾಡಿದರು. ಎಲ್ಲರೂ ಯಾರನ್ನೋ ಯಾವುದಕ್ಕೋ ಅಭಿನಂದಿಸಿದರು, ಯಾರಿಗೋ ಯಾವುದಕ್ಕಾಗಿಯೋ ಕೃತಜ್ಞತೆಯನ್ನು ಸಲ್ಲಿಸಿದರು.[6]

---

6 ಉದಾಹರಣೆಗಾಗಿ ರಷ್ಯನ್ ವಿದ್ಯಾರ್ಥಿಗಳು ಪ್ಯಾರಿಸ್‌ಗೆ ಕಳಿಸಿದ ಈ ಕೆಳಗಿನ ಪ್ರತಿಭಟನೆಯ ವಿಷಯ ನನಗೆ ಗೊತ್ತು, ಅದನ್ನು ಯಾವ ಪತ್ರಿಕೆಯೂ ಪ್ರಕಟಿಸಲಿಲ್ಲ.

ಫ್ರೆಂಚ್ ವಿದ್ಯಾರ್ಥಿಗಳಿಗೊಂದು ಬಹಿರಂಗ ಪತ್ರ.

'ಮಾಸ್ಕೋವಿನ ಕಾನೂನು ವಿದ್ಯಾರ್ಥಿಗಳ ಗುಂಪೊಂದು ವಿಶ್ವವಿದ್ಯಾನಿಲಯದ ಕುಲಪತಿಗಳ ನಾಯಕತ್ವದಲ್ಲಿ ಟೌಲಾನ್ ಸಮಾರಂಭಗಳ ಬಗ್ಗೆ ಎಲ್ಲ ಮಾಸ್ಕೋಗಳ ವಿದ್ಯಾರ್ಥಿಗಳ ಹೆಸರಿನಲ್ಲಿ ಹೇಳಿಕೆಯೊಂದನ್ನು ನೀಡುವ ಉದ್ಧಟತನವನ್ನು ಪ್ರದರ್ಶಿಸಿದ್ದಾರೆ.

'ನಾನಾ ವಲಯ ವಿದ್ಯಾರ್ಥಿಗಳ ಮಾಸ್ಕೋ ವಿದ್ಯಾರ್ಥಿಸಂಘದ ಪ್ರತಿನಿಧಿಗಳಾದ ನಾವು ಆ ಗುಂಪು ಕಲ್ಪಿಸಿಕೊಂಡ ಅಧಿಕಾರವನ್ನೂ, ಅದರ ಮತ್ತು ಫ್ರೆಂಚ್ ವಿದ್ಯಾರ್ಥಿಗಳ ನಡುವೆ ನಡೆದಿರುವ ಶುಭಾಶಯ ವಿನಿಮಯವನ್ನೂ ತೀವ್ರವಾಗಿ ಖಂಡಿಸುತ್ತೇವೆ. ನಮಗೂ ಫ್ರಾನ್ಸಿನ ಬಗ್ಗೆ ಪ್ರೀತ್ಯಾದರಗಳಿವೆ, ಆಳವಾದ ಗೌರವವಿದೆ. ಆದರೆ ನಮಗೀ ಭಾವನೆಗಳಿರುವುದು ಅದೊಂದು ಉನ್ನತ ರಾಷ್ಟ್ರವಾಗಿರುವುದರಿಂದ. ಹಿಂದೆ ಅದು ಇಡೀ ಜಗತ್ತಿಗೇ ಉನ್ನತ ಧ್ಯೇಯಗಳಾದ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವಗಳನ್ನು ಎತ್ತಿ ಹಿಡಿದಿದೆ ಎಂಬ ಕಾರಣದಿಂದ ಮತ್ತು ಈ ಉನ್ನತ ಆದರ್ಶಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಲು ಧೈರ್ಯದಿಂದ ಪ್ರಯತ್ನಿಸಿದ ಮುಖ್ಯ ರಾಷ್ಟ್ರವೆನ್ನುವುದರಿಂದ ರಷ್ಯದ ಯುವಕ ವೃಂದದ ಉದಾತ್ತ ಚೇತನಗಳು ಫ್ರಾನ್ಸನ್ನು ಮಾನವಜನಾಂಗದ ಕಲ್ಯಾಣಕ್ಕಾಗಿ ಶ್ರಮಿಸುವುದರಲ್ಲಿ ನಾಯಕಸ್ಥಾನದಲ್ಲಿದೆಯೆಂದು ಸದಾ ಒಪ್ಪಿಕೊಳ್ಳಲು ಸಿದ್ಧವಾಗಿವೆ. ಆದರೆ ಅಂತಹ ಭಾವನೆಯನ್ನು ವ್ಯಕ್ತಪಡಿಸಲು ಕ್ರೋನ್‌ಸ್ಟಾಟ್ ಮತ್ತು ಟೌಲಾನ್‌ನಂತಹ ಸಮಾರಂಭಗಳು ಸರಿಯಾದ ಕಾಲವೆಂದು ನಾವು ಭಾವಿಸುವುದಿಲ್ಲ.

'ಅದರ ಬದಲು, ಈ ಸಮಾರಂಭಗಳು ಫ್ರಾನ್ಸ್ ತನ್ನ ಶ್ರೇಷ್ಠವಾದ ಇತಿಹಾಸದ ಪಾತ್ರವನ್ನು ತೊರೆದ ಸ್ಥಿತಿಯನ್ನು ಸೂಚಿಸುತ್ತವೆ – ಆದರೆ ಇದು ಕೇವಲ ತಾತ್ಕಾಲಿಕವಾಗಿರಲೆಂದು ನಾವು ಆಶಿಸುತ್ತೇವೆ. ಹಿಂದೊಮ್ಮೆ ಸರ್ವಾಧಿಕಾರದ ಶೃಂಖಲೆಗಳನ್ನು ಕಿತ್ತೊಗೆಯಲು ಜಗತ್ತಿಗೇ ಕರೆಕೊಟ್ಟು, ಸ್ವತಂತ್ರವಾಗಲು ಹೋರಾಡುವ ಯಾರಿಗೇ ಆಗಲೀ ಸಹಾಯ ಹಸ್ತವನ್ನು ನೀಡಲು ಮುಂದೆ ಬಂದಿದ್ದ ಈ ರಾಷ್ಟ್ರವು. ಜನರ ಸಹಜ ಬೆಳವಣಿಗೆಯನ್ನು ಕ್ರಮಬದ್ಧವಾಗಿ ಕುಂಠಿತಗೊಳಿಸಿ, ಜ್ಞಾನ ಸ್ವಾತಂತ್ರ್ಯ ಹಾಗೂ ಸ್ವಾಯತತ್ತೆಗಳನ್ನು ಪಡೆಯಬೇಕೆನ್ನುವ ಜನತೆಯ ಆಶೋತ್ತರಗಳನ್ನು ನಿರ್ದಯವಾಗಿಯೂ ಇತಿಮಿತಿಯಿಲ್ಲದೆಯೂ ತುಳಿಯುತ್ತಿರುವ ರಷ್ಯಾ ಸರ್ಕಾರಕ್ಕೆ ಈಗ ಧೂಪವನ್ನು ಹಾಕುತ್ತಿದೆ. ಮೂರನೆಯ ನೆಪೋಲಿಯನ್ ಹಾಗೂ ಬಿಸ್ಮಾರ್ಕ್‌ರಿಂದ ಸೃಷ್ಟಿಸಲ್ಪಟ್ಟ ಬೃಹದ್ರಾಷ್ಟ್ರಗಳಾದ ಫ್ರಾನ್ಸ್ ಮತ್ತು ಜರ್ಮನಿಗಳ ನಡುವಣ ದ್ವೇಷ ನಾಟಕದ ಒಂದು ಅಂಕವೇ ಟೌಲಾನ್ (ಪ್ರದರ್ಶನಗಳು). ಈ ದ್ವೇಷ ಭಾವನೆಯು ಇಡೀ ಯೂರೋಪನ್ನೇ ತನ್ನ ಕಪಿಮುಷ್ಟಿಯಲ್ಲಿ ಜಗಿತಗೊಳಿಸಿದೆ. ಇದರಿಂದಾಗಿ ರಷ್ಯದ ಸರ್ವಾಧಿಕಾರತ್ವವು ಜಗತ್ತಿನ ರಾಜಕೀಯ ಆದರ್ಶಗಳನ್ನೇ ನಿಯಂತ್ರಿಸುವ ಶಕ್ತಿಯಾದಂತಾಗಿದೆ (ಈ ಸರ್ವಾಧಿಕಾರತ್ವವು ಸದಾಕಾಲವೂ ಸ್ವಾತಂತ್ರ್ಯದ ಬದಲು ನಿರಂಕುಶಾಧಿಕಾರಕ್ಕೂ, ಶೋಷಿತವರ್ಗದ ಬದಲು ಶೋಷಕರಿಗೂ ಬೆಂಬಲ ಕೊಡುತ್ತಾ ಬಂದಿದೆ). ಈ ಸಮಾರಂಭಗಳು ನಮ್ಮ ರಾಷ್ಟ್ರದ ಬಗ್ಗೆ ನಮಗೆ ನೋವಿನ ಭಾವನೆಯನ್ನೂ ಫ್ರೆಂಚ್ ಸಮಾಜದ ಗಣನೀಯ ಭಾಗದ ಜನರ ಕುರುಡುತನಕ್ಕಾಗಿ ವಿಷಾದ ಭಾವನೆಯನ್ನೂ ಉಂಟುಮಾಡಿದೆ.

'ಫ್ರಾನ್ಸ್‌ನ ಯಾವ ಪೀಳಿಗೆಯೂ ರಾಷ್ಟ್ರೀಯ ದರ್ಪದಿಂದ ಮಾರುಹೋಗದೆ. ಮಾನವ ಕಲ್ಯಾಣದತ್ತ ಸಾಗುವಂತಹ ಸಾಮಾಜಿಕ ಪರಿಸ್ಥಿತಿಗಳನ್ನುಂಟುಮಾಡಲು ಹೋರಾಡುತ್ತದೆಂದೂ ಈಗಿನ ಘಟನೆಗಳಿಗೆ ಯಾವ ಅರ್ಥವನ್ನು ನೀಡಬೇಕು ಅವುಗಳ ಬಗ್ಗೆ ಯಾವ ಮನೋಭಾವನೆಯನ್ನು ತಾಳಬೇಕು ಎಂಬುದನ್ನು ಅರಿತಿದೆಯೆಂದೂ ನಾವು ನಂಬಿದ್ದೇವೆ.

'ಮಾಸ್ಕೋ ವಿದ್ಯಾರ್ಥಿಗಳ ಇಪ್ಪತ್ತನಾಲ್ಕು ಸಂಘಗಳು ಸೇರ್ಪಡೆಯಾದ ಕೇಂದ್ರ ಸಂಘ'.

ಈ ಉತ್ಸಾಹೋದ್ಯೋಗವು ಎಷ್ಟಿತ್ತೆಂದರೆ ಭಾರಿ ಅಸಾಮಾನ್ಯ ಕೃತಿಗಳು ನಡೆದವು. ಯಾರೂ ಇದೆಷ್ಟು ವಿಚಿತ್ರವಾದದ್ದೆಂಬುದನ್ನು ಗಮನಿಸಲಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ, ಇವುಗಳನ್ನು ಎಲ್ಲರೂ ಅನುಮೋದಿಸಿ ಸಂತೋಷಿಸುವುದಲ್ಲದೆ. ತಾವು ಹಿಂದೆ ಬೀಳಬಾರದೆಂದು ಆದಷ್ಟು ಬೇಗ ಇಂತಹುದೇ ಕಾರ್ಯಗಳನ್ನು ಮಾಡಲು ಆತುರಪಟ್ಟರು. ಇಂತಹ ಹುಚ್ಚು ಕೃತಿಗಳ ಮೂರ್ಖತೆಯ ಬಗ್ಗೆ ಯಾರಾದರೂ ಪ್ರತಿಭಟನೆಯನ್ನು ಮಾತಿನ ಮೂಲಕವಾಗಿಯೋ, ಬರಹದ ಮೂಲಕವಾಗಿಯೋ, ಮುದ್ರಣದ ಮೂಲಕವಾಗಿಯೋ ವ್ಯಕ್ತಪಡಿಸಿದಾಗ ಅದನ್ನು ಅಡಗಿಸಿಬಿಡುತ್ತಿದ್ದರು, ಇಲ್ಲ ಅವನ್ನು ಅಲ್ಲಗಳೆಯುತ್ತಿದ್ದರು.

ಈ ಸಮಾರಂಭಗಳಿಂದಾಗಿ ಲಕ್ಷಾಂತರ ಜನರ ದುಡಿಮೆಯ ದಿನಗಳು ಹಾಳಾದುದರ ಬಗ್ಗೆಯಾಗಲೀ ಸಮಾರಂಭಗಳಲ್ಲಿ ಭಾಗವಹಿಸಿದವರ ಸಂಪೂರ್ಣ ಕುಡುಕುತನದ ಬಗೆ ಯಾಗಲೀ (ಇದರ ಬಗ್ಗೆ ಅಧಿಕಾರಿಗಳೂ ಗಮನಿಸದುದನ್ನಾಗಲೀ), ಅಲ್ಲಿ ಮಾಡಿದ ಅರ್ಥಹೀನ ಭಾಷಣಗಳ ಬಗ್ಗೆಯಾಗಲೀ. ನಡೆಸಿದ ಹುಚ್ಚು ಹಾಗೂ ಕ್ರೂರ ಕೃತ್ಯಗಳನ್ನಾಗಲೀ, ಇವುಗಳ ಬಗ್ಗೆ ಯಾರೂ ಗಮನವೀಯದುದನ್ನಾಗಲೀ ಕುರಿತು ಹೇಳುವಂತಹುದು ಏನೂ ಉಳಿದಿಲ್ಲ.

ಈ ಸಮಾರಂಭಗಳಲ್ಲಿ ಹತ್ತಾರು ಜನಗಳನ್ನು ಸಾಯುವಂತೆ ತುಳಿದಿದ್ದರೂ ಯಾರೂ ಅದರ ಬಗ್ಗೆ ಮಾತನಾಡುವುದನ್ನು ಅವಶ್ಯಕತೆಯೆಂದು ಬಗೆಯಲಿಲ್ಲ. ಈಗ ಪ್ಯಾರಿಸ್‌ನಲ್ಲಿ ರಷ್ಯನ್ ನಾವಿಕರ ಆಸೆಯನ್ನು ಪೂರೈಸಲೋಸುಗ ತನ್ನ ಕರ್ತವ್ಯವನ್ನು ಕಡೆಗಣಿಸಲಾರದ ಸ್ತ್ರೀಯೊಬ್ಬಳೂ ಸಿಗಲಾರಳೆಂದು ನೃತ್ಯಕೂಟವೊಂದರಲ್ಲಿ ಫ್ರೆಂಚ್ ಪ್ರಜೆಯೊಬ್ಬನು ತನಗೆ ತಿಳಿಸಿದುದಾಗಿ ಓರ್ವ ವರದಿಗಾರರು ಬರೆದರು. ಆದರೆ ಇವುಗಳು ಗಮನಿಸಲನರ್ಹವೆನ್ನುವಂತೆ ಯಾರ ಗಮನಕ್ಕೂ ಬಾರದೇ ಹೋಯಿತು. ಇಷ್ಟೇ ಅಲ್ಲದೆ ಹುಚ್ಚೆಂದು ನಿಶ್ಚಯವಾಗಿ ಹೇಳಬಹುದಾದಂತಹ ಪ್ರಸಂಗಗಳೂ ಇವೆ. ಉದಾಹರಣೆಗೆ. ಒಬ್ಬ ಹೆಂಗಸು ಫ್ರಾನ್ಸ್ ಮತ್ತು ರಷ್ಯನ್ ರಾಷ್ಟ್ರಧ್ವಜಗಳ ಬಣ್ಣಗಳನ್ನುಳ್ಳ ವಸ್ತ್ರವನ್ನುಟ್ಟು, ನಾವಿಕರು ಬರುವುದನ್ನೇ ಕಾದಿದ್ದು ಅವರು ಆಗಮಿಸಿದಾಗ 'ರಷ್ಯಾ ಚಿರಾಯುವಾಗಲಿ' ಎಂದು ಕೂಗಿಕೊಂಡು ಸೇತುವೆಯ ಮೇಲಿಂದ ನದಿಯೊಳಕ್ಕೆ ಧುಮುಕಿ ಮುಳುಗಿ ಹೋದಳಂತೆ.

ಒಟ್ಟಾರೆ ಹೇಳುವುದಾದರೆ ಈ ಉತ್ಸವಗಳಲ್ಲಿ ಹೆಂಗಸರು ಪ್ರಮುಖ ಪಾತ್ರವನ್ನು ವಹಿಸಿದುದೇ ಅಲ್ಲದೆ ಗಂಡಸರಿಗೆ ಮಾರ್ಗದರ್ಶನವನ್ನೂ ಮಾಡಿದರು. ರಷ್ಯನ್ ನಾವಿಕರ ಮೇಲೆ ಹೂಮಳೆಗರೆದು ಕಾಣಿಕೆಗಳನ್ನೂ ಚಿನ್ನವತ್ತಳೆಗಳನ್ನೂ ಅರ್ಪಿಸಿದ್ದಲ್ಲದೆ, ಬೀದಿಗಳಲ್ಲಿಯೇ ಅವರನ್ನು ತಬ್ಬಿ ಮುತ್ತಿಟ್ಟರು; ಮತ್ತೆ ಕೆಲವರು ಯಾವ ಕಾರಣಕ್ಕಾಗಿಯೋ ನಾವಿಕರು ಮುತ್ತಿಡಲು ತಮ್ಮ ಮಕ್ಕಳನ್ನು ಕರೆತಂದರು, ಅವರ ಆಸೆಯೂ ಪೂರ್ಣ

ಗೊಳಿಸಲ್ಪಟ್ಟಾಗ ನೆರೆದಿದ್ದ ಜನರು ಸಂತೋಷಭರಿತರಾಗಿ ಆನಂದಬಾಷ್ಪಗಳನ್ನು ಸುರಿಸಿದರು.

ಈ ಭಾವಾವೇಶವು ಸಾಂಕ್ರಾಮಿಕವಾದುದು. ಒಬ್ಬ ವರದಿಗಾರರು ಒಂದು ವಿಚಿತ್ರ ಪ್ರಸಂಗವನ್ನು ವಿವರಿಸಿದರು. ನೋಡುವುದಕ್ಕೆ ಆರೋಗ್ಯವಂತನಾದ ರಷ್ಯನ್ ನಾವಿಕನೊಬ್ಬನು, ತನ್ನ ಸುತ್ತಲೂ ನಡೆಯುತ್ತಿದ್ದುದನ್ನೆಲ್ಲ ಹದಿನೈದು ದಿನಗಳಷ್ಟು ಕಾಲ ವೀಕ್ಷಿಸಿದ ಮೇಲೆ. ಒಮ್ಮೆ ಹಾಡು ಹಗಲಿನಲ್ಲೇ ತನ್ನ ಹಡಗಿನಿಂದ ಸಮುದ್ರದೊಳಕ್ಕೆ ಧುಮುಕಿ ಈಜುತ್ತ 'ಫ್ರಾನ್ಸ್, ಚಿರಾಯುವಾಗಲಿ' ಎಂದು ಕೂಗುತ್ತಿದ್ದ. ಅವನನ್ನು ಮೇಲೆಳೆದು ವಿಚಾರಿಸಿದಾಗ ತಾನು ಫ್ರಾನ್ಸ್‌ನ ಗೌರವಾರ್ಥವಾಗಿ ಆ ಹಡಗಿನ ಸುತ್ತ ಈಜುವುದಾಗಿ ಪ್ರತಿಜ್ಞೆ ಮಾಡಿದ್ದನೆಂದು ತಿಳಿಸಿದ.

ಈ ರೀತಿ ಭಾವಾವೇಶವು ಹೆಚ್ಚಾಯಿತು, ಅಡೆತಡೆಯಿಲ್ಲದೆ ಬೆಳೆಯಿತು. ಉರುಳುವ ಮಂಜುಗಡ್ಡೆಯಂತೆ ತ್ರೀವ್ರವಾಯಿತು. ಕೊನೆಗೆ ಸ್ಥಳದಲ್ಲಿದ್ದವರಷ್ಟೇ ಅಲ್ಲ. ಇದರ ಬಗ್ಗೆ ಒಲವಿದ್ದವರೂ ನರದೌರ್ಬಲ್ಯವಿದ್ದವರೂ ಅಷ್ಟೇ ಅಲ್ಲ, ಆರೋಗ್ಯವಂತರಾದ ಸದೃಢರಾದ ಜನರೂ ವಾತವರಣದಲ್ಲಿದ್ದ ಮನೋಭಾವಕ್ಕೆ ಬಲಿಬಿದ್ದು ರೋಗಗ್ರಸ್ತ ಸ್ಥಿತಿಯನ್ನು ತಲುಪಿದರು.

ನಾವಿಕರಿಗೆ ನೀಡಿದ ಜಯೋತ್ಸಾಹಭರಿತವಾದ ಸ್ವಾಗತದ ವರ್ಣನೆಯೊಂದರ ಮೇಲೆ ಸುಮ್ಮನೆ ಕಣ್ಣಾಡಿಸುತ್ತಿದ್ದಾಗ ಅದು ಯಾವುದೋ ಒಂದು ಬಗೆಯ ಭಾವಾವೇಶವನ್ನು ನನ್ನಲ್ಲಿ ಉಂಟುಮಾಡುತ್ತಿರುವಂತೆ ತೋರಿತು. ಆಗ ನನ್ನ ಕಣ್ಣು ಹನಿಸುವ ರೀತಿಯಾಯಿತು. ಆ ಭಾವನೆಯನ್ನಾಗ ನಿಲ್ಲಿಸಲು ನಾನು ತುಂಬ ಪ್ರಯತ್ನಪಡಬೇಕಾಯಿತು.

## 3

ಈಚೆಗೆ ಕೀವ್ ವಿಶ್ವವಿದ್ಯಾನಿಲಯದ ಪತ್ರಿಕೆಯಲ್ಲಿ, ಸಿಕೋರ್ಸ್ಕಿ ಎಂಬ ಮನೋವೈದ್ಯದ (Psychiatry) ಪ್ರಾಧ್ಯಾಪಕರೊಬ್ಬರು. ತಾವು ಕೀವ್ ಪ್ರಾಂತದ ವಾಸಿಲ್ಕೋವ್‌ಸ್ಕಿ ಜಿಲ್ಲೆಯ ಕೆಲವು ಹಳ್ಳಿಗಳಲ್ಲಿ ನಡೆಸಿದ ಸಂಶೋಧನೆಗಳಿಂದ ಕಂಡುಹಿಡಿದು ತಾವೇ ಹೆಸರಿಸಿತ್ತ ಮಾಲ್ವೆನಿಸ್ಮ್ ಎಂಬ ಮನೋಸಾಂಕ್ರಾಮಿಕ ರೋಗವೊಂದರ ಬಗ್ಗೆ ವಿವರಣೆ ನೀಡಿದ್ದರು. ಸಿಕೋರ್ಸ್ಕಿಯವರು ಆ ರೋಗದ ವರ್ಣನೆಯನ್ನು ಈ ರೀತಿ ಮಾಡಿದ್ದರು. ಆ ಹಳ್ಳಿಗಳಲ್ಲಿನ ಕೆಲವು ಜನರು ಮಾಲ್ವೆನೋವ್ ಎಂಬ ನಾಯಕನ ಪ್ರಭಾವಕ್ಕೊಳಗಾಗಿ. ಇನ್ನು ಸ್ವಲ್ಪವೇ ಕಾಲದಲ್ಲಿ ಪ್ರಪಂಚವು ಕೊನೆಗೊಳ್ಳುವುದೆಂಬ ಕಲ್ಪನೆಯಿಂದಾಗಿ ತಮ್ಮ ಜೀವನ ವಿಧಾನವನ್ನೇ ಸಂಪೂರ್ಣವಾಗಿ ಬದಲಾಯಿಸಿ. ತಮ್ಮ ಆಸ್ತಿಪಾಸ್ತಿಗಳನ್ನೆಲ್ಲ ದಾನಮಾಡುತ್ತ. ಚೆನ್ನಾಗಿ ಉಡುಪುಗಳನ್ನು ಧರಿಸುತ್ತ, ರುಚಿಕರ

ಮಾದುದನ್ನು ಚೆನ್ನಾಗಿ ತಿಂದು ಕುಡಿಯುತ್ತ ಕೆಲಸಕಾರ್ಯಗಳನ್ನೇ ಬಿಟ್ಟುಬಿಟ್ಟರು. ಈ ಪ್ರಾಧ್ಯಾಪಕರಿಗೆ ಈ ಜನಗಳ ಮನಃಸ್ಥಿತಿಯು ರೋಗಗ್ರಸ್ತವಾದುದೆಂದು ತಿಳಿಯಿತು. ಅವರು ಆ ಬಗ್ಗೆ ಈ ರೀತಿ ಹೇಳುತ್ತಾರೆ. 'ಅವರ ಈ ಅಸಾಧಾರಣ ಸದ್ಯಃತೃಪ್ತಿಯು ಕೆಲವೊಮ್ಮೆ ಆನಂದದ ಸ್ಥಿತಿಗೇರುತ್ತಿತ್ತು—ಆದರೆ ಈ ಆನಂದಕ್ಕೆ ಬಾಹ್ಯ ಕಾರಣಗಳಾವುವೂ ಇರುತ್ತಿರಲಿಲ್ಲ. ಅವರು ಎಲ್ಲದರ ಬಗ್ಗೆ ಭಾವುಕರಾಗುತ್ತಿದ್ದರು. ಅವರ ನಡತೆ ಅತ್ಯಂತ ವಿನಯಪರವಾಯಿತು. ತುಂಬ ವಾಚಾಳಿಗಳಾದರು. ಅವರು ತೀವ್ರ ಚಟುವಟಿಕೆಯಿಂದ ನಡೆಯಲು ಪ್ರಾರಂಭಿಸಿದರು. ತುಂಬ ಸುಲಭವಾಗಿ ಆನಂದಬಾಷ್ಪಗಳನ್ನು ಸುರಿಸುವವರಾದರು. ಆದರೆ ಅಷ್ಟೇ ಬೇಗ ಅದು ನಿಂತು ಹೋಗುತ್ತಿತ್ತು. ಕೊಡೆಗಳು, ರೇಷ್ಮೆ ಕರವಸ್ತ್ರಗಳಂತಹ ಭೋಗವಸ್ತುಗಳನ್ನು ಕೊಳ್ಳಲು ತಮ್ಮ ಅತ್ಯವಶ್ಯಕ ವಸ್ತುಗಳನ್ನವರು ಮಾರಿದರು: ಆ ರೇಷ್ಮೆಕರವಸ್ತ್ರಗಳು ಅಲಂಕಾರ ವಸ್ತ್ರವಾದುವು. ಅವರು ಸದಾ ಸಿಹಿ ತಿನಿಸುಗಳನ್ನು ತಿನ್ನುತ್ತಿದ್ದರು. ಅವರು ಸದಾ ಆನಂದದ ಮನೋಭಾವವನ್ನು ತಳೆದಿದ್ದರು; ಸೋಮಾರಿತನದ ಜೀವನವನ್ನು ನಡೆಸುತ್ತ. ಒಬ್ಬರನ್ನೊಬ್ಬರು ಭೇಟಿ ಮಾಡುತ್ತ ಓಡಾಡಿಕೊಂಡಿದ್ದರು. ಕೆಲಸ ಮಾಡಲು ನಿರಾಕರಿಸುವ ತುಂಬ ಸ್ಪಷ್ಟವಾದ ಮೂರ್ಖಭಾವವನ್ನವರ ಗಮನಕ್ಕೆ ತಂದಾಗ ಅವರು ನೀಡುತ್ತಿದ್ದುದು ಒಂದೇ ಬಗೆಯ ಉತ್ತರ: "ನನಗೆ ಬೇಕೆನಿಸಿದಾಗ ಕೆಲಸ ಮಾಡುತ್ತೇನೆ: ಬೇಕೆನಿಸದಿದ್ದರೆ ಕೆಲಸವನ್ನು ನಾನು ನನ್ನ ಮೇಲೇಕೆ ಹೇರಿಕೊಳ್ಳಬೇಕು?"

ಈ ಜನರ ಸ್ಥಿತಿಯು ಸ್ಪಷ್ಟವಾಗಿ ಒಂದು ಮನೋಸಾಂಕ್ರಾಮಿಕ ರೋಗವೆಂದು ಆ ಪರಿಣತ ಪ್ರಾಧ್ಯಾಪಕರು ಭಾವಿಸುವುದಲ್ಲದೆ, ಈ ರೋಗವು ಹರಡದಂತೆ ತಡೆಗಟ್ಟಲು ಸರ್ಕಾರವು ಕ್ರಮಕೈಗೊಳ್ಳಬೇಕೆಂದು ಮಾಡಿದ್ದರು: 'ಮಾಲ್ವೈನಿಸ್ಮ್ ನರಳುವ ಜನತೆಯ ಕೂಗು. ಇದು ಮಾದಕ ದ್ರವ್ಯಗಳಿಂದ ತಮ್ಮನ್ನು ಪಾರುಮಾಡಬೇಕೆಂದು. ಶಿಕ್ಷಣ ಹಾಗೂ ಆರೋಗ್ಯಗಳನ್ನು ಸುಧಾರಿಸಬೇಕೆಂದು ಅವರು ಮಾಡುವ ಪ್ರಾರ್ಥನೆ.'

ಆದರೆ ಮಾಲ್ವೈನಿಸ್ಮ್ ಎನ್ನುವುದನ್ನೇ ನರಳುವ ಜನತೆಯೊಂದರ ಕೂಗೆಂದೂ ಮಾದಕ ದ್ರವ್ಯಗಳಿಂದ ಹಾಗೂ ವಿನಾಶಕಾರಕ ಸಾಮಾಜಿಕ ಪರಿಸ್ಥಿತಿಗಳಿಂದ ತಮ್ಮನ್ನು ಮುಕ್ತಗೊಳಿಸಲು ಮಾಡುವ ಪ್ರಾರ್ಥನೆಯೆಂದೂ ಹೇಳುವುದಾದರೆ, ಪ್ಯಾರಿಸ್‌ನಲ್ಲಿ ಪ್ರಾರಂಭವಾಗಿ ಫ್ರಾನ್ಸ್‌ನ ನಗರ ಜೀವನದ ಗಣನೀಯ ಭಾಗವನ್ನೂ ರಷ್ಯನ್ ಸರ್ಕಾರದ ಹಾಗೂ ಮೇಲುವರ್ಗದ ಜನರ ಬಹುಭಾಗವನ್ನೂ ಭಯಂಕರ ವೇಗದಿಂದ ಆವರಿಸಿರುವ ಈ ಹೊಸ ರೋಗವು ಇನ್ನೆಂತಹ ನರಳುವ ಜನತೆಯ ಕೂಗಾಗಿರಬೇಕು. ಮಾದಕತೆಯಿಂದಲೂ ಸುಳ್ಳು ಸಾಮಾಜಿಕ ಪರಿಸ್ಥಿತಿಗಳಿಂದಲೂ ತಮ್ಮನ್ನು ಮುಕ್ತಗೊಳಿಸಬೇಕೆಂಬ ಪ್ರಾರ್ಥನೆಯಾಗಿರಬೇಕು.

ಮಾಲ್ವೈನಿಸ್ಮ್ ರೋಗಕ್ಕೊಳಗಾದವರು ಅಪಾಯಕಾರಿಗಳೆಂದು ತಿಳಿಯುವುದಾದರೆ, ಹಾಗೆಯೇ ಅವರ ಕೆಲವು ನಾಯಕರನ್ನು ಮಾನಸಿಕ ಆಸ್ಪತ್ರೆಗಳಿಗೂ. ಇನ್ನು

ಕೆಲವರನ್ನು ಆಶ್ರಮಗಳಿಗೂ, ಮತ್ತೆ ಕೆಲವರನ್ನು ದೂರಪ್ರದೇಶಗಳಿಗೂ ಸಾಗಿಸಬೇಕೆಂಬ ಪ್ರಾಧ್ಯಾಪಕರ ಸಲಹೆಯನ್ನು ಸರ್ಕಾರವು ಒಪ್ಪಿಕೊಳ್ಳುವುದೇ ಸರಿಯಾದುದೆಂದು ಭಾವಿಸುವುದಾದರೆ: ಟೌಲಾನ್ ಮತ್ತು ಪ್ಯಾರಿಸ್‌ಗಳಲ್ಲಿ ಕಾಣಿಸಿಕೊಂಡು ಇಡೀ ಫ್ರಾನ್ಸ್ ಮತ್ತು ರಷ್ಯಗಳನ್ನು ಆವರಿಸಿರುವ ಈ ಹೊಸ ಸಾಂಕ್ರಾಮಿಕ ರೋಗವು ಮತ್ತೆಷ್ಟು ಭಯಂಕರವಾಗಿರಬೇಕು. ಇಂಥ ಸಾಂಕ್ರಾಮಿಕ ಬೇನೆಗಳು ಹರಡದಂತೆ, ಸರ್ಕಾರವಲ್ಲದಿದ್ದರೆ ಸಮಾಜವಾದರೂ, ದೃಢವಾದ ಮುನ್ನೆಚ್ಚರಿಕೆಯ ಕ್ರಮಗಳನ್ನು ತೆಗೆದುಕೊಳ್ಳಬೇಕಾದುದು ಮತ್ತೆಷ್ಟು ಅವಶ್ಯಕವಾಗಿರಬೇಕು!

ಈ ಎರಡು ಸಾಂಕ್ರಾಮಿಕ ವ್ಯಾಧಿಗಳಲ್ಲಿರುವ ಸಾಮ್ಯವು ಸಂಪೂರ್ಣವಾದುದು. ಎರಡರಲ್ಲಿಯೂ ಒಂದೇ ಬಗೆಯ ಅಸಾಧಾರಣ ಸದ್ಯಃತೃಪ್ತಿಯಿಂದುಂಟಾದ ಸಹಜ ಸ್ಫೂರ್ತಿ ಆನಂದಸ್ಥಿತಿಯಿದೆ. ಒಂದೇ ಬಗೆಯ ಭಾವುಕತೆಯೂ ಅತಿ ವಿನಯ ವಾಚಾಳಿತನಗಳೂ ಇವೆ. ಬೇಕೆಂದಾಗ ಅಕಾರಣ ಬಂದು ಅಷ್ಟೇ ಸುಲಭವಾಗಿ ಹೋಗುವ ಆನಂದ ಬಾಷ್ಪವೂ ಎರಡರಲ್ಲೂ ಒಂದೇ ಬಗೆಯದು. ಅದೇ ಆರಾಮ ಮನೋಭಾವ, ಅದೇ ಉತ್ಸವಬುದ್ಧಿ. ಅದೇ ನರ್ತನಶೀಲ ನಡಿಗೆ, ಅದೇ ಪರಸ್ಪರ ಮಿಲನ. ಅದೇ ಬಗೆಯ ಆಡಂಬರ ವಸ್ತ್ರಧಾರಣೆ. ಅದೇ ರುಚಿಕರ ಆಹಾರದ ಮೋಹ. ಅದೇ ಅರ್ಥಹೀನ ಭಾಷಣಗಳು. ಅದೇ ಸೋಮಾರಿತನ, ಅದೇ ಸಂಗೀತ ನೃತ್ಯಗಳು. ಅದೇ ಬಗೆಯ ಸ್ತ್ರೀ ನಿರ್ದೇಶಿತ ಕಾರ್ಯಗಳು, ಮಾಲ್ಪೆನಿಸ್ಕ್‌ರಲ್ಲಿ ಸಿಕೋರ್ಸ್ಕಿಯು ಕಂಡ ಅದೇ ವಿದೂಷಕ ಮಾದರಿಯ ಉದ್ವೇಗಭರಿತ ನಿಲುವು. – ಇವುಗಳೇ ಆ ಸಂಭ್ರಮಪೂರ್ಣ ಸಭೆಗಳು ತೋರಿದ ಅಸಹಜ ನಿಲುವುಗಳಲ್ಲೂ, ಸ್ವಾಗತ ಸಮಾರಂಭ ಹಾಗೂ ಔತಣಕೂಟಗಳ ಭಾಷಣಗಳಲ್ಲೂ ನನಗೆ ಕಾಣಿಸುತ್ತವೆ.

ಹೋಲಿಕೆಯು ಸಂಪೂರ್ಣವಾದುದು! ಒಂದೇ ಒಂದು ವ್ಯತ್ಯಾಸವೆಂದರೆ – ಈ ಪ್ರಸಂಗಗಳು ನಡೆಯುವ ಸಮಾಜದ ದೃಷ್ಟಿಯಿಂದ ಅದು ತುಂಬ ಮುಖ್ಯವಾದುದು – ಒಂದರ ವಿಷಯದಲ್ಲಿ ಈ ಹುಚ್ಚು ತಮ್ಮ ದುಡಿಮೆಯನ್ನಾದರಿಸಿದ ಹತ್ತಾರು ಮಂದಿ ಶಾಂತರಾದ ಹಳ್ಳಿಗರಿಗೆ ಸೀಮಿತವಾಗಿರುವುದರಿಂದ ಅದು ಅವರ ನೆರೆಹೊರೆಯವರಿಗೆ ಆಘಾತವುಂಟುಮಾಡಲಾರದು. ವ್ಯಕ್ತಿಗತವಾಗಿಯಾಗಲೀ ಮಾತಿನ ಮೂಲಕವಾಗಿಯಾಗಲೀ ತಮ್ಮ ಮನೋಭಾವವನ್ನವರು ಬೇರೆಯವರಿಗೆ ಅಂಟಿಸಲಾರರು. ಇನ್ನೊಂದರ ವಿಷಯವು ಭಿನ್ನವಾದುದು: ಅದು ಲಕ್ಷಾಂತರ ಮಂದಿಯ ಹುಚ್ಚುತನ: ಅಪಾರ ಹಣವನ್ನವರು ವೆಚ್ಚಮಾಡಬಹುದು, ಇತರರಿಗೆಘಾತವನ್ನುಂಟುಮಾಡಬಹುದು. (ಬಂದೂಕಗಳು. ರಕ್ಷಿತಪ್ರದೇಶಗಳು, ಉಕ್ಕು ಹಡಗುಗಳು, ಸಿಡಿಮದ್ದುಗಳು ಇತ್ಯಾದಿಗಳ ಮೂಲಕ) ಇವಲ್ಲದೆ ತಮ್ಮ ಹುಚ್ಚನ್ನು ಹರಡುವ ಅತ್ಯಂತ ಶಕ್ತಿಯುತ ಸಾಧನಗಳು ಅವರ ನೆರವಿಗೆ ಇವೆ. ಅಂಚೆ ವ್ಯವಸ್ಥೆ, ತಂತಿ, ಅಸಂಖ್ಯ ವೃತ್ತಪತ್ರಿಕೆಗಳು, ಮತ್ತು ಹುಚ್ಚನ್ನು ಪ್ರಸಾರಗೊಳಿಸುವುದರಲ್ಲಿ ಒಂದರೊಡನೊಂದು ಸ್ಪರ್ಧಿಸುವ ನಾನಾ ಬಗೆಯ

ಗ್ರಂಥಗಳು. ಇದಲ್ಲದೆ ಮತ್ತೊಂದು ವ್ಯತ್ಯಾಸವಿದೆ. ಮೊದಲ ಗುಂಪಿನ ಜನರು, ವಿಪರೀತ ಕುಡಿಯುವುದಿರಲಿ, ಮಾದಕ ಪಾನೀಯಗಳನ್ನೇ ಉಪಯೋಗಿಸುವುದಿಲ್ಲ, ಆದರೆ ಎರಡನೆಯ ಗುಂಪಿನ ಜನರು ಸದಾ ಅರ್ಧ ಅಮಲಿನಲ್ಲಿಯೇ ಇರುತ್ತಾರೆ. ಆದ್ದರಿಂದ ಕೀವ್ ಸಾಂಕ್ರಾಮಿಕ (ಸಿಕೋರ್ಸ್ಕಿಯ ಪ್ರಕಾರ ಈ ಕಾಲದಲ್ಲಿ ಹಿಂಸೆಯಾಗಲಿ ಕೊಲೆ ಯಾಗಲೀ ನಡೆದಿಲ್ಲ) ಹಾಗೂ ಪ್ಯಾರಿಸ್‌ನಲ್ಲಿ ಉಂಟಾದ ಸಾಂಕ್ರಾಮಿಕ (ಒಂದೇ ಒಂದು ಮೆರವಣಿಗೆಯ ಕಾಲದಲ್ಲಿ ಇಪ್ಪತ್ತು ಮಂದಿ ಕಾಲ್ತುಳಿತಕ್ಕೆ ಸಿಕ್ಕಿ ಸತ್ತರು) ಇವುಗಳು ಸಂಭವಿಸುವ ಸಮಾಜಗಳಿಗಿರುವ ಅಂತರವೆಂದರೆ ಒಲೆಯ ಜಾಲರಿಯಿಂದ ಜಾರಿ ನೆಲಕ್ಕೆ ಬಿದ್ದು ಬಿಸಿಯಾಗಿರುವ ಆದರೆ ಉರಿಯಲಾಗದ ಕೆಂಡಕ್ಕೂ ಮನೆಯ ಬಾಗಿಲು ಗೋಡೆಗಳಿಗೆ ಅಂಟಿರುವ ಬೆಂಕಿಗೂ ಇರುವ ಅಂತರ. ಕೀವ್ ಸಾಂಕ್ರಾಮಿಕದಿಂದ ಉಂಟಾಗಬಹುದಾದ ಅತ್ಯಂತ ಘೋರ ಪರಿಣಾಮವೆಂದರೆ ರಷ್ಯಾದ ಜನಸಮುದಾಯದ ಎಷ್ಟೋ ಲಕ್ಷದ ಒಂದು ಪಾಲು ಜನ ರೈತರು ತಮ್ಮ ದುಡಿಮೆಯಿಂದ ಸಂಪಾದಿಸಿದುದನ್ನೆಲ್ಲ ಪೂರ್ಣ ವೆಚ್ಚಮಾಡಿ ತೆರಿಗೆಯನ್ನು ಕೊಡಲು ಸಾಧ್ಯವಾಗದುದು. ಆದರೆ ಅಪಾರ ಅಧಿಕಾರ ದಿಂದ ಕೂಡಿದ, ಅಪಾರ ಹಣದ ಮೇಲೆ ನಿಯಂತ್ರಣವಿರುವ, ಭಯಂಕರ ಶಸ್ತ್ರಾಸ್ತ್ರ ಗಳ ಒಡೆಯರಿಂದ ತಮ್ಮ ಹುಚ್ಚನ್ನು ಹುಟ್ಟಿಸಲು ಅತ್ಯಂತ ಸಮರ್ಥ ಸಾಧನಗಳನ್ನು ಪಡೆದ ಜನರನ್ನು ಆವರಿಸಿರುವ ಟೌಲಾನ್ - ಪ್ಯಾರಿಸ್ ಸಾಂಕ್ರಾಮಿಕ ರೋಗದ ಪರಿಣಾಮವು ಭಯಂಕರವಾದುದಾಗಿರಬೇಕು.

4

ದುರ್ಬಲ ಹಾಗೂ ನಿಶ್ಶಸ್ತ್ರವಾದ ಸಮವಸ್ತ್ರಧಾರಿ ಮೂರ್ಖನೊಬ್ಬನು ಹುಚ್ಚು ಚ್ಚಾಗಿ ಮಾತನಾಡುತ್ತಿದ್ದರೆ ಅವನ ಮಾತುಗಳನ್ನು ವಿರೋಧಿಸದೆ, ಏಕೆ ತಮಾಷೆಯಿಂದ ಪ್ರೋತ್ಸಾಹವನ್ನೂ ನೀಡುತ್ತ, ಕೇಳುತ್ತಿರಬಹುದು: ಆದರೆ ಸದೃಢರಾದ, ಅಡಿಯಿಂದ ಮುಡಿಯವರೆಗೂ ಕಠಾರಿ, ಕತ್ತಿ ತುಂಬಿದ ಬಂದೂಕಗಳಿಂದ ಸಜ್ಜಿತರಾದ ಹುಚ್ಚರ ಒಂದು ಗುಂಪೇ ಮಿತಿಮೀರಿ ತಮ್ಮ ನೀತಿಶಾಸ್ತ್ರಗಳನ್ನು ಝಳಪಿಸುತ್ತಿರುವಾಗ ಅವರನ್ನು ಪ್ರೋತ್ಸಾಹಿಸುವುದಿರಲಿ, ಗಾಬರಿಯಿಲ್ಲದೆ ಕ್ಷಣಮಾತ್ರವೂ ಇರಲಾಗುವುದಿಲ್ಲ. ಫ್ರೆಂಚರ ಸ್ವಾಗತದಿಂದಾಗಿ ಫ್ರೆಂಚ್ ಮತ್ತು ರಷ್ಯನ್ ಸಮಾಜಗಳೆರಡರಲ್ಲಿಯೂ ಉಂಟಾಗಿರುವ ಭಾವೋದ್ವೇಗವೂ ಇಂತಹುದೇ; ಏಕೆಂದರೆ ಈ ಹುಚ್ಚಿನ ರೋಗಕ್ಕೆ ತುತ್ತಾಗಿರುವವರ ಬಳಿ ವಿನಾಶಕಾರಕವಾದ ಭಯಂಕರ ಅಸ್ತ್ರಗಳಿವೆ.

ಭಾಷಣಗಳಲ್ಲಿಯಾಗಲೀ ಈ ಸಮಾರಂಭಗಳ ಕಾಲದ ಶುಭಾಶಯ ಕೂಟಗಳಲ್ಲಿ ಯಾಗಲೀ ಅವುಗಳ ಬಗೆಗಿನ ಲೇಖನಗಳಲ್ಲಿಯಾಗಲೀ ಉದ್ಘೋಷಿಸುತ್ತಿರುವ ಗುರಿಯು ಶಾಂತಿಸ್ಥಾಪನೆಯೆಂಬುದು ನಿಜ. ಮಾತನಾಡಿದ ಯುದ್ಧಪಕ್ಷಪಾತಿಗಳೂ ತಮ್ಮ ಪ್ರದೇಶಗಳ ಆಕ್ರಮಣಕಾರರ ಬಗ್ಗೆ ದ್ವೇಷದ ಮಾತುಗಳನ್ನಾಡದೆ ಒಂದು ಬಗೆಯ ಒಂದು ರೀತಿ ದ್ವೇಷದೆಡೆಗೆ ಒಲಿರುವ ಪ್ರೀತಿಯ ಭಾವನೆಯನ್ನೇ ವ್ಯಕ್ತಪಡಿಸಿದ್ದಾರೆ.

ಮಾನಸಿಕ ಅಸ್ವಾಸ್ಥ್ಯಕ್ಕೊಳಗಾದ ಇವರ ಕುಟಿಲತೆಯು ಸರ್ವವಿದಿತ. ಎಲ್ಲರ ಮನಸ್ಸಿನಲ್ಲಿರುವುದರ ಬಗ್ಗೆ ಯಾವ ಮಾತನ್ನೂ ಆಡದೆ "ನಮಗೆ ಬೇಕಾಗಿರುವುದು ಯುದ್ಧವಲ್ಲ. ಶಾಂತಿ"; ಎಂಬ ಮತ್ತೆ ಮತ್ತೆ ಉಕ್ತವಾಗುತ್ತಿರುವ ಘೋಷಣೆಯು ಈ ಅಸ್ವಾಸ್ಥ್ಯದ ತುಂಬ ಭಯಂಕರವಾದ ಕುರುಹು.

ಎಲೀಸೀ ಭವನದಲ್ಲಿ ತಮಗಿತ್ತ ಗೌರವಕೂಟದಲ್ಲಿ ಉತ್ತರಿಸುತ್ತ ರಷ್ಯನ್ ರಾಯಭಾರಿಯು ಈ ರೀತಿ ನುಡಿದರು. ಇಷ್ಟರಲ್ಲಿಯೇ ಕೋರುವ ಶುಭಾಶಯ ಈ ಭವನದ ಒಳವಲಯದಲ್ಲಿ ಸೇರಿರುವವರ ಹೃದಯಾಂತರಾಳದಲ್ಲಿ ಪ್ರತಿಧ್ವನಿಸುವುದಲ್ಲದೆ, ನಮ್ಮ ಹೃದಯಗಳೊಂದಿಗೆ ಈಗ 'ಏಕತ್ವಭಾವದಿಂದ ಸ್ಪಂದಿಸುವ ಹೃದಯಗಳನ್ನು ಪಡೆದ ಹತ್ತಿರದ ದೂರದ. ಈ ಸುಂದರವಾದ ಫ್ರಾನ್ಸ್ ಹಾಗೂ ರಷ್ಯಾ ದೇಶಗಳ ಎಲ್ಲ ಭಾಗಗಳ ಜನರೂ ಒಂದೇ ಬಗೆಯ ಉತ್ಸಾಹದಿಂದ ಪ್ರತಿಧ್ವನಿಸುತ್ತಾರೆ. ಆದರೆ ಅದಕ್ಕೆ ಮುಂಚೆ ನಾನು ನನ್ನದೊಂದು ಭಾವನೆಯನ್ನು ವ್ಯಕ್ತಪಡಿಸಬೇಕಾಗಿದೆ. ಕ್ರೋನ್ಸ್–ಟಾಟ್ ಭೇಟಿಗೆ ಪ್ರತಿಯಾಗಿ ಸಂದರ್ಶನವೀಯಲು ಜಾರ್ ದೊರೆಗಳಿಂದ ಆಜ್ಞಾಪಿತರಾಗಿ ಬಂದಿರುವ ಅಡ್ಮಿರಲ್ ಅವರನ್ನು ನೀವು ಗೌರವಿಸಿದ ರೀತಿಯ ಬಗ್ಗೆ ನಾನು ನನ್ನ ಆಳವಾದ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ. ನಿಮ್ಮ ಉನ್ನತ ಮನೋಭಾವವು ಭವ್ಯವಾದ, ಶಾಂತಿಯುತವಾದ ಗೆಲುವನ್ನು ಅತ್ಯಂತ ಐಕಮತ್ಯದಿಂದಲೂ ನಿಷ್ಠೆಯಿಂದಲೂ. ನಿಸ್ಪೃಹವಾಗಿಯೂ ಆಚರಿಸುತ್ತಿರುವಾಗ ಆಡುತ್ತಿರುವ ನಿಮ್ಮ ಮಾತುಗಳಿಗೆ ಹೆಚ್ಚಿನ ಅರ್ಥವಂತಿಕೆಯನ್ನುಂಟುಮಾಡಿದೆ.

ಶಾಂತಿಯ ಬಗ್ಗೆ ಇಂತಹುದೇ ಅಸಂಬದ್ಧ ಪ್ರಸ್ತಾಪವು ಫ್ರೆಂಚ್ ರಾಷ್ಟ್ರಾಧ್ಯಕ್ಷರ ಭಾಷಣದಲ್ಲಿಯೂ ಕಂಡುಬರುತ್ತದೆ.

'ರಷ್ಯಾ ಮತ್ತು ಫ್ರಾನ್ಸ್‌ಗಳನ್ನು ಒಂದುಗೂಡಿಸಿರುವ ಪ್ರೇಮಬಂಧನವು ಎರಡು ವರ್ಷಗಳ ಹಿಂದೆ ಕ್ರೋನ್ಸ್‌ಟಾಟ್‌ನಲ್ಲಿ ನಮ್ಮ ನೌಕಾಪಡೆಯು ಆಕ್ರಮಣಕ್ಕೊಳಗಾದ ಕಾಲದಿಂದ ತೀವ್ರವಾಗಿದೆ, ನಾವೀರ್ವರೂ ದಿನದಿನಕ್ಕೆ ಹತ್ತಿರವಾಗುತ್ತಿದ್ದೇವೆ; ನಮ್ಮ ಈ ಸ್ನೇಹಭಾವದ ಅಭಿವ್ಯಕ್ತಿಯು "ಶಾಂತಿ ಭಾವನೆ" ಆತ್ಮವಿಶ್ವಾಸ ಮತ್ತು ಸುಭದ್ರತೆಗಳಿಂದೊಡಗೂಡಿದವರೆಲ್ಲರಲ್ಲೂ ಸ್ಫೂರ್ತಿಯನ್ನುಂಟುಮಾಡುವುದೆಂಬ ಭರವಸೆ ನನಗಿದೆ' ಇತ್ಯಾದಿ.

ಈ ಎರಡು ಭಾಷಣಗಳಲ್ಲೂ ಮಾಡಿರುವ ಶಾಂತಿಯ ಪ್ರಸ್ತಾಪ ಅನಿರೀಕ್ಷಿತವಾದುದೂ ಅಸಂಬದ್ಧವಾದುದೂ ಆಗಿದೆ. ರಷ್ಯದ ಚಕ್ರವರ್ತಿ ಹಾಗೂ ಫ್ರೆಂಚ್ ಅಧ್ಯಕ್ಷರ ನಡುವೆ ಆದ ತಂತಿಗಳ ವಿನಿಮಯದಲ್ಲಿಯೂ ಇದೇ ರಾಗವೇ: ರಷ್ಯದ ಚಕ್ರವರ್ತಿಯವರು ಕಳುಹಿಸಿದ ತಂತಿಯ ಶುಭಾಶಯದಲ್ಲಿಯೂ ಅದಕ್ಕೆ ಫ್ರೆಂಚ್ ಅಧ್ಯಕ್ಷರು ಕೊಟ್ಟ ಉತ್ತರದಲ್ಲಿಯೂ ಅಕಾರಣವಾಗಿ, ಸಮಯ ಸಂದರ್ಭವಿಲ್ಲದೆ. ನಾವಿಕರಿಗೆ ನೀಡಿದ ಸ್ವಾಗತಕ್ಕೆ ಯಾವುದೇ ಸಂಬಂಧವಿಲ್ಲದ ಶಾಂತಿಯ ಪ್ರಸ್ತಾಪ ಬಂದಿದೆ.

ಈ ಎಲ್ಲ ಉನ್ಮತ್ತ ಸಮಾರಂಭಗಳ ಗುರಿಯು ಯೂರೋಪಿನ ಶಾಂತಿ ಎಂಬುದು ಅಪವಾದವೇ ಇಲ್ಲದಂತೆ. ಎಲ್ಲ ಭಾಷಣ–ಲೇಖನಗಳಲ್ಲಿಯೂ ಸೂಚಿಸಲ್ಪಟ್ಟಿತು. ರಷ್ಯದ ಪತ್ರಿಕಾಪ್ರತಿನಿಧಿಗಳು ನೀಡಿದ ಔತಣಕೂಟದಲ್ಲಿ ಮಾತನಾಡಿದವರೆಲ್ಲರೂ ಶಾಂತಿಯ ಬಗ್ಗೆ ಮಾತನಾಡಿದರು. ಇತ್ತೀಚೆಗೆ ಯುದ್ಧವು ಅವಶ್ಯಕವಷ್ಟೇ ಅಲ್ಲ ಪ್ರಯೋಜನಕಾರಿ ಯೆಂದು ಬರೆದಿದ್ದ ಜೋಲಾ ಅವರೂ. ಇದೇ ಅಭಿಪ್ರಾಯವನ್ನು ಹಲವಾರು ಬಾರಿ ಲೇಖನಗಳ ಮೂಲಕ ವ್ಯಕ್ತಪಡಿಸಿದ ಡಿ ವೋಗ್ ಅವರೂ ಯುದ್ಧದ ಬಗ್ಗೆ ಒಂದು ಮಾತನ್ನೂ ಆಡದೆ ಶಾಂತಿಯ ಬಗ್ಗೆಯೇ ಮಾತನಾಡಿದರು. ಫ್ರೆಂಚ್ ಶಾಸನ ಸಭೆಯ ಸಮಾವೇಶಗಳಲ್ಲಿಯೂ ಎಲ್ಲ ಭಾಷಣಕಾರರೂ ಈ ಸಮಾರಂಭಗಳನ್ನು ಯೂರೋಪಿನ ಶಾಂತಿಯ ಉದ್ಘಾಟನೆಯೆಂದೇ ವರ್ಣಿಸಿದರು.

ಈ ಪರಿಸ್ಥಿತಿ ಹೇಗಿದೆಯೆಂದರೆ ಒಬ್ಬನು ಶಾಂತಿಯುತರಾದವರೊಡನೆ ಸೇರಿದಾಗ ಆಗಾಗ್ಗೆ ಅಲ್ಲಿ ಸೇರಿದವರ ಹಲ್ಲುಮುರಿಯುವುದಾಗಲೀ ಕಣ್ಣುಗಳನ್ನು ಇಂಗಿಸುವುದಾಗಲೀ ಕೈಕಾಲು ಮುರಿಯುವುದಾಗಲೀ ಮಾಡುವ ಆಸೆ ತನಗಿಲ್ಲವೆಂದೂ. ತನಗೆ ಆ ಸಂಜೆಯನ್ನು ಶಾಂತವಾಗಿ ಕಳೆಯಬೇಕೆಂದು ಆಸೆಯಿದೆಯೆಂದೂ ಕಾತರನಾಗಿ ಹೇಳುತ್ತಿರುವಂತಿದೆ. ಆ ಸಂದರ್ಭದಲ್ಲಿ 'ಯಾರೂ ಅದರ ಬಗ್ಗೆ ಸಂಶಯ ಪಡುವುದಿಲ್ಲ. ಅಂತಹ ಕ್ರೂರ ಬಯಕೆಗಳು ನಿನಗಿದ್ದರೂ, ಅವುಗಳನ್ನು ಹೇಳುವ ಸಾಹಸ ಮಾಡಬೇಡ' ಎಂದು ಹೇಳುವಂತಾಗುತ್ತದೆ.

ಸಮಾರಂಭಗಳ ಕಾಲದಲ್ಲಿ ಪ್ರಕಟವಾದ ಹಲವಾರು ಲೇಖನಗಳು ಆನಂದವನ್ನು ಸರಳವಾಗಿಯೂ ಮುಗ್ಧವಾಗಿಯೂ ಪ್ರಕಟಿಸಿದುವು. ಇವೆಲ್ಲದರ ಮೂಲಕ ಎಲ್ಲರಿಂದಲೂ ಯಾವುದೋ ವಿಷಯವನ್ನು ಮರೆಮಾಚಿಸುವ ನಿಶ್ಚಿತ ಪ್ರಯತ್ನವು ನಡೆಯುತ್ತಿತ್ತೆಂಬುದನ್ನು ಹೇಳುವ ಗೋಜಿಗೆ ಯಾರೂ ಹೋಗಲಿಲ್ಲ; ಆದರೆ ಒಬ್ಬ ಅಜಾಗರೂಕ ವ್ಯಕ್ತಿ ಮಾತ್ರ (ಅವನನ್ನು ಪೋಲೀಸರು ನಿಷ್ಠೆಯಿಂದ ಎಳೆದುಹಾಕಿದರೆನ್ನಿ), ಎಲ್ಲರೂ ಆಲೋಚಿಸುತ್ತಿದ್ದುದನ್ನೇ, 'ಜರ್ಮನಿಗೆ ಧಿಕ್ಕಾರ!' ಎಂದು ಕೂಗಿದ. ಇದೇ ರೀತಿ ಕೆಲವು ವೇಳೆ ಮಕ್ಕಳು ತಮ್ಮ ಚೇಷ್ಟೆಯು ಯಾರಿಗೂ ತಿಳಿದಿಲ್ಲವೆಂದು ಸಂತೋಷಪಡುವಾಗ ಅವರ ಸಂತೋಷವೇ ಅವರಿಗೆ ಕೈಕೊಡುವುದುಂಟು.

ನಾವು ನಿಜವಾಗಿಯೂ ಯುದ್ಧದ ಬಗ್ಗೆ ಯೋಚನೆಯನ್ನು ಮಾಡದೇನೆ ಇದ್ದ ಮೇಲೆ ಬೇರೆಯವರು ಅದರ ಬಗ್ಗೆ ಮಾತಾಡಲಿಲ್ಲವೆಂಬ ಕಾರಣಕ್ಕಷ್ಟೆ ಸಂತೋಷಿಸುವ ಅವಶ್ಯಕತೆಯಾದರೂ ಎಲ್ಲಿದೆ?

## 5

ಯಾರೂ ಯುದ್ಧದ ಬಗ್ಗೆ ಆಲೋಚಿಸದಿದ್ದರೂ, ಕೋಟಿಗಟ್ಟಲೆ ಹಣವನ್ನು ಯುದ್ಧವಸ್ತುಗಳ ತಯಾರಿಕೆಗಾಗಿ ವೆಚ್ಚಮಾಡಲಾಗುತ್ತಿದೆ, ರಷ್ಯಾ ಮತ್ತು ಫ್ರಾನ್ಸ್ ಗಳೆರಡರಲ್ಲಿಯೂ ಲಕ್ಷಾಂತರ ಮಂದಿ ಶಸ್ತ್ರಸಜ್ಜಿತರಾಗಿದ್ದಾರೆ.

'ಇದೆಲ್ಲವನ್ನೂ ಮಾಡುತ್ತಿರುವುದು ಶಾಂತಿಯ ಸ್ಥಾಪನೆಗಾಗಿಯೇ. ನಿಮಗೆ ಶಾಂತಿಯು ಬೇಕಾದರೆ ಯುದ್ಧಕ್ಕೆ ತಯಾರಾಗಿರಿ, ಸಾಮ್ರಾಜ್ಯವೆಂದರೆ ಶಾಂತಿ. ಗಣ ರಾಜ್ಯವೆಂದರೆ ಶಾಂತಿ.'

ಹಾಗಿದ್ದರೆ ಜರ್ಮನಿಯೊಡನೆ ಯುದ್ಧಮಾಡುವ ಪ್ರಸಂಗ ಬಂದರೆ ಫ್ರಾನ್ಸಿನ ಜೊತೆಯ ಒಪ್ಪಂದದಿಂದಾಗಿ ನಮಗೆಂತಹ ಅನುಕೂಲವುಂಟಾಗುತ್ತದೆ ಎಂಬುದನ್ನು ನಮ್ಮ ರಷ್ಯದಲ್ಲಿ ವಿದ್ಯಾವಂತರೆನಿಸಿಕೊಂಡವರಿಗಾಗಿ ಪ್ರಕಟವಾಗುವ ಎಲ್ಲ ವೃತ್ತ ಪತ್ರಿಕೆಗಳಲ್ಲೂ ನಿಯತಕಾಲಿಕಗಳಲ್ಲಿಯೂ ವಿವರಿಸುವುದಲ್ಲದೆ, ರೈತರಿಗಾಗಿ ರಷ್ಯದ ಸರಕಾರದಿಂದ ಪ್ರಕಟವಾಗುವ ಗ್ರಾಮಾಂತರ ವಾರ್ತೆಗಳಲ್ಲೂ ಏಕೆ ವಿವರಿಸಬೇಕು? ಸರ್ಕಾರವು ವಂಚನೆಯಿಂದ ಈ ನತದೃಷ್ಟರಲ್ಲಿ ಉಂಟುಮಾಡಿದ ಭಾವನೆ ಇದು. 'ಫ್ರಾನ್ಸ್‌ನೊಡನೆ ಸ್ನೇಹದಿಂದಿರುವುದು ರಷ್ಯಾಕ್ಕೆ ಮತ್ತೊಂದು ರೀತಿಯಲ್ಲಿಯೂ ಅನು ಕೂಲಕರವಾದುದು; ನಿರೀಕ್ಷೆಗೆ ಬದಲಾಗಿ ನಾವು ಹೇಳಿದ ರಾಷ್ಟ್ರಗಳು (ಜರ್ಮನಿ. ಆಸ್ಟ್ರಿಯ ಮತ್ತು ಇಟಲಿ) ರಷ್ಯದೊಡನೆ ಶಾಂತಿಭಂಗ ಮಾಡುವ ಸಂದರ್ಭದಲ್ಲಿ. ಆಗ (ದೇವರ ಅನುಗ್ರಹದಿಂದ ಇತರರ ನೆರವಿಲ್ಲದೆಯೂ ತನ್ನ ಶತ್ರುಗಳ ಅತಿ ಪ್ರಬಲ ಶಕ್ತಿಕೂಟ ದೊಂದಿಗೆ ಯಶಸ್ವಿಯಾಗಿ ವ್ಯವಹರಿಸಬಹುದಾದರೂ) ಕಷ್ಟಪರಿಸ್ಥಿತಿಯೊದಗುತ್ತದೆ. ನಮ್ಮ ಹೋರಾಟವು ಯಶಸ್ವಿಯಾದರೂ ಅದರಿಂದಾಗಿ ಅಪಾರ ಹಾನಿಯಾಗಿ ನಾವು ತುಂಬ ತ್ಯಾಗ ಮಾಡಬೇಕಾಗುತ್ತದೆ.' ಇತ್ಯಾದಿ ('ಗ್ರಾಮಾಂತರ ವಾರ್ತೆಗಳು' ಸಂ. 43. 1893).

ಎಲ್ಲ ಫ್ರೆಂಚ್ ಪ್ರೌಢಶಾಲೆಗಳಲ್ಲಿಯೂ ಮಾನ್ಯ ಲಾವಿಸ್‌ರಿಂದ ರಚಿತವಾದ ಬಾಲಬೋಧೆ (21ನೆ ಮುದ್ರಣ, 1899) ಯನ್ನು ಅನುಸರಿಸಿಯೇ ಇತಿಹಾಸವನ್ನು ಬೋಧಿಸುವುದಕ್ಕೆ ಕಾರಣವೇನು? ಅದರಲ್ಲಿ ಫ್ರಾನ್ಸ್ ಮತ್ತು ಜರ್ಮನಿಗಳ ನಡುವಣ ಯುದ್ಧ ಹಾಗೂ ಫ್ರೆಂಚರ ಪ್ರದೇಶವನ್ನು ಜರ್ಮನರು ಆಕ್ರಮಿಸಿಕೊಂಡ ವಿಷಯಗಳನ್ನು ವಿವರಿಸಿದ ಮೇಲೆ ಪುಟದಡಿಯಲ್ಲಿ ಆ ವಿಷಯದ ಬಗ್ಗೆ ನಾನಾ ಪ್ರಶ್ನೆಗಳನ್ನು ಕೊಡಲಾಗಿದೆ. 'ತನ್ನೊಂದು ಭಾಗಪ್ರದೇಶವಲ್ಲದೆ ಫ್ರಾನ್ಸ್ ಮತ್ತೇನನ್ನು ಕಳೆದುಕೊಂಡಿತು? ಆ ಪ್ರದೇಶವನ್ನು ಕಳೆದುಕೊಂಡದ್ದರಿಂದ ಎಷ್ಟು ಮಂದಿ ಫ್ರೆಂಚರು ಜರ್ಮನರಿಗಾಗಿ ಪರಿವರ್ತಿತರಾದರು? ಈ ಫ್ರೆಂಚರು ಜರ್ಮನಿಯನ್ನು ಪ್ರೀತಿಸುತ್ತಾರೆಯೇ? ನಮ್ಮಿಂದ ಜರ್ಮನಿಯು ಕಸಿದುಕೊಂಡಿರುವುದನ್ನು ಒಂದಲ್ಲ ಒಂದು ದಿನ ಮರಳಿ ಪಡೆಯಲು ನಾವು ಮಾಡಬೇಕಾದುದೇನು?

ಅದರಲ್ಲಿ ಏಳನೇ 'ಚಾರ್ಲ್ಸ್‌ರ ಕೆಲವು ವಿಚಾರಗಳೂ' ಸೇರಿವೆ. ಅದರಲ್ಲಿ 'ಫ್ರೆಂಚ್ ಮಕ್ಕಳು ತಮ್ಮ 1870ರ ಸೋಲನ್ನು ನೆನಪಿನಲ್ಲಿಟ್ಟುಕೊಳ್ಳಬೇಕೆಂದೂ. ಆ ನೆನಪು ಅವರ ಹೃದಯಗಳನ್ನು ಭಾರವಾಗಿಸಬೇಕೆಂದೂ, ಆದರೆ 'ಈ ನೆನಪು ಅವರನ್ನು ಹತಾಶರನ್ನಾಗಿಮಾಡಬಾರದು. ಅದರ ಬದಲು, ಅವರ ಕೆಚ್ಚನ್ನು ತೀವ್ರಗೊಳಿಸಬೇಕು' ಎಂದೆಲ್ಲ ಹೇಳಲಾಗಿದೆ.

ಹೀಗೆ ಅಧಿಕೃತ ಭಾಷಣಗಳಲ್ಲೆಲ್ಲ ಶಾಂತಿಯ ಬಗ್ಗೆ ಒತ್ತಿ ಹೇಳುತ್ತಿದ್ದರೂ, ಸಾಮಾನ್ಯ ಜನತೆಯ ಮೇಲೆ, ಬೆಳೆಯುವ ಪೀಳಿಗೆಯ ಮನಸ್ಸಿನಲ್ಲಿ, ಎಂದರೆ ರಷ್ಯನ್ ಮತ್ತು ಫ್ರೆಂಚ್ ಜನತೆಯಲ್ಲೆಲ್ಲ, ಯುದ್ಧದ ಅವಶ್ಯಕತೆ, ಪಾವಿತ್ರ್ಯ, ಉಪಯುಕ್ತತೆಗಳಲ್ಲದೆ ಅವರ ಧೀರೋದಾತ್ತತೆಯ ಬಗ್ಗೆಯೂ ಪ್ರಭಾವವುಂಟುಮಾಡಲಾಗುತ್ತಿದೆ.

'ನಾವು ಯುದ್ಧದ ಬಗ್ಗೆ ಆಲೋಚಿಸುತ್ತಿಲ್ಲ; ನಾವು ಶಾಂತಿಯ ಬಗ್ಗೆ ಕಳಕಳಿಯಿಂದಿದ್ದೇವೆ'.

ಹಾಗಾದರೆ ನಮಗೆ ಕೇಳಬೇಕೆನ್ನಿಸುತ್ತದೆ: 'ಯಾವ ಭೂತ ಈ ವಿಷಯವನ್ನು ಹರಡುತ್ತಿದೆ?' ಇದು ಕೇಳಬೇಕಾದಂತಹ ಪ್ರಶ್ನೆಯಾದರೆ, ಅದನ್ನು ಕೇಳುವುದು ಬಲಿಯಾದ ನತದೃಷ್ಟರು ಯಾರು ಎನ್ನುವುದು ಸಂಪೂರ್ಣ ಸ್ಪಷ್ಟವಾಗಿಲ್ಲದಿದ್ದಾಗ.

ಈ ಯಜ್ಞಪಶುವೆಂದರೆ ಸದಾ ಮೋಸಕ್ಕೊಳಗಾದ, ಅಜ್ಞಾನಿ ಕಾರ್ಮಿಕರ ಪಂಗಡ. ಇವರು ತಮ್ಮ ಬೊಬ್ಬೆಯೆದ್ದಿರುವ ಕೈಗಳಿಂದಲೇ ನೌಕೆಗಳು, ಆಯುಧಾಗಾರಗಳು, ಸೈನಿಕರ ವಸತಿಗಳು, ಫಿರಂಗಿಗಳು, ಬಂದರುಗಳು, ಉಗಿದೋಣಿಗಳು, ಇವುಗಳನ್ನು ನಿರ್ಮಿಸಿದವರು; ಅರಮನೆಗಳನ್ನು, ಸಭಾಂಗಣಗಳನ್ನು, ವೇದಿಕೆಗಳನ್ನು ಮತ್ತು ಹೆಮ್ಮೆಯ ಕಮಾನುಗಳನ್ನು ರಚಿಸಿದವರು; ಇವರೇ ನಮ್ಮೆಲ್ಲ ವೃತ್ತಪತ್ರಿಕೆಗಳನ್ನೂ ಪುಸ್ತಕಗಳನ್ನೂ ಅಚ್ಚುಮಾಡಿದವರು.

ನಾನಾ ವಿಧವಾದ ರುಚಿಕರ ಖಾದ್ಯಗಳನ್ನೂ ದ್ರಾಕ್ಷಾರಸವನ್ನೂ ತಯಾರಿಸುವವರೂ ಇವರೇ; ಆದರೆ ಇವನ್ನೆಲ್ಲ ಬಳಸುವ ಜನರೇ ಇವರಿಗೆ ಮೋಸಮಾಡಿ ಅತ್ಯಂತ ಭಯಂಕರವಾದ ದುರಂತಗಳನ್ನುಂಟುಮಾಡುತ್ತಿದ್ದಾರೆ. ಈ ಕೃಪಾಳುಗಳಾದ ಅಜ್ಞಾನಿಗಳೇ ಯಾವಾಗಲೂ ಸುಂದರವಾದ ಉಡುಪಿನ ಅಡ್ಮಿರಲ್‌ಗಳನ್ನೋ ಅಧ್ಯಕ್ಷರುಗಳನ್ನೋ ಕಂಡಾಗ ಮಕ್ಕಳಂತೆ ಆಶ್ಚರ್ಯದಿಂದ ಬಾಯಿಬಿಟ್ಟು ನೋಡುತ್ತ. ತಮ್ಮ ಆರೋಗ್ಯಯುಕ್ತವಾದ ಬಿಳಿಯ ಹಲ್ಲುಗಳನ್ನು ಕಿರಿಯುತ್ತ. ಅವರನ್ನು ಕಂಡು ಮುಗ್ಧ ಸಂತೋಷ ಬೀರುತ್ತ ಚಟಾಕಿಗಳನ್ನು ಹಾರಿಸಿ. ಸಂಗೀತವಾದ್ಯಗಳನ್ನು ನುಡಿಸುವವರು. ಆದರೆ ಇವರಿಗೆ ದೊರೆಯುವುದು ಅವರಿಗೆ ಯೋಚಿಸಲೂ ಅವಕಾಶ ನೀಡದಂತೆ ಒದಗುವುದು. ಅಡ್ಮಿರಲ್‌ಗಳೂ ಅಲ್ಲ. ಅಧ್ಯಕ್ಷರುಗಳೂ ಅಲ್ಲ. ಧ್ವಜಗಳಾಗಲೀ ವಾದ್ಯಸಂಗೀತವಾಗಲೀ ಅಲ್ಲ. ದುಃಖಮಯ ರಣರಂಗ. ಚಳಿ. ಹಸಿವು ಕೋಪ (ಮುಂದೆ ಕೊಲೆಪಾತಕ ಶತ್ರುಗಳು. ಹಿಂದೆ ಅವರು ತಪ್ಪಿಸಿಕೊಳ್ಳದಂತೆ ಕಾಯುವ ದಯಾಹೀನ ಅಧಿಕಾರಿಗಳು). ರಕ್ತ. ಗಾಯಗಳು. ನೋವು. ಕೊಳೆತು ನಾರುವ ಹೆಣಗಳು ಹಾಗೂ ಅರ್ಥಹೀನವಾದ ಅನವಶ್ಯಕವಾದ ಸಾವು – ಇಷ್ಟೇ.

ಈಗ ಟೌಲಾನ್ ಮತ್ತು ಪ್ಯಾರಿಸ್‌ಗಳಲ್ಲಿ ಕಪ್ಪುಬಟ್ಟೆಯ ಗುಡಾರದಲ್ಲಿ ಊಟದ ನಂತರ ಆರಾಮವಾಗಿ ಕುಳಿತು. ಮುಂದೆ ಅರ್ಧ ಕುಡಿದು ಬಿಟ್ಟ ಮದ್ಯದ ಲೋಟಗಳು, ತುಟಿಗಳ ಮಧ್ಯ ಸಿಗರೇಟುಗಳು ಇವುಗಳಿರುವ ಈ ಜನರು ಭೂಪಟವೊಂದಕ್ಕೆ

ಸೂಜಿ ಚುಚ್ಚಿ ಎಲ್ಲೆಲ್ಲಿ ಎಷ್ಟೆಷ್ಟು ಬಂದೂಕಿನ ಆಹುತಿಗಳನ್ನೂ (ಯಥಾ ಪ್ರಕಾರ ಆಹುತಿಯೂ ಈ ಮುಗ್ಧ ಜನರೇ) ಧ್ವಂಸಮಾಡಿ ಯಾವ ಯಾವ ಹುದ್ದೆಗಳನ್ನು ಲಪಟಾಯಿಸುವೇಕೆಂದೋ ಅಥವಾ ಯಾವುದಾದರೊಂದು ಸೇನಾಪದಕವನ್ನೋ ಬಹುಮಾನವನ್ನೋ ಪಡೆಯಬೇಕೆಂದೋ ಯೋಚಿಸುತ್ತಿರುತ್ತಾರೆ.

## 6

ಆದರೆ ಅವರೆನ್ನುವುದು ಮಾತ್ರ 'ಅಂಥದೇನೂ ಇಲ್ಲ. ಯುದ್ಧದ ಅಭಿಲಾಷೆಯು ಸ್ವಲ್ಪವಾದರೂ ನಮಗಿಲ್ಲ. ಎರಡು ರಾಷ್ಟ್ರಗಳು ಪರಸ್ಪರ ಸಹಾನುಭೂತಿಯನ್ನು ಪಡೆದು ಅದನ್ನು ಒಬ್ಬರೊಬ್ಬರಿಗೆ ಹೇಳಿಕೊಳ್ಳುವುದಲ್ಲದೆ ಬೇರೆ ಏನೂ ಇಲ್ಲ. ಒಂದು ಮಿತ್ರ ರಾಷ್ಟ್ರದ ಪ್ರತಿನಿಧಿಗಳನ್ನು ಇನ್ನೊಂದು ರಾಷ್ಟ್ರದ ಪ್ರತಿನಿಧಿಗಳು ವಿಶೇಷ ಸಮಾರಂಭಗಳ ಮೂಲಕ ಸ್ವಾಗತಿಸುವುದರಲ್ಲಿ ತಪ್ಪೇನಿದೆ? ಯೂರೋಪಿನ ಶಾಂತಿಗೆ ಮಾರಕವಾಗಿರುವ ಅಪಾಯಕಾರಿ ನೆರೆಯರಾಷ್ಟ್ರದ ವಿರುದ್ಧವಾಗಿ ಈ ಇಬ್ಬರ ಬಾಂಧವ್ಯವು ಸಂರಕ್ಷಣೆಯನ್ನೊದಗಿಸುವ ಭಾವನೆಯಿದೆ ಎಂದರೆ ತಾನೇ ಅದು ಕೆಟ್ಟದ್ದೇ?.

ಯಾವ ಸಮರ್ಥನೆಯನ್ನೂ ನೀಡಲಾಗದ ಅತ್ಯಂತ ಸ್ಪಷ್ಟವಾದ ಮತ್ತು ನಾಚಿಕೆಯಿಲ್ಲದೆ ಹೇಳಿದ ಸುಳ್ಳಾದ್ದರಿಂದ ಇದು ಕೆಟ್ಟದ್ದೇ. ಇದ್ದಕ್ಕಿದ್ದಂತೆ ಫ್ರೆಂಚರಲ್ಲುಂಟಾದ ರಷ್ಯನರ ಬಗೆಗಿನ ಪ್ರೀತಿ. ಹಾಗೆಯೇ ಫ್ರೆಂಚರ ಬಗ್ಗೆ ರಷ್ಯನರಲ್ಲುಂಟಾದ ಪ್ರೀತಿ—ಇದು ಸುಳ್ಳು. ಇದರಲ್ಲಿ ಸೂಚಿತವಾಗಿರುವ ಜರ್ಮನರ ವಿರುದ್ಧದ ದ್ವೇಷ ಹಾಗೂ ಅಪನಂಬುಗೆಗಳು. ಸಹ ಸುಳ್ಳೆ. ಎಲ್ಲಕ್ಕಿಂತ ದೊಡ್ಡ ಸುಳ್ಳೆಂದರೆ ಈ ಅಸಭ್ಯ ಮತ್ತು ವೈಭವಯುತ ಸಮಾರಂಭಗಳೆಲ್ಲದರ ಉದ್ದೇಶವೂ ಯೂರೋಪಿನ ಶಾಂತಿರಕ್ಷಣೆ ಎನ್ನುವುದು.

ಹಿಂದಾಗಲೀ ಇಂದಾಗಲೀ ಜರ್ಮನರ ಬಗ್ಗೆ ನಮಗೆ ಯಾವುದೇ ಬಗೆಯ ವಿಶೇಷ ದ್ವೇಷ ಭಾವನೆಯೂ ಇಲ್ಲ. ಅದರಂತೆಯೇ ಹಿಂದಾಗಲೀ ಇಂದಾಗಲೀ ಫ್ರೆಂಚರ ಬಗ್ಗೆ ನಮಗೆ ಯಾವುದೇ ಬಗೆಯ ವಿಶೇಷ ಪ್ರೇಮವಿಲ್ಲ ಎನ್ನುವುದು ಎಲ್ಲರಿಗೂ ತಿಳಿದದ್ದೇ.

ಜರ್ಮನಿಯು ರಷ್ಯದ ಬಗ್ಗೆ ಸಂಚು ನಡೆಸುತ್ತಿದೆಯೆಂದೂ, ತ್ರಿಕೂಟ ಮೈತ್ರಿಯು ನಮ್ಮ ಹಾಗೂ ಯೂರೋಪಿನ ಶಾಂತಿಭಂಗಮಾಡುವುದೆಂದೂ. ನಮ್ಮ – ಫ್ರೆಂಚರ ಮೈತ್ರಿಯು ಈ ಶಕ್ತಿಗಳಿಗೆ ಸಮವಾಗುವುದರಿಂದ ಇದು ಶಾಂತಿಯನ್ನು ಉಳಿಸುವುದೆಂದೂ ಹೇಳಲಾಗುತ್ತಿದೆ. ಈ ಹೇಳಿಕೆಯು ಎಷ್ಟು ಸ್ಪಷ್ಟವಾದ ಮೂರ್ಖ ಹೇಳಿಕೆಯೆಂದರೆ ಯಾರಿಗಾದರೂ ಇದನ್ನು ಗಂಭೀರವಾಗಿ ಆಲೋಚಿಸಿ ನಿರಾಕರಿಸಬೇಕೆನಿಸುವುದಿಲ್ಲ. ಶಾಂತಿ ರಕ್ಷಣೆ ಮಾಡುವಂತಹ ಮೈತ್ರಿಯು ಎಲ್ಲ ಶಕ್ತಿಗಳೂ ಗಣಿತಾತ್ಮಕವಾಗಿ ಸಮಾನವಾಗಿರಬೇಕಾಗುತ್ತದೆ. ಈಗ ಫ್ರಾಂಕೋ – ರಷ್ಯನ್ ಮೈತ್ರಿಗೆ ಹೆಚ್ಚು ಪ್ರಾಮುಖ್ಯವಿತ್ತರೂ ಅಪಾಯವೇನೂ ಕೊನೆಗೊಳ್ಳುವುದಿಲ್ಲ. ಈ ಅಪಾಯವು ಮತ್ತಷ್ಟು ಜಾಸ್ತಿ;

ವಿಲ್‌ಹೆಲ್ಮ್‌ನ ನಾಯಕತ್ವದಲ್ಲಿನ ಯೂರೋಪಿನ ಮೈತ್ರಿಕೂಟವು ಶಾಂತಿಭಂಗ ಮಾಡುವುದಾದರೆ, ತಾನು ಕಳೆದುಕೊಂಡಿರುವ ಪ್ರದೇಶಗಳ ಬದಲು ಯಾವುದನ್ನೂ ಸ್ವೀಕರಿಸಲೊಪ್ಪದ ಫ್ರಾನ್ಸ್‌ನಿಂದ ಆಗುವ ಅಪಾಯವು ಮತ್ತಷ್ಟು ಹೆಚ್ಚು. ತ್ರಿಕೂಟ ಮೈತ್ರಿಯು ತನ್ನನ್ನು ಶಾಂತಿಕೂಟವೆಂದು ಕರೆದುಕೊಂಡರೂ ನಮಗೆನಿಸಿದ್ದು ಅದು ಯುದ್ಧಕೂಟವೆಂದೇ. ಅದೇ ಫ್ರಾಂಕೋ – ರಷ್ಯನ್ ಮೈತ್ರಿಯು ತನ್ನ ನಿಜಸ್ವರೂಪವಾದ ಯುದ್ಧಕೂಟಕ್ಕಿಂತ ಭಿನ್ನವಾಗಿ ಕಾಣಿಸಲು ಸಾಧ್ಯವಿಲ್ಲ.

ಶಕ್ತಿಗಳ ಸಮತೋಲನದಿಂದ ಶಾಂತಿ ಸ್ಥಾಪನೆಯಾಗುವುದಾದರೆ, ಈ ಸಮತೋಲನವನ್ನು ಯಾವ ಯಾವ ಅಂಶಗಳಲ್ಲಿ ಸ್ಥಾಪಿಸಬೇಕೆಂದು ಯಾರಾದರೂ ಹೇಳಲು ಸಾಧ್ಯವೇ? ರಷ್ಯ ಹಾಗೂ ಫ್ರೆಂಚರ ಸ್ನೇಹವು ತಮಗೆ ಅಪಾಯಕಾರಿಯೆಂದೂ ಅದರ ವಿರುದ್ಧ ತಾವೊಂದು ಮೈತ್ರಿಕೂಟವನ್ನು ಸ್ಥಾಪಿಸಬೇಕೆಂದೂ ಇಂಗ್ಲಿಷರು ಈಗ ಹೇಳಲಾರಂಭಿಸಿದ್ದಾರೆ. ಹಾಗಾದರೆ ಈ ಸಮತೋಲ ಸಾಧನೆಗಾಗಿ ಯೂರೋಪನ್ನು ಮೈತ್ರಿಕೂಟಗಳ ಹೆಸರಿನಲ್ಲಿ ಇನ್ನೆಷ್ಟು ಭಾಗಗಳಾಗಿ ಒಡೆಯಬೇಕು? ಅಷ್ಟೇಕೆ, ಇದು ನಿಜವಾದುದಾದರೆ, ಯಾವುದೇ ಒಂದು ಮಾನವ ಸಮಾಜದಲ್ಲಿ ಅತ್ಯಂತ ಪ್ರಬಲನಾದ ವ್ಯಕ್ತಿಯು ಅಪಾಯಕಾರಿ, ಇತರರು ಅವರ ಶಕ್ತಿಗೆ ಸಮವಾದ ಬೇರೆ ಬೇರೆ ಮೈತ್ರಿಕೂಟಗಳನ್ನು ಸ್ಥಾಪಿಸಿಕೊಳ್ಳಬೇಕು.

ಜನರ ಪ್ರಶ್ನೆಯೆಂದರೆ 'ಫ್ರಾನ್ಸ್ ಮತ್ತು ರಷ್ಯಗಳ ಶಾಂತಿಸ್ಥಾಪನೆಗಾಗಿ ಪರಸ್ಪರ ಸಹಾನುಭೂತಿಯನ್ನು ವ್ಯಕ್ತಪಡಿಸಿದರೆ, ಏನು ತಪ್ಪು?

ಯಾಕೆ ತಪ್ಪೆಂದರೆ ಅದು ಸುಳ್ಳಾದುದರಿಂದ. ಹಾನಿಯನ್ನುಂಟುಮಾಡದೆ ಸುಳ್ಳನ್ನು ಹೇಳಲು ಸಾಧ್ಯವಿಲ್ಲದ್ದರಿಂದ.

'ಈ ಭೂತವು ಕೊಲೆಪಾತಕ ಹಾಗೂ ಅಸತ್ಯಜನಕ'. ಸುಳ್ಳುಗಳು ಅದರಲ್ಲೂ ಇಂತಹ ಸುಳ್ಳುಗಳು ಕೊಲೆಯತ್ತ ಕೊಂಡೊಯ್ಯುತ್ತವೆ.

ಈಗಿನಂತೆಯೇ, ಟರ್ಕಿಷ್ ಯುದ್ಧದ[7] ಮುಂಚೆಯೂ ಇದ್ದಕ್ಕಿದ್ದಂತೆ ರಷ್ಯನರಾದ ನಮ್ಮ ಹಾಗೂ ನೂರಾರು ವರ್ಷಗಳಿಂದ ಯಾರೂ ಗಮನವನ್ನೇ ನೀಡಿರದಿದ್ದ ಯಾವುದೋ ಸ್ಲಾವೋನಿಕ್ ಸೋದರರ ನಡುವೆ ಪ್ರೇಮಭಾವನೆಯುಂಟಾಗಿತ್ತು: ವಾಸ್ತವವಾಗಿ ಮಾಂಟೆನೆಗ್ರಿಗರಿಗಿಂತಲೂ ಸರ್ಬಿಯನರಿಗಿಂತಲೂ ಬಲ್ಗೇರಿಯನರಿಗಿಂತಲೂ ಜರ್ಮನರು, ಫ್ರೆಂಚರು ಹಾಗೂ ಇಂಗ್ಲೀಷರೇ ನಮಗೆ ಹೆಚ್ಚು ಹತ್ತಿರದವರಾಗಿಯೂ ಬಂಧುತ್ವದಿಂದಲೂ ಹಿಂದೆಯೂ ಇದ್ದರು, ಈಗಲೂ ಇದ್ದಾರೆ. ಆಗಲೂ ಇಂತಹುದೇ ಉತ್ಸಾಹ, ಸ್ವಾಗತ ಸಮಾರಂಭಗಳೆಲ್ಲ ಪ್ರಾರಂಭವಾದುವು. ಅದಕ್ಕೆ ಈಗ ಪ್ಯಾರಿಸಿನಲ್ಲಿ ದೇಶ

---

[7] 1877–78 ರ ರಷ್ಯನ್–ಟರ್ಕಿಷ್ ಯುದ್ಧ

ಪ್ರೇಮದ ಪ್ರತೀಕಗಳೆಂದು ಹೇಳಲಾಗುತ್ತಿರುವ ಅಕ್ಸೆಕಾವ್‌ರೂ ಕಾಟ್ಕಾವ್‌ರೂ ಸೇರಿದ್ದರು. ಈಗಿನಂತೆ ಆಗಲೂ ರಷ್ಯನರಿಗೂ ಸ್ಲಾವ್ ಜನರಿಗೂ ನಡುವೆ ಒಮ್ಮೆಲೇ ಉದಿಸಿದ್ದ ಪರಸ್ಪರ ಪ್ರೇಮಭಾವದ ಬಗ್ಗೆಯೇ ಎಲ್ಲರೂ ಮಾತಾಡಿದ್ದರು. ಈಗ ಪ್ಯಾರಿಸ್‌ನಲ್ಲಿ ಹೇಗೆ ನಡೆಯುತ್ತಿದೆಯೋ ಅದೇ ರೀತಿ ಆಗಲೂ ಮಾಸ್ಕೋದಲ್ಲಿ ಊಟ – ಕುಡಿತಗಳು ನಡೆದವು. ಒಬ್ಬರೊಬ್ಬರು ಅರ್ಥಹೀನ ಮಾತುಗಳನ್ನಾಡಿ ಕೊಂಡರು, ಅವರ ಹೃದಯ ತುಂಬಿಬಂದು ಭಾವುಕರಾದರು. ಅವರ ಮೈತ್ರಿಯ ಹಾಗೂ ಶಾಂತಿಗಳ ಬಗ್ಗೆ ಮಾತನಾಡಿದರು. ಆದರೆ ಮುಖ್ಯ ವಿಷಯವಾದ ಟರ್ಕಿಯ ವಿರುದ್ಧ ಮಾಡಬೇಕಾದ ಸಂಚಿನ ಬಗ್ಗೆ ಮಾತ್ರ ಮೌನದಿಂದಿದ್ದರು. ಈ ಭಾವೋದ್ವೇಗವನ್ನು ಮೊದಲು ವೃತ್ತಪತ್ರಿಕೆಗಳು ಉಂಟುಮಾಡಿದುವು. ಆಮೇಲೆ ನಿಧಾನವಾಗಿ ಸರ್ಕಾರವೂ ಈ ಆಟದಲ್ಲಿ ಭಾಗವಹಿಸಲು ಪ್ರಾರಂಭಿಸಿತು. ಸರ್ಬಿಯ ಪ್ರತಿಭಟಿಸಿತು. ರಾಜತಂತ್ರಿಕ ಪತ್ರಗಳೂ ಅರ್ಧ – ಅಧಿಕೃತ ಲೇಖನಗಳೂ ಬರೆಯಲ್ಪಟ್ಟವು. ವೃತ್ತಪತ್ರಿಕೆಗಳು ಹೆಚ್ಚು ಹೆಚ್ಚು ಸುಳ್ಳು ಹೇಳತೊಡಗಿದುವು. ಸುಳ್ಳುಗಳನ್ನು ಸೃಷ್ಟಿಸಿ ಕಾವು ಏರುವಂತೆ ಮಾಡಿದುವು. ಕೊನೆಯಲ್ಲಿ ನಿಜವಾಗಿಯೂ ಯುದ್ಧವು ಬೇಕಿರದಿದ್ದ ಅಲೆಕ್ಸಾಂಡರ್ ಯುದ್ಧಕ್ಕೆ ಒಪ್ಪಿ ಕೊಳ್ಳದೆ ನಿರ್ವಾಹವಿಲ್ಲದಂತಾಯಿತು. ನಮಗೆಲ್ಲ ತಿಳಿದಂತೆ ಯುದ್ಧವು ನಡೆದೇ ನಡೆಯಿತು. ನೂರಾರು ಸಾವಿರಾರು ಮಂದಿ ಮುಗ್ಧರು ಸತ್ತರು. ಲಕ್ಷಾಂತರ ಜನರು ಭಿಕಾರಿಗಳಾದರು. ಭಯಾತಪ್ತರಾದರು. ಟೌಲಾನ್ ಮತ್ತು ಪ್ಯಾರಿಸ್‌ಗಳಲ್ಲಿ ನಡೆದು ವೃತ್ತಪತ್ರಿಕೆಗಳಲ್ಲಿ ಇನ್ನೂ ಮುಂದುವರಿಯುತ್ತಿರುವುದೆಲ್ಲ ಖಂಡಿತವಾಗಿ ಅದೇ ದಾರಿ ಯಲ್ಲಿ. ಅಥವಾ ಮತ್ತಷ್ಟು ಭೀಕರ ದುರಂತದೆಡೆಗೆ ಸಾಗುತ್ತಿವೆ. ಅನೇಕ ಜನರಲ್‌ಗಳೂ ಸಚಿವರೂ 'ಜಾರ್‌ದೊರೆಗಳನ್ನು ದೇವರು ಕಾಪಾಡಲಿ' ಎನ್ನುತ್ತಾ 'ಲಾ ಮಾರ್ಸೆಲೀಸ್'ಗಳ ನಾದದ ಹಿನ್ನೆಲೆಯಲ್ಲಿ ಫ್ರಾನ್ಸ್. ರಷ್ಯಾ. ನಾನಾ ಸೈನ್ಯ ತುಕಡಿಗಳಿಗೆ. ಸೈನ್ಯ ಮತ್ತು ನೌಕಾಪಡೆಗಳಿಗೆ ಶುಭಕೋರಿ ಮದ್ಯಪಾನ ಮಾಡುತ್ತಾರೆ. ವೃತ್ತಪತ್ರಿಕೆಗಳು ಆ ತಟವಟ ಗಳನ್ನೆಲ್ಲ ಪ್ರಕಟಿಸುತ್ತವೆ: ತಮ್ಮ ಕಾಲ ಶಕ್ತಿಗಳನ್ನು ಹೇಗೆ ವ್ಯಯಿಸಬೇಕೆಂದು ತಿಳಿಯದ ಶ್ರೀಮಂತರು ಬಾಲಿಶವಾದ ಭಾಷಣಗಳನ್ನು ಬಿಗಿದು ಜರ್ಮನಿಯ ಬಗ್ಗೆ ದ್ವೇಷಭಾವನೆ ಯನ್ನು ಕೆದಕುತ್ತಾರೆ. ಅಲೆಕ್ಸಾಂಡರ್ ಅಂತಹವರು ಎಷ್ಟೇ ಶಾಂತಿಪರರಾಗಿರಲಿ. ಅವರು ಯುದ್ಧಕ್ಕೆ ಒಪ್ಪಿಗೆ ನೀಡದೆ ವಿಧಿಯೇ ಇಲ್ಲವೆಂಬಂತೆ ಘಟನೆಗಳು ರೂಪಿತವಾಗುತ್ತವೆ. ಸುತ್ತಲಿನ ಪ್ರತಿಯೊಬ್ಬರೂ. ಎಲ್ಲ ವೃತ್ತಪತ್ರಿಕೆಗಳೂ. ಮತ್ತು ಇಡೀ ರಾಷ್ಟ್ರದ ಜನಾಭಿ ಪ್ರಾಯವೇ (ಅಥವಾ ಅಂತಹ ಪ್ರಸಂಗಗಳಲ್ಲಿ ಹಾಗೆನ್ನಿಸುವ) ಯುದ್ಧವನ್ನು ಬಯಸು ತ್ತಾರೆ. ಆಚೆ ಈಚೆ ಕಣ್ಣುಹಾಯಿಸುವುದರೊಳಗಾಗಿ ಯಥಾಪ್ರಕಾರವಾದ ಅಶುಭಕರವಾದ ಹಾಗೂ ಅರ್ಥಹೀನವಾದ ಘೋಷಣೆಗಳು ಪತ್ರಿಕೆಗಳಲ್ಲಿ ಈ ರೀತಿ ಕಾಣಿಸಿಕೊಳ್ಳುತ್ತವೆ.

'ರಷ್ಯದ ಎಲ್ಲ ಸಂಸ್ಥಾನಗಳ ನಿರಂಕುಶ ಪ್ರಭುವರೇಣ್ಯರೂ. ಪೋಲೆಂಡಿನ ರಾಜರೂ. ಫಿನ್‌ಲೆಂಡಿನ ಗ್ರಾಂಡ್ ಡ್ಯೂಕರೂ ಇತ್ಯಾದಿ ಆದ ನಾವು ನಮ್ಮ ವಿಶ್ವಾಸಪಾತ್ರ

ಪ್ರಜೆಗಳಿಗೆ ತಿಳಿಯಪಡಿಸುವುದೇನೆಂದರೆ ದೇವರಿಂದ ನಮಗೆ ವಹಿಸಲ್ಪಟ್ಟಂತಹ ನಮ್ಮ ಪ್ರಿಯ ಜನರ ಒಳಿತನ್ನು ಸಾಧಿಸುವುದಕ್ಕಾಗಿ ಅವರನ್ನೆಲ್ಲ ಯಮಾಲಯಕ್ಕೆ ಕಳುಹಿಸುವುದನ್ನು ದೇವರಿಗೆ ಮಾಡಬೇಕಾದ ನಮ್ಮ ಕರ್ತವ್ಯವೆಂದು ನಾವು ಭಾವಿಸಿದ್ದೇವೆ. ದೇವರು ಅವರನ್ನೆಲ್ಲ ಕಾಪಾಡಲಿ'. ಇತ್ಯಾದಿ.

ಗಂಟೆಗಳು ಕಿವಿಗಡಚಿಕ್ಕುವಂತೆ ಧ್ವನಿಮಾಡುತ್ತವೆ, ದೀರ್ಘ ಕೇಶಿಗಳೂ ಬಿಳಿಯ ನೀಳವಸ್ತ್ರಧಾರಿಗಳೂ ಆದ ಜನರು ಕೊಲೆಯ ವಿರುದ್ಧವಾದ ತಮ್ಮ ಪ್ರಾರ್ಥನೆಗಳನ್ನು ಪ್ರಾರಂಭಿಸುತ್ತಾರೆ. ಚಿರಪರಿಚಿತವಾದ ಅನಾದಿಯಾದ ಭಯಂಕರ ವ್ಯವಹಾರವು ಮತ್ತೆ ಪ್ರಾರಂಭವಾಗುತ್ತದೆ. ಪತ್ರಿಕಾ ಸಂಪಾದಕವರೇಣ್ಯರು ರಾಷ್ಟ್ರಭಕ್ತಿಯ ಹೆಸರಲ್ಲಿ ದ್ವೇಷ ಕೊಲೆಪಾತಕತನಗಳನ್ನು ಪ್ರಚೋದಿಸಲು ತೊಡಗಿ. ತಮ್ಮ ಪತ್ರಿಕೆಗಳ ಪ್ರಸಾರವನ್ನು ದ್ವಿಗುಣಗೊಳಿಸಿ ಸಂತೋಷಿಸುತ್ತಾರೆ. ಉತ್ಪಾದಕರೂ ವ್ಯಾಪಾರಿಗಳೂ ಹಾಗೂ ಸೈನ್ಯಕ್ಕೆ ಸರಬರಾಜು ಮಾಡುವ ಕಂಟ್ರಾಕ್ಟ್‌ದಾರರೂ ಮುಂದೆ ತಮಗಾಗಿ ಕಾದಿರುವ ದುಪ್ಪಟ್ಟು ಲಾಭದ ನಿರೀಕ್ಷಣೆಯಿಂದ ಆನಂದದಿಂದ ಅತ್ತಿತ್ತ ತಾರಾಡುತ್ತಾರೆ. ಎಲ್ಲ ವಿಧದ ಅಧಿಕಾರಿಗಳೂ ಯಥಾರೀತಿಗಿಂತ ಹೆಚ್ಚು ಲಪಟಾಯಿಸುವ ಆಸೆಯಿಂದ ತುಂಬು ಕೆಲಸದಲ್ಲಿ ತೊಡಗುತ್ತಾರೆ. ಸೇನಾ ದಂಡನಾಯಕರುಗಳು ಎರಡರಷ್ಟು ಸಂಬಳ ಹಾಗೂ ಆಹಾರವನ್ನು ಪಡೆದು. ತಮ್ಮ ಕೊಲೆಗಳಿಗಾಗಿ ನಾನಾ ವಿಧವಾದ ಬಹುಮಾನಗಳನ್ನೂ ಪದಕಗಳನ್ನೂ ಬಿಲ್ಲೆಗಳನ್ನೂ ಪಡೆಯುವ ಆಸೆಯಿಂದ ತರಾತುರಿಯಿಂದ ಓಡಾಡುತ್ತಾರೆ. ಕೆಲಸವಿಲ್ಲದ ಮಹನೀಯರೂ ಮಹಿಳೆಯರೂ ತಮ್ಮ ಸೋದರರೂ ಗಂಡಂದಿರೂ ಕೊಲ್ಲಲು ಉದ್ಯುಕ್ತರಾದ ಜನರಿಗೆ ಶುಶ್ರೂಷೆ ನಡೆಸಲು ತಮ್ಮ ಹೆಸರುಗಳನ್ನು ರೆಡ್‌ಕ್ರಾಸ್ ಸಂಸ್ಥೆಯಲ್ಲಿ ನೋಂದಾಯಿಸುವ ಗಲಿಬಿಲಿಯಲ್ಲಿ ತೊಡಗುತ್ತಾರೆ. ಹೀಗೆ ಮಾಡುವುದರಿಂದ ತಾವೊಂದು ಪ್ರಚಂಡ ಜನತಾಸೇವೆಯಲ್ಲಿ ತೊಡಗಿದ್ದೇವೆಂದು ಭ್ರಮಿಸುತ್ತಾರೆ.

ನೂರಾರು ಸಾವಿರ ಸರಳ ದಯಾರ್ದ್ರ ಜನರು ಶಾಂತ ಜೀವನದಿಂದಲೂ ತಮ್ಮ ಹೆಂಡತಿ ತಾಯಂದಿರು ಮಕ್ಕಳಿಂದ ವಂಚಿತರಾಗಿ. ತಮ್ಮ ಕೈಗಳಲ್ಲಿ ಭೀಕರ ಆಯುಧಗಳನ್ನು ಹಿಡಿದು ತಮ್ಮನ್ನು ನೂಕಿದೆಡೆ ಭಾರವಾಗಿ ನಡೆದು. ತಮ್ಮ ಹೃದಯದಲ್ಲಾದ ನಿರಾಸೆಯನ್ನು ಹಾಡು ವ್ಯಭಿಚಾರ ಪ್ರೋತ್ಸಾಹಗಳಿಂದ ಹೋಗಲಾಡಿಸಲು ಪ್ರಯತ್ನಿಸುತ್ತಾರೆ. ನಡೆದು, ಚಳಿಯಿಂದ ಹೆಪ್ಪಾಗಿ. ಹಸಿವಿನಿಂದ ನರಳಿ ರೋಗಕ್ಕೊಳಗಾಗುತ್ತಾರೆ. ಕೆಲವರು ಈ ರೋಗಗಳಿಂದ ಸತ್ತರೆ ಮತ್ತೆ ಕೆಲವರು ತಮ್ಮಂತೆ ಸಾವಿರಾರು ಮಂದಿಯನ್ನು ಕೊಲ್ಲುವ ಜನರನ್ನೆದುರಿಸಬೇಕಾದ ಸ್ಥಳವನ್ನು ಹೇಗೋ ತಲುಪುತ್ತಾರೆ. ತಾವು ಹೀಗೇಕೆ ಮಾಡುತ್ತಿದ್ದೇವೆಂದರಿಯದೆ. ಈ ಮುಂಚೆ ಎಂದೂ ಕಂಡರಿಯದೆ. ತಮಗೆ ಯಾವ ಅನ್ಯಾಯವನ್ನೂ ಮಾಡದ 'ಮಾಡಲಾರದ ಸಾವಿರಾರು ಮಂದಿಯನ್ನು ಅವರೂ ಕೊಲೆಗೈಯುತ್ತಾರೆ.

ರೋಗಗ್ರಸ್ತರ. ಗಾಯಾಳುಗಳ. ಸತ್ತವರ ಸಂಖ್ಯೆಯು ಅವರನ್ನು ಒಯ್ಯುವ ಕೈಗಳಿಗೆ ಅಸಾಧ್ಯವೆನ್ನುವಷ್ಟು ಹೆಚ್ಚಿದಾಗ. ಕೊಳೆತ ದೇಹಗಳ ಗಬ್ಬುವಾಸನೆಯು ವಾತಾವರಣದಲ್ಲೆಲ್ಲ ಹರಡಿ ದಂಡನಾಯಕರುಗಳಿಗೂ ಅಸಹ್ಯವೆನಿಸಿದಾಗ ಅದನ್ನವರು ಸ್ವಲ್ಪಕಾಲ ನಿಲ್ಲಿಸುತ್ತಾರೆ: ಆಗ ಗಾಯಗೊಂಡವರನ್ನು ಹೇಗೋ ಸಾಗಿಸಲಾಗುತ್ತದೆ. ರೋಗಿಗಳನ್ನು ತಂದು ರಾಶಿಯಾಗಿ ಸುರಿದು ವಿಧಿಯ ಕೃಪೆಗೆ ಬಿಡಲಾಗುತ್ತದೆ. ಸತ್ತವರನ್ನು ನೆಲದಲ್ಲಿ ಹೂಳಿ ನಿಂಬೆ ರಸದಿಂದ ಮೇಲೆ ಚುಮುಕಿಸಲಾಗುತ್ತದೆ. ಈ ತರಲೆಯನ್ನು ಪ್ರಾರಂಭಿಸಿದವರಿಗೇ ತಲೆಚಿಟ್ಟು ಹಿಡಿಯುವವರೆಗೂ ಅಥವಾ ಇದನ್ನು ಅವಶ್ಯಕವೆಂದವರು ತಮಗೆ ಬೇಕಾದುದನ್ನು ಗಿಟ್ಟಿಸುವವರೆಗೂ ಮತ್ತೊಮ್ಮೆ ಈ ಭ್ರಮಾಧೀನ ಜನಸಂದಣಿ ಮುನ್ನಡೆಯುತ್ತದೆ.

ಎಂದರೆ ಮತ್ತೊಮ್ಮೆ ಜನರೆಲ್ಲ ಅನಾಗರಿಕರಾಗುತ್ತಾರೆ. ಭೀಕರರಾಗುತ್ತಾರೆ. ನಿರ್ಮಾನುಷರಾಗುತ್ತಾರೆ. ಪ್ರಪಂಚದಿಂದ ಪ್ರೇಮಭಾವವೆಂಬುದು ಕರಗಿಹೋಗುತ್ತದೆ, ಜನಸಮುದಾಯವನ್ನು ದಯಾಪೂರಿತಗೊಳಿಸಲು ಪ್ರಾರಂಭವಾಗಿದ್ದ ಕಾರ್ಯವು ಮುಂದೆ ನೂರಾರು ವರುಷಗಳು ಕುಂಠಿತಗೊಳ್ಳುವಂತಾಗುತ್ತದೆ. ಮತ್ತೊಮ್ಮೆ ಯಾರು ಇದರಿಂದ ಲಾಭ ಸಂಪಾದಿಸಿದ್ದರೋ ಅವರು ಈಗ ನಡೆದ ಯುದ್ಧವು ಅದು ಎಷ್ಟು ಅವಶ್ಯಕವಾಗಿದ್ದಿತೆಂಬುದನ್ನು ಸೂಚಿಸುತ್ತದೆಂದು ಉದ್ಘೋಷಿಸಿ ಮುಂದಿನ ಪೀಳಿಗೆಯನ್ನು ಬಾಲ್ಯದಿಂದಲೂ ಅವರ ಮನಸ್ಸನ್ನು ಕೊಂಕುಗೊಳಿಸಿ. ಸಿದ್ಧಪಡಿಸುತ್ತಾರೆ.

## 7

ಆದ್ದರಿಂದ ಟೌಲಾನ್ ಸಮಾರಂಭಗಳಂತಹ ರಾಷ್ಟ್ರಭಕ್ತಿಯ ಪ್ರದರ್ಶನಗಳು ನಡೆದಾಗ. ಜನರ ಆಶೋತ್ತರಗಳಿಗೆ ಒದಗುವ ಸ್ಥಿತಿಯು ಸೂಚಿತವಾಗುತ್ತದೆ: ಹೊರ ನೋಟಕ್ಕೆ ಇದು ತುಂಬ ದೂರ ಭವಿಷ್ಯದಲ್ಲಿ ನಡೆಯುವುದೆನಿಸಿದ್ದರೂ ರಾಷ್ಟ್ರಭಕ್ತಿಯ ಫಲವಾಗಿ ಈಗಾಗಲೇ ಇರುವ ಅಸಮಾನತೆಗೆ ಅವರು ಎಂದೆಂದೂ ಒಳಗಾಗುತ್ತಾರೆ. ಆದರೆ ಇಂತಹ ಸಮಾರಂಭಗಳ ಮಹತ್ವವನ್ನು ನಿಜವಾಗಿ ಅರಿತವರು. ಅವು ಮೂಕವಾಗಿ ಸೂಚಿಸುವುದನ್ನು ಪ್ರತಿಭಟಿಸದೆ ಇರಲಾರರು. ಪ್ರತಿಯೊಬ್ಬ ರಷ್ಯನ್ ಪ್ರಜೆಯೂ ಕ್ರೋನ್‌ಸ್ಟಾಟ್. ಟೌಲಾನ್ ಮತ್ತು ಪ್ಯಾರಿಸ್‌ಗಳಲ್ಲಿ ನಡೆದುದಕ್ಕೆ ತನ್ನ ಬೆಂಬಲವನ್ನು ಸೂಚಿಸುತ್ತಾನೆಂದೂ. ಈ ಮೈತ್ರಿಯು ಜನರೆಲ್ಲರ ಅಂತರಾಳದ ಬಯಕೆಯಾಗಿ ಜೀವನದಲ್ಲೂ ಸಾವಿನಲ್ಲೂ ನೆರವೇರಿಸಲ್ಪಡುತ್ತದೆಂದೂ ಇಂಥ ಜನರೂ ಪತ್ರಕರ್ತರೂ ಹೇಳಿದಾಗಲಾಗಲೀ. ರಷ್ಯನ್ ವಿದ್ಯಾಸಚಿವರು ತಮ್ಮ ಆಡಳಿತದಲ್ಲಿನ ಎಲ್ಲರೂ (ಮಕ್ಕಳು. ಪಂಡಿತರು ಮತ್ತು ರಷ್ಯನ್ ಸಾಹಿತಿಗಳು) ತಮ್ಮ ಭಾವನೆಯನ್ನೇ ಪಡಿದಿದ್ದಾರೆಂದು ಫ್ರೆಂಚ್ ಸಚಿವರಿಗೆ ಹೇಳಿದಾಗಲಾಗಲೀ. ರಷ್ಯನ್ ಸೈನ್ಯ ತುಕಡಿಯ ದಳವಾಯಿಯು ತಮಗೆ ನೀಡಿದ ಸ್ವಾಗತಕ್ಕಾಗಿ ಇಡೀ ರಷ್ಯದ ಜನತೆಯೆಲ್ಲ ಫ್ರೆಂಚ್ ದಳವಾಯಿಗೆ ಕೃತಜ್ಞವಾಗಿರುವುದೆಂದು ಹೇಳಿದಾಗಲಾಗಲೀ. ಮುಖ್ಯ ಧರ್ಮಾಧಿಕಾರಿಗಳು ರಷ್ಯನ್ ರಾಜಕುಟುಂಬದ ಕಲ್ಯಾಣಕ್ಕಾಗಿ ನಡೆಸಿದ ಫ್ರೆಂಚರ ಪ್ರಾರ್ಥನೆಯು ಜಾರ್‌ರನ್ನು

ಪ್ರೀತಿಸುವ ಎಲ್ಲಾ ರಷ್ಯನರ ಹೃದಯಗಳಲ್ಲೂ ಪ್ರತಿಧ್ವನಿಸುವುದೆಂದು ತಮ್ಮ ಗುಂಪಿನ ಪರವಾಗಿ ಆಶ್ವಾಸನೆ ನೀಡಿದಾಗಲಾಗಲೀ ರಷ್ಯನ್ ಜನರ ಪ್ರತಿನಿಧಿಯೆಂದು ಕರೆಸಿಕೊಳ್ಳುವ ಪ್ಯಾರಿಸ್‌ನಲ್ಲಿರುವ ರಷ್ಯನ್ ರಾಯಭಾರಿಯು. ಪಂಚಭಕ್ಷ್ಯ ಪರಮಾನ್ನಗಳನ್ನುಂಡು ಗ್ರಾಂಡ್ ಮೊಯೆಟ್ ಶಾಂಪೇನಿನ ಲೋಟವನ್ನು ಕೈಯಲ್ಲಿ ಹಿಡಿದು ರಷ್ಯನರೆಲ್ಲರ ಹೃದಯಗಳೂ ಸುಂದರ ಫ್ರಾನ್ಸ್‌ನಬಗ್ಗೆ ಇದ್ದಕ್ಕಿದ್ದಂತೆ ಉಕ್ಕಿ ಹರಿಯುತ್ತಿರುವ ಪ್ರೇಮಭಾವನೆಯನ್ನು ಏಕ ಕಂಠದಿಂದ ತಮ್ಮ ಹೃದಯದಾತೆಯೇ ಉಲಿಯುತ್ತಿವೆಯೆಂದು ಘೋಷಿಸಿದಾಗಲಾಗಲೀ ಅಂಥ ಹುಚ್ಚಿನಿಂದ ಪಾರಾಗಿರುವ ನಾವು ಹೇಳಿಕೆಗಳ ಬಗ್ಗೆ ತೀವ್ರವಾಗಿ ಪ್ರತಿಭಟಿಸಬೇಕು. ನಮ್ಮ ಹೃದಯಗಳು ಪತ್ರಕರ್ತರ. ಸಚಿವರ. ದಳವಾಯಿಗಳ ಮುಖ್ಯ ಧರ್ಮಾಧಿಕಾರಿಗಳ ಹಾಗೂ ರಾಯಭಾರಿಗಳ ಹೃದಯಗಳ ಭಾವನೆಯೊಂದಿಗೆ ಏಕಕಂಠದಿಂದ ಕೂಡಿಲ್ಲ ವೆಂಬುದಷ್ಟೇ ಅಲ್ಲ. ಅವರು ತಮ್ಮ ಮಾತು. ನಡತೆಗಳ ಮೂಲಕ. ಪ್ರಜ್ಞಾಪೂರ್ವಕ ವಾಗಿಯೋ ಅಲ್ಲದೆಯೋ ಎಲ್ಲೆಡೆಗೂ ಹರಡುತ್ತಿರುವ ಈ ಅತ್ಯಂತ ಅಪಾಯಕಾರಿ ಸುಳ್ಳು ಹಾಗೂ ಅಪಕಾರ್ಯಗಳ ಬಗ್ಗೆ ನಮಗೆ ಕೋಪವೂ ಜುಗುಪ್ಸೆಯೂ ಉಂಟಾಗಿದೆ ಯೆಂದೂ ಸಾರಿಹೇಳಬೇಕು: ಇದು ನಮ್ಮ ಕರ್ತವ್ಯ. ಲಕ್ಷಾಂತರ ರಷ್ಯನರಿಗೆ ನಾವು ನೆರವೇರಿಸಬೇಕಾದ ಕರ್ತವ್ಯ. ಅವರು ಮೊಯೆಟ್ಟನ್ನು ಎಷ್ಟಾದರೂ ಕುಡಿದುಕೊಳ್ಳಲಿ. ಎಷ್ಟಾದರೂ ಲೇಖನಗಳನ್ನು ಬರೆಯಲಿ ಭಾಷಣಗಳನ್ನು ಕೊರೆಯಲಿ-ತಮ್ಮ ಪಾಡಿಗಷ್ಟೇ ಮಾಡಿಕೊಳ್ಳಲಿ. ಕ್ರಿಶ್ಚಿಯನ್ನರೆಂದು ಪರಿಗಣಿಸಿಕೊಳ್ಳುತ್ತಿರುವ ನಾವು ಈ ಮಹಾನ್ ವ್ಯಕ್ತಿಗಳ ಲೇಖನಗಳಿಗಾಗಲೀ ನುಡಿಗಳಿಗಾಗಲೀ ಬದ್ಧರಾಗಲು ಬಯಸುವುದಿಲ್ಲ.

ಅದನ್ನು ನಾವು ಒಪ್ಪದಿರಲು ಕಾರಣವೇನೆಂದರೆ: ಈ ಪ್ರಮತ್ತ ಆನಂದ. ಭಾಷಣ. ಅಪ್ಪುಗೆಗಳ ಹಿಂದೆ ಏನು ಅಡಗಿಕೊಂಡಿದೆಯೆಂಬುದು ನಮಗೆ ತಿಳಿದಿದೆ. ಅವರು ಹೇಳುವಂತೆ ಇವೆಲ್ಲ ಶಾಂತಿಸ್ಥಾಪನೆ ಮಾಡಬಲ್ಲವೆಂದು ನಮಗೆ ನಂಬಿಕೆಯಿಲ್ಲ. ಅದರ ಬದಲು ಇವೆಲ್ಲ ಪಾತಕವೊಂದರಲ್ಲಿ ಪಾಲ್ಗೊಳ್ಳುವ ಸಲುವಾಗಿ ಪಾತಕಿಗಳು ನಡೆಸುವ ಅಟ್ಟಹಾಸಕರ ಕುಡಿತದಂತೆ ಕಾಣಿಸುತ್ತವೆ.

## 8

ನಾಲ್ಕು ವರ್ಷಗಳ ಹಿಂದೆ ಟೌಲಾನ್ ವಸಂತದ ಕೋಗಿಲೆಯೊಂದು ಜರ್ಮನಿ ಯೊಡನೆ ಯುದ್ಧ ಹೂಡಲು ಬೆಂಬಲಿಸುತ್ತಿದ್ದ ಒಬ್ಬ ಪ್ರಸಿದ್ಧ ಚಳುವಳಿಗಾರ[8] ಫ್ರಾನ್ಸ್ ಮತ್ತು ರಷ್ಯಗಳ ಮೈತ್ರಿಗೆ ನೆಲವನ್ನು ಹದಗೊಳಿಸಲು ರಷ್ಯಕ್ಕೆ ಬಂದು ನಮ್ಮನ್ನು ಸಂದರ್ಶಿಸಿತು. ಅವನು ಬಂದದ್ದು ನಾವು ನಮ್ಮ ಬೆಳೆಗಳನ್ನು ಕೊಯ್ಯುತ್ತಿದ್ದಾಗ. ನಾವು ಊಟಕ್ಕೆಂದು ಮನೆಗೆ ಹೋದಾಗ ಅವನ ಪರಿಚಯವಾಯಿತು. ಸ್ವಲ್ಪ ಕಾಲದ ನಂತರ ಅವನು ತಾನು 1870ರ ಯುದ್ಧದಲ್ಲಿ ಹೋರಾಡಿದ ರೀತಿ. ತನ್ನನ್ನು

---

8 'ಚಾಂಟ್ಸ್ ದು ಸೋಲ್ಡಾತ್'ನ ಲೇಖಕನಾದ ಪಾಲ್ ಡೆರೌಲೇಡ್ ( 1846–1914)

ಸೆರೆಹಿಡಿದರೂ ತಾನು ತಪ್ಪಿಸಿಕೊಂಡು ಬಂದ ಬಗೆ. ಆಗಿನಿಂದ ಫ್ರಾನ್ಸ್‌ನ ಗೌರವ ಘನತೆಗಳು ಮೊದಲಿನಂತೆ ಆಗುವವರೆಗೂ ಜರ್ಮನಿಯ ವಿರುದ್ಧವಾಗಿ ತಾನು ಚಳುವಳಿ ಹೂಡಲು ಮಾಡಿದ ರಾಷ್ಟ್ರಭಕ್ತಿಯಿಂದ ಪ್ರೀತಿಯಿಂದ ಪ್ರತಿಜ್ಞೆ – ಅದರ ಬಗ್ಗೆ ಅವನಲ್ಲಿ ಹೆಮ್ಮೆ ಕಾಣುತ್ತಿತ್ತು – ಇವೆಲ್ಲದರ ಬಗ್ಗೆ ಹೇಳಿದ.

ಫ್ರಾನ್ಸ್ ಕಳೆದುಕೊಂಡಿದ್ದ ಪ್ರದೇಶಗಳನ್ನು ವಾಪಸು ಪಡೆಯುವುದಕ್ಕಾಗಲೀ, ತನ್ನ ಹಳೆಯ ಸಾಮರ್ಥ್ಯ ವೈಭವಗಳನ್ನು ಪಡೆಯುವುದಕ್ಕಾಗಲೀ, ಜರ್ಮನಿಯ ಕುಟಿಲ ತಂತ್ರಗಳಿಂದ ನಾವು ಸುರಕ್ಷಿತವಾಗಿರುವುದಕ್ಕಾಗಲೀ, ರಷ್ಯ ಮತ್ತು ಫ್ರಾನ್ಸ್‌ಗಳ ಒಕ್ಕೂಟವು ಅವಶ್ಯಕವೆಂಬ ಆತನ ನಂಬಿಕೆಯನ್ನು ನಮ್ಮ ಗುಂಪು ಒಪ್ಪಿಕೊಳ್ಳಲಿಲ್ಲ. ತಾನು ಕಳೆದುಕೊಂಡ ಪ್ರದೇಶಗಳನ್ನು ವಾಪಸು ಪಡೆಯುವವರೆಗೂ ಫ್ರಾನ್ಸ್ ಪುನಃ ಶಾಂತಿಯಿಂದಿರಲಾರದೆಂದು ಆತ ಹೇಳಿದ್ದ; ನಾವದಕ್ಕೆ ನೀಡಿದ ಉತ್ತರವಿದು. 'ಜೀನಾ'ವನ್ನು ಕಳೆದುಕೊಂಡದ್ದಕ್ಕೆ ಪ್ರತೀಕಾರವನ್ನು ಮಾಡುವವರೆಗೂ ರಷ್ಯ ಸಹ ಸುಮ್ಮನೆ ಕೂಡಲಿಲ್ಲ, ಅಲ್ಲದೆ ಫ್ರೆಂಚರು ಪ್ರತೀಕಾರ ಮಾಡುವುದರಲ್ಲಿ ಸಫಲರಾದರೆ ಜರ್ಮನರು ಅದಕ್ಕೆ ಪುನಃ ಪ್ರತೀಕಾರವನ್ನು ಮಾಡುತ್ತಾರೆ. ಇದು ಕೊನೆಯಿಲ್ಲದಂತೆ ಮುಂದುವರೆಯುತ್ತದೆ.

ತಮ್ಮಿಂದ ದೂರವಾದ ಸೋದರರನ್ನು ಪಾರು ಮಾಡುವ ಕರ್ತವ್ಯವು ಫ್ರೆಂಚರದೆಂದು ಆತ ಹೇಳಿದುದಕ್ಕೆ ನಾವು ಇತ್ತ ಉತ್ತರವಿದು, ಅಲ್‌ಸೇಸ್-ಲೋರೇನ್‌ನಲ್ಲಿ ವಾಸಿಸುವ ಕಾರ್ಮಿಕ ವರ್ಗದವರ ಜೀವನವು ಜರ್ಮನರ ಆಡಳಿತದಲ್ಲಿ ಪ್ರಾಯಶಃ ಅದು ಫ್ರೆಂಚ್ ಆಡಳಿತದಲ್ಲಿ ಇದ್ದಾಗಿಗಿಂತ ಹೆಚ್ಚು ದುರ್ಭರವಾಗೇನಿಲ್ಲ. ಅದಲ್ಲದೆ ಕೆಲವು ಆಲ್ಸೇಷಿಯನ್ನರಿಗೆ ತಾವು ಜರ್ಮನರೆನ್ನಿಸಿಕೊಳ್ಳುವುದಕ್ಕಿಂತ ಫ್ರೆಂಚರೆನ್ನಿಸಿಕೊಳ್ಳಲು ಹೆಚ್ಚು ಖುಷಿಯಾಗುತ್ತದೆಂಬ ಕಾರಣಕ್ಕಾಗಲೀ ನಮ್ಮ ಈ ಸಂದರ್ಶಕನು ಫ್ರೆಂಚ್ ಆಯುಧಗಳ ಶಕ್ತಿಪ್ರದರ್ಶನವನ್ನು ಮಾಡಲು ಇಚ್ಛಿಸುತ್ತಾನೆಂಬುದಕ್ಕಾಗಲೀ ಯುದ್ಧವು ಉಂಟು ಮಾಡುವ ಭೀಕರ ಸಾವು – ನೋವುಗಳನ್ನುಂಟುಮಾಡುವುದು ಸರಿಯಲ್ಲ. ಒಂದೇ ಒಂದು ಜೀವವನ್ನು ಬಲಿಗೊಡುವುದೂ ತರವಲ್ಲ.

ನಾವು ಆ ರೀತಿ ಮಾತನಾಡುವುದು ಸರಿಯಾದರೂ, ನಮ್ಮಿಂದ ಪೋಲೆಂಡನ್ನೋ ಬಾಲ್ಟಿಕ್ ಪ್ರದೇಶಗಳನ್ನೋ ಇತರರು ಕಸಿದುಕೊಂಡಿದ್ದರೆ ಈ ರೀತಿ ಮಾತನಾಡುತ್ತಿರಲಿಲ್ಲವೆಂದು ಹೇಳಿದಾಗ ನಾವು ಹೇಳಿದವು: ಪೋಲೆಂಡನ್ನಾಗಲೀ ಬಾಲ್ಟಿಕ್ ಪ್ರದೇಶಗಳನ್ನಾಗಲೀ ಕಳೆದುಕೊಳ್ಳುವುದು ರಾಜಕೀಯ ದೃಷ್ಟಿಯಿಂದಲೂ ದುರಂತವೇನಲ್ಲ. ಅದರ ಬದಲು ಅದರಿಂದ ಒಳಿತೇ ಆಗುವುದು. ಏಕೆಂದರೆ ಅವಕ್ಕಾಗಿ ನಾವು ವ್ಯಯಮಾಡಬೇಕಾಗಿದ್ದ ಸೈನ್ಯ ನಿರ್ವಹಣೆಯೂ ರಾಜಕೀಯ ವೆಚ್ಚಗಳೂ ಅದರಿಂದ ಉಳಿಯುತ್ತವೆ, ಅದೇ ಕ್ರಿಶ್ಚಿಯನ್ ದೃಷ್ಟಿಯಿಂದ ನಾವು ಯುದ್ಧಗಳಿಗೆ ಒಪ್ಪಿಗೆ ನೀಡಲೇಬಾರದು. ಏಕೆಂದರೆ ಯುದ್ಧವೆಂದರೆ ಮಾನವರ ಕೊಲೆ, ಆದರೆ ಕ್ರಿಶ್ಚಿಯನ್ ಧರ್ಮವು ಎಲ್ಲ ಬಗೆಯ ಕೊಲೆಗಳನ್ನೂ ನಿಷೇಧಿಸುವುದಲ್ಲದೆ ಎಲ್ಲ ರಾಷ್ಟ್ರೀಯತೆಯ

ಜನರನ್ನು ಸೋದರರೆಂದು ಭಾವಿಸಿ ಎಲ್ಲರಿಗೂ ಒಳಿತನ್ನು ಮಾಡಬೇಕೆಂದು ವಿಧಿಸುತ್ತದೆ. ಒಂದು ಕ್ರಿಶ್ಚಿಯನ್ ಸರ್ಕಾರವು ಯುದ್ಧಕಾಲದಲ್ಲಿ ವಿವೇಕಪೂರ್ಣವಾಗಿ ವರ್ತಿಸಬೇಕೆಂದರೆ ಚರ್ಚುಗಳಿಂದ ಶಿಲುಬೆಗಳನ್ನು ತೆಗೆಸಿಹಾಕಬೇಕು. ಚರ್ಚುಗಳ ಕಟ್ಟಡಗಳನ್ನು ಇತರ ಉದ್ದೇಶಗಳಿಗೆ ಬಳಸಬೇಕು. 'ಅರ್ಚಕವರ್ಗಕ್ಕೆ ಇತರ ಕೆಲಸಗಳನ್ನು ನಿಯಮಿಸಬೇಕು. ಎಲ್ಲದಕ್ಕಿಂತ ಹೆಚ್ಚಾಗಿ 'ಗಾಸ್ಪೆಲ್' ಗಳನ್ನು (ದೈವವಾಣಿಗಳನ್ನು) ಮುಚ್ಚಿಡಬೇಕು – ಅಲ್ಲದೆ ಕ್ರಿಶ್ಚಿಯನ್ ವಿಧಿಗಳಲ್ಲಿ ಹೇಳಿರುವ ಎಲ್ಲ ನೀತಿಪರ ಉಪದೇಶಗಳನ್ನೂ ನಿಲ್ಲಿಸಬೇಕು. 'ಇವೆರಡರಲ್ಲಿ ಯಾವುದಾದರೂ ಒಂದು ಉಳಿಯಬೇಕು' ಎಂದು ನಾವು ಹೇಳಿದೆವು. ಕ್ರಿಶ್ಚಿಯನ್ ಧರ್ಮವನ್ನೇ ನಿಷೇಧಿಸುವವರೆಗೂ. ಈಗ ನಡೆಯುತ್ತಿರುವಂತೆ ಜನರು ಮೋಸ ಕುಟಿಲತೆಗಳೊಂದಿಗೆ ಯುದ್ಧದತ್ತ ಸಾಗುತ್ತಾರೆ. ಅಷ್ಟೆ.

ನಾವು ಈ ಕುಟಿಲತೆ ಮೋಸಗಳನ್ನು ಕಾಣಬಲ್ಲೆವಾದ್ದರಿಂದ ಇದಕ್ಕೆ ಒಪ್ಪಲಾರೆವು.

ನಮ್ಮ ಬಳಿ ಬಾಜಾ ಬಜಂತ್ರಿಯಾಗಲೀ ಅಥವಾ ಇಂದ್ರಿಯಗಳನ್ನು ಪ್ರಮತ್ತಗೊಳಿಸುವ ಯಾವುದೂ ಇಲ್ಲವಾದ್ದರಿಂದ, ನಮ್ಮ ಸಂದರ್ಶಕನು ಭುಜವನ್ನು ಹಾರಿಸಿ ಫ್ರೆಂಚರಿಗೆ ವಿಶಿಷ್ಟವಾದ ವಿನಮ್ರತೆಯಿಂದ ನಮ್ಮ ಮನೆಯಲ್ಲಿ ತನಗೆ ದೊರೆತ ಸ್ವಾಗತಕ್ಕೂ ಆತಿಥ್ಯಕ್ಕೂ ಕೃತಜ್ಞತೆಯನ್ನು ಸೂಚಿಸಿ, ತನ್ನ ಅಭಿಪ್ರಾಯಗಳಿಗೂ ಅಂತಹುದೇ ಸ್ವಾಗತವು ದೊರೆಯದೇ ಹೋದುದಕ್ಕೆ ತುಂಬ ವಿಷಾದವನ್ನು ವ್ಯಕ್ತಪಡಿಸಿದ.

## 9

ಈ ಸಂಭಾಷಣೆಯಾದನಂತರ ನಾವು ಹೊಲದ ಕಣದ ಬಳಿ ಹೋದೆವು. ಅಲ್ಲಿ ನನ್ನ ಜೊತೆಯ ಕೆಲಸಗಾರನಾದ ಪ್ರೊಕೋಫಿ ಎಂಬ ಬೇಸರಗೊಂಡಿರದಂತೆ ಕಾಣುತ್ತಿದ್ದ, ಘಾಸಿಗೊಳಗಾಗಿದ್ದರೂ ಶ್ರಮಜೀವಿಯಾಗಿದ್ದ ಮುದುಕ ರೈತನು ಬೆಂಬಲ ವ್ಯಕ್ತಪಡಿಸಬಹುದೆಂಬ ನಿರೀಕ್ಷೆಯಿಂದ, ಜರ್ಮನರ ವಿರುದ್ಧ ತಾನು ಆಲೋಚಿಸಿದ್ದ ಉಪಾಯಗಳನ್ನೂ ಅದರಿಂದ ರಷ್ಯನರು ಒಂದೆಡೆ ಫ್ರೆಂಚರು ಮತ್ತೊಂದೆಡೆಗೆ ಹೇಗೆ ಅವರನ್ನು ಇರುಕಿಸಬಹುದೆಂಬ ವಿಚಾರಗಳನ್ನು ಅವನಿಗೆ ಭಾಷಾಂತರಿಸಲು ನನಗೆ ತಿಳಿಸಿದ. ಇದನ್ನು ಫ್ರೆಂಚ್ ಮಹಾಶಯನು ಬೆವರಿನಿಂದ ತೊಯ್ದು ತನ್ನ ಹೆಂಪ್‌ಶರ್ಟನ್ನು ತನ್ನ ಬಿಳಿಯ ಬೆರಳುಗಳಿಂದ ಹಿಂಡಿ ಸಾಭಿನಯವಾಗಿ ವಿವರಿಸಿದ: ನಾನು ಅವನ ಮಾತುಗಳಿಗೂ ಸಂಜ್ಞೆಗಳಿಗೂ ಅರ್ಥಹೇಳಿ ವಿವರಿಸಿದಾಗ ಸತ್‌ಪ್ರಕೃತಿಯವನಾದ ಪ್ರೊಕೋಫಿಯು ಆಶ್ಚರ್ಯವನ್ನು ತೋರಿಸಿ ಅಣಕವಾಡಿದ್ದು ನನಗೆ ನೆನಪಿದೆ. ಜರ್ಮನರನ್ನು ಎರಡು ಕಡೆಗಳಿಂದಲೂ ಹಿಂಡಿಬಿಡುವ ವಿಚಾರವನ್ನಾತ ತಮಾಷೆಯೆಂಬಂತೆ ಭಾವಿಸಿದ್ದು ಸ್ಪಷ್ಟವಾಗಿತ್ತು: ಅವನಿಗೆ ವಿದ್ಯಾವಂತನಾದ ವಯಸ್ಕನೊಬ್ಬನು ಯುದ್ಧದ ಒಳಿತಿನ ಬಗ್ಗೆ ನಿರ್ವಿಕಾರವಾಗಿ ಮಾತನಾಡುವುದು ಸಾಧ್ಯವೆಂದು ನಂಬಲು ಅವನಿಗೆ ಸಾಧ್ಯವಿರಲಿಲ್ಲ.

ತಮಾಷೆಯೆಂದು ತಾನು ಭಾವಿಸಿದ್ದ ಮಾತಿಗೆ ತಮಾಷೆಯಾಗಿಯೇ ಪ್ರೊಕೋಫಿ ಈ ರೀತಿ ಉತ್ತರಿಸಿದ್ದ: 'ನಾವಿಬ್ಬರೂ ಜರ್ಮನರನ್ನು ಎರಡೂ ಕಡೆಗಳಿಂದ ತರುಬಿದರೆ ಅವರು ಹೋಗಲು ಜಾಗವೇ ಇರುವುದಿಲ್ಲವಲ್ಲ: ಹೇಗಾದರೂ ಅವರು ಹೊರಗೆ ಹೋಗುವಂತೆ ದಾರಿತೋರಿಸಬೇಕು'.

ಇದನ್ನು ನಾನು ಸಂದರ್ಶಕನಿಗೆ ಭಾಷಾಂತರಿಸಿ ಹೇಳಿದೆ.

"ನಾವು ರಷ್ಯನ್ನರನ್ನು ಪ್ರೀತಿಸುತ್ತೇವೆಂದು ಆತನಿಗೆ ಹೇಳಿ" ಎಂದ ಅವನು.

ಈ ಮಾತುಗಳು ಪ್ರೊಕೋಫಿಯಲ್ಲಿ ಜರ್ಮನರನ್ನು ಓಡಿಸುವ ಸೂಚನೆಗಿಂತಲೂ ಹೆಚ್ಚು ಆಶ್ಚರ್ಯವನ್ನುಂಟುಮಾಡಿತು. ಒಂದು ಬಗೆಯ ಸಂಶಯವೂ ಉಂಟಾಯಿತು.

'ಅವರು ಎಲ್ಲಿಯವರು?' ನಂಬಿಕೆಯನ್ನು ಕಳೆದುಕೊಂಡು ಸಂದರ್ಶಕನೆಡೆಗೆ ತನ್ನ ತಲೆಯಿಂದ ಸೂಚಿಸುತ್ತ ಕೇಳಿದ.

ಅವರೊಬ್ಬರು ಶ್ರೀಮಂತ ಫ್ರೆಂಚ್ ಮಹಾಶಯರೆಂದು ಹೇಳಿದೆ.

'ಇಲ್ಲಿಗೆ ಬರಲು ಅವರಿಗೆ ಏನು ಕೆಲಸ?' ಎಂದ ಪ್ರೊಕೋಫಿ.

ಜರ್ಮನಿಯೊಡನೆ ಯುದ್ಧ ಮಾಡುವ ಪ್ರಸಂಗವೊದಗಿದರೆ ಫ್ರೆಂಚರೂ ರಷ್ಯನರೂ ಮೈತ್ರಿಕೂಟವೊಂದನ್ನು ರಚಿಸಲು ನಮ್ಮ ಒಪ್ಪಿಗೆಯನ್ನು ಪಡೆಯುವ ಆಸೆಯಿಂದ ಬಂದಿದ್ದಾರೆಂದು ತಿಳಿಸಿದೆ. ಪ್ರೊಕೋಫಿಯ ಸಂಶಯವೇನೂ ಕಡಿಮೆಯಾಗಲಿಲ್ಲ: ಹುಲ್ಲಿನ ಬಣವೆಗಳ ಬಳಿ ಕುಳಿತ್ತಿದ್ದ ರೈತ ಹೆಂಗಸರ ಕಡೆಗೆ ತಿರುಗಿ ಕಠಿಣವಾಗಿ ಕೂಗಿ ಹೇಳುತ್ತ ತನಗರಿವಿಲ್ಲದಂತೆಯೇ ತನ್ನ ಭಾವನೆಯನ್ನುಸೂಚಿಸಿದ.

'ಏಯ್, ಕಾಗಕ್‌ಗಳೇ, ಏನು ನಿದ್ದೆ ಮಾಡುತ್ತಿದ್ದೀರೇನು? ಎದ್ದೇಳಿ. ಜರ್ಮನರಿಗೆ ಬುದ್ಧಿ ಕಲಿಸುವ ಕಾಲ ಬಂದಿದೆ. ಹುಲ್ಲು ಇನ್ನೂ ಸ್ವಲ್ಪವಾದರೂ ಬಂದಿಲ್ಲ. ನಾವು ಬುಧವಾರದಿಂದಲೇ ತೆನೆ ಒಕ್ಕಬೇಕೆಂದು ಕಾಣುತ್ತದೆ'. ಎಂದು ಅಂದ ತಕ್ಷಣವೇ ತಾನು ಆ ವಿದೇಶೀ ಸಂದರ್ಶಕನಿಗೆ ನೋವುಂಟುಮಾಡಿರಬಹುದೆಂದು ಭಾವಿಸಿ, ತನ್ನ ಹಲ್ಲುದುರಿಹೋದ ಒಸಡುಗಳು ಕಾಣುವಂತೆ ನಗುತ್ತ ಹೇಳಿದ. 'ನೀವು ಬರುವುದಲ್ಲದೆ ಜರ್ಮನರನ್ನು ನಿಮ್ಮೊಡನೆ ಕರೆತಂದು ನಮ್ಮ ಜೊತೆ ಕೆಲಸಮಾಡಿದರೆ ಚೆನ್ನಾಗಿರುತ್ತದೆ. ಕೆಲಸದ ನಂತರ ನಾವು ಖುಷಿಯಾಗಿ ಕಾಲ ಕಳೆಯಬಹುದು. ಜರ್ಮನರೂ ನಮ್ಮಂತೆ ಮನುಷ್ಯರು'.

ಇಷ್ಟು ಹೇಳಿ ಪ್ರೊಕೋಫಿಯು ತಾನು ಒರಗಿಕೊಂಡು ಕೂತಿದ್ದ ಕವಲುಗೋಲಿನ ಮಧ್ಯದಿಂದ ನರಗಳೆದ್ದು ಕಾಣುವ ತನ್ನ ತೋಳನ್ನು ತೆಗೆದು ಕವಲುಗೋಲನ್ನು ತನ್ನ

ಭುಜದ ಮೇಲೆ ಹೊತ್ತುಕೊಂಡು ಹೆಂಗಸರತ್ತ ನಡೆದ. ಈ ವಿನಮ್ರ ಫ್ರೆಂಚ್ ಮಹಾಶಯನು ನಗುತ್ತ 'ಎಂಥ ಧೈರ್ಯಸ್ಥ' ಎಂದು ಆಶ್ಚರ್ಯವನ್ನು ಸೂಚಿಸಿದ. ಇಲ್ಲಿಗೆ ಆತ ರಷ್ಯನ್ ಜನತೆಗೆ ತಂದಿದ್ದ ರಾಜತಾಂತ್ರಿಕ ಸಂದೇಶವು ಸದ್ಯಕ್ಕೆ ಮುಗಿದಂತಾಯಿತು.

ಆ ಇಬ್ಬರೂ ವ್ಯಕ್ತಿಗಳೂ ಒಬ್ಬರಿಂದೊಬ್ಬರು ತೀರ ಭಿನ್ನರಾದವರು. ಪುಷ್ಟವಾಗಿ ಬೆಳೆದು, ಆಗಿನ ಫ್ಯಾಷನ್ನಾದ ಟಾಪ್‌ಹ್ಯಾಟನ್ನೂ ದೀರ್ಘವಾದ ನಿಲುವಂಗಿಯನ್ನೂ ಧರಿಸಿ ಲವಲವಿಕೆಯಿಂದಲೂ ಆತ್ಮವಿಶ್ವಾಸದಿಂದಲೂ ಫ್ರೆಂಚ್ ಮಹಾಶಯನು ಕಾಂತಿಯುಕ್ತನಾಗಿದ್ದು ಕೆಲಸವಾಡಿ ಅಭ್ಯಾಸವಿಲ್ಲದ ತನ್ನ ಬಿಳಿಯ ಕೈಗಳಿಂದ ಜರ್ಮನರನ್ನು ಹೇಗೆ ಹಿಂಡಬೇಕೆಂದು ಬಿರುಸಾಗಿ ತೋರಿಸುತ್ತಿದ್ದ: ನಿರಂತರ ಶ್ರಮದಿಂದಾಗಿ ಸುಕ್ಕುಗಟ್ಟಿದ್ದ ಜರ್ಜರಿತ ಗಾತ್ರನಾದ ಪ್ರೊಕೋಫಿಯು, ಸದಾ ದಣಿದಂತೆ ಕಂಡರೂ ತನಗಾದ ಗಾಸಿಯನ್ನೂ ಲೆಕ್ಕಿಸದೆ ಸದಾ ಕಾರ್ಯನಿರತನಾದವನು. ಕೆಲಸದಿಂದ ಅವನ ಬೆರಳುಗಳು ಗಡ್ಡೆ ಕಟ್ಟಿದ್ದುವು. ಅವನ ಕೂದಲಲ್ಲಿ ಹುಲ್ಲುಕಡ್ಡಿಗಳು ಸಿಕ್ಕಿಹಾಕಿಕೊಂಡಿದ್ದವು. ಅವನು ಧರಿಸಿದ್ದುದು ಮನೆಯಲ್ಲೇ ತಯಾರಿಸಿದ ದೊಗಲೆ ಚಲ್ಲಣಗಳು ಮತ್ತು ಚೆನ್ನಾಗಿ ಮೆಟ್ಟಿ ಹರಿದ ಪಾದರಕ್ಷೆಗಳು, ಅವನು ತನ್ನ ಭುಜದ ಮೇಲೆ ಭಾರವಾದ ವಸ್ತುವನ್ನು ಹೊತ್ತು, ಸೋಮಾರಿತನವಿಲ್ಲದಿದ್ದರೂ ಕೆಲಸಗಾರರೆಲ್ಲರೂ ನಡೆಯುವಂತೆಯೇ ನಿಧಾನವಾಗಿ ಹೆಜ್ಜೆ ಹಾಕುತ್ತಿದ್ದ. ಆಗ ಅವರಿಬ್ಬರಲ್ಲಿದ್ದ ಸ್ಪಷ್ಟವಾದ ವ್ಯತ್ಯಾಸಗಳು, ಟೌಲಾನ್ ಪ್ಯಾರಿಸ್ ಸಮಾರಂಭಗಳಲ್ಲಿ ಕಾಣದಿದ್ದರೂ ಈಗ ಕೂಡ ಕಣ್ಣಿಗೆ ಕಟ್ಟಿದಂತಿದೆ. ಅವರಿಬ್ಬರಲ್ಲಿ ಮೊದಲಿನವನು ಪ್ರತಿಧ್ವನಿಸುತ್ತಿದ್ದುದು ಯಾವ ಜನರ ಶ್ರಮದಿಂದ ತಾವು ಜೀವನ ನಡೆಸುತ್ತಾರೋ ಅವರನ್ನೇ ಕೊನೆಗೆ ಬಂದೂಕುಗಳಿಗೆ ಆಹುತಿ ನೀಡುವವರನ್ನು; ಎರಡನೆಯವನು ಪ್ರತಿನಿಧಿಸುತ್ತಿದ್ದುದು ತಾವು ಸಾಕಿ ಸಲಹಿದವರಿಂದಲೇ ಕೊನೆಗೆ ಪರಿತ್ಯಜಿಸಲ್ಪಟ್ಟು ಬಂದೂಕುಗಳಿಗೆ ಆಹುತಿಯಾಗುವವರನ್ನು.

## 10

'ಮಕ್ಕಳನ್ನು ತಾಯಿಯಿಂದ ಕಿತ್ತುಕೊಳ್ಳುವಂತೆ ಫ್ರಾನ್ಸ್‌ನಿಂದ ಎರಡು ಪ್ರಾಂತಗಳನ್ನು ಕಸಿದುಕೊಳ್ಳಲಾಗಿದೆ. ಜರ್ಮನಿಯು ರಷ್ಯವನ್ನು ಆಳುವುದಕ್ಕಾಗಲೀ ತಾನು ಪೂರ್ವದೇಶಗಳಿಗೆ ಹಿಂದೆ ನೀಡಿದ ಐತಿಹಾಸಿಕ ಸಂದೇಶದಿಂದ ಬೇರ್ಪಡಿಸುವುದಾಗಲೀ ಸಾಧ್ಯವಿಲ್ಲ. ಅಥವಾ ಫ್ರೆಂಚರಿಂದ ಹೇಗೋ ಹಾಗೆ ರಷ್ಯನರಿಂದ ಬಾಲ್ಟಿಕ್ ಪ್ರಾಂತಗಳನ್ನಾಗಲೀ ಪೋಲೆಂಡನ್ನಾಗಲೀ ಕಾಕಸಸ್ ಪ್ರಾಂತವನ್ನಾಗಲೀ ಕಸಿದುಕೊಳ್ಳಲು ಸಾಧ್ಯವಿಲ್ಲ.'

'ತಾನು ಅಷ್ಟೊಂದು ಶ್ರಮದಿಂದ ಗಳಿಸಿದ ಸವಲತ್ತುಗಳನ್ನು ಕಳೆದುಕೊಳ್ಳುವುದನ್ನು ಜರ್ಮನಿಯು ಸಹಿಸುವುದಿಲ್ಲ. ಇಂಗ್ಲೆಂಡ್ ತನ್ನ ನೌಕಾ ಸಾರ್ವಭೌಮತ್ವವನ್ನು ಬೇರಾರಿಗೋ ಬಿಟ್ಟುಕೊಡದು'.

ಇಂತಹ ಮಾತುಗಳನ್ನಾಡಿದಾಗ ತಾವು ಕಳೆದುಕೊಂಡ ಪ್ರದೇಶಗಳನ್ನು ಪುನಃ ಪಡೆಯುವುದಕ್ಕೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ತಮ್ಮ ಪ್ರಭಾವವನ್ನುಳಿಸಿಕೊಳ್ಳುವುದಕ್ಕೆ. ತಮ್ಮ ಐಕ್ಯ ಹಾಗೂ ಸಾಮರ್ಥ್ಯಗಳನ್ನು ಉಳಿಸಿಕೊಳ್ಳುವುದಕ್ಕೆ. ಸಮುದ್ರದ ಮೇಲಿನ ತನ್ನ ಸಾರ್ವಭೌಮತ್ವವನ್ನು ಕಳೆದುಕೊಳ್ಳದಿರುವುದಕ್ಕೆ ಇತ್ಯಾದಿಗಳಿಗಾಗಿ ಫ್ರೆಂಚರೂ, ರಷ್ಯನರೂ, ಜರ್ಮನರೂ. ಇಂಗ್ಲೀಷರೂ ತಮ್ಮ ಸರ್ವಸ್ವವನ್ನೂ ತ್ಯಾಗಮಾಡಲು ಸಿದ್ಧರಿರಬೇಕೆಂಬುದಾಗಿ ಅರ್ಥಮಾಡುತ್ತಾರೆ.

ರಾಷ್ಟ್ರಪ್ರೇಮವು ಪ್ರಥಮತಃ ಪ್ರತಿಯೊಬ್ಬನ ಹೃದಯದಲ್ಲೂ ಸಹಜವಾಗಿರುವಂಥ ಭಾವನೆಯೆಂದು ಎಲ್ಲರ ಕಲ್ಪನೆ; ಎರಡನೆಯ ಕಲ್ಪನೆಯೆಂದರೆ ಅದು ಎಷ್ಟು ಶ್ರೇಷ್ಠವಾದುದೆಂದರೆ ಯಾರಲ್ಲಿ ಆ ಭಾವನೆಯಿಲ್ಲವೋ ಅವರಲ್ಲಿ ಅದನ್ನು ತುಂಬಬೇಕೆಂಬುದು. ಆದರೆ ಇವುಗಳಲ್ಲಿ ಯಾವುದೂ ನಿಜವಲ್ಲ. ನಾನು ರಷ್ಯದ ಜನತೆಯ ನಡುವೆ ಅರ್ಧ ಶತಮಾನದಷ್ಟು ಧೀರ್ಘಕಾಲ ವಾಸಮಾಡಿದ್ದೇನೆ. ಆದರೆ ನಿಜವಾದ ರಷ್ಯನ್ ರೈತಸಮುದಾಯದಲ್ಲಿ ರಾಷ್ಟ್ರಪ್ರೇಮವು ನಡೆಯಲ್ಲಾಗಲೀ, ನುಡಿಯಲ್ಲಾಗಲೀ ಹೊರಹೊಮ್ಮಿರುವುದನ್ನು ನಾವು ಕಂಡಿಲ್ಲ. ಕೇಳಿಲ್ಲ. ಆದರೆ ಇದಕ್ಕೆ ಅಪವಾದವೆಂದರೆ ಸೈನಿಕ ಶಿಕ್ಷಣದಲ್ಲಿ ಕಲಿತ ರಾಷ್ಟ್ರಪ್ರೇಮದ ಸೂತ್ರಗಳು. ಹಾಗೂ ಹೆಚ್ಚು ಕೃತಕವಾದ ಸತತವಾದ ಜೀವನ ನಡೆಸುವ ಜನರು ಪುಸ್ತಕದಿಂದ ಕಲಿತು ಒಪ್ಪಿಸುವ ಗಿಳಿಪಾಠ. ನಮ್ಮ ಜನರು ರಾಷ್ಟ್ರಪ್ರೇಮದ ಭಾವನೆಯನ್ನು ಅಭಿವ್ಯಕ್ತಿಗೊಳಿಸಿರುವುದನ್ನು ನಾನು ಕಾಣೆ. ಅವರ ಬದಲು. ಅತ್ಯಂತ ಗಂಭೀರವಾದ ಹಾಗೂ ಗೌರವನೀಯ ಗ್ರಾಮೀಣರಿಂದ ಈ ರಾಷ್ಟ್ರಪ್ರೇಮದ ಬಗ್ಗೆ ಸಂಪೂರ್ಣ ಅನಾದರವೊಂದೇ ಅಲ್ಲ. ತಿರಸ್ಕಾರವನ್ನೂ ಸೂಚಿಸುವ ಮಾತುಗಳನ್ನು ನಾನು ಪದೇ ಪದೇ ಕೇಳಿದ್ದೇನೆ. ಇತರ ರಾಷ್ಟ್ರಗಳ ಕೆಲಸಗಾರರಲ್ಲಿಯೂ ಇದನ್ನೇ ನಾನು ಕಂಡಿದ್ದೇನೆ. ವಿದ್ಯಾವಂತರಾದ ಫ್ರೆಂಚರೂ ಜರ್ಮನರೂ ಇಂಗ್ಲೀಷರೂ ಇದೇ ಮಾತನ್ನು ಅನೇಕ ಬಾರಿ ಹೇಳಿದ್ದಾರೆ.

ಕೆಲಸಗಾರರು ತಮ್ಮ ಹಾಗೂ ತಮ್ಮ ಕುಟುಂಬಗಳ ಜೀವನೋಪಾಯವನ್ನು ಕಂಡುಕೊಳ್ಳುವುದರಲ್ಲಿ ನಿರತರಾಗಿದ್ದು. ರಾಷ್ಟ್ರಪ್ರೇಮದ ಮೂಲಪ್ರೇರಣೆಯಾದ ರಾಜಕೀಯ ಪ್ರಶ್ನೆಗಳ ಬಗ್ಗೆ ಆಸಕ್ತರಾಗಲು ಅವರಿಗೆ ಸಮಯವೇ ದೊರೆಯುವುದಿಲ್ಲ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ರಷ್ಯದ ಪ್ರಭಾವ. ಜರ್ಮನಿಯ ಏಕೀಕರಣ. ಫ್ರಾನ್ಸ್ ಕಳೆದುಕೊಂಡ ಪ್ರದೇಶಗಳನ್ನು ಮರಳಿ ಪಡೆಯುವುದು. ಯಾವುದಾದರೊಂದು ರಾಜ್ಯದ ಯಾವುದೋ ಭಾಗದ ವಿಭಜನೆ ಇತ್ಯಾದಿ ಪ್ರಶ್ನೆಗಳು ಅವರ ಆಸಕ್ತಿಯನ್ನು ಕೆರಳಿಸಲಾರವು; ಏಕೆಂದರೆ ಈ ಪ್ರಶ್ನೆಗಳು ಎಂತಹ ಸಂದರ್ಭಗಳಲ್ಲಿ ಉದ್ಭವಿಸುತ್ತವೆಂಬ ಅರಿವು ಅವರಿಗಿಲ್ಲದಿರುವುದಷ್ಟೇ ಅಲ್ಲ ತಮ್ಮ ಜೀವನದ ಸ್ವಂತ ಆಸಕ್ತಿಗಳು ರಾಷ್ಟ್ರೀಯ ಹಾಗೂ ರಾಜಕೀಯ ಆಸಕ್ತಿಗಳಿಗಿಂತ ಸಂಪೂರ್ಣವಾಗಿ ಭಿನ್ನವಾಗಿರುವುದು.

ಸಾಮಾನ್ಯವಾದ ವ್ಯಕ್ತಿಗೆ ಗಡಿರೇಖೆ ಎಲ್ಲಿದೆ. ಕಾನ್‌ಸ್ಟಾಂಟಿನೋಪಲ್ ಯಾರಿಗೆ ಸೇರಿದುದು. ಸಾಕ್ಸೋನಿ ಅಥವಾ ಬ್ರುನ್ಸ್‌ವಿಕ್‌ರು ಜರ್ಮನ್ ಒಕ್ಕೂಟದಲ್ಲಿ ಸದಸ್ಯರಾಗುವರೇ ಇಲ್ಲವೇ. ಆಸ್ಟ್ರೇಲಿಯ ಅಥವಾ ಮೆಟಬಿಲ್‌ಲ್ಯಾಂಡ್ ಇಂಗ್ಲೆಂಡಿಗೆ ಸೇರಬೇಕೇ ಬೇಡವೇ ಎಂಬಂತಹ ಪ್ರಶ್ನೆಗಳು ಗಮನಾರ್ಹವಲ್ಲ. ಅಷ್ಟೇ ಅಲ್ಲ, ತಾನು ಯಾವ ಸರ್ಕಾರಕ್ಕೆ ತೆರಿಗೆ ಸಲ್ಲಿಸಬೇಕು, ಯಾವ ಸೈನ್ಯಕ್ಕೆ ತಮ್ಮ ಮಕ್ಕಳನ್ನು ಸೇರಿಸಬೇಕು ಎಂಬ ವಿಷಯಗಳೂ ಹೀಗೆಯೇ. ಅವನಿಗೆ ಮುಖ್ಯವಾದ ಪ್ರಶ್ನೆಗಳಾದ ತಾನು ತೆರಬೇಕಾದ ತೆರಿಗೆಯ ಹಣವೆಷ್ಟು. ಸೈನ್ಯದ ಸೇನೆಯು ದೀರ್ಘಕಾಲದ್ದೇ. ತಾನು ತನ್ನ ಭೂಮಿಗಾಗಿ ಎಷ್ಟು ದಿವಸಗಳ ಕಂದಾಯವನ್ನು ಸಲ್ಲಿಸಬೇಕು, ತನ್ನ ಕೆಲಸಕ್ಕೆ ಹೆಚ್ಚು ಪ್ರತಿಫಲ ಸಿಗುವುದೇ ಎಂಬುವು ರಾಷ್ಟ್ರೀಯ ಹಾಗೂ ರಾಜಕೀಯ ಸಮಸ್ಯೆಗಳಿಗಿಂತ ಪೂರ್ಣ ಭಿನ್ನವಾದುವು. ಆದಕ್ಕೆ ಜನಗಳಲ್ಲಿ ಸಹಜವಾಗಿಲ್ಲದ ರಾಷ್ಟ್ರಪ್ರೇಮದ ಭಾವನೆಯನ್ನು ತುಂಬಿ, ಅವರಲ್ಲಿ ಮಾಡಬಹುದಾದ ಸಮಾಜವಾದದ ಭಾವನೆಯನ್ನು ಅದುಮಲು ಸರ್ಕಾರವು ಎಷ್ಟೇ ತೀವ್ರವಾಗಿ ಪ್ರಯತ್ನಿಸುತ್ತಿದ್ದರೂ – ಜನರಲ್ಲಿ ಸಮಾಜವಾದವು ಹೆಚ್ಚು ಹೆಚ್ಚು ಆಳವಾಗಿ ಬೇರೂರುತ್ತಿದೆಯೇ ಹೊರತು ಅವರಿಗೆ ಸೂಜಿಮದ್ದಿನಂತೆ ಚುಚ್ಚುತ್ತಿರುವ ರಾಷ್ಟ್ರಪ್ರೇಮವು ವಿಫಲವಾಗಿರುವುದಷ್ಟೇ ಅಲ್ಲ, ವೇಗವಾಗಿ ಕಣ್ಮರೆಯಾಗುತ್ತಿದೆ. ಅದು ಉಳಿದಿರುವುದು ಹರಡಲು ಯಾರಿಗೆ ಅದರಿಂದ ಲಾಭವುಂಟೋ ಅಂತಹ ಶ್ರೀಮಂತ ವರ್ಗಗಳಲ್ಲಿ ಮಾತ್ರ.

ಈಗ ಪ್ಯಾರಿಸ್‌ನಲ್ಲಿ ಆಗಿರುವಂತೆ ರಾಷ್ಟ್ರಪ್ರೇಮವು ಜನತೆಯನ್ನೆಲ್ಲ ಆವರಿಸಬೇಕಾದರೆ ಸರ್ಕಾರ ಹಾಗೂ ಆಡಳಿತವರ್ಗಗಳು ಪ್ರಬಲವಾದ ಸಮ್ಮೋಹನೆಯನ್ನುಂಟು ಮಾಡಬೇಕು. ಆದರೆ ಆ ರಾಷ್ಟ್ರಪ್ರೇಮವು ಉಳಿಯುವುದು ಸಮ್ಮೋಹನ ಶಕ್ತಿಯಿರುವ ವರೆಗೆ ಮಾತ್ರ.

ಉದಾಹರಣೆಗೆ ರಷ್ಯವನ್ನೇ ತೆಗೆದುಕೊಳ್ಳೋಣ. ಮತದ ಬಗ್ಗೆ, ಜಾರ್‌ರ ಬಗ್ಗೆ, ಪಿತೃಭೂಮಿಯ ಬಗ್ಗೆ ಪ್ರೇಮ ಮತ್ತು ಭಕ್ತಿಗಳನ್ನೊಳಗೊಂಡ ರಾಷ್ಟ್ರಪ್ರೇಮದ ಭಾವನೆಯನ್ನು ಜನರಲ್ಲಿ ಸರ್ಕಾರದ ನಾನಾ ಉಪಕರಣಗಳಾದ ಚರ್ಚ್‌ಗಳು, ಶಾಲೆಗಳು, ಪತ್ರಿಕೆಗಳು ಹಾಗೂ ನಾನಾ ವಿಧ ಸಮಾರಂಭಗಳ ಮೂಲಕ ಉದ್ದೀಪಿಸಲಾಗುತ್ತಿದೆ. ಹತ್ತು ಕೋಟಿ ರಷ್ಯನ್ ಕೆಲಸಗಾರರನ್ನು। ಅವರಿಗೆ ಸಮವಾಗಿ ಇಲ್ಲದ ಮತ ಜಾರ್ ಮತ್ತು ಪಿತೃಭೂಮಿಗಳ ಬಗೆಗಿನ ವಿಶೇಷ ಪ್ರೀತಿ ಭಕ್ತಿಗಳಿಗಾಗಿ ಹೊಗಳಲಾಗುತ್ತಿದೆ: ಆದರೆ ಅವರು ಮತ, ಜಾರ್ ಪಿತೃಭೂಮಿಗಳ ಬಗೆಗಿನ ಪ್ರೀತಿ ರಾಷ್ಟ್ರಪ್ರೇಮಗಳೆಂಬುವುಗಳಿಂದ ಹೊರತಾದ ಸರ್ವತಂತ್ರ ಸ್ವತಂತ್ರರು: ಏಕೆಂದರೆ ಬಹುಪಾಲು ರಷ್ಯನ್ ರೈತರು ಮತದ ಬಗ್ಗೆ ಏನನ್ನೂ ಅರಿಯರು—ಎಂದರೆ ಅವನು ಭಕ್ತಿ ತೋರಿಸಬೇಕಾದ ರಾಜ್ಯದ ಸಾಂಪ್ರದಾಯಿಕಮತದ ಬಗ್ಗೆ; ಆದರೆ ಅವನಿಗೆ ಅದರ ಅರಿವುಂಟಾದ ತಕ್ಷಣ ಅವನು ಅದನ್ನು ತೊರೆದು ವಿಚಾರವಾದಿಯಾಗುತ್ತಾನೆ, ಎಂದರೆ, ಅವನು ವಿರೋಧಿಸಲೂ

ಆಗದ ಸಮರ್ಥಿಸಲೂ ಆಗದ ನಂಬಿಕೆಯೊಂದನ್ನು ಪಡೆಯುತ್ತಾನೆ. ಅವನು ಜಾರ್‌ನ ಬಗ್ಗೆ ಪಡೆದ ಭಾವನೆಯೆಂದರೆ (ಅವನಲ್ಲಿ ಈ ಬಗ್ಗೆ ಭಕ್ತಿಭಾವವನ್ನುಂಟುಮಾಡಲು ನಿರಂತರವಾಗಿ ಶತಪ್ರಯತ್ನ ಮಾಡುತ್ತಿದ್ದರೂ) ಖಂಡನೆಯುಳ್ಳದಿದ್ದರೂ ಅನಾದರ. ಇದು ಹಿಂಸೆಯನ್ನು ಬೆಳೆಸುವ ಎಲ್ಲ ಶಕ್ತಿಗಳ ಬಗ್ಗೆಯೂ ತಳೆಯುವ ಮನೋಭಾವ. ಇನ್ನು ಪಿತೃಭೂಮಿಯ ಬಗ್ಗೆ (ಇದು ತನ್ನ ಹಳ್ಳಿಯ ಬಗ್ಗೆಯಾಗಲೀ ಜಿಲ್ಲೆಯ ಬಗ್ಗೆಯಾಗಲೀ ಅಲ್ಲದಿದ್ದರೆ) ಅವನು ಸಂಪೂರ್ಣ ಅಜ್ಞ, ಅಥವಾ ತಿಳಿದಿದ್ದರೂ, ತನ್ನ ಮತ್ತಿತರ ರಾಷ್ಟ್ರಗಳಲ್ಲಿ ಯಾವ ವ್ಯತ್ಯಾಸವನ್ನೂ ಅವನು ಕಾಣುವುದಿಲ್ಲ. ಹಿಂದೆ ಆಸ್ಟ್ರಿಯಕ್ಕೋ ಟರ್ಕಿಗೋ ವಲಸೆ ಹೋದಾಗ ಹೇಗೋ ಹಾಗೆಯೇ ಈಗಲೂ ರಷ್ಯನರು ರಷ್ಯಾದಲ್ಲಾಗಲೀ ಅಥವಾ ಟರ್ಕಿ ಅಥವಾ ಚೀನಾಗಳಂತೆ ಪರದೇಶದಲ್ಲಾಗಲೀ ಅದೇ ನಿರಾಸಕ್ತಿಯಿಂದಲೇ ನೆಲೆಸಿದ್ದಾರೆ.

## II

ನನ್ನ ಹಳೆಯ ಸ್ನೇಹಿತನಾದ ಡಿ–[8(a)] ಅವರು ತಮ್ಮ ಹೆಂಡತಿಯು ಪ್ಯಾರಿಸ್ಸಿನಲ್ಲಿದ್ದಾಗ ತಾವು ಹಳ್ಳಿಯಲ್ಲಿ ಒಬ್ಬರೇ ವಾಸಿಸುತ್ತಿದ್ದು ಒಮ್ಮೊಮ್ಮೆ ಹೆಂಡತಿಯನ್ನು ಕಾಣಲು ಹೋಗುತ್ತಿದ್ದರು. ಅವರ ಬಳಿ ಅನಕ್ಷರಸ್ಥನಾದರೂ ಬುದ್ಧಿವಂತನೂ ಗೌರವಸ್ಥನೂ ಆದ ರೈತನೊಬ್ಬ ಹೊಲಗಳ ಮೇಲ್ವಿಚಾರಕನಾಗಿ ಕೆಲಸಮಾಡುತ್ತಿದ್ದ. ಅವನು ಸುಗ್ಗಿಯ ಕಾಲದಲ್ಲಿ ವರದಿಯೊಪ್ಪಿಸಲು ಬಂದಾಗ ಅವನೊಡನೆ ನನ್ನ ಸ್ನೇಹಿತರು ಮಾತನಾಡುತ್ತಿದ್ದರು. ಇತರ ವಿಷಯಗಳಲ್ಲದೆ ನಮ್ಮ ಆಡಳಿತ ಪದ್ಧತಿಯೊಂದಿಗೆ ಹೋಲಿಸಿದರೆ ಫ್ರೆಂಚ್ ಸರ್ಕಾರವು ಹೇಗೆ ಹೆಚ್ಚು ಉಪಯುಕ್ತವಾದುದೆಂದು ನನ್ನ ಸ್ನೇಹಿತರು ತಿಳಿಸುತ್ತಿದ್ದರು. ಹಾಗೊಮ್ಮೆ ಅವರು ಮಾತನಾಡುತ್ತಿದ್ದುದು (1863–4 ರ) ಪೋಲಿಷ್ ದಂಗೆಯ ಕಾಲದಲ್ಲಿ. ಆಗ ಫ್ರೆಂಚ್ ಸರ್ಕಾರವು ನಮ್ಮ ವ್ಯವಹಾರಗಳಲ್ಲಿ ತಲೆಹಾಕಿತ್ತು. ರಾಷ್ಟ್ರ-ಭಕ್ತಿಯಿಂದ ಕೂಡಿದ ರಷ್ಯನ್ ಪತ್ರಿಕೆಗಳು ಈ ಮಧ್ಯಪ್ರವೇಶದಿಂದಾಗಿ ಕೋಪದಿಂದ ಉರಿಯುತ್ತಿದ್ದುವು. ಈ ವಿಚಾರವು ನಮ್ಮ ಆಡಳಿತವರ್ಗವನ್ನು ಎಷ್ಟು ಉದ್ರಿಕ್ತಗೊಳಿಸಿತೆಂದರೆ ನಮ್ಮ ರಾಜಕೀಯ ಬಾಂಧವ್ಯವು ಕಹಿಯಾಗಿ ಫ್ರಾನ್ಸಿನೊಡನೆ ಯುದ್ಧಮಾಡುವ ಮಾತು ಸಹ ಕೇಳಿ ಬರುತ್ತಿತ್ತು.

ನನ್ನ ಸ್ನೇಹಿತರು ಪತ್ರಿಕೆಗಳನ್ನೋದಿ ರಷ್ಯ ಮತ್ತು ಫ್ರಾನ್ಸ್‌ಗಳ ನಡುವಣ ಬಾಂಧವ್ಯದ ಬಗ್ಗೆ ತಮ್ಮ ಹೊಲದ ಮೇಲ್ವಿಚಾರಕನಿಗೆ ಹೇಳುತ್ತಿದ್ದರು. ತಾವೇ ಹಿಂದೆ ಸೈನಿಕರಾಗಿದ್ದುದರಿಂದಲೂ ಪತ್ರಿಕೆಗಳ ಪ್ರಭಾವದಿಂದಲೂ ಫ್ರಾನ್ಸಿನೊಡನೆ ಯುದ್ಧವೇನಾದರೂ ನಡೆದರೆ ತಾವು ಮತ್ತೆ ಸೈನ್ಯವನ್ನು ಸೇರಿ ಹೋರಾಡುವುದಾಗಿ

8 (a) ಸಂದೇಹವಿಲ್ಲದಂತೆ ಇವರು ಡಿ.ಎ. ದ್ಯಾಕೋವ್. ಇವರನ್ನನುಸರಿಸಿಯೇ 'ಬಾಲ್ಯ' ಮತ್ತು 'ಯೌವ್ವನ'ಗಳಲ್ಲಿನ ಡಿಮಿಟ್ರಿಯ ಪಾತ್ರದ ಚಿತ್ರಣ ನಡೆದಿರುವುದು.

ಹೇಳಿದರು. ಆಗ ರಾಷ್ಟ್ರಪ್ರೇಮಿ ರಷ್ಯನರು ಸೆವಾಸ್ಟೋಪೋಲ್‌ನ ಕಾರಣದಿಂದಾಗಿ ಫ್ರೆಂಚರ ವಿರುದ್ಧ ಪ್ರತೀಕಾರ ಕೈಗೊಳ್ಳುವುದು ಅವಶ್ಯಕವೆಂದು ಬಗೆದಿದ್ದರು.

'ನಾವೇಕೆ ಯುದ್ಧಮಾಡಬೇಕು?' ಎಂದು ಮೇಲ್ವಿಚಾರಕ ಪ್ರಶ್ನಿಸಿದ.

'ನಮ್ಮ ಬಗ್ಗೆ ಫ್ರಾನ್ಸ್ ದಬ್ಬಾಳಿಕೆ ನಡೆಸಲು ಹೇಗೆ ಅವಕಾಶಕೊಡುವುದು?'

'ಆದರೆ ಅವರ ಆಡಳಿತ ಕ್ರಮವು ನಮ್ಮದಕ್ಕಿಂತ ಉತ್ತಮವೆಂದು ನೀವೇ ಹೇಳಿದಿರಲ್ಲ? ಹಾಗಾದರೆ ನಮ್ಮದನ್ನೂ ಅವರು ಸರಿಪಡಿಸುವುದಕ್ಕೆ ಅವರಿಗೇಕೆ ಅವಕಾಶ ನೀಡಬಾರದು?' ಎಂದು ಮೇಲ್ವಿಚಾರಕ ಗಂಭೀರವಾಗಿಯೇ ಕೇಳಿದ.

ಈ ಪ್ರಶ್ನೆಯು ತಮ್ಮನ್ನು ಹೇಗೆ ಉತ್ತರ ನೀಡಲಾರದಂತೆ ದಿಗ್ಮೂಢನನ್ನಾಗಿ ಮಾಡಿತೆಂದೂ. ಕುಹಕವಾದ ಸ್ವಪ್ನದಿಂದ ಎಚ್ಚೆತ್ತವರಂತೆ ಹೇಗೆ ತಾವು ಸುಮ್ಮನೆ ನಕ್ಕರೆಂದೂ ನನ್ನ ಸ್ನೇಹಿತರು ನನಗೆ ತಿಳಿಸಿದರು.

ಸರ್ಕಾರದ ಸಮ್ಮೋಹನ ಮಂತ್ರಕ್ಕೊಳಗಾಗದ. ಪ್ರಮತ್ತನಾಗದ ರಷ್ಯದ ಪ್ರತಿ ಕೆಲಸಗಾರನಿಂದಲೂ ಇಂಥ ಅಭಿಪ್ರಾಯಗಳನ್ನು ಕೇಳಬಹುದು.

ರಷ್ಯದ ರೈತಸಮುದಾಯವು ಹೇಗೆ ತನ್ನ ಧರ್ಮ. ಜಾರ್ ಹಾಗೂ ತಮ್ಮ ಪಿತೃಭೂಮಿಗಳ ಬಗ್ಗೆ ಪ್ರೀತಿಯಿಟ್ಟಿದ್ದಾರೆಂದು ಜನರೇನೋ ಮಾತನಾಡಿಕೊಳ್ಳಬಹುದು. ಆದರೆ ಅವರೆದುರಿಗೆ ಈ ಮುಂದಿನ ಎರಡರಲ್ಲಿ ಒಂದನ್ನು ಆರಿಸಿಕೊಳ್ಳುವ ಸಮಯ ಬಂದಿತೆನ್ನೋಣ: (ಪುಸ್ತಕಗಳಲ್ಲಿ ಕರೆದಂತೆ) ತಮ್ಮ ಜಾರ್ ಚಿಕ್ಕಪ್ಪನ ಆಡಳಿತದಲ್ಲಿ ತಮ್ಮ ಪವಿತ್ರವಾದ ಸನಾತನ ಧರ್ಮದೊಡನೆ. ತಮ್ಮ ಪಿತೃಭೂಮಿಯಲ್ಲಿ ಫಲವತ್ತಾದ ಸ್ವಲ್ಪ ಭೂಮಿಯನ್ನು ಪಡೆದು ವಾಸಿಸುವುದು ಅಥವಾ ರಷ್ಯಾವನ್ನು ಬಿಟ್ಟು ಬೇರೆಲ್ಲಾದರೂ ಪ್ರಷ್ಯ. ಚೈನಾ. ಟರ್ಕಿ ಅಥವಾ ಆಸ್ಟ್ರೀಯಾ ಪಿತೃರಹಿತರಾಗಿ. ಶ್ವೇತಜರರಿಲ್ಲದೆ. ಸನಾತನ ಚರ್ಚ್ ಇಲ್ಲದೆಡೆ. ಆದರೆ ಫಲವತ್ತಾದ ಹೆಚ್ಚು ಭೂಮಿಯನ್ನು ಪಡೆದು ಜೀವಿಸುವುದು. ಆಗ ಅವರಲ್ಲಿ ಯಾರೊಬ್ಬನೂ ತನ್ನ ಆಯ್ಕೆಯ ಬಗ್ಗೆ ಹಿಂದು ಮುಂದು ನೋಡಲಾರ: ಎಲ್ಲರೂ ಬಯಸುವುದು ಎರಡನೆಯದನ್ನೇ. ನಾವು ಇದನ್ನು ಈ ಹಿಂದೆಯೂ ಸಾಕಷ್ಟು ಕಂಡಿದ್ದೇವೆ. ಈಗಲೂ ಕಾಣುತ್ತಿದ್ದೇವೆ.

ಪ್ರತಿಯೊಬ್ಬ ರಷ್ಯನ್ ರೈತನೂ ಚಿಂತಿಸುವ ವಿಷಯವೆಂದರೆ. ಒಳ್ಳೆಯ ನೀರಿದೆಯೇ ಎಂಬುದೆಂದೂ ನಾನು ಹೇಳುವುದಿಲ್ಲ. ಭೂಮಿಯು ಮೃದುವಾಗಿದೆಯೇ ಮತ್ತು ಅಲ್ಲಿ ಕಾಯಿಪಲ್ಲೆ ಬೆಳೆಯುತ್ತದೆಯೇ ಎಂಬುದು; ಅವನಿಗೆ ತನ್ನನ್ನು ಯಾವ ಸರ್ಕಾರ ಆಳುತ್ತಿದೆ ಎಂಬುದು ಪ್ರಮುಖವಲ್ಲ (ಏಕೆಂದರೆ ಯಾವ ರಾಜನ ಆಡಳಿತವಾದರೂ ತನಗೆ ರಾಗಿ ಬೀಸುವುದು ತಪ್ಪುವುದಿಲ್ಲ ಎಂಬುದು ಅವನಿಗೆ ಗೊತ್ತಿದೆ).

ಅವನಲ್ಲಿ ಈ ಬಗೆಯ ಅನಾದರ ಉಂಟಾಗಿರಲು ಕಾರಣ ಅವರು ಇನ್ನಾವುದೇ ಆಡಳಿತಕ್ಕೆ ಒಳಪಟ್ಟಿದ್ದರೂ ಅದು ರಷ್ಯನ್ ಸರ್ಕಾರಕ್ಕಿಂತ ಉತ್ತಮವಾಗಿರುತ್ತಿತ್ತು. ಏಕೆಂದರೆ ಇದಕ್ಕಿಂತ ಹೀನವಾದ ಆಡಳಿತ ಯೂರೋಪಿನಲ್ಲಿಲ್ಲ ಬೇರೆಲ್ಲೂ ಇಲ್ಲ ಎಂದು ಭಾವಿಸಲವಕಾಶವಿದೆ. ಆದರೆ ಇದು ಸರಿಯಲ್ಲ. ಏಕೆಂದರೆ ಅಮೆರಿಕಕ್ಕೆ ವಲಸೆ ಹೋಗಿರುವ ಇಂಗ್ಲೀಷ್. ಡಚ್ ಮತ್ತು ಜರ್ಮನ್ ರೈತರಲ್ಲಾಗಲೀ. ರಷ್ಯಕ್ಕೆ ಬಂದಿರುವ ಇತರರಲ್ಲಾಗಲೀ ನನಗೆ ತಿಳಿದಂತೆ ಇದೇ ಭಾವನೆ ನೆಲಸಿದೆ.

ಯೂರೋಪಿನ ಜನರನ್ನು ಒಂದೆಡೆಯಿಂದ ಮತ್ತೊಂದೆಡೆಗೆ. ಟರ್ಕಿಯಿಂದ ಆಸ್ಟ್ರೀಯಾಕ್ಕೋ ಅಥವಾ ಫ್ರಾನ್ಸ್‌ನಿಂದ ಜರ್ಮನಿಗೋ ಸಾಗಿಸುವುದರಿಂದ ಕೆಲಸಗಾರರ ಜೀವನ ರೀತಿಯಲ್ಲಿ ಆಗುವ ಬದಲಾವಣೆ ತೀರ ಕಡಿಮೆ. ಎಷ್ಟು ಕಡಿಮೆಯೆಂದರೆ ಸರ್ಕಾರವೋ ಆಡಳಿತ ವರ್ಗವೋ ಪ್ರೇರಿಸದಿದ್ದರೆ ಅವರಲ್ಲಿ ಅತೃಪ್ತಿಯೇ ಉಂಟಾಗುವುದಿಲ್ಲ

## 12

ರಾಷ್ಟ್ರಪ್ರೇಮವು ಇದೆಯೆಂದು ಸಾಧಿಸಲು ತೋರಿಸಲು ಕೊಡುವ ಆಧಾರಗಳೆಂದರೆ: ರಷ್ಯದಲ್ಲಾದರೆ ಕಿರೀಟಧಾರಣ ಸಮಯ,[9] ಅಥವಾ ಅಕ್ಟೋಬರ್ 17 ರಂದು ಜಾರ್‌ರನ್ನು ಕೊಲೆಮಾಡಲು ನಡೆದ ಪ್ರಯತ್ನ,[10] ಫ್ರಾನ್ಸ್‌ನಲ್ಲಾದರೆ ರಷ್ಯದ ವಿರುದ್ಧ ಯುದ್ಧವನ್ನು ಘೋಷಿಸಿದಾಗ; ಜರ್ಮನಿಯಲ್ಲಿ ವಿಜಯಾಚರಣೆಯ ಸಂದರ್ಭ ಅಥವಾ ಈಗಿನ ಫ್ರಾಂಕೋ ರಷ್ಯನ್ ಸಮಾರಂಭಗಳು – ಇಂತಹ ಸನ್ನಿವೇಶಗಳು.

ಆದರೆ ಈ ರೀತಿ ಭಾವನೆಯು ಹೊಮ್ಮುವ ಹಾಗೆ ವ್ಯವಸ್ಥೆ ಮಾಡಲಾಗುತ್ತದೆಂಬುವನ್ನು ಅರಿಯುವುದು ಅವಶ್ಯಕ. ಉದಾಹರಣೆಗೆ. ರಷ್ಯದಲ್ಲಿ ಜಾರ್ ಪ್ರಯಾಣ ಹೊರಟ ಪ್ರತಿ ಸಂದರ್ಭದಲ್ಲಿಯೂ ರೈತರನ್ನೂ ಕಾರ್ಮಿಕರನ್ನೂ ಕೂಡಿಸಿ ಅವರಿಗೆ ಸ್ವಾಗತ ಕೋರಲು ವ್ಯವಸ್ಥೆಮಾಡಲಾಗುತ್ತದೆ.

ಜನರ ಉತ್ಸಾಹವು ಅದರ ಅವಶ್ಯಕತೆಯು ಯಾರಿಗಿದೆಯೋ ಅಂತಹವರಿಂದ ಕೃತಕವಾಗಿ ಸೃಷ್ಟಿಸಲ್ಪಟ್ಟದ್ದು: ಅಲ್ಲಿ ತೋರಲಾಗುವ ಉತ್ಸಾಹದ ಪ್ರಮಾಣವು ಅದರ ವ್ಯವಸ್ಥಾಪಕರ ಸಂಘಟನಾ ಸಾಮರ್ಥ್ಯವನ್ನು ಸೂಚಿಸುತ್ತದೆ. ಅಷ್ಟೇ ಈ ಕಲೆಯು ಹಳೆಯದಾದರೂ ಬರಬರುತ್ತಾ ಇದರಲ್ಲಿ ಪರಿಣತರಾದವರು ಇಂತಹ ಆನಂದೋತ್ಸಾಹ ನಿರ್ಮಾಣ ಕಾರ್ಯದಲ್ಲಿ ಬಹು ಕುಶಲತೆಯನ್ನು ಗಳಿಸಿಕೊಂಡಿದ್ದಾರೆ.

---

9 ಸಿಂಹಾಸನಾರೋಹಣ ಮಾಡಿದ ಎರಡು ವರ್ಷಗಳ ನಂತರ. ಎಂದರೆ 1893ರಲ್ಲಿ. ಅಲೆಕ್ಸಾಂಡರ್ ಅವರ ಕಿರೀಟಧಾರಣೆಯು ನಡೆಯಿತು.

10 1888ರಲ್ಲಿ ಅಲೆಕ್ಸಾಂಡರ್ ಅವರು ಪ್ರಯಾಣ ಮಾಡುತ್ತಿದ್ದ ರೈಲನ್ನು ಸಿಡಿಸಲು ಬಾರ್ಕೋವ್ ಬಳಿಯ ಬೋರ್ಕಿಯಲ್ಲಿ ಉಗ್ರವಾದಿಗಳ ಪ್ರಯತ್ನ ನಡೆಯಿತು. ಅದರಲ್ಲಿ ಅವರ ಪುತ್ರರೊಬ್ಬರಿಗೆ ಗಾಯಗಳಾದವು.

ಇನ್ನೂ ಎರಡನೆ ಅಲೆಕ್ಸಾಂಡರ್ ಅವರು ಯುವರಾಜರಾಗಿ. ಪ್ರಿಯೋಭಾಜೆನ್‌ಸ್ಕ್ ತುಕಡಿಯ ದಂಡನಾಯಕರಾಗಿದ್ದಾಗಿನ ಮಾತು. ಎಲ್ಲ ಯುವರಾಜರಂತೆ ಅವರೂ ಒಮ್ಮೆ ಊಟವಾದನಂತರ ಸೈನ್ಯದ ಬಿಡಾರಕ್ಕೆ ಹೋದರು. ಅವರ ಗಾಡಿಯು ಕಾಣಿಸಿಕೊಂಡಾಗ ಸೈನಿಕರು ನಡೆದುಕೊಂಡ ರೀತಿಯು ದಾಖಲೆಗಳಲ್ಲಿದೆ. ಅವರನ್ನು ಕಾಣಲು ತಾವು ಇದ್ದ ಉಡುಪಿನಲ್ಲಿಯೇ ಹೊರಬಂದರು. ಅವರು ಎಷ್ಟು ಉತ್ಸಾಹದಿಂದ ತಮ್ಮ ಶ್ರೇಷ್ಠ ದಳಪತಿಯನ್ನು ಸ್ವಾಗತಿಸಿದರೆಂದರೆ ಅವರು ಗಾಡಿಯೊಡನೆ ಓಡುತ್ತ ನಡೆದರು; ಅವರಲ್ಲಿ ಹಲವರು ತ್ಸೆಜಾರ್‌ವಿಚ್ (ಯುವರಾಜ) ರನ್ನು ಕಾಣುತ್ತ ನೆಲದ ಮೇಲೆ ಮಲಗಿ ಪ್ರಣಾಮಗಳನ್ನು ಸಲ್ಲಿಸಿದರು. ಈ ಸ್ವಾಗತದ ರೀತಿಯನ್ನು ಕಂಡವರು ರಷ್ಯನ್ ಸೈನಿಕರು ತಮ್ಮ ಜಾರ್‌ರ ಬಗ್ಗೆಯೂ ಯುವರಾಜರ ಬಗ್ಗೆಯೂ ಇಟ್ಟ ಪ್ರೀತಿಯೆಷ್ಟೆಂಬುದನ್ನು ನೋಡಿ ಪುಲಕಿತರಾಗಿ ರಷ್ಯದ ಗೌರವಾರ್ಥವಾಗಿ ಅಕ್ಟೋಬರ್ ಒಂದರಂದು ಎಲ್ಲ ಬಗೆಯ ಸಂಭ್ರಮದ ಆಚರಣೆಗಳನ್ನು ನಡಸಬೇಕೆಂದು ತೀರ್ಮಾನಿಸಿದರು. ಹೀಗೆಯೇ ರಷ್ಯನ್ ಸಂದರ್ಶಕರನ್ನು ಸ್ವಾಗತಿಸಿ ಫ್ರಾನ್ಸಿನ ನೆನಪಿಗಾಗಿ ಕಾಣಿಕೆಗಳನ್ನು ಸಮರ್ಪಿಸಲು ಟೌಲಾನ್ ಪ್ಯಾರಿಸ್‌ಗಳಿಗೆ ತಮ್ಮ ತಮ್ಮ ನಿಯೋಗಗಳನ್ನೂ ಕಳಿಸಬೇಕೆಂದೊ ಅಥವಾ ಅವರಿಗೆ ಬಿನ್ನವತ್ತಳೆಗಳನ್ನೂ ತಂತಿಗಳನ್ನೂ ಕಳಿಸಬೇಕೆಂದೊ ಅನೇಕ ನಗರಗಳೂ ಪ್ರಾಂತಗಳೂ ತೀರ್ಮಾನಿಸಿದುವು. ಅಕ್ಟೋಬರ್ ಒಂದನೆಯ ತಾರೀಕಿನಂದು ರಾಷ್ಟ್ರೀಯ ರಜಾದಿನವೆಂದೂ. ಎಲ್ಲ ಶಿಕ್ಷಣಸಂಸ್ಥೆಗಳಿಗೂ ಆ ದಿನ ಬಿಡುವು ಕೊಡಬೇಕೆಂದೂ, ಪ್ಯಾರಿಸ್‌ನಲ್ಲಿ ಎರಡು ದಿನಗಳ ರಜೆ ಘೋಷಿಸಬೇಕೆಂದೂ ತೀರ್ಮಾನಿಸಲಾಯಿತು. ಕೆಳದರ್ಜೆಯ ನೌಕರರಿಗೆ ಹಾಕಿದ್ದ ದಂಡದಲ್ಲಿ ವಿನಾಯಿತಿ ನೀಡಿ ಅವರೆಲ್ಲರೂ ಅಕ್ಟೋಬರ್ ಒಂದರಂದು ಕೃತಜ್ಞತಾಪೂರ್ವಕವಾಗಿ ಫ್ರಾನ್ಸಿನ ಹೆಸರಲ್ಲಿ ಸಂತೋಷಿಸಲು ಅವಕಾಶವೀಯಬೇಕೆಂದೂ ನಿರ್ಧರಿಸಲಾಯಿತು.

ರಷ್ಯನ್ ಸೈನ್ಯ ಪಡೆಯುವರಿಗೆ ನೀಡುವ ಸ್ವಾಗತ ಸಮಾರಂಭಗಳಲ್ಲಿ ಭಾಗವಹಿಸ ಬಯಸಿ ಟೌಲಾನ್‌ಗೆ ಹೋಗುವ ಜನರ ಅನುಕೂಲಕ್ಕಾಗಿ ರೈಲ್ವೆಯವರು ಪ್ರಯಾಣ ದರಗಳನ್ನು ಅರ್ಧದಷ್ಟು ಕಡಿಮೆ ಮಾಡಿದುದೇ ಅಲ್ಲದೇ. ವಿಶೇಷ ರೈಲುಗಳು ಓಡುವ ವ್ಯವಸ್ಥೆಯನ್ನು ಮಾಡಿದರು.

ಇಂತಹ ಹಲವಾರು ಸಹಜಸ್ಫೂರ್ತಿಯಿಂದಾದ ವ್ಯವಸ್ಥೆಯನ್ನು ಎಲ್ಲ ಕಡೆಗಳಲ್ಲೂ ಮಾಡಿ (ತನ್ನ ಅಧಿಕಾರದಿಂದಾಗಿ ಸರ್ಕಾರವು ವ್ಯವಸ್ಥೆಯನ್ನು ಯಾವಾಗಬೇಕಾದರೂ ಮಾಡಬಲ್ಲದು), ಕೆಲವರನ್ನು. ಅದರಲ್ಲೂ ಪ್ರಮುಖವಾಗಿ ನಗರಗಳ ಜನರನ್ನು, ಇಂತಹ ಅಸಹಜ ಭಾವೋದ್ವೇಗದ ಪರಿಸ್ಥಿತಿಯಲ್ಲಿ ನೂಕಿ "ನೋಡಿ ಇಡೀ ರಾಷ್ಟ್ರದ ಜನತೆಯ ಮನೋಭಾವದ ಸಹಜ ಅಭಿವ್ಯಕ್ತಿಯಿದು" ಎಂದು ಎಲ್ಲರೂ ಉದ್ಗರಿಸುತ್ತಾರೆ.

ಇತ್ತೀಚೆಗೆ ಟೌಲಾನ್ ಮತ್ತು ಪ್ಯಾರಿಸ್‌ಗಳಲ್ಲಿ ನಡೆದಂತಹ ಪ್ರದರ್ಶನಗಳಂತಹ ವಾಗಲೀ, ಚಕ್ರವರ್ತಿಯನ್ನೋ ಅಥವಾ ಬಿಸ್ಮಾರ್ಕ್‌ನ್ನೋ ಜರ್ಮನಿಯಲ್ಲಿ ಸ್ವಾಗತಿಸಿದ

ಕಾಲವಾಗಲೀ ಲೋರೇನ್‌ನಲ್ಲಿ ನಡೆಯುವ ಪ್ರದರ್ಶನಗಳಾಗಲೀ ಎಲ್ಲ ಸಂಭ್ರಮ ಸಮಾರಂಭಗಳಲ್ಲೂ ರಷ್ಯದಲ್ಲಿ ಪದೇ ಪದೇ ಕಾಣುವಂತಹ ಅಂಶವೆಂದರೆ ತಮ್ಮ ಆಡಳಿತದಲ್ಲಿರುವ ಜನರನ್ನು ಭಾವೋದ್ವೇಗಕ್ಕೊಳಗಾಗಿಸುವ ಸರ್ಕಾರದ ಅಥವಾ ಆಡಳಿತ ವರ್ಗದ ಸಾಧನಗಳ ಶಕ್ತಿಯೆಷ್ಟೆಂದರೆ ತಮಗೆ ಬೇಕೆನಿಸಿದ ಕ್ಷಣದಲ್ಲಿ ಬಯಸಿದ ಭಾವನೆಗೆ ಜನರನ್ನು ಒಳಗುಮಾಡುವಂಥದು. ಇನ್ನೊಂದು ಕಡೆ. ಈಗಿನಂತೆ ಕೃತಕವಾಗಿ ರಾಷ್ಟ್ರಪ್ರೇಮವನ್ನು ಪ್ರೇರಿಸಲು ಸರ್ಕಾರಗಳು ಅಥವಾ ಆಡಳಿತ ವರ್ಗಗಳು ಕೈಗೊಳ್ಳುವ ತೀವ್ರಕ್ರಮಗಳಲ್ಲೂ ಈ ಎಲ್ಲಾ ಪ್ರಯತ್ನಗಳಿದ್ದರೂ ಸಾಧಿಸುವ ಕ್ಷುಲ್ಲಕ ಸಾಧನೆಗಳೂ ಜನರಲ್ಲಿ ರಾಷ್ಟ್ರಪ್ರೇಮವಿಲ್ಲವೆನ್ನುವುದನ್ನು ತೋರಿಸುವಷ್ಟು ಸ್ಪಷ್ಟವಾಗಿ ಬೇರಾವುದೂ ತೋರಿಸಲಾರದು.

ಜನರಲ್ಲಿ ರಾಷ್ಟ್ರಪ್ರೇಮವು ಸಹಜವಾಗಿಯೇ ಇದ್ದುದಾದರೆ. ಅವರು ತಮ್ಮ ಸಹಜ ಸ್ವರೂಪದಲ್ಲಿರಲು ಅವಕಾಶವೀಯಬೇಕಾಗಿತ್ತು. ವಿಶೇಷ ಸಂದರ್ಭಗಳಲ್ಲಿ ಕೃತಕ ಸಾಧನೆಗಳಿಂದ ಅದು ಎದ್ದು ಕಾಣುವಂತೆ ಸತತ ಪ್ರಯತ್ನವನ್ನು ಮಾಡ ಬೇಕಾಗಿಯೂ ಇರಲಿಲ್ಲ.

ಹಾಗಿದ್ದರೆ ಈಗ ಮಾಡುತ್ತಿರುವಂತೆ. ಪ್ರತಿ ಜಾರ್‌ರ ಕಿರೀಟಧಾರಣೆಯ ಸಂದರ್ಭ ದಲ್ಲಿ ಅವರ ಬಗ್ಗೆ ನಿಷ್ಠೆಯನ್ನು ವ್ಯಕ್ತಪಡಿಸುವಂತೆ ರಷ್ಯದ ಜನತೆಯನ್ನೆಲ್ಲ ಒಂದು ಕ್ಷಣ ವಾದರೂ ಒತ್ತಾಯ ಮಾಡದಿರಲಿ: ಚರ್ಚ್‌ನ ಪ್ರತಿ ಪ್ರಾರ್ಥನಾ ಸಭೆಯಲ್ಲೂ ಜಾರ್‌ರ ಪರವಾಗಿ ಭಕ್ತಿಯಿಂದ ಸಾಂಪ್ರದಾಯಿಕ ಪ್ರಾರ್ಥನೆಗಳನ್ನು ಮಾಡುವುದು ನಿಲ್ಲಲಿ: ಅವರ ಜನ್ಮದಿನ ಹಾಗೂ ನಾಮಕರಣ ದಿನಗಳಂದು ಗಂಟೆಗಳ ಧ್ವನಿಮಾಡಿ. ದೀಪಾಲಂಕಾರಮಾಡಿ ಕೆಲಸಮಾಡದಂತೆ ರಜಾದಿನವಾಗಿ ಘೋಷಿಸುವುದನ್ನು ನಿಲ್ಲಿಸಲಿ: ಅವರ ಭಾವಚಿತ್ರವನ್ನು ಎಲ್ಲೆಡೆ ಪ್ರದರ್ಶಿಸುವುದನ್ನೂ ಪ್ರಾರ್ಥನಾ ಪುಸ್ತಕಗಳಲ್ಲಿ. ಕ್ಯಾಲೆಂಡರುಗಳಲ್ಲಿ ಹಾಗೂ ಶಾಲಾ ಪಠ್ಯಪುಸ್ತಕಗಳಲ್ಲಿ ಅವರ ಹಾಗೂ ಅವರ ಕುಟುಂಬದವರ ಹೆಸರುಗಳನ್ನೂ ಅವ ರನ್ನು ಸಂಬೋಧಿಸಬೇಕಾದ ಸರ್ವನಾಮಗಳನ್ನೂ ದಪ್ಪದಪ್ಪ ಅಕ್ಷರಗಳಲ್ಲಿ ಮುದ್ರಿಸು ವುದನ್ನು ನಿಲ್ಲಿಸಿಸಲಿ: ವಿಶೇಷ ಉದ್ದೇಶಗಳಿಗಾಗಿ ಪ್ರಕಟವಾಗುವ ಪುಸ್ತಕಗಳಲ್ಲೂ ಸರ್ಕಾರಿ ವಾರ್ತಾಪತ್ರಗಳಲ್ಲಿಯೂ ಅವರನ್ನು ಇಂದ್ರ ಚಂದ್ರರೆಂದು ಹೊಗಳುವುದು ನಿಲ್ಲಲಿ: ಹಾಗೆಯೇ ಜಾರ್‌ರ ಬಗ್ಗೆ ಸ್ವಲ್ಪ ಅಗೌರವದ ಮಾತನ್ನಾಡಿದವರನ್ನು ಶಿಕ್ಷಿಸುವುದೂ ಅವರಿಗೆ ಸೆರೆವಾಸವನ್ನು ವಿಧಿಸುವುದೂ ನಿಲ್ಲಲಿ: ಇವುಗಳನ್ನು ಒಂದು ಕ್ಷಣವಾದರೂ ನಿಲ್ಲಿಸಿದರೆ ಆಗ ಜನರು ಎಂದರೆ ಪ್ರೋಕೋಫಿ, ಊರ ಹಿರಿಯನಾದ ಇವಾನ್ ಇವ ರಂತಹ ನಿಜವಾದ ಕೆಲಸಗಾರರೂ ಇನ್ನೆಲ್ಲ ರಷ್ಯನ್ ರೈತರೂ ಒಂದಲ್ಲ ಒಂದು ರೀತಿಯಲ್ಲಿ ತಮ್ಮನ್ನು ಭೂಮಾಲಿಕರು ಮತ್ತಿತರ ಸಾಹುಕಾರರ ಕೈಯಲ್ಲಿ ಹಾಕುವಂತಹ – ಜಾರ್ ರನ್ನು ಎಷ್ಟು ಸಹಜವಾಗಿ ಪೂಜಿಸುತ್ತಾರೆಂಬುದು ತಿಳಿಯುತ್ತದೆ.

ಇದು ರಷ್ಯಾದ ವಿಷಯವಾಯಿತು. ಇದೇ ರೀತಿ ಜರ್ಮನಿ, ಫ್ರಾನ್ಸ್, ಇಟಲಿ, ಇಂಗ್ಲೆಂಡ್ ಮತ್ತು ಅಮೆರಿಕಗಳಲ್ಲಿ ಸರ್ಕಾರಗಳೂ, ಆಡಳಿತವರ್ಗಗಳೂ ಜನರಲ್ಲಿ ರಾಷ್ಟ್ರಪ್ರೇಮ ಭಕ್ತಿ ಮತ್ತು ಅರ್ಪಣಾ ಮನೋಭಾವಗಳನ್ನು ಬೆಳೆಸಲು ಕಷ್ಟಪಟ್ಟು ಮಾಡುತ್ತಿರುವ ಪ್ರಯತ್ನವನ್ನೆಲ್ಲ ಕೈಬಿಡಲಿ, ಆಗ ಈ ರಾಷ್ಟ್ರಪ್ರೇಮವು ನಮ್ಮ ಕಾಲದ ಜನಗಳಲ್ಲಿ ಎಷ್ಟು ಸಹಜವಾದ ಮನೋಭಾವವೆಂಬುದು ತಿಳಿಯುತ್ತದೆ.

ಈಗ ಜನರನ್ನು ಬಾಲ್ಯದಿಂದಲೇ ಶಾಲಾ ಪುಸ್ತಕಗಳು, ಚರ್ಚಿನ ಪ್ರಾರ್ಥನೆಗಳು, ಧರ್ಮೋಪದೇಶಗಳು, ಭಾಷೆಗಳು, ಗ್ರಂಥಗಳು, ವೃತ್ತಪತ್ರಿಕೆಗಳು, ಕವನಗಳು, ಸ್ಮಾರಕಗಳು – ಈ ಎಲ್ಲ ರೀತಿಯ ಸಾಧನಗಳಿಂದಲೂ ಒಂದೇ ಗುರಿಯತ್ತ ಮಂಕುಬೂದಿಯೆರಚಿ ಕೊಂಡೊಯ್ಯಲಾಗುತ್ತಿದೆ. ಸಾವಿರಾರು ಜನರನ್ನು ಒತ್ತಾಯಪೂರ್ವಕವಾಗಿಯೋ, ಯಾವುದಾದರೂ ಆಮಿಷ ತೋರಿಸಿಯೋ ಒಂದೆಡೆ ಸೇರಿಸಿ, ಅವರನ್ನು ಸಂಭ್ರಮದ ಉತ್ಸವಗಳನ್ನು ಕಂಡು ಸಂತೋಷಪಡುವ ಸೋಮಾರಿಗಳ ಜೊತೆ ಕೂಡಿಸುತ್ತಾರೆ. ತಮ್ಮ ಮುಂದಿರುವವರ ಬಂದೂಕು ಮತ್ತು ಬ್ಯಾಂಡ್‌ಗಳ ಧ್ವನಿಯೊಡನೆ, ರಂಗುರಂಗಿನ ವಾತಾವರಣದಲ್ಲಿ ಕೂಗುಹಾಕಿದಾಗ ಈ ಜನರು ತಾವೂ ಕೂಗುತ್ತಾರೆ: ಇದನ್ನೇ ಇಡೀ ರಾಷ್ಟ್ರದ ಜನತಾಮನೋಭಾವದ ಅಭಿವ್ಯಕ್ತಿ ಎಂದು ಕರೆಯಲಾಗುತ್ತದೆ. ಆದರೆ ಮೊದಲನೆಯ ಅಂಶವೆಂದರೆ, ಇಂಥ ಸಮಾರಂಭಗಳಲ್ಲಿ ಕೂಗುವ ಈ ಸಾವಿರವೋ ಹತ್ತು ಸಾವಿರವೋ ಜನರು ಇಡೀ ರಾಷ್ಟ್ರದಲ್ಲಿನ ಜನರೆಲ್ಲರ ಹತ್ತುಸಾವಿರದೊಂದು ಭಾಗ ಮಾತ್ರ. ಎರಡನೆಯದಾಗಿ, ಕೂಗಿ – ಕೈಬೀಸುವ ಹತ್ತು ಸಾವಿರದಲ್ಲಿ ಬಹುಪಾಲು ಜನರನ್ನು ನಮ್ಮ ರಷ್ಯದಲ್ಲಿಯಂತೆ ಬಲಾತ್ಕಾರವಾಗಿ ಕೂಡಿಹಾಕಿರದಿದ್ದರೂ, ಚಮತ್ಕಾರ ದಿಂದ ಯಾವುದಾದರೊಂದು ಆಸೆಯನ್ನು ತೋರಿಸಿ ಆಕರ್ಷಿಸಲಾಗಿರುತ್ತದೆ. ಮೂರನೆಯ ದಾಗಿ ಈ ಸಾವಿರಾರು ಜನರಲ್ಲಿ ಎಲ್ಲೋ ಹತ್ತಾರು ಜನರಿಗೆ ಮಾತ್ರ ತಮ್ಮ ಮುಂದೆ ನಡೆಯುತ್ತಿರುವುದೇನೆಂದು ತಿಳಿದಿರಬಹುದು: ಮಿಕ್ಕವರು ಈಗ ನಡೆಯುವುದಕ್ಕೆ ವಿರುದ್ಧವಾದುದು ನಡೆದಿದ್ದರೂ ಈಗಿನಂತೆಯೇ ಕೈಬೀಸುತ್ತಿದ್ದರು, ಕೂಗು ಹಾಕುತ್ತಿದ್ದರು. ನಾಲ್ಕನೆಯದಾಗಿ, ಸರ್ಕಾರದ ಆಶಯ ಆಜ್ಞೆಗಳಿಗೆ ವಿರುದ್ಧವಾಗಿ ಯಾರಾದರೂ ಏನನ್ನಾದರೂ ಕೂಗಿದರೆ ಅಂತಹವರನ್ನು ಪೋಲೀಸರು ಬಂದು ಸುಮ್ಮನಿರಿಸುತ್ತಾರೆ; ಈ ಫ್ರಾಂಕೋ – ರಷ್ಯನ್ ಸಮಾರಂಭಗಳ ಕಾಲದಲ್ಲಿ ಇಂತಹ ಕಠಿಣ ಪ್ರಸಂಗಗಳು ಸಾಕಷ್ಟು ನಡೆದವು.

ಫ್ರಾನ್ಸ್‌ನಲ್ಲಿ ಇಂಥದೇ ಉತ್ಸಾಹದಿಂದ ಮೊದಲನೆ ನೆಪೋಲಿಯನ್ ರಷ್ಯದೊಡನೆ ನಡೆಸಿದ ಕದನವನ್ನೂ, ಅನಂತರ ಈ ಕದನವನ್ನು ಯಾರ ವಿರುದ್ಧ ಹೂಡಿತ್ತೋ ಅಂತಹ ಅಲೆಕ್ಸಾಂಡರ್ ಅನ್ನೂ, ಅನಂತರ ಮತ್ತೆ ನೆಪೋಲಿಯನ್, ಮತ್ತೆ ಮೈತ್ರಿಕೂಟವನ್ನು, ಬೋರ್ಬನರನ್ನು, ಆರ್ಲಿಯನ[11]ರನ್ನು ಗಣರಾಜ್ಯವನ್ನು, ಮೂರನೆಯ ನೆಪೋಲಿಯನ್

---

11 ಲೂಯಿಸ್-ಫಿಲಿಪ್ ದೊರೆ.

ಮತ್ತು ಪೌಲಾಂಗರನ್ನು ಸ್ವಾಗತಿಸಲಾಯಿತು. ರಷ್ಯಾದಲ್ಲಾದರೆ ಈ ದಿನ ಪೀಟರ್[12] ನಾಳೆ ಕ್ಯಾದರೀನ್, ಆಮೇಲೆ ಪಾಲ್ ಅಲೆಕ್ಸಾಂಡರ್, ಕಾನ್‌ಸ್ಟನ್‌ಟೈನ್[13] ನಿಕೋಲಾಸ್, ಲ್ಯೂಕೆನ್‌ಬರ್ಗ್‌ನ ಡ್ಯೂಕ್[14], ನಮ್ಮ ಸ್ಲಾವ್ ಸೋದರರು ರಷ್ಯದ ದೊರೆ, ಫ್ರಾನ್ಸ್‌ನ ನೌಕಾ ಆಡಳಿತಗಾರರು ಬಯಸಿದವರನ್ನೆಲ್ಲ ಒಂದೇ ಬಗೆಯ ಉತ್ಸಾಹದಿಂದ ಸ್ವಾಗತಿಸಿದರು. ಇಂಗ್ಲೆಂಡ್, ಅಮೆರಿಕ, ಜರ್ಮನಿ, ಇಟಲಿಗಳಲ್ಲಿ ನಡೆಯುವುದೂ ಇದೇನೇ.

ಒಂದೆಡೆ, ರಾಷ್ಟ್ರಪ್ರೇಮವೆಂಬುದು, ಶಾಲೆಗಳು ಚರ್ಚ್ ಹಣಕೊಟ್ಟು ಕೊಳ್ಳಬಹುದಾದ ಪತ್ರಿಕೆಗಳು ಇವು ಸರ್ಕಾರದ ಉದ್ದೇಶಗಳಿಗಾಗಿ ಸದಾ ಉಂಟುಮಾಡುತ್ತಿರುವ ಒಂದು ಮನಸ್ಥಿತಿಯಾದರೆ, ಇನ್ನೊಂದೆಡೆ ಸರ್ಕಾರವೂ ಆಡಳಿತವರ್ಗಗಳೂ ವಿಶೇಷ ಸಾಧನಗಳಿಂದ ಬೌದ್ಧಿಕ ಹಾಗೂ ನೈತಿಕವಾಗಿ ತೀರ ಕೆಳಮಟ್ಟದಲ್ಲಿರುವ ಜನರಲ್ಲಿ ಉಂಟುಮಾಡಿದ ತಾತ್ಕಾಲಿಕ ಭಾವೋದ್ವೇಗವನ್ನೇ ಇಡೀ ರಾಷ್ಟ್ರದ ಶಾಶ್ವತ ಮನೋಭಾವದ ಅಭಿವ್ಯಕ್ತಿಯೆಂದು ಕರೆಯುತ್ತಿರುವುದು. ದಮನಕ್ಕೊಳಗಾದ ರಾಷ್ಟ್ರಗಳಲ್ಲಿನ ರಾಷ್ಟ್ರಪ್ರೇಮವೂ ಇದಕ್ಕೆ ಹೊರತಲ್ಲ. ಅಲ್ಲಿಯೂ ಕಾರ್ಮಿಕವರ್ಗದಲ್ಲಿ ಇದು ಅಸಹಜವಾದುದು, ಮೇಲುವರ್ಗಗಳಿಂದ ಅವರಲ್ಲಿ ಇದನ್ನು ಕೃತಕವಾಗಿ ಪೋಷಿಸಲಾಗುತ್ತದೆ, ಅಷ್ಟೆ.

## 13

'ಕೆಲಸಗಾರರು ರಾಷ್ಟ್ರಪ್ರೇಮದ ಭಾವನೆಯನ್ನು ಅನುಭವಿಸದಿದ್ದರೆ ಅವರು ಪ್ರತಿ ವಿದ್ಯಾವಂತನಿಗೂ ಸಹಜವಾದ ಆ ಭಾವನೆಯನ್ನುಂಟಾಗುವ ಉನ್ನತಮಟ್ಟವನ್ನು ತಲುಪಿಲ್ಲ ಎಂದು ಅರ್ಥ. ಆ ಮಟ್ಟವನ್ನವರು ತಲುಪಿರದಿದ್ದರೆ, ಅದನ್ನು ಸರ್ಕಾರವು ಮಾಡುತ್ತಿರುವುದು'.

ಆಡಳಿತ ವರ್ಗದವರು ಸಂಪೂರ್ಣ ನಂಬಿಕೆಯಿಂದ ರಾಷ್ಟ್ರಪ್ರೇಮವೊಂದು ಉನ್ನತ ಭಾವನೆಯೆಂದು ಹೇಳುತ್ತಾರೆ; ಈ ಭಾವನೆಯನ್ನು ಅನುಭವಿಸಿದ ಸಾಮಾನ್ಯ ಜನರು ಅದನ್ನು ಅನುಭವಿಸದಿರುವುದಕ್ಕಾಗಿ ತಮ್ಮನ್ನು ಹೀಯಾಳಿಸಿಕೊಳ್ಳುತ್ತಾರೆ, ಅಥವಾ

---

12 ಕೊಲೆಯಾದ ಪೀಟರ್ III.

13 ಅಲೆಕ್ಸಾಂಡರ್ ಮತ್ತು ಎರಡನೇ ನಿಕೋಲಾಸ್‌ರ ಸಹೋದರ, ಅವರನ್ನು 1825ರಲ್ಲಿ ಡಿಸೆಂಬ್ರಿಸ್ಟ್ ಪಿತೂರಿಗಾರರು ಚಕ್ರವರ್ತಿಯೆಂದು ಘೋಷಿಸಿದರು.

14 ಲ್ಯುಕೆನ್‌ಬರ್ಗ್‌ನ ಡ್ಯೂಕ್ ಆದ ಮ್ಯಾಕ್ಸಿಮಿಲಿಯನ್ ಯೂಜೀನ್ ಜೋಸೆಫ್ ನೆಪೋಲಿಯನ್ (ವಾಚನ್‌ಬರ್ಗ್ ಸಂಸ್ಥಾನವನ್ನು ಕೊಂಡುಕೊಂಡ ಯೂಜೀನ್ ಡಿ. ಬ್ಯೂಹರ್‌ನೇಸ್‌ನ ಮಗ). ಆತ ಮಾರ್ಯಾನಿಕೋಲೇವ್ನಳನ್ನು ಮದುವೆಯಾದ. ಆಕೆ ಅಲೆಕ್ಸಾಂಡರ್ II ನ ತಂಗಿ.

ತಮ್ಮಲ್ಲಿ ಆ ಭಾವನೆಯಿದೆಯೆಂದು ಸಮಾಧಾನ ಪಟ್ಟುಕೊಳ್ಳುತ್ತಾರೆ, ಅಥವಾ ಇರುವಂತೆ ವರ್ತಿಸುತ್ತಾರೆ.

ಜನರಲ್ಲಿ ಬೆಳೆಸಬೇಕೆಂದು ಆಡಳಿತಗಾರರು ಬಯಸುತ್ತಿರುವ ಈ ಉನ್ನತ ಭಾವನೆಯು ಯಾವುದು?

ಈ ಭಾವನೆಯೆಂದರೆ. ಸೂತ್ರೀಕರಿಸಿ ಹೇಳುವುದಾದರೆ. ತಮ್ಮ ಸಾಮ್ರಾಜ್ಯವನ್ನೋ ಜನತೆಯನ್ನೋ ಬೇರೆ ಪ್ರತಿಯೊಂದು ಸಾಮ್ರಾಜ್ಯದ ಅಥವಾ ಜನತೆಯೊಡನಿಟ್ಟು ಹೋಲಿಸುವುದೇ ಆಗಿದೆ. ಈ ಭಾವನೆಯು ಜರ್ಮನ್ ರಾಷ್ಟ್ರಭಕ್ತಿ ಗೀತೆಯಾದ 'ಜರ್ಮನಿ, ಜರ್ಮನಿ ಎಲ್ಲ ರಾಷ್ಟ್ರಗಳಲ್ಲೂ ನೀನೇ ಶ್ರೇಷ್ಠ' ಎಂಬುದರಲ್ಲಿ ಸಂಪೂರ್ಣವಾಗಿ ಪ್ರಕಟವಾಗಿದೆ: ಇದರಲ್ಲಿ ಜರ್ಮನಿ ಎಂಬುದಕ್ಕೆ ಬದಲು ರಷ್ಯ, ಫ್ರಾನ್ಸ್, ಇಟಲಿ ಅಥವಾ ಬೇರಾವುದೇ ಸಾಮ್ರಾಜ್ಯವನ್ನು ಸೇರಿಸಿದರೆ ರಾಷ್ಟ್ರಪ್ರೇಮವೆಂಬ ಉನ್ನತ ಭಾವನೆಯು ಸ್ಪಷ್ಟವಾಗಿ ಅರ್ಥವಾಗುವುದು. ಈ ಭಾವನೆಯು ಸರ್ಕಾರಕ್ಕೂ ದೇಶದ ಐಕ್ಯಕ್ಕೂ ಉಪಯುಕ್ತವಾದುದೆಂಬುದೂ ಅಪೇಕ್ಷಣೀಯವೆಂಬುದೂ ನಿಸ್ಸಂಶಯವಾಗಿ ನಿಜ. ಆದರೆ ಇದು ಉನ್ನತವಾದ ಭಾವನೆಯೇನಲ್ಲ, ಬದಲು ಅದೊಂದು ಮೂರ್ಖತನದ್ದೂ ಅನೈತಿಕವಾದದ್ದೂ ಆದ ಭಾವನೆ: ಮೂರ್ಖತನದ್ದು, ಏಕೆಂದರೆ, ಪ್ರತಿಯೊಂದು ದೇಶವೂ ಬೇರೆಲ್ಲದಕ್ಕಿಂತ ತಾನೇ ಶ್ರೇಷ್ಠ ಎಂದು ಪರಿಗಣಿಸುವುದಾದರೆ, ಅವೆಲ್ಲವೂ ತಪ್ಪು ಭಾವನೆಯಿಂದ ಕೂಡಿರುವುದು ಅತ್ಯಂತ ಸ್ಪಷ್ಟ: ಅನೈತಿಕವೇಕೆಂದರೆ, ಈ ಭಾವನೆಯನ್ನು ಹೊಂದಿದ ಪ್ರತಿಯೊಬ್ಬನೂ ತನ್ನ ದೇಶದ ಮತ್ತು ಜನರ ಒಳಿತನ್ನು ಬಯಸುವಾಗ ಇತರ ದೇಶಗಳ ಹಾಗೂ ಜನಗಳ ಕೇಡನ್ನು ಅನಿವಾರ್ಯವಾಗಿ ಬಗೆಯುತ್ತಾನೆ—ಇದು ನಮಗೆ ಯಾವುದು ಸಂಭವಿಸಲಾರದೆಂದು ಬಯಸುತ್ತೇವೋ ಅದನ್ನು ಇತರರಿಗೆ ಉಂಟುಮಾಡಬಾರದೆಂಬ ಸರ್ವಮಾನ್ಯವಾದ ಮೂಲಭೂತ ನೈತಿಕ ನಿಯಮಕ್ಕೆ ನೇರವಾಗಿ ವಿರುದ್ಧವಾದುದು.

ಅತ್ಯಂತ ಶ್ರೇಷ್ಠ ಆದರ್ಶವಾದ ಪಿತೃಭೂಮಿಗೆ ಭಕ್ತಿಯನ್ನುಂಟುಮಾಡುವ ಕಾರಣದಿಂದ ರಾಷ್ಟ್ರಪ್ರೇಮವೆಂಬುದು ಹಿಂದೆ ಒಂದು ಉನ್ನತ ಧ್ಯೇಯವೆನಿಸಿಕೊಂಡಿದ್ದಿರ ಬಹುದು. ಆದರೆ ಈಗದು ಹೇಗೆ ಶ್ರೇಷ್ಠ ಧ್ಯೇಯವೆನಿಸಬಹುದು? ಏಕೆಂದರೆ ರಾಷ್ಟ್ರಪ್ರೇಮವು ನಮ್ಮ ಧರ್ಮ ಮತ್ತು ನೀತಿಗಳಿಗೆ ವಿರುದ್ಧವಾದುದನ್ನೇ ಬಯಸುತ್ತದೆ, ಎಂದರೆ ರಾಷ್ಟ್ರಪ್ರೇಮವೆಂಬುದು ಮಾನವರೆಲ್ಲರ ಸೋದರತೆ ಸಮಾನತೆಗಳನ್ನು ಮಾನ್ಯ ಮಾಡದೆ ಒಂದು ರಾಜ್ಯ ಮತ್ತದರ ಜನತೆಯೇ ಬೇರೆಲ್ಲವುಗಳಿಗಿಂತ ಪ್ರಮುಖವೆಂದು, ಸಾರುತ್ತದೆ. ಇದೆಲ್ಲಕ್ಕಿಂತ ಹೆಚ್ಚಾಗಿ ಈ ಭಾವನೆಯು ಉನ್ನತವಾಗಿಯೇ ಉಳಿದಿಲ್ಲ. ಅದರ ಬದಲು ಅದೊಂದು ಕೆಡುಕಾಗಿ ಪರಿಣಮಿಸಿದೆ. ತನ್ನ ನಿಜವಾದ ಅರ್ಥದಲ್ಲಿ ರಾಷ್ಟ್ರಪ್ರೇಮವು ಈಗ ಇರಲಾರದು. ಏಕೆಂದರೆ ಅದಕ್ಕೆ ಲೌಕಿಕವಾಗಲೀ ನೈತಿಕವಾಗಲೀ ಆದ ಆಧಾರವಿಲ್ಲ.

ಹಿಂದಾದರೆ ಪ್ರತಿ ರಾಷ್ಟ್ರವೂ ಭಿನ್ನ ಭಿನ್ನವಾಗಿತ್ತು. ಪ್ರತಿಯೊಂದಕ್ಕೂ ತನ್ನದೇ ಆದ ರಾಷ್ಟ್ರಧರ್ಮವಿದ್ದಿತು. ಪ್ರತಿಯೊಂದೂ ದೈವಾಂಶ ಸಂಭೂತನೆಂದು ನಂಬಲಾಗಿದ್ದ ರಾಜನ ಸಂಪೂರ್ಣ ಆಜ್ಞೆಕೆಗೆ ಒಳಗಾಗಿರುತ್ತಿದ್ದಿತು. ಆಗಿನ ಪ್ರತಿಯೊಂದು ರಾಷ್ಟ್ರವೂ ಅನಾಗರಿಕರ ನಡುವೆ ಸಮುದ್ರ ಮಧ್ಯದಲ್ಲಿನ ದ್ವೀಪದಂತಿದ್ದುವು. ತನ್ನಲ್ಲಿ ಮುಳುಗಿಸಿ ಕೊಳ್ಳಲು ಸಮುದ್ರವು ಸದಾ ಪ್ರಯತ್ನಿಸುತ್ತಿದ್ದಿತು. ಇಂತಹ ಪರಿಸ್ಥಿತಿಯಲ್ಲಿ ರಾಷ್ಟ್ರ-ಪ್ರೇಮಕ್ಕೆ ಒಂದು ಬೆಲೆಯಿತ್ತು.

ಅನಾಗರಿಕರು ದಾಳಿಮಾಡಿ ರಾಷ್ಟ್ರದ ಸಮಾಜ ವ್ಯವಸ್ಥೆಯನ್ನೇ ಅಲ್ಲೋಲ ಕಲ್ಲೋಲಗೊಳಿಸುವುದಷ್ಟೇ ಅಲ್ಲದೆ ಇದ್ದುಬದ್ದುದನ್ನೆಲ್ಲ ಲೂಟಿ ಹೊಡೆದು. ಜನರೆಲ್ಲರನ್ನೂ ಕೊಲೆಮಾಡಿ. ಸೆರೆಹಿಡಿದು. ಗುಲಾಮರನ್ನಾಗಿಸಿಕೊಂಡು. ಸ್ತ್ರೀಯರ ಮಾನಭಂಗ ಮಾಡಿ ಹಿಂಸಿಸುವ ಸಂದರ್ಭದಲ್ಲಿ ಅವರನ್ನೆದುರಿಸುವ ಹಂಬಲವು ರಾಷ್ಟ್ರದ ಜನತೆಯಲ್ಲಿ ಇರುತ್ತಿದ್ದುದು ಸಹಜ. ಆಗ ರಾಷ್ಟ್ರ ಪ್ರೇಮವೆಂಬುದು ಸಹಜವಾದ ಭಾವನೆಯೆಂಬುದನ್ನು ನಾವು ಅರ್ಥಮಾಡಿಕೊಳ್ಳಬಹುದು. ತನ್ನನ್ನೂ ತನ್ನ ಸಹರಾಷ್ಟ್ರೀಯರನ್ನೂ ಇಂತಹ ವಿನಾಶದಿಂದ ಪಾರುಮಾಡುವುದಕ್ಕಾಗಿ ತನ್ನವರನ್ನೆಲ್ಲ ಒಂದುಗೂಡಿಸಿ. ಅನಾಗರಿಕರ ಬಗ್ಗೆ ದ್ವೇಷಭಾವನೆಯನ್ನುಂಟುಮಾಡಿ. ತನ್ನ ಜನರನ್ನು ಉಳಿಸುವುದಕ್ಕಾಗಿ ದಸ್ಯುಗಳನ್ನು ಕೊಲ್ಲುವುದನ್ನು ನಾವು ಅರ್ಥಮಾಡಿಕೊಳ್ಳಬಹುದು.

ಆದರೆ ಈಗ ಇಂಥ ಭಾವನೆಗೆ ನಾವು ಯಾವ ಅರ್ಥವನ್ನು ಆರೋಪಿಸಬಹುದು? ನಮ್ಮ ಕಾಲದ ರಷ್ಯನನೊಬ್ಬನು ಯಾವ ಆಧಾರದ ಮೇಲೆ, ಯಾವ ಗುರಿಗಳಿಗಾಗಿ ಫ್ರೆಂಚನನ್ನೋ ಜರ್ಮನನನ್ನೋ ಕೊಲ್ಲಬೇಕು? ತನ್ನ ದ್ವೇಷಭಾವನೆಯನ್ನು ಯಾರ ವಿರುದ್ಧ ಪ್ರೇರಿಸಲಾಗಿದೆಯೋ ಅಂತಹ ಇತರ ರಾಜ್ಯಗಳ ಜನರೂ ಅನಾಗರಿಕರಲ್ಲ, ತನ್ನಂತೆಯೇ ಕ್ರಿಶ್ಚಿಯನ್ನರು ಎಂಬುದು ಎಂತಹ ಅವಿದ್ಯಾವಂತನಿಗಾದರೂ ಚೆನ್ನಾಗಿ ತಿಳಿದಿರುವ ಸಂಗತಿ. ಅವರೂ ತನ್ನಂತಹ ಜನರೇ. ಎಷ್ಟೋ ವೇಳೆ ಅವರೂ ತನ್ನ ಮತ-ವ್ಯಕ್ತಿಗಳನ್ನು ಪಡೆದವರೇ. ಅವರೂ ತನ್ನಂತೆ ಶಾಂತಿಯಿಂದಿರಲು. ಶಾಂತಿಯಿಂದ ತಮ್ಮ ದುಡಿಮೆಯ ಫಲವನ್ನು ವಿನಿಮಯಮಾಡಿಕೊಳ್ಳಲು ಬಯಸುವವರು. ಬಹುಪಾಲು ತಮ್ಮಿಬ್ಬರಲ್ಲಿ ಒಂದೇ ಬಗೆಯ ಕಾರ್ಯಾಸಕ್ತಿ ಇರುತ್ತದೆ; ಎಂದರೆ ವ್ಯಾವಹಾರಿಕವಾಗಿ, ಆಧ್ಯಾತ್ಮಿಕವಾಗಿ ಅಥವಾ ಇವೆರಡರಲ್ಲೂ ತಮ್ಮಿಬ್ಬರ ಆಸಕ್ತಿ ಒಂದೇ. ಹೀಗಾಗಿ ಎಷ್ಟೋವೇಳೆ ಒಂದು ರಾಷ್ಟ್ರದ ಜನರು ತಮ್ಮ ಸಹಜೀವಿಗಳಿಗಿಂತ ಇತರ ರಾಷ್ಟ್ರಗಳ ಜನತೆಗೆ ಹೆಚ್ಚು ಹತ್ತಿರವಾಗಿರುತ್ತಾರೆ; ಉದಾಹರಣೆಗೆ, ವ್ಯಾಪಾರಸಂಸ್ಥೆಯ ಇತರ ರಾಷ್ಟ್ರೀಯರಾದ ಮಾಲೀಕರ ಬಳಿ ಇರುವ ಕೆಲಸಗಾರರು ಇವರಿಗೂ ಮಿಗಿಲಾಗಿ ವಿದ್ವಾಂಸರೂ ಹಾಗೂ ಕಲೆಗಾರರು.

ನಮ್ಮ ಜೀವನ ಪರಿಸ್ಥಿತಿಯು ಎಷ್ಟು ಬದಲಾಯಿಸಿದೆಯೆಂದರೆ, ನಾವು ಇತರ ರಾಷ್ಟ್ರಗಳಿಗಿಂತ ಭಿನ್ನವೆಂದೆನಿಸಬೇಕಾದ ನಮ್ಮ ದೇಶವೆನ್ನುವುದನ್ನು ಹಿಂದಿನಂತೆ ಸ್ಪಷ್ಟ

ವಾಗಿ ಸೂತ್ರೀಕರಿಸಲು ಆಗುವುದೇ ಇಲ್ಲ, ಏಕೆಂದರೆ ಹಿಂದೆ ಒಂದು ರಾಷ್ಟ್ರದ ಜನತೆ ಒಂದು ಬುಡಕಟ್ಟಿಗೆ ಒಂದು ಆಡಳಿತಕ್ಕೆ ಒಂದು ಧರ್ಮಕ್ಕೆ ಒಳಪಟ್ಟಿರುತ್ತಿದ್ದರು. ಈಜಿಪ್ಷಿಯನ್ನರು, ಯೆಹೂದ್ಯರು ಅಥವಾ ಗ್ರೀಕರು ಇವರ ರಾಷ್ಟ್ರಪ್ರೇಮ ಇಂತಹುದು; ಇಂತಹವರು ತಮ್ಮ ಪಿತೃಭೂಮಿಯನ್ನು ರಕ್ಷಿಸಿಕೊಳ್ಳುವಾಗ ತಮ್ಮ ಧರ್ಮ, ರಾಷ್ಟ್ರೀಯತೆ, ಜನ್ಮಭೂಮಿ ಹಾಗೂ ಸರ್ಕಾರಗಳನ್ನೂ ರಕ್ಷಿಸಿಕೊಳ್ಳುತ್ತಿದ್ದರು.

ಅಮೆರಿಕವಲ್ಲಿರುವ ಐರಿಷ್ ಒಬ್ಬನು ತನ್ನ ರಾಷ್ಟ್ರಪ್ರೇಮವನ್ನು ಹೇಗೆ ವ್ಯಕ್ತಪಡಿಸಬೇಕು? ಏಕೆಂದರೆ ಅವನು ಧರ್ಮದ ದೃಷ್ಟಿಯಲ್ಲಿ ರೋಮ್‌ಗೂ, ಜನ್ಮತಃ ಐರ್ಲೆಂಡಿಗೂ, ಪ್ರಜೆಯಾಗಿ ಅಮೆರಿಕಕ್ಕೂ ಸೇರಿದವನು; ಹಾಗೆಯೇ ಆಸ್ಟ್ರೇಲಿಯಾವಲ್ಲಿರುವ ಜೆಕ್, ರಷ್ಯ, ಪ್ರಷ್ಯ, ಆಸ್ಟ್ರಿಯಾಗಳಲ್ಲಿರುವ ಪೋಲಿಷ್, ಬ್ರಿಟಿಷ್ ಸಾಮ್ರಾಜ್ಯದಲ್ಲಿರುವ ಹಿಂದೂ, ರಷ್ಯ ಮತ್ತು ಟರ್ಕಿಗಳಲ್ಲಿನ ಟಾರ್ಟರ್ ಮತ್ತು ಆರ್ಮೇನಿಯನ್— ಇವರೆಲ್ಲ ಒಂದೇ ಸ್ಥಿತಿಯಲ್ಲಿರುವವರು. ಪ್ರಜಾರಾಷ್ಟ್ರೀಯತೆಯನ್ನು ಬದಿಗೊತ್ತಿದರೂ, ರಷ್ಯ, ಫ್ರಾನ್ಸ್, ಮತ್ತು ಪ್ರಷ್ಯಗಳಲ್ಲಿ ಬಹುಪಾಲು ಏಕಜನಾಂಗ ದೇಶಗಳಲ್ಲಿನ ಜನರೂ ಪ್ರಾಚೀನರೂ ಪಡೆದಷ್ಟು ಸಹಜವಾಗಿ ರಾಷ್ಟ್ರಪ್ರೇಮವನ್ನು ಅನುಭವಿಸಲಾರರು; ಏಕೆಂದರೆ, ಎಷ್ಟೋ ವೇಳೆ ಅವರ ಜೀವನಾಸಕ್ತಿಗಳು ತಮ್ಮ ರಾಷ್ಟ್ರದಲ್ಲಿರದೆ ಪರರಾಷ್ಟ್ರಗಳಲ್ಲಿರಬಹುದು (ಹೆಂಡತಿಯರು ಪರರಾಷ್ಟ್ರದವರಾದರೆ ಗೃಹಾಸಕ್ತಿ, ತಮ್ಮ ಬಂಡವಾಳವು ವಿದೇಶೀ ಉದ್ದಿಮೆಗಳಲ್ಲಿ ಹೂಡಿದಾಗ ಆರ್ಥಿಕಾಸಕ್ತಿ ಕೆಲವೇಳೆ ಆಧ್ಯಾತ್ಮಿಕ ವೈಜ್ಞಾನಿಕ ಅಥವಾ ಕಲಾಸಕ್ತಿಗಳಿರಬಹುದು) ಇಂತಹ ರಾಷ್ಟ್ರಗಳ ವಿರುದ್ಧವೇ ಎಷ್ಟೋಬಾರಿ ತಮ್ಮ ರಾಷ್ಟ್ರಪ್ರೇಮವನ್ನು ಎಚ್ಚರಿಸಬಹುದು.

ಈ ಕಾಲದಲ್ಲಿ ರಾಷ್ಟ್ರಪ್ರೇಮವು ನಮಗೆ ಅಸಾಧ್ಯವಾಗಿರುವುದಕ್ಕೆ ಎಲ್ಲದಕ್ಕೂ ಮಿಗಿಲಾದ ಕಾರಣವೊಂದಿದೆ; ಈ ಸಾವಿರದೊಂಬೈನೂರು ವರ್ಷಗಳು ಕ್ರಿಶ್ಚಿಯನ್ ಧರ್ಮದ ಅರ್ಥವನ್ನು ಮರೆಮಾಚಲು ಎಷ್ಟೋ ಪ್ರಯತ್ನಿಸಿದರೂ, ಅದು ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿದೆ. ನಮ್ಮ ಜೀವನವನ್ನಿದು ಎಷ್ಟರಮಟ್ಟಿಗೆ ನಿಯಂತ್ರಿಸುತ್ತದೆಂದರೆ, ಅತ್ಯಂತ ಒರಟರಾದ ಮೂರ್ಖರಾದ ಜನರು ಸಹ ರಾಷ್ಟ್ರಪ್ರೇಮ ಹಾಗೂ ತಮ್ಮ ಧರ್ಮವು ಬೋಧಿಸುವ ನೀತಿ ನಿಯಮಗಳು ಪರಸ್ಪರ ಸಂಪೂರ್ಣ ವಿರುದ್ಧವಾದುವುಗಳೆಂಬುದನ್ನು ಗಮನಿಸದೆ ಹೋಗಲಾರರು.

## 14

ಒಂದೇ ಜನಾಂಗದಿಂದ ಕೂಡಿದ ರಾಷ್ಟ್ರಗಳನ್ನು ಕಟ್ಟಿ ಬಲಪಡಿಸಲೂ ಅನಾಗರಿಕರಿಂದ ಸಂರಕ್ಷಣೆಗಾಗಿಯೂ ರಾಷ್ಟ್ರಪ್ರೇಮವು ಅವಶ್ಯಕವಾಗಿತ್ತು. ಆದರೆ ಕ್ರಿಶ್ಚಿಯನ್ ಜ್ಞಾನವು ಈ ರಾಜ್ಯಗಳನ್ನು ಆಂತರಿಕವಾಗಿ ಮಾರ್ಪಡಿಸಿ, ಎಲ್ಲಕ್ಕೂ ಮೂಲಭೂತವಾದ ಒಂದೇ ತತ್ವಗಳನ್ನು ನೀಡಿದೆ; ಹೀಗೆ ಕ್ರಿಶ್ಚಿಯನ್ ಪ್ರಜೆಯು ಸಿದ್ಧಗೊಳಿಸಿದ ರಾಷ್ಟ್ರಗಳು ಪರಸ್ಪರ ಒಂದುಗೂಡಲು ರಾಷ್ಟ್ರಪ್ರೇಮವು ಏಕೈಕ ಅಡ್ಡಿಯಾಗಿದೆ.

ರಾಷ್ಟ್ರಪ್ರೇಮವು ಈಗ ಗತಿಸಿದ ಕಾಲದಿಂದ ಉಳಿದುಬಂದ ಕ್ರೂರ ಸಂಪ್ರದಾಯವಾಗಿದೆ. ಇದು ಉಳಿದಿರುವುದು ಜಡತೆಯಿಂದಾಗಿ. ತಮ್ಮ ಅಧಿಕಾರವೇ ಏಕೆ ತಮ್ಮ ಅಸ್ತಿತ್ವವೇ ರಾಷ್ಟ್ರಪ್ರೇಮದೊಂದಿಗೆ ಹೆಣೆದುಕೊಂಡಿದೆಯೆಂದು ಭಾವಿಸುವ ಸರ್ಕಾರ ಹಾಗೂ ಆಡಳಿತವರ್ಗಗಳು ಕುಟಿಲ ಹಾಗೂ ಹಿಂಸಾ ಮಾರ್ಗಗಳಿಂದ ಅದನ್ನು ಬಲವಂತವಾಗಿ ಉಂಟುಮಾಡಲು. ಉಳಿಸಲು ಪ್ರಯತ್ನಿಸುತ್ತಾರೆ. ರಾಷ್ಟ್ರಪ್ರೇಮವೆನ್ನುವುದೀಗ ಕಟ್ಟಡವನ್ನು ಕಟ್ಟಲು ಉಪಯೋಗಿಸುವ ಅಟ್ಟಣೆಯ ಹಾಗೆ: ಇದು ಈಗ ಕಟ್ಟಡದ ಉಪಯೋಗವನ್ನು ಕುಂಠಿತಗೊಳಿಸುತ್ತಿದ್ದರೂ ಅದು ಕೆಲವರಿಗೆ ಲಾಭಕರವಾದ್ದರಿಂದ ಅದನ್ನು ಕಿತ್ತು ಹಾಕಿಲ್ಲ.

ಈ ಹಿಂದೆ ಬಹು ದೀರ್ಘಕಾಲ ಕ್ರಿಶ್ಚಿಯನ್ ರಾಷ್ಟ್ರಗಳು ಪರಸ್ಪರ ಜಗಳವಾಡಲು ಕಾರಣಗಳನ್ನು ಪಡೆದಿರಲಿಲ್ಲ, ಅಥವಾ ಪಡೆಯಲಾಗಿರಲಿಲ್ಲ. ಗಡಿ ಪ್ರದೇಶಗಳಲ್ಲಿಯೂ ನಗರಗಳಲ್ಲಿಯೂ ಶಾಂತವಾಗಿ ಕೆಲಸಮಾಡಿ ಸಹಬಾಳ್ವೆ ನಡೆಸುತ್ತಿದ್ದ ರಷ್ಯನ್ ಹಾಗೂ ಜರ್ಮನ್ ಕೆಲಸಗಾರರು ಏಕೆ ಅಥವಾ ಹೇಗೆ ಜಗಳವನ್ನು ಪ್ರಾರಂಭಿಸಬೇಕೆಂಬುದನ್ನು ಕಲ್ಪಿಸಿಕೊಳ್ಳಲೂ ಅಸಾಧ್ಯ. ಅದಕ್ಕಿಂತ ಕಠಿಣವಾದ ಕಲ್ಪನೆಯೆಂದರೆ ಜರ್ಮನರಿಗೆ ಧಾನ್ಯವನ್ನು ನೀಡುತ್ತಿದ್ದ ಕಾಜಾನ್ ಹಾಗೂ ಅವನಿಗೆ ಕುಡುಗೋಲು ಮತ್ತು ಯಂತ್ರಗಳನ್ನು ಸರಬರಾಜುಮಾಡುತ್ತಿದ್ದ ಜರ್ಮನ್ ಇವರ ನಡುವಣ ದ್ವೇಷಭಾವ. ವಿವಿಧ ರಾಷ್ಟ್ರಗಳ ವಿದ್ವಾಂಸರಲ್ಲಿ. ಕಲೆಗಾರರಲ್ಲಿ. ಮತ್ತು ಸಾಹಿತಿಗಳಲ್ಲಿನ ಜಗಳದ ಬಗ್ಗೆ ಮಾತನಾಡುವುದೂ ಅಸಂಗತ: ಏಕೆಂದರೆ ಅವರೆಲ್ಲ ತಮ್ಮ ರಾಷ್ಟ್ರ ಹಾಗೂ ರಾಜಕೀಯಗಳನ್ನು ಗಮನಿಸದೆ ಸಮಾನಾಸಕ್ತಿಗಳಲ್ಲಿ ಮುಳುಗಿರುತ್ತಿದ್ದವರು.

ಆದರೆ ಸರ್ಕಾರಗಳು ಜನರನ್ನು ತಮ್ಮತಮ್ಮಲ್ಲಿ ಶಾಂತಿಯುತ ಸಂಬಂಧಗಳನ್ನು ಪಡೆದು ಜೀವಿಸಲು ಬಿಡುವಂತಿಲ್ಲ: ಏಕೆಂದರೆ ಸರ್ಕಾರಗಳಿರುವುದರ ಏಕೈಕವಲ್ಲದಿದ್ದರೂ ಮುಖ್ಯವಾದ ಉದ್ದೇಶವೆಂದರೆ ತಮಗಾಗದವರೊಂದಿಗಿನ ಸಂಬಂಧಗಳನ್ನು ಕಿತ್ತುಹಾಕುವುದು ಅಥವಾಅನುಕೂಲಕ್ಕೆ ತಕ್ಕಂತೆ ಹೊಂದಿಕೊಳ್ಳುವುದು. ಹೀಗೆ ಸರ್ಕಾರಗಳು ರಾಷ್ಟ್ರಪ್ರೇಮದ ಹೆಸರಿನಲ್ಲಿ ತಮಗಾಗದವರನ್ನು ಕೆರಳಿಸಿ ಅನಂತರ ಅವರನ್ನು ಸುಮ್ಮನಾಗಿಸುವಂತೆ ಕಾಣುತ್ತದೆ. ತನ್ನ ಕುದುರೆಯ ಬಾಲದಡಿ ಮೆಣಸನ್ನು ಸುರಿದು. ಲಾಯದಲ್ಲಿ ಚೆನ್ನಾಗಿ ಹೊಡೆದು. ಕಡಿವಾಣವನ್ನು ಹಿಡಿದೆಳೆಯುತ್ತ ತಾನು ತನ್ನ ಕುದುರೆಯನ್ನು ನಿಯಂತ್ರಿಸಲಾರೆನೆಂದು ಹೇಳಿಕೊಳ್ಳುವ ಜಿಪ್ಸಿಯ ಹಾಗಿದೆ ಈ ನಡವಳಿಕೆ.

ಜನರ ನಡುವ ಶಾಂತಿಯು ನೆಲೆಗೊಳ್ಳುವಂತೆ ಮಾಡುವುದೇ ತಮ್ಮ ಉದ್ದೇಶವೆಂದು ಸರ್ಕಾರಗಳು ಘೋಷಿಸುತ್ತವೆ. ಆದರೆ ಅವರು ಅದನ್ನು ಸಾಧಿಸುವುದು ಹೇಗೆ?

ಜನರು ಪರಸ್ಪರ ಸೌಹಾರ್ದಭಾವದಿಂದ ರೈನ್ ನದಿಯ ತೀರದಲ್ಲಿ ವಾಸಿಸಿರುತ್ತಾರೆ; ಇದ್ದಕ್ಕಿದ್ದಂತೆ ರಾಜರು ಚಕ್ರವರ್ತಿಗಳ ನಡುವಣ ವೈಮನಸ್ಯದಿಂದಾಗಿ ಯುದ್ಧಪ್ರಾರಂಭ

ವಾಗುತ್ತದೆ. ಆಗ ಅಲ್ಲಿ ನೆಲಸಿರುವ ಜನರನ್ನು ಫ್ರೆಂಚ್ ಪ್ರಜೆಗಳೆಂದು ಸರ್ಕಾರವು ಮಾನ್ಯಮಾಡಬೇಕಾದ ಪರಿಸ್ಥಿತಿಯೊದಗುತ್ತದೆ. ಶತಮಾನಗಳುರುಳುತ್ತವೆ: ಜನರು ಈ ಸ್ಥಿತಿಗೆ ಹೊಂದಿಕೊಂಡುಬಿಡುತ್ತಾರೆ. ಮತ್ತೆ ಎರಡು ಬೃಹತ್ ರಾಷ್ಟ್ರಗಳ ನಡುವೆ ವೈಮನಸ್ಯವುಂಟಾಗಿ ಕುಂಟು ನೆಪದಿಂದಲೇ ಯುದ್ಧವೊದಗುತ್ತದೆ. ಆಗ ಈ ಜನರನ್ನು ಜರ್ಮನರೆಂದು ಮತ್ತೆ ಜರ್ಮನ್ ಸರ್ಕಾರವು ಘೋಷಿಸುವುದು ಅನಿವಾರ್ಯವಾಗುತ್ತದೆ. ಇದರಿಂದಾಗಿ ಎಲ್ಲ ಫ್ರೆಂಚರಲ್ಲೂ ಜರ್ಮನರಲ್ಲೂ ಮನಸ್ಸು ಕಲುಷಿತವಾಗುತ್ತದೆ.

ಅಥವಾ ಜರ್ಮನರೂ ರಷ್ಯನರೂ ಗಡಿ ಭಾಗಗಳಲ್ಲಿ ಶಾಂತರೀತಿಯಿಂದ ಜೀವನ ನಡೆಸಿರುತ್ತಾರೆ. ಪರಸ್ಪರ ನೆರವನ್ನಿತ್ತು ತಮ್ಮ ದುಡಿಮೆಯ ಫಲವನ್ನು ಶಾಂತಿಯಿಂದ ವಿನಿಮಯಿಸಿಕೊಳ್ಳುತ್ತಿರುತ್ತಾರೆ. ಇದ್ದಕ್ಕಿದ್ದಂತೆ ರಾಷ್ಟ್ರಗಳ ಮಧ್ಯೆ ಶಾಂತಿಸ್ಥಾಪನೆಯೇ ತಮ್ಮ ಗುರಿಯೆಂದು ಯಾವ ಸಂಸ್ಥೆಗಳು ಘೋಷಿಸಿಕೊಳ್ಳುತ್ತವೋ ಅವೇ ಜಗಳವಾಡಲು ಪ್ರಾರಂಭಿಸುತ್ತವೆ. ಒಂದಾದ ನಂತರ ಮತ್ತೊಂದರಂತೆ ತಪ್ಪುಗಳನ್ನು ಮಾಡುತ್ತವೆ. ತಮ್ಮ ಹಾದಿ ನಿಷ್ಕಂಟಕವಾಗುವಂತೆ ಮಾಡಲು ತಮ್ಮ ಎದುರಾಳಿಗಳನ್ನು ಹುತಾತ್ಮರನ್ನಾಗಿಸಿ ತಮ್ಮನ್ನು ತಾವು ಶಿಕ್ಷಿಸಿಕೊಳ್ಳುವ ಬಾಲಿಶ ಉಪಾಯಗಳಲ್ಲಿ ಕಾಲಕಳೆಯುತ್ತಾರೆ(ಇಂತಹಸಂದರ್ಭದಲ್ಲಿ ತಾವೇ ಶಿಕ್ಷೆಗೊಳಗಾಗುವುದು; ಯಾರು ಆರೋಪಣೆ ಹೊರಿಸಿ ಯುದ್ಧನಡೆಸುತ್ತಾರೋ ಅಂಥವರು ಅದರಿಂದ ನರಳದೆ, ಅದನ್ನು ಬೇರೆಯವರಿಗೇ ನೀಡುತ್ತಾರೆ) ಸುಂಕ ಯುದ್ಧವೊಂದು ಪ್ರಾರಂಭವಾಗುತ್ತದೆ–ಇತ್ತೀಚೆಗೆ ರಷ್ಯ ಮತ್ತು ಜರ್ಮನಿಗಳ ನಡುವೆ ನಡೆದಂತೆ. ವೃತ್ತಪತ್ರಿಕೆಗಳ ವಿಷವಾಯುವಿನಿಂದ ಜರ್ಮನರು ಹಾಗೂ ರಷ್ಯನರ ನಡುವಣ ಬಾಂಧವ್ಯವು ಹದಗೆಡುತ್ತದೆ, ಇದು ಫ್ರಾಂಕೋ – ರಷ್ಯನ್ ಸ್ನೇಹಕೂಟಗಳಿಂದಾಗಿ ಮತ್ತಷ್ಟು ಕಲುಷಿತಗೊಳ್ಳುತ್ತದೆ, ಇದು ಯಾವಾಗ ರಕ್ತಪಾತಕ್ಕೆ ಎಡೆಗೊಡುತ್ತದೋ ಹೇಳುವುದು ಕಷ್ಟ.

ಹೇಗೆ ಸರ್ಕಾರಗಳು ತನ್ನ ಪ್ರಜೆಗಳಲ್ಲಿ ಇತರ ರಾಷ್ಟ್ರಗಳ ಬಗ್ಗೆ ದ್ವೇಷಭಾವನೆಯನ್ನು ಮೂಡಿಸುತ್ತವೆ ಎಂಬುದನ್ನು ತಿಳಿಸಲು ಈ ಹಿಂದಿನ ಎರಡು ಉದಾಹರಣೆಗಳನ್ನು ನೀಡಿದ್ದೇನೆ, ಅದಕ್ಕೆ ಕಾರಣ ಅವು ಆಧುನಿಕ ಕಾಲಕ್ಕೆ ಸಂಬಂಧಿಸಿದುವು ಎಂಬುದು. ಸರ್ಕಾರಗಳಿಂದ ಪ್ರೇರಣೆಯನ್ನೇ ಪಡೆಯದೆ, ಜನಗಳ ಸಹಕಾರವನ್ನು ಬಯಸದೆ (ಗೆಲುವನ್ನು ತರುವ ಯುದ್ಧವೂ ಜನಸಾಮಾನ್ಯರಿಗೆ ಹಾನಿಕರವಾದುದೇ) ನಡೆದಂತಹ ಒಂದೇ ಒಂದು ಯುದ್ಧವೂ ನಮಗೆ ಇತಿಹಾಸದಲ್ಲಿ ಕಾಣಸಿಗುವುದಿಲ್ಲ.

ಜನರು ಪರರಾಷ್ಟ್ರಗಳ ಅಥವಾ ತಮ್ಮೊಡನೆಯೇ ಇರುವ ಶತ್ರುಗಳ ದಾಳಿಗೊಳಗಾಗುವ ಅಪಾಯದಲ್ಲಿದ್ದಾರೆಂದೂ ಅದರಿಂದ ಪಾರಾಗುವ ಒಂದೇ ಒಂದು ಮಾರ್ಗವೆಂದರೆ ತಮ್ಮ ಸರ್ಕಾರಗಳು ಹಾಕಿದ ತಾಳಕ್ಕೇ ಕುಣಿಯಬೇಕೆಂದೂ ಸರ್ಕಾರಗಳು

ಉದ್ಘೋಷಿಸುತ್ತವೆ. ಇದನ್ನು ಕ್ರಾಂತಿಗಳ ಕಾಲದಲ್ಲಿ, ಸರ್ವಾಧಿಕಾರತ್ವದಲ್ಲಿ ಸ್ಪಷ್ಟವಾಗಿ ನೋಡುತ್ತೇವೆ. ಎಲ್ಲೆಲ್ಲಿ ನಿರಂಕುಶ ಪ್ರಭುತ್ವವಿದೆಯೋ ಅಲ್ಲೆಲ್ಲ ಇದು ನಡೆಯುತ್ತದೆ. ಪ್ರತಿ ಸರ್ಕಾರವೂ ತನ್ನ ಅಸ್ತಿತ್ವದ ಗುರಿಯನ್ನು ತನ್ನ ಹಿಂಸೆಯನ್ನು ಸಮರ್ಥಿಸಿಕೊಳ್ಳುವಾಗ ಅವುಗಳಿಲ್ಲದೆ ಪರಿಸ್ಥಿತಿಯು ಉಲ್ಬಣವಾಗುತ್ತಿತ್ತೆಂದೂ ಹೇಳಿಕೊಳ್ಳುತ್ತವೆ. ಜನರು ಅಪಾಯದಲ್ಲಿರುವರೆಂದು ಅವರಲ್ಲಿ ನಂಬಿಕೆಯನ್ನುಂಟುಮಾಡಿ ಸರ್ಕಾರಗಳು ಜನರ ಮೇಲೆ ಸವಾರಿ ಮಾಡುತ್ತವೆ. ಯಾವಾಗ ಸರ್ಕಾರಗಳು ಜನರನ್ನು ನಿಯಂತ್ರಿಸುತ್ತವೋ ಆಗ ಪರಸ್ಪರ ಕಾದಾಡುವಂತೆ ಮಾಡುತ್ತದೆ. ಈ ರೀತಿ ಬೇರೆ ರಾಷ್ಟ್ರಗಳು ತಮ್ಮ ಮೇಲೆ ದಾಳಿ ಮಾಡುವ ಅಪಾಯವಿದೆಯೆಂಬ ತಮ್ಮ ಘೋಷಣೆಗಳನ್ನು ಜನರು ನಂಬುವಂತೆ ಮಾಡುತ್ತವೆ.

'ಭೇದದಿಂದ ಜಯಿಸು'

ರಾಷ್ಟ್ರಪ್ರೇಮವೆಂಬುದರ ಅರ್ಥವನ್ನು ಅತ್ಯಂತ ಸರಳವಾಗಿ, ಸ್ಪಷ್ಟವಾಗಿ, ಸಂಶಯಾತೀತ ರೀತಿಯಲ್ಲಿ ಈ ರೀತಿ ಹೇಳಬಹುದು. ಸರ್ಕಾರದ ಆಕಾಂಕ್ಷೆಗಳನ್ನೂ, ಆರ್ಥಿಕ ಗುರಿಗಳನ್ನೂ ಸಾಧಿಸುವ ಮಾನವ ಗೌರವ ಹಾಗೂ ಲೋಕಜ್ಞಾನಗಳನ್ನೂ ಅಕ್ಷಿಕೆಗೊಳಗಾದವರ ಪ್ರಜ್ಞಾವಂತಿಕೆಯನ್ನೂ ಹಾಳುಮಾಡಿ, ಅಧಿಕಾರಾರೂಢರಿಗೆ ಗುಲಾಮರಾಗಿ ತಲೆಬಾಗುವಂತೆ ಮಾಡುವ ಒಂದು ಸಾಧನ.

ರಾಷ್ಟ್ರಪ್ರೇಮವೆಂದರೆ ಗುಲಾಮಗಿರಿ.

ಒಪ್ಪಂದದ ಮೂಲಕ ಶಾಂತಿಯನ್ನು ಸ್ಥಾಪಿಸಬೇಕೆಂದು ಪ್ರತಿಪಾದಿಸುವವರು ಈ ರೀತಿ ಕಾರಣಗಳನ್ನು ನೀಡುತ್ತಾರೆ. ಎರಡು ಪ್ರಾಣಿಗಳು ತಮ್ಮ ಆಹಾರವನ್ನು ಹೋರಾಟದಿಂದಲ್ಲದೆ ಭಾಗಮಾಡಿಕೊಳ್ಳಲಾಗುವುದಿಲ್ಲ. ಮಕ್ಕಳೂ ಇದೇ ರೀತಿ ಮಾಡುತ್ತಾರೆ. ಹಾಗೆಯೇ ಅನಾಗರಿಕರೂ ಅನಾಗರಿಕ ರಾಷ್ಟ್ರಗಳೂ ಸಹ. ಆದರೆ ವಿಚಾರಶೀಲರಾದವರು ತಮ್ಮ ವಿವಾದಗಳನ್ನು ಚರ್ಚೆ, ಒಡಂಬಡಿಕೆ ಹಾಗೂ ತಮ್ಮ ವಿವಾದದ ತೀರ್ಪನ್ನು ಅನಾಸಕ್ತ ಹಾಗೂ ವಿಚಾರವಂತರಾದ ಮಧ್ಯಸ್ಥಿಕೆಕಾರರಿಗೆ ಒಪ್ಪಿಸುವುದರ ಮೂಲಕ ತೀರ್ಮಾನಿಸಿಕೊಳ್ಳುತ್ತಾರೆ: ಈಗಿನ ರಾಷ್ಟ್ರಗಳೂ ಈ ರೀತಿಯೇ ನಡೆಯಬೇಕು. ಈ ವಾದವು ಸರಿಯೆನಿಸುತ್ತದೆ. ಈಗಿನ ಜನರು ತಿಳಿವಳಿಕಸ್ಥರಾದುದರಿಂದಲೂ ಪರಸ್ಪರ ದ್ವೇಷಭಾವನೆಯಿಂದ ಕೂಡಿರದಿರುವುದರಿಂದಲೂ ತಮ್ಮ ಭಿನ್ನಾಭಿಪ್ರಾಯಗಳನ್ನು ಶಾಂತಿಯುತವಾಗಿ ಬಗೆಹರಿಸಿಕೊಳ್ಳಬಹುದು. ಆದರೆ ಈ ವಾದವು ಸರಿಯಾಗುವುದು ಅದು ಜನಗಳಿಗೆ ಮಾತ್ರ ಅನ್ವಯಿಸಿದಾಗ, ಜನಗಳು ತಮ್ಮ ಸರ್ಕಾರಗಳ ಪುಂಗಿಯ ನಾದಕ್ಕೆ ತಲೆದೂಗದಿರುವಾಗ ಮಾತ್ರ. ತಮ್ಮ ಸರ್ಕಾರಕ್ಕೆ ತಮ್ಮ ತಲೆಯನ್ನೊಪ್ಪಿಸಿದ ಜನರು ವಿಚಾರಶೀಲರಾಗಿರಲು ಸಾಧ್ಯವಿಲ್ಲ. ಏಕೆಂದರೆ ಸರ್ಕಾರಕ್ಕೆ ಮಣಿಯುವುದೇ ಅವಿಚಾರದ ಪ್ರತೀಕ.

ಸರ್ಕಾರದ ಆಜ್ಞೆಗನುಗುಣವಾಗಿ (ಸರ್ಕಾರವೆಂದರೆ ಆಡಳಿತ ಸೂತ್ರಗಳನ್ನು ತಮ್ಮ ಕೈಯಲ್ಲಿ ಹಿಡಿದಿರುವವರು) ಎಲ್ಲವನ್ನೂ (ಜನರ ಕೊಲೆಯನ್ನೂ) ನೆರವೇರಿಸುವುದಾಗಿ ಮೊದಲೇ ಭರವಸೆ ನೀಡುವ ಜನರ ವಿಚಾರಶೀಲತೆಯ ಬಗ್ಗೆ ಮಾತಾಡಿ ಏನು ಪ್ರಯೋಜನ?

ತಮಗೆ ಗೊತ್ತಿಲ್ಲದ ಜನರು. ಪೀಟರ್ಸ್‌ಬರ್ಗ್‌ನಲ್ಲೋ ವಿಯೆನ್ನಾದಲ್ಲೋ ಪ್ಯಾರಿಸ್‌ನಲ್ಲೋ ಕುಳಿತು ಮಾಡುವ ಆಜ್ಞೆಗಳನ್ನು ಶಿರಸಾವಹಿಸಿ ನೆರವೇರಿಸುವ ಜನರು ವಿಚಾರಶೀಲರಾಗಿರಲು ಸಾಧ್ಯವಿಲ್ಲ; ಸರ್ಕಾರಗಳು ಎಂದರೆ ಅಧಿಕಾರಾರೂಢ ಜನರು ಮತ್ತಷ್ಟು ವಿಚಾರಶೂನ್ಯರಾಗಿರುತ್ತಾರೆ. ಅಂತಹ ಕುರುಡಾಗಿಸುವ ಭಯಂಕರ ಅಧಿಕಾರವನ್ನು ದುರುಪಯೋಗಪಡಿಸದೆ ಅವರು ಇರಲಾರರು. ಅದನ್ನು ಪಡೆದು ಹುಚ್ಚರಾಗದಿರುವುದು ಅಸಾಧ್ಯ. ಹೀಗಾಗಿ. ವಿಚಾರಶೂನ್ಯರಾದ ಹಾಗೂ ಅಪಾಯಕಾರಿಗಳಾದ ಸರ್ಕಾರಗಳಿಗೆ ಎಲ್ಲಿಯವರೆಗೆ ಜನರು ತಲೆಬಾಗಿರುತ್ತಾರೋ ಅಲ್ಲಿಯವರೆಗೆ ಪರಸ್ಪರ ಮಾತುಕತೆ ಮತ್ತು ಮಧ್ಯಸ್ಥಿಕೆಗಳ ಮೂಲಕ ಎರಡು ರಾಷ್ಟ್ರಗಳ ನಡುವಣ ವಿವಾದಗಳು ಶಾಂತಿಯುತವಾಗಿ ತೀರ್ಮಾನವಾಗಲಾರವು.

ಆದರೆ ರಾಷ್ಟ್ರಪ್ರೇಮವಿರುವವರೆಗೂ ಜನರು ಸರ್ಕಾರಗಳಿಗೆ ಗುಲಾಮರಾಗಿರುವುದು ಮುಂದುವರಿಯುತ್ತದೆ: ಏಕೆಂದರೆ ಸರ್ಕಾರಗಳು ಉಳಿದಿರುವುದು ರಾಷ್ಟ್ರಪ್ರೇಮದ ಬಲದಿಂದ. ಭಯಗ್ರಸ್ತವಾಗಿರುವ ತಮ್ಮ ಜನ. ರಾಷ್ಟ್ರ ಹಾಗೂ ಸರ್ಕಾರಗಳ ರಕ್ಷಣೆಗಾಗಿ ಜನರು ತಮ್ಮತನವನ್ನು ಕಳೆದುಕೊಳ್ಳಲು ಸಿದ್ಧರಾಗಿರುವುದರಿಂದ. ಕ್ರಾಂತಿಪೂರ್ವ ಕಾಲದ ಫ್ರೆಂಚ್ ದೊರೆಗಳ ಅಧಿಕಾರವು ಇಂತಹ ರಾಷ್ಟ್ರಪ್ರೇಮವನ್ನೇ ಅವಲಂಬಿಸಿತ್ತು. ಕ್ರಾಂತಿಯ ನಂತರದ ಸಾರ್ವಜನಿಕ ರಕ್ಷಣಾ ಸಮಿತಿಯ ಅಧಿಕಾರವೂ ಹಾಗೆಯೇ. ಇದೇ ರಾಷ್ಟ್ರಪ್ರೇಮದ ಬುನಾದಿಯ ಮೇಲೆಯೇ (ಕೌನ್ಸಲ್ ಹಾಗೂ ಚಕ್ರವರ್ತಿಯಾದ) ನೆಪೋಲಿಯನ್ನನ ಅಧಿಕಾರಭವನವೂ ನಿರ್ಮಿತವಾದದ್ದು. ಹಾಗೆಯೇ ನೆಪೋಲಿಯನ್ನನ ಪದಚ್ಯುತಿಯ ನಂತರ ಬಂದ ಬೋರ್ಬನ್ಸ್‌ರ ಅಧಿಕಾರ. ಅನಂತರದ ಗಣರಾಜ್ಯ, ಲೂಯಿಸ್ ಫಿಲಿಪ್ ಮತ್ತೆ ಗಣರಾಜ್ಯ ಪುನಃ ಮೂರನೇ ನೆಪೋಲಿಯನ್. ಅನಂತರ ಮತ್ತೆ ಬಂದ ಗಣರಾಜ್ಯ – ಎಲ್ಲವೂ ಹೀಗೆಯೇ; ಬೌಲಾಂಗರ್‌ನ ಅಧಿಕಾರವು ಸ್ಥಾಪಿತವಾದದ್ದು ಸಹ ಈ ರಾಷ್ಟ್ರಪ್ರೇಮದ ಆಧಾರದ ಮೇಲೆಯೇ.

ಭಯಂಕರ ಸತ್ಯವೆಂದರೆ: ರಾಷ್ಟ್ರಪ್ರೇಮದ ಹೆಸರಿನಲ್ಲದೆ ಬೇರೆರೀತಿಯಲ್ಲಿ ಒಂದು ವರ್ಗದ ಜನರು ಮತ್ತೊಂದು ವರ್ಗದ ಜನರ ಮೇಲೆ ಸಾಮೂಹಿಕ ಹಿಂಸೆಯನ್ನು ನಡೆಸಿರುವ ಪ್ರಸಂಗ ಒಂದಾದರೂ ದೊರೆಯದಿರುವುದು. ರಷ್ಯನರು ಫ್ರೆಂಚರ ವಿರುದ್ಧ, ಫ್ರೆಂಚರು ರಷ್ಯನರ ವಿರುದ್ಧ ಯುದ್ಧ ಮಾಡಿರುವುದೂ ರಾಷ್ಟ್ರಪ್ರೇಮದ ಹೆಸರಿನಲ್ಲಿಯೇ. ಇದೇ ರಾಷ್ಟ್ರಪ್ರೇಮದ ಹೆಸರಿನಲ್ಲಿಯೇ ಈಗ ರಷ್ಯನರೂ ಫ್ರೆಂಚರೂ ಜರ್ಮನರ

ವಿರುದ್ಧ ಹೋರಾಡಲು ಅಣಿಯಾಗುತ್ತಿರುವುದು. ಜರ್ಮನರು ಈ ಎರಡು ಕಡೆಗಳಿಗೂ ಯುದ್ಧ ಹಸ್ತವನ್ನು ಚಾಚಿರುವುದು. ಇದು ಕೇವಲ ಯುದ್ಧಗಳಲ್ಲಿ ಪರ್ಯವಸಾನವಾಗಿಲ್ಲ. ರಾಷ್ಟ್ರಪ್ರೇಮದ ಹೆಸರಿನಲ್ಲಿ ರಷ್ಯನರು ಪೋಲಿಷ್ ಜನರನ್ನೂ ಜರ್ಮನರು ಸ್ಲಾವ್ ಜನರನ್ನೂ ದಮನ ಮಾಡುತ್ತಿದ್ದಾರೆ. ರಾಷ್ಟ್ರಪ್ರೇಮದ ನೆರಳಿನಲ್ಲಿಯೇ ಕಮ್ಯುನಿಸ್ಟರು ವರ್ಸೈಲ್ಸ್‌ನ ಜನರನ್ನೂ ಅವರು ಕಮ್ಯುನಿಸ್ಟರನ್ನೂ ಕೊಚ್ಚಿಹಾಕಿದ್ದು.

## 15

ವಿದ್ಯೆಯ ಪ್ರಸಾರ, ಉತ್ತಮ ಸಾರಿಗೆ ಸೌಲಭ್ಯಗಳು, ರಾಷ್ಟ್ರ-ರಾಷ್ಟ್ರಗಳ ನಡುವೆ ಹೆಚ್ಚಾಗುತ್ತಿರುವ ಸಂಬಂಧ, ಸ್ವತಂತ್ರ ಪತ್ರಿಕೆಗಳ ಬೆಳವಣಿಗೆ, ಎಲ್ಲಕ್ಕಿಂತ ಹೆಚ್ಚಾಗಿ ಕಡಿಮೆಯಾಗುತ್ತಿರುವ ಪರರಾಷ್ಟ್ರಗಳಿಂದೊದಗುವ ಅಪಾಯ ಇವುಗಳೆಲ್ಲ ರಾಷ್ಟ್ರಪ್ರೇಮದ ಹೆಸರಿನಲ್ಲಿ ಮರುಳುಗೊಳಿಸುವುದನ್ನು ಕಠಿಣವನ್ನಾಗಿಸಿ ಕೊನೆಗೆ ಅಸಾಧ್ಯವಾಗಿಸುತ್ತವೆಂದು ತೋರುತ್ತದೆ.

ಆದರೆ ವಸ್ತುಸ್ಥಿತಿಯು ಬೇರೆಯೇ ಆಗಿದೆ. ಕೃತಕ ವಿದ್ಯೆ, ಪ್ರಯಾಣ ಸೌಕರ್ಯಗಳು ಹಾಗೂ ಅಂತರರಾಷ್ಟ್ರ ಸಂಬಂಧ ಹೆಚ್ಚಿರುವುದು, ಸರ್ಕಾರದ ಬಿಗಿಮುಷ್ಟಿಗೆ ಹೆಚ್ಚು ಹೆಚ್ಚು ಒಳಗಾಗಿ ಬೆಳೆಯುತ್ತಿರುವ ಪತ್ರಿಕಾಸಮೂಹ – ಇವುಗಳೇ ರಾಷ್ಟ್ರಗಳ ನಡುವೆ ದ್ವೇಷಭಾವನೆಯನ್ನು ತೀವ್ರಗೊಳಿಸುವ ಸಾಧ್ಯತೆಗಳಿವೆ; ರಾಷ್ಟ್ರಪ್ರೇಮವು ನಿಷ್ಪ್ರಯೋಜಕವೂ ಅಪಾಯಕಾರಿಯೂ ಆದುವೆಂಬ ವಿಷಯ ಹೆಚ್ಚು ಸ್ಪಷ್ಟವಾಗುತ್ತಿದ್ದರೂ ರಾಷ್ಟ್ರಪ್ರೇಮವನ್ನುಂಟುಮಾಡಲು ಸರ್ಕಾರ ಹಾಗೂ ಆಡಳಿತ ವರ್ಗಗಳು ಅಷ್ಟೇ ಹೆಚ್ಚಿನ ಪ್ರಭಾವವನ್ನು ಬೀರುವ ವಿಧಾನಗಳೊದಗಿವೆ.

ಹಿಂದಿಗೂ ಇಂದಿಗೂ ಇರುವ ವ್ಯತ್ಯಾಸವೆಂದರೆ ರಾಷ್ಟ್ರಪ್ರೇಮದಿಂದಾಗಿ ಮೇಲುವರ್ಗದ ಜನರು ಪಡೆಯುವ ಅನುಕೂಲಗಳು ಹೆಚ್ಚು ಜನರಿಗೆ ಲಭಿಸುತ್ತಿವೆ. ಅದಕ್ಕಿಂತ ಹೆಚ್ಚಿನ ಸಂಖ್ಯೆಯ ಜನರು ಈ ಪ್ರಚಂಡ ಮೂಢನಂಬಿಕೆಯ ಪ್ರಸಾರ ಕಾರ್ಯದಲ್ಲಿ ಭಾಗಿಗಳಾಗಿದ್ದಾರೆ.

ಸರ್ಕಾರಗಳಿಗೆ ತಮ್ಮ ಅಧಿಕಾರವನ್ನು ಉಳಿಸಿಕೊಳ್ಳುವುದು ಕಷ್ಟವಾದಷ್ಟು ಅದನ್ನು ಹೆಚ್ಚು ಜನರೊಂದಿಗೆ ಹಂಚಿಕೊಳ್ಳಲು ತೊಡಗುತ್ತದೆ.

ಹಿಂದಾದರೆ ಅಧಿಕಾರವು ಚಕ್ರವರ್ತಿಗಳು ರಾಜರು ಸಾಮಂತರು, ಅವರ ಅಧಿಕಾರಿಗಳು ಹಾಗೂ ಯೋಧರು ಇವರಲ್ಲಿ ಕೇಂದ್ರೀಕೃತವಾಗಿರುತ್ತಿತ್ತು. ಈಗಾದರೆ ಆ ಅಧಿಕಾರ ಹಾಗೂ ಅದರ ಪ್ರಯೋಜನಗಳಲ್ಲಿ ನೌಕರವರ್ಗ ಹಾಗೂ ಧರ್ಮಗುರುಗಳಷ್ಟೇ ಅಲ್ಲ, ದೊಡ್ಡ ಸಣ್ಣ ಬಂಡವಾಳಗಾರರು, ಜಮೀನ್ದಾರರು, ವ್ಯವಹಾರಸ್ಥರು, ವಕೀಲರು, ಶಿಕ್ಷಕರು, ಗ್ರಾಮಾಂತರ ಅಧಿಕಾರಿಗಳು, ವಿದ್ವಾಂಸರು, ಕಲೆಗಾರರು,

ವಿಶೇಷವಾಗಿ ಪತ್ರಿಕಾಲೇಖಕರು ಭಾಗಿಗಳಾಗಿದ್ದಾರೆ. ಈ ಎಲ್ಲರೂ ತಿಳಿದೋ ತಿಳಿಯ ದೆಯೋ, ತಮ್ಮ ಅನುಕೂಲಕರ ಸ್ಥಿತಿಯನ್ನುಳಿಸಿಕೊಳ್ಳಲು ರಾಷ್ಟ್ರಪ್ರೇಮದ ವಂಚನೆಯನ್ನು ವಿಸ್ತರಿಸುತ್ತಿದ್ದಾರೆ. ಈ ವಂಚನಾಪ್ರಸಾರದ ಸಾಧನಗಳು ಹೆಚ್ಚು ಶಕ್ತಿಯುತವಾಗಿರು ವುದರಿಂದ ಹಾಗೂ ಹೆಚ್ಚು ಜನರು ಈ ಕಾರ್ಯದಲ್ಲಿ ಭಾಗಿಗಳಾಗಿರುವುದರಿಂದ ಈ ಕಾರ್ಯವು ಎಷ್ಟು ಯಶಸ್ವಿಯಾಗುವುದೆಂದರೆ ವಂಚಿಸುವುದು ಹೆಚ್ಚು ಹೆಚ್ಚು ಕಷ್ಟ ವಾದರೂ ವಂಚಿತರ ಸಂಖ್ಯೆಯು ವರ್ಧಿಸುತ್ತಲೇ ಇದೆ.

ನೂರಾರು ವರ್ಷಗಳ ಹಿಂದೆ ಅನಕ್ಷರಸ್ಥ ಜನಸಾಮಾನ್ಯರಿಗೆ ತಮ್ಮನ್ನು ಆಳುವ ಸರ್ಕಾರದಲ್ಲಿ ಯಾರಿದ್ದಾರೆ. ತಮ್ಮ ಸುತ್ತಲಿರುವ ರಾಷ್ಟ್ರಗಳಾವುವು ಎಂಬುದು ತಿಳಿದಿರಲಿಲ್ಲ: ಅವರು ತಮ್ಮನ್ನು ಗುಲಾಮರನ್ನಾಗಿ ಮಾಡಿಕೊಂಡಿದ್ದ ಸ್ಥಳೀಯ ಅಧಿಕಾರಿಗಳನ್ನೂ ಸಾಮಂತರನ್ನೂ ಅಂಧರಾಗಿ ಅನುಸರಿಸುತ್ತಿದ್ದರು. ಸರ್ಕಾರವು ಜನರಲ್ಲಿ ಬಯಸಿದುದನ್ನು ಜನರು ಪೂರ್ಣಗೊಳಿಸುವಂತೆ ಮಾಡಲು ನೌಕರರನ್ನೂ ಸಾಮಂತರನ್ನೂ ಲಂಚ ಇನಾಮುಗಳ ಮೂಲಕ ತೃಪ್ತಿಗೊಳಿಸಿದ್ದರೆ ಸಾಕಾಗಿತ್ತು. ಆದರೆ ಈಗ ಸಾಮಾನ್ಯ ಜನರು ಬಹುಮಟ್ಟಿಗೆ ಓದುಬರಹ ಕಲಿತಿದ್ದಾರೆ. ತಮ್ಮನ್ನಾಳುವವರು ಯಾರೆಂದು ಅವರಿಗೆ ತಿಳಿದಿದೆ, ತಮ್ಮ ಸುತ್ತ ಯಾವ ರಾಷ್ಟ್ರಗಳಿವೆಯೆಂದು ಗೊತ್ತಿದೆ; ಪ್ರಪಂಚದ ನಾನಾ ಕಡೆಗಳಲ್ಲಿ ಏನು ನಡೆಯುತ್ತಿದೆಯೆಂಬುದನ್ನು ಜನನಾಯಕರು ಜನತೆಗೆ ತಿಳಿಸುತ್ತಿದ್ದಾರೆ – ಇಂಥ। ಪರಿಸ್ಥಿತಿಯಲ್ಲಿ ತಾನು ಬಯಸಿದುದನ್ನು ಪಡೆಯಲು ಸರ್ಕಾರವು ಕೇವಲ ಆಜ್ಞೆ ಮಾಡಿದರೆ ಸಾಲದು. ಅದರೊಂದಿಗೆ ಜನರ ನ್ಯಾಯವಾದ ಜೀವನದ ಬೇಡಿಕೆಗಳನ್ನು ಕಣ್ಮರೆಗೊಳಿಸಬೇಕು, ತಮ್ಮ ಜೀವನದ ಇತರ ಪರಿಸ್ಥಿತಿಗಳ ಅರಿವನ್ನು ಅವರಲ್ಲಿ ಉಂಟುಮಾಡಬೇಕು, ಇತರ ರಾಷ್ಟ್ರಗಳು ತಮ್ಮ ಬಗ್ಗೆ ಯಾವ ದೃಷ್ಟಿಯನ್ನು ಪಡೆದಿವೆಯೆಂದು ತಿಳಿಯಪಡಿಸಬೇಕು.

ಪತ್ರಿಕೆಗಳ ಬೆಳವಣಿಗೆ. ವಿದ್ಯಾಪ್ರಸಾರ, ಸಾರಿಗೆ ಸೌಲಭ್ಯ ಇವುಗಳ ಕೃಪೆಯಿಂದಾಗಿ ಸರ್ಕಾರಗಳು ತಮ್ಮ ಪ್ರತಿನಿಧಿಗಳನ್ನು ಎಲ್ಲೆಡೆಯೂ ಪಡೆದಿರುವುದು ಸಾಧ್ಯ. ಹೀಗಾಗಿ ತೀರ್ಪುಗಳು, ಧರ್ಮ ಬೋಧೆಗಳು. ಶಾಲೆಗಳು ಹಾಗೂ ಪತ್ರಿಕೆಗಳ ಮುಖಾಂತರವಾಗಿ ಜನರ ಮನಸ್ಸಿನಲ್ಲಿ ಅವರ ಅಭಿಲಾಷೆಗಳನ್ನೂ ಹಾಗೂ ಜನರ ಪರಸ್ಪರ ಸಂಬಂಧವನ್ನೂ ವಿಕೃತಗೊಳಿಸಿ ಬಿತ್ತುವುದು ಸುಲಭ. ಜನರಿಗೆ ಮಡಿಮೆಯ ಶ್ರಮವೇ ಸಾಕಾಗಿರುವುದ ರಿಂದ ತಮ್ಮ ಮನಸ್ಸಿನಲ್ಲಿ ಬಿತ್ತಿದ ಭಾವನೆಗಳ ಔಚಿತ್ಯವೆಷ್ಟು ಎಂಬುದನ್ನು ಯೋಚಿಸಲು ಸಮಯವೂ ಸಾಲದು, ಅವಕಾಶವೂ ಇಲ್ಲ, ಆದ್ದರಿಂದಲೇ ತಮ್ಮ ಕಲ್ಯಾಣದ ಹೆಸರಿನಲ್ಲಿ ತಮ್ಮಿಂದ ನಿರೀಕ್ಷಿಸಲ್ಪಟ್ಟದ್ದೆಲ್ಲವನ್ನೂ ಮಾಡಿ ಜನರು ಗಾಣದೆತ್ತುಗಳಾಗುತ್ತಾರೆ.

ನಿತ್ಯಶ್ರಮದಿಂದ ಮುಕ್ತರಾಗಿ, ಸ್ವಲ್ಪ ವಿದ್ಯೆಯನ್ನು ಕಲಿತವರಿಗೆ ತಮ್ಮನ್ನು ಎಂತಹ ವಂಚನಾ ಜಾಲದಲ್ಲಿ ಕೆಡವಲಾಗುತ್ತಿದೆಯೆಂಬ ಅರಿವುಂಟಾಗಬಹುದು. ಆದರೆ ಸರ್ಕಾರವು

ಹೆದರಿಸಿ, ಲಂಚದ ಆಸೆ ತೋರಿಸಿ, ಮಂಕುಬೂದಿಯೆರಚಿ ಅವರೂ ತಮ್ಮ ಕಡೆಗಾಗುವಂತೆ ಮಾಡಿಕೊಳ್ಳುತ್ತದೆ. ಇವರು ಶಿಕ್ಷಕರೋ, ಧರ್ಮಬೋಧಕರೋ, ಅಧಿಕಾರಿಗಳೋ ನೌಕರರೋ ಆಗಿ ಸೌಲಭ್ಯಗಳನ್ನು ಪಡೆದು ಈ ವಂಚನೆಯನ್ನು ವಿಸ್ತರಿಸಿ ತಮ್ಮ ಬಡನಾಡಿಗಳ ವಿನಾಶಕ್ಕೆ ಕಾರಣರಾಗುತ್ತಾರೆ. ವಿದ್ಯಾಭ್ಯಾಸದ ಬಾಗಿಲಲ್ಲಿ ಬಲೆಯನ್ನು ಹಾಕಿ, ಶ್ರಮದಲ್ಲಿ ಮುಳುಗಿದ ಜನತೆಯಿಂದ ದೂರವಾಗುವವರು ಒಂದಲ್ಲ ಒಂದು ರೀತಿ ಅದರಲ್ಲಿ ಬೀಳುವಂತೆ ಮಾಡಲಾಗಿದೆಯೆನಿಸುತ್ತದೆ.

ಈ ವಂಚನೆಯ ಕಾರ್ಯವನ್ನು ಕಂಡುಕೊಂಡವರಿಗೆ, ಸ್ವಾರ್ಥದ ಆಕಾಂಕ್ಷೆಗಳಿಗಾಗಿಯೋ ಅಥವಾ ಕೇವಲ ಥಳುಕಿಗೋ ಈ ಕ್ರೂರ ವಂಚನೆಯನ್ನು ನಡೆಸಿ ಜನರ ದೇಹಗಳನ್ನಷ್ಟೇ ಅಲ್ಲ ಮನಸ್ಸನ್ನೂ ನಾಶಪಡಿಸುವ ಜನರ ಬಗ್ಗೆ ತೀವ್ರ ಕ್ರೋಧವುಂಟಾಗಿ ಅಂತಹ ಕ್ರೂರ ವಂಚಕರನ್ನು ಬಯಲಿಗೆಳೆಯಬೇಕೆನಿಸುತ್ತದೆ. ಆದರೆ ವಸ್ತುಸ್ಥಿತಿಯೇನೆಂದರೆ ವಂಚಕರು ಆ ರೀತಿ ನಡೆಯುವುದು ವಂಚಿಸಬೇಕೆಂಬ ಉದ್ದೇಶದಿಂದಲ್ಲ. ಆದರೆ ಹಾಗೆ ಮಾಡದೆ ವಿಧಿಯಿರುವುದಿಲ್ಲ. ಅವರ ವಂಚನಾರೀತಿಯು ಮ್ಯಾಕಿಯಾವಿಲ್ಲಿತನದಲ್ಲ, ತಮ್ಮ ಕಾರ್ಯವುಂಟುಮಾಡುವ ಪರಿಣಾಮದ ಅರಿವಿನಿಂದ ಕೂಡಿದುದಲ್ಲ: ತಾವು ಏನನ್ನೋ ಮಹತ್ವವಾದದ್ದನ್ನು, ಕಲ್ಯಾಣಕರವಾದದ್ದನ್ನು ಮಾಡುತ್ತಿದ್ದೇವೆಂಬ ಮುಗ್ಧ ನಂಬಿಕೆಯೇ ಅವರಲ್ಲಿರುತ್ತದೆ. ಇದಕ್ಕೆ ಅವರ ಸುತ್ತಲಿನ ಜನರ ಸಹಾನುಭೂತಿ–ಒಪ್ಪಿಗೆಗಳೂ ಬೆಂಬಲ ನೀಡುತ್ತವೆ. ತಮ್ಮ ಅಧಿಕಾರ ಹಾಗೂ ಅನುಕೂಲಗಳು ತಾವು ಆಕರ್ಷಿತರಾಗಿರುವ ವಂಚನೆಯಿಂದ ಬಂದವು ಎಂಬ ಅಸ್ಪಷ್ಟ ಭಾವನೆ ಅವರಿಗಿರುತ್ತದೆ ಎನ್ನುವುದು ನಿಜ. ಆದರೆ ಅವರ ನಡತೆಯಲ್ಲಿ ಮಾತ್ರ ತಾವು ಜನರನ್ನು ವಂಚಿಸಬೇಕೆಂಬ ಉದ್ದೇಶದಿಂದ ಕೂಡಿರದೆ, ಜನರಿಗೆ ಒಳಿತನ್ನು ಮಾಡುತ್ತಿದ್ದೇವೆಂಬ ನಂಬಿಕೆಯೇ ಇರುವಂತೆ ತೋರುತ್ತದೆ.

ಆದಕಾರಣವೇ ಚಕ್ರವರ್ತಿಗಳೂ ರಾಜರೂ ತಮ್ಮ ಮಂತ್ರಿಗಳೊಂದಿಗೆ ಕಿರೀಟ ಧಾರಣೆ ತಂತ್ರೋಪಾಯ ಪರಿಶೀಲನೆಗಳನ್ನು ನಡೆಸುತ್ತಾರೆ. ಪರಸ್ಪರರನ್ನು ಭೇಟಿಯಾಗಿ ನಾನಾ ಸಮವಸ್ತ್ರಗಳನ್ನು ಧರಿಸಿ, ಅನೇಕ ಸ್ಥಳಗಳಿಗೆ ಭೇಟಿ ನೀಡಿ, ಗಂಭೀರವದನರಾಗಿ ತಮ್ಮ ಶತ್ರುಗಳೆನಿಸಿಕೊಂಡವರೊಡನೆ (ಆ ಶತ್ರುಗಳಿಗೆ ಯುದ್ಧದ ಯೋಚನೆಯೇ ಹೊಳೆದಿರುವುದಿಲ್ಲ) ಶಾಂತಿಸ್ಥಾಪನೆಯ ಬಗೆಯನ್ನು ಕುರಿತು ಆಲೋಚನೆ ನಡೆಸುತ್ತಾರೆ; ತಾವು ಮಾಡುತ್ತಿರುವುದೆಲ್ಲ ಅತ್ಯಂತ ಬೆಲೆಬಾಳುವಂಥದೂ ವಿಚಾರಪೂರ್ಣವಾದುದೂ ಎಂದೇ ಅವರ ನಂಬಿಕೆ.

ಅದರಂತೆಯೇ ಸಚಿವರುಗಳೂ ರಾಜತಂತ್ರಿಕರೂ ಎಲ್ಲ ಬಗೆಯ ಅಧಿಕಾರಿಗಳೂ ತಮ್ಮ ತಮ್ಮ ಸಮವಸ್ತ್ರಗಳನ್ನು ಧರಿಸಿ ಬಿರುದು ಬಾವಲಿಗಳನ್ನು ಧರಿಸಿ ತಮ್ಮ ಅಸ್ಪಷ್ಟ ಗೊಂದಲಪೂರ್ಣ ಹಾಗೂ ನಿರುಪಯುಕ್ತ ಸಂದೇಶಗಳನ್ನೋ ವರದಿಗಳನ್ನೋ

ಸೂಚನೆಗಳನ್ನೋ ಯೋಜನೆಗಳನ್ನೋ ಸುಂದರವಾದ ಕಾಗದದ ಮೇಲೆ ಅವುಗಳ ಸಂಕ್ಷಿಪ್ತಗಳೊಡನೆ ಕಾತರದಿಂದ ಗೀಚುತ್ತ ತಮ್ಮ ಚಟುವಟಿಕೆಗಳಿಲ್ಲದಿದ್ದರೆ ಜನರೆಲ್ಲರ ಜೀವನವೂ ಸ್ಥಗಿತಗೊಳ್ಳುವುದು. ಇಲ್ಲ ಛಿದ್ರವಾಗುವುದೆಂದು ನಂಬಿಕೊಂಡಿರುತ್ತಾರೆ.

ಸೈನ್ಯದವರೂ ತಮ್ಮ ವಿದೂಷಕ ವಸ್ತ್ರಗಳನ್ನು ಧರಿಸಿ ಎಂತಹ ಬಂದೂಕಗಳೂ ಫಿರಂಗಿಗಳೂ ಜನರನ್ನು ಹೆಚ್ಚು ಕೊಲ್ಲುವುದೆಂಬುವನ್ನೇ ಅತ್ಯಂತ ಗಾಂಭೀರ್ಯದಿಂದ ಚರ್ಚಿಸುತ್ತ ತಮ್ಮ ವ್ಯೂಹರಚನೆ ಹಾಗೂ ಕವಾಯಿತಿಗಳು ಅತ್ಯಂತ ಪ್ರಮುಖವಾದು ವೆಂದೂ ಲೋಕಕಲ್ಯಾಣಕಾರಿಗಳೆಂದೂ ದೃಢವಾಗಿ ನಂಬಿರುತ್ತಾರೆ.

ರಾಷ್ಟ್ರಪ್ರೇಮವನ್ನು ಬೋಧಿಸುವ ಧರ್ಮಬೋಧಕರು. ಪತ್ರಿಕೋದ್ಯೋಗಿಗಳು ಹಾಗೂ ರಾಷ್ಟ್ರಭಕ್ತಿ ಗೀತೆಗಳನ್ನೂ ಪಠ್ಯಪುಸ್ತಕಗಳನ್ನೂ ಬರೆದು ಪ್ರಗದಸ್ತಾದ ಸಂಭಾವನೆಯನ್ನು ಪಡೆಯುವವರೂ ಇದೇ ನಂಬಿಕೆಗೊಳಗಾದವರೇ. ಫ್ರಾಂಕೋ ರಷ್ಯನ್ ಸಮಾರಂಭಗಳಂತಹ ಉತ್ಸವಗಳನ್ನು ವ್ಯವಸ್ಥೆಮಾಡುವವರೂ ಇದೇ ಭಾವನೆಯಿಂದ ಕೂಡಿ, ಭಾಷಣಗಳಲ್ಲಿ ತಮ್ಮ ರಾಷ್ಟ್ರಭಕ್ತಿಯನ್ನು ತೋಡಿಕೊಳ್ಳುವಾಗ ಹಾಗೂ ಔತಣಕೂಟಗಳಲ್ಲಿ ಶುಭ ಕೋರುವಾಗ ಭಾವುಕರಾಗುತ್ತಾರೆ. ಇದು ಅವಶ್ಯಕವೆಂದೋ ಅಥವಾ ತಮ್ಮ ಜೀವನವೆಲ್ಲ ವಂಚನೆಯ ಮೇಲೆ ಕಟ್ಟಿದ ಸೌಧವಾದದ್ದರಿಂದ ತಾವು ಅದನ್ನುಳಿದು ಬೇರೇನನ್ನೂ ಮಾಡಲಾರೆವೆಂದೋ ಇವರೆಲ್ಲ ತಮ್ಮ ಪಾತ್ರಗಳನ್ನು ಸಹಜವಾಗಿಯೇ ನಿರ್ವಹಿಸುತ್ತಿರುತ್ತಾರೆ. ಇದರ ನಡುವೆ ಇವರ ಚಟುವಟಿಕೆಗಳಿಗೆ ಸುತ್ತಲಿನ ಜನರ ಪ್ರೋತ್ಸಾಹ ಸಹಾನುಭೂತಿಗಳೂ ದೊರೆಯುತ್ತವೆ. ಒಬ್ಬರು ಇನ್ನೊಬ್ಬರೊಡನೆ ತೆಕ್ಕೆಗೊಂಡಿರುವುದರಿಂದ ಪರಸ್ಪರರ ಚಟುವಟಿಕೆಗಳನ್ನು ಒಪ್ಪಿಕೊಂಡು ಸಮರ್ಥಿಸುತ್ತಾರೆ. ಚಕ್ರವರ್ತಿಗಳೂ ರಾಜರೂ ಸೈನ್ಯ. ಅಧಿಕಾರವರ್ಗ. ಧರ್ಮ ಬೋಧಕರ ವರ್ತನೆಯನ್ನು ಸಮರ್ಥಿಸುತ್ತಾರೆ: ಸೈನ್ಯ ಅಧಿಕಾರಿಗಳು ಹಾಗೂ ಧರ್ಮ ಬೋಧಕರು ಚಕ್ರವರ್ತಿಗಳು ಹಾಗೂ ರಾಜರ ಕಾರ್ಯಗಳನ್ನೂ ತಮ್ಮಲ್ಲಿಯೇ ಒಬ್ಬರೊಬ್ಬರ ಕಾರ್ಯಗಳನ್ನೂ ಸಮರ್ಥಿಸುತ್ತಾರೆ. ಇಷ್ಟೇ ಅಲ್ಲದೆ ಜನಸಾಮಾನ್ಯರು (ಅದರಲ್ಲಿಯೂ ನಗರಗಳವರು) ಈ ಜನರ ಕಾರ್ಯಗಳು ತಮಗೆ ಅರ್ಥವಾಗದಿದ್ದಾಗ. ಸಹಜವಾಗಿ ಅದರ ಹಿಂದೆ ವಿಚಿತ್ರವಾದ ಅತಿಮಾನುಷಶಕ್ತಿಯ ಪ್ರಭಾವವನ್ನು ಆರೋಪಿಸುತ್ತಾರೆ. ಉದಾಹರಣೆಗೆ ವಿಜಯಸ್ಮಾರಕಗಳ ನಿರ್ಮಾಣ. ಜನರ ಕಿರೀಟ. ಸಮವಸ್ತ್ರ ಹಾಗೂ ಅರ್ಚಕರ ಉಡುಪುಗಳಲ್ಲಿರುವುದು. ಚಟಾಕಿಗಳ ಅಸ್ಫೋಟ ಫಿರಂಗಿಗಳ ಧ್ವನಿ, ಘಂಟಾನಾದ ಬ್ಯಾಂಡಿನೊಂದಿಗೆ ಸೈನ್ಯತುಕಡಿಗಳ ಠೀಕಾದ ನಡಿಗೆ, ಕಾಗದಗಳು ತಂತಿಗಳ ಹಾರಾಟ. ಸ್ಥಳದಿಂದ ಸ್ಥಳಕ್ಕೆ ಸಂದೇಶವಾಹಕರ ಹಾರಾಟ. ವಿಚಿತ್ರ ಉಡುಪನ್ನು ಧರಿಸಿದ ಜನರು ಒಂದೆಡೆಯಿಂದ ಮತ್ತೊಂದೆಡೆಗೆ ಕಾತರರಾಗಿ ನಡೆಯುವುದು. ಏನನ್ನೋ ಹೇಳುವುದು ಬರೆಯುವುದು ಇತ್ಯಾದಿಗಳು ಜನರ ಕಣ್ಣಿಗೆ ಬೀಳುತ್ತವೆ: ಇವೆಲ್ಲವನ್ನೂ ಅನವಶ್ಯಕವಾಗಿ ನಡೆಸಲಾಗುತ್ತಿದೆಯೆಂಬ (ಇದೇ ನಿಜವಾದ

ವಿಷಯ) ಅರಿವಿಲ್ಲದೆ ಇವುಗಳಲ್ಲಿ ಯಾವುದೋ ವಿಶಿಷ್ಟವಾದ ಗೂಢವಾದ ಪ್ರಮುಖ ಅರ್ಥವೊಂದು ಅಡಗಿದೆಯೆಂದು ಭಾವಿಸಿ ಈ ಪ್ರದರ್ಶನಗಳನ್ನು ಆನಂದೋತ್ಸಾಹದಿಂದ ಸ್ವಾಗತಿಸುತ್ತಾರೆ. ಇಲ್ಲವೇ ಮೌನ ಗೌರವವನ್ನು ಸಲ್ಲಿಸುತ್ತಾರೆ. ಕೆಲವು ಬಾರಿ ಸಂತೋಷದಿಂದ. ಮತ್ತೆ ಕೆಲವುವೇಳೆ ಗೌರವದಿಂದ ತೋರಿಸುವ ಪ್ರತಿಕ್ರಿಯೆಗಳು. ಈ ವಿಲ್ಲಿ ಅರ್ಥಹೀನ ಕೆಲಸಗಳನ್ನು ಮಾಡುವವರ ಆತ್ಮವಿಶ್ವಾಸವನ್ನು ಹೆಚ್ಚಿಸುತ್ತವೆ.

ಕೆಲವು ಕಾಲದ ಹಿಂದೆ ಎರಡನೆಯ ವಿಲ್‌ಹೆಲ್ಮ್ ವಿಶೇಷಾಲಂಕಾರಗಳಿಂದ ಕೂಡಿದ ಸಿಂಹಾಸನವನ್ನು ರಚಿಸಲು ಆಜ್ಞಾಪಿಸಿದ. ಕವಚದಿಂದೊಡಗೂಡಿದ ಬಿಳಿಯ ಉಡುಪನ್ನು ಧರಿಸಿ. (ಬಿಗಿಯಾದ ಕಾಲುಡುಪು ಹಾಕಿಕೊಂಡು) ಮೇಲೆ ಹಕ್ಕಿಯಿರುವ ಶಿರಸ್ತ್ರಾಣವನ್ನು ಹಾಕಿಕೊಂಡು ಕೆಂಪುಬಣ್ಣದ ಹೊರ ಉಡುಪನ್ನು ಧರಿಸಿ ತನ್ನ ಪ್ರಜೆಗಳ ನಡುವೆ ಬಂದು ಹೊಸ ಸಿಂಹಾಸನದಮೇಲೆ ಕುಳಿತಾಗ ತಾನು ಮಾಡಿರುವುದು ತುಂಬ ಪ್ರಮುಖವಾದ ಹಾಗೂ ಅವಶ್ಯಕವಾದ ಕೆಲಸವೆಂದೇ ಅವನ ನಂಬಿಕೆಯಾಗಿತ್ತು. ಅವನ ಪ್ರಜೆಗಳಾದರೋ ಆ ಪ್ರಸಂಗದಲ್ಲಿ ಹಾಸ್ಯಾಸ್ಪದವಾದದ್ದನ್ನು ಕಾಣುವುದಿರಲಿ, ಅದೊಂದು ಪವಿತ್ರವಾದ ಸನ್ನಿವೇಶವೆಂದೇ ತಿಳಿದರು.

## 16

ಬಹುಹಿಂದೆ ಒಂದು ಗುಂಪಿನ ಜನರು ಮತ್ತೊಂದು ಗುಂಪನ್ನು ಗೆದ್ದು ತಮ್ಮ ಶಸ್ತ್ರಗಳ ಬಲದಿಂದ ಅವರನ್ನು ತಮಗೆ ಅಡಿಯಾಳನ್ನಾಗಿಸಿಕೊಳ್ಳುತ್ತಿದ್ದ ಕಾಲವಿತ್ತು, ಹಾಗೆ ನಿರಾಯುಧರಾದ ಜನಗಳ ನಡುವೆ ರಾಜರು ತಮ್ಮ ಸಶಸ್ತ್ರಸೈನಿಕ ಪಡೆಯನ್ನು ನಿಲ್ಲಿಸಿ ನಿಯಂತ್ರಿಸುತ್ತಿದ್ದರು: ಆದರೆ ಸಾಕಷ್ಟು ಹಿಂದಿನ ಕಾಲದಿಂದಲೂ ಸರ್ಕಾರಗಳ ಅಧಿಕಾರವು ಸೈನ್ಯಬಲವನ್ನು ಅವಲಂಬಿಸಿಲ್ಲ. ಸುಮಾರು ಕಾಲದಿಂದ ಸರ್ಕಾರದ ಅಧಿಕಾರವು ಯಾವುದನ್ನು ಜನಾಭಿಪ್ರಾಯವೆನ್ನುತ್ತೇವೋ ಅದನ್ನವಲಂಬಿಸಿಲ್ಲ.

ರಾಷ್ಟ್ರಪ್ರೇಮವು ಅತ್ಯಂತ ಉನ್ನತ ಭಾವನೆ. ಜನರಲ್ಲಿ ತಮ್ಮ ರಾಷ್ಟ್ರವೇ ಪ್ರಪಂಚ ದಲ್ಲಿ ಅತ್ಯಂತ ಶ್ರೇಷ್ಠವಾದುದೆಂಬ ಜನಾಭಿಪ್ರಾಯವಿದೆ: ಇದರ ಪರಿಣಾಮವಾಗಿ ಸರ್ಕಾರದ ಅಧಿಕಾರವನ್ನೊಪ್ಪಿಕೊಂಡು ಅದಕ್ಕೆ ತಲೆಬಾಗುವುದು. ಸೈನ್ಯವನ್ನು ಸೇರಿ ಅಲ್ಲಿನ ಶಿಸ್ತಿಗೊಳಗಾಗಿ ಸೇವೆ ಸಲ್ಲಿಸುವುದು ತನ್ನ ಆದಾಯದ ಭಾಗವನ್ನು ಸರ್ಕಾರಕ್ಕೆ ತೆರಿಗೆಗಳ ರೂಪದಲ್ಲಿ ಸಲ್ಲಿಸುವುದು ನ್ಯಾಯಾಲಯಗಳ ತೀರ್ಪುಗಳಿಗೆ ಬದ್ಧವಾಗಿರುವುದು ಸರ್ಕಾರದ ವಕ್ತಾರರು ನುಡಿದ ಮಾತುಗಳನ್ನೇ ವೇದ ವಾಕ್ಯಗಳೆಂದು ನಂಬುವುದು ಸರಿಯಾದುದೂ ಸಮಂಜಸವಾದುದೂ ಎಂದು ಅಭಿಪ್ರಾಯ ಮೂಡುತ್ತದೆ.

ಇಂತಹ ಜನಾಭಿಪ್ರಾಯವು ಮೂಡಿದಾಗ ಅದ್ಭುತ ಅಧಿಕಾರವು ಸೃಷ್ಟಿತವಾಗಿ ಈಗ ಸಾವಿರಗಟ್ಟಲೆ ಕೋಟಿ ಹಣ ಸುವ್ಯವಸ್ಥಿತ ಆಡಳಿತಯಂತ್ರ. ಅಂಚೆ ತಂತಿ ವ್ಯವಸ್ಥೆ,

ಟೆಲಿಫೋನ್. ಶಿಸ್ತಿನ ಸೈನ್ಯ. ನ್ಯಾಯಾಲಯಗಳು, ಪೋಲೀಸು ಹೇಳಿದ್ದಕ್ಕೆ ಬಾಲವಾಡಿಸುವ ಧರ್ಮೋಪದೇಶಕರು, ಶಾಲೆಗಳು ಕೊನೆಗೆ ಪತ್ರಿಕೆಗಳು ಎಲ್ಲದರ ಮೇಲೆ ನಿಯಂತ್ರಣವನ್ನು ಪಡೆಯುತ್ತಾರೆ. ಒಮ್ಮೆ ಈ ಅಧಿಕಾರವು ಅಸ್ತಿತ್ವಕ್ಕೆ ಬಂದಮೇಲೆ ಮುಂದೆ ತನ್ನ ಉಳಿವಿಗೆ ಬೇಕಾದ ಜನಾಭಿಪ್ರಾಯವನ್ನು ಅದು ಕಾಪಾಡಿಕೊಳ್ಳುತ್ತದೆ.

ಸರ್ಕಾರಗಳ ಅಧಿಕಾರವು ಜನಾಭಿಪ್ರಾಯವನ್ನಾಧರಿಸದೆ ಅಂತಹ ಅಧಿಕಾರವನ್ನು ಪಡೆದು ಸರ್ಕಾರಗಳು ತಮ್ಮ ಆಡಳಿತಯಂತ್ರ. ನೌಕರವರ್ಗ, ನ್ಯಾಯಾಲಯ, ಶಾಲೆಗಳು. ಚರ್ಚ್, ಕೊನೆಗೆ ಪತ್ರಿಕೆಗಳು ಇವೆಲ್ಲದರ ಮೂಲಕ ತಮಗೆ ಅನುಕೂಲವಾಗುವಂತಹ ಜನಾಭಿಪ್ರಾಯವನ್ನು ರೂಪಿಸಿಕೊಳ್ಳಬಹುದು: ಇಂತಹ ಪರಿಸ್ಥಿತಿಯನ್ನು ಮಾರ್ಪಡಿಸುವುದು ಸಾಧ್ಯವೇ ಇಲ್ಲವೇನೋ ಎನಿಸುತ್ತದೆ. ಜನಾಭಿಪ್ರಾಯವು ಬದಲಾಗದೆ ಒಂದೇ ರೀತಿಯಲ್ಲಿದ್ದು. ಸರ್ಕಾರಗಳು ತಮಗೆ ಬೇಕಾದಂತೆ ಅದನ್ನು ರೂಪಿಸಿಕೊಳ್ಳಬಹುದಾದರೆ ಈ ಭಾವನೆಯು ನಿಜವೂ ಹೌದು.

ಆದರೆ ನಮ್ಮ ಅದೃಷ್ಟದಿಂದ ಇದು ನಿಜವಲ್ಲ. ಮೊದಲನೆಯದಾಗಿ ಜನಾಭಿಪ್ರಾಯವೆಂಬುದು ಸ್ಥಿರವಾದ. ಎಂದೂ ಮಾರ್ಪಾಟಾಗದ. ನಿಂತ ನೀರಾದ ವಿಷಯವಲ್ಲ, ಅದರ ಬದಲು ಅದು ಸತತ ಮಾರ್ಪಾಟಿಗೆ ಒಳಗಾಗಿ ಮಾನವಜನಾಂಗದ ಗತಿಗನುಗುಣವಾಗಿ ನಡೆಯುವಂಥದು. ಎರಡನೆಯದಾಗಿ. ಜನಾಭಿಪ್ರಾಯವು ಸರ್ಕಾರದಿಂದ ರೂಪಿತವಾಗುವಂಥದಲ್ಲದೆ. ಸರ್ಕಾರಗಳಿಗೆ ಅಧಿಕಾರವನ್ನೀಯುವುದೂ ಪದಚ್ಯುತಗೊಳಿಸುವುದೂ ಆಗಿದೆ.

ಜನಾಭಿಪ್ರಾಯವು ಒಂದೇ ರೀತಿಯಿದೆಯೆನ್ನಿಸಿದರೆ. ಹತ್ತಾರು ವರ್ಷಗಳ ಹಿಂದೆ ಇದ್ದಂತೆ ಈಗಲೂ ಇದೆ ಎನಿಸಿದರೆ, ಅಥವಾ ಕೆಲವು ವಿಷಯಗಳಲ್ಲಿ ತನ್ನ ಮುಂಚಿನ ಸ್ಥಿತಿಗೇ ವಾಪಸಾಗುವ ಹಾಗೆ ತುಯ್ದಾಡುತ್ತಿದ್ದರೆ (ಉದಾಹರಣೆಗೆ. ಒಂದು ಗಣರಾಜ್ಯವನ್ನು ಅಂತ್ಯಗೊಳಿಸಿ ರಾಜತ್ವವನ್ನು ಸ್ಥಾಪಿಸಿ ಮತ್ತೆ ಗಣರಾಜ್ಯವನ್ನೇ ನೆಲೆಗೊಳಿಸುವುದು) ಇದು ಸರ್ಕಾರಗಳು ಕೃತಕವಾಗಿ ಉಂಟುಮಾಡಿದ್ದರಿಂದ ನಮಗೆ ಕಾಣುವ ಜನಾಭಿಪ್ರಾಯದ ತೋರಿಕೆ. ಅಷ್ಟೇ ನಾವು ಜನಾಭಿಪ್ರಾಯವನ್ನು ಗಮನಿಸಬೇಕಾದರೆ ಇಡೀ ಜನಜೀವನವನ್ನೇ ನಿರೀಕ್ಷಿಸಬೇಕಾಗುತ್ತದೆ: ಅದು ಕಾಲದಂತೆ ಸದಾ ಪ್ರವಹನಶೀಲವಾದುದು. ಮಾನವ ಜೀವನದ ಜೊತೆಯಲ್ಲಿಯೇ ಅದರ ಗತಿ. ಅಲ್ಪ ಸ್ವಲ್ಪ ವ್ಯತ್ಯಾಸಗಳಾದರೂ ಸೂರ್ಯನ ಗತಿಯನ್ನವಲಂಬಿಸಿಯೇ ವಸಂತವೂ ಮುಂದುವರೆಯುವಂತೆ ಇವೆರಡರ ಸಂಬಂಧ. ಆದ್ದರಿಂದ ಯೂರೋಪ್ ಜನ ಜೀವನವು ಹೊರನೋಟಕ್ಕೆ ಐವತ್ತು ವರ್ಷದ ಹಿಂದಿನ ಜೀವನದಂತೆಯೇ ಕಂಡರೂ. ತೋರಿಕೆಗೂ ನಿಜಜೀವನಕ್ಕೂ ವ್ಯತ್ಯಾಸವಿದೆ. ಅದೇ ಆಳುವವರು, ಸೈನ್ಯ ಯುದ್ಧಗಳು. ತೆರಿಗೆಗಳು. ವೈಭೋಗ ದಾರಿದ್ರ್ಯಗಳು. ಕ್ಯಾಥೋಲಿಕ್ ಪಂಥ, ಸಂಪ್ರದಾಯ ಪಂಥ ಹಾಗೂ ಲೂಥರ್

ಪಂಥಗಳು ಈಗ ಇದ್ದರೂ ಹಿಂದೆ ಅವುಗಳ ಇರುವಿಕೆಗೆ ಜನಾಭಿಪ್ರಾಯವು ಬೆಂಬಲವಿತ್ತಿದ್ದರೆ. ಈಗಿನ ಸರ್ಕಾರಗಳು ಹಿಂದಿನ ಜೀವಂತ ಜನಾಭಿಪ್ರಾಯವನ್ನು ಕೃತಕವಾಗಿ ದಸ್ಸಿಕಟ್ಟಿ ನಿಲ್ಲಿಸಿವೆ.

ನಾವು ಪ್ರವಾಹದೊಡನೆ ಈಜುವಾಗ ನದಿಯ ಗತಿಯನ್ನು ಅನುಭವಿಸುವುದಿಲ್ಲ, ಹಾಗೆಯೇ ಜನಾಭಿಪ್ರಾಯದ ಗತಿಯನ್ನು ಗಮನಿಸದಿರಲು ಕಾರಣ ಜನಾಭಿಪ್ರಾಯದ ಗತಿಗೆ ಕಾರಣವಾದ ಅದರ ಅದೃಶ್ಯ ಬದಲಾವಣೆಗಳು ನಮ್ಮಲ್ಲಿಯೇ ಉಂಟಾಗುವುದು. ಜನಾಭಿಪ್ರಾಯವು ಸ್ವಭಾವತಃ ಸ್ಥಿರವಾದ ಹಾಗೂ ಅದಮ್ಯವಾದ ಗತಿಯುಳ್ಳದ್ದು. ಅದು ಸ್ಥಗಿತಗೊಂಡಂತೆ ಕಾಣುವುದಕ್ಕೆ ಕಾರಣವೇನೆಂದರೆ ಜನಾಭಿಪ್ರಾಯದ ಯಾವುದೋ ಹಂತದಲ್ಲಿ ಅದರಿಂದ ಸೌಲಭ್ಯಪಡೆದ ಕೆಲವು ಜನರು ಅದನ್ನು ಶಾಶ್ವತವಾಗಿಸಲು ಪ್ರಯತ್ನಿಸುತ್ತಾರೆ. ಹೊಸದನ್ನು ಮರೆಸಿ ಸತ್ತದ್ದನ್ನೇ ಸಂರಕ್ಷಿಸುವ ಈ ಪ್ರಭೃತಿಗಳೇ ಈಗಿನ ಸರ್ಕಾರಗಳು ಹಾಗೂ ಆಡಳಿತವರ್ಗದಲ್ಲಿರುವವರು. ಇಂತಹವರೇ ರಾಷ್ಟ್ರಪ್ರೇಮವು ಜೀವನದಲ್ಲಿ ಅತ್ಯಂತ ಅವಶ್ಯಕವಾದುದು ಎಂದು ಸಾರುವವರು.

ಇಂತಹ ಜನರ ಕೈಯಲ್ಲಿರುವ ಸಾಧನೋಪಕರಣಗಳು ಅಸಂಖ್ಯಾತವಾದುವು. ಆದರೆ ಜನಾಭಿಪ್ರಾಯವು ಸಂವಹನಶೀಲವಾದುದು, ಬೆಳೆಯುವಂತಹುದು. ಇದನ್ನು ತಡೆಯುವ ಪ್ರಯತ್ನಗಳು ಸಂಪೂರ್ಣವಾಗಿ ವಿಫಲವಾಗದಿರಬಹುದು: ಆದರೆ ಹಳೆಯದು ನಶಿಸಿ, ಹೊಸದು ಬೆಳೆಯುವುದೇ ಪ್ರಕೃತಿಧರ್ಮ. ಅಭಿಜಾತ ಜನಾಭಿಪ್ರಾಯವನ್ನು ತಡೆದಷ್ಟು ಅದರ ಬೆಳವಣಿಗೆ ತೀವ್ರವಾಗುತ್ತದೆ. ಅದರ ಕೂಗು ಹೆಚ್ಚಾಗುತ್ತದೆ. ಸರ್ಕಾರಗಳೂ ಆಡಳಿತವರ್ಗಗಳೂ ತಮ್ಮ ಅಧಿಕಾರಕ್ಕೆ ಆಧಾರವಾದ ಪುರಾತನ ರಾಷ್ಟ್ರಪ್ರೇಮಭಾವನೆಯನ್ನುಳಿಸಿ, ತಮ್ಮ ಅಧಿಕಾರವನ್ನು ಕಸಿಯುವ ಹೊಸ ಅಭಿಪ್ರಾಯಗಳನ್ನು ಚಿವುಟಿ ಹಾಕಲು ಪ್ರಯತ್ನಿಸುತ್ತವೆ. ಆದರೆ ಹಳೆಯದನ್ನುಳಿಸಿ, ಹೊಸದನ್ನುಳಿಸುವ ಪ್ರಯತ್ನವು ಒಂದು ಮಿತಿಯಲ್ಲಿ ಸಫಲವಾಗಬಹುದು. ಪ್ರವಾಹದ ನೀರನ್ನು ಆಣೆಕಟ್ಟು ಎಷ್ಟು ತಡೆಯಬಲ್ಲದು?

ಈಗ ಸಹಜವಲ್ಲದ ರಾಷ್ಟ್ರಪ್ರೇಮವನ್ನು ಜನರಲ್ಲಿ ಉದ್ರೇಕಗೊಳಿಸಲು ಸರ್ಕಾರಗಳು ಎಷ್ಟೇ ಪ್ರಯತ್ನಪಟ್ಟರೂ, ಜನರಿಗೆ ಅದರಲ್ಲಿ ನಂಬಿಕೆಯುಳಿದಿಲ್ಲ. ಅದರ ಬದಲು ಸಕಲ ರಾಷ್ಟ್ರಗಳ ಜನತೆಯ ಐಕ್ಯ ಹಾಗೂ ಭ್ರಾತೃತ್ವದಲ್ಲಿ ಅವರು ಹೆಚ್ಚು ಹೆಚ್ಚು ನಂಬಿಕೆಯಿಡುತ್ತಿದ್ದಾರೆ. ರಾಷ್ಟ್ರಪ್ರೇಮವು ಜನರಿಗೆ ಈಗ ನೀಡಬಹುದಾದ ಕಾಣಿಕೆಯೆಂದರೆ ಕರಾಳವಾದ ಭವಿಷ್ಯತ್ತು: ಆದರೆ ಇಡೀ ಮಾನವ ಕುಲದ ಭ್ರಾತೃತ್ವ ಭಾವನೆಯು ಹೆಚ್ಚು ಹೆಚ್ಚು ಅರ್ಥಪೂರ್ಣವಾದುದೆಂದೂ ಅಪೇಕ್ಷಣೀಯವಾದುದೆಂದೂ ಜನರಿಗೆ ಅನಿಸುತ್ತಿದೆ. ಇದರಿಂದ ಕಾಲಾತೀತವಾದ ಹಳೆಯ ಜನಾಭಿಪ್ರಾಯವು ಹೊಸದಕ್ಕೆ ಅಸ್ಪದವೀಯುವ ಸಂಕ್ರಮಣವು ಬರಲೇ ಬೇಕು. ಈ ಸಂಕ್ರಮಣಸ್ಥಿತಿಯು ಒಂದೆಡೆ ಹಣ್ಣೆಲೆಗಳುದುರು

ತ್ತಿರುವಾಗ ಮತ್ತೊಂದೆಡೆ ಚಿಗುರೆಲೆಗಳು ಮೂಡುವಷ್ಟೇ ಅನಿವಾರ್ಯವಾದುದು. ಈ ಸಂಕ್ರಮಣ ಕಾಲವು ಮುಂದೆ ಹೋದಷ್ಟು ಅದು ತೀವ್ರತರವೂ ಅದರ ಅನಿವಾರ್ಯತೆಯು ಸ್ಪಷ್ಟತರವೂ ಆಗುತ್ತವೆ.

ನಮ್ಮ ಸಾಮಾಜಿಕ ಕೌಟುಂಬಿಕ ಹಾಗೂ ವೈಯಕ್ತಿಕ ಜೀವನಕ್ಕೆ ಆಧಾರವಾಗಿರುವ ನೈತಿಕತೆ ಮತ್ತು ರಾಷ್ಟ್ರಪ್ರೇಮದ ಹೆಸರಲ್ಲಿ ನಾವಿರುವ ಪರಿಸ್ಥಿತಿ ಇವುಗಳ ಬಗ್ಗೆ ಆಲೋಚಿಸುವುದೂ ನಮ್ಮ ಆತ್ಮಪ್ರಜ್ಞೆ ಮತ್ತು ಸರ್ಕಾರದ ಸತತಪ್ರಯತ್ನದಿಂದಾಗಿ ಯಾವುದನ್ನು ಜನಾಭಿಪ್ರಾಯವೆಂದು ಕರೆಯಲಾಗುತ್ತಿದೆಯೋ ಅದು ಇವುಗಳ ನಡುವಣ ವಿರೋಧವನ್ನು ಕಂಡುಕೊಳ್ಳುವುದೂ ಕ್ರಿಶ್ಚಿಯನ್ನರಾಗಿಯೂ ಸಮಕಾಲೀನ ವ್ಯಕ್ತಿಗಳಾಗಿಯೂ ನಮ್ಮ ಕರ್ತವ್ಯ.

ತುಂಬ ಸಹಜವಾದುದೂ ಸರಳವಾದುದೂ ಎಂದು ಹೇಳಲಾಗುವ ರಾಷ್ಟ್ರಪ್ರೇಮದ ಬೇಡಿಕೆಗಳು ಹಾಗೂ ಇವು ನಾವೂ ಭಾಗಿಗಳಾದ ಜನಾಭಿಪ್ರಾಯಕ್ಕೆ ಎಷ್ಟರಮಟ್ಟಿಗೆ ವಿರುದ್ಧವಾಗಿವೆ ಎಂಬುದನ್ನೂ ಕುರಿತು ನಾವು ಆಲೋಚಿಸಬೇಕಾದುದು ಅತ್ಯಂತ ತುರ್ತಾದುದು.

ನಾವು ನಮ್ಮನ್ನು ಸ್ವತಂತ್ರರೆಂದೂ ವಿದ್ಯಾವಂತರೆಂದೂ ಮಾನವೀಯರೆಂದೂ, ಕೊನೆಗೆ ಕ್ರಿಶ್ಚಿಯನ್ನರೆಂದೂ ಭಾವಿಸಿಕೊಂಡಿದ್ದೇವೆ; ಇಷ್ಟಾದರೂ ವಿಲ್‌ಹೆಲ್ಮ್-ಅಲೆಕ್ಸಾಂಡರ್‌ಗಳ ನಡುವೆ ವೈಮನಸ್ಯವುಟಾದಾಗ, ಪೌರ್ವಾತ್ಯ ಸಮಸ್ಯೆಯ ಬಗ್ಗೆ ಶ್ರೀಮಾನ್ ಎನ್. ಎನ್. ಅವರು ಲೇಖನವೊಂದನ್ನು ಬರೆದಾಗ, ಯಾವನೋ ರಾಜನೊಬ್ಬ ಬಲ್ಗೇರಿಯನ್ನರನ್ನೋ ಸರ್ಬಿಯನ್ನರನ್ನೋ ಲೂಟಿ ಹೊಡೆದಾಗ, ಯಾರೋ ಒಬ್ಬ ಚಕ್ರವರ್ತಿಯೋ ಚಕ್ರವರ್ತಿನಿಯೋ ಯಾವುದನ್ನೋ ದ್ವೇಷಿಸಿದಾಗ ವಿದ್ಯಾವಂತ. ಮಾನವೀಯ ಕ್ರಿಶ್ಚಿಯನ್‌ರಾದ ನಾವು ಹೋಗಿ ನಾವು ಕಂಡರಿಯದ ಜನರನ್ನು ಕೊಲ್ಲಬೇಕು. ಬೇರೆಲ್ಲರಂತೆ ಇವರ ಬಗ್ಗೆಯೂ ನಮಗೆ ದ್ವೇಷಭಾವನೆಯಿಲ್ಲದಿದ್ದರೂ ಕೊಲ್ಲಬೇಕು.

ಹೀಗಿನ್ನೂ ನಡೆಯದಿದ್ದರೂ, ಮೂರನೆಯ ಅಲೆಕ್ಸಾಂಡರ್‌ನ ಪೆಸಿಫಿಕ್ ಒಪ್ಪಂದಕ್ಕೋ ಅಥವಾ ಅವನ ಮಗ ನಿಕೋಲಾಸ್ ಅಲೆಕ್ಸಾಂಡ್ರೊವಿಚ್[15] ವಿಕ್ಟೋರಿಯಾ ರಾಣಿಯ ಮೊಮ್ಮಗಳನ್ನು ಮದುವೆಯಾಗುವುದಕ್ಕೋ ನಾವು ಕೃತಜ್ಞರಾಗಿದ್ದೇವೆಂದು ಜನರ ಭಾವನೆ. ಇದರ ಬದಲು ಅಲೆಕ್ಸಾಂಡರ್‌ನ ಸ್ಥಾನದಲ್ಲಿ ಮತ್ತೊಬ್ಬನಿದ್ದಿದ್ದರೆ,

---

[15] ಈತ ಎರಡನೆಯ ನಿಕೋಲಾಸ್‌ನಾಗಿ 1894 ನೇ ನವೆಂಬರ್‌ನಲ್ಲಿ ಸಿಂಹಾಸನಾರೋಹಣ ಮಾಡಿದ; ಒಂದು ತಿಂಗಳ ನಂತರ ವಿಕ್ಟೋರಿಯಾ ರಾಣಿಯ ಮಗಳಾದ ಪ್ರಿನ್ಸೆಸ್ ಆಲಿಸ್‌ಳ ಮಗಳು ಹೆಸ್‌ನ ಪ್ರಿನ್ಸೆಸ್ ಅಲೆಕ್ಸಾಂಡ್ರಾಳೊಡನೆ ಈತನ ವಿವಾಹವಾಯಿತು.

ಅಥವಾ ಅಲೆಕ್ಸಾಂಡರನ ಒಪ್ಪಂದವು ಬೇರೆಯಾಗಿದ್ದರೆ, ಇಲ್ಲಿ ನಿಕೋಲಾಸ್ ಅಲೆಕ್ಸ್ ಬದಲು ಅಮೀಲಿಯಳನ್ನು ವಿವಾಹವಾಗಿದ್ದರೆ, ನಾವು ಕಾಡುಪ್ರಾಣಿಗಳಂತೆ ಒಬ್ಬರೊಬ್ಬರ ರಕ್ತ ಹೀರಲು ಹೋಗಬೇಕಾಗುತ್ತಿತ್ತು.

ಈಗಿನ ಜನಾಭಿಪ್ರಾಯವು ಈ ರೀತಿಯದು. ಇದನ್ನು ಅತ್ಯಂತ ಪ್ರಗತಿಗಾಮಿಯಾದ ಹಾಗೂ ಉದಾರವಾದ ಪತ್ರಿಕಾವೃಂದವು ಸರಳವಾಗಿ ಮತ್ತೆ ಮತ್ತೆ ಹೇಳುತ್ತಿರುತ್ತವೆ. ಕ್ರಿಶ್ಚಿಯನ್ನರಾಗಿ ಈ ಒಂದು ಸಾವಿರ ವರ್ಷಗಳಿಂದ ಒಬ್ಬರೊಬ್ಬರನ್ನು ಕಿತ್ತುತಿನ್ನದಿದ್ದರೆ ಅದಕ್ಕೆ ಕಾರಣ ಮೂರನೆಯ ಅಲೆಕ್ಸಾಂಡರ್ ಅದಕ್ಕೆ ಅವಕಾಶ ಕೊಡದಿರುವುದು.

ನಿಜವಾಗಿಯೂ ಇಂಥ ಪರಿಸ್ಥಿತಿ ಭೀಕರವಾದುದು.

## 17

ಮಾನವಕುಲದ ಜೀವನದಲ್ಲಿ ಅತ್ಯಂತ ಮಹತ್ತರವಾದ, ಪ್ರಮುಖವಾದ ಬದಲಾವಣೆಗಳನ್ನುಂಟುಮಾಡಲು ವೀರಕೃತ್ಯಗಳೇನೂ ಬೇಕಾಗಿಲ್ಲ: ಕೋಟ್ಯಂತರ ಜನರನ್ನು ಶಸ್ತ್ರಸಜ್ಜಿತರಾಗಿಸಲೂ ಬೇಕಾಗಿಲ್ಲ: ಹೊಸ ರೈಲುಮಾರ್ಗಗಳನ್ನಾಗಲೀ ಯಂತ್ರಗಳನ್ನಾಗಲೀ ಸ್ಥಾಪಿಸುವುದೂ ಬೇಕಿಲ್ಲ. ಹೊಸ ವಸ್ತುಪ್ರದರ್ಶನಗಳನ್ನೋ ಕಾರ್ಮಿಕ ಸಂಘಗಳನ್ನೋ ಸಂಘಟಿಸುವ ಅವಶ್ಯಕತೆಯಿಲ್ಲ. ಕ್ರಾಂತಿಗಳನ್ನು ಮಾಡಬೇಕಾಗಿಲ್ಲ. ಕೋಟೆಕೊತ್ತಲಗಳ ಅಥವಾ ಸಿಡಿಮದ್ದಿನ ಅವಶ್ಯಕತೆಯಿಲ್ಲ. ಅಥವಾ ನೌಕಾಪಡೆ ವಾಯುಪಡೆಗಳ ಆಧುನೀಕರಣ ಮುಂತಾದುವುಗಳೂ ಬೇಕಾಗಿಲ್ಲ. ಅವಶ್ಯಕವಾಗಿರುವುದು ಜನಾಭಿಪ್ರಾಯದ ಮಾರ್ಪಾಟು ಮಾತ್ರ.

ಈ ಮಾರ್ಪಾಟು ಮಾಡಲು ಆಲೋಚನೆಯೇನೂ ಬೇಕಾಗಿಲ್ಲ. ಈಗಿರುವ ಯಾವುದನ್ನಾದರೂ ತಿರಸ್ಕರಿಸುವುದೂ ಬೇಕಾಗಿಲ್ಲ. ಹೊಸದಾದ ಅಸಾಧಾರಣವಾದ ಯೋಜನೆಯ ಅವಶ್ಯಕತೆಯೂ ಇಲ್ಲ: ಅವಶ್ಯಕವಾಗಿರುವುದೆಂದರೆ ಈಗ ಸುಳ್ಳೆನಿಸಿ ಈಗಾಗಲೇ ಸತ್ತಿದ್ದರೂ ಸರ್ಕಾರಗಳು ಮಾತ್ರ ಕೃತಕವಾಗಿ ಮೂಡಿಸುತ್ತಿರುವ ಜನಾಭಿಪ್ರಾಯವನ್ನು ಒಪ್ಪಿಕೊಳ್ಳದಿರುವುದು; ಅವಶ್ಯಕವಾಗಿರುವ ಅಂಶವೆಂದರೆ ಪ್ರತಿ ವ್ಯಕ್ತಿಯೂ ತನಗನಿಸಿದ್ದನ್ನೋ ಅನುಭವಕ್ಕೆ ಬಂದದ್ದನ್ನೋ ಮಾತ್ರ ಹೇಳುವುದು. ಕೊನೆಯ ಪಕ್ಷ ತನಗನ್ನಿಸದೆ ಇದ್ದುದರ ಬಗ್ಗೆ ಏನನ್ನಾದರೂ ಹೇಳಲು ಹೋಗದೆ ಸುಮ್ಮನಿರುವುದು.

ಜನರು. ಕೊನೆಯ ಪಕ್ಷ ಕೆಲವರಾದರೂ ಇದನ್ನು ಮಾಡಿದರೆ ಕಾಲಾತೀತವಾದ ಜನಾಭಿಪ್ರಾಯವು ತಕ್ಷಣವೇ ತಾನಾಗಿಯೇ ಕಣ್ಮರೆಯಾಗಿ ಹೊಸದಾದ ಸತ್ಯವಾದ, ವೀರ್ಯವತ್ತಾದ ಜನಾಭಿಪ್ರಾಯವು ತಾನೇ ಮೂಡಿಬರುತ್ತದೆ. ಜನಾಭಿಪ್ರಾಯದ

ಈ ಮಾರ್ಪಾಟಿನೊಂದಿಗೇ ಜನರಜೀವನವನ್ನು ದಮನಗೊಳಿಸುವ ಹಾಗೂ ಸಂಕಷ್ಟ ಕರವಾಗಿಸುವ ಅಂತರಿಕಶಕ್ತಿಗಳೆಲ್ಲ ತಾವಾಗಿಯೇ ವ್ಯತ್ಯಾಸಗೊಳ್ಳುವುವು. ಜನರೆಲ್ಲರ ಜೀವನವನ್ನು ದಮನಗೊಳಿಸಿರುವ ಭೀಕರ ಪ್ರಸಂಗಗಳಿಂದ ಪಾರುಮಾಡಲು ಬೇಕಾಗಿರು ವುದು ಹೇಳಲೂ ನಾಚಿಕೆಯಾಗುವಷ್ಟು ಸಣ್ಣದು: ಸುಳ್ಳುಹೇಳುವುದನ್ನು ನಿಲ್ಲಿಸುವುದು ಮಾತ್ರ ಅವಶ್ಯಕ. ತಮ್ಮ ಮೇಲೆ ಬಲವಂತವಾಗಿ ಹೇರಿದ ಸುಳ್ಳನ್ನು ಜನರು ತಿರಸ್ಕರಿಸಿದರೆ ಸಾಕು: ತಮಗನ್ನಿಸದುದರ ಬಗ್ಗೆ ಏನೂ ಹೇಳದಿದ್ದರೆ ಸಾಕು; ನೂರಾರು ವರ್ಷಗಳ ಕಾಲ ಕ್ರಾಂತಿಕಾರಿಗಳು ಎಲ್ಲ ಅಧಿಕಾರವನ್ನು ಪಡೆದಿದ್ದರೂ ಮಾಡಲಾರದ ಇಡೀ ಜೀವನವಿಧಾನವನ್ನೇ ತಕ್ಷಣ ಮಾರ್ಪಡಿಸಲು ಇಷ್ಟು ಸಾಕು.

ಶಕ್ತಿಗಿಂತ ಸತ್ಯವು ಹೆಚ್ಚು ಸಮರ್ಥವಾದುದೆಂದು ಜನರಿಗೆ ಮನವರಿಕೆಯಾದರೆ, ಅಂತಹ ಸತ್ಯವನ್ನವರು ಧೈರ್ಯವಾಗಿ ನುಡಿದರೆ, ಕೊನೆಯಪಕ್ಷ ನಡೆ ನುಡಿಗಳಲ್ಲಿ ಅದರಿಂದ ಹಿಂದೆಗೆಯದಿದ್ದರೆ, ತಾವು ಆಲೋಚಿಸದೆ ಇದ್ದುದರ ಬಗ್ಗೆ ಅವರೇನೂ ಹೇಳದೆ ಕೆಟ್ಟದ್ದು ಅಥವಾ ಅರ್ಥಹೀನವೆಂದು ತಮಗನಿಸಿದ್ದನ್ನು ಮಾಡದೆ ಇದ್ದರೆ.

ಯಾರೋ ಒಬ್ಬ ಚಕ್ರವರ್ತಿಯನ್ನೋ ರಾಜನನ್ನೋ ಜಯಶಾಲಿಯನ್ನೋ ಕಂಡಾಗ "ಫ್ರಾನ್ಸ್ ಚಿರಾಯುವಾಗಲಿ" ಎಂದೋ "ಜೈ" ಎಂದೋ ಕೂಗಿದರೆ ತಪ್ಪೇನು? ದಿವ್ಯ ವಸ್ತ್ರಾಭರಣಗಳನ್ನು ಧರಿಸಿ ಅವನಿಗೆ ಮರ್ಯಾದೆ ಸಲ್ಲಿಸಲು ಹೋಗಿ, ಅಲ್ಲಿ ಅವನನ್ನು ವಿಶಿಷ್ಟ ನಾಮಗಳಿಂದ ಸಂಬೋಧಿಸಿ ಎಲ್ಲರ ಮೇಲೂ ಅದರಲ್ಲೂ ಕಿರಿಯರು ಅವಿದ್ಯಾವಂತರ ಮೇಲೆ ತನ್ನ ನಡವಳಿಕೆಯು ಶ್ರೇಷ್ಠವೆಂಬ ಭಾವನೆ ಬರುವಂತೆ ಮಾಡಿ ದರೆ ತಾನೇ ತಪ್ಪೇನು? ಫ್ರಾಂಕೋ ರಷ್ಯನ್ ಮೈತ್ರಿ ಅಥವಾ ವ್ಯಾಪಾರ ನಿಯಂತ್ರಣ ವನ್ನು ಸಮರ್ಥಿಸಿಯೋ ಇಲ್ಲ ಜರ್ಮನರು ಫ್ರೆಂಚರು ರಷ್ಯನರು, ಅಥವಾ ಇಂಗ್ಲಿಷರನ್ನು ಖಂಡಿಸಿ ಒಂದು ಲೇಖನವನ್ನು ಬರೆದರೇನು ಮಹಾ? ರಾಷ್ಟ್ರಪ್ರೇಮಪೂರಿತ ಸಮಾರಂಭ ಗಳಲ್ಲಿ ಭಾಗವಹಿಸಿ ತನಗಿಷ್ಟವಿಲ್ಲದವರ ಅಥವಾ ತನ್ನೊಡನೆ ಸಮಾನಾಸಕ್ತಿಯಿಲ್ಲದ ಜನ ರೊಡನೆ ಬೆರೆತು, ಅವರಿಗೆ ಶುಭಕೋರಿ ಮದ್ಯಪಾನಮಾಡುವುದರಲ್ಲಿ ಅಥವಾ ಅವರ ಗುಣಗಾನ ಭಾಷಣಗಳನ್ನು ಮಾಡುವುದರಲ್ಲಿ ತಪ್ಪೇನು? ತಮ್ಮ ಸಂಭಾಷಣೆಗಳಲ್ಲಿ ಒಪ್ಪಂದಗಳ ಅಥವಾ ಮೈತ್ರಿಕೂಟಗಳ ಔಚಿತ್ಯ-ಉಪಯುಕ್ತತೆಗಳನ್ನು ಒಪ್ಪಿಕೊಳ್ಳು ವುದರಲ್ಲಾಗಲೀ, ಅಥವಾ ನಮ್ಮ ದೇಶ ಜನತೆಗಳನ್ನು ಹೊಗಳುತ್ತ ಇತರರನ್ನು ತೆಗಳುತ್ತಿರುವಾಗ ಸುಮ್ಮನಿದ್ದರಾಗಲೀ, ಅಥವಾ ಕೆಥೋಲಿಕ್ ಪಂಥ, ಸಂಪ್ರದಾಯಪಂಥ ಅಥವಾ ಲೂಥರ್ ಪಂಥಗಳನ್ನು ಹೊಗಳುವಾಗಲಾಗಲೀ ಇಲ್ಲವೇ ನೆಪೋಲಿಯನ್ ಮತ್ತು ಪೀಟರ್, ಅಥವಾ ನಮ್ಮ ಕಾಲದವರೇ ಆದ ಬೌಲಾಂಗರ್ ಮತ್ತು ಸ್ಕೊಬೆಲೆವ್ ರಂತಹ, ಯುದ್ಧವೀರರನ್ನೋ ಆಡಳಿತಗಾರರನ್ನೋ ಹೊಗಳುವುದರಲ್ಲಾಗಲೀ, ಆಗುವ ಅಪರಾಧವೇನು?

ಈ ಎಲ್ಲ ನಡವಳಿಕೆಗಳು ಮುಖ್ಯವಲ್ಲವೆನ್ನಿಸಬಹುದು. ಆದರೆ ಮುಖ್ಯವಲ್ಲವೆಂದು ತೋರುವ ಈ ಕಾರ್ಯಗಳಲ್ಲಿ ಎಂದರೆ ಆಗುವಷ್ಟು ಮಟ್ಟಿಗೆ ನಮಗೆ ವಿಚಾರಹೀನವಾದದ್ದು ಎನ್ನಿಸಿದವುಗಳ ಔಚಿತ್ಯಹೀನತೆಯನ್ನು ತೋರಿಸಿ ಅವುಗಳಲ್ಲಿ ಭಾಗವಹಿಸದಿರುವುದರಲ್ಲಿ ಪ್ರಬಲವಾದ ಹಾಗೂ ಅದಮ್ಯವಾದ ನಮ್ಮ ಶಕ್ತಿಯಡಗಿದೆ. ಈ ಶಕ್ತಿಯಿಂದಲೇ ಅಜೇಯವಾದ ಸತ್ಯವಾದ ಹಾಗೂ ನಿಜವಾದ ಜನಾಭಿಪ್ರಾಯವು ಮೂಡುವುದು. ಈ ಜನಾಭಿಪ್ರಾಯದ ಮುನ್ನಡೆಯಲ್ಲಿಯೇ ಮಾನವ ಜನಾಂಗದ ಶ್ರೇಯಸ್ಸು ಅಡಗಿರುವುದು. ಸರ್ಕಾರಗಳಿಗೂ ಈ ವಿಚಾರ ತಿಳಿದಿದೆ. ಈ ಶಕ್ತಿಯ ಮುಂದೆ ಅವು ಕಂಪಿಸುತ್ತವೆ. ಸಾಧ್ಯವಾದ ರೀತಿಯಲ್ಲೆಲ್ಲ ಇದನ್ನು ಎದುರಿಸಿ ಗೆಲ್ಲಲು ಹೆಣಗುತ್ತವೆ.

ಈ ಶಕ್ತಿಯಿರುವುದು ಮಾನಸಿಕ ಕ್ರಿಯೆಗಳಲ್ಲಿ ಮತ್ತು ಅದರ ಸ್ಪಷ್ಟ ಅಭಿವ್ಯಕ್ತಿಯಲ್ಲಿಯೇ ಹೊರತು ಸೈನ್ಯಬಲದಲ್ಲಲ್ಲ ಎಂದು ಅವುಗಳಿಗೂ ತಿಳಿದಿದೆ. ಇಂತಹ ಸ್ವತಂತ್ರ ಆಲೋಚನೆಯ ಅಭಿವ್ಯಕ್ತಿಗೆ ಅವು ಶತ್ರುವಿಗಿಂತ ಹೆಚ್ಚಾಗಿ ಹೆದರುತ್ತವೆ. ಇದಕ್ಕೋಸುಗವೆ ಅವು (ಸರ್ಕಾರಗಳು) ಸೆನ್ಸಾರ್ ಮಂಡಳಿಗಳನ್ನು ಸ್ಥಾಪಿಸುತ್ತವೆ. ವೃತ್ತಪತ್ರಿಕೆಗಳಿಗೆ ಲಂಚವನ್ನೀಯುತ್ತವೆ. ಚರ್ಚ್ ಹಾಗೂ ಶಾಲೆಗಳ ಮೇಲೆ ಸಂಪೂರ್ಣ ನಿಯಂತ್ರಣವನ್ನು ಪಡೆಯುತ್ತವೆ. ಆದರೆ ಪ್ರಪಂಚವನ್ನು ಮುಂದುವರೆಸುವ ಆಧ್ಯಾತ್ಮಿಕ ಶಕ್ತಿಯು ಅವುಗಳ ಮುಷ್ಟಿಗೆ ಸಿಗುವಂತಹುದಲ್ಲ. ಅದು ಯಾವುದಾದರೊಂದು ಪುಸ್ತಕದಲ್ಲಿಯೋ ವೃತ್ತಪತ್ರಿಕೆಯಲ್ಲೋ ಸೇರಿಲ್ಲ. ಅದು ಮನುಷ್ಯರ ಮನಸ್ಸಿನಾಳದಲ್ಲಿ ನೆಲಸಿರುವುದರಿಂದ ಸದಾ ಸ್ವತಂತ್ರವಾದದ್ದು ಯಾವ ಬಲೆಗೂ ಸಿಲುಕುವಂತಹುದಲ್ಲ. ವ್ಯಕ್ತಿಯು ಏಕಾಂಗಿಯಾಗಿ ಪ್ರಕೃತಿವ್ಯಾಪಾರಗಳ ಬಗ್ಗೆ ಧ್ಯಾನಿಸುತ್ತಿರುವಾಗ ಈ ಅತ್ಯಂತ ಶಕ್ತಿಯುತವಾದ. ಹಿಡಿತಕ್ಕೆ ಸಿಗದ. ಸ್ವತಂತ್ರ ಪ್ರಭೆಯು ಅವನ ಆತ್ಮದಲ್ಲಿ ಕಾಣಿಸಿಕೊಳ್ಳುತ್ತದೆ. ಅನಂತರ ಅಪ್ರಯತ್ನವಾಗಿ ತನ್ನ ಹೆಂಡತಿ ಸೋದರ ಸ್ನೇಹಿತ ಮತ್ತು ಯಾರಿಂದ ತಾನು ಸತ್ಯವೆಂದುಕೊಂಡಿರುವುದನ್ನು ಮರೆಮಾಚುವುದು ಪಾಪಕರವೆಂದು ಭಾವಿಸುತ್ತಾನೋ ಅವರೆಲ್ಲರಿಗೂ ಹೇಳುತ್ತಾನೆ. ತನ್ನ ಸುತ್ತಲಿರುವುದರಿಂದ. ತನ್ನ ಮೇಲೆ ಆದ ಪ್ರಭಾವದಿಂದ ದೂರವಿರುವ ಸ್ವತಂತ್ರ ವ್ಯಕ್ತಿಯೊಬ್ಬನು ತಾನು ಸತ್ಯವೆಂದು ತಿಳಿದಿರುವುದನ್ನು ಹೇಳುವಾಗ ಉಂಟುಮಾಡುವ ಪರಿಣಾಮವನ್ನು ಕೋಟ್ಯಂತರ ರೂಬಲ್‌ಗಳಿಂದಾಗಲೀ ಲಕ್ಷಾಂತರ ಸೈನಿಕರಿಂದಾಗಲೀ ಎಂತಹುದೇ ಸಂಸ್ಥೆಗಳಿಂದಾಗಲೀ ಯುದ್ಧಗಳಿಂದಾಗಲೀ ಕ್ರಾಂತಿಗಳಿಂದಾಗಲೀ ಉಂಟುಮಾಡುವುದು ಸಾಧ್ಯವಿಲ್ಲ.

ತಮ್ಮ ಆಲೋಚನೆ ಅನುಭವಗಳಿಗೆ ವಿರುದ್ಧವಾದ ನಡೆ ನುಡಿಗಳನ್ನು ಹೊಂದಿರುವ ಸಾವಿರಾರು ಜನರ ನಡುವೆ ಸ್ವತಂತ್ರನಾದ ವ್ಯಕ್ತಿಯೊಬ್ಬನು ತನಗನ್ನಿಸಿದುದನ್ನು ತಾನು ಅನುಭವಿಸಿದ್ದನ್ನು ನಿರ್ಭಯವಾಗಿ ಹೇಳುತ್ತಾನೆ. ತನ್ನ ಆಲೋಚನೆಗಳನ್ನು ನಿರ್ಭಯವಾಗಿ ಹೇಳುವವನು ಇತರರಿಂದ ದೂರವಾಗಿ ಉಳಿಯುತ್ತಾನೆಂದು ಅನ್ನಿಸಬಹುದು: ಆದರೆ ಉಳಿದೆಲ್ಲರೂ ಕೊನೆಗೆ ಬಹುಪಾಲು ಜನರಾದರೂ ಅವನು ಹೇಳಿದ ಆಲೋಚನೆ

ಅನುಭವಗಳನ್ನೇ ದೀರ್ಘಕಾಲದಿಂದಲೂ ಪಡೆದಿರುತ್ತಾರೆ ಆದರೆ ಅವರು ಅದನ್ನು ಹೇಳಿರುವುದಿಲ್ಲ ಅಷ್ಟೆ. ನಿನ್ನೆ ಹೊಸದಾಗಿದ್ದ ಒಬ್ಬನ ಭಾವನೆಯು ಈ ದಿನ ಬಹುಪಾಲು ಜನರ ಸಾಮಾನ್ಯಾಭಿಪ್ರಾಯವಾಗಿ ಹೋಗುತ್ತದೆ. ಈ ಅಭಿಪ್ರಾಯವು ಕಾಣದಷ್ಟು ಸೂಕ್ಷ್ಮವಾಗಿಯಾದರೂ ಅದಮ್ಯವಾಗಿ ಒಮ್ಮೆ ನಟ್ಟುಹೋದರೆ. ಮಾನವ ಜನಾಂಗದ ನಡತೆಯು ಬದಲಾಗಲು ಪ್ರಾರಂಭಿಸುತ್ತದೆ.

ಸ್ವತಂತ್ರನಾಗಿದ್ದರೂ ಏಕಾಂಗಿಯಾದವನು ಹೀಗೆ ಹೇಳಿಕೊಳ್ಳುತ್ತಾನೆ : ನಾನೊಬ್ಬನು ನಮ್ಮನ್ನಾವರಿಸಿರುವ ಕೆಡಕು ಕುಟಿಲಗಳ ಸಮುದ್ರವನ್ನು ಹೋಗಲಾಡಿಸಲು ಏನು ಮಾಡಬಲ್ಲೆ? ನನ್ನ ಅಭಿಪ್ರಾಯವನ್ನು ಹೇಳುವುದರಿಂದೇನು ಉಪಯೋಗ? ನನ್ನದೇ ಆದ ಅಭಿಪ್ರಾಯವನ್ನು ಹೊಂದುವುದಾದರೂ ಏಕೆ? ಇಂತಹ ಅಸ್ಪಷ್ಟವಾದ ಗೊಂದಲಪೂರ್ಣವಾದ ಸಮಸ್ಯೆಗಳ ಬಗ್ಗೆ ಚಿಂತಿಸದಿರುವುದೇ ಒಳ್ಳೆಯದು. ಪ್ರಾಯಶಃ ಈ ವಿರೋಧಗಳು ನಮ್ಮ ಅಸ್ತಿತ್ವದ ಅನಿವಾರ್ಯ ಸ್ಥಿತಿ. ಪ್ರಪಂಚದಲ್ಲಿನ ಎಲ್ಲ ಕೆಡಕುಗಳ ವಿರುದ್ಧ ನಾನೊಬ್ಬನೇ ಏಕೆ ಹೋರಾಡಬೇಕು? ನನ್ನನ್ನು ತನ್ನೊಡನೆ ಸೆಳೆದೊಯ್ಯುವ ಪ್ರವಾಹದಲ್ಲಿ ತೇಲಿಹೋಗುವುದು ಒಳಿತಲ್ಲವೇ? ಏನನ್ನಾದರೂ ಮಾಡುವ ಹಾಗಿದ್ದರೆ ಅದನ್ನು ಇತರರೊಡನೆ ಮಾಡಬೇಕೇ ಹೊರತು ಏಕಾಂಗಿಯಾಗಲ್ಲ' ಈ ರೀತಿ ಜಗತ್ತನ್ನು ಮುನ್ನಡೆಸುತ್ತಿರುವ ಶಕ್ತಿಯುತವಾದ ಆಲೋಚನಾ ಸಾಧನವನ್ನು ಬಿಟ್ಟು ಪ್ರತಿ ವ್ಯಕ್ತಿಯೂ ಸಾಮಾಜಿಕ ನಡವಳಿಕೆಗಳೆಂಬ ಸಾಧನೆಗಳ ಮೊರೆಹೋಗುತ್ತಾನೆ. ಆದರೆ ಸಾಮಾಜಿಕ ನಡವಳಿಕೆಗಳು ನಿಂತಿರುವುದು ತಾನು ಹೋರಾಡಬೇಕಾಗಿರುವ ಆಧಾರಗಳ ಮೇಲೆ ಎಂಬುದನ್ನವನು ಗಮನಿಸುವುದಿಲ್ಲ: ಜಗತ್ತಿನಲ್ಲಿನ ಸಾಮಾಜಿಕ ನಡವಳಿಕೆಗೆ ಮೊರೆಹೋಗುವಾಗ ಪ್ರತಿಯೊಬ್ಬನೂ ಸತ್ಯದಿಂದ ಸ್ವಲ್ಪವಾದರೂ ದೂರ ಸರಿಯುವುದು ಅನಿವಾರ್ಯವಾಗುತ್ತದೆ. ಇದರಿಂದ ಅವನು ಪಡೆದ ಪ್ರಬಲ ಆಯುಧದ ಸಾಮರ್ಥ್ಯಕ್ಕೆ ಧಕ್ಕೆಯುಂಟಾಗುತ್ತದೆ. ಏನನ್ನಾದರೂ ಕತ್ತರಿಸುವಷ್ಟು ಹರಿತವಾಗುಳ್ಳ ಬ್ಲೇಡೊಂದನ್ನು ಯಾರಾದರೂ ಮೊಳೆಹೊಡೆಯಲು ಉಪಯೋಗಿಸಿದರೆ ಹೇಗೋ ಹಾಗಾಗುತ್ತದೆ ಈ ಪರಿಸ್ಥಿತಿ.

ಇಡೀ ನಮ್ಮ ಅಸ್ತಿತ್ವಕ್ಕೂ ನಮ್ಮ ಜೀವನ ವ್ಯವಸ್ಥೆಯ ಅರ್ಥಹೀನತೆಗೂ ಇರುವ ವ್ಯತ್ಯಾಸದ ಬಗ್ಗೆ ನಾವೆಲ್ಲರೂ ದೂರುತ್ತೇವೆ. ಆದರೆ ಸತ್ಯಪ್ರಜ್ಞೆ ಹಾಗೂ ಅದರ ಅಭಿವ್ಯಕ್ತಿಯೆಂಬ ವಿಶಿಷ್ಟವಾದ ಪ್ರಬಲವಾದ ಆಯುಧವನ್ನು ಉಪಯೋಗಿಸದೆ ಎಸೆಯುತ್ತೇವೆ. ನಾವು ಮಾಡುತ್ತಿರುವುದೇನೆಂದರೆ ಕೆಡುಕಿನ ವಿರುದ್ಧ ಹೋರಾಡುವ ನೆಪದಲ್ಲಿ ಈ ಸಾಧನವನ್ನು ನಿಜವಾಗಿ ಹಾಳುಮಾಡಿ, ಈಗಿರುವ ವ್ಯವಸ್ಥೆಯೊಡನೆ ನಾವು ನಡೆಸುತ್ತೇವೆಂದುಕೊಂಡಿರುವ ಕಲ್ಪನೆಯ ಹೋರಾಟದಲ್ಲಿ ಕಳೆದುಕೊಳ್ಳುತ್ತೇವೆ

ತಾನು ಸೇರಿಕೊಂಡಿರುವ ಜನರಿಗೆ ತಾನು ಬದ್ಧನೆಂಬ ಕಾರಣದಿಂದ ಒಬ್ಬನು ತನಗೆ ತಿಳಿದುದನ್ನು ಹೇಳುವುದಿಲ್ಲ: ಮತ್ತೊಬ್ಬನಿಗೆ ತಾನು ಸತ್ಯವನ್ನು ಹೇಳಿದರೆ ತನ್ನ

ಸಂಸಾರವನ್ನು ಪೋಷಿಸಲು ಸಹಾಯಕವಾದ ಅನುಕೂಲಸ್ಥಿತಿಯು ಹೊರಟುಹೋಗುವುದೆಂಬ ಭಯ; ಮೂರನೆಯವನಿಗೊ ತಾನು ಕೀರ್ತಿ ಅಧಿಕಾರಗಳನ್ನು ಪಡೆದು ಅದನ್ನು ಅನಂತರ ಮಾನವಸೇವೆಗೆ ಬಳಸಬೇಕೆಂಬ ಹಂಬಲ; ನಾಲ್ಕನೆಯವನಿಗೆ ಸನಾತನವಾದ ಪವಿತ್ರ ಸಂಪ್ರದಾಯಗಳನ್ನು ತೊಡೆಯುವ ಆಸೆಯಿಲ್ಲ: ಐದನೆಯವನು ಜನರನ್ನು ನೋಯಿಸಲಾರ: ಆರನೆಯವನಿಗೆ ತಾನು ಸತ್ಯವನ್ನು ನುಡಿಯುವುದರಿಂದ ತೊಂದರೆಗೊಳಗಾಗಿ ತಾನು ಮಾಡುತ್ತಿರುವ ಅಥವಾ ಮಾಡಲು ಬಯಸುವ ಸಾಮಾಜಿಕ ಚಟುವಟಿಕೆಗೆ ಧಕ್ಕೆಯುಂಟಾದೀತೆಂಬ ಭೀತಿ.

ಚಕ್ರವರ್ತಿಯಾಗಿ, ರಾಜನಾಗಿ, ಸಚಿವನಾಗಿ, ಸರ್ಕಾರಿ ನೌಕರನಾಗಿ, ಸೈನ್ಯಾಧಿಕಾರಿಯಾಗಿ ಸೇವೆ ಸಲ್ಲಿಸುವ ಒಬ್ಬನು ತನ್ನ ಸ್ಥಾನದಲ್ಲಿರುವವನು ಅನಿವಾರ್ಯವಾಗಿ ಸತ್ಯದೂರನಾಗಬೇಕಾದುದು ತನ್ನ ಒಳ್ಳೆಯ ಕೆಲಸಗಳಿಂದ ಸರಿದೂಗಿಸಲ್ಪಡುತ್ತದೆಂದು ತನ್ನನ್ನು ಇತರರನ್ನೂ ಸಮಾಧಾನಪಡಿಸಿಕೊಳ್ಳುತ್ತಾನೆ. ಧರ್ಮಗುರುವಾದ ಮತ್ತೊಬ್ಬನು ತಾನು ಬೋಧಿಸುವುದನ್ನೆಲ್ಲ ತನ್ನ ಹೃದಯಾಂತರಾಳದಿಂದ ನಂಬಿರುವುದಿಲ್ಲ. ಆದರೂ ತಾನು ಒಳ್ಳೆಯದನ್ನು ಮಾಡುತ್ತಿರುವುದರಿಂದ ಸತ್ಯದಿಂದ ಸ್ವಲ್ಪ ದೂರಸರಿಯಬಹುದೆಂದುಕೊಳ್ಳುತ್ತಾನೆ. ಮೂರನೆಯವನೊಬ್ಬ ಸಾಹಿತ್ಯದ ಮೂಲಕ ಜನರಲ್ಲಿ ಜ್ಞಾನೋಪದೇಶ ಮಾಡುವವನು, ಸರ್ಕಾರ ಸಮಾಜಗಳು ತನ್ನ ವಿರುದ್ಧ ಬಂಡೇಳಬಾರದೆಂಬ ಕಾರಣಕ್ಕಾಗಿ ಇಡೀ ಸತ್ಯವನ್ನು ಹೇಳದಿರುವ ಅವಶ್ಯಕತೆಯಿದ್ದರೂ, ತಾನು ಒಳಿತನ್ನೇ ಮಾಡುವೆನೆಂಬ ವೃಥ ನಂಬಿಕೆಯಿಂದಿರುತ್ತಾನೆ. ನಾಲ್ಕನೆಯವನು, ಪ್ರಸ್ತುತ ವ್ಯವಸ್ಥೆಯ ವಿರುದ್ಧವಾಗಿ ಕ್ರಾಂತಿಕಾರಿಯಾಗಿಯೋ ಅನಾಯಕತ್ವವಾದಿಯಾಗಿಯೋ ಬಹಿರಂಗವಾಗಿಯೋ ಹೋರಾಡುತ್ತಿರುವವನು ತನ್ನ ಆದರ್ಶಗಳು ಜನತೆಗೆ ತುಂಬ ಉಪಯುಕ್ತವಾದುದರಿಂದ ಸತ್ಯವನ್ನು ಮರೆಮಾಚುವಿಕೆಯೇಕೆ. ತನ್ನ ಕಾರ್ಯಸಿದ್ಧಿಗಾಗಿ ಅನಿವಾರ್ಯವಾಗಿ ಹೇಳಬೇಕಾದ ಸುಳ್ಳುಗಳು ಕೂಡ ತನ್ನ ಕೆಲಸದ ಉಪಯುಕ್ತತೆಯನ್ನು ಹಾಳುಮಾಡಲಾರವೆಂದು ನಂಬಿರುತ್ತಾನೆ.

ಜನರ ವಿಚಾರಕ್ಕೂ ಜೀವನ ವಿಧಾನಕ್ಕೂ ಇರುವ ವಿರೋಧವನ್ನು ಹೋಗಲಾಡಿಸಿ ಆತ್ಮಪಜ್ಞೆಗನುಗುಣವಾದ ರೀತಿಯಲ್ಲಿ ಜೀವನವನ್ನು ರೂಪಿಸಬೇಕಾದರೆ, ನರ ಸತ್ತ ಹಳೆಯ ಜನಾಭಿಪ್ರಾಯವನ್ನು ಬಿಟ್ಟು ಹೊಸದಾದ ಸಜೀವವಾದದ್ದನ್ನು ಮೈಗೂಡಿಸಿಕೊಳ್ಳಬೇಕಾದುದು ಅವಶ್ಯಕ.

ಹಳೆಯದೂ ಅರ್ಥಹೀನವಾದುದೂ ಹೋಗಿ ಹೊಸದಾದ ಜೀವಂತಿಕೆಯಿಂದ ಕೂಡಿದ ಜನಾಭಿಪ್ರಾಯಕ್ಕೆ ಅವಕಾಶಮಾಡಿಕೊಡುವುದಕ್ಕಾಗಿ, ಜೀವನದ ಹೊಸ ಆಶೋತ್ತರಗಳನ್ನು ಕಂಡುಕೊಂಡ ಜನರು ಅವನ್ನು ಸ್ಪಷ್ಟವಾಗಿ ಅಭಿವ್ಯಕ್ತಗೊಳಿಸಬೇಕು. ಆದರೆ ಈ ಆಶೋತ್ತರಗಳನ್ನು ಬಲ್ಲವರು ಇವನ್ನು ಗಮನಿಸದೆ ಒಂದೊಂದಕ್ಕೆ ಒಂದೊಂದರಂತೆ

ಮಾತು—ಕೃತಿಗಳಲ್ಲಿ ಅವಕ್ಕೆ ವಿರುದ್ಧವಾದುವುಗಳನ್ನೇ ಪ್ರತಿಪಾದಿಸುತ್ತಾರೆ. ಸತ್ಯ ಮತ್ತವರ ಸ್ವತಂತ್ರಾಭಿವ್ಯಕ್ತಿಗಳು ಮಾತ್ರವೇ ಹಳೆಯದೂ ವಿನಾಶಕಾರಕವೂ ಆದ ಜೀವನ ವಿಧಾನವನ್ನು ಪೋಗಲಾಡಿಸಿ ಹೊಸ ಜನಾಭಿಪ್ರಾಯವನ್ನು ಸ್ಥಾಪಿಸಬಲ್ಲವು; ಇಷ್ಟಾದರೂ ನಮಗೆ ತಿಳಿದಿರುವ ಸತ್ಯವನ್ನು ಹೇಳದಿರುವುದಷ್ಟೇ ಅಲ್ಲ. ಸುಳ್ಳೆಂದು ನಮಗೇ ಸ್ಪಷ್ಟವಾಗಿರುವ ವಿಚಾರಗಳನ್ನು ಕೆಲವೇಳೆ ಘಂಟಾಘೋಷವಾಗಿ ಹೇಳು ತ್ತಿರುತ್ತೇವೆ.

ಶಕ್ತಿಯಿಲ್ಲದ. ಸ್ವತಂತ್ರವಲ್ಲದ. ಎಂದರೆ ಬಾಹ್ಯಪ್ರಭಾವಕ್ಕೆ ಸ್ವತಂತ್ರವ್ಯಕ್ತಿಗಳು ಒಳಗಾಗದ ಶಕ್ತಿಯುತವೂ ಸ್ವತಂತ್ರವೂ ಆದ ಸತ್ಯ ಮತ್ತವರ ಅಭಿವ್ಯಕ್ತಿಯಲ್ಲಿ ನಂಬುಗೆಯಿಡುವುದಾದರೆ ಅದೆಂತಹ ಪವಾಡಗಳನ್ನು ಮಾಡಬಹುದು.

ತಮಗಾಗಲೇ ಗೋಚರಿಸಿರುವ (ಎಲ್ಲ ರಾಷ್ಟ್ರಗಳ ಸೋದರತ್ವದ ಬಗ್ಗೆ ಹಾಗೂ ತನ್ನದಕ್ಕೆ ಮಾತ್ರ ಸರ್ವಾರ್ಪಣೆ ಮಾಡುವ ಘೋರತೆಯ ಬಗ್ಗೆ) ಸತ್ಯವನ್ನು ಸ್ವತಂತ್ರ ವ್ಯಕ್ತಿಗಳು ಧೈರ್ಯದಿಂದಲೂ ಸ್ಪಷ್ಟವಾಗಿಯೂ ಹೇಳುವುದಾದರೆ. ಸರ್ಕಾರದ ಅಧಿಕಾರಕ್ಕೆ ಆಧಾರವೆನಿಸಿದಾಗ ನಿರ್ಜೀವವಾದ. ಅಸತ್ಯವೆನಿಸುವ ಜನಾಭಿಪ್ರಾಯವು ದೇಹದ ಮೃತ ಚರ್ಮದಂತೆ ಸುಲಿದುಹೋಗಿ ಇದಕ್ಕಾಗಿಯೇ ಕಾಯುತ್ತಿರುವ ಹೊಸದೂ ಸಜೀವವೂ ಆದ ಜನಾಭಿಪ್ರಾಯವೂ ಮೂರ್ತಗೊಂಡು ತನ್ನ ಅಶೋತ್ತರ ಗಳನ್ನು ಸ್ಪಷ್ಟವಾಗಿಯೂ ಸಮರ್ಥವಾಗಿಯೂ ಘೋಷಿಸಿ ಮಾನವ ಜನಾಂಗದ ಆತ್ಮ ಪ್ರಜ್ಞೆಗನುಗುಣವಾದ ಹೊಸ ಬಗೆಯ ಜೀವನವನ್ನು ರೂಪಿಸಲು ಸಾಧ್ಯವಾಗುತ್ತದೆ.

## 18

ಜನಾಭಿಪ್ರಾಯವೆಂದು ಘೋಷಿಸಿ. ಅದನ್ನೇ ಸಂಕೀರ್ಣವಾದ ಕಷ್ಟಕರವಾದ ಕೃತಕವಾದ ಸಾಧನಗಳಿಂದ ಪ್ರೋಷಿಸುತ್ತಿರುವುದು ಜನಾಭಿಪ್ರಾಯವಾಗಿರದೆ ಹಿಂದೊಮ್ಮೆ ಆಗಿದ್ದ ಜನಾಭಿಪ್ರಾಯದ ಪಳೆಯುಳಿಕೆಯೆಂದು ಜನರು ಅರಿತರೆ ಸಾಕು. ಅವರಿಗೆ ಬೇಕಾಗಿರುವುದು ಆತ್ಮ ವಿಶ್ವಾಸ: ಅವರ ಹೃದಯದಾಳಗಳಲ್ಲಿ ಹೊಳೆದು ಅಭಿವ್ಯಕ್ತಿಗಾಗಿ ಕಾಯುತ್ತಿದ್ದರೂ ಅದು ಪ್ರಚಲಿತವಾದ ಸಾಮಾಜಿಕ ಮನೋಭಾವಕ್ಕೆ ವಿರುದ್ಧ ವಾದುದರಿಂದ ಹೊರಬರದೆ ಇರುವ ಶಕ್ತಿಯೇ ಜಗತ್ತಿನ ಮಾರ್ಪಾಟನ್ನು ಮಾಡಬಲ್ಲದ್ದು ಎಂಬ ಅರಿವು ಹಾಗೂ ಅಂತಹ ಶಕ್ತಿಗೆ ಮಾತಿನ ರೂಪವನ್ನು ನೀಡಬೇಕಾದುದು ತಮ್ಮ ಕರ್ತವ್ಯವೆಂಬ ಪ್ರಜ್ಞೆ. ಅವರಲ್ಲಿ ಬೇಕಾಗಿರುವುದು ತಮ್ಮ ಸುತ್ತಲಿನ ಜನರು ಹೇಳು ವುದರಲ್ಲಿ ಸತ್ಯವು ಅಡಗಿಲ್ಲ, ಸತ್ಯವು ನೆಲೆಗೊಂಡಿರುವುದು ತಮ್ಮ ಆತ್ಮಪ್ರಜ್ಞೆಯು, ಎಂದರೆ ದೇವರು. ಪ್ರೇರಿಸುತ್ತಿರುವುದರಲ್ಲಿ ಎಂಬ ಅರಿವು. ಹೀಗಾದರೆ ಜೊಗಳೆಯೂ ಕೃತಕವಾದುದೂ ಆದ ಜನಾಭಿಪ್ರಾಯವು ಕಣ್ಮರೆಯಾಗಿ ನಿಜವಾದ ಜನಾಭಿಪ್ರಾಯವು ನೆಲೆಗೊಳ್ಳುತ್ತದೆ.

ಜನರು ತಮಗನ್ನಿಸಿದ್ದನ್ನು ಮಾತ್ರ ಹೇಳಿ ತಮಗನ್ನಿಸದುದರ ಬಗ್ಗೆ ಏನನ್ನೂ ಹೇಳದಿದ್ದರೆ ಸಾಕು. ರಾಷ್ಟ್ರಪ್ರೇಮದಿಂದುಂಟಾದ ಎಲ್ಲ ಮೂಢ ನಂಬಿಕೆಗಳೂ. ಅದರ ಮೇಲೆ ನಿಂತ ಎಲ್ಲ ವೈಮನಸ್ಯ ಹಾಗೂ ಹಿಂಸಾಬುದ್ಧಿಗಳೂ ಕ್ಷಣಮಾತ್ರದಲ್ಲಿ ಕ್ಷೀಣಿಸುತ್ತವೆ. ರಾಷ್ಟ್ರ–ರಾಷ್ಟ್ರಗಳ ನಡುವಣ ದ್ವೇಷಭಾವ. ಅದಕ್ಕೆ ತುಪ್ಪವೆರೆಯುವ ಸರ್ಕಾರಗಳು ನಶಿಸುತ್ತವೆ, ಅಂತೆಯೇ ಯುದ್ಧ ಹಾಗೂ ಅಂತಹ ಕೊಲೆಗಾರಿಕೆಯನ್ನು ಶ್ರೇಷ್ಠವೆಂದು ಬಗೆಯುವುದೂ ನಿಲ್ಲುತ್ತದೆ: ಎಲ್ಲಕ್ಕಿಂತ ಮಿಗಿಲಾಗಿ ಅಧಿಕಾರಾರೂಢರ ಬಗ್ಗೆ ಗೌರವ-ಗುಲಾಮ ಬುದ್ಧಿಗಳು ಕೊನೆಗೊಂಡು. ಅವರಿಗೆ ತಮ್ಮ ಶ್ರಮದ ಫಲವನ್ನೆಲ್ಲ ಅರ್ಪಿಸುವುದು ನಿಲ್ಲುತ್ತದೆ ಏಕೆಂದರೆ ಇವೆಲ್ಲವೂ ರಾಷ್ಟ್ರಪ್ರೇಮವಿಲ್ಲದಿದ್ದರೆ ಗಾಳಿಯಗೋಪುರಗಳು.

ಇಷ್ಟಾದರೆ. ಬಾಹ್ಯಪ್ರಭಾವಗಳಿಗೆ ಬೇಗ ಒಳಗಾಗುವ ಅಸಂಖ್ಯ ಜನಸಾಮಾನ್ಯರು ಹೊಸ ಜನಾಭಿಪ್ರಾಯದೆಡೆ ಕ್ಷಣಮಾತ್ರದಲ್ಲಿ ಒಲಿಯುತ್ತಾರೆ. ಆಗ ಹಳೆಯದರ ಸ್ಥಾನದಲ್ಲಿ ಹೊಸ ಜನಾಭಿಪ್ರಾಯವು ವಿರಾಜಿಸುತ್ತದೆ.

ಸರ್ಕಾರಿ ಶಾಲೆಗಳು, ಚರ್ಚ್. ಪತ್ರಿಕಾವೃಂದ. ಕೋಟ್ಯಂತರ ಹಣ. ಲಕ್ಷಾಂತರ ಯಾಂತ್ರೀಕೃತರಾದ ಶಿಸ್ತಿನ ಸಿಪಾಯಿಗಳು ಇವೆಲ್ಲದರ ಮೇಲೆ ನಿಯಂತ್ರಣವನ್ನು ಪಡೆದಿರಬಹುದು. ಆದರೆ ಈ ಭಯಂಕರ ಸಂಘಟನೆಯೆಲ್ಲವೂ ಸತ್ಯಪ್ರಜ್ಞೆಯ ಮುಂದೆ ಶೂನ್ಯವಾಗುತ್ತದೆ. ಏಕೆಂದರೆ ಸತ್ಯವು ಅದರ ಶಕ್ತಿಯನ್ನರಿತವನ ಹೃದಯದಿಂದ ಸ್ಫುರಣಗೊಂಡು ಅವನಿಂದ ಇತರರಿಗೆ ತಿಳಿಸಲ್ಪಟ್ಟು ಒಂದು ದೀಪದಿಂದ ಅಸಂಖ್ಯಾತ ದೀಪಗಳು ಪ್ರಜ್ವಲಿಸುವಂತೆ ಹರಡುತ್ತದೆ. ಈ ಜ್ಯೋತಿಯನ್ನು ಹತ್ತಿಸುವುದು ಮಾತ್ರ ನಡೆಯಬೇಕಾದ ಕೆಲಸ. ಅನಂತರ ವಿರಾಟ್ ಶಕ್ತಿಯಂತೆ ಗೋಚರಿಸುವ ಸಂಘಟನೆಯೆಲ್ಲವೂ ಉರಿಯುಂಡ ಕರ್ಪೂರದಂತೆ ಕರಗಿ ಹೋಗುತ್ತದೆ. ಕಣ್ಮರೆಯಾಗುತ್ತದೆ.

ಸತ್ಯವನ್ನು ಅಭಿವ್ಯಕ್ತಿಗೊಳಿಸುವ ಮಾತುಗಳಲ್ಲಿ ಅಡಕವಾದ ಶಕ್ತಿಯ ಸ್ವರೂಪವನ್ನು ಜನರು ತಿಳಿದರೆ. ತಮ್ಮ ಜನ್ಮ ಸಿದ್ಧ ಹಕ್ಕನ್ನು ಬೊಗಸೆ ಅಂಬಲಿಗಾಗಿ ತ್ಯಜಿಸದಿದ್ದರೆ, ತಮ್ಮ ಶಕ್ತಿಯನ್ನವರು ಉಪಯೋಗಿಸಿದರೆ ಅವರನ್ನಾಳುವವರು ಈಗಿನಂತೆ ತಮಗೆ ಬೇಕಾದ ಹಾಗೆ ಜನರನ್ನು ಸಾರ್ವತ್ರಿಕ ಕೊಲೆಯಲ್ಲಿ ಮುಳುಗಲು ಅಥವಾ ಮುಳುಗದಿರುವಂತೆ ಹೆದರಿಸಲು ಸರ್ಕಾರವು ಧೈರ್ಯಮಾಡಲಾರದು. ಶಾಂತ ಜನತೆಯ ಮುಂದೆ ತನ್ನ ಯೋಜನಾಬದ್ಧ ಕೊಲೆಗಳ ಬಗ್ಗೆ. ತಂತ್ರಗಳ ಬಗ್ಗೆ ಮಾತಾಡುವುದಕ್ಕೂ ಧೈರ್ಯ ಮಾಡಲಾರದು....ಆಗ ಸ್ವಾರ್ಥದಿಂದ. ತಮ್ಮ ಜೇಲಿಗೆ ದೂಡುವುದಕ್ಕೂ ಕೊಲೆಗಳ ಸಿದ್ಧತೆಗೂ ಜನರಿಂದ ಲಕ್ಷಾಂತರ ರೂಬಲ್‌ಗಳನ್ನು ಸಂಗ್ರಹಿಸುವುದಾಗಲೀ ಮಾಡುವುದಿಲ್ಲ.

ಆದ್ದರಿಂದ ಈ ಪರಿಸ್ಥಿತಿಯಲ್ಲಿ ಬದಲಾವಣೆಯು ಸಾಧ್ಯ ಮಾತ್ರವಲ್ಲ ಅನಿವಾರ್ಯ. ಬದಲಾವಣೆಯಾಗದಿರುವುದು ಕೊರಡು ಕೊನರುವಂತೆ ಅಸಾಧ್ಯ. ಬದಲಾವಣೆಯಾಗುವುದು ಸಸಿಯು ಬೆಳೆಯುವಂತೆ ಅನಿವಾರ್ಯ.

'ನಿಮ್ಮೊಡನೆ ಶಾಂತಿಯನ್ನು ನೆಲೆಗೊಳಿಸುತ್ತೇನೆ: ನನ್ನ ಶಾಂತಿಯನ್ನು ನಿಮಗೆ ನೀಡುತ್ತೇನೆ. ನಿಮ್ಮ ಹೃದಯಗಳು ಘಾಸಿಗೊಳ್ಳದಿರಲಿ, ಭೀತಿಗ್ರಸ್ತವಾಗದಿರಲಿ' ಎಂದು ಕ್ರಿಸ್ತನು ಹೇಳಿದ. ಆ ಶಾಂತಿಯು ನಮ್ಮ ಬಳಿಯೇ ಇದೆ, ಆದರೆ ಅದನ್ನು ಪಡೆಯುವುದು ನಮ್ಮನ್ನವಲಂಬಿಸಿದೆ.

ಜನರು ತಮ್ಮನ್ನು ಪ್ರತಿಕ್ಷಣವೂ ಮರುಳುಗೊಳಿಸುವ ಆಮಿಷಕ್ಕೆ ಒಳಗಾಗದೆ, ತಮ್ಮನ್ನು ಹೆದರಿಸುವ ಕಲ್ಪನೆಯ ಭೀಕರತೆಗೆ ಒಳಗಾಗದೆ ಇದ್ದಿದ್ದರೆ, ತಮ್ಮ ಪ್ರಬಲ ಹಾಗೂ ಸರ್ವಜಿತು ಶಕ್ತಿಯು ಯಾವುದರಲ್ಲಡಗಿದೆ ಎಂಬುದನ್ನು ಕಂಡುಕೊಂಡಿದ್ದರೆ, ಅವರು ಬಯಸಿದ ಶಾಂತಿಯು ಬಹು ಹಿಂದೆಯೇ ಸ್ಥಾಪಿತವಾಗಬೇಕಾಗಿತ್ತು. ಆದರೆ ಈ ಶಾಂತಿಯು ರಾಜತಾಂತ್ರಿಕ ಒಪ್ಪಂದಗಳಿಂದ ಸ್ಥಾಪಿಸಿದುದಲ್ಲ. ರಾಜಮಹಾರಾಜರುಗಳು ಒಂದೆಡೆಯಿಂದ ಒಂದೆಡೆಗೆ ಸಂದರ್ಶನ ನೀಡಿದ್ದರಿಂದ ಉಂಟಾದುದಲ್ಲ. ಔತಣಗಳು, ಭಾಷಣಗಳು, ಕೋಟೆಕೊತ್ತಲಗಳು, ಶಸ್ತ್ರಾಸ್ತ್ರಗಳು, ಸಿಡಿಮದ್ದುಗಳು – ಇವುಗಳಿಂದ ಸಂಪಾದಿಸಿದುದಲ್ಲ, ಜನರನ್ನು ತೆರಿಗೆಯಿಂದ ಮುಚ್ಚಿ ರಾಷ್ಟ್ರವೆಂಬ ಕುಸುಮವನ್ನು ಕೆಲಸವಿಲ್ಲದೆ ಪತಿತಗೊಳಿಸುವುದರಿಂದ ಬಂದದ್ದಲ್ಲ. ಈ ಶಾಂತಿಯು ಪ್ರತಿಯೊಬ್ಬನೂ ಸ್ವತಂತ್ರನಾಗಿ ಸತ್ಯಪ್ರತಿಪಾದನೆ ಮಾಡುವುದರಿಂದ ಉಂಟಾಗುವಂಥದು.

[ಮಾರ್ಚ್ 17, 1894.]

# ದೇಶಪ್ರೇಮ ಮತ್ತು ಸರ್ಕಾರ

"ಒಬ್ಬ ವ್ಯಕ್ತಿಯನ್ನು ದೇಶಪ್ರೇಮಿಯೆಂದು ಕರೆಯುವುದು. ಅತನಿಗೆ ನೀವು ಮಾಡಬಹುದಾದ ಘೋರ ಅಪಮಾನವೆಂದು ಪರಿಗಣಿಸಬಹುದಾದ ಕಾಲ ಹತ್ತಿರ ಬರುತ್ತಿದೆ. ದೇಶಪ್ರೇಮವೆಂದರೆ. ಈಗ ಇರುವ ಅರ್ಥದ ಪ್ರಕಾರ–ಪಟ್ಟಭದ್ರ ಹಿತಾಸಕ್ತ ವರ್ಗದವರಿಗೆ ಅನುಕೂಲವಾಗುವಂತೆ. ನಾವು ಹುಟ್ಟಿರುವ ನಿರ್ದಿಷ್ಟ ದೇಶವೊಂದರ ವ್ಯವಸ್ಥೆಯನ್ನು ಕೊಳ್ಳೆ ಹೊಡೆಯುವ ಅವಕಾಶವೇ ಆಗಿದೆ".

—ಇ. ಬೆಲ್‌ಫೋರ್ಟ್ ಬಾಕ್ಸ್.

## I

ದೇಶಪ್ರೇಮವೆನ್ನುವುದು ಅಸಹಜವಾದ, ಅವಿವೇಕದಿಂದ ಕೂಡಿದ ಅಪಾಯಕಾರಿ ಭಾವನೆಯಾಗಿದೆಯೆಂಬ ವಿಚಾರವನ್ನು ನಾನು ಈಗಾಗಲೇ ಹಲವುಬಾರಿ ವ್ಯಕ್ತಪಡಿಸಿದ್ದೇನೆ. ಮಾನವ ಜನಾಂಗವು ಅನುಭವಿಸುತ್ತಿರುವ ಬಹುಪಾಲು ಕಷ್ಟಗಳಿಗೆ ಇದು ಕಾರಣವಾಗಿದೆಯಾದುದರಿಂದ ಈ ಭಾವನೆಯನ್ನು ಬೆಳೆಸಬಾರದು ಮಾತ್ರವಲ್ಲ. ಸಧ್ಯದ ಪರಿಸ್ಥಿತಿಯಲ್ಲಿ ಅದನ್ನು ದಮನಗೊಳಿಸಬೇಕು: ವಿವೇಕಯುತವಾದ ಎಲ್ಲ ಮಾರ್ಗಗಳಿಂದಲೂ ತೊಡೆದುಹಾಕಿ ಬಿಡಬೇಕು. ಈ ಒಂದು ಭಾವನೆಯ ಪರಿಣಾಮವಾಗಿಯೇ ಮಹಾಯುದ್ಧಗಳೂ ಮತ್ತು ವಿಶ್ವದಾದ್ಯಂತ ಸಂಗ್ರಹಿಸಲಾಗುತ್ತಿರುವ ಮಾರಕಾಸ್ತ್ರಗಳೂ ಜನಗಳನ್ನು ನಾಶಗೊಳಿಸುತ್ತಿವೆ. ನನ್ನ ಎಲ್ಲ ವಾದಗಳೂ ಈ ಭಾವನೆಯು ಪ್ರಗತಿಪರವಲ್ಲದ, ಅಸಂಬದ್ಧವಾದ ಅಪಾಯವನ್ನೇ ಎತ್ತಿ ತೋರಿಸುತ್ತಿವೆ. ಆಶ್ಚರ್ಯವೆಂದರೆ ನನ್ನ ಅಭಿಪ್ರಾಯಗಳನ್ನು ಇಲ್ಲವೇ ಮೌನವಾಗಿ ಸ್ವೀಕರಿಸಲಾಗುತ್ತಿದೆ ಅಥವಾ ಬುದ್ಧಿಪೂರ್ವಕವಾಗಿ ತಪ್ಪುವ್ಯಾಖ್ಯಾನ ಮಾಡಲಾಗುತ್ತಿದೆ. ಇನ್ನೂ ವಿಚಿತ್ರವಾಗಿರುವ ಉತ್ತರವೆಂದರೆ– ಹೀನವಾದ ರೀತಿಯ ದೇಶಪ್ರೇಮ ಮಾತ್ರ ಅನಿಷ್ಟಕಾರಕವೆಂದೂ. ನಿಜವಾದ ಉತ್ತಮ ದೇಶಪ್ರೇಮವೆಂಬುದು ಉನ್ನತವಾದ ನೀತಿಯುಕ್ತ ಭಾವನೆಯೆಂದೂ. ಅವಿವೇಕ ಮತ್ತು ದುಷ್ಟತನಗಳನ್ನು ಖಂಡಿಸುವುದೆಂದೂ ಹೇಳಲಾಗುತ್ತಿದೆ.

ಈ ನಿಜವಾದ ಉತ್ತಮ ದೇಶಪ್ರೇಮ ಯಾವುದರಿಂದ ನಿರ್ಯೋಜಿಸಲ್ಪಡುತ್ತಿದೆಯೆಂಬುದನ್ನು ಮಾತ್ರ ನಮಗೆ ಯಾವತ್ತೂ ಹೇಳುವುದಿಲ್ಲ. ಏನಾದರೂ ಹೇಳಿದ್ದರೆ, ಅದು ಅಲಂಕಾರಿಕವಾದ ಅತ್ಯುಕ್ತಿಯಿಂದ ಕೂಡಿದ ಮಾತಿನ ಜೋಡಣೆಯಾಗಿರುತ್ತದೆ; ವಿವರಣೆಗೆ ಪ್ರತಿಯಾಗಿ ಭಾವನೆಯನ್ನು (Conception) ಮುಂದಿಡಲಾಗುತ್ತದೆ.

ಈ ಭಾವನೆಗೂ ನಾವು ಯಾವ ಬಗೆಯ ದೇಶಪ್ರೇಮದಿಂದ ಉಗ್ರವಾಗಿ ನರಳುತ್ತಿರುವೆವೋ ಅದಕ್ಕೂ ಯಾವುದೇ ರೀತಿಯ ಹೊಂದಾಣಿಕೆಯಿರುವುದಿಲ್ಲ.

ನಿಜವಾದ ಉತ್ತಮ ದೇಶಪ್ರೇಮವೆನ್ನುವುದು, ತನ್ನ ಜನಗಳ ಹಿತವನ್ನು ಉಳಿದ ದೇಶಗಳ ಕ್ಷೇಮಕ್ಕೆ ಕೆಡುಕಾಗದಂತೆ ಆಶಿಸುವುದರಲ್ಲಿಯೇ ಮಗ್ನವಾಗಿರುತ್ತದೆಯೆಂದು ಹೇಳುವುದುಂಟು.

ಇತ್ತೀಚೆಗೆ ಇಂಗ್ಲೆಂಡಿನ ಒಬ್ಬ ವ್ಯಕ್ತಿಯೊಡನೆ ನಾನು ಮಾತನಾಡುತ್ತಿದ್ದಾಗ ಈಗ ನಡೆಯುತ್ತಿರುವ ಯುದ್ಧದ[1] ವಿಚಾರವನ್ನು ಪ್ರಸ್ತಾಪಿಸಿದೆ. ಯುದ್ಧಕ್ಕೆ ನಿಜವಾದ ಕಾರಣ. ಎಲ್ಲರೂ ಭಾವಿಸಿರುವಂತೆ ವೈರವಾಗಿರದೆ. ಇಂಗ್ಲಿಷ್ ಸಮಾಜವು ವ್ಯಕ್ತಪಡಿಸುತ್ತಿರುವ ಅತೀವ ದೇಶಪ್ರೇಮ. ಎಂದು ನಾನು ಹೇಳಿದೆ. ಆತ ಒಪ್ಪಲಿಲ್ಲ. ಅದು ನಿಜವಾಗಿದ್ದರೆ. ಈಗ ಇಂಗ್ಲಿಷ್ ಜನಗಳನ್ನು ಪ್ರೇರಿಸುತ್ತಿರುವುದು ಕೆಟ್ಟ ದೇಶಪ್ರೇಮವೆಂದ: ಆದರೆ. ತನಗೆ ಸ್ಫೂರ್ತಿದಾಯಕವಾಗಿರುವ ಉತ್ತಮ ದೇಶಪ್ರೇಮವನ್ನನುಸರಿಸಿದರೆ ಇಂಗ್ಲಿಷ್ ಜನಗಳು ಸರಿಯಾಗಿ ನಡೆದುಕೊಳ್ಳುತ್ತಾರೆ ಎಂದು ಭಾವಿಸಿದ.

"ಹಾಗಾದರೆ ಇಂಗ್ಲಿಷ್ ಪ್ರಜೆಗಳು ಮಾತ್ರ ಸರಿಯಾಗಿ ವರ್ತಿಸಬೇಕೆಂದು ನೀವು ಹಾರೈಸುತ್ತೀರಾ" – ಎಂದು ಪ್ರಶ್ನಿಸಿದೆ. "ನಾನು ಎಲ್ಲ ಜನಾಂಗವೂ ಸರಿಯಾಗಿ ವರ್ತಿಸಬೇಕೆಂದು ಹಾರೈಸುತ್ತೇನೆ" - ಎಂದು ಆತ ಉತ್ತರಿಸಿದ. ಈ ಉತ್ತರವು ಸ್ಪಷ್ಟಪಡಿಸಿದ ಅಂಶವೆಂದರೆ, ನಿಜವಾದ ಲಾಭವು. – ಅದು ನೈತಿಕವಿರಲಿ. ವೈಜ್ಞಾನಿಕವಿರಲಿ ಅಥವಾ ಪ್ರಾಪಂಚಿಕ ಮತ್ತು ವ್ಯಾವಹಾರಿಕವಿರಲಿ – ಎಲ್ಲ ಜನಾಂಗವನ್ನೂ ಒಳಗೊಳ್ಳುತ್ತದೆ. ಆದರೆ ಈ ಬಗೆಯ ಪ್ರಯೋಜನವನ್ನು ಎಲ್ಲರಿಗೂ ಹಾರೈಸುವುದು. ದೇಶಪ್ರೇಮವೆನಿಸುವುದಿಲ್ಲ, ಮಾತ್ರವಲ್ಲ. – ಅದಕ್ಕೆ ತದ್ವಿರುದ್ಧವಾಗಿದೆ.

ಪ್ರತಿಯೊಬ್ಬ ವ್ಯಕ್ತಿಯ ವೈಚಿತ್ರ್ಯಗಳೂ ದೇಶಪ್ರೇಮವನ್ನು ವ್ಯವಸ್ಥೆಗೊಳಿಸುವುದಿಲ್ಲ. ದೇಶಪ್ರೇಮವಾದಿಗಳೇನೋ ಉದ್ದೇಶಪೂರ್ವಕವಾಗಿ ಈ ಭಾವನೆಯ ಆದೇಶವನ್ನೇ ಸೂಚಿಸುತ್ತಾರೆ. ಮಾನವನ ಪ್ರಗತಿಗೆ ವ್ಯಕ್ತಿ ವೈಚಿತ್ರ್ಯಗಳು ಅಗತ್ಯವಾದ ಗುಣಗಳೆಂದೂ. ದೇಶಪ್ರೇಮವಾದರೋ. ಈ ವೈಚಿತ್ರ್ಯಗಳನ್ನೇ ಉಳಿಸಿಕೊಳ್ಳಬೇಕೆನ್ನುವುದರಿಂದ. ಪ್ರಯೋಜನಕಾರಿಯಾದ ಉತ್ತಮ ಭಾವನೆಯೆಂದೂ ಅವರು ಹೇಳುತ್ತಾರೆ. ಒಂದಾನೊಂದು ಕಾಲದಲ್ಲಿ ಈ ವ್ಯಕ್ತಿವೈಚಿತ್ರ್ಯಗಳು – ಸಂಪ್ರದಾಯ. ಮತ. ಭಾಷೆಗಳು – ಮಾನವನ ಇರುವಿಕೆಗೆ ಅಗತ್ಯವಾಗಿದ್ದುವು. ಆದರೆ ನಮ್ಮ ಕಾಲದಲ್ಲಿ ಒಪ್ಪಿಕೊಂಡಿರುವ ಆದರ್ಶವಾದ. ಮಾನವಜನಾಂಗಗಳ ನಡುವೆ ಸೋದರ ಭಾವವನ್ನು ಸ್ಥಾಪಿಸುವಲ್ಲಿ, ಇವುಗಳು ಮುಖ್ಯವಾದ ಅಡ್ಡಿಗಳಾಗಿ ಪರಿಣಮಿಸಿವೆಯೋ? – ಎಂಬುದಿನ್ನೂ ಸ್ಪಷ್ಟ

[1] ದಕ್ಷಿಣ ಆಫ್ರಿಕಾದ ಯುದ್ಧ 1899—1902

ಗೊಳ್ಳಬೇಕಾಗಿದೆ. ಆದುದರಿಂದ–ರಷ್ಯ, ಜರ್ಮನಿ, ಫ್ರೆಂಚ್ ಅಥವಾ ಆಂಗ್ಲೋ ಸ್ಯಾಕ್ಸನ್ ಜನಾಂಗಗಳ ರಾಷ್ಟ್ರೀಯತೆಯನ್ನು ರಕ್ಷಿಸಿಕೊಳ್ಳುವುದು ಮತ್ತು ಉಳಿಸಿಕೊಳ್ಳುವುದು, ಹಂಗರಿ, ಪೋಲಿಷ್ ಮತ್ತು ಐರಿಷ್ ಜನಾಂಗಗಳ ಹಾಗೂ ಬಾಸ್ಕ್, ಪ್ರೊವೆಂಚಲ್, ಮೊರ್ದ್ವಾ[2] ಜನಾಂಗಗಳ ರಾಷ್ಟ್ರೀಯತೆಗೆ ಧಕ್ಕೆ ತರುತ್ತದೆ, ಇದರಿಂದ ಮಾನವರ ನಡುವೆ ಸಾಮರಸ್ಯ ಮತ್ತು ಐಕ್ಯತೆಗಳನ್ನು ಸಾಧಿಸುವುದಕ್ಕಿಂತ ಅವರನ್ನು ಮತ್ತೂ ಹೆಚ್ಚಾಗಿ ಛಿದ್ರಗೊಳಿಸಿ ಅಗಲಿಸಲಾಗುತ್ತದೆ.

ಇಂದು ಬಹುಪಾಲು ಜನಗಳು ಪ್ರಭಾವಗೊಂಡಿರುವುದು ಊಹಾತ್ಮಕ ದೇಶಪ್ರೇಮದಿಂದಾಗಿರದೆ ನಮ್ಮೆಲ್ಲರಿಗೂ ಪರಿಚಿತವಿರುವ ನಿಜವಾದ ದೇಶಪ್ರೇಮದಿಂದ. ಯಾವುದರಿಂದ ಮಾನವ ಜನಾಂಗ ಇಷ್ಟೊಂದು ತೀವ್ರವಾಗಿ ಸಂಕಟಪಡುತ್ತಿದೆಯೋ, ಅದಕ್ಕೆ ಕಾರಣ, ಕೇವಲ ತಮ್ಮ ಜನಗಳ ಆತ್ಮೋದ್ಧಾರದ ಬಯಕೆಯಾಗಿರದೆ, ತಮ್ಮ ದೇಶ ಅಥವಾ ಜನಗಳನ್ನು ಇನ್ನುಳಿದ ಎಲ್ಲ ದೇಶ ಮತ್ತು ಜನಗಳಿಗಿಂತ ಹೆಚ್ಚು ಖಚಿತವಾದ ಅಭಿಮಾನದಿಂದ ಪರಿಗಣಿಸುವುದೇ ಆಗಿದೆ. ಇದರ ಪರಿಣಾಮವಾಗಿ ಅನ್ಯದೇಶದ ಜನಗಳ ಅವಕಾಶ ಮತ್ತು ಅಧಿಕಾರಗಳ ಬೆಲೆ ತೆತ್ತು, ತಮ್ಮ ದೇಶದ ಜನಗಳಿಗೆ ಅತ್ಯುತ್ತಮ ಅವಕಾಶ ಮತ್ತು ಅಧಿಕಾರಗಳನ್ನು ಪಡೆಯಬಹುದಾಗಿದೆ.

ಆದುದರಿಂದ, ಒಂದು ಭಾವನೆಯಾಗಿ ದೇಶಪ್ರೇಮವೆನ್ನುವುದು ಅಪಾಯಕಾರಿಯೆಂದೂ ಮತ್ತು ಒಂದು ಸಿದ್ಧಾಂತವಾಗಿ ಮೂರ್ಖತನದ್ದೆಂದೂ ನಿಸ್ಸಂಶಯವಾಗಿ ಹೇಳಬಹುದು. ಏಕೆಂದರೆ, ಒಬ್ಬೊಬ್ಬ ವ್ಯಕ್ತಿ ಮತ್ತು ದೇಶಗಳೂ, ಇನ್ನುಳಿದ ವ್ಯಕ್ತಿ ಮತ್ತು ದೇಶಗಳಿಗಿಂತ ತಾವೇ ಶ್ರೇಷ್ಠರೆಂದು ಭಾವಿಸಿಕೊಂಡರೆ, ಅವರು ಬದುಕುತ್ತಿರುವುದು ಅಪಾಯಕಾರಿ ಭ್ರಮೆಯ ಲೋಕದಲ್ಲಿ ಎನ್ನುವುದು ಅತಿ ಸ್ಪಷ್ಟವಾದ ವಿಚಾರವಾಗಿದೆ.

## 2

ದೇಶಪ್ರೇಮದಿಂದಾಗುವ ಕೆಡಕು ಮತ್ತು ಅವಿವೇಕಗಳು ಎಲ್ಲರಿಗೂ ಸ್ಪಷ್ಟವಾಗಿವೆಯೆಂದು ನಿರೀಕ್ಷಿಸಬಹುದಾದರೂ ಸುಸಂಸ್ಕೃತರು ಮತ್ತು ವಿದ್ಯಾವಂತರೇ ಇದನ್ನು ಗಮನಿಸುತ್ತಿಲ್ಲವೆಂಬುದು ಆಶ್ಚರ್ಯಕರ ಸಂಗತಿಯಾಗಿದೆ. ದೇಶಪ್ರೇಮದ ನಿಜಸ್ವರೂಪ ಬಯಲಾಗುವುದನ್ನು ಅವರು ಹಟವಾದಿಗಳಂತೆ ಪಟ್ಟುಹಿಡಿದು ವಿರೋಧಿಸುತ್ತಾರೆ. ಅವರ ವಾದಕ್ಕೆ ವಿವೇಕದ ತಳಹದಿಯಿಲ್ಲದಿದ್ದರೂ ಸಹ ಈ ಭಾವನೆ ಉನ್ನತವಾದುದೆಂದು ಹೊಗಳುತ್ತಾರೆ.

---

2 ಮಧ್ಯ ವೋಲ್ಗಾ ಪ್ರದೇಶದಲ್ಲಿ ನೆಲೆಸಿರುವ, ಫಿನ್ನಿಷ್ ಬುಡಕಟ್ಟಿಗೆ ಸೇರುವ ಜನಾಂಗ

ಇದರ ಅರ್ಥವೇನು?—ತನಗೆ ತಾನೇ ಗೋಚರವಾಗುವ ಒಂದು ವಿವರಣೆಯನ್ನು ಮಾತ್ರ ಈ ವಿಸ್ಮಯಕಾರಿ ಸಂಗತಿಯನ್ನು ಕುರಿತು ಕೊಡಬಹುದಾಗಿದೆ.

ಪ್ರಾಚೀನ ಮತ್ತು ಸಮಕಾಲೀನವೆಂಬ ಎಲ್ಲ ಕಾಲದ ಮಾನವಜನಾಂಗದ ಇತಿಹಾಸವನ್ನು ಗಮನಿಸಿದರೆ, ವ್ಯಕ್ತಿ ಮತ್ತು ಸಮುದಾಯಗಳೆರಡೂ ಕೆಳದರ್ಜೆಯ ಕಲ್ಪನೆ (Idea) ಗಳಿಂದ ಉದಾತ್ತ ಕಲ್ಪನೆಗಳತ್ತ ಪ್ರಜ್ಞಾಪೂರ್ವಕವಾಗಿ ಮುನ್ನಡೆಯುತ್ತಿರುವದನ್ನು ಗುರುತಿಸಬಹುದಾಗಿದೆ. ಕೆಳದರ್ಜೆಯ ಪ್ರಾಣಿಜೀವನದಿಂದ, ಅತ್ಯುಚ್ಚ ಸಾಧನೆಯಾದ ಮಾನವನ ಜಾಗೃತಾವಸ್ಥೆಯವರೆಗೆ ಅನುಕ್ರಮವಾಗಿ ಮೇಲೆ ಏರುತ್ತಿರುವ ಹೆಜ್ಜೆ ಗುರುತುಗಳನ್ನು, ವ್ಯಕ್ತಿ ಮತ್ತು ಸಮುದಾಯಗಳೆರಡೂ ಪಯಣಿಸಿರುವ ಹಾದಿಯಲ್ಲಿ ಕರಾರುವಾಕ್ಕಾಗಿ ತೋರಿಸಬಹುದಾಗಿದೆ.

ಪ್ರತಿಯೊಬ್ಬ ವ್ಯಕ್ತಿಯೂ, ಪ್ರತ್ಯೇಕವಾದ ಸಮುದಾಯದಂತೆ ಅಥವಾ ದೇಶದಂತೆ ಪರಿಪೂರ್ಣ ಕಲ್ಪನೆಯ ನಿಚ್ಚಣಿಗೆಯ ಮೂಲಕ ಮೇಲೇರುತ್ತಿದ್ದಾನೆ. ಮಾನವ ಜನಾಂಗದ ಕೆಲವು ಭಾಗ ಮುಂಚೂಣಿಯಲ್ಲಿದ್ದರೆ, ಕೆಲವರು ಹಿಂದುಳಿದಿದ್ದಾರೆ; ಬಹುಸಂಖ್ಯಾತ ವರ್ಗದವರು, ಮುಂದುವರಿದವರ ಮತ್ತು ಅತಿ ಹಿಂದುಳಿದವರ ನಡುವೆ ಸೇರಿ ಹೆಜ್ಜೆಹಾಕುತ್ತಿದ್ದಾರೆ. ಯಾರು ಯಾವ ನೆಲೆಯಲ್ಲಿಯೇ ಇರಲಿ, ಎಲ್ಲರೂ ತಪ್ಪದೆ, ಪ್ರತಿಘಟಿಸದೆ, ಕೆಳದರ್ಜೆಯ ಕಲ್ಪನೆಗಳಿಂದ ಉದಾತ್ತ ಕಲ್ಪನೆಗಳತ್ತ ಮುಂದುವರಿಯುತ್ತಿದ್ದಾರೆ.

ಪ್ರತಿಯೊಬ್ಬ ವ್ಯಕ್ತಿ ಮತ್ತು ಸಮುದಾಯಗಳು, ಎಲ್ಲ ಕಾಲದಲ್ಲಿಯೂ ಸ್ಪಷ್ಟವಾಗಿ ಉತ್ತಮ, ಮಧ್ಯಮ, ಅಧಮ—ಎಂಬ ಮೂರು ಪ್ರತ್ಯೇಕವಾದ ನೆಲೆಗಳಲ್ಲಿರುವುದನ್ನು ಕಾಣಬಹುದಾಗಿದೆ. ಈ ಮೂವರ ಪರಸ್ಪರ ಸಂಬಂಧಗಳು ಅವರಿರುವ ಆಯಾ ನೆಲೆಗಳ ಕಲ್ಪನೆಗನುಸಾರವಾಗಿಯೇ ನಿರ್ಧಾರವಾಗುತ್ತವೆ.

ಎಲ್ಲ ಕಾಲದಲ್ಲಿಯೂ, ವ್ಯಕ್ತಿ ಮತ್ತು ವಿವಿಧ ಸಮುದಾಯಕ್ಕೆ ಸೇರಿದ ಜನಗಳಿಗೆ ಸವೆದುಹೋದ ಭೂತಕಾಲದ ಕಲ್ಪನೆಗಳಿರುತ್ತವೆ. ಈ ಕಲ್ಪನೆಗಳು ಅವರಿಗೆ ಅಪರಿಚಿತವಾಗಿ ಕಂಡುಬಂದರೂ ಪೂರ್ವಸ್ಥಿತಿಗೆ ಹಿಂದಿರುಗುವಂತಿಲ್ಲ. ಕ್ರೈಸ್ತ ಜಗತ್ತಿನಿಂದಲೇ ಉದಾಹರಿಸುವುದಾದರೆ—ನರಭಕ್ಷಣೆಯ ಕಲ್ಪನೆ, ಸಾರ್ವತ್ರಿಕ ಸುಲಿಗೆಯ ಕಲ್ಪನೆ, ಹೆಣ್ಣುಗಳನ್ನು ಬಲಾತ್ಕರಿಸುವ ಕಲ್ಪನೆಗಳು ಕೇವಲ ದಾಖಲೆಗಳಾಗಿ ಉಳಿದಿವೆ.

ಇನ್ನು ವರ್ತಮಾನದ ಕಲ್ಪನೆಗಳಿವೆ: ವಿದ್ಯೆಯ ಮೂಲಕ ಉದಾಹರಣೆಗಳಿಂದ ಮತ್ತು ಸುತ್ತಮುತ್ತ ನಡೆಯುತ್ತಿರುವ ಚಟುವಟಿಕೆಗಳಿಂದ. ಈ ಕಲ್ಪನೆಗಳು ಮನುಷ್ಯನ ಮನಸ್ಸನ್ನು ತುಂಬಿಕೊಳ್ಳುತ್ತವೆ. ನಿರ್ದಿಷ್ಟವಾದ ಕಾಲವೊಂದರಲ್ಲಿ ಬದುಕುವ ಶಕ್ತಿಯನ್ನು ಮನುಷ್ಯ ಪಡೆಯುವುದು ಈ ಕಲ್ಪನೆಗಳ ಆಶ್ರಯದಲ್ಲಿಯೇ ಆಗಿದೆ. ಉದಾಹರಣೆಗೆ,

ನಮ್ಮ ಕಾಲದಲ್ಲಿಯೇ ಇರುವ ಆಸ್ತಿಯನ್ನು ಕುರಿತ ಕಲ್ಪನೆ. ದೇಶದ ವ್ಯವಸ್ಥೆ. ವ್ಯಾಪಾರ. ಪಳಗಿಸಿದ ಪ್ರಾಣಿಗಳ ಬಳಕೆ–ಇತ್ಯಾದಿಯಾಗಿ ಗುರುತಿಸಬಹುದು.

ಭವಿಷ್ಯಕಾಲದ ಕಲ್ಪನೆಗಳೂ ಇವೆ. ಅವುಗಳಲ್ಲಿ ಕೆಲವಾದರೂ ಈಗಾಗಲೇ ಸಮೀಪಿಸುತ್ತಿವೆ: ಮನುಷ್ಯರನ್ನು, ತಮ್ಮ ಜೀವನ ವಿಧಾನವನ್ನು ಬದಲಾಯಿಸಿಕೊಂಡು ಹಿಂದಿನ ವಿಧಾನಗಳೊಡನೆ ಹೋರಾಡಲು ಪ್ರೇರೇಪಿಸುತ್ತಿವೆ. ಕಾರ್ಮಿಕರನ್ನು ಮುಕ್ತಗೊಳಿಸುವುದು. ಹೆಂಗಸರಿಗೆ ಸಮಾನ ಹಕ್ಕು ಬಾಧ್ಯತೆಗಳನ್ನು ಕೊಡುವುದು. ಮಾಂಸ ಭಕ್ಷಣೆಯ ನಿಷೇಧ ಮುಂತಾದವು ನಮ್ಮ ಜಗತ್ತಿನಲ್ಲಿ ಇದೀಗ ಹತ್ತಿರ ಬರುತ್ತಿರುವ ಕಲ್ಪನೆಗಳು. ಇನ್ನು ಕೆಲವು ಕಲ್ಪನೆಗಳಿವೆ; ಈಗಾಗಲೇ ಅವುಗಳನ್ನು ಒಪ್ಪಿಕೊಂಡಿದ್ದರೂ ಸಹ ಹಳೆಯ ಜೀವನ ವಿಧಾನಗಳೊಡನೆ ಘರ್ಷಣೆಗ ಒಳಗಾಗಿರುವ ಕಲ್ಪನೆಗಳು. ಆದರ್ಶಗಳೆಂದು (Ideals) ನಾವು ಕರೆಯುತ್ತಿರುವ ಈ ಕಲ್ಪನೆಗಳೆಂದರೆ–ಹಿಂಸೆಯನ್ನು ನಿರ್ಮೂಲಗೊಳಿಸುವುದು. ಸಮುದಾಯಕ್ಕೆ ಸೇರಿದಂತೆ ಆಸ್ತಿಯ ಒಡೆತನವನ್ನು ವ್ಯವಸ್ಥೆಗೊಳಿಸುವುದು. ವಿಶ್ವಧರ್ಮ ಮತ್ತು ಸಾರ್ವತ್ರಿಕವಾದ ಸೋದರ ಭಾವನೆಯನ್ನು ಮನುಷ್ಯರಲ್ಲಿ ಬೆಳೆಸುವುದು.

ಆದುದರಿಂದ ವ್ಯಕ್ತಿ ಮತ್ತು ಸಮುದಾಯಗಳೆಲ್ಲ. ಅವರು ಯಾವುದೇ ನೆಲೆಯಲ್ಲಿ ನಿಂತಿರಲಿ. ಅವರ ಹಿಂದೆ ಭೂತಕಾಲದ ಸಮೆದುಹೋದ ನೆನಪುಗಳಿರುತ್ತವೆ: ಅವರ ಮುಂದೆ. ಭವಿಷ್ಯತ್ತಿನ ಆದರ್ಶಗಳಿರುತ್ತವೆ. ಮೃತಪ್ರಾಯವಾಗಿರುವ ಸಮಕಾಲೀನ ಕಲ್ಪನೆಗಳೊಡನೆ ಸೆಣಸುತ್ತಾ ಭವಿಷ್ಯಕಾಲದ ಕಲ್ಪನೆಗಳು ಬದುಕನ್ನು ಪ್ರವೇಶಿಸುತ್ತವೆ. ಒಂದು ಕಲ್ಪನೆ ಹಿಂದೆ ಪ್ರಯೋಜನಕಾರಿಯಾಗಿದ್ದು. ಅಗತ್ಯವೆನಿಸಿದ್ದರೂ ಕೂಡ ಮುಂದೆ ಕೆಲವು ಕಾಲದ ಬಳಿಕ ಅನಾವಶ್ಯಕವಾಗಬೇಕಾಗಿಬರುವ ಸಂದರ್ಭದಲ್ಲಿ ದೀರ್ಘಕಾಲ ಹೋರಾಡಿ ಹೊಸ ಕಲ್ಪನೆಗೆ ಅವಕಾಶಮಾಡಿಕೊಡಬೇಕಾಗುತ್ತದೆ. ಅಲ್ಲಿಯವರೆಗೆ ಯಾವುದು ಆದರ್ಶವಾಗಿದ್ದಿತೋ ಅದು ಮುಂದೆ ಸಮಕಾಲೀನ ಕಲ್ಪನೆಯಾಗುತ್ತದೆ.

ಒಮ್ಮೊಮ್ಮೆ ಹೀಗಾಗುವುದುಂಟು; ಪುರಾತನ ಕಲ್ಪನೆಯೊಂದು ಪಲ್ಲಟಗೊಂಡು ಉದಾತ್ತವಾದದ್ದಕ್ಕೆ ಮನುಷ್ಯರ ಅರಿವಿನಲ್ಲಿ ಈಗಾಗಲೇ ಅವಕಾಶವಾಗಿರುತ್ತದೆ: ಆದರೆ ಸಮಾಜದಲ್ಲಿ ಪ್ರಭಾವಶಾಲಿಗಳಾಗಿರುವ ವ್ಯಕ್ತಿಗಳಿಗೆ ಹಳೆಯ ಕಲ್ಪನೆಯನ್ನು ಉಳಿಸಿಕೊಳ್ಳುವುದರಲ್ಲಿಯೇ ಲಾಭವಿರುತ್ತದೆ. ಎಲ್ಲ ರೀತಿಯಿಂದಲೂ ಬದಲಾಗುತ್ತಿರುವ ಪರಿಸರದಲ್ಲಿ ಈ ಪುರಾತನ ಕಲ್ಪನೆ ತೀವ್ರವಾದ ವಿರೋಧಾಭಾಸದಂತೆ ಆಗ ಕಂಡುಬರುತ್ತದೆ. ಧಾರ್ಮಿಕ ವಲಯಗಳಲ್ಲಿ ಪುರಾತನ ಕಲ್ಪನೆಗಳನ್ನು ಹೀಗೆ ಉಳಿಸಿಕೊಳ್ಳುವುದು ಹಿಂದೆಯೂ ನಡೆದಿದೆ. ಈಗಲೂ ನಡೆಯುತ್ತಿದೆ. ಧರ್ಮಗುರುಗಳ ಲಾಭದಾಯಕವಾದ ಸ್ಥಾನಮಾನಗಳು ಈ ಬಗೆಯ ಪುರಾತನ ಕಲ್ಪನೆಗಳೊಂದಿಗೆ ಗಾಢವಾಗಿ. ಸಂಬಂಧಿಸಿರುವುದರಿಂದ.

ಅವರು ಉದ್ದೇಶಪೂರ್ವಕವಾಗಿಯೇ ತಮ್ಮ ಪ್ರಭಾವವನ್ನು ಬಳಸಿ. ಜನಗಳನ್ನು ಅವುಗಳಿಗೆ ಬದ್ಧವಾಗಿರುವಂತೆ ಮಾಡುತ್ತಾರೆ.

ರಾಜಕೀಯ ಕ್ಷೇತ್ರದಲ್ಲಿ ಕಂಡು ಬರುತ್ತಿರುವುದೂ ಇದೇ ಬಗೆಯ ದೃಶ್ಯ ವೆನ್ನಬಹುದು. ದೇಶಪ್ರೇಮವೆಂಬ ಕಲ್ಪನೆಯೇ ನಿರಂಕುಶ ಅಧಿಕಾರದ ತಳಹದಿ. ಸಂವೇದನೆ ಮತ್ತು ಉಪಯುಕ್ತತೆಗಳನ್ನು ಅದು ಈಗ ಕಳೆದುಕೊಂಡಿದ್ದರೂ ಸಹ, ಈ ಕಲ್ಪನೆಯಿಂದ ಲಾಭ ಹೊಂದುತ್ತಿರುವ ಜನ. ಕೃತಕವಾದ ವಿಧಾನಗಳ ಮೂಲಕ ವಾದರೂ ಅದನ್ನು ಉಳಿಸಿಕೊಳ್ಳುತ್ತಾರೆ. ಈ ಜನಗಳಿಗೆ ಇತರರ ಮೇಲೆ ಪ್ರಭಾವ ಬೀರಲು ಅತ್ಯಂತ ಶಕ್ತಿಯುತವಾದ ಸಾಧನಗಳಿರುವುದರಿಂದ ತಮ್ಮ ಗುರಿಯನ್ನು ಸಾಧಿಸಲು ಅವರಿಗೆ ಸಾಧ್ಯವಾಗಿದೆ.

ಪುರಾತನವಾದ ದೇಶಪ್ರೇಮದ ಕಲ್ಪನೆಗೆ ವಿರುದ್ಧ ದಿಕ್ಕಿನಲ್ಲಿ ದಾರಿತಪ್ಪಿರುವ ಸಮಸ್ತ ಕಲ್ಪನೆಗಳೂ. ಕ್ರೈಸ್ತ ಜಗತ್ತಿನ ಅರಿವಿನ ವಲಯಕ್ಕೆ ಪ್ರವೇಶಿಸುತ್ತಿರುವಲ್ಲಿಯೇ, ಇವಕ್ಕೆ ವಿವರಣೆಯಿದೆ ಎಂದು ನನಗನ್ನಿಸುತ್ತದೆ.

## 3

ದೇಶಪ್ರೇಮ ಕೇವಲ ತನ್ನ ಜನಗಳ ಸಲುವಾಗಿಯೇ ಪ್ರೀತಿಯನ್ನು ಬೆಳೆಸಿಕೊಳ್ಳುವ ಒಂದು ವಿಶಿಷ್ಟ ಭಾವನೆ: ವೈರಿಗಳಿಂದ ತನ್ನ ಜನಗಳ ಮೇಲೆ ಆಗುವ ಅತ್ಯಾಚಾರ ಮತ್ತು ಕೊಲೆಗಳನ್ನು ತಪ್ಪಿಸಲು. ತನ್ನ ಸಮೃದ್ಧಿ. ಆಸ್ತಿ ಮತ್ತು ಪ್ರಾಣವನ್ನೂ ತ್ಯಾಗ ಮಾಡಲು ತಯಾರಾಗುವ ಸಿದ್ಧಾಂತ. ಎಲ್ಲ ದೇಶಗಳೂ ಈ ಕಲ್ಪನೆಯನ್ನು ಶ್ರೇಷ್ಠ ವೆಂದು ಭಾವಿಸುತ್ತವೆ. ಕಾರಣ; ಈ ಕಲ್ಪನೆಯ ಮೂಲಕ ಬೇರೆ ದೇಶಗಳನ್ನು ಅತ್ಯಾಚಾರ ಮತ್ತು ಕಗ್ಗೊಲೆಗೆ ಗುರಿಪಡಿಸುವ ಸಾಧ್ಯತೆಯಿರುವುದರಿಂದ.

ಆದರೆ ಸುಮಾರು ಎರಡು ಸಾವಿರ ವರ್ಷಗಳಷ್ಟು ಹಿಂದೆಯೇ ಮಾನವ ಜನಾಂಗವು ತನ್ನ ಶ್ರೇಷ್ಠ ಪ್ರತಿನಿಧಿಗಳಾದ ದಾರ್ಶನಿಕರ ಮೂಲಕ. 'ಮಾನವ ಸೋದರ ಭಾವನೆ'ಯ ಉದಾತ್ತ ಕಲ್ಪನೆಯನ್ನು ಗುರುತಿಸಿದೆ. ನಮ್ಮ ಕಾಲದಲ್ಲಿಯೂ ಅರಿವಿನ ಅನೇಕ ರೂಪಗಳ ಮೂಲಕ ಮಾನವನ ಪ್ರಜ್ಞಾವಲಯವನ್ನು ಅದು ವ್ಯಾಪಿಸುತ್ತಿದೆ. ಸುಧಾರಿಸಿದ ಸಂಪರ್ಕ ಸಾಧನಗಳು, ಕೈಗಾರಿಕೆ, ವ್ಯಾಪಾರ. ಕಲೆ ಮತ್ತು ವಿಜ್ಞಾನ ಕ್ಷೇತ್ರಗಳಲ್ಲಿ ಕಂಡುಬರುತ್ತಿರುವ ಅಖಂಡ ದೃಷ್ಟಿಗೆ ನಾವು ಕೃತಜ್ಞರಾಗಿರಬೇಕು: ಈ ಅಖಂಡತೆಯಿಂದಾಗಿ ನೆರೆ ಹೊರೆಯ ಜನಾಂಗಗಳು ಪರಸ್ಪರರ ಕೊಲೆ ಮತ್ತು ಮಾನಹಾನಿಗಳಲ್ಲಿ ನಿರತರಾಗಿರದೆ, ಒಂದಾಗಿರಬೇಕಾದ ಅಗತ್ಯ ಒದಗಿದೆ. ಸರ್ಕಾರಗಳನ್ನು ಬಿಟ್ಟರೂ. ಜನಗಳು ಕೈಗಾರಿಕೆ. ಕಲೆ ಮತ್ತು ವೈಜ್ಞಾನಿಕ ಚಟುವಟಿಕೆಗಳಲ್ಲಿ ಪರಸ್ಪರ ಸಹಕರಿಸಿ, ಸ್ನೇಹದಿಂದ ವರ್ತಿಸಿ, ಸಮೃದ್ಧಿಯಿಂದ ಬದುಕುತ್ತಿದ್ದಾರೆ. ಈ ಸಮೃದ್ಧಿಯನ್ನು

ಹಾಳುಮಾಡಿಕೊಳ್ಳಲು ಯಾರೂ ಇಷ್ಟಪಡುವುದಿಲ್ಲ. ವಿವಿಧ ರಾಷ್ಟ್ರಗಳ ನಡುವೆ ಸಾಧಿಸಿರುವ ಸೋದರತೆಯು ಸಹಬಾಳ್ವೆಯಿಂದಾಗಿ, ದೇಶಪ್ರೇಮವೆಂಬ ಪುರಾತನ ಕಲ್ಪನೆಯು ಅಸಂಗತ ಮತ್ತು ಅನಾವಶ್ಯಕವೆಂದು ಯಾರಾದರೂ ತಿಳಿಯಬಹುದಾಗಿದೆ. ಈ ಭಾವನೆ ಕ್ರಮೇಣ ನಶಿಸಿ, ಸಂಪೂರ್ಣವಾಗಿ ಮಾಯವಾಗಬೇಕು: ಆದರೂ ಇದಕ್ಕೆ ತದ್ವಿರುದ್ಧ ನಡೆಯುತ್ತದೆ. ಈ ಅಪಾಯಕಾರಿ ಕಲ್ಪನೆ ಇನ್ನೂ ಉಳಿದಿದೆ ಮಾತ್ರವಲ್ಲ ಪ್ರಖರವಾಗಿ ಧಗಧಗಿಸುತ್ತಿದೆ.

ಹಕ್ಕುಬಾಧ್ಯತೆಗಳನ್ನು ಕುರಿತ ಸದೃಶ ಭಾವನೆಗಳನ್ನಿರಿಸಿಕೊಂಡಿರುವ ಜನಗಳು, ತಮ್ಮ ಅನುಕೂಲಕ್ಕೆ ತಕ್ಕಂತೆ ವಿವೇಕಶೂನ್ಯರಾಗಿ ಅನ್ಯರಾಷ್ಟ್ರಗಳ ಮೇಲೆ ಧಾಳಿಮಾಡುವ ಸರ್ಕಾರಗಳನ್ನು ಬೆಂಬಲಿಸುತ್ತಾರೆ: ಕಳ್ಳತನದಿಂದ ಸಂಪಾದಿಸಿರುವ ಅನ್ಯರಾಷ್ಟ್ರಗಳ ಸ್ವತ್ತುಗಳನ್ನು ಬಲಪ್ರಯೋಗದಿಂದ ಉಳಿಸಿಕೊಳ್ಳಬಯಸುತ್ತಾರೆ ಮತ್ತು ಈ ಬಗೆಯ ಧಾಳಿಗಳನ್ನು ಹಾಗೂ ಆಕ್ರಮಣಗಳನ್ನು ಅಪೇಕ್ಷಿಸುತ್ತಾರೆ: ತಮ್ಮ ವರ್ತನೆಯನ್ನು ಕುರಿತು ಸಂತೋಷದಿಂದ ಹೆಮ್ಮೆ ಪಡುತ್ತಾರೆ. ಪೋಲೆಂಡ್, ಐರಿಷ್, ಬೊಹೆಮಿಯನ್, ಫಿನ್ನಿಸ್, ಆರ್ಮೇನಿಯಾದಂಥ ಚಿಕ್ಕ ರಾಷ್ಟ್ರಗಳು ಶಕ್ತ ರಾಷ್ಟ್ರಗಳ ದಬ್ಬಾಳಿಕೆಗೆ ತುತ್ತಾಗಿ ತಮ್ಮನ್ನು ಆಕ್ರಮಿಸಿರುವವರ ದೇಶಪ್ರೇಮವನ್ನು ದ್ವೇಷಿಸುತ್ತಿರುತ್ತಾರೆ. ಆದರೂ, ಅರ್ಥರಹಿತವಾದ ಮತ್ತು ಅಪಾಯಕಾರಿ ಭಾವನೆಯಾದ ದೇಶಪ್ರೇಮ ಸಾಂಕ್ರಾಮಿಕವಾಗಿ ಹಬ್ಬಿ, ದಬ್ಬಾಳಿಕೆಗೆ ತುತ್ತಾಗಿರುವವರನ್ನೂ ಕಾಡುತ್ತದೆ. ತಮ್ಮಲ್ಲಿ ಚಟುವಟಿಕೆಗಳಲ್ಲಿಯೂ ಅವರು ಈ ಭಾವನೆಯನ್ನು ತೀವ್ರಗೊಳಿಸುತ್ತಾರೆ. ಸ್ವತಃ ತಾವೇ ಶಕ್ತರಾಷ್ಟ್ರಗಳ ದೇಶಪ್ರೇಮದ ಪರಿಣಾಮವಾಗಿ ಸಂಕಟಕ್ಕೆ ಗುರಿಯಾಗಿದ್ದರೂ ಸಹ, ಈ ಅಪರಾಧವನ್ನು ಮತ್ತೊಬ್ಬರ ಮೇಲೆ ಪ್ರಯೋಗಿಸುವ ಘಟ್ಟಕ್ಕೂ ಸಿದ್ಧರಾಗುತ್ತಾರೆ.

ಇದಕ್ಕೆ ಕಾರಣವೇನು? ಆಡಳಿತ ವರ್ಗದವರು ತಮ್ಮ ಭದ್ರವಾದ, – ಅದೂ ಕಾರ್ಮಿಕರೊಂದಿಗೆ ಹೋಲಿಸಿದರೆ ಅತ್ಯಂತ ವಿಶಿಷ್ಟ ಅನುಕೂಲಗಳಿಂದ ಕೂಡಿದ – ಸ್ಥಾನಮಾನಗಳನ್ನು ಕಾಪಾಡಿಕೊಳ್ಳಬೇಕಾದರೆ, ದೇಶಪ್ರೇಮದ ನೆಲೆಯಮೇಲೆ ನಿಂತಿರುವ ಆಡಳಿತ ವ್ಯವಸ್ಥೆಯುಳ್ಳ ಸರ್ಕಾರವನ್ನೇ ಕೃತಜ್ಞತೆಯಿಂದ ಆಶ್ರಯಿಸಬೇಕು. ಆಡಳಿತ ವರ್ಗವೆಂದರೆ ರಾಜಕಾರಣಿಗಳು ಮತ್ತು ಅಧಿಕಾರಿಗಳು ಮಾತ್ರವಲ್ಲ: ವಿಶಿಷ್ಟ ಅನುಕೂಲಗಳನ್ನು ಅನುಭವಿಸುತ್ತಿರುವ ಎಲ್ಲ ವರ್ಗದವರೂ ಸೇರುತ್ತಾರೆ. ಬಂಡವಾಳಗಾರರು, ಪತ್ರಿಕೋದ್ಯೋಗಿಗಳು, ಬಹುಪಾಲು ಕಲಾವಿದರು ಮತ್ತು ವಿಜ್ಞಾನಿಗಳನ್ನು ಈ ಗುಂಪಿಗೆ ಸೇರಿಸಬಹುದು. ಜನಗಳನ್ನು ಪ್ರಭಾವಗೊಳಿಸಬಲ್ಲ ಸಮರ್ಥಸಾಧನಗಳು ಅವರ ಕೈಯಲ್ಲಿರುವುದರಿಂದ ದೇಶಪ್ರೇಮದ ಭಾವನೆಯನ್ನು ಅವರು ಯಾವಾಗಲೂ ಹೆಚ್ಚು ದೃಢಗೊಳಿಸುತ್ತಾರೆ. ಸರ್ಕಾರದ ಶಕ್ತಿಯನ್ನು ಹೆಚ್ಚಿಸಬಲ್ಲ ಭಾವನೆಗಳನ್ನು ಎತ್ತಿ ಹಿಡಿಯುವುದರಿಂದ ಅವರಿಗೆ ಉತ್ತಮ ಪ್ರತಿಫಲವಿದೆ.

ಒಬ್ಬ ಅಧಿಕಾರಿ ಎಷ್ಟು ದೇಶಪ್ರೇಮಿಯೋ ಅಷ್ಟು ಅಭ್ಯುದಯವನ್ನು ಪಡೆಯುತ್ತಾನೆ; ದೇಶಪ್ರೇಮದ ಪರಿಣಾಮವಾಗಿಯೇ ಹುಟ್ಟುವ ಯುದ್ಧವಂತೂ ಸೈನಿಕನಿಗೆ ಬಡತಿಯ ಅವಕಾಶವನ್ನು ಕಲ್ಪಿಸುತ್ತದೆ.

ದೇಶಪ್ರೇಮ ಮತ್ತು ಅದರ ಫಲವಾದ ಯುದ್ಧಗಳಿಂದ ವೃತ್ತ ಪತ್ರಿಕೆ ಮತ್ತು ಇತರ ವ್ಯಾಪಾರಗಳಿಗೆ ವರಮಾನ ಹೆಚ್ಚುತ್ತದೆ. ಲೇಖಕ, ಅಧ್ಯಾಪಕ ಮತ್ತು ಪ್ರಾಧ್ಯಾಪಕರು ಎಷ್ಟೆಷ್ಟು ದೇಶಪ್ರೇಮವನ್ನು ಉಪದೇಶಿಸುತ್ತಾರೋ ಅಷ್ಟಷ್ಟು ತಮ್ಮ ಸ್ಥಾನಗಳನ್ನು ಭದ್ರಪಡಿಸಿಕೊಳ್ಳುತ್ತಾರೆ. ರಾಜ ಮಹಾರಾಜರುಗಳು ಎಷ್ಟರಮಟ್ಟಿಗೆ ದೇಶಪ್ರೇಮಕ್ಕೆ ಬದ್ಧರಾಗುತ್ತಾರೆಯೋ ಅಷ್ಟು ಪ್ರಖ್ಯಾತಿಯನ್ನು ಪಡೆಯುತ್ತಾರೆ.

ಶಾಲೆ, ಚರ್ಚ್, ವೃತ್ತಪತ್ರಿಕೆಗಳು ಮತ್ತು ಹಣಕಾಸಿನ ವ್ಯವಹಾರಗಳನ್ನು ಆಡಳಿತ ವರ್ಗದವರು ತಮ್ಮ ಅಧೀನದಲ್ಲಿರಿಸಿಕೊಂಡಿರುತ್ತಾರೆ. ಶಾಲೆಗಳಲ್ಲಿ, ಚರಿತ್ರೆಯ ಪಾಠಗಳ ಮೂಲಕ, ತಮ್ಮ ಜನಗಳೇ ಸರ್ವ ಶ್ರೇಷ್ಠರೆಂದೂ ನ್ಯಾಯವಾದವರೆಂದೂ ಹೇಳುತ್ತಾ ದೇಶಪ್ರೇಮವನ್ನು ಮಕ್ಕಳಲ್ಲಿ ಉದ್ದೀಪಿಸುತ್ತಾರೆ. ದೊಡ್ಡವರಲ್ಲಿ ಸಾರ್ವಜನಿಕ ಪ್ರದರ್ಶನ, ಉತ್ಸವ, ಸ್ಮಾರಕಗಳ ಮೂಲಕ ಮತ್ತು ಸುಳ್ಳು ಸುದ್ದಿಗಳನ್ನು ಪ್ರಕಟಿಸುವ ದೇಶಪ್ರೇಮಿ ವೃತ್ತಪತ್ರಿಕೆಗಳ ಮೂಲಕ ಈ ಭಾವನೆಯನ್ನು ಉದ್ದೀಪಿಸುತ್ತಾರೆ. ಅದಕ್ಕಿಂತಲೂ ಹೆಚ್ಚಾಗಿ ಪರರಾಷ್ಟ್ರಗಳನ್ನು ಅನ್ಯಾಯವಾಗಿ ಒರಟುತನದಿಂದ ನಡೆಸಿಕೊಂಡು ಕೆರಳಿಸಿ, ತಮ್ಮ ಜನಗಳನ್ನು ಕುರಿತು ಅವರು ವೈರ ಸಾಧಿಸುವಂತೆ ಮಾಡುವುದರ ಮೂಲಕ ದೇಶಪ್ರೇಮವನ್ನು ತಮ್ಮ ಜನಗಳಲ್ಲಿ ಉದ್ರೇಕಿಸುತ್ತಾರೆ; ಈ ವೈರವನ್ನು ಉಪಯೋಗಿಸಿಕೊಂಡು ವಿದೇಶದವರ ವಿರುದ್ಧ ತಮ್ಮ ಜನಗಳ ಮನಸ್ಸನ್ನು ಕೆಡಿಸುತ್ತಾರೆ.

ದೇಶಪ್ರೇಮವೆಂಬ ಈ ಉಗ್ರ ಭಾವನೆಯನ್ನು ಇತ್ತೀಚೆಗೆ ಯೂರೋಪಿಯನ್ ರಾಷ್ಟ್ರಗಳಲ್ಲಿ ಹೆಚ್ಚು ತೀಕ್ಷ್ಣಗೊಳಿಸಲಾಗುತ್ತಿದೆ; ನಮ್ಮ ಕಾಲದಲ್ಲಿಯಂತೂ ಅದು ಶಿಖರವನ್ನೇ ಮುಟ್ಟಿರುವುದರಿಂದ, ಇನ್ನೂ ಮುಂದುವರಿಯಲು ಅವಕಾಶವೇ ಇಲ್ಲದಂತಾಗಿದೆ.

## 4

ಕ್ರೈಸ್ತ ಜನಾಂಗವು ಹೇಗೆ ದೇಶಪ್ರೇಮದ ಮತ್ತಿನಲ್ಲಿ ಅರಿವನ್ನು ಕಳೆದುಕೊಂಡಿದೆಯೆಂಬುದನ್ನು ಸ್ಪಷ್ಟಪಡಿಸುವಂತಹ ಸಂಗತಿಯೊಂದು ಇತ್ತೀಚೆಗೆ ನಡೆಯಿತು; ಜನಗಳ ನೆನಪಿನಲ್ಲಿ ಅದಿನ್ನೂ ಉಳಿದಿದೆ.

ಜರ್ಮನಿಯ ಆಡಳಿತ ವರ್ಗದವರು ತಮ್ಮ ಪ್ರಜೆಗಳ ದೇಶಪ್ರೇಮವನ್ನು ಎಷ್ಟು ಉದ್ರೇಕಿಸಿದರೆಂದರೆ, ಹತ್ತೊಂಬತ್ತನೆಯ ಶತಕದ ಮಧ್ಯಭಾಗದಲ್ಲಿ ಎಲ್ಲ ಪ್ರಜೆಗಳೂ

ಕಡ್ಡಾಯವಾಗಿ ಸೈನಿಕರಾಗಿರಬೇಕೆಂಬ ಒಂದು ಕಾನೂನನ್ನು ಪರ್ಯಾಲೋಚಿಸಲಾಯಿತು. ಎಲ್ಲ ಹುಡುಗರು. ಗಂಡಂದಿರು. ತಂದೆಯರು. ವಿದ್ವಾಂಸರು. ಧರ್ಮಗುರುಗಳು ಕೊಲೆ ಮಾಡುವುದನ್ನು ಕಲಿಯಬೇಕೆಂದೂ. ಮಿಲಿಟರಿ ದರ್ಜೆಯಲ್ಲಿ ಅವರಿಗಿಂತ ಮೇಲಿನವರಿಗೆ ಗುಲಾಮರಾಗಿರಲು ಒಪ್ಪಬೇಕೆಂದೂ. ಯಾರನ್ನು, ಯಾವಕ್ಷಣದಲ್ಲಿಯೂ – ಅಪ್ಪಣೆ ಬಂದೊಡನೆ ಕೊಲ್ಲಲು ಸಿದ್ಧವಾಗಿರಬೇಕೆಂದೂ ಸೂಚಿಸಲಾಯಿತು. ದಬ್ಬಾಳಿಕೆಗೆ ತುತ್ತಾದ ಜನಾಂಗಗಳನ್ನು. ತಮ್ಮ ದೇಶಕ್ಕೆ ಸೇರಿದ ಪ್ರಜೆಗಳಾದರೂ ಅವರ ಹಕ್ಕನ್ನು ಪ್ರತಿಪಾದಿಸಿದ ಕಾರ್ಮಿಕರನ್ನು. ಅಗತ್ಯಬಿದ್ದರೆ ಸ್ವಂತ ತಂದೆ ಮತ್ತು ಅಣ್ಣ ತಮ್ಮಂದಿರನ್ನು ಕೊಲ್ಲಲು ಸಿದ್ಧವಾಗಬೇಕೆಂದೂ ಬಹಿರಂಗವಾಗಿ ಘೋಷಿಸಲಾಯಿತು. ಅತ್ಯಂತ ನಿರ್ಲಜ್ಜನೂ ಪ್ರಬಲನೂ ಆದ ದೊರೆಯಾಗಿದ್ದ ಎರಡನೆಯ ವಿಲಿಯಂ ಹೀಗೆ ಘೋಷಿಸಿದವನು.

ಮಾನವನ ಉದಾತ್ತ ಭಾವನೆಗಳನ್ನೆಲ್ಲಾ ಅಸಹ್ಯವಾದ ರೀತಿಯಲ್ಲಿ ಉಲ್ಲಂಘಿಸುವ ಅಂತಹ ಕ್ರೂರ ವಿಧಾನವನ್ನು ದೇಶಪ್ರೇಮದ ಹೆಸರಿನಲ್ಲಿ ಜರ್ಮನಿಯ ಪ್ರಜೆಗಳು ತುಟಿಪಿಟಕ್ಕೆನ್ನದೆ ಒಪ್ಪಿಕೊಂಡರು. ಇದರ ಫಲವಾಗಿ ಫ್ರಾನ್ಸ್ ದೇಶದ ಮೇಲೆ ಗೆಲುವನ್ನು ಪಡೆದರು. ಈ ಗೆಲುವು ಜರ್ಮನಿಯ ದೇಶಪ್ರೇಮವನ್ನು ಮತ್ತೂ ಉದ್ರೇಕಿಸಿತು. ಪ್ರತಿಕ್ರಿಯೆಯೆಂಬಂತೆ ಫ್ರಾನ್ಸ್. ರಷ್ಯಾ ಮುಂತಾದ ಇತರ ದೇಶಗಳೂ ಉದ್ರೇಕಗೊಂಡವು. ಬಳಿಕ. ಯೂರೋಪಿಯನ್ ರಾಷ್ಟ್ರಗಳ ಪ್ರಜೆಗಳು ಕಡ್ಡಾಯ ಮಿಲಿಟರಿ ಸೇವೆಗೆ. ಪ್ರತಿಭಟಿಸದೆ ಒಳಗಾದರು; ಪ್ರಾಚೀನ ಕಾಲದ ಗುಲಾಮ ಪದ್ಧತಿಗಿಂತ ನೀಚವೆನ್ನಿಸಬಹುದಾದ ಅವಮಾನ ಮತ್ತು ಅಧೀನತೆಗಳನ್ನು ಒಪ್ಪಿಕೊಂಡರು. ದೇಶಪ್ರೇಮದ ಕರೆಗೆ ಓಗೊಟ್ಟು ಜನಗಳು ಈ ಬಗೆಯ ದಾಸ್ಯ ಮತ್ತು ಅಧೀನತೆಗಳನ್ನು ಒಪ್ಪಿಕೊಂಡಮೇಲೆ ಸರ್ಕಾರಗಳ ನಿರ್ಲಜ್ಜತೆ. ಕ್ರೌರ್ಯ ಮತ್ತು ಹುಚ್ಚಾಟಗಳಿಗೆ ಎಲ್ಲೆಯೇ ಇಲ್ಲವಾಯಿತು. ಏಷ್ಯಾ, ಆಫ್ರಿಕಾ ಮತ್ತು ಅಮೆರಿಕಗಳಲ್ಲಿ ಇನ್ನೊಬ್ಬರ ನೆಲವನ್ನು ಲಪಟಾಯಿಸಿಕೊಳ್ಳುವ ಒಂದು ಸ್ಪರ್ಧೆಯೇ ಆರಂಭವಾಯಿತು. ಈ ಪ್ರವೃತ್ತಿಗೆ ಕಾರಣಗಳಾಗಿ, ಒಂದು ಬಗೆಯ ವಿಲಕ್ಷಣ ಖಯಾಲಿ. ಜಂಭ ಮತ್ತು ದುರಾಸೆಗಳೂ ಸೇರಿದುವು. ಇದರ ಜೊತೆಗೆ ಸರ್ಕಾರಗಳ ನಡುವೆ ಅಪನಂಬಿಕೆ ಮತ್ತು ವೈರಗಳು ದಿನೇ ದಿನೇ ಬೆಳೆಯುತ್ತಾ ಹೋದವು.

ಆಕ್ರಮಿಸಿಕೊಂಡ ಪ್ರದೇಶದ ನಿವಾಸಿಗಳನ್ನು ನಿರ್ನಾಮಮಾಡುವುದು ಅತ್ಯಂತ ಸಹಜವಾದ ಕ್ರಮವೆಂದು ಒಪ್ಪಿಕೊಳ್ಳಲಾಯಿತು. ಯಾರು ಮೊದಲು ಬೇರೆಯವರ ನೆಲವನ್ನು ಆಕ್ರಮಿಸಿಕೊಂಡು ನಿವಾಸಿಗಳನ್ನು ನಿರ್ಮೂಲಮಾಡಬೇಕು? ಎಂಬುದಷ್ಟೇ ಉಳಿದಿದ್ದ ಪ್ರಶ್ನೆ. ಆಕ್ರಮಣಕ್ಕೆ ತುತ್ತಾದ ಜನಗಳ ಅತ್ಯಂತ ಸಾಮಾನ್ಯವೆಂಬಂತಹ ಅಗತ್ಯಗಳನ್ನೂ ಎಲ್ಲ ಸರ್ಕಾರಗಳೂ ಅತಿಕ್ರಮಿಸಿವೆ ಮತ್ತು ಅತಿಕ್ರಮಿಸುತ್ತಿವೆ. ಪರಸ್ಪರ ಸಂಬಂಧಗಳಲ್ಲಿ ಅವರು ಅಪರಾಧಿಗಳಾಗಿಯೇ ಉಳಿದಿದ್ದಾರೆ; ಮೋಸ, ವಂಚನೆ,

ಲಂಚ, ತಕ್ಕು, ಗೂಢಚರ್ಯೆ. ದರೋಡೆ ಮತ್ತು ಕೊಲೆಗಳಲ್ಲಿ ಇನ್ನೂ ನಿರತರಾಗಿದ್ದಾರೆ. ಸಾಮಾನ್ಯವಾಗಿ ದಬ್ಬಾಳಿಕೆಗೆ ತುತ್ತಾದವರಿಗೆ ಜನಗಳು ಕನಿಕರ ತೋರಿಸುವುದೂ ಉಂಟು ಆದರೆ. ಅಪರಾಧಿಗಳು ತಮ್ಮ ಸರ್ಕಾರಗಳೇ ಆಗಿದ್ದರೆ. ಹರ್ಷದಿಂದ ಕುಣಿದಾಡುತ್ತಾರೆ.

ವಿವಿಧ ಜನಾಂಗಗಳ ಮಧ್ಯೆ ಪರಸ್ಪರ ವೈರ ಇತ್ತೀಚೆಗೆ ಆಶ್ಚರ್ಯಕರವಾದ ಆಯಾಮಗಳನ್ನು ಪಡೆಯುತ್ತಿದೆ. ಒಂದು ದೇಶವು ಮತ್ತೊಂದು ದೇಶವನ್ನು ಏಕೆ ಆಕ್ರಮಿಸಬೇಕೆಂಬ ಮಾತು ಒತ್ತಟ್ಟಿಗಿರಲಿ: ಯಾರಾದರೂ ಶಕ್ತಿಗುಂದಿದರೆ ಸಾಕು, ಮೇಲೆ ಬಿದ್ದು. ಪ್ರಯಾಸ ರಹಿತವಾಗಿ ಚಿಂದಿಮಾಡಲು ಹವಣಿಸುತ್ತಾ ಎಲ್ಲ ಸರ್ಕಾರಗಳೂ ಮುಷ್ಟಿ ಬಿಚ್ಚಿಕೊಂಡು ಹಲ್ಲುಮಸೆಯುತ್ತಾ ನಿಂತಿರುವುದು ಎಲ್ಲರಿಗೂ ಗೊತ್ತಿದೆ.

ಪ್ರಸಿದ್ಧ ಕ್ರೈಸ್ತ ಜನಾಂಗದ ಎಲ್ಲ ಪ್ರಜೆಗಳೂ ದೇಶಪ್ರೇಮದಿಂದ ಪಶು ಸದೃಶರಾಗಿದ್ದಾರೆ: ಯುದ್ಧದಲ್ಲಿ ನೇರವಾಗಿ ಭಾಗವಹಿಸಿ ಕೊಲ್ಲುವ ಮತ್ತು ಕೊಲ್ಲಿಸಿಕೊಳ್ಳುವ ವ್ಯಕ್ತಿಗಳು ಕೊಲೆಯನ್ನು ಕಂಡು ಹರ್ಷಿಸುವಂತೆ ಇಡೀ ಯೂರೋಪ್ ಮತ್ತು ಅಮೆರಿಕೆಯ ಪ್ರಜೆಗಳೆಲ್ಲಾ ಹರ್ಷಿಸುತ್ತಿದ್ದಾರೆ. ಇವರು ಯಾವ ಅಪಾಯವೂ ಇಲ್ಲದೆ ತಮ್ಮ ತಮ್ಮ ಮನೆಗಳಲ್ಲಿ ನೆಮ್ಮದಿಯಿಂದ ಬದುಕುತ್ತಿದ್ದರೂ ಸಹ, ಪ್ರೇಕ್ಷಕರಾಗಿ ಈ ತಮಾಷೆಯನ್ನು ಅನುಭವಿಸುತ್ತಿದ್ದಾರೆ. ವೃತ್ತಪತ್ರಿಕೆಗಳು ಮತ್ತು ಸುಲಭ ಸಂಪರ್ಕ ಸಾಧನಗಳಿಗೆ ಇವಕ್ಕಾಗಿ ಕೃತಜ್ಞರಾಗಿರಬೇಕಾಗಿದೆ. ರೋಮನ್ ಸರ್ಕಸ್‌ಗಳಲ್ಲಿ ರಕ್ತದಾಹದಿಂದ "Pollice verso [3]" ಎಂದು ಕೊಲೆಗಾಗಿ ಕೂಗುತ್ತಿದ್ದ ಜನಗಳಂತಿದೆ ಇವರ ಸ್ಥಿತಿ.

ದೊಡ್ಡವರಿರಲಿ. ಮುಗ್ಧರಾದ ಚಿಕ್ಕಮಕ್ಕಳೂ ಸಹ ಅವರವರ ರಾಷ್ಟ್ರೀಯತೆಗೆ ತಕ್ಕಂತೆ ಯುದ್ಧದ ವಾರ್ತೆಗಳನ್ನು ಕೇಳಿ ಹರ್ಷಿಸುತ್ತಾರೆ. ನಿರ್ದಿಷ್ಟವಾದ ದಿನವೊಂದರಲ್ಲಿ ಸಿಡಿಮದ್ದು ಅಥವಾ ಷೆಲ್‌ಧಾಳಿಗಳಿಂದ ಅಂಗಾಂಗಗಳನ್ನು ಕಳೆದುಕೊಂಡು ಊನಗೊಂಡ ಇಂಗ್ಲಿಷರ ಅಥವಾ ಬೋಯರ್‌ಜನಗಳ ಸಂಖ್ಯೆ ಏಳುನೂರು ಆಗಿರದೆ, ಒಂದು ಸಾವಿರವಾಗಿದೆ ಎಂಬುದನ್ನು ಕೇಳಿದಾಗ ಕುಣಿದಾಡುತ್ತಾರೆ. ನನಗೆ ಗೊತ್ತಿರುವಂತೆಯೇ ಕೆಲವು ತಂದೆ ತಾಯಿಗಳೂ ಮಕ್ಕಳನ್ನು ಈ ದಿಸೆಯಲ್ಲಿ ಪ್ರೋತ್ಸಾಹಿಸುತ್ತಾರೆ.

ಇಲ್ಲಿಗೆ ಸಮಸ್ಯೆ ಮುಗಿಯುವುದಿಲ್ಲ. ಒಂದು ದೇಶವು ತನ್ನ ಸೈನಿಕರ ಸಂಖ್ಯೆಯನ್ನು ಹೆಚ್ಚಿಸಿದ ಕೂಡಲೆ ನೆರೆಹೊರೆಯವರೂ ತಮ್ಮ ಸೈನ್ಯ ಬಲವನ್ನು ಹೆಚ್ಚಿಸುತ್ತಾರೆ. ಇದರಿಂದ ಉದ್ರೇಕಗೊಂಡ ಮೊದಲಿನ ದೇಶ ಮತ್ತೊಮ್ಮೆ ತನ್ನ ಸೈನ್ಯವನ್ನು ಹೆಚ್ಚಿಸುತ್ತದೆ. ಎಲ್ಲ ದೇಶಗಳೂ ಅಪಾಯದಲ್ಲಿರುವುದರಿಂದ ದೇಶಪ್ರೇಮದ ಕಾರಣಕ್ಕಾಗಿ ತನ್ನ ಸೈನಿಕರ ಸಂಖ್ಯೆಯನ್ನು ಹೆಚ್ಚಿಸಲು ತೊಡಗುತ್ತವೆ.

---

[3] ರೋಮನ್ 'ವರ್ತುಲ ರಂಗಭೂಮಿ'ಯ ಪ್ರೇಕ್ಷಕರು ಬಿದ್ದ ಯುದ್ಧದಲ್ಲಿ ಸೋತ ಮಲ್ಲನನು ಕೊಲ್ಲಲು ತಮ್ಮ ಹೆಬ್ಬೆರಳಿನ ಮೂಲಕ ಸೂಚಿಸುತ್ತಿದ್ದರು. (Pollice verso)—**A.M.**

ರಕ್ಷಣೆಯ ಸಾಧನಗಳು ಮತ್ತು ನೌಕಾಪಡೆಗೂ ಇದೇ ಗತಿಯುಂಟಾಗುತ್ತದೆ. ಕಬ್ಬಿಣದ ಹೊದಿಕೆಯುಳ್ಳ ಹತ್ತು ಹಡಗುಗಳನ್ನು ಒಂದು ದೇಶ ಕಟ್ಟಿಸಿದರೆ, ಪಕ್ಕದ ದೇಶ ಹನ್ನೊಂದನ್ನು ಕಟ್ಟಿಸುತ್ತದೆ. ಮೊದಲ ದೇಶ ಹನ್ನೆರಡನ್ನು ಪಡೆಯುತ್ತದೆ: ಹೀಗೆ ಅಸಂಖ್ಯಾತವಾಗಿ ಬೆಳೆಯುತ್ತಾ ಹೋಗುತ್ತದೆ.

'ನಾನು ನಿನ್ನನ್ನು ಚಿವುಟುತ್ತೇನೆ'. 'ಮತ್ತು ನಾನು ನಿನ್ನ ತಲೆಯನ್ನು ತೂತು ಗೆಡವುತ್ತೇನೆ'. 'ಮತ್ತು ನಾನು ನಿನ್ನನ್ನು ಕತ್ತಿಯಿಂದ ಹೊಡೆಯುತ್ತೇನೆ'. 'ಮತ್ತು ನಾನು ನಿನ್ನನ್ನು ದೊಣ್ಣೆಯಿಂದ ಸದೆಬಡಿಯುತ್ತೇನೆ'. 'ಮತ್ತು ನಾನು ನಿನ್ನನ್ನು ಬಂದೂಕಿನಿಂದ ಸುಡುತ್ತೇನೆ'. – ಹೀಗೆ ದುಷ್ಟ ಮಕ್ಕಳು. ಕುಡುಕರು ಅಥವಾ ಪ್ರಾಣಿಗಳು ಜಗಳವಾಡುತ್ತವೆ ಅಥವಾ ಹೋರಾಡುತ್ತವೆ. ಆದರೆ ಈ ಬಗೆಯ ಕಲಹ ಬುದ್ಧಿವಂತ ಸರ್ಕಾರಗಳ ಪ್ರತಿನಿಧಿಗಳೆನಿಸಿದ ಮುತ್ಸದ್ದಿಗಳ ನಡುವೆ ನಡೆಯುತ್ತಿದೆ. ಈ ಜನಗಳೇ ತಮ್ಮ ಪ್ರಜೆಗಳಿಗೆ ವಿದ್ಯೆ ಮತ್ತು ನೈತಿಕ ವಿಚಾರಗಳಲ್ಲಿ ಮಾರ್ಗದರ್ಶಕರು.

## 5

ಪರಿಸ್ಥಿತಿ ಹೆಚ್ಚು ಹದಗೆಡುತ್ತಿದೆ; ಪ್ರತ್ಯಕ್ಷವಾದ ಅವನತಿ ಮತ್ತು ವಿನಾಶಕ್ಕೆ ನಿಲುಗಡೆಯೇ ಇರುವಂತಿಲ್ಲ.

ಕೆಲವು ಅತಿನಂಬಿಕೆಯ ಜನಗಳ ಪ್ರಕಾರ ತಪ್ಪಿಸಿಕೊಳ್ಳಲು ಉಳಿದಿದ್ದ ಒಂದೇ ಒಂದು ದಾರಿಯೂ ಇತ್ತೀಚಿನ ಘಟನೆಗಳಿಂದಾಗಿ ಮುಚ್ಚಿಹೋಯಿತು. ಹೇಗ್‌ನಲ್ಲಿ ನಡೆದ ಸಮ್ಮೇಳನ. ಮತ್ತು ಅದನ್ನು ಹಿಂಬಾಲಿಸಿದಂತೆಯೇ ನಡೆದ ಇಂಗ್ಲಿಷ್ ಹಾಗೂ ಟ್ರಾನ್ಸ್‌ವಾಲ್ ಯುದ್ಧವನ್ನು ಲಕ್ಷಿಸಿ, ನಾನು ಹೀಗೆ ಹೇಳುತ್ತಿರುವುದು.

ಅಂತರರಾಷ್ಟ್ರೀಯ ನ್ಯಾಯಾಲಯಗಳ ಮೂಲಕ ಪಂಚಾಯಿತಿ ನಡೆಸಿ ಯುದ್ಧ ಗಳನ್ನು ಮತ್ತು ಮಾರಕಾಸ್ತ್ರ ಸಂಗ್ರಹಣೆಯ ಸಮೃದ್ಧಿಯನ್ನು ತಡೆ ಹಿಡಿಯಬಹುದೆಂದು ಯಾರಾದರೂ ಲಘುವಾಗಿ ಆಲೋಚಿಸಿ ಸಮಾಧಾನ ಪಟ್ಟುಕೊಂಡಿದ್ದಿರಬಹುದು. ಆದರೆ, ಈ ದಿಸೆಯಲ್ಲಿ ಒಂದು ಪರಿಹಾರವನ್ನು ಕಂಡುಕೊಳ್ಳಲು ಸಾಧ್ಯವೇ ಇಲ್ಲವೆಂಬುದನ್ನು ಅತ್ಯಂತ ಸ್ಪಷ್ಟವಾಗಿ ಹೇಗ್‌ನಲ್ಲಿ ನಡೆದ ಸಮ್ಮೇಳನ ಮತ್ತು ಅದರ ಹಿಂದೆಯೇ ನಡೆದ ಯುದ್ಧ ಮನಗಾಣಿಸಿತು. ಎಲ್ಲಿಯವರೆಗೆ ಸೈನ್ಯವನ್ನು ಹೊಂದಿದ ಸರ್ಕಾರಗಳು ಇರುತ್ತವೆಯೋ ಅಲ್ಲಿಯವರೆಗೆ ಮಾರಕಾಸ್ತ್ರ ಸಂಗ್ರಹಣೆ ಮತ್ತು ಯುದ್ಧಗಳನ್ನು ಮುಕ್ತಾಯಗೊಳಿಸಲು ಸಾಧ್ಯವಿಲ್ಲವೆಂಬುದು ಹೇಗ್ ಸಮ್ಮೇಳನದ ಬಳಿಕ ಸ್ಪಷ್ಟ ವಾಯಿತು. ಒಂದು ಒಪ್ಪಂದ ಏರ್ಪಡುವುದು ಸಾಧ್ಯವಾಗಬೇಕಾದರೆ ಸಂಬಂಧ ಪಟ್ಟ ಪಕ್ಷಗಳು ಪರಸ್ಪರ ನಂಬಿಕೆ ಹೊಂದಿರಬೇಕು. ವಿರುದ್ಧಶಕ್ತಿಗಳು ಪರಸ್ಪರ ನಂಬಬೇಕಾದರೆ ಮೊದಲು ಶಸ್ತ್ರಾಸ್ತ್ರಗಳನ್ನು ಕೆಳಗಿಡಬೇಕು: ಕದನವಿರಾಮದ ಸಲುವಾಗಿ ಸಭೆಸೇರಿದಾಗ ಧ್ವಜ ರಕ್ಷಕರು ವರ್ತಿಸುವಂತೆ.

ಎಲ್ಲಿಯವರೆಗೆ ಸರ್ಕಾರಗಳು ಪರಸ್ಪರರನ್ನು ನಂಬುವುದಿಲ್ಲವೋ ಅಲ್ಲಿಯವರೆಗೆ ಸೈನ್ಯವನ್ನು ಅವರು ವಿಸರ್ಜಿಸಲಾಗುವುದಿಲ್ಲ; ಮಾತ್ರವಲ್ಲ, ನೆರೆಹೊರೆಯವರ ಸ್ಥಿತಿಗೆ ಹೊಂದಿಕೊಳ್ಳುವಂತೆ ಅದರ ಗಾತ್ರವನ್ನು ಹೆಚ್ಚಿಸುತ್ತಾ ಹೋಗುತ್ತಾರೆ. ಗೂಢಚರ್ಯೆಯ ಮೂಲಕ ಸೈನ್ಯದ ಒಂದೊಂದು ಚಲನವಲನವನ್ನು ಗಮನಿಸುತ್ತ ಎಲ್ಲ ಪ್ರಭುತ್ವಗಳೂ ಸಹ. ದಾರಿ ಸುಗಮವಾಗಿದೆಯೆಂದು ಗೊತ್ತಾದ ಕೂಡಲೆ ಪಕ್ಕದ ದೇಶಗಳ ಮೇಲೆ ಧಾಳಿ ನಡೆಸುತ್ತವೆ. ಹೀಗಿರುವಾಗ, ಯಾವ ಒಪ್ಪಂದಗಳೂ ಸಾಧ್ಯವಿಲ್ಲ; ಎಲ್ಲ ಸಮ್ಮೇಳನಗಳೂ ಇಲ್ಲವೇ ಮೂರ್ಖತನವಾಗಿ ಅಥವಾ ಕಾಲಕ್ಷೇಪವಾಗಿ, ಮೋಸ ಅಥವಾ ಅಧಿಕ ಪ್ರಸಂಗವಾಗಿ ಕಂಡುಬರುತ್ತವೆ.

ಉಳಿದ ಎಲ್ಲ ದೇಶಗಳನ್ನೂ ಬಿಟ್ಟು, ನಿರ್ದಿಷ್ಟವಾಗಿ ರಷ್ಯನ್ ಸರ್ಕಾರವೇ ಹೇಗ್ ಸಮ್ಮೇಳನದ 'ಭಯಂಕರ ಮಗು'ವಾಗಿ ಪರಿಣಮಿಸಿದ್ದು ವಿಶೇಷವಾಗಿದೆ. ಸ್ವದೇಶದಲ್ಲಿ, ತನ್ನ ಸ್ಪಷ್ಟವಾದ ಸುಳ್ಳು ಶಾಸನಗಳಿಗೆ ಉತ್ತರ ಕೊಡಲು ಯಾರಿಗೂ ಅವಕಾಶಕೊಡದ ರಷ್ಯನ್ ಸರ್ಕಾರ. ಎಷ್ಟು ಹಾಳಾಗಿದೆಯೆಂದರೆ, ಕಿಂಚಿತ್ತೂ ವಿವೇಕವಿಲ್ಲದ ಶಸ್ತ್ರಾಸ್ತ್ರಗಳಿಂದ ತನ್ನ ಜನಗಳನ್ನೇ ನಾಶಮಾಡಿತು; ಪೋಲೆಂಡ್ ದೇಶವನ್ನು ಹಿಸುಕಿಹಾಕಿ, ತುರ್ಕಿಸ್ತಾನ ಮತ್ತು ಚೀನಗಳನ್ನು ಕೊಳ್ಳೆಹೊಡೆಯಿತು: ಫಿನ್‌ಲೆಂಡ್ ದೇಶವನ್ನು ಉಸಿರುಗಟ್ಟಿಸುವಲ್ಲಿ ನಿರತವಾಗಿರುತ್ತಾ. ಉಳಿದ ಸರ್ಕಾರಗಳು ತನ್ನನ್ನು ನಂಬುತ್ತವೆಯೆಂಬ ನಿರಾತಂಕ ಭರವಸೆಯೊಡನೆ, ನಿಶ್ಯಸ್ತ್ರೀಕರಣವನ್ನು ಸೂಚಿಸಿತು.

ತನ್ನ ಸೈನ್ಯವನ್ನು ಹೆಚ್ಚಿಸಿಕೊಳ್ಳಲು ಸಿದ್ಧವಾಗುತ್ತಿರುವ ಸಂದರ್ಭದಲ್ಲಿಯೇ ಈ ಬಗೆಯ ವಿಚಿತ್ರವಾದ. ಅನಿರೀಕ್ಷಿತವಾದ ಮರ್ಯಾದೆಗೆಟ್ಟ ಸೂಚನೆಯನ್ನು ಬಹಿರಂಗವಾಗಿ ವ್ಯಕ್ತಪಡಿಸಿದಾಗ, ನಟನೆಯ ಸಲುವಾಗಿ ಉಳಿದ ದೇಶಗಳ ಸರ್ಕಾರಗಳೂ ಈ ಆಲೋಚನೆಯನ್ನು ಒಪ್ಪಿಕೊಂಡವು; ಅದು ಸ್ಪಷ್ಟವಾದ ಹಾಸ್ಯಾಸ್ಪದವಾದ ಅಪ್ರಾಮಾಣಿಕತೆಯಾಗಿತ್ತು. ಈ ಸಮ್ಮೇಳನದ ಫಲವೇನು? ಎಂಬುದನ್ನು ಮೊದಲೇ ಸಂಪೂರ್ಣವಾಗಿ ಗೊತ್ತುಮಾಡಿಕೊಂಡಿದ್ದ ಪ್ರತಿನಿಧಿಗಳು ಹಲವು ವಾರಗಳ ಕಾಲ ಒಂದೆಡೆ ಸೇರಿ, ಚರ್ಚೆ ನಡೆಸುತ್ತಾ, ಸಾಕಷ್ಟು ಸಂಬಳಸಾರಿಗೆಗಳನ್ನು ಗಿಟ್ಟಿಸುತ್ತಾ, ಒಳಗೊಳಗೆ ನಗುತ್ತಿದ್ದರು. ಆದರೂ ಸಹ, ಅವರೆಲ್ಲ ಮನಃಪೂರ್ವಕವಾಗಿ ಅಂತರರಾಷ್ಟ್ರೀಯ ಶಾಂತಿಯ ಏರ್ಪಾಡಿಗಾಗಿ ಶ್ರಮಿಸುತ್ತಿರುವಂತೆ ನಟಿಸುತ್ತಿದ್ದರು.

ಹೇಗ್ ಸಮ್ಮೇಳನವನ್ನು ಅನುಸರಿಸಿದಂತೆಯೇ ನಡೆದ ಟ್ರಾನ್ಸ್‌ವಾಲ್ ಸಂಗ್ರಾಮದಲ್ಲಾದ ಭೀಕರ ರಕ್ತಪಾತವನ್ನು ಯಾರೂ ನಿಲ್ಲಿಸಲಾಗಲಿಲ್ಲ; ಈಗಲೂ ನಿಲ್ಲಿಸಲು ಪ್ರಯತ್ನಿಸುತ್ತಿಲ್ಲ. ನಿರೀಕ್ಷಿಸಿದಂತೆ ಫಲಪ್ರದವಾಗದಿದ್ದರೂ ಹೇಗ್ ಸಮ್ಮೇಳನದಿಂದ ಒಂದು ಅಂಶವನ್ನು ಸ್ಪಷ್ಟಪಡಿಸಲು ಸಾಧ್ಯವಾಯಿತು. ಮನುಷ್ಯರು ಯಾವ ಕೆಡಕುಗಳಿಂದ ಸಂಕಟಪಡುತ್ತಿರುವರೋ ಅವುಗಳಿಗೆ ಪರಿಹಾರ ಕಂಡುಹಿಡಿಯಲು ಸರ್ಕಾರಗಳಿಗೆ

ಸಾಧ್ಯವಿಲ್ಲ; ಅವರಿಗೆ ಅಪೇಕ್ಷೆಯಿದ್ದರೂ ಶಸ್ತ್ರ ಸಂಗ್ರಹಣೆ ಮತ್ತು ಯುದ್ಧಗಳನ್ನು ನಿವಾರಿಸಲು ಶಕ್ಯವಿಲ್ಲ.

ತಮ್ಮ ಅಸ್ತಿತ್ವಕ್ಕೆ ಕಾರಣವನ್ನು ದೊರಕಿಸಿಕೊಳ್ಳುವ ಸಲುವಾಗಿಯಾದರೂ ಸರ್ಕಾರಗಳು ಅನ್ಯರ ಧಾಳಿಯಿಂದ ತಮ್ಮ ಜನಗಳನ್ನು ರಕ್ಷಿಸಿಕೊಳ್ಳಬೇಕು. ಆದರೆ ಯಾರೊಬ್ಬರೂ ಮತ್ತೊಬ್ಬರಮೇಲೆ ಧಾಳಿಮಾಡಲು ಅಪೇಕ್ಷಿಸುವುದಿಲ್ಲ ಅಥವಾ ಧಾಳಿಮಾಡುವುದೂ ಇಲ್ಲ. ಆದುದರಿಂದಲೇ ಸರ್ಕಾರಗಳು ಶಾಂತಿಗಾಗಿ ಹಾರೈಸುವುದರ ಬದಲು, ತಂಬಾ ಎಚ್ಚರಿಕೆ ವಹಿಸಿ ಅನ್ಯರಾಷ್ಟ್ರಗಳು ತಮ್ಮ ಮೇಲೆ ರೇಗುವಂತೆ ಉದ್ರೇಕಿಸುತ್ತಾರೆ. ಹೀಗೆ ಬೇರೆಯವರ ಕೋಪವನ್ನು ತಮ್ಮಮೇಲೆ ಉದ್ರೇಕಿಸುವುದರಿಂದ ಸ್ವದೇಶದಲ್ಲಿ ದೇಶಪ್ರೇಮವನ್ನು ಕೆರಳಿಸುತ್ತಾರೆ. ಬಳಿಕ, ಎಲ್ಲ ದೇಶಗಳೂ ತಾವು ಅಪಾಯದಲ್ಲಿರುವುದಾಗಿಯೂ ರಕ್ಷಣೆಗಾಗಿ ಹೋರಾಡಬೇಕೆಂದೂ ತಮ್ಮ ಜನಗಳಲ್ಲಿ ಭರವಸೆ ತುಂಬುತ್ತಾರೆ.

ಅಧಿಕಾರ ಕೈಯಲ್ಲಿರುವುದರಿಂದ ಏಕಕಾಲದಲ್ಲಿ ಅನ್ಯರಾಷ್ಟ್ರಗಳನ್ನು ಕೆರಳಿಸುವುದು ಮತ್ತು ತಮ್ಮವರ ದೇಶಪ್ರೇಮವನ್ನು ಚುಚ್ಚುವುದು, ಎರಡೂ ಸಾಧ್ಯವಾಗುತ್ತಿದೆ. ಆದರೆ ಅವರಿಗೆ ಬೇರೆ ಮಾರ್ಗವೇ ಇಲ್ಲ: ಅವರ ಅಸ್ತಿತ್ವವೇ ಈ ಬಗೆಯ ನಡವಳಿಕೆಗಳ ಮೇಲೆ ನಿಂತಿದೆ.

ಪ್ರಾಚೀನ ಕಾಲದಲ್ಲಿ ಸರ್ಕಾರಗಳು ತಮ್ಮ ಜನಗಳನ್ನು ರಕ್ಷಿಸಲು ಅಗತ್ಯವಾಗಿದ್ದುವು. ಈಗ ಅದಕ್ಕೆ ಪ್ರತಿಯಾಗಿ ಸರ್ಕಾರಗಳು ಶಾಂತಿಯನ್ನು ಕಲಕಿ, ಜನಗಳ ಮಧ್ಯೆ ಕೃತಕವಾದ ರೀತಿಯಲ್ಲಿ ವೈರವನ್ನು ಉಂಟುಮಾಡುತ್ತಿವೆ.

ಬಿತ್ತುವ ಸಲುವಾಗಿ ಉಳುವ ಅಗತ್ಯವಿದ್ದಾಗ, ಉಳುಮೆ ಬುದ್ಧಿವಂತಿಕೆಯಾಗುತ್ತದೆ. ಆದರೆ ಬಿತ್ತಿದ ಮೇಲೆಯೂ ಉಳುತ್ತಾ ಹೋಗುವುದು ಸ್ಪಷ್ಟವಾಗಿ ಅಪಾಯಕಾರಕ ಅಸಂಬದ್ಧವಾಗುತ್ತದೆ. ಇದೇ ರೀತಿಯಲ್ಲಿ ಸರ್ಕಾರಗಳು ತಮ್ಮ ಜನಗಳು ಏನುಮಾಡಬೇಕು ಎಂಬುದರ ಬಗ್ಗೆ ನಿರ್ಬಂಧಪಡಿಸುತ್ತಿವೆ. ಅಸ್ತಿತ್ವದಲ್ಲಿರುವ ಒಮ್ಮತವನ್ನು ಭಂಗಿಸಲು ಪ್ರೇರಿಸುತ್ತಿವೆ. ಸರ್ಕಾರದ ಸಲುವಾಗಿಯಲ್ಲದಿದ್ದರೆ ಅತಿಕ್ರಮವಾಗುತ್ತಲೇ ಇರಲಿಲ್ಲ.

## 6

ಈ ಸರ್ಕಾರಗಳ ನಿಜಸ್ವರೂಪವಾದರೂ ಏನು? ಅವುಗಳಿಲ್ಲದೆ ತಾವು ಬದುಕಲು ಸಾಧ್ಯವಿಲ್ಲವೆಂದು ಜನ ಏಕೆ ಭಾವಿಸಿದ್ದಾರೆ?

ಒಂದು ಕಾಲಕ್ಕೆ ಈ ಬಗೆಯ ಸರ್ಕಾರಗಳ ಅಗತ್ಯವಿತ್ತು: ವ್ಯವಸ್ಥಿತರಾದ ನೆರೆಹೊರೆಯವರ ಎದುರು ರಕ್ಷಣೆಯಿಲ್ಲದೆ ಇರುವುದಕ್ಕಿಂತ, ಒಂದು ಸರ್ಕಾರವನ್ನು

ಬೆಂಬಲಿಸುವುದರಿಂದಾಗುವ ಕೆಡುಕು ಆಗ ಕಡಿಮೆಯಿತ್ತು. ಆದರೆ, ಅಂತಹ ಸರ್ಕಾರಗಳು ಈಗ ಅನಗತ್ಯವಾಗಿವೆ. ಏಕೆಂದರೆ, ತಮ್ಮ ಪ್ರಜೆಗಳನ್ನೇ ಅವು ಹೆದರಿಸುವ ಅಪಾಯದಿಂದಾಗಿ, ಹೆಚ್ಚಿನ ಕೆಡುಕನ್ನುಂಟುಮಾಡುತ್ತಿವೆ.

ಮಿಲಿಟರಿ ಸರ್ಕಾರಗಳು ಮಾತ್ರವಲ್ಲ, ಎಲ್ಲ ಸರ್ಕಾರಗಳೂ ನಿರುಪಯುಕ್ತವಾಗಿವೆ. ಚೀನಾದೇಶದಲ್ಲಿ ಸೈದ್ಧಾಂತಿಕವಾಗಿಯಾದರೂ ಒಪ್ಪಿಕೊಂಡಿರುವಂತೆ ಪರಿಶುದ್ಧರಾದ ಧಾರ್ಮಿಕ ವ್ಯಕ್ತಿಗಳಿಂದ ಕೂಡಿದ ಸರ್ಕಾರ ಹೆಚ್ಚು ಅಪಾಯಕಾರಿಯಾಗಿರುವುದಿಲ್ಲವೆನ್ನಬಹುದು. ಆದರೂ ಅವರ ಕಾರ್ಯಚಟುವಟಿಕೆಗಳ ಸ್ವರೂಪವೇ ಹಿಂಸಾತ್ಮಕ ಕೃತ್ಯ[4]ಗಳಿಗೆ ಹೊಂದಿಕೊಂಡಿರುವುದರಿಂದ, ಸರ್ಕಾರಗಳು ಯಾವಾಗಲೂ ಪವಿತ್ರತೆಗೆ ತೀರಾ ವಿರೋಧವಾಗುವ ಅಂಶಗಳಿಂದಲೇ ಕೂಡಿರುತ್ತವೆ. ಅತ್ಯಂತ ಉದ್ಧತರೂ, ನಿರ್ಲಜ್ಜರೂ ಮತ್ತು ವಕ್ರಬುದ್ಧಿಯುಳ್ಳ ಜನಗಳೇ ಅಲ್ಲಿರುತ್ತಾರೆ.

ಆದುದರಿಂದ ಮಿಲಿಟರಿ ಅಧಿಕಾರವನ್ನು ವಹಿಸಿಕೊಂಡ ಸರ್ಕಾರವಂತೂ ಅತ್ಯಂತ ಅಪಾಯಕಾರಿ ವ್ಯವಸ್ಥೆ ಎಂದು ಹೇಳಬಹುದಾಗಿದೆ.

ಬಂಡವಾಳಗಾರರು ಮತ್ತು ಪತ್ರಿಕಾಕರ್ತರನ್ನು ಸೇರಿಸಿಕೊಂಡು, ವ್ಯಾಪಕವಾದ ಅರ್ಥದಲ್ಲಿ ಸರ್ಕಾರವೆಂದರೆ, ಬಹುಸಂಖ್ಯಾತರನ್ನು ಅಲ್ಪಸಂಖ್ಯಾತರ ಅಧಿಕಾರಕ್ಕೆ ಒಳಗುಪಡಿಸುವ ವ್ಯವಸ್ಥೆಯೇ ಆಗಿದೆ. ಈ ಅಲ್ಪ ಸಂಖ್ಯಾತರು ಅವರ ಒಂದು ಚಿಕ್ಕ ವರ್ಗಕ್ಕೆ ಅಧೀನರಾಗಿರಬೇಕಾಗುತ್ತದೆ; ಈ ಚಿಕ್ಕವರ್ಗ ಮತ್ತೂ ಸಣ್ಣಗುಂಪಿಗೆ, ಕೊನೆಗೆ ಒಬ್ಬವ್ಯಕ್ತಿಗೆ ಅಧೀನವಾಗಿರಬೇಕಾಗುತ್ತದೆ. ಆತ ಮಿಲಿಟರಿ ಶಕ್ತಿಯ ನೆರವಿನಿಂದ ಉಳಿದೆಲ್ಲರ ಮೇಲೆಯೂ ಆಧಿಪತ್ಯವನ್ನು ಹೊಂದುತ್ತಾನೆ. ಈ ವ್ಯವಸ್ಥೆಯೆಲ್ಲಾ ಶಂಕು ವಿನಾಕಾರದಲ್ಲಿದ್ದು, ಶಿಖರದಲ್ಲಿರುವ ಒಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳಲ್ಲಿ ಉಳಿದ ಭಾಗಗಳ ಅಧಿಕಾರವೆಲ್ಲ ಸಂಗ್ರಹವಾಗುತ್ತದೆ.

ಶಿಖರದ ಭಾಗವನ್ನು ಉಳಿದವರಿಗಿಂತ ಅತ್ಯಂತ ಕಪಟಿಗಳು, ಉದ್ಧತರು ಮತ್ತು ನಿರ್ಲಜ್ಜರು ಅಥವಾ ಅವರ ವಂಶಸ್ಥರು ಆಕ್ರಮಿಸಿಕೊಂಡಿರುತ್ತಾರೆ.

---

4 'ಸರ್ಕಾರ' ಎನ್ನುವ ಪದವನ್ನು ಸಾಮಾನ್ಯವಾಗಿ ಒಂದು ರೀತಿಯಲ್ಲಿ ಅನಿರ್ದಿಷ್ಟವಾಗಿ, ಆಡಳಿತ ಅಥವಾ ನಿರ್ದೇಶನ ಎಂಬ ಅರ್ಥದಲ್ಲಿ ಉಪಯೋಗಿಸುವುದುಂಟು. ಈ ಲೇಖನದಲ್ಲಿ ಈ ಪದವನ್ನು ಬಳಸಿರುವ ಅರ್ಥ ಹೀಗಿದೆ: ಒಂದು ಸರ್ಕಾರದ ವಿಶಿಷ್ಟ ಲಕ್ಷಣಗಳೆಂದರೆ, ದೈಹಿಕ ಶಿಕ್ಷೆಗಳನ್ನು ವಿಧಿಸಲು ತನಗೆ ನೈತಿಕ ಹಕ್ಕಿದೆ ಎಂದು ವಾದಿಸುವುದು ಮತ್ತು ಕಾನೂನಿನ ಮೂಲಕ ಕೊಲೆಯನ್ನು ಒಂದು ಉತ್ತಮ ಕ್ರಮವನ್ನಾಗಿಸುವುದು.

ಇಂದು ಅತ ಬೋರಿಸ್‌ಗೊದುನೋವ್[5] ನಾಗಿರಬಹುದು. ನಾಳೆ ಗ್ರಿಗೋರಿ ಒತ್ರೆಪಯೆವ್[6] ಆಗಿರಬಹುದು. ತನ್ನ ಮಿಂಡಂದಿರ ಸಹಾಯದಿಂದ ಗಂಡನನ್ನು ಕೊಂದ ಹಾದರಗಿತ್ತಿ ಕೆಥರೀನಳು ಇಂದು ಅಧಿಕಾರದಲ್ಲಿರಬಹುದು. ನಾಳೆ ಪುಗಚ್ಚೆವ್[7] ಇರಬಹುದು. ಬಳಿಕ. ಹುಚ್ಚನಾದ ಪಾಲ್. ಒಂದನೆಯ ನಿಕೋಲಾಸ್ ಅಥವಾ ಮೂರನೆಯ ಅಲೆಕ್ಸಾಂಡರ್.

ಈ ದಿನ ನೆಪೋಲಿಯನ್. ನಾಳೆ ಒಬ್ಬ ಬೌರ್‌ಬಾನ್ ಅಥವಾ ಒಬ್ಬ ಒರಲಿಯನ್. ಒಬ್ಬ ಬೌಲಾಂಗರ್ ಅಥವಾ ಒಂದು ಪನಾಮ ಕಂಪೆನಿ; ಇಂದು ಗ್ಲಾಡ್‌ಸ್ಟನ್. ನಾಳೆ ಸಾಲಿಸ್‌ಬರಿ. ಚೆಂಬರ್ಲಿನ್ ಅಥವಾ ರೋಡ್ಸ್.

ಈ ಬಗೆಯ ಸರ್ಕಾರಗಳಿಗೆ ಸಂಪೂರ್ಣ ಅಧಿಕಾರವನ್ನು ಕೊಡಲಾಗಿದೆ. ಈ ಅಧಿಕಾರ ಆಸ್ತಿ ಮತ್ತು ಪ್ರಾಣಿಗಳ ಮಟ್ಟಿಗಲ್ಲ: ಎಲ್ಲರ ಆಧ್ಯಾತ್ಮಿಕ ಮತ್ತು ನೈತಿಕ ಜೀವನಗೆ ವಿದ್ಯಾಭ್ಯಾಸ ಮತ್ತು ಧಾರ್ಮಿಕ ನಿರ್ದೇಶನವನ್ನೂ ಒಳಗೊಂಡಿದೆ.

ಅಧಿಕಾರವೆಂಬ ಭಯಂಕರ ಯಂತ್ರವನ್ನು ಜನಗಳೇ ರಚಿಸಿ, ಯಾರು ಬೇಕಾದರೂ ಅದನ್ನು ಆಕ್ರಮಿಸಿಕೊಳ್ಳಲು ಬಿಡುತ್ತಾರೆ. ನೈತಿಕವಾಗಿ ಅಯೋಗ್ಯರೆನಿಸಿದವರಿಗೇ ಸಾಮಾನ್ಯವಾಗಿ ಅಧಿಕಾರಕ್ಕೆ ಅವಕಾಶ ಸಿಗುವುದು, ಜನಗಳು ಅವರಿಗೆ ಗುಲಾಮರಂತೆ ಅಧೀನವಾಗುತ್ತಾರೆ: ಕೆಡಕು ಸಂಭವಿಸಿದಾಗ ಆಶ್ಚರ್ಯಪಡುತ್ತಾರೆ. ಕ್ರಾಂತಿಕಾರರ ಬಾಂಬುಗಳಿಗೆ ಹೆದರುವ ಜನ ಅದಕ್ಕಿಂತ ಹೆಚ್ಚು ಭಯಂಕರವಾದ. ಮತ್ತು ಹೆಚ್ಚು ಅನರ್ಥಗಳನ್ನು ತಂದೊಡ್ಡುವ ಈ ವ್ಯವಸ್ಥೆಗೆ ಹೆದರುತ್ತಿಲ್ಲ.

ಸಿರ್ಕೇಸಿಯನ್ನ[8]ರಂತೆ ಪರಸ್ಪರರನ್ನು ಕಟ್ಟಿಕೊಂಡು ತಮ್ಮ ವೈರಿಗಳನ್ನು ಎದುರಿಸುವುದರಲ್ಲಿ ಉಪಯೋಗವಿದೆಯೆಂದು ಜನಗಳು ಮನಗಂಡಿದ್ದಾರೆ; ಅಪಾಯ ಹಳೆಯದಾಗಿದ್ದರೂ ಅಭ್ಯಾಸವಿನ್ನೂ ತಪ್ಪಿಹೋಗಿಲ್ಲ.

---

5 ತನ್ನ ದುರ್ಬಲ ಭಾವನಾದ ಝಾರ್ ಚಕ್ರವರ್ತಿ ಫೆದೊರ್ ಐವಾನೊವಿಚ್‌ನ ತರುವಾಯ ಝಾರ್‌ನಾಗಿ ಮಾಸ್ಕೊದಲ್ಲಿ 1598 ರಿಂದ 1605 ರವರೆಗೆ ಆಳಿದವನು.

6 ಗ್ರಿಗೊ ಒತ್ರೆಪೆಯೆವ್. ಒಬ್ಬ ಸುಳ್ಳು ಹಕ್ಕುದಾರ; ತಾನು ಭಯಂಕರ ಐವಾನ್‌ನ ಮಗನಾದ ದಿಮಿತ್ರಿ ಎಂದು ಸಾರಿಕೊಂಡು 1605 ಮತ್ತು 1606ರಲ್ಲಿ ಮಾಸ್ಕೊದಲ್ಲಿ ಆಳ್ವಿಕೆ ನಡೆಸಿದವನು.

7 1773–5, ರಲ್ಲಿ ನಡೆದ ಭಯಂಕರ ಬಂಡಾಯದ ನಾಯಕನಾದ ಪುಗಚ್ಚೆವ್‌ನನ್ನು. 1775 ರಲ್ಲಿ ಮಾಸ್ಕೊದಲ್ಲಿ ಕೊಲ್ಲಿಸಲಾಯಿತು.

8 ವೈರಿಗಳು ಸುತ್ತುವರಿದಾಗ ಸಿರ್ಕೇಸಿಯನ್ನರು ತಮ್ಮೆಲ್ಲರ ಕಾಲುಗಳನ್ನೂ ಪರಸ್ಪರ ಬಿಗಿದು ಕೊಂಡು ಹೋರಾಡುತ್ತಿದ್ದರಂತೆ; ಯಾರೂ ತಪ್ಪಿಸಿಕೊಳ್ಳದೆ ಹೋರಾಡುತ್ತಲೇ ಮಡಿಯಬೇಕೆಂಬ ಆಸೆಯಿಂದ. ರಷ್ಯನ್ನರು ಈ ದೇಶವನ್ನು ತಮ್ಮ ದೇಶಕ್ಕೆ ಸೇರ್ಪಡೆ ಮಾಡಿಕೊಂಡಾಗ ಇಂತಹ ಘಟನೆಗಳು ನಡೆದದ್ದುಂಟು.

ಕೇವಲ ಒಬ್ಬ ವ್ಯಕ್ತಿಯ ಕನಿಕರದ ಆಶ್ರಯದಲ್ಲಿ ಎಲ್ಲರೂ ಉಳಿಯಬೇಕಾಗಿ ಬರುವಂತೆ. ಅವರು ಬಹಳ ಎಚ್ಚರಿಕೆ ವಹಿಸಿಕೊಂಡು ಪರಸ್ಪರರನ್ನು ಕಟ್ಟಿಹಾಕಿಕೊಳ್ಳುತ್ತಾರೆ. ಬಳಿಕ ಹಗ್ಗದ ತುದಿಯನ್ನು ಯಾವನೋ ಒಬ್ಬ ಧೂರ್ತ ಅಥವಾ ಮೂರ್ಖನ ಕೈಗೆ ಕೊಟ್ಟು ಎಳೆದಾಡಿಸಿಕೊಳ್ಳುತ್ತಾರೆ. ಆತ ತನಗೆ ಇಷ್ಟಬಂದ ಅಪಾಯಗಳಿಗೆ ಇವರನ್ನು ಗುರಿಮಾಡುತ್ತಾನೆ.

7

ಯುದ್ಧ ಮತ್ತು ಶಸ್ತ್ರಾಸ್ತ್ರಗಳ ಕೇಡುಕು ದಿನೇ ದಿನೇ ಹೆಚ್ಚುತ್ತಿದ್ದು. ಅವರ ಭಯದಿಂದ ಜನರನ್ನು ಮುಕ್ತಗೊಳಿಸಲು ನಮಗೆ ಬೇಕಾಗಿರುವುದು. ಸಭೆ ಅಥವಾ ಸಮ್ಮೇಳನಗಳಲ್ಲ. ಒಪ್ಪಂದ ಅಥವಾ ಪಂಚಾಯಿತಿಯ ನ್ಯಾಯಾಲಯಗಳಲ್ಲ; ಆದರೆ. ಹಿಂಸೆಯ ಸಾಧನವಾದ ಸರ್ಕಾರಗಳ ವಿನಾಶ. ಏಕೆಂದರೆ ಮಾನವ ಜನಾಂಗದ ಬಹುತೇಕ ಕೇಡುಕುಗಳಿಗೆ ನೆಲೆ ಅಲ್ಲಿದೆ. ಸರ್ಕಾರಿ ಹಿಂಸೆಯನ್ನು ನಿರ್ಮೂಲಗೊಳಿಸಲು ಒಂದೇ ಒಂದು ಅಗತ್ಯವಿದೆ: ದೇಶಪ್ರೇಮವೆಂಬ ಭಾವನೆಯೇ ಹಿಂಸೆಯ ಸಾಧನವನ್ನು ಬೆಂಬಲಿಸುತ್ತಿರುವುದರಿಂದ, ಈ ಭಾವನೆ ಅನಾಗರಿಕವಾದುದು. ನಾಚಿಕೆಗೇಡಿನದು ಮತ್ತು ಅಪಾಯಕಾರಿಯಾದುದು, ವಿಶೇಷವಾಗಿ ಅನೈತಿಕವಾದದ್ದು ಎಂಬುದನ್ನು ಜನ ಅರ್ಥಮಾಡಿಕೊಳ್ಳಬೇಕು. ಅನಾಗರಿಕ ಭಾವನೆಯೇಕೆಂದರೆ. ನೈತಿಕವಾಗಿ ಅತ್ಯಂತ ಕೆಳವರ್ಗದಲ್ಲಿರುವ ಜನಗಳು ಮಾತ್ರ ಸಹಜವಾಗಿ ಅನ್ಯರಿಂದ ಅತ್ಯಾಚಾರವನ್ನು ನಿರೀಕ್ಷಿಸುತ್ತಾರೆ ಮತ್ತು ಅತ್ಯಾಚಾರ ಮಾಡಲು ಸಿದ್ಧರಿರುತ್ತಾರೆ. ಅಪಾಯಕಾರಿ ಭಾವನೆಯೇಕೆಂದರೆ. ವಿವಿಧ ಜನಗಳ ನಡುವೆ ಪ್ರಯೋಜನಕಾರಿಯಾದ ಹರ್ಷದಾಯಕ ಸಂಬಂಧವನ್ನು ಅದು ಕಲಕುತ್ತದೆ; ವಿಶೇಷವಾಗಿ ನೀಚರ ಕೈಗೆ ಅಧಿಕಾರ ಬರಬಹುದಾದಂತಹ ಸರ್ಕಾರಿ ವ್ಯವಸ್ಥೆಯನ್ನು ಅದು ನಿರ್ಮಾಣಮಾಡುತ್ತದೆ. ನಾಚಿಕೆಗೇಡಿನ ಭಾವನೆಯೇಕೆಂದರೆ. ಮನುಷ್ಯರನ್ನು ಹುಂಜಗಳಂತೆ, ಗೂಳಿಗಳಂತೆ. ಹಣಕ್ಕಾಗಿ ಸೆಣಸಾಡುವ ಮಲ್ಲರಂತೆ ಪರಿವರ್ತಿಸುತ್ತದೆ: ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಮತ್ತು ಜೀವನವನ್ನು ತಮ್ಮ ಸರ್ಕಾರದ ಸಲುವಾಗಿ ಅವರು ಹಾಳುಮಾಡಿಕೊಳ್ಳುತ್ತಾರೆ. ಅನೈತಿಕ ಭಾವನೆಯೇಕೆಂದರೆ. ಕ್ರೈಸ್ತ ಧರ್ಮದ ಬೋಧೆಯಂತೆ ಮನುಷ್ಯ ತನ್ನನ್ನು ದೇವಪುತ್ರನೆಂದು ಒಪ್ಪಿಕೊಳ್ಳದೆ ಅಥವಾ ವಿವೇಕದ ನಂಬಿಕೆಯಂತೆ ಸ್ವತಂತ್ರ ವ್ಯಕ್ತಿಯೆಂದುಕೊಳ್ಳದೆ – ದೇಶಪ್ರೇಮದ ಪ್ರಭಾವಕ್ಕೆ ಒಳಗಾಗಿ ತಾನು ತಾಯ್ನಾಡಿನ ಮಗನೆಂದೂ ತನ್ನ ಸರ್ಕಾರದ ಗುಲಾಮನೆಂದೂ ಒಪ್ಪಿಕೊಳ್ಳುತ್ತಾನೆ; ಅವನ ವಿವೇಕ ಮತ್ತು ಆತ್ಮಸಾಕ್ಷಿಗೆ ವಿರೋಧವಾದ ಕೆಲಸಗಳನ್ನು ಮಾಡುತ್ತಾನೆ.

ಜನಗಳು ಇದನ್ನೆಲ್ಲಾ ಅರ್ಥಮಾಡಿಕೊಳ್ಳುವ ಅಗತ್ಯವಿದೆ. ಆಗಮಾತ್ರ. ನಮ್ಮೆಲ್ಲರನ್ನೂ ಸರಪಳಿ ಹಾಕಿ ಬಂಧಿಸಿರುವ ಸರ್ಕಾರವೆಂಬ ಸಂಕೋಲೆ ಯಾವ ಹೋರಾಟವೂ ಇಲ್ಲದೆ ಮುರಿದು ಚೂರಾಗುತ್ತದೆ: ಮತ್ತು ಅರ್ಥರಹಿತವಾದ ಅವರ ಭಯಂಕರ ಕೇಡುಕುಗಳೂ ಕೊನೆಯಾಗುತ್ತವೆ.

ಈಗಾಗಲೇ ಜನ ಇದನ್ನು ಅರ್ಥಮಾಡಿಕೊಳ್ಳತೊಡಗಿದ್ದಾರೆ: ಉದಾಹರಣೆಗೆ ಅಮೆರಿಕೆಯ ಪ್ರಜೆಯೊಬ್ಬ ಹೀಗೆ ಬರೆಯುತ್ತಿದ್ದಾನೆ:

'ಬೇಸಾಯಗಾರರು. ಯಂತ್ರಕುಶಲಿಗಳು. ವ್ಯಾಪಾರಿಗಳು. ಉತ್ಪಾದಕರು. ಅಧ್ಯಾಪಕರು – ಆದ ನಾವುಗಳು ಬಯಸುವ ಹಕ್ಕುಬಾಧ್ಯತೆಗಳೆಂದರೆ. ನಮ್ಮ ಕೆಲಸಕಾರ್ಯಗಳಲ್ಲಿ ನಿರತರಾಗಿರುವುದು. ನಮಗೆ ಸ್ವಂತ ಮನೆಗಳಿವೆ. ಸ್ನೇಹಿತರನ್ನು ಪ್ರೀತಿಸುತ್ತೇವೆ. ನಮ್ಮ ಕುಟುಂಬಗಳನ್ನು ಕುರಿತು ಶ್ರದ್ಧೆಯಿದೆ. ನೆರೆಹೊರೆಯವರ ವಿಚಾರದಲ್ಲಿ ತಲೆಹಾಕುವುದಿಲ್ಲ. – ನಮಗೆ ಮಾಡಲು ಕೆಲಸವಿದೆ. ಆಸಕ್ತಿಯೂ ಇದೆ.

'ನಮ್ಮಷ್ಟಕ್ಕೆ ನಮ್ಮನ್ನು ಬಿಟ್ಟು ಬಿಡಿ!

'ಆದರೆ ಈ ರಾಜಕಾರಣಿಗಳು ಬಿಡುವುದಿಲ್ಲ. ಅವರು ನಮ್ಮನ್ನು ಆಳಲು ಪಟ್ಟುಹಿಡಿಯುತ್ತಾರೆ; ನಮ್ಮ ದುಡಿಮೆಯ ಮೇಲೆ ಬದುಕುತ್ತಾರೆ. ನಮ್ಮ ವಸ್ತುಗಳನ್ನೇ ತಿಂದು ನಮಗೆ ತೆರಿಗೆ ವಿಧಿಸುತ್ತಾರೆ; ಬಲಾತ್ಕರಿಸುತ್ತಾರೆ: ನಮ್ಮ ಮಕ್ಕಳನ್ನು ಅವರ ಯುದ್ಧಗಳಿಗಾಗಿ ಬೇರ್ಪಡಿಸುತ್ತಾರೆ. ಅಸಂಖ್ಯಾತ ಜನಗಳು ನಮ್ಮ ತೆರಿಗೆಯ ಆಧಾರದ ಮೇಲೆ ಸರ್ಕಾರವನ್ನು ಅವಲಂಬಿಸಿ ಬದುಕುತ್ತಿರುವುದರಿಂದ, ನಮ್ಮಮೇಲೆ ಯಶಸ್ವಿಯಾಗಿ ತೆರಿಗೆ ವಿಧಿಸಿ, ವಸೂಲಿಮಾಡಲು ಖಾಯಂ ಆದ ಸೈನ್ಯವನ್ನೇ ಉಳಿಸಿಕೊಂಡಿದ್ದಾರೆ. ದೇಶದ ರಕ್ಷಣೆಗಾಗಿ ಸೈನ್ಯವಿದೆಯೆಂಬ ವಾದ ಶುದ್ಧ ಮೋಸ ಮತ್ತು ನಟನೆ. ಜರ್ಮನಿಯವರು ತಮ್ಮ ಮೇಲೆ ಬೀಳಲು ಸದಾ ಕಾತರರಾಗಿ ಸಿದ್ಧವಾಗಿದ್ದಾರೆಂದು ಫ್ರೆಂಚ್ ಸರ್ಕಾರ ತನ್ನ ಜನಗಳನ್ನು ಹೆದರಿಸುತ್ತದೆ. ರಷ್ಯನರು ಬ್ರಿಟಿಷರಿಗೆ ಹೆದರುತ್ತಾರೆ. ಬ್ರಿಟಿಷರು ಎಲ್ಲರಿಗೂ ಹೆದರುತ್ತಾರೆ. ಈಗ ನಮಗೆ ಅಮೆರಿಕೆಯಲ್ಲಿ ಹೇಳುತ್ತಿರುವುದೇನೆಂದರೆ: ಇಡೀ ಯೂರೋಪ್ ನಮ್ಮ ವಿರುದ್ಧ ಯಾವಕ್ಷಣದಲ್ಲಿ ಯಾದರೂ ಒಂದುಗೂಡುವ ಸಂಭವವಿರುವುದರಿಂದ. ನಾವು. ನಮ್ಮ ನೌಕಾದಳ ಮತ್ತು ಸೈನ್ಯವನ್ನು ಹೆಚ್ಚಿಸಬೇಕು.

'ಇದು ವಂಚನೆ ಮತ್ತು ಸುಳ್ಳು. ಫ್ರಾನ್ಸ್. ಜರ್ಮನಿ. ಇಂಗ್ಲೆಂಡ್ ಮತ್ತು ಅಮೆರಿಕೆಯ ಸರಳ ಸ್ವಭಾವದ ಜನಗಳು ಯುದ್ಧವನ್ನು ವಿರೋಧಿಸುತ್ತಾರೆ. ನಮ್ಮನ್ನು, ನಮ್ಮಷ್ಟಕ್ಕೆ ಬಿಟ್ಟರೆ ಸಾಕೆಂದು ಹಾರೈಸುತ್ತಿದ್ದೇವೆ. ಹೆಂಡಂದಿರು. ಮಕ್ಕಳು. ವಯಸ್ಸಾದ ತಂದೆತಾಯಿಗಳು. ಆತ್ಮೀಯರು ಮತ್ತು ಮನೆಮಾರುಗಳನ್ನು ಬಿಟ್ಟುಹೋಗಿ. ಯಾರೊಂದಿಗೋ ಯುದ್ಧಮಾಡಲು ಜನಗಳಿಗೆ ಆಸೆಯಿಲ್ಲ. ನಾವು ಶಾಂತಿಪ್ರಿಯರು ಮತ್ತು ಯುದ್ಧವೆಂದರೆ ಹೆದರುತ್ತೇವೆ. ಅದನ್ನು ದ್ವೇಷಿಸುತ್ತೇವೆ.

'ತನ್ನಂತೆಯೇ ಇತರರನ್ನು ಕಾಣು. ಎಂಬ ಬೈಬಲ್ಲಿನ ಸುವರ್ಣ ನಿಯಮಕ್ಕೆ ವಿಧೇಯರಾಗಿರಲು ನಾವು ಬಯಸುತ್ತೇವೆ.

'ಶಸ್ತ್ರಸಜ್ಜಿತ ಜನಗಳ ಅಸ್ತಿತ್ವದ ಅನಿವಾರ್ಯ ಪರಿಣಾಮವೇ ಯುದ್ಧ. ಯಾವದೇಶ, ಖಾಯಂ ಆದ ದೊಡ್ಡ ಸೈನ್ಯವನ್ನು ಇಟ್ಟುಕೊಂಡಿರುತ್ತದೆಯೋ ಅದು ಒಂದಲ್ಲ ಒಂದು ದಿನ ಯುದ್ಧಕ್ಕೆ ತೊಡಗುತ್ತದೆ. ತನ್ನ ಮುಷ್ಟಿಯ ಶಕ್ತಿಯಲ್ಲಿ ಯಾವನಿಗೆ ಹೆಮ್ಮೆಯಿರುತ್ತದೆಯೋ ಅವನು ಒಂದಲ್ಲ ಒಂದುದಿನ. ಅದನ್ನು ನಂಬದವನನ್ನು ಭೇಟಿಯಾಗುತ್ತಾನೆ: ಪರಿಣಾಮವಾಗಿ ಹೊಡೆದಾಟವಾಗುತ್ತದೆ. ಯಾರು ಶ್ರೇಷ್ಠರು ಎಂದು ನಿರ್ಧರಿಸುವ ಹವ್ಯಾಸವನ್ನು ಬಿಟ್ಟರೆ, ಜರ್ಮನಿ ಮತ್ತು ಫ್ರಾನ್ಸ್‌ಗಳ ನಡುವೆ ಯಾವ ಸಮಸ್ಯೆಯೂ ಇಲ್ಲ. ಅವರು ಅನೇಕಬಾರಿ ಹೋರಾಡಿದ್ದಾರೆ: ಹೋರಾಡುವವರಿದ್ದಾರೆ. ಜನಗಳಿಗೆ ಹೋರಾಟದಲ್ಲಿ ಆಸಕ್ತಿಯಿದೆಯೆಂದೇನೂ ಅಲ್ಲ: ಆದರೆ ಮೇಲು ವರ್ಗದವರು ಜನಗಳ ಹೆದರಿಕೆಗೆ ಗಾಳಿಹಾಕಿ ಉದ್ರೇಕಿಸಿ. ತಮ್ಮ ಮನೆಮಾರುಗಳ ರಕ್ಷಣೆಗಾಗಿ ಹೋರಾಡಲೇ ಬೇಕೆಂದು ಅವರು ಯೋಚಿಸುವಂತೆ ಮಾಡುತ್ತಾರೆ.

'ಆದುದರಿಂದ ಕ್ರೈಸ್ತನ ಉಪದೇಶಗಳನ್ನು ಅನುಸರಿಸ ಬಯಸುವ ಜನಗಳನ್ನು ಹಾಗೆ ಮಾಡಲು ಬಿಡದೆ, ಸರ್ಕಾರಗಳು ಅವರಿಗೆ ತೆರಿಗೆ ವಿಧಿಸಿ. ಅತ್ಯಾಚಾರಕ್ಕೆ ಗುರಿ ಮಾಡಿ ಮೋಸಗೊಳಿಸುತ್ತವೆ.

'ಕ್ರಿಸ್ತನು ಉಪದೇಶಿಸಿದ್ದು—ನಮ್ರತೆ. ಭಕ್ತಿ. ವೈರಿಗಳನ್ನು ಕ್ಷಮಿಸುವುದು ಮತ್ತು ಕೊಲೆಯನ್ನು ತಪ್ಪೆಂದು ಭಾವಿಸುವುದನ್ನು. ಜನಗಳಿಗೆ ಆಣೆಯಿಡಬೇಡಿರೆಂದು ಬೈಬಲ್ ಬೋಧಿಸುತ್ತದೆ. ಆದರೆ. ಮೇಲುವರ್ಗದ ಜನ ತಾವು ನಂಬದಿದ್ದರೂ ಸಹ. ನಮ್ಮನ್ನು ಬೈಬಲ್‌ಮೇಲೆ ಆಣೆಯಿಡಲು ಒತ್ತಾಯಿಸುತ್ತಾರೆ.

'ನಯನುಣುಪಿನ ಬಟ್ಟೆಗಳನ್ನು. ನೀಲಿಪೋಷಾಕು ಮತ್ತು ಕಂಚಿನ ಗುಂಡಿಗಳನ್ನು ಹಾಗೂ ಇತರ ಅತ್ಯಂತ ಬೆಲೆಬಾಳುವ ಉಡಿಗೆತೊಡಿಗೆಗಳನ್ನು ಧರಿಸಿಕೊಂಡು. ಸ್ವಲ್ಪವೂ ಕಷ್ಟಪಡದೆ ನಮ್ಮ ದುಡಿಮೆಯ ಜೀವರಿನ ಮೇಲೆ ಬದುಕುತ್ತಿರುವ ಈ ಹೊಟ್ಟೆ ಬಾಕರಿಂದ ನಮ್ಮ ಬಿಡುಗಡೆ ಹೇಗೆ? ಎಂಬುದೇ ನಮ್ಮ ಮುಂದಿರುವ ಪ್ರಶ್ನೆ:

'ನಾವು ಅವರೊಡನೆ ಹೋರಾಡಬೇಕೆ?

'ಇಲ್ಲ. ನಾವು ರಕ್ತಪಾತವನ್ನು ನಂಬುವುದಿಲ್ಲ. ಅಲ್ಲದೆ. ಅವರ ಹತ್ತಿರ ಎಷ್ಟು ಕಾಲಕ್ಕಾದರೂ ಸಾಕಾಗುವಷ್ಟು ಹಣ ಮತ್ತು ಬಂದೂಕುಗಳಿವೆ.

'ಆದರೆ ನಮ್ಮನ್ನು ಸುಡಲು ಅವರು ಅಪ್ಪಣೆಕೊಡುವ ಸೈನ್ಯ ಯಾರಿಂದ ಕೂಡಿದೆ?

'ಏಕೆ? ಅವರು ನಮ್ಮ ನೆರೆಹೊರೆಯುವರು ಮತ್ತು ಸೋದರರೇ ಅಲ್ಲವೆ?—ತಮ್ಮ ದೇಶರಕ್ಷಣೆಯ ಮೂಲಕ ದೇವರ ಸೇವೆ ಮಾಡುತ್ತಿರುವೆವೆಂಬ ಮೋಸದ ಕಲ್ಪನೆಗೆ ಅವರು ಗುರಿಯಾಗಿದ್ದಾರೆ. ನಾವು ವಿಧೇಯರಾಗಿದ್ದುಕೊಂಡು ತೆರಿಗೆಯನ್ನು ಸಹಿಸಿದರೆ, ನಮ್ಮ ಯೋಗಕ್ಷೇಮದ ಹೊಣೆಗಾರಿಕೆಯನ್ನು ವಹಿಸಿಕೊಳ್ಳುವುದಾಗಿ ನಟಿಸುತ್ತಿರುವ ಮೇಲುವರ್ಗದ ಹೊರತು, ನಮ್ಮ ದೇಶಕ್ಕೆ ನಿಜವಾದ ವೈರಿಗಳೇ ಇಲ್ಲ.

'ನಮ್ಮ ಉತ್ಪತ್ತಿಯನ್ನೇ ಹೀರಿ ಬದುಕುತ್ತಾ, ನಮ್ಮನ್ನೇ ದ್ವೇಷಿಸುವವನಾಗಲು ಅವರು ನಮ್ಮ ಸೋದರರನ್ನೇ ನಮ್ಮ ಮೇಲೆ ಛೂ ಬಿಡುತ್ತಾರೆ. ಎಲ್ಲಿಯವರೆಗೆ ನೀವು ನಿಮ್ಮ ತೆರಿಗೆಯನ್ನು ಕೊಟ್ಟಿರುವುದಿಲ್ಲವೋ ಅಲ್ಲಿಯವರೆಗೆ ನೀವು ನಿಮ್ಮ ಹೆಂಡತಿಗೆ ಒಂದು ಟೆಲಿಗ್ರಾಂ ಕಳಿಸುವಂತಿಲ್ಲ; ಸ್ನೇಹಿತನಿಗೆ ಒಂದು ಅವಸರದ ಛಾಂಗಿ ಕಳಿಸುವಂತಿಲ್ಲ: ನಿಮ್ಮ ಅಂಗಡಿಯವನಿಗೆ ಚೆಕ್ ಕೊಡುವಂತಿಲ್ಲ: ಈ ತೆರಿಗೆ. ಸೈನಿಕರನ್ನು ಸಾಕುವುದಕ್ಕಾಗಿ: ಸಮಯ ಬಂದರೆ ನಿಮ್ಮನ್ನು ಕೊಲ್ಲುವ, ತೆರಿಗೆ ಕೊಡದಿದ್ದರೆ ಬಂಧಿಸುವ ಸಲುವಾಗಿ ಇಟ್ಟುಕೊಂಡಿರುವ ಸೈನಿಕರನ್ನು ಸಾಕುವುದಕ್ಕೆ.

'ವಿದ್ಯಾಭ್ಯಾಸವೊಂದೆ ಇದಕ್ಕಿರುವ ಪರಿಹಾರ. ಕೊಲ್ಲುವುದು ತಪ್ಪೆಂದು ಬೋಧಿಸಬೇಕು. ಮತ್ತೆ ಮತ್ತೆ ಅವರಿಗೆ ಸುವರ್ಣ ನಿಯಮವನ್ನು ಕಲಿಸಬೇಕು. ತುಪಾಕಿಯ ಮೌಢ್ಯತೆಗೆ ತಲೆಬಾಗಲು ನಿರಾಕರಿಸುವುದರ ಮೂಲಕ ಮೇಲುವರ್ಗವನ್ನು ಮೌನವಾಗಿ ಪ್ರತಿಭಟಿಸಬೇಕು. ದೇಶಪ್ರೇಮವನ್ನು ಹಾಸ್ಯವಾಗಿಸಿ. ಯುದ್ಧದ ಪರವಾಗಿ ನಿರರ್ಗಳವಾಗಿ ಭಾಷಣಮಾಡುವ ಉಪದೇಶಕರನ್ನು ಬೆಂಬಲಿಸಲು ನಿರಾಕರಿಸಬೇಕು. ಅವರೂ ಸಹ ನಮ್ಮಂತೆ ಕೆಲಸಮಾಡಲು. ಹೊರಡಲಿ. ನಮಗೆ ಕ್ರಿಸ್ತನಲ್ಲಿ ನಂಬಿಕೆಯಿದೆ– ಅವರೇ ನಂಬುವುದಿಲ್ಲ. ತಾನು ಏನು ಯೋಚಿಸಿದನೋ ಅದನ್ನೇ ಕ್ರಿಸ್ತ ಹೇಳಿದ. ಆದರೆ ಇವರು. ಅಧಿಕಾರದಲ್ಲಿರುವ ಮೇಲುವರ್ಗಕ್ಕೆ ಪ್ರಿಯವಾಗುವುದೆಂದು ಯಾವುದನ್ನು ಭಾವಿಸುತ್ತಾರೆಯೋ ಅದನ್ನು ಹೇಳುತ್ತಾರೆ.

'ನಾವು ಸೈನ್ಯಕ್ಕೆ ದಾಖಲಾಗುವುದಿಲ್ಲ. ಅವರ ಅಪ್ಪಣೆಯಂತೆ ನಾವು ಗುಂಡು ಹಾರಿಸುವುದಿಲ್ಲ. ಸಾಧು ಸಜ್ಜನರಾದ ಮನುಷ್ಯರನ್ನು ನಾವು ಕೋವಿಯ ತುದಿಯಿಂದ ಪ್ರಹರಿಸುವುದಿಲ್ಲ. ತಮ್ಮ ನಿರಾತಂಕವಾದ ಗೃಹಜೀವನಕ್ಕಾಗಿ ಹೋರಾಡುತ್ತಿರುವ ಕುರುಬರು ಮತ್ತು ಒಕ್ಕಲಿಗರ ಮೇಲೆ ಸಿಸಿಲ್‌ರೋಡ್ಸ್‌ನ ಸಲಹೆಯಂತೆ ನಾವು ಗುಂಡುಹಾರಿಸುವುದಿಲ್ಲ. 'ತೋಳ ಬಂತು, ತೋಳ'. ಎಂಬ ನಿಮ್ಮ ಸುಳ್ಳು ಬೊಬ್ಬೆಯಿಂದ ನಾವು ಬೆಚ್ಚುವುದಿಲ್ಲ. ಕೊಡಲೇ ಬೇಕಾಗಿರುವುದರಿಂದ ನಿಮ್ಮ ತೆರಿಗೆಗಳನ್ನು ನಾವು ಕೊಡುತ್ತಿದ್ದೇವೆ. ಮುಂದೆ. ಕೊಡಬಾರದೆನಿಸಿದರೆ ಅದನ್ನೂ ಕೊಡುವುದಿಲ್ಲ. ನಿಮ್ಮ ಠಕ್ಕಿನ ದಾನಧರ್ಮಗಳಿಗಾಗಿ ಕೊಡುಗೆ ಮತ್ತು ಕಾಣಿಕೆಗಳನ್ನೂ ಇನ್ನು ಮುಂದೆ ನಾವು ಕೊಡುವುದಿಲ್ಲ. ಸಂದರ್ಭಬಿದ್ದಾಗ ನಮ್ಮ ಮನಸ್ಸನ್ನು ಬಿಚ್ಚಿ ಮಾತನಾಡುತ್ತೇವೆ. ಜನಗಳಿಗೆ ಶಿಕ್ಷಣಕೊಡುತ್ತೇವೆ.

ಇಷ್ಟೆಲ್ಲಾ ನಡೆಯುತ್ತಿರುವಾಗಲೇ ನಮ್ಮ ಮೂಕಪ್ರಭಾವದ ಅನುಭವಕ್ಕೆ ಜನ ಒಳಗಾಗುತ್ತಾರೆ. ಕಷಾಯಕ್ಕಾಗಿ ಮಿಲಿಟರಿ ಸೇರಿರುವವರು ಆಗ ಅರ್ಧಮನಸ್ಕರಾಗಿ ಯುದ್ಧಮಾಡಲು ನಿರಾಕರಿಸುತ್ತಾರೆ. ಕಲಹ, ರಕ್ತಪಾತ ಮತ್ತು ಯುದ್ಧಗಳ ಬದುಕಿಗಿಂತ ಕ್ರಿಸ್ತನ ಶಾಂತಿ ಮತ್ತು ಸದ್ಭಾವನೆಯ ಬದುಕು ಉತ್ತಮವಾದದ್ದೆಂದು ಜನಗಳಿಗೆ ನಾವು ತಿಳಿಯ ಹೇಳುತ್ತೇವೆ.

'ಭೂಮಿಯ ಮೇಲೆ ಶಾಂತಿ ನೆಲಸುವುದು, ಸೈನ್ಯರಹಿತರಾಗಿ ಜನ ಇರಲು ಸಾಧ್ಯವಾದಾಗ: ಮತ್ತು ತಮ್ಮಂತೆಯೇ ಇರಲು ಬೇರೆಯವರನ್ನು ಪ್ರೇರೇಪಿಸಿದಾಗ'.

— ಹೀಗೆ ಅಮೆರಿಕೆಯ ಪ್ರಜೆಯೊಬ್ಬ ಬರೆದಿದ್ದಾನೆ. ಬೇರೆ ಬೇರೆ ಮೂಲೆಗಳಿಂದ, ವಿವಿಧರೂಪಗಳಲ್ಲಿ ಈ ಬಗೆಯ ಸ್ವರಗಳು ಕೇಳಿಬರುತ್ತಿವೆ.

ಜರ್ಮನಿಯ ಸೈನಿಕನೊಬ್ಬ ಬರೆಯುತ್ತಾನೆ:

'ಪ್ರಷ್ಯಾದ ಕಾವಲು ಪಡೆಯೊಂದಿಗೆ ನಾನು ಎರಡು ಧಾಳಿಗಳನ್ನು ಅನುಭವಿಸಿದೆ. (1866 ಮತ್ತು 1870ರಲ್ಲಿ). ಹೇಳಿಕೊಳ್ಳಲಸಾಧ್ಯವೆನಿಸುವ ದುರದೃಷ್ಟಕ್ಕೆ ನನ್ನನ್ನು ಗುರಿಮಾಡಿದ ಯುದ್ಧವನ್ನು, ನಾನೀಗ ಆತ್ಮಸಾಕ್ಷಿಯಾಗಿ ದ್ವೇಷಿಸುತ್ತಿದ್ದೇನೆ. ನಮ್ಮಂತಹ ಗಾಯಾಳುಗಳಿಗೆ ಯಾವ ಬಗೆಯ ಪುರಸ್ಕಾರ ಸಿಗುತ್ತದೆಯೆಂದರೆ, ಒಂದು ಕಾಲದಲ್ಲಿ ದೇಶಪ್ರೇಮಿಗಳಾಗಿದ್ದಕ್ಕೆ ನಾವು ನಾಚಿಕೆ ಪಡಬೇಕು. ಉದಾಹರಣೆಗೆ ನನ್ನ ವಿಚಾರವನ್ನು ಹೇಳುವುದಾದರೆ: 1870ರ ಆಗಸ್ಟ್ 18ನೇ ದಿನಾಂಕ ಸೈಂಟ್ ಪ್ರಿವಟ್ ಮೇಲೆ ನಡೆದ ಧಾಳಿಯಲ್ಲಿ ಗುಂಡಿಗೆ ತುತ್ತಾದ ನನ್ನ ಬಲತೋಳಿಗೆ ದಿನಕ್ಕೆ ಒಂಬತ್ತು ಪೆನ್ನಿಗಳನ್ನು ಪರಿಹಾರವಾಗಿ ಕೊಡಲಾಗುತ್ತಿದೆ. ಕೆಲವು ಬೇಟೆನಾಯಿಗಳನ್ನು ಸಾಕಲು ಇನ್ನೂ ಹೆಚ್ಚಿಗೆ ಕೊಡುತ್ತಾರೆ. ಎರಡು ಸಲ ಗಾಯಗೊಂಡ ತೋಳಿನಿಂದಾಗಿ ನಾನು ವರ್ಷಗಟ್ಟಲೆ ಯಾತನೆಯನ್ನು ಅನುಭವಿಸಿದ್ದೇನೆ. 1866ರಲ್ಲಿಯೇ ಆಸ್ಟ್ರಿಯಾದ ವಿರುದ್ಧ ನಡೆದ ಯುದ್ಧದಲ್ಲಿ ಭಾಗವಹಿಸಿ, ಟ್ರಾಯುತೆನಾವ್ ಮತ್ತು ಬೊನಿಘ್ರಾಟ್ಸ್ ಎಂಬ ಸ್ಥಳಗಳಲ್ಲಿ ಹೋರಾಡಿ ಸಾಕಷ್ಟು ಭೀಕರಗಳನ್ನು ಕಂಡಿದ್ದೆ. 1870ರಲ್ಲಿ ರಿಸರ್ವ್ ಪಡೆಯಲ್ಲಿದ್ದ ಕಾರಣ, ಮತ್ತೆ ನನ್ನನ್ನು ಹೊರಕ್ಕೆ ಕರೆಯಲಾಯಿತು. ಸೈಂಟ್ ಪ್ರಿವಟ್‌ಮೇಲೆ ನಡೆದ ಧಾಳಿಯಲ್ಲಿ ನಾನಾಗಲೇ ಗಾಯಗೊಂಡಿದ್ದೆ, ಈಗ ಮತ್ತೊಮ್ಮೆ ಜೆನ್ನಾದ ಪಟು ಬಿದ್ದಿತು. ಸೈನ್ಯಕ್ಕೆ ಸೇರುವ ಮೊದಲು ಪಾನೀಯಗಳ ಅಂಗಡಿಯೊಂದರಲ್ಲಿ ನಾನು ಒಳ್ಳೆ ಕೆಲಸದಲ್ಲಿದ್ದೆ; ಆಮೇಲೆ ಕೆಲಸವೂ ಸಿಗಲಿಲ್ಲ. ಅಂದಿನಿಂದಲೂ ನನ್ನ ಕಾಲಮೇಲೆ ನಾನು ನಿಲ್ಲಲು ಸಾಧ್ಯವಾಗುತ್ತಿಲ್ಲ. ಮದ ಇಳಿದ ಮೇಲೆ, ಬೆಲೆಯಿಲ್ಲದ ಗಾಯಾಳುವಿಗೆ ಏನೂ ಉಳಿದಿರಲಿಲ್ಲ: ಅನುಕಂಪೆಯಿಂದ ಭಿಕ್ಷುಕರಿಗೆ ಕೊಡುವಂತಹ ಕನಿಷ್ಠ ಭತ್ಯದ ಮೇಲೆ ಜೀವನ ನಡೆಸುವುದರ ಹೊರತು.

'ಧನಪಿಶಾಚಿಗಳಂತೆ ಒಬ್ಬರನ್ನೊಬ್ಬರು ಪೀಡಿಸಲು, ಪಳಗಿಸಿದ ಪ್ರಾಣಿಗಳಂತೆ ಜನಗಳು ಧಾವಿಸುತ್ತಿರುವ ಈ ಜಗತ್ತಿನಲ್ಲಿ ಉತ್ತಮ ಕಲ್ಪನೆಗಳೇ ಇಲ್ಲವಾಗಿವೆ. ಗುಡ್ಡದ ಮೇಲಿನಿಂದ ಕ್ರಿಸ್ತನು ಮಾಡಿದ ಉಪದೇಶದಲ್ಲಿ ಸುಂದರವಾಗಿ ಹೇಳಲಾಗಿರುವಂತಹ ದೈವೀಕಲ್ಪನೆಯ ಶಾಂತಿಯನ್ನು ನಾನೀಗ ಅನುಭವಿಸುತ್ತಿದ್ದೇನೆ, ಎಂದು ಹೇಳಿದರೆ, ಅವರು ನನ್ನನ್ನು ಹುಚ್ಚನೆಂದು ಭಾವಿಸುತ್ತಾರೆ; ಚಿಂತೆಯಿಲ್ಲ.

'ಆಳವಾಗಿ ವಿಚಾರಿಸಿ. ನಾನು ದೃಢವಾಗಿ ನಿಶ್ಚಯಿಸಿರುವುದೇನೆಂದರೆ: ಯುದ್ಧವೆನ್ನುವುದೊಂದು ವ್ಯಾಪಾರ: ಮಹತ್ವಾಕಾಂಕ್ಷೆ ಮತ್ತು ಪ್ರಾಬಲ್ಯದ ಸಲುವಾಗಿ ಜನಗಳ ಸಾಯಿಯೊಂದಿಗೆ ನಡೆಸುವ ದೊಡ್ಡ ಪ್ರಮಾಣದ ವ್ಯಾಪಾರ.

'ಇದರಿಂದ ನಾವು ಅನುಭವಿಸಬೇಕಾಗಿರುವ ಭೀಕರ ಪರಿಣಾಮವಾದರೂ ಏನು? ನನ್ನ ಸಂಗಾತಿಯೊಬ್ಬನ ಕರುಳು ಚುಚ್ಚುವ ನರಳುವಿಕೆಯನ್ನು ನಾನೆಂದಿಗೂ ಮರೆಯಲಾರೆ'.

ಪರಸ್ಪರ ಯಾವ ಕೆಡುಕನ್ನೂ ಎಣಿಸದಿದ್ದ ಜನ. ಇದ್ದಕ್ಕಿದ್ದಂತೆ ಕಾಡು ಪ್ರಾಣಿಗಳಂತೆ ಕಟುಕರಾಗುತ್ತಾರೆ: ದಯಾಮಯನಾದ ಭಗವಂತನನ್ನು ಕ್ಷುಲ್ಲಕವಾದ ತಮ್ಮ ಕಾರ್ಯಗಳಲ್ಲಿ ತೊಡಕಿಸಲು ಹೆಣಗುತ್ತಾರೆ. ಸೈನ್ಯದಲ್ಲಿ ಸಿಪಾಯಿಯಾಗಿದ್ದ ನನ್ನ ನೆರೆಯವನಿಗೆ ಗುಂಡೇಟಿನಿಂದ ದವಡೆ ಮುರಿಯಿತು: ಆ ಬಡಪಾಯಿ ನೋವಿನಿಂದ ಹುಚ್ಚನಂತಾಗಿಬಿಟ್ಟ. ಪ್ರಖರವಾಗಿದ್ದ ಬೇಸಿಗೆಯ ಬಿಸಿಲಿನಲ್ಲಿ ತನ್ನ ಗಾಯಕ್ಕೆ ತಂಪೆರೆಯಲು ಆತ ಸನ್ನಿ ಹಿಡಿದವನಂತೆ ಓಡಿದ: ನೀರು ಸಿಗಲಿಲ್ಲ. ನಮ್ಮ ಸೈನ್ಯಾಧಿಪತಿಯಾಗಿದ್ದ ಯುವರಾಜ. (ಮುಂದೆ ಫ್ರೆಡರಿಕ್ ಚಕ್ರವರ್ತಿಯಾದ ಮಹನೀಯ) ತನ್ನ ಡೈರಿಯಲ್ಲಿ ಹೀಗೆ ಬರೆದ: "ಯುದ್ಧವೆನ್ನುವುದು ಸುವಾರ್ತೆಯಮೇಲೆ ಒಂದು ವಿಡಂಬನೆ"...........

ದೇಶಪ್ರೇಮದ ಮೋಸವನ್ನು ಜನ ಅರ್ಥಮಾಡಿಕೊಳ್ಳಲು ಉದ್ಯುಕ್ತರಾಗಿದ್ದಾರೆ: ಸರ್ಕಾರಗಳು ಮಾತ್ರ ತುಂಬಾ ಶ್ರಮವಹಿಸಿ ಅವರನ್ನು ಅದರಲ್ಲಿ ತೊಡಗಿಸಲು ಪ್ರಯತ್ನಿಸುತ್ತಿದ್ದಾರೆ.

8

ಸಾಮಾನ್ಯವಾಗಿ ಕೇಳುವ ಪ್ರಶ್ನೆಯೊಂದುಂಟು; 'ಹಾಗಾದರೆ ಸರ್ಕಾರಗಳ ಬದಲು ಏನಿರುತ್ತದೆ?'

ಏನೂ ಇರುವುದಿಲ್ಲ. ಬಹಳ ಕಾಲದಿಂದಲೂ ಉಪಯೋಗವಿಲ್ಲದ್ದರಿಂದ ಅನಾವಶ್ಯಕವೆನಿಸಿರುವ ಕೆಟ್ಟದ್ದನ್ನು ತೊಡೆದು ಹಾಕಲಾಗುವುದು. ಅನಗತ್ಯವಾದ ಅಂಗ ಅಪಾಯಕಾರಿಯಾದುದರಿಂದ ತೊಡೆದು ಹಾಕಬೇಕಾಗುತ್ತದೆ.

ಆದರೆ. ಜನಗಳು ಸಾಮಾನ್ಯವಾಗಿ ಹೇಳುತ್ತಾರೆ. 'ಸರ್ಕಾರವೇನಾದರೂ ಇಲ್ಲದಿದ್ದರೆ. ಜನಗಳು ಅತಿಕ್ರಮಿಸಿ ಒಬ್ಬರನ್ನೊಬ್ಬರು ಕೊಂದು ಹಾಕುತ್ತಾರೆ.'.

ಏಕೆ? ಹಿಂಸೆಯ ಫಲವಾಗಿಯೇ ಉದ್ಭವಿಸಿ, ಹಿಂಸೆಯನ್ನು ಮಾಡುವುದಕ್ಕಾಗಿಯೇ ತಲೆತಲಾಂತರದಿಂದ ಉಳಿದುಕೊಂಡುಬಂದಿರುವ. ಈಗ ನಿರುಪಯೋಗಿಯಾಗಿರುವ ಒಂದು ವ್ಯವಸ್ಥೆಯನ್ನು ರದ್ದುಪಡಿಸಿದರೆ. ಜನ ಅತಿಕ್ರಮಿಸಿ ಒಬ್ಬರನ್ನೊಬ್ಬರು ಕೊಲ್ಲಲು

ಕಾರಣವಾಗಬೇಕು ಏಕೆ? ಆತ್ಮವಿಶ್ವಾಸದಿಂದ ಅದಕ್ಕೆ ಪ್ರತಿಯಾಗಿ ಹೇಳುವುದಾದರೆ. ಹಿಂಸೆಯ ಅಂಗವನ್ನು ನಿರ್ಮೂಲಗೊಳಿಸುವುದರ ಪರಿಣಾಮವಾಗಿ ಜನ ಅತಿಕ್ರಮಿಸುವುದನ್ನು ಮತ್ತು ಕೊಲ್ಲುವುದನ್ನು ಕೊನೆಗಾಣಿಸುತ್ತಾರೆ.

ಈಗ ಕೆಲವು ಜನಗಳಿಗೆ ಕೊಲ್ಲಲು ಮತ್ತು ಹಿಂಸೆಯನ್ನು ಜರುಗಿಸಲು ವಿಶೇಷವಾದ ತರಬೇತಿ ಕೊಡಲಾಗುತ್ತಿದೆ. ಹಿಂಸೆಯನ್ನು ಪ್ರಯೋಗಿಸಲು ತಮಗೆ ಹಕ್ಕಿದೆಯೆಂದು ಭಾವಿಸುವ ಮತ್ತು ಅದರ ಸಲುವಾಗಿ ಇರುವ ವ್ಯವಸ್ಥೆಯನ್ನು ಬಳಸಿಕೊಳ್ಳುವ ಜನಗಳೂ ಇದ್ದಾರೆ. ಈ ಬಗೆಯ ಹಿಂಸಾತ್ಮಕ ಕಾರ್ಯಗಳನ್ನು ಮತ್ತು ಯುದ್ಧವನ್ನು ಒಳ್ಳೆಯ ಯೋಗ್ಯ ಕ್ರಮಗಳೆಂದು ಪರಿಗಣಿಸಲಾಗುತ್ತಿದೆ.

ಮುಂದೆ ಜನಗಳನ್ನು ಈ ಬಗೆಯಲ್ಲಿ ತರಬೇತಿಗೊಳಿಸಲಾಗುವುದಿಲ್ಲ. ಯಾವನಿಗೂ ಬೇರೆಯವರ ಮೇಲೆ ಹಿಂಸೆಯನ್ನು ಜರುಗಿಸಲು ಹಕ್ಕು ಇರುವುದಿಲ್ಲ. ಹಿಂಸೆಯನ್ನು ಮಾಡುವುದಕ್ಕೆ ಯಾವ ವ್ಯವಸ್ಥೆಯೂ ಇರುವುದಿಲ್ಲ. ಈಗ ನಮ್ಮ ಕಾಲದ ಜನಗಳಲ್ಲಿ. ಸಹಜವಾಗಿ ರೂಢಿಯಲ್ಲಿರುವಂತೆ—ಹಿಂಸೆಯನ್ನು ಮತ್ತು ಕೊಲೆಯನ್ನು ಮಾಡಿದರೆ ಅದು ಯಾರೇ ಆಗಿರಲಿ ದುಷ್ಟತನವೆಂದು ಪರಿಗಣಿಸಲಾಗುವುದು.

ಹಿಂಸಾತ್ಮಕ ಕೃತ್ಯಗಳು ಸರ್ಕಾರಗಳನ್ನು ರದ್ದುಪಡಿಸಿದಮೇಲೆ ಉಳಿದರೂ ಸಹ ಈಗ ಇರುವ ಪ್ರಮಾಣಕ್ಕಿಂತ ಕಡಿಮೆ ಪ್ರಮಾಣದಲ್ಲಿರುತ್ತವೆಯೆಂದು ಖಂಡಿತವಾಗಿ ಹೇಳಬಹುದು. ಈಗ ಹಿಂಸೆಯನ್ನು ಮಾಡುವ ಸಲುವಾಗಿಯೇ ನಿರ್ಮಿಸಲ್ಪಟ್ಟ ವ್ಯವಸ್ಥೆಯಿದೆ; ಕೊಲೆಗಳನ್ನು ಮತ್ತು ಹಿಂಸೆಯನ್ನು ಉತ್ತಮ ಯೋಗ್ಯ ಕೆಲಸಗಳೆಂದು ಪರಿಗಣಿಸಲಾಗುತ್ತಿದೆ.

ಸರ್ಕಾರಗಳನ್ನು ರದ್ದುಪಡಿಸುವ ಮೂಲಕ. ಪುರಾತನ ಕಾಲದಿಂದ ಪಿತ್ರಾರ್ಜಿತವೆಂಬಂತೆ ಬಂದಿರುವ ಮತ್ತು ಹಿಂಸೆಯನ್ನು ಸಮರ್ಥಿಸುವ. ಒಂದು ಅನಗತ್ಯ ವ್ಯವಸ್ಥೆಯಿಂದ ನಾವು ಮುಕ್ತಿಪಡೆಯಬಹುದಾಗಿದೆ.

'ಹಾಗಾದರೆ ಆಗ ಕಾನೂನುಗಳಿರುವುದಿಲ್ಲ. ಆಸಕ್ತಿಯಿರುವುದಿಲ್ಲ. ನ್ಯಾಯಾಲಯಗಳಿರುವುದಿಲ್ಲ. ಪೋಲೀಸ್ ಇರುವುದಿಲ್ಲ. ಜನಪ್ರಿಯ ವಿದ್ಯಾಭ್ಯಾಸವಿರುವುದಿಲ್ಲ'. ಮುಂತಾಗಿ ಜನ ಹೇಳುತ್ತಾರೆ. ಆದರೆ ಅವರು ಉದ್ದೇಶಪೂರ್ವಕವಾಗಿಯೇ ಸರ್ಕಾರಗಳಿಂದ ಹಿಂಸೆಯ ಬಳಕೆಯನ್ನು ಉಳಿದ ಸಾಮಾಜಿಕ ಚಟುವಟಿಕೆಗಳೊಂದಿಗೆ ಗೊಂದಲಪಡಿಸಿಕೊಳ್ಳುತ್ತಿರುತ್ತಾರೆ.

ಹಿಂಸೆಯನ್ನು ಮಾಡುವುದಕ್ಕಾಗಿಯೇ ರೂಪಿಸಲ್ಪಟ್ಟ ಸರ್ಕಾರವೆಂಬ ವ್ಯವಸ್ಥೆಯನ್ನು ರದ್ದುಪಡಿಸಿದಾಕ್ಷಣ ಉಳಿದ ಉತ್ತಮವಾದ ವಿವೇಕದಿಂದ ಕೂಡಿದ ಚಟುವಟಿಕೆ

ಗಳನ್ನು ನಿಲ್ಲಿಸಬೇಕೆಂದು ಯಾರೂ ಹೇಳುವುದಿಲ್ಲ. ಹಿಂಸೆಯ ತಳಹದಿಯ ಮೇಲೆ ರೂಪಿಸದೇ ಇರುವ ಕಾನೂನು ಮತ್ತು ನ್ಯಾಯಾಲಯಗಳನ್ನು, ಆಸ್ತಿಯನ್ನು, ಪೋಲೀಸ್ ನಿಯಮಗಳನ್ನು, ಆರ್ಥಿಕ ಕಟ್ಟುಪಾಡುಗಳನ್ನು ಅಥವಾ ಜನಪ್ರಿಯ ವಿದ್ಯಾಭ್ಯಾಸವನ್ನು ರದ್ದುಪಡಿಸಲಾಗುವುದಿಲ್ಲ. ಮಾತ್ರವಲ್ಲ, ತನ್ನನ್ನು ಸಮರ್ಥಿಸಿಕೊಳ್ಳುವುದಕ್ಕಾಗಿಯೇ ಅಸ್ತಿತ್ವದಲ್ಲಿದ್ದ ಸರ್ಕಾರವೆಂಬ ಪಾಶವೀ ಶಕ್ತಿಯ ಗೈರುಹಾಜರಿಯಲ್ಲಿ ಹಿಂಸೆಯ ಅಗತ್ಯವನ್ನೇ ಬಯಸದ ಸಾಮಾಜಿಕ ಸಂಸ್ಥೆಗಳು ಇನ್ನೂ ಹೆಚ್ಚು ದಕ್ಷತೆಯಿಂದ ನ್ಯಾಯವಾಗಿ ನಡೆದುಕೊಳ್ಳಲು ಅವಕಾಶವಾಗುತ್ತದೆ. ನ್ಯಾಯಾಲಯಗಳು, ಸಾರ್ವಜನಿಕ ವ್ಯವಹಾರಗಳು ಮತ್ತು ಜನಪ್ರಿಯ ವಿದ್ಯಾಭ್ಯಾಸಗಳೂ ಸಹ ಜನಗಳಿಗೆ ನಿಜವಾಗಿಯೂ ಅಗತ್ಯವಾಗಿರುವಷ್ಟು ಪ್ರಮಾಣದಲ್ಲಿ ಮಾತ್ರ ಉಳಿದಿರುತ್ತವೆ. ಈಗಿನ ಸರ್ಕಾರದ ಕೆಡುಕಿನ ಪ್ರಮಾಣದಲ್ಲಿ ಜನಗಳನ್ನು ತೊಡಗಿಸುವುದಿಲ್ಲ. ಜನಗಳ ಸ್ವತಂತ್ರ ಅಭಿವ್ಯಕ್ತಿಗೆ ಅಡ್ಡಿಯಾಗಿದ್ದ ಕೆಡುಕನ್ನು ಮಾತ್ರ ನಿರ್ನಾಮಗೊಳಿಸಲಾಗುತ್ತದೆ.

ಸರ್ಕಾರಗಳ ಗೈರುಹಾಜರಿಯಲ್ಲಿ ನಾಗರಿಕ ಗಲಭೆ ಮತ್ತು ಕೋಲಾಹಲಗಳಾಗುತ್ತವೆಯೆಂಬುದನ್ನು ಒಪ್ಪಿಕೊಂಡರೂ ಸಹ, ಆಗಲೂ ಜನಗಳ ಜನಗಳ ಸ್ಥಿತಿ ಇಂದಿಗಿಂತ ಅಸಾಧ್ಯವೆನಿಸುವಷ್ಟು ವಿಷಮಿಸಿದೆ. ಜನಗಳು ನಾಶವಾಗಿ ಹೋಗಿದ್ದಾರೆ: ಅವರ ವಿನಾಶ ದಿನೇ ದಿನೇ ಪೂರ್ಣವಾಗುತ್ತಿದೆ. ಜನಗಳೆಲ್ಲ ಯುದ್ಧದ ಗುಲಾಮರಾಗಿ ಪರಿವರ್ತಿಸಲ್ಪಟ್ಟಿದ್ದಾರೆ: ದಿನದಿಂದ ದಿನಕ್ಕೆ ಅಪ್ಪಣೆಗಳನ್ನು ನಿರೀಕ್ಷಿಸುತ್ತಿದ್ದಾರೆ: ಕೊಲ್ಲಲು ಹೋಗುವುದಕ್ಕೆ ಮತ್ತು ಕೊಲ್ಲಿಸಿಕೊಳ್ಳುವುದಕ್ಕೆ. ಇದಕ್ಕಿಂತ ಹೆಚ್ಚಿಗೆ ಏನಾಗಬೇಕು? ನಾಶಮಾಡಲ್ಪಟ್ಟ ಜನ ಹಸಿವಿನಿಂದ ಸಾಯಬೇಕೆ? ರಷ್ಯ, ಇಟಲಿ ಮತ್ತು ಇಂಡಿಯಾ ದೇಶಗಳಲ್ಲಿ ಅದೂ ಆರಂಭವಾಗುತ್ತಿದೆ. ಗಂಡಸರಂತೆ ಹೆಂಗಸರೂ ಸೈನ್ಯ ಸೇರಬೇಕೆ? ಟ್ರಾನ್ಸ್‌ವಾಲ್‌ನಲ್ಲಿ ಅದೂ ಪ್ರಾರಂಭವಾಗಿದೆ.

ಆದುದರಿಂದ ಸರ್ಕಾರಗಳ ಗೈರುಹಾಜರಿಯಲ್ಲಿ, ಅವ್ಯವಸ್ಥೆ ಎಂಬರ್ಥದ ಅರಾಜಕತೆ ಉಂಟಾಗುವುದಾದರೂ ಸಹ ಯಾವ ಅರಾಜಕ ವ್ಯವಸ್ಥೆಯೂ ಈಗಿನ ಸ್ಥಿತಿಗಿಂತ, ಸರ್ಕಾರಗಳು ಜನಗಳನ್ನು ಈಗಾಗಲೇ ತಳ್ಳಿರುವ ಸ್ಥಿತಿಗಿಂತ ಹೀನವಾಗಿರುವುದಿಲ್ಲ. ಆದರೆ, ಹಾಗಾಗುವ ಸಂಭವವೇ ಇಲ್ಲ. ಅದ ಕಾರಣ, ದೇಶಪ್ರೇಮದಿಂದ ಬಿಡುಗಡೆ ಹೊಂದುವುದು ಮತ್ತು ಅದರ ತಳಹದಿಯಮೇಲೆ ನಿಂತಿರುವ ಸರ್ಕಾರದ ದಬ್ಬಾಳಿಕೆಯನ್ನು ನಿರ್ಮೂಲಗೊಳಿಸುವುದು ಮಾನವ ಜನಾಂಗಕ್ಕೆ ಲಾಭದಾಯಕವಾಗಿರಲೇಬೇಕಾಗುತ್ತದೆ.

೯

ಮಹನೀಯರೇ ನೀವೇ ಆಲೋಚಿಸಿರಿ! ನಿಮ್ಮ ಕ್ಷೇಮದ ಸಲುವಾಗಿ, ಐಹಿಕ ಮತ್ತು ಪಾರಲೌಕಿಕವಾಗಿ, ನಿಮ್ಮ ಸೋದರ ಸೋದರಿಯರ ಸಲುವಾಗಿಯಾದರೂ

ನೀವೇನು ಮಾಡುತ್ತಿರುವಿರಿ ಎಂಬುದನ್ನು ಕುರಿತು ವಿಚಾರಮಾಡಿರಿ; ಒಂದು ಕ್ಷಣ ನಿಂತು ಪರ್ಯಾಲೋಚಿಸಿರಿ.

ಸೂಕ್ಷ್ಮವಾಗಿ ವಿಚಾರಮಾಡಿ, ಆಗ ನಿಮಗೆ ಅರ್ಥವಾಗುತ್ತದೆ; ನಿಮ್ಮ ಶತ್ರುಗಳು ಬೊಯರ್ಸ್, ಇಂಗ್ಲಿಷ್, ಫ್ರೆಂಚ್, ಜರ್ಮನ್, ಫಿನ್ಸ್ ಅಥವಾ ರಷ್ಯನ್ನರಲ್ಲ; ನಿಮ್ಮ ಒಬ್ಬನೇ ಒಬ್ಬ ಶತ್ರು ನೀವೇ ಆಗಿದ್ದೀರಿ; ನಿಮ್ಮ ದೇಶಪ್ರೇಮದಿಂದಾಗಿ ಸರ್ಕಾರವನ್ನು ಉಳಿಸಿಕೊಂಡಿದ್ದೀರಿ. ಅದು, ನಿಮ್ಮನ್ನು ತುಳಿದು ದುಃಖಕ್ಕೆ ಗುರಿಮಾಡುತ್ತಿದೆ.

ನಿಮ್ಮನ್ನು ಅಪಾಯದಿಂದ ರಕ್ಷಿಸುವ ಹೊಣೆಯನ್ನು ಅವರು ಹೊತ್ತಿದ್ದಾರೆ. ಸುಳ್ಳು ರಕ್ಷಣೆಯ ನೆಪದಲ್ಲಿ ನಿಮ್ಮನ್ನು ಅವರು ಯಾವ ಹಂತಕ್ಕೆ ತಂದಿದ್ದಾರೆಂದರೆ, ನೀವೆಲ್ಲಾ ಸೈನಿಕರಾಗಿ, ಗುಲಾಮರಾಗಿ ಅವನತಿ ಹೊಂದಿದ್ದೀರಿ. ಮತ್ತೂ ಹೆಚ್ಚು ಹೆಚ್ಚು ಅವನತಿ ಹೊಂದುತ್ತಿದ್ದೀರಿ. ಬಿಗಿಯಾಗಿ ಎಳೆದು ಕಟ್ಟಿರುವ ಹಗ್ಗ ಯಾವಕ್ಷಣದಲ್ಲಿ ಯಾದರೂ ಕತ್ತರಿಸಿಹೋಗಿ ನಿಮ್ಮ ಮತ್ತು ನಿಮ್ಮ ಮಕ್ಕಳ ಕಗ್ಗೊಲೆ ಆರಂಭವಾಗುವುದನ್ನು ನಿರೀಕ್ಷಿಸಬಹುದಾಗಿದೆ.

ಆ ಕಗ್ಗೊಲೆ ಎಷ್ಟೇ ದೊಡ್ಡಪ್ರಮಾಣದಲ್ಲಿ ನಡೆಯಲಿ, ಯಾವ ಬಗೆಯಲ್ಲೇ ಹೋರಾಟಕ್ಕೆ ನಿಲುಗಡೆಯುಂಟಾಗಲಿ, ಮತ್ತೆ ಯಥಾಸ್ಥಿತಿಯೇ ಮುಂದುವರಿಯುತ್ತದೆ. ಹಿಂದಿನಂತೆಯೇ ಮತ್ತು ಇನ್ನೂ ಹೆಚ್ಚು ತೀವ್ರವಾಗಿ ಸರ್ಕಾರ ಶಸ್ತ್ರಸಜ್ಜಿತವಾಗಿರುತ್ತದೆ; ನಿಮ್ಮನ್ನು ಮತ್ತು ನಿಮ್ಮ ಮಕ್ಕಳನ್ನು ಭ್ರಷ್ಟರನ್ನಾಗಿಸಿ, ಅವನತಿಗೊಳಿಸುತ್ತದೆ. ನಿಮಗೆ ನೀವೇ ಪರಿಹಾರವನ್ನು ಕಂಡುಕೊಳ್ಳಲಾಗದಿದ್ದರೆ ಯಾರೂ ಇದನ್ನು ತಡೆಯಲಾಗುವುದಿಲ್ಲ ಅಥವಾ ನಿಲ್ಲಿಸಲಾಗುವುದಿಲ್ಲ.

ಉಳಿದಿರುವುದು ಒಂದೇ ಒಂದು ಬಗೆಯ ಪರಿಹಾರ; ಶಂಕಾಕೃತಿಯಲ್ಲಿರುವ ಭಯಂಕರವಾದ ವ್ಯವಸ್ಥೆಯನ್ನು ನಿರ್ಮೂಲಗೊಳಿಸುವುದು. ಒಬ್ಬನೇ ಒಬ್ಬ ವ್ಯಕ್ತಿ ತುದಿಯನ್ನು ಆಕ್ರಮಿಸಿ ಉಳಿದವರೆಲ್ಲರ ಮೇಲೆ ಅಧಿಕಾರ ನಡೆಸುವ ಈ ವ್ಯವಸ್ಥೆ ಎಷ್ಟು ಬಿಗಿಯಾಗಿ, ಕ್ರೂರವಾಗಿ, ಅಮಾನುಷವಾಗಿದೆಯೆಂಬುದನ್ನು ನೆಪೋಲಿಯನ್, ಒಂದನೆಯ ನಿಕೋಲಾಸ್, ಬಿಸ್ಮಾರ್ಕ್, ಚೆಂಬರ್ಲಿನ್, ರೋಡ್ಸ್ ಮತ್ತು ಝಾರ್ ಚಕ್ರವರ್ತಿಗಳ ಹೆಸರಿನಲ್ಲಿ ಆಳುತ್ತಿರುವ ನಮ್ಮ ರಷ್ಯನ್ ಸರ್ವಾಧಿಕಾರಿಗಳ ಉದಾಹರಣೆಗಳಲ್ಲಿ ಕಾಣಬಹುದಾಗಿದೆ.

ಶಂಕಾಕೃತಿಯ ಪರಸ್ಪರ ಕಟ್ಟನ್ನು ನಿರ್ಮೂಲಗೊಳಿಸಲು ಒಂದೇ ಒಂದು ದಾರಿಯಿದೆ; ದೇಶಪ್ರೇಮದ ಸಮ್ಮೋಹಕತೆಯನ್ನು ಜಾಡಿಸಿ, ತೊಲಗಿಸುವುದು.

ನಿಮ್ಮ ದುಡಿಮೆಯ ಮೇಲೆ ಬದುಕುತ್ತಾ ನಿಮ್ಮನ್ನೇ ವಂಚಿಸುತ್ತಿರುವ ರಾಜ ಮಹಾರಾಜರುಗಳು, ಪಾರ್ಲಿಮೆಂಟ್ ಸದಸ್ಯರು ಗೌರ್ನರ್‌ಗಳು, ಅಧಿಕಾರಿಗಳು,

ಬಂಡವಾಳಗಾರರು. ಪುರೋಹಿತರು. ಲೇಖಕರು ಮತ್ತು ಕಲಾವಿದರ ಸಲಹೆಗಳಿಗೆ ಮರುಳಾಗಿ ವಶವಾಗುವ ಮೂಲಕ. ನೀವು ಅನುಭವಿಸುತ್ತಿರುವ ಕೆಡಕುಗಳಿಗೆಲ್ಲಾ ನೀವೇ ಕಾರಣರಾಗಿದ್ದೀರೆಂಬುದನ್ನು ಅರ್ಥಮಾಡಿಕೊಳ್ಳಿ.

ನೀವು ಯಾವದೇಶದವರೇ ಆಗಿದ್ದಿರಬಹುದು: ಫ್ರಾನ್ಸ್. ರಷ್ಯಾ. ಪೋಲೆಂಡ್. ಇಂಗ್ಲೆಂಡ್. ಐರ್ಲೆಂಡ್. ಬೊಹೆಮಿಯಾದವರಿರಬಹುದು. ನಿಮ್ಮ ಮಾನವೀಯ ಆಸಕ್ತಿಗಳು ಏನೇ ಇರಬಹುದು: ಒಕ್ಕಲುತನ. ಕೈಗಾರಿಕೆ. ವ್ಯಾಪಾರ. ಕಲೆ ಅಥವಾ ವಿಜ್ಞಾನವಿರಬಹುದು. ಎಲ್ಲರೂ ಒಂದು ವಿಚಾರವನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ನಿಮ್ಮ ಆಸಕ್ತಿಗಳು ಬೇರೆ ಜನಗಳ ಅಥವಾ ದೇಶಗಳ ಆಸಕ್ತಿಗೆ ವಿರುದ್ಧವಾಗಿಲ್ಲ: ಪರಸ್ಪರ ಸಹಕಾರ. ಸೇವಾವಿನಿಮಯ. ಸೋದರ ಕೊಳುಕೊಡೆಗಳ ಮತ್ತು ವಸ್ತು. ವಿಚಾರ ಹಾಗೂ ಭಾವನೆಗಳ ವಿನಿಮಯದಿಂದ ಅನ್ಯ ಜನಪದದೊಂದಿಗೆ ನೀವು ಐಕ್ಯಗೊಂಡಿದ್ದೀರಿ.

ಮತ್ತೊಂದು ವಿಚಾರವನ್ನು ಅರ್ಥಮಾಡಿಕೊಳ್ಳಿ: ನಿಮ್ಮ ಅಥವಾ ಬೇರೆಯ ಸರ್ಕಾರ ಆಕ್ರಮಿಸಬಹುದಾದ ಆರ್ಥರ್ ಬಂದರು. ವಹಿವೆ ಮತ್ತು ಕ್ಯೂಬಾಗಳು ನಿಮಗೆ ಸಂಬಂಧಪಟ್ಟವಲ್ಲ. ಅವಕ್ಕೆ ಪ್ರತಿಯಾಗಿ ನಿಮ್ಮ ಸರ್ಕಾರದ ಈ ಬಗೆಯ ಎಲ್ಲ ಆಕ್ರಮಣಗಳೂ ನಿಮ್ಮನ್ನು ತೊಂದರೆಗೆ ಈಡುಮಾಡುತ್ತವೆ. ತನ್ನ ಈ ಬಗೆಯ ದರೋಡೆ ಮತ್ತು ಹಿಂಸೆಯಲ್ಲಿ ಹಾಗೂ ಅವುಗಳನ್ನು ಉಳಿಸಿಕೊಳ್ಳುವಲ್ಲಿ ನೀವು ಭಾಗಿಗಳಾಗಬೇಕೆಂದು ನಿಮ್ಮ ಸರ್ಕಾರ ಅನೇಕ ಒತ್ತಡಗಳನ್ನು ತರುತ್ತದೆ. ಅಲಾಷಯನ್ನು ಜರ್ಮನಿಗೆ ಅಥವಾ ಫ್ರಾನ್ಸ್‌ಗೆ ಸೇರಿಸುವುದರಿಂದ. ಐರ್ಲೆಂಡ್ ಮತ್ತು ಪೋಲೆಂಡ್‌ಗಳು ಸ್ವತಂತ್ರಗೊಳ್ಳುವುದರಿಂದ ಅಥವಾ ದಾಸ್ಯಕ್ಕೊಳಪಡುವುದರಿಂದ (ಅದನ್ನು ಯಾರೇ ಮಾಡಿರಲಿ). ನಿಮ್ಮ ಜೀವನ ಯಾವ ರೀತಿಯಿಂದಲೂ ಸುಧಾರಿಸುವುದಿಲ್ಲವೆಂಬುದನ್ನು ಅರ್ಥಮಾಡಿಕೊಳ್ಳಿ. ನೀವು ಅಲ್ಸೇಟಿಯನ್ನರಾಗಿರಿ ಅಥವಾ ಬ್ರಿಟಿಷ್ ಜನಾಂಗದವರಾಗಿರಿ. ಅಪೇಕ್ಷಪಟ್ಟ ಕಡೆ ವಾಸಿಸಲು ನಿಮಗೆ ಸ್ವಾತಂತ್ರ್ಯವಿದೆ. ದೇಶಪ್ರೇಮವನ್ನು ಉದ್ರೇಕಿಸುವುದರಿಂದ ಪರಿಸ್ಥಿತಿಯನ್ನು ಇನ್ನೂ ಹದಗೆಡಿಸುವಿರೆಂಬುದನ್ನು ಅರ್ಥ ಮಾಡಿಕೊಳ್ಳಿ. ಏಕೆಂದರೆ ಈಗ ನಿಮ್ಮ ಜನಗಳನ್ನು ದಾಸ್ಯಕ್ಕೊಳಪಡಿಸುವುದರ ಕಾರಣವೇ ಈ ದೇಶಪ್ರೇಮಗಳ ಘರ್ಷಣೆಯಾಗಿದೆ. ದೇಶಪ್ರೇಮ ಒಂದು ದೇಶದಲ್ಲಿ ಕಾಣಿಸಿಕೊಂಡರೆ. ಅದಕ್ಕೆ ಪ್ರತಿಕ್ರಿಯೆಯಾಗಿ ಮತ್ತೊಂದು ದೇಶ ಉದ್ರೇಕಗೊಳ್ಳುತ್ತದೆ. ನೀವು ಮುಕ್ತರಾಗುವುದು. ಹಳತಾಗಿಹೋಗಿರುವ ದೇಶಪ್ರೇಮದಿಂದ ಮತ್ತು ಅದರ ತಳಹದಿಯ ಮೇಲೆ ನಿಂತಿರುವ ಸರ್ಕಾರಿ ವಿಧೇಯತೆಯಿಂದ ಸ್ವತಂತ್ರಗೊಂಡಾಗಲೇ. ಎಂಬುದನ್ನು ತಿಳಿಯಿರಿ. ಬಹಳ ಹಿಂದಿನಿಂದಲೂ ಬದುಕಿಗೆ ಹತ್ತಿರವಾಗುತ್ತಿರುವ. ಎಲ್ಲ ಭಾಗಗಳಲ್ಲಿಯೂ ಮಾನ್ಯತೆ ಪಡೆಯುವ ಉದಾತ್ತ ಕಲ್ಪನೆಯ ಕ್ಷೇತ್ರವನ್ನು ಪ್ರವೇಶಿಸಿ ಮಾನವೀಯ ಸೋದರ ಸಂಬಂಧಗಳನ್ನು ವೃದ್ಧಿಪಡಿಸುವುದರಲ್ಲಿಯೇ ನಿಮ್ಮ ಆತ್ಮೋದ್ಧಾರವಿರುವುದು.

ತಾವು ಯಾವುದಾದರೊಂದು ತಾಯ್ನಾಡಿನ ಅಥವಾ ಸರ್ಕಾರಗಳ ಮಕ್ಕಳಲ್ಲವೆಂದೂ, ದೇವರ ಮಕ್ಕಳೆಂದೂ. ಆದುದರಿಂದ ಪರಸ್ಪರ ವೈರಿ ಅಥವಾ ಗುಲಾಮರಲ್ಲವೆಂದೂ ಜನ ಅರ್ಥಮಾಡಿಕೊಳ್ಳಬೇಕು. ಆಗಲೇ. ಸರ್ಕಾರಗಳೆಂಬ. ಹಳತಾಗಿ ಅನಗತ್ಯವೆನಿಸಿರುವ. ಉನ್ಮಾದದ ಮಾರಕ ವ್ಯವಸ್ಥೆಗಳು ಕೊನೆಗೊಳ್ಳುತ್ತವೆ; ಎಲ್ಲ ಸಂಕಟಗಳು, ಅತಿಕ್ರಮಗಳು. ಅಪಮಾನಗಳು ಮತ್ತು ಅಪರಾಧಗಳಿಗೂ ಅವಕಾಶವಿಲ್ಲದಂತಾಗುತ್ತದೆ.

(ಮೇ 10. 1900).

# ಸ್ವೀಡಿಷ್ ಶಾಂತಿ ಸಮ್ಮೇಳನವನ್ನುದ್ದೇಶಿಸಿ

ಪ್ರೀತಿಯ ಸೋದರರೇ:

ಯುದ್ಧದ ವಿರುದ್ಧ ಹೋರಾಡಲು ನಾವಿಲ್ಲಿ ಸೇರಿದ್ದೇವೆ: ಯುದ್ಧದ ಸಲುವಾಗಿ ಪ್ರಪಂಚದ ಎಲ್ಲಾ ದೇಶಗಳೂ. ಕೋಟ್ಯಂತರ ಜನಗಳೂ. – ಕೆಲವೇ ಜನಗಳ ಅಥವಾ ಒಮ್ಮೊಮ್ಮೆ ಕೇವಲ ಒಬ್ಬ ವ್ಯಕ್ತಿಯ ಅನಿರ್ಬಂಧಿತ ವಶಕ್ಕೆ ಒಳಗಾಗಬೇಕಾಗುತ್ತದೆ: ಬಹುಪಾಲು ಶ್ರಮದ ದುಡಿಮೆಯನ್ನು ಪ್ರತಿನಿಧಿಸುವ ಕೋಟ್ಯಂತರ ರೂಬಲ್. ಫ್ರಾಂಕ್ ಅಥವಾ ಯೆನ್‌ಗಳು ಮಾತ್ರವಲ್ಲ. ಅವರ ಜೀವವನ್ನೇ ಪಣವಿಡಬೇಕಾಗುತ್ತದೆ. ನಾವಾದರೋ ಕೆಲವೇ ಮಂದಿ ಖಾಸಗಿ ಜನಗಳು ಜಗತ್ತಿನ ಬೇರೆ ಬೇರೆ ಭಾಗಗಳಿಂದ ಬಂದು ಇಲ್ಲಿ ಸೇರಿದ್ದೇವೆ: ಯಾವ ಬಗೆಯ ವಿಶಿಷ್ಟ ಸೌಲಭ್ಯಗಳೂ ಇಲ್ಲದೆ, ಯಾರ ಮೇಲೂ ಯಾವ ಬಗೆಯ ಅಧಿಕಾರವೂ ಇಲ್ಲದೆ. ನಾವು ಹೋರಾಡಬಯಸುತ್ತೇವೆ: ಕೇವಲ ಹೋರಾಟ ಮಾತ್ರವಲ್ಲ, ಗೆಲ್ಲಬೇಕೆಂದೂ ಬಯಸಿದ್ದೇವೆ. ನಾವು ಹೋರಾಡು ತ್ತಿರುವುದು ಕೇವಲ ಒಂದು ಸರ್ಕಾರದೊಂದಿಗೆ ಅಲ್ಲ: ಕೋಟ್ಯವಧಿ ಹಣ ಮತ್ತು ಸೈನಿಕರಿಂದ ಕೂಡಿ. ಅಪರಿಮಿತ ಶಕ್ತಿ ಸಾಮರ್ಥ್ಯಗಳನ್ನು ಪಡೆದಿರುವ ಎಲ್ಲ ಸರ್ಕಾರ ಗಳೊಂದಿಗೆ. ಸರ್ಕಾರಗಳನ್ನು ರೂಪಿಸುವವರ ವಿಶಿಷ್ಟ ಸ್ಥಾನಮಾನಗಳು ನಿಂತಿರುವುದು ಸೈನ್ಯದ ಮೇಲೆ. ಎಂಬುದು ಅವರಿಗೆ ಚೆನ್ನಾಗಿ ಗೊತ್ತಿದೆ. ಸೈನ್ಯಕ್ಕೆ ಒಂದು ಅರ್ಥ ಮತ್ತು ಉದ್ದೇಶಗಳು ಉಂಟಾಗುವುದು ಯುದ್ಧವಿದ್ದರೆ ಮಾತ್ರ. ಈ ಯುದ್ಧದ ವಿರುದ್ಧವೇ ನಾವು ಹೋರಾಡಬಯಸುವುದು: ಮತ್ತು ತೊಡೆದುಹಾಕಬಯಸುವುದು.

ಶಕ್ತಿಗಳು ಇಷ್ಟೊಂದು ಅಸಮವಾಗಿರುವಾಗ. ನಾವು ಹೋರಾಡ ಬಯಸುವುದು ಹುಚ್ಚುತನವೆಂಬಂತೆ ಕಂಡುಬರಬಹುದು. ನಮ್ಮ ವಿರೋಧಿಗಳ ಕಲಹದ ಸಾಧನ ದೊಂದಿಗೆ ಹೋಲಿಸಿದರೆ. ನಮ್ಮದು ಅಸಂಬದ್ಧವಾಗಬಹುದಾದರೂ ಹೋರಾಟದ ಅಗತ್ಯವಿದೆ: ಏಕೆಂದರೆ. ನಾವು ಯಾವುದರ ವಿರುದ್ಧ ಹೋರಾಡಬೇಕೆನ್ನುತ್ತೇವೆಯೋ ಅದು ಇನ್ನೂ ಬದುಕಿದೆ. ಅವರಿಗೆ ಕೋಟ್ಯಂತರ ಹಣವಿದೆ: ಕೋಟ್ಯವಧಿ ಸೈನಿಕರಿದ್ದಾರೆ. ಸತ್ಯವೇ ನಮ್ಮ ಏಕಮೇವ ಬಲ: ಅದರೆ. ಅದು ಜಗತ್ತಿನಲ್ಲಿಯೇ ಅತ್ಯಂತ ಪ್ರಬಲವಾದುದು. ನಮ್ಮ ಬಲ. ವಿರೋಧಿಗಳೊಂದಿಗೆ ಹೋಲಿಸಿದಾಗ ನಿಕೃಷ್ಟವಾಗಿ ಕಾಣಬಹುದಾದರೂ ನಮಗೆ ಗೆಲುವಾಗುವುದು ಶತಸ್ಸಿದ್ಧ: ಉದಯಿಸು ತ್ತಿರುವ ಸೂರ್ಯನ ಬೆಳಕು ಇರುಳಿನ ಕತ್ತಲೆಯ ಮೇಲೆ ಜಯಪಡೆದಂತೆ.

ಒಂದೇ ಒಂದು ನಿಯಮದ ಮೇಲೆ ನಮಗೆ ಗೆಲುವು ಖಚಿತವಾಗಿದೆ: ಯಾವುದೇ ರೀತಿಯ ಒಪ್ಪಂದ, ವಿನಾಯಿತಿ ಅಥವಾ ಮಾರ್ಪಾಟುಗಳಿಲ್ಲದೆ ನಾವು ಸಂಪೂರ್ಣ ಸತ್ಯವನ್ನೇ ನುಡಿಯುತ್ತೇವೆ, ಎಂಬುದೇ ನಿಯಮ. ಸತ್ಯ ಎನ್ನುವುದು ಕ್ರೈಸ್ತರಿಗೆ ಮಾತ್ರವಲ್ಲ ವಿವೇಕಿಗಳೆಲ್ಲರಿಗೂ ಅತ್ಯಂತ ಸರಳವಾದ, ಸ್ಪಷ್ಟವಾದ ಪ್ರತ್ಯಕ್ಷ ಕರ್ತವ್ಯವಾಗಿದೆ. ಪ್ರತಿಭಟಿಸಲಾಗದಂತಿರಬೇಕಾದರೆ ಅದನ್ನು ಅಖಂಡವಾಗಿ ಪರಿಣಾಮಕಾರಿಯಾಗಿ ವ್ಯಕ್ತಪಡಿಸಬೇಕಾದ ಅಗತ್ಯವಿದೆ.

ಸತ್ಯವೆನ್ನುವುದು ಸಾವಿರಾರು ವರ್ಷಗಳ ಹಿಂದೆಯೇ (ದೇವರ ನಿಯಮದಂತೆ ನಾವುಗಳು ಈ ಕಾರಣವನ್ನು ಒಪ್ಪಿದ್ದೇವೆ.) ನಾಲ್ಕೇ ಪದಗಳಲ್ಲಿ ವ್ಯಕ್ತವಾಗಿದೆ: "Thou Shalt not kill" ನಿಜವಾಗಿಯೂ ಮನುಷ್ಯನು ಯಾವುದೇ ಸಂದರ್ಭದಲ್ಲಿಯೂ ಯಾವ ನೆಪದಿಂದಲೂ ತನ್ನ ಸಂಗಡಿಗನನ್ನು ಕೊಲ್ಲಲು ಸಾಧ್ಯವಿಲ್ಲ: ಕೊಲ್ಲಬಾರದು.

ಸತ್ಯವೆನ್ನುವುದು ಸಾರ್ವತ್ರಿಕವಾಗಿ ಒಪ್ಪಿಕೊಳ್ಳಲಾಗಿರುವ ಪ್ರತ್ಯಕ್ಷ ಕರಾರಿನಂತಿರುವುದರಿಂದ, ಮನುಷ್ಯರ ಮುಂದೆ ಅದನ್ನು ಹೆಚ್ಚು ಸ್ಪಷ್ಟವಾಗಿ ಮಂಡಿಸಬೇಕಾದ ಅಗತ್ಯವಿದೆಯಷ್ಟೆ: ಆಗಲೇ, ಯುದ್ಧವೆನ್ನುವ ದುಷ್ಕೃತ್ಯ ಅಸಾಧ್ಯವಾಗಿ ಪರಿಣಮಿಸುವುದು.

ಆದುದರಿಂದ ಈ ಸಮ್ಮೇಳನದಲ್ಲಿ ಒಂದೆಡೆ ಸೇರಿರುವ ನಾವುಗಳು, ಸ್ಪಷ್ಟವಾಗಿ ಖಚಿತವಾಗಿ ಸತ್ಯವನ್ನು ನುಡಿಯಬೇಕೇ ಹೊರತು, ಯುದ್ಧದ ಕೆಡುಕುಗಳನ್ನು ಕಡಿಮೆಮಾಡಲು ಅಥವಾ ಕ್ರಮೇಣ ಯುದ್ಧಗಳ ಸಂಭವ ಪ್ರಮಾಣವನ್ನು ಕ್ಷೀಣಿಸಲು ಸರ್ಕಾರಗಳಿಗೆ ಅನೇಕ ಬಗೆಯ ಯೋಜನೆಗಳನ್ನು ವಿನಂತಿಸಬೇಕಿಲ್ಲ. ಹಾಗೆ ಮಾಡುವುದಾದರೆ, ಬಾಗಿಲಿನ ಬೀಗವನ್ನೇ ಕೈಯಲ್ಲಿಟ್ಟುಕೊಂಡಿದ್ದು ಗೋಡೆ ಒಡೆದು ನುಗ್ಗಲು ಪ್ರಯತ್ನಿಸುವ ಗಾಂಪರಂತಾಗುತ್ತೇವೆ. ನಮ್ಮ ಮುಂದೆ ಲಕ್ಷಾಂತರ ಶಸ್ತ್ರಸಜ್ಜಿತ ಸೈನಿಕರಿದ್ದಾರೆ: ಅವರನ್ನು ಹೆಚ್ಚು ಹೆಚ್ಚಿನ ಶಸ್ತ್ರಾಸ್ತ್ರಗಳಿಂದ ಬಲಪಡಿಸಲಾಗಿದೆ: ಹೆಚ್ಚು ಸಂಖ್ಯೆಯಲ್ಲಿ ಮತ್ತು ವೇಗದಲ್ಲಿ ಕೊಲೆಮಾಡಲು ಅವರಿಗೆ ತರಬೇತಿ ಕೊಡಲಾಗಿದೆ. ಈ ಲಕ್ಷಾಂತರ ಜನಗಳಿಗೆ ತಮ್ಮ ಸಹಚರರನ್ನು ಕೊಲ್ಲುವ ಬಯಕೆಯೇನೂ ಇಲ್ಲವೆಂಬುದೂ ನಮಗೆ ಗೊತ್ತಿದೆ: ಮಾತ್ರವಲ್ಲ, ಈ ಬಗೆಯ ಅಸಹ್ಯ ಕೆಲಸವನ್ನು ಮಾಡಲು ಏಕೆ ಅವರನ್ನು ಒತ್ತಾಯಿಸಲಾಗುತ್ತಿದೆ, ಎಂಬುದೂ ಸಹ ಅವರಲ್ಲಿ ಬಹುಜನಗಳಿಗೆ ಗೊತ್ತಿಲ್ಲ. ನಿರ್ಬಂಧದಿಂದ ಕೂಡಿದ ಅವರ ಅಧೀನ ಸ್ಥಿತಿಯನ್ನು ಕುರಿತು ಅವರು ಬೇಸರ ಹೊಂದಿದ್ದಾರೆ. ಕಾಲದಿಂದ ಕಾಲಕ್ಕೆ ಇವರು ಮಾಡುವ ಕೊಲೆಗಳು ಸರ್ಕಾರದ ಅಪ್ಪಣೆಯಂತೆ ಮಾಡಲ್ಪಟ್ಟಿವೆಯೆಂದೂ ನಮಗೆ ಗೊತ್ತಿದೆ. ಹೀಗಿರುವಾಗ ಯುದ್ಧ ನಿರೋಧವನ್ನು ಬಯಸುವ ನಾವು, ನಮ್ಮ ಗುರಿಯ ಸಾಧನೆಗಾಗಿ ಇನ್ನೂ ಉತ್ತಮ ನೆರವನ್ನು ಕಂಡುಹಿಡಿಯಬೇಕೇ ಹೊರತು, ಸೈನ್ಯ ಮತ್ತು, ಯುದ್ಧಗಳ ಬಲದಮೇಲೆ ನಿಂತಿರುವ ಸರ್ಕಾರಕ್ಕೆ ಯುದ್ಧ ನಿರ್ಮೂಲನವನ್ನು ಕುರಿತು ಸಲಹೆ ಮಾಡಬೇಕೆ? ಸರ್ಕಾರಗಳಿಗೆ ತಮ್ಮನ್ನು ತಾವೆ ನಾಶಮಾಡಿಕೊಳ್ಳಲು ಸಲಹೆ ಕೊಡುವುದು ಹೇಗೆ?

ಸರ್ಕಾರಗಳು ಮಾತ್ರ ಈ ಬಗೆಯ ಯಾವುದೇ ಭಾಷಣಗಳನ್ನು ಸಮ್ಮತಿಪೂರ್ವಕವಾಗಿಯೇ ಆಲಿಸುತ್ತವೆ. ಏಕೆಂದರೆ, ಈ ಬಗೆಯ ಚರ್ಚೆಗಳು ಯುದ್ಧವನ್ನು ನಿರ್ಮೂಲಗೊಳಿಸುವುದೂ ಇಲ್ಲ ಅಥವಾ ಅವರ ಅಧಿಕಾರವನ್ನು ಶಿಥಿಲಗೊಳಿಸುವುದೂ ಇಲ್ಲವೆಂಬುದು ಅವರಿಗೆ ಚೆನ್ನಾಗಿ ಗೊತ್ತಿದೆ; ಪ್ರತಿಯಾಗಿ, ಯುದ್ಧಗಳು, ಸೈನ್ಯಗಳು ಮತ್ತು ಅವುಗಳ ಅಧಿಪತಿಗಳಾದ ಅವರುಗಳು ಯಾವುದನ್ನು ಗೋಪ್ಯವಾಗಿಟ್ಟುಕೊಂಡು ಉಳಿಯಲು ಅಪೇಕ್ಷಿಸುತ್ತಾರೆಯೋ ಅಂಥವುಗಳನ್ನು ಇನ್ನೂ ಹೆಚ್ಚು ಪರಿಣಾಮಕಾರಿಯಾಗಿ ಗುಟ್ಟಾಗಿಡಲು ಈ ಭಾಷಣಗಳು ಸಹಕಾರಿಯಾಗುತ್ತವೆಯೆಂದು ಅವರಿಗೆ ಗೊತ್ತಿದೆ.

ಅವರೆ, ನನಗೆ ಹೇಳುತ್ತಾರೆ: 'ಇದು ಅರಾಜಕತೆ; ಜನಗಳು ಯಾವಾಗಲೂ ದೇಶ ಮತ್ತು ಸರ್ಕಾರಗಳಿಲ್ಲದೆ ಜೀವಿಸಿದ್ದಿಲ್ಲ; ಆದುದರಿಂದ ದೇಶಗಳ ಅಸ್ತಿತ್ವಕ್ಕೆ ಮತ್ತು ಜನಗಳ ರಕ್ಷಣೆಗೆ ಸರ್ಕಾರ ಮತ್ತು ಮಿಲಿಟರಿ ಶಕ್ತಿಗಳ ಅಗತ್ಯವಿದೆ'.

ಕ್ರೈಸ್ತ ದೇಶಗಳು ಮತ್ತು ಇತರ ದೇಶಗಳು ಬದುಕಲು ಮತ್ತು ಅವರ ಸರ್ಕಾರಗಳನ್ನು ಸಮರ್ಥಿಸಿಕೊಳ್ಳಲು ಸೈನ್ಯ ಮತ್ತು ಯುದ್ಧಗಳಿಲ್ಲದಿದ್ದರೆ ಸಾಧ್ಯವಿಲ್ಲವೇ? ಎಂಬ ಪ್ರಶ್ನೆಯನ್ನು ಒತ್ತಟ್ಟಿಗಿಟ್ಟು, ಅವರ ಹಿತದೃಷ್ಟಿಯಿಂದಲೇ, ಗುಲಾಮರಂತೆ ಸರ್ಕಾರಗಳೆಂಬ ಸಂಸ್ಥೆಗಳಿಗೆ (ಅವರಿಗೆ ವೈಯಕ್ತಿಕವಾಗಿ ಪರಿಚಯವೇ ಇಲ್ಲದ ಜನಗಳಿಂದ ಕೂಡಿರುವ) ಅಧೀನರಾಗುವುದು ಅನಿವಾರ್ಯವೆಂಬುದನ್ನು ಭಾವಿಸಿಕೊಂಡು, ಎಲ್ಲ ಜನರಿಗೂ—ವಿಶೇಷವಾಗಿ ಕ್ರೈಸ್ತ ದೇಶಗಳಿಗೆ ಒಂದು ಮನವಿಯನ್ನು ಪ್ರಸಿದ್ಧಿಪಡಿಸೋಣ: ಎಲ್ಲರಿಗೂ ಗೊತ್ತಿದ್ದರೂ ಯಾರೂ ವ್ಯಕ್ತಪಡಿಸದಿರುವ ವಿಚಾರಗಳಿಗೆ ಸ್ಪಷ್ಟವಾಗಿ ಖಚಿತವಾಗಿ ಅಭಿವ್ಯಕ್ತಿ ಕೊಡೋಣ. ಯುದ್ಧವೆಂಬುದು ಈಗ ಬಹುಜನ ಅಂಗೀಕರಿಸುವಂತೆ, ಒಂದು ಉತ್ತಮ ಸ್ತುತ್ಯರ್ಹ ಸಂಗತಿಯೇನೂ ಅಲ್ಲ; ಎಲ್ಲ ಕೊಲೆಗಳಂತೆಯೆ ಇದೂ ನೀಚವಾದ ಅಪರಾಧ; ಮಿಲಿಟರಿ ಉದ್ಯೋಗವನ್ನು ಸ್ವತಃ ಅವಲಂಬಿಸಿರುವರಿಗೆ ಮಾತ್ರವಲ್ಲ; ಮರಣ ಅಥವಾ ಶಿಕ್ಷೆಯ ಹೆದರಿಕೆಯಿಂದ ಕಡ್ಡಾಯವಾಗಿ ಅಧೀನಕ್ಕೊಳಪಟ್ಟಿರುವವರಿಗೂ ಇದು ಅನ್ವಯಿಸುತ್ತದೆ. ಎಂಬುದಾಗಿ ವಿವರಿಸೋಣ.

ಸ್ವಪ್ರೇರಣೆಯಿಂದ ಮಿಲಿಟರಿ ಉದ್ಯೋಗವನ್ನು ಆರಿಸಿಕೊಂಡಿರುವವರಿಗೆ ನಾನು ಸ್ಪಷ್ಟವಾಗಿ ಮತ್ತು ಖಚಿತವಾಗಿ ಹೇಳಬೇಕೆಂದಿದ್ದೇನೆ: ಎಷ್ಟೇ ವೈಭವ ಮತ್ತು ಬೆರಗುಗಳಿಂದ ಹಾಗೂ ಸರ್ವಸಮ್ಮತಿಯಿಂದ ಕೂಡಿದ್ದರೂ ಅದು ನಾಚಿಕೆಗೇಡಿನ ನೀಚವೃತ್ತಿ; ಮಿಲಿಟರಿ ಉದ್ಯೋಗದಲ್ಲಿ ಒಬ್ಬ ಮನುಷ್ಯ ಎಷ್ಟು ಉಚ್ಚಸ್ಥಾನದಲ್ಲಿರುತ್ತಾನೆಯೋ ಅಷ್ಟು, ಅವನ ಮರ್ಯಾದೆಗೆಟ್ಟ ಅಪರಾಧಗಳು ಜಾಸ್ತಿಯಾಗುತ್ತಾ ಹೋಗುತ್ತವೆ. ಲಂಚ ಮತ್ತು ಶಿಕ್ಷೆಯ ಹೆದರಿಕೆಯಿಂದ ಮಿಲಿಟರಿ ಸೇವೆಗೆ ಒತ್ತಾಯಪೂರ್ವಕವಾಗಿ ಎಳೆಯಲ್ಪಟ್ಟಿರುವವರಿಗೂ ನಾನು ಸ್ಪಷ್ಟವಾಗಿ ಮತ್ತು ಖಚಿತವಾಗಿ ಹೇಳುವುದೇನೆಂದರೆ ಅವರು ಸೈನ್ಯವನ್ನು ಸೇರಲು ಒಪ್ಪಿಕೊಂಡಾಗ ತಮ್ಮ ನಂಬಿಕೆ, ನೈತಿಕ ನಿಲುವು ಮತ್ತು

ವಿವೇಕಕ್ಕೆ ವಿರುದ್ಧವಾಗಿ ಅತಿಸ್ಪಷ್ಟವಾದ ತಪ್ಪನ್ನು ಮಾಡಿದ್ದಾರೆಂದು ಹೇಳುತ್ತೇನೆ. ಅವರ ನಂಬಿಕೆಗೆ ವಿರುದ್ಧವೇಕೆಂದರೆ. ಕೊಲೆಗಾರರಾದ ಸೈನಿಕರನ್ನು ಸೇರುವುದರ ಮೂಲಕ ಅವರು ಒಪ್ಪುವ ದೇವರ ನಿಯಮವನ್ನು ಉಲ್ಲಂಘಿಸಿದ್ದಾರೆ; ಅವರ ನೈತಿಕ ನಿಲುವಿಗೆ ವಿರೋಧವಾಗಿದೆಯೇಕೆಂದರೆ, ಸಂಬಳ ಅಥವಾ ಶಿಕ್ಷೆಯ ಹೆದರಿಕೆಯಿಂದಾಗಿ – ಆತ್ಮಸಾಕ್ಷಿಗನುಗುಣವಾಗಿ ಅವರು ತಪ್ಪೆಂದು ತಿಳಿದಿರುವುದರೊಂದಿಗೆ ಒಪ್ಪಂದಮಾಡಿಕೊಂಡಿದ್ದಾರೆ: ವಿವೇಕಕ್ಕೆ ವಿರುದ್ಧವಾಗಿದೆಯೇಕೆಂದರೆ, ಅವರು ಸೈನ್ಯಕ್ಕೆ ಸೇರಿದಮೇಲೆ ಯುದ್ಧವೇನಾದರೂ ಘಟಿಸಿದರೆ ಹಾನಿಯಾಗುತ್ತದೆ: ಈ ಹಾನಿ. ಅವರು ಸೈನ್ಯಕ್ಕೆ ಸೇರಲು ಒಪ್ಪದಿದ್ದರೆ ವಿಧಿಸುತ್ತಿದ್ದ ಶಿಕ್ಷೆಗಿಂತ ಕಡಿಮೆಯೇನೂ ಆಗಿರುವುದಿಲ್ಲ. ಅದಕ್ಕಿಂತ ಹೆಚ್ಚಾದ ಅವಿವೇಕವೆಂದರೆ. ತಮ್ಮ ಸ್ವಾತಂತ್ರ್ಯವನ್ನು ಅಪಹರಿಸಿ. ಸೈನಿಕರಾಗಲು ಅವರನ್ನು ಒತ್ತಾಯಿಸಿದ ಜಾತಿಯ ಜನಗಳನ್ನು ಅವರು ಸೇರಿರುವುದು.

ಈ ಎರಡು ವರ್ಗಗಳ ಸೈನಿಕರಿಗೂ ಸಂಬಂಧಪಟ್ಟಂತೆ. ಈ ಮನವಿಯಲ್ಲಿ ಸ್ಪಷ್ಟವಾಗಿ ನಮ್ಮ ಆಲೋಚನೆಯನ್ನು ವ್ಯಕ್ತಪಡಿಸಿ. ಅಲ್ಲಿರುವ ನಿಜವಾದ ವಿವೇಕಿಗಳ ಗಮನ ಸೆಳೆಯಬೇಕೆಂದು ನಾನು ಸೂಚಿಸುತ್ತೇನೆ. ಏಕೆಂದರೆ, ಅವರುಗಳು ಮಿಲಿಟರಿ ವೈಭವ, ಹೇಳಿಕೆ ಮತ್ತು ಪ್ರೇರಣೆಗಳ ಮೂಢ ನಂಬಿಕೆಗಳಿಂದ ಮುಕ್ತರಾದವರು. (ಈ ಬಗೆಯ ಜನಗಳ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ). ಹೇಗಾದರೂ ಮಾಡಿ ಅವರ ನಿಜವಾದ ಅರ್ಥವನ್ನು ಅವರಿಂದ ಮುಚ್ಚಿಡಲು ಯತ್ನಿಸಲಾಗುತ್ತಿದೆಯಾದರೂ, ಸೈನಿಕವೃತ್ತಿ. ಗಲ್ಲಿಗೇರಿಸುವವರಂತೆಯೇ ಅಥವಾ ಇನ್ನೂ ಹೆಚ್ಚಾದ ನಾಚಿಕೆಗೇಡಿನ ವೃತ್ತಿಯಾಗಿದೆಯೆಂಬುದನ್ನು ಅವರ ಗಮನಕ್ಕೆ ತರಬೇಕು. ಏಕೆಂದರೆ. ಗಲ್ಲಿಗೇರಿಸುವವನು ಈಗಾಗಲೇ ಅಪಾಯಕಾರಿ ಅಪರಾಧಿಗಳೆಂದು ನಿರ್ಣಯಿಸಲ್ಪಟ್ಟವರನ್ನು ಮಾತ್ರ ಕೊಲ್ಲಲು ತಯಾರಾಗಿರುತ್ತಾನೆ. ಆದರೆ. ಒಬ್ಬ ಸೈನಿಕ ತನಗೆ ಅಪ್ಪರೇ ಆಗಿರಲಿ. ಒಳ್ಳೆಯವರೇ ಆಗಿರಲಿ. ಎಲ್ಲರನ್ನೂ ಅಪ್ಪಣೆ ಬಂದರೆ ಕೊಲ್ಲಲು ಭರವಸೆ ಕೊಟ್ಟಿರುತ್ತಾನೆ.

ಸಾರ್ವತ್ರಿಕವಾಗಿ ಮಾನವಜನಾಂಗ ಮತ್ತು ನಿರ್ದಿಷ್ಟವಾಗಿ ಕ್ರೈಸ್ತಜನಾಂಗವು ತನ್ನ ಸೈನಿಕ ನಿಷ್ಠೆ ಹಾಗೂ ಸಮಕಾಲೀನ ಸಾಮಾಜಿಕ ವ್ಯವಸ್ಥೆಗಳ ನಡುವೆ ತೀವ್ರ ವಿರೋಧವಿರುವಂತಹ ಘಟ್ಟವನ್ನು ಮುಟ್ಟಿಬಿಟ್ಟಿದೆ. ಬದಲಾವಣೆ ಅನಿವಾರ್ಯ ವಾಗಿದೆ. ಆದರೆ ಈ ಬದಲಾವಣೆ ಮಾರ್ಪಡಿಸಲಾಗದ ನೈತಿಕ ನಿಷ್ಠೆಗಳಿಗೆ ಸಂಬಂಧ ಪಟ್ಟದ್ದಾಗಿರುವುದಿಲ್ಲ. ಬದಲಾಯಿಸಬಹುದಾದ, ಸಾಮಾಜಿಕ ವ್ಯವಸ್ಥೆಗೆ ಸಂಬಂಧ ಪಟ್ಟಿರುತ್ತದೆ. ಬೇರೆ ರೀತಿಯ ಸಾಮಾಜಿಕ ವ್ಯವಸ್ಥೆಯ ಆವಶ್ಯಕತೆ ವರ್ಷದಿಂದ ವರ್ಷಕ್ಕೆ, ಪ್ರತಿದಿನವೂ ಹೆಚ್ಚುಹೆಚ್ಚಾಗಿ ಸ್ಪಷ್ಟವಾಗುತ್ತಿದೆ. ಕೊಲೆಗಾಗಿ ನಡೆಸುವ ನಮ್ಮ ಸಿದ್ಧತೆಗಳಿಂದ ಹುಟ್ಟಿದ ಆಂತರಿಕ ವಿರೋಧಗಳಲ್ಲಿ ಅದಕ್ಕೆ ದೃಷ್ಟಾಂತಗಳನ್ನು ಕಾಣಬಹುದಾಗಿದೆ. ಬದಲಾವಣೆಯನ್ನು ಅಪೇಕ್ಷಿಸುವ ಉದ್ವೇಗ ಯಾವ ಘಟ್ಟವನ್ನು ಮುಟ್ಟಿದೆಯೆಂದರೆ. ಒಮ್ಮೊಮ್ಮೆ ಒಂದು ಚಿಕ್ಕ ಪ್ರಚೋದನೆಯಿಂದ, ದ್ರವವು ಘನವಸ್ತುವಾಗಿ ಮಾರ್ಪಡು

ವಂತೆ. ಒಂದು ಚಿಕ್ಕ ಪ್ರಯತ್ನ ಅಥವಾ ಕೇವಲ ಒಂದು ಮಾತು ನಮ್ಮ ಕಾಲದ ಕ್ರೂರವಾದ —ಸೈನ್ಯ, ಸೈನ್ಯದ ತುಕಡಿ ಮತ್ತು ಶಸ್ತ್ರಾಸ್ತ್ರಗಳ—ಅವಿವೇಕದ ಜೀವನವನ್ನು ಸಮಕಾಲೀನ ಮಾನವೀಯ ಪ್ರಜ್ಞೆಗನುಗುಣವಾಗಿ ವಿವೇಕಯುತಗೊಳಿಸೀತು. ಒಂದೊಂದು ಪ್ರಯತ್ನವೂ, ಒಂದೊಂದು ಮಾತೂ ಸಹ ಪ್ರಚೋದನೆಯಂತೆ ಪರಿಣಮಿಸಿ ಈಗಾಗಲೇ ವಿಪರೀತ ತಣ್ಣಗಾಗಿರುವ ದ್ರವವನ್ನು ಕೂಡಲೇ ಘನೀಭವಿಸುವಂತೆ ಮಾಡಬಹುದು.

ನಮ್ಮ ಈ ಸಮ್ಮೇಳನವೇ ಯಾಕೆ ಅಂತಹ ಪ್ರಚೋದನೆಯಾಗಬಾರದು? ಆಂಡರ್‌ಸನ್ನನ ಅದ್ಭುತ ಕಥೆಗಳಲ್ಲಿ, ಒಬ್ಬ ರಾಜನು ವಿಜಯದ ಮೆರವಣಿಗೆ ಹೊರಟಾಗ ದಾರಿಯುದ್ದಕ್ಕೂ ನೆರೆದಿದ್ದ ಪಟ್ಟಣದ ಜನ ಅವನ ಸುಂದರವಾದ ಹೊಸ ಉಡುಪುಗಳನ್ನು ಕಂಡು ಸಂತೋಷಪಡುತ್ತಿದ್ದರು: ಆದರೆ ಒಂದು ಚಿಕ್ಕ ಮಗುವಿನ ಪ್ರತಿಕ್ರಿಯೆ, ಸ್ಥಿತಿಯನ್ನು ತಲೆಕೆಳಗುಮಾಡಿತು. ಎಲ್ಲರಿಗೂ ಗೊತ್ತಿದ್ದರೂ ಯಾರೂ ಹೇಳದಿದ್ದ ಮಾತನ್ನೇ ಅದು ಹೇಳಿತು: 'ಅವನು ಬೆತ್ತಲೆ ಇದ್ದಾನೆ', ಎಂದು ಆ ಮಗು ಕೂಗಿದ ತಕ್ಷಣ, ಮಂತ್ರ ಮುಗ್ಧರಂತಿದ್ದ ಜನ ಪಿಸುಗುಟ್ಟಿದರು. ರಾಜನಿಗೆ ನಿಜಸ್ಥಿತಿಯ ಅರಿವಾಗಿ ನಾಚಿಕೆ ಯಾಯಿತು. ಉಳಿದವರೂ ಇಲ್ಲಿಯವರೆಗೆ ಆತನು ಸುಂದರವಾದ ಉಡುಪನ್ನೇ ಧರಿಸಿದ್ದಾನೆಂದು ಪ್ರಯತ್ನಪೂರ್ವಕವಾಗಿ ನಂಬಿಕೊಂಡಿದ್ದರೂ ಸಹ, ಈಗ ಬೆತ್ತಲೆ ಇದ್ದಾನೆಂಬುದನ್ನು ಗ್ರಹಿಸಿದರು. ನಾವೂ ಅದನ್ನೇ ಹೇಳಬೇಕಾಗಿದೆ: ಎಲ್ಲರಿಗೂ ತಿಳಿದಿದ್ದೂ ಹೇಳಲು ಧೈರ್ಯವಹಿಸದ ಮಾತನ್ನೇ ನಾವು ಹೇಳಬೇಕು. ಯಾವ ಹೆಸರಿನಿಂದ ಜನ ಕರೆದರೂ ಕೊಲೆ, ಕೊಲೆಯೇ ಆದೀತು—ಮತ್ತು ನಾಚಿಕೆಗೇಡಿನ ಅಪರಾಧವೇ ಆದೀತು, ಎಂದು ನಾವು ಹೇಳಬೇಕು. ಇಲ್ಲಿ ಹೇಳಿದಂತೆಯೇ ಎಲ್ಲೆಲ್ಲಿಯೂ ಅದನ್ನು ಸ್ಪಷ್ಟವಾಗಿ, ಖಚಿತವಾಗಿ ಕೂಗಿ ಹೇಳಬೇಕು. ಆಗಲೇ ಜನರು ತಾವು ಏನನ್ನು ಕಂಡಿದ್ದೇವೆಂದು ಯೋಚಿಸಿದ್ದರೋ ಅದನ್ನು ನಿಲ್ಲಿಸಿ, ತಮ್ಮ ಕಣ್ಣೆದುರಿಗಿರುವ ಸತ್ಯ ಸ್ಥಿತಿಯನ್ನು ಕಾಣುತ್ತಾರೆ. ಅವರು ತಮ್ಮ ದೇಶಸೇವೆಯನ್ನು, ಯುದ್ಧದ ಸಾಹಸಗಳನ್ನು, ಸೈನ್ಯದ ವೈಭವವನ್ನು ಮತ್ತು ದೇಶಪ್ರೇಮವನ್ನು ಬದಿಗೊತ್ತಿ, ಕಣ್ಣೆದುರಿಗೆ ಕಾಣುತ್ತಿರುವ ಬರ್ಬರವಾದ ಕೊಲೆಯ ನೀಚಕೃತ್ಯಗಳನ್ನು ನೋಡುತ್ತಾರೆ. ಹಾಗೆ ಜನ ನೋಡಿದಾಗ ಅದ್ಭುತ ಕಥೆಯಲ್ಲಿ ಏನು ನಡೆಯಿತೋ ಅದು ಇಲ್ಲಿಯೂ ನಡೆಯುತ್ತದೆ. ಯಾರು ನೀಚಕೃತ್ಯಗಳಲ್ಲಿ ನಿರತರಾಗಿದ್ದಾರೋ ಅವರು ನಾಚಿಕೆಯಿಂದ ತಲೆಯೆತ್ತುವುದಿಲ್ಲ: ಯಾರು ತಮಗೆ ಕೊಲೆಯ ನೀಚತನ ಕಾಣುತ್ತಿಲ್ಲವೆಂದು ನಂಬಿಸಿಕೊಳ್ಳುತ್ತಿದ್ದಾರೋ ಅವರು ನಿಜಸ್ಥಿತಿಯನ್ನು ಗ್ರಹಿಸಿ, ಕೊಲೆಗಾರರಾಗಿ ಉಳಿಯುವುದಿಲ್ಲ.

ಆದರೆ ದೇಶಗಳು ಹೇಗೆ ತಮ್ಮನ್ನು ವೈರಿಗಳಿಂದ ರಕ್ಷಿಸಿಕೊಳ್ಳುತ್ತವೆ? ಆಂತರಿಕ ವ್ಯವಸ್ಥೆಯನ್ನು ಹೇಗೆ ಕಾಪಾಡಿಕೊಳ್ಳುತ್ತವೆ? ಹೇಗೆ ಸೈನ್ಯವಿಲ್ಲದೆ ಬದುಕಲು ಸಾಧ್ಯ?

ಕೊಲೆಗಳನ್ನು ನಿರಾಕರಿಸಿದರೆ, ಜನಗಳ ಬದುಕು ಹೇಗೆ ರೂಪುಗೊಳ್ಳುತ್ತದೆಯೋ ನಮಗೆ ಗೊತ್ತಿಲ್ಲ: ಗೊತ್ತಾಗುವಂತಿಲ್ಲ. ಆದರೆ ಒಂದು ವಿಚಾರ ಮಾತ್ರ ಸ್ಪಷ್ಟವಾಗಿದೆ;

ಸಾಮೂಹಿಕ ಕೊಲೆಗಳ ವ್ಯವಸ್ಥೆ ಮಾಡುವವರಿಗೆ ಗುಲಾಮರಂತೆ ಅಧೀನವಾಗುವುದಕ್ಕಿಂತ ಮನುಷ್ಯರಿಗೆ ದೈವದತ್ತವಾಗಿರುವ ವಿವೇಕ ಮತ್ತು ಆತ್ಮಸಾಕ್ಷಿಯಿಂದ ನಿರ್ದೇಶನ ಪಡೆಯುವುದು ಹೆಚ್ಚು ಸ್ವಾಭಾವಿಕವಾಗಿರುತ್ತದೆ. ತಮ್ಮ ನೀತಿಯನ್ನು ಹೆದರಿಕೆಯ ತಳಹದಿಯ ಮೇಲೆ ನಿಂತಿರುವ ಹಿಂಸೆಯ ನಿರ್ದೇಶನದಂತೆ ರೂಪಿಸಿಕೊಳ್ಳದೆ. ವಿವೇಕ ಮತ್ತು ಆತ್ಮಸಾಕ್ಷಿಯ ನಿರ್ದೇಶನದಂತೆ ರೂಪಿಸಿಕೊಳ್ಳುವವರ ನಡವಳಿಕೆ ಮತ್ತು ಅವರು ಕಂಡುಕೊಳ್ಳುವ ಸಾಮಾಜಿಕ ವ್ಯವಸ್ಥೆ, ಈಗಿನ ಸ್ಥಿತಿಗಿಂತ ಖಂಡಿತಾ ಕೆಳಮಟ್ಟದಲ್ಲಿರುವುದಿಲ್ಲ.

ನಾನು ಹೇಳಬೇಕೆಂದಿರುವುದು ಮುಗಿಯಿತು. ನನ್ನ ಮಾತುಗಳು ಯಾರನ್ನಾದರೂ ನೋಯಿಸಿದರೆ. ದುಃಖಕ್ಕೀಡುಮಾಡಿದರೆ ಅಥವಾ ಕೆಟ್ಟಭಾವನೆಗಳನ್ನು ಉದ್ರೇಕಿಸಿದರೆ ತುಂಬಾ ವಿಷಾದ ಪಡುತ್ತೇನೆ. ಆದರೆ, ಎಂಬತ್ತು ವರ್ಷ ವಯಸ್ಸಾಗಿರುವ, ಯಾವ ಕ್ಷಣಕ್ಕಾದರೂ ಸಾವನ್ನು ನಿರೀಕ್ಷಿಸುತ್ತಿರುವ ನಾನು. ಸತ್ಯವನ್ನು ಸಂಪೂರ್ಣವಾಗಿ ನನಗೆ ತಿಳಿದಷ್ಟು ಖಚಿತವಾಗಿ ಹೇಳದಿದ್ದರೆ ಅಪರಾಧಿಯಾಗುತ್ತೇನೆ; ನಾಚಿಕೆಯಾಗುತ್ತದೆ. ಏಕೆಂದರೆ, ನಾನು ದೃಢವಾಗಿ ನಂಬಿರುವಂತೆ ಯುದ್ಧದಿಂದಾಗಿರುವ ಅಗಣಿತ ಕೆಡಕುಗಳನ್ನು ನಿವಾರಿಸುವ ಶಕ್ತಿ ಸತ್ಯಕ್ಕೆ ಮಾತ್ರ ಇರುವುದು.

# ಮನುಷ್ಯರು ಮತ್ತು ಬರಿಸಿಕೊಳ್ಳುವುದೇಕೆ ?

ಮನುಷ್ಯರು ವೋಡ್ಕಾ, ದ್ರಾಕ್ಷಾರಸ, ಬೀರ್, ಹಷೀಷ್, ಅಫೀಮು ತಂಬಾಕು ಗಳನ್ನು ಬಳಸುವುದು ಹೆಚ್ಚು ರೂಢಿಯಲ್ಲಿದೆ; ಈಥರ್ ಮುಂತಾದ ಇಂದ್ರಿಯ ಸುಪ್ತಿ ಕಾರಕಗಳನ್ನೂ, ಮಾರ್ಫಿಯ ಮುಂತಾದ ನಿದ್ರೌಷಧಗಳನ್ನೂ ಬಳಸುವುದೂ ರೂಢಿ ಯಲ್ಲಿದೆ. ಅವರು ಈ ಮಾದಕಪದಾರ್ಥಗಳನ್ನು ಬಳಸುತ್ತಾರಲ್ಲ, ಇದಕ್ಕೆ ಸಮಂಜಸವಾದ ವಿವರಣೆ ಏನು? ಈ ಪದ್ಧತಿ ಶುರುವಾದ್ದಕ್ಕೆ ಕಾರಣವೇನು? ಇದೇಕೆ ಹರಡಿಕೊಂಡಿತು? ಈಗಲೂ ಅದು ವಿವಿಧ ನಾಗರಿಕ, ಅನಾಗರಿಕ ಜನಗಳಲ್ಲಿ ಹಬ್ಬಿಕೊಳ್ಳುತ್ತಲೇ ಇದೆಯಲ್ಲ, ಹೀಗಾಗುವುದಕ್ಕೆ ಕಾರಣವೇನು? ವೋಡ್ಕಾ, ದ್ರಾಕ್ಷಾರಸ, ಬೀರ್ ಸಿಕ್ಕದ ಬಳಿ ಅಫೀಮು, ಹಷೀಷ್ ಮುಂತಾದುವು ಇವೆ; ತಂಬಾಕಂತೂ ಎಲ್ಲೆಲ್ಲೂ ಬಳಕೆಯಲ್ಲಿದೆ; ಹೀಗಾದದ್ದೇಕೆ?

ಜನರಿಗೆ ಈ ಮತ್ತುಬರಿಸಿಕೊಳ್ಳುವ ಬಯಕೆ ಬಂದದ್ದಾದರೂ ಏಕೆ? 'ನೀನು ದ್ರಾಕ್ಷಾರಸವನ್ನೇಕೆ ಕುಡಿಯುವೆ? ಈ ಚಟಕ್ಕೆ ಕಾರಣವೇನು?' ಎಂದು ನೀವು ಯಾರನ್ನಾದರೂ ಕೇಳಿ. ಅವನು ಹೇಳುವುದಿಷ್ಟೆ: 'ಓ ಅದನ್ನು ಕುಡಿಯದವರೇ ಇಲ್ಲ, ಅದು ನನಗೆ ಇಷ್ಟ;' ಅದು ತನಗೆ ಗೆಲುವನ್ನು ತರುವುದೆಂದೂ ಅವನು ಸೇರಿಸ ಬಹುದು. ಮದ್ಯಪಾನ ಒಳ್ಳೆಯದೇ ಕೆಟ್ಟದ್ದೇ ಎಂದು ಒಂದಿಷ್ಟು ಯೋಚನೆಮಾಡದ ಕೆಲವರು ದ್ರಾಕ್ಷಾರಸ ಆರೋಗ್ಯಕರವೆಂದು, ಶಕ್ತಿವರ್ಧಕವೆಂದು (ಅಂದರೆ, ಎಂದೋ ನಿರಾಧಾರವೆಂದು ರುಜುವಾತಾದ ಹೇಳಿಕೆಯನ್ನು) ತಮ್ಮ ವಾದಪುಷ್ಟಿಗಾಗಿ ಸೇರಿಸ ಬಹುದು.

'ನೀನು ತಂಬಾಕನ್ನು ಏಕೆ ಉಪಯೋಗಿಸುತ್ತೀಯೆ? ಈ ಚಟ ಎಂದಿನಿಂದ ಶುರುವಾಯಿತು? ಈಗಲೂ ಧೂಮಪಾನ ಮಾಡುತ್ತಿರುವುದಕ್ಕೆ ಕಾರಣವೇನು?' ಎಂದು ನೀವು ಧೂಮಪಾಯಿಯನ್ನು ಕೇಳಿದರೂ, ಅವನಿಂದ ಇದೇ ರೀತಿಯ ಉತ್ತರ ಬರುತ್ತದೆ; 'ಎಲ್ಲರೂ ಧೂಮಪಾನಮಾಡುತ್ತಾರೆ. ಹೊತ್ತುಕಳೆಯಲು ಅದು ನನಗೆ ಬೇಕು.'

ಅಫೀಮು, ಹಷೀಷ್ ಮುಂತಾದುವನ್ನೂ ಇತರ ನಿದ್ರೌಷಧ ಸುಪ್ತಿಕಾರಕಗಳನ್ನೂ ಬಳಸುವವರು ಕೊಡುವ ಉತ್ತರವೂ ಹೀಗೆಯೇ ಇರುತ್ತದೆ

ಕಡೆದು ತೆಗೆದರೆ ಕಾರಣವಿಷ್ಟೇ ಎಂದು ತೋರುತ್ತದೆ: 'ಹೊತ್ತುಕಳೆಯುವುದಕ್ಕೆ, ಗೆಲುವಾಗಿರುವುದಕ್ಕೆ, ಎಲ್ಲರೂ ಬಳಸುತ್ತಿರುವರೆನ್ನುವುದಕ್ಕೆ'. ಹೊತ್ತುಕಳೆಯುವುದೇ,

ಮನಸ್ಸನ್ನು ಗೆಲುವಾಗಿಟ್ಟುಕೊಳ್ಳುವುದೇ, ಎಲ್ಲರ ದಾರಿಯನ್ನು ನಾವೂ ಹಿಡಿಯುವುದೇ ಇವಕ್ಕೆ ನಿಜವಾದ ಕಾರಣವಾಗಿದ್ದರೆ, ಆ ಗುರಿಯನ್ನು ಚಪ್ಪಾಳೆ ತಟ್ಟುವುದರಿಂದ, ಸಿಳ್ಳು ಹಾಕುವುದರಿಂದ, ರಾಗಾಲಾಪನೆಯಿಂದ, ಪೀಪಿ ಮುಂತಾದ ವಾದ್ಯಗಳನ್ನು ನುಡಿಸುವುದರಿಂದ ಸಾಧಿಸಬಹುದು. ಹಾಗೆ ಮಾಡುವುದು ಕ್ಷೇಮವೂ ಆದೀತು: ಏಕೆಂದರೆ ಅದರಲ್ಲಿ ನೈಸರ್ಗಿಕ ಸಂಪತ್ತಿನ ಅಪವ್ಯಯವಿರುವುದಿಲ್ಲ. ಅವುಗಳ ತಯಾರಿಕೆಗೆ ಅಗಾಧ ಶ್ರಮವೂ ಹಣವೂ ವೆಚ್ಚವಾಗಿರುವುದಿಲ್ಲ. ಮತ್ತು ಅವುಗಳಿಂದ ಯಾರಿಗೂ ಯಾವ ಅಪಾಯವೂ ಒದಗುವುದಿಲ್ಲ. ತುಂಬಾಕು, ದ್ರಾಕ್ಷಾರಸ, ಹಷೀಷ್, ಅಫೀಮುಗಳ ಉತ್ಪಾದನೆಗೆ ಅಸಂಖ್ಯ ಜನರು ದುಡಿಯಬೇಕಾಗುತ್ತದೆ: ಲಕ್ಷಾಂತರ ಎಕರೆ ಉತ್ತಮ ಸಾಗುವಳಿ ಭೂಮಿಯನ್ನು ಬಟಾಟೆ, ಗಾಂಜಾ, ಗಸಗಸೆ, ದ್ರಾಕ್ಷಿ, ತಂಬಾಕು ಬೆಳೆಗಳಿಗೆ ಮೀಸಲಿಡಬೇಕಾಗುತ್ತದೆ. (ಕೆಲವೆಡೆಗಳಲ್ಲಿ ಜನಕ್ಕೆ ಸಾಗುವಳಿಗೆ ಭೂಮಿಯೇ ಇಲ್ಲದಿರುವುದನ್ನು ನಾವಿಲ್ಲಿ ಗಮನಿಸಬೇಕು). ಇವು ತುಂಬಾ ಅಪಾಯಕಾರಿಯೆಂದೂ, ಅನರ್ಥಕಾರಕವೆಂದೂ ಎಲ್ಲರಿಗೂ ಗೊತ್ತು: ಎಲ್ಲರೂ ಹಾಗೆಂದು ಒಪ್ಪಿದ್ದಾರೆ. ಯುದ್ಧಗಳಿಂದ ಮತ್ತು ಸಾಂಕ್ರಾಮಿಕ ರೋಗ ರುಜಿನಗಳಿಂದ ಸತ್ತವರಿಗಿಂತಲೂ ಹೆಚ್ಚು ಜನ ಈ ದುಶ್ಚಟಗಳಿಂದ ನಾಶವಾಗಿದ್ದಾರೆ. ಇದು ಎಲ್ಲರಿಗೂ ಗೊತ್ತಿದೆ; ಆದ್ದರಿಂದ ಅವರು ಹೊತ್ತುಕಳೆಯುವುದಕ್ಕಾಗಲೀ, ಗೆಲುವನ್ನು ಸಂಪಾದಿಸುವುದಕ್ಕಾಗಲೀ, ಎಲ್ಲರೂ ಬಳಸುತ್ತಿರುವರೆಂಬ ಕಾರಣಕ್ಕಾಗಲಿ ಈ ಮಾದಕವಸ್ತುಗಳನ್ನು ತಿಂದು ಸೇವಿಸುತ್ತಿರಲಾರರು.

ಬೇರೆ ಕಾರಣವಿರಬೇಕು. ಎಲ್ಲರಿಗೂ ತಮ್ಮ ತಮ್ಮ ಮಕ್ಕಳೆಂದರೆ ತುಂಬಾ ಪ್ರೀತಿ: ಇದೊಂದು ಸಾರ್ವಕಾಲಿಕ ಸಾರ್ವತ್ರಿಕ ಸತ್ಯವಾಗಿದೆ. ತಮ್ಮ ಮಕ್ಕಳ ಸಲುವಾಗಿ ಸರ್ವಸ್ವವನ್ನೂ ತ್ಯಾಗಮಾಡಲು ಅವರು ಸಿದ್ಧರಿರುತ್ತಾರೆ; ಆದರೂ ಅವರು ವೋಡ್ಕಾ, ದ್ರಾಕ್ಷಾರಸ, ಬೀರ್, ಅಫೀಮು, ಹಷೀಷ್ ಮತ್ತು ತಂಬಾಕುಗಳಿಗಾಗಿ ಹಣ ಸುರಿಯುತ್ತಾರೆ. ಆ ಹಣದಿಂದ ಅವರು ತಮ್ಮ ಬಡಮಕ್ಕಳ ಹಸಿವನ್ನು ತಣಿಸಬಹುದಿತ್ತು; ಏನಿಲ್ಲವೆಂದರೂ, ಅವುಗಳನ್ನು ದುಸ್ಸಹ ಕಷ್ಟದಿಂದ ಪಾರುಮಾಡಬಹುದಿತ್ತು. ಸ್ಪಷ್ಟವಾಗಿ ಹೇಳುವುದಾದರೆ, ನೀವು ಯಾರನ್ನಾಗಲೀ 'ನಿನಗೆ ನಿನ್ನ ಪ್ರೀತಿಯ ಸಂಸಾರದ ಕೊರತೆ ಸಂಕಷ್ಟಗಳು ಹೆಚ್ಚೋ, ಅಥವಾ ನಿನಗೆ ಮತ್ತುಬರಿಸುವ ಚಟಗಳು ಹೆಚ್ಚೋ?' ಎಂದು ಕೇಳಿದರೆ, ಅವನು ಮೊದಲನೆಯದನ್ನೇ ಆಯ್ದುಕೊಳ್ಳುತ್ತಾನೆ: ಇದರಿಂದ ಎಲ್ಲರೂ ಮಾದಕವಸ್ತುಗಳನ್ನು ಸೇವಿಸುವುದರಿಂದ ತಾನೂ ಸೇವಿಸುತ್ತೇನೆ ಮತ್ತು ಅದು ಹರ್ಷದಾಯಕವಾದದ್ದು ಎನ್ನುವುದಕ್ಕಿಂತ ಪ್ರಬಲವಾದ ಕಾರಣದಿಂದ ಅವನು ಪ್ರಭಾವಿತನಾಗಿರಬೇಕು ಎನ್ನುವುದು ಸುಸ್ಪಷ್ಟ. ಕೇವಲ ಹೊತ್ತು ಕಳೆಯಲಾಗಲೀ, ತನ್ನ ಮನಸ್ಸಿಗೆ ಗೆಲುವನ್ನು ತಂದುಕೊಳ್ಳಲಾಗಲೀ ಅವನು ಹಾಗೆಮಾಡಲಾರನೆಂಬುದೂ ಸ್ಪಷ್ಟವಿದೆ ಅದಕ್ಕೆ ಬೇರೆ ಯಾವುದೋ ಪ್ರಬಲಕಾರಣವಿರಲೇಬೇಕು.

ಇದಕ್ಕೆ ಕಾರಣವನ್ನು-ನನ್ನ ಓದಿಕೆಯಿಂದಲೂ ಇತರರನ್ನು ಗಮನಿಸುವುದರಿಂದಲೂ, ಮೊದಲಿಗೆ ಮದ್ಯಪಾನ. ಧೂಮಪಾನ ಮಾಡುತ್ತಿದ್ದ ನನ್ನ ಸ್ವಂತ ಅನುಭವದಿಂದಲೂ – ಹೀಗೆ ವರ್ಣಿಸಬಹುದು.

ತನ್ನ ಬದುಕನ್ನು ಎಚ್ಚರದಿಂದ ಗಮನಿಸುತ್ತಿರುವವನಿಗೆ ಹಲವೇಳೆ ತನಗೆ ಇಬ್ಬಗೆಯ ಅಸ್ತಿತ್ವವಿರುವುದು ಹೊಳೆಯಬಹುದು: ಒಂದು ಕುರುಡಾಗಿದ್ದು ಭೌತಿಕವಾಗಿರುತ್ತದೆ, ಇನ್ನೊಂದು ಕಣ್ತೆರೆದಿದ್ದು ಆಧ್ಯಾತ್ಮಿಕವಾಗಿರುತ್ತದೆ. ಕುರುಡಾದ ಪಶು ಚೇತನವು ತಿನ್ನುತ್ತದೆ. ವಿಶ್ರಾಂತಿ ಪಡೆಯುತ್ತದೆ. ನಿದ್ರಿಸುತ್ತದೆ. ವಂಶಾಭಿವೃದ್ಧಿ ಮಾಡಿಕೊಳ್ಳುತ್ತದೆ, ಚಲಿಸುತ್ತದೆ. ಕೀಲಿಕೊಟ್ಟ ಯಂತ್ರದಂತೆ. ದೃಷ್ಟಿಶಕ್ತಿಯುಳ್ಳ ಆಧ್ಯಾತ್ಮಿಕ ಚೇತನವು. ತಾನು ಪಶುಚೇತನದೊಂದಿಗೆ ಬದ್ಧವಾಗಿದ್ದರೂ. ಸ್ವತಃ ಏನನ್ನೂ ಮಾಡುವುದಿಲ್ಲ. ಆದರೆ ಅದು ಪಶುಚೇತನದ ಎಲ್ಲ ಚಟುವಟಿಕೆಗಳನ್ನೂ ವಿಮರ್ಶೆಮಾಡುತ್ತಲೇ ಇರುತ್ತದೆ. ತನಗೆ ಒಪ್ಪಿಗೆಯಾದ ಕ್ರಿಯೆಯಲ್ಲಿ ಮಾತ್ರ ಅದು ಒಂದುಗೂಡುತ್ತದೆ; ಒಪ್ಪಿಗೆಯಾಗದ ಕ್ರಿಯೆಯಲ್ಲಿ ಅದು ದೂರ ಸರಿಯುತ್ತದೆ.

ಈ ಸಾಕ್ಷೀಚೇತನವನ್ನು ನಾವು 'ಉತ್ತರಮುಖಿಯಸೂಚಿಗೆ ಹೋಲಿಸಬಹುದು. ಅದರ ಒಂದು ತುದಿ ಉತ್ತರದಿಕ್ಕಿಗೂ ಇನ್ನೊಂದು ತುದಿ ದಕ್ಷಿಣದಿಕ್ಕಿಗೂ ತಿರುಗಿರುತ್ತದೆ. ತಾನೂ ತನ್ನ ಸೂಚಿಯೂ ಎರಡೂ ಒಂದೇ ದಿಕ್ಕಿಗೆ ತಿರುಗಿರುವವರೆಗೆ. ಅದು ಯಾವುದೇ ಒಂದು ಅದೃಶ್ಯವಸ್ತುವಿನಿಂದ ಮುಚ್ಚಿಹೋಗಿರುತ್ತದೆ. ಅವು ಬೇರೆಬೇರೆ ದಿಕ್ಕುಗಳಿಗೆ ತಿರುಗಿದಾಗಲೇ. ಅದರ ಅಸ್ತಿತ್ವವು ಗೋಚರವಾಗುವುದು

ಅದೇ ರೀತಿಯಲ್ಲಿ ಸಾಕ್ಷಿಯಾದ ಈ ಆಧ್ಯಾತ್ಮಿಕ ಚೇತನವು—ನಾವು ಸಾಮಾನ್ಯವಾಗಿ 'ಆತ್ಮಸಾಕ್ಷಿ' ಎನ್ನುವುದು ಇದನ್ನೇ—ಯಾವಾಗಲೂ ತನ್ನ ಒಂದು ತುದಿಯಿಂದ ಧರ್ಮವನ್ನೂ. ಇನ್ನೊಂದರಿಂದ ಅಧರ್ಮವನ್ನೂ ಸೂಚಿಸುತ್ತಲೇ ಇರುತ್ತದೆ. ಆದರ ಮಾರ್ಗದರ್ಶನದಂತೆ ನಡೆಯುತ್ತಿರುವವರಿಗೆ ನಮಗೆ ಅದಿರುವುದೇ ತಿಳಿಯುವುದಿಲ್ಲ; ಅದರ ಒಲವು ಎಂದೂ ಧರ್ಮಮಾರ್ಗದ ಕಡೆಗೇ ಹೊರತು ಅಧರ್ಮದ ಕಡೆಗಲ್ಲ. ಆತ್ಮಸಾಕ್ಷಿಯ ಸೂಚನೆಗೆ ವಿರುದ್ಧವಾಗಿ ನಾವು ನಡೆದಾಗಲೇ ನಮಗೆ ಈ ಆಧ್ಯಾತ್ಮಿಕ ಚೇತನದ ಇರುವಿಕೆ ಗೊತ್ತಾಗುವುದು. ಪಶುಚೇತನವು ಆತ್ಮಸಾಕ್ಷಿಯ ಸೂಚನೆಗೆ ವಿರುದ್ಧವಾಗಿ ನಡೆಯುತ್ತದೆ ಎಂಬುದರ ಅರಿವು ನಮಗೆ ಉಂಟಾಗುವುದು ಆಗಲೇ. ತಾನು ತಪ್ಪುದಾರಿ ಹಿಡಿದುದರ ಅರಿವು ನಾವಿಕನಿಗೆ ಉಂಟಾದಕೂಡಲೇ ಅವನು ಹುಟ್ಟು ಹಾಕಲಾರ. ಚಾಲಕಯಂತ್ರವನ್ನು ನಡೆಸಲಾರ. ಪಟವನ್ನು ಬಿಚ್ಚಲಾರ: ಅವನು ಆಗ ತನ್ನ ಯಾನದ ದಿಕ್ಕನ್ನು ಉತ್ತರಮುಖಿಯ ನೆರವಿನಿಂದ ತಿದ್ದಿಕೊಳ್ಳುತ್ತಾನೆ. ಅಥವಾ ತಾನು ತಪ್ಪುಹಾದಿ ಹಿಡಿದೆನೆಂಬ ಅರಿವನ್ನೇ ಪೂರ್ತಿ ಅಳಿಸಿಹಾಕಲು ತೊಡಗುತ್ತಾನೆ. ಹಾಗೆಯೇ ಪ್ರತಿಯೊಬ್ಬ ಮನುಷ್ಯನೂ ತನ್ನ ಪಶುಚೇತನವೂ

ಆತ್ಮಸಾಕ್ಷಿಯೂ ಬೇರೆ ಬೇರೆ ದಿಕ್ಕು ಹಿಡಿದಾಗ, ಅವನ ಎಲ್ಲ ಚಟುವಟಿಕೆಗಳನ್ನೂ ಆತ್ಮಸಾಕ್ಷಿಯ ನಿರ್ದೇಶನಗಳಿಗೆ ಒಳಪಡಿಸುತ್ತಾನೆ; ಇಲ್ಲವೇ, ತನ್ನ ಪಶುವೃತ್ತಿಯ ತಪ್ಪನ್ನು ತನ್ನ ಆತ್ಮಸಾಕ್ಷಿಯು ತೋರಿಸುತ್ತಿದ್ದರೂ ಅದರ ಕಡೆಗೆ ಮುಖಮುಚ್ಚಿ ಕೊಳ್ಳುತ್ತಾನೆ.

ಇಡೀ ಮಾನವ ಜೀವಿತದ ಕ್ರಿಯಾಪರಂಪರೆಗೆ ಇರುವುದು ಎರಡೇ ಮಾರ್ಗ: ಮೊದಲನೆಯದು ತನ್ನ ಆತ್ಮಸಾಕ್ಷಿಗನುಸಾರವಾಗಿ ನಡೆಯುವುದು, ಎರಡನೆಯದು ತನ್ನ ಹಿಂದಿನ ದುರ್ಮಾರ್ಗವನ್ನೇ ಮುಂದುವರಿಸಲು ಆತ್ಮಸಾಕ್ಷಿಯ ಸೂಚನೆಗಳನ್ನು ನಿರ್ಲಕ್ಷಿಸುವುದು.

ಕೆಲವರು ಮೊದಲನೆಯ ಮಾರ್ಗವನ್ನೂ ಇನ್ನು ಕೆಲವರು ಎರಡನೆಯದನ್ನೂ ಹಿಡಿಯುತ್ತಾರೆ. ಮೊದಲನೆಯದು ಸಿದ್ಧಿಸಬೇಕಾದರೆ ನಮಗಿರುವ ಸಾಧನ ಒಂದೇ: ನೈತಿಕ ಪ್ರಜ್ಞೆಯ ವಿಕಸನ – ತನ್ನ ಒಳಬೆಳಕನ್ನು ವೃದ್ಧಿಗೊಳಿಸಿಕೊಂಡು ಅದರ ಕಾಣ್ಕೆಯನ್ನು ಗಮನಿಸುವುದು. ಎರಡನೆಯದಕ್ಕೆ, ಅಂದರೆ ಆತ್ಮಸಾಕ್ಷಿಯ ನಿರ್ದೇಶನ ಗಳಿಗೆ ಮುಖಮುಚ್ಚಿಕೊಳ್ಳುವುದಕ್ಕೆ, ಎರಡು ಸಾಧನಗಳಿವೆ. ಒಂದು ಬಾಹ್ಯ, ಇನ್ನೊಂದು ಆಂತರಿಕ. ಬಾಹ್ಯಸಾಧನವು ನಮ್ಮ ಆತ್ಮಸಾಕ್ಷಿಯ ಸೂಚನೆಗಳನ್ನು ನಾವು ಗಮನಿಸ ದಂತೆ ಮಾಡಿ, ಬೇರೆ ಉದ್ಯೋಗ ಹವ್ಯಾಸಗಳ ಕಡೆಗೆ ತಿರುಗಿಸುತ್ತದೆ. ಆಂತರಿಕ ಸಾಧನವು ಆತ್ಮಸಾಕ್ಷಿಯನ್ನೇ ಅಂಧಕಾರದಲ್ಲಿ ಮುಳುಗಿಸುತ್ತದೆ.

ನಮ್ಮ ಕಣ್ಣುಮುಂದಿರುವ ಯಾವುದೇ ಪದಾರ್ಥವನ್ನು ನೋಡದಿರಬೇಕಾದರೆ ಎರಡು ಮಾರ್ಗಗಳಿವೆ. ಮೊದಲನೆಯದು, ಅದಕ್ಕಿಂತ ಪ್ರಜ್ವಲವಾದ ಇತರ ವಸ್ತುಗಳ ಕಡೆಗೆ ಕಣ್ಣನ್ನು ತಿರುಗಿಸುವುದು. ಎರಡನೆಯದು, ಕಣ್ಣಿಗೂ ಆ ಪದಾರ್ಥಕ್ಕೂ ನಡುವೆ ತಡೆಗಳನ್ನು ಹಾಕುವುದು ಅದೇ ರೀತಿಯಲ್ಲಿ ಯಾವ ಮನುಷ್ಯನಾಗಲೀ ತನ್ನ ಆತ್ಮ ಸಾಕ್ಷಿಯ ಆದೇಶಗಳಿಂದ ತಪ್ಪಿಸಿಕೊಳ್ಳಲು ಎರಡು ಮಾರ್ಗಗಳಿವೆ. ಮೊದಲನೆಯದು, ತನ್ನ ಗಮನವನ್ನು ವಿವಿಧ ಉದ್ಯೋಗ ವ್ಯಸನ ಕ್ರೀಡಾ ವಿನೋದಗಳತ್ತ ಹರಿಸುವುದು. ಬಾಹ್ಯವಿಧಾನ; ಎರಡನೆಯದು, ಅದಕ್ಕೂ ತನ್ನ ಧೀಂದ್ರಿಯಕ್ಕೂ ನಡುವೆ ಅಡ್ಡಿಗಳನ್ನು ಏರ್ಪಡಿಸಿಕೊಳ್ಳುವುದು. ಯಾರಲ್ಲಿ ನೈತಿಕಪ್ರಜ್ಞೆ ಮಂದವೋ, ಮಿತವೋ, ಅವರಿಗೆ ಬಾಹ್ಯಕಾರಣವೇ ಬಹಳ ಸಾಕಾದೀತು: ಅಷ್ಟರಿಂದಲೇ ಅವರು ತಮ್ಮ ಆತ್ಮಸಾಕ್ಷಿಯಿಂದ ಸೂಚಿತವಾದ ತಮ್ಮ ತಪ್ಪುಗಳನ್ನು ಗಮನಕ್ಕೆ ತಂದುಕೊಳ್ಳಲಾಗದ ಸ್ಥಿತಿಗೆ ತಲಪುತ್ತಾರೆ. ಆದರೆ ನೈತಿಕಪ್ರಜ್ಞೆ ಜಾಗೃತವಾಗಿರುವವರಿಗೆ ಹಲವೇಳೆ ಈ ಬಾಹ್ಯಕಾರಣವೊಂದೇ ಸಾಲದು.

ಕೇವಲ ಬಾಹ್ಯಸಾಧನವೇ, ವ್ಯಕ್ತಿಯ ಜೀವನಕ್ಕೂ ಆತ್ಮಸಾಕ್ಷಿಯ ಹಿತವಚನಗಳಿಗೂ ನಡುವೆ ವಿರಸವುಂಟಾದಾಗ, ಅವನ ಗಮನವನ್ನು ಬೇರೆಕಡೆಗೆ ತಿರುಗಿಸಲಾರದು.

ಆದರೆ ಈ ವಿರಸದ ಪ್ರಜ್ಞೆ ವ್ಯಕ್ತಿಯ ಬದುಕಿಗೆ ಅಡ್ಡಿಯಾಗುತ್ತದೆ. ಆತ್ಮಸಾಕ್ಷಿಯನ್ನೇ ಅಂಧಕಾರಕ್ಕೆ ನೂಕಿ, ತಮ್ಮ ಬದುಕನ್ನು ಎಂದಿನಂತೆ ಮುಂದುವರಿಸುವ ಜನರು ಮಾದಕವಸ್ತುಗಳನ್ನು ಬಳಸಿ ಬುದ್ಧಿಗೆ ವಿಷವೂಡಿಸಲು ಆಂತರಿಕ ಸಾಧನವನ್ನೇ ನೆಚ್ಚಿಹಿಡಿಯುತ್ತಾರೆ.

ಯಾವ ಮನುಷ್ಯನೂ ತನ್ನ ಆತ್ಮಸಾಕ್ಷಿಗನುಸಾರವಾಗಿಯೇ ಬದುಕುತ್ತಿಲ್ಲ; ಅಂದರೆ, ಅದರ ನಿರ್ದೇಶನಗಳಂತೆ ತನ್ನ ಬದುಕನ್ನು ಪುನರ್ರಚಿಸಿಕೊಳ್ಳುವ ಸಾಮರ್ಥ್ಯ ಅವನಿಗಿನ್ನೂ ಇಲ್ಲ. ವಿರಸದ ಪ್ರಜ್ಞೆಯಿಂದ ಅವನ ಗಮನವನ್ನು ಬೇರೆಕಡೆಗಳಿಗೆ ತಿರುಗಿಸುವ ಆಕರ್ಷಣೆಗಳು ಸಾಕಾದಷ್ಟಿಲ್ಲ, ಮತ್ತು ಇದ್ದರೂ ಹಳಸಿವೆ. ಆದ್ದರಿಂದ ತನ್ನ ಬದುಕಿನ ತಪ್ಪುಗಳ ಬಗೆಗೆ ಆತ್ಮಸಾಕ್ಷಿಯು ಕೊಡುವ ಸೂಚನೆಗಳನ್ನು ನಿರ್ಲಕ್ಷಿಸಿ ಎಂದಿನಂತೆ ತಾನು ಮುಂದುವರಿಯುವುದಕ್ಕಾಗಿ, ಮನುಷ್ಯನು ತನ್ನ ಆತ್ಮಸಾಕ್ಷಿಯ ಸಾಧನವಾದ ಧೀಂದ್ರಿಯವನ್ನೇ ತಾತ್ಕಾಲಿಕವಾಗಿ ವಿಷಹಾಕಿ ಸ್ತಬ್ಧಗೊಳಿಸುತ್ತಾನೆ; ಇಷ್ಟವಿಲ್ಲದ್ದನ್ನು ನೋಡಬಾರದು ಎಂದು ನಾವು ಕಣ್ಣುಮುಚ್ಚಿಕೊಳ್ಳುವುದಿಲ್ಲವೆ? ಹಾಗೆ.

## 2

ಹಷೀಷ್, ಅಫೀಮು, ದ್ರಾಕ್ಷಾರಸ ಮತ್ತು ತಂಬಾಕುಗಳ ಜಗದ್ವ್ಯಾಪೀ ಬಳಕೆಗೆ ಕಾರಣ—ಅವುಗಳ ರುಚಿಯಲ್ಲ, ಅಥವಾ ಅವು ಕೊಡಬಹುದಾದ ಯಾವುದೇ ಆಮೋದ ವಿನೋದ ಲವಲವಿಕೆಗಳೂ ಅಲ್ಲ; ವ್ಯಕ್ತಿಯು ತನ್ನ ಆತ್ಮಸಾಕ್ಷಿಯ ನಿರ್ದೇಶನಗಳನ್ನು ಕಡೆಗಾಣಿಸುವುದಕ್ಕೆ ಅವು ಅಗತ್ಯ ಎನ್ನುವುದು ಮಾತ್ರ.

ಒಂದು ದಿನ ನಾನು ಬೀದಿಯಲ್ಲಿ ಹೋಗುತ್ತಿದ್ದೆ; ಆಗ ಕೆಲವರು ಚಾಲಕರು 'ತನ್ನ ಬುದ್ಧಿ ಸ್ಥಿಮಿತವಾಗಿದ್ದಾಗ ಅವನು ಇದನ್ನು ಮಾಡಿದ್ದರೆ ತಲೆತಗ್ಗಿಸುತ್ತಿದ್ದನು, ಅಲ್ಲವೆ?' ಎಂದು ಮಾತಾಡಿಕೊಂಡದ್ದು ನನ್ನ ಕಿವಿಗೆ ಬಿತ್ತು.

ಅಂದರೆ, ಯಾವುದೇ ವ್ಯಕ್ತಿ ತನ್ನ ಬುದ್ಧಿ ಸ್ಥಿಮಿತವಾಗಿದ್ದಾಗ ಯಾವ ಕೆಲಸವನ್ನು ಮಾಡಲು ಹೇಸುತ್ತಿದ್ದನೋ, ಅದನ್ನೇ ಅವನು ಕುಡಿತದ ಅಮಲಿನಲ್ಲಿ ಮಾಡಿದ್ದರೆ ಅವನಿಗೆ ತಪ್ಪೆಂದು ತೋರುತ್ತಿರಲಿಲ್ಲ ಎಂದಂತಾಯಿತು. ಮನುಷ್ಯರು ಮಾದಕವಸ್ತುಗಳನ್ನು ಸೇವಿಸುವುದಕ್ಕೆ ಮೂಲಕಾರಣ ಈ ಮಾತಿನಲ್ಲಡಗಿದೆ: 'ಆತ್ಮಸಾಕ್ಷಿಗೆ ವಿರುದ್ಧ ತಾವು ಮಾಡಿದ ದುಷ್ಕೃತ್ಯದ ಪೇಚಿನಿಂದ ಪಾರಾಗುವುದಕ್ಕಾಗಿ'; ಅಥವಾ 'ತಮ್ಮ ಪಶುಸ್ವಭಾವದಿಂದ ಪ್ರೇರಿತವಾದ, ಆದರೆ ತಮ್ಮ ಆತ್ಮಸಾಕ್ಷಿಗೆ ವಿರುದ್ಧವಾದ ಕೃತ್ಯಗಳನ್ನೆಸಗಲು ಅಗತ್ಯವಾದ ಪೂರ್ವಕ್ರಮವಾಗಿ'.

ಬುದ್ಧಿನೆಟ್ಟಗಿರುವವನು ಹಾದರಗಿತ್ತಿಯನ್ನು ಹಿಂಬಾಲಿಸಲು ಹೇಸುತ್ತಾನೆ, ಕದಿಯಲು ಹೇಸುತ್ತಾನೆ, ಕೊಲೆಮಾಡಲು ಹೇಸುತ್ತಾನೆ; ಕುಡಿತದ ಅಮಲೇರಿದವನು ಇವು ಯಾವುದಕ್ಕೂ ಹೇಸುವುದಿಲ್ಲ. ಆದ್ದರಿಂದ ತನ್ನ ಆತ್ಮಸಾಕ್ಷಿ ಯಾವುದನ್ನು

ಹೀನಕೃತ್ಯವೆಂದು ಖಂಡಿಸುತ್ತದೆಯೋ ಅದನ್ನು ಮಾಡಲೇಬೇಕೆಂದಿರುವವನು ಮತ್ತು ಬರಿಸಿಕೊಳ್ಳುತ್ತಾನೆ.

ನನ್ನ ಸಂಬಂಧಿಯಾದ ವೃದ್ಧೆಯೊಬ್ಬಳನ್ನು ಅವಳ ಆಶ್ರಿತನಾಗಿದ್ದ ಅಡುಗೆಯವನು ಕೊಲೆಮಾಡಿದ ಪ್ರಕರಣ ನನ್ನ ನೆನಪಿಗೆ ಬರುತ್ತದೆ. ಆ ಮನೆಯಲ್ಲಿದ್ದ ಕೆಲಸದ ಹುಡುಗಿ ಇವನ ಪ್ರೇಯಸಿಯಾಗಿದ್ದಳು. ಕೃತ್ಯ ನಡೆದ ದಿವಸ ಇವನು ಅವಳನ್ನು ಎಲ್ಲಿಗೋ ಕಳಿಸಿದ್ದನು. ಆಮೇಲೆ ಇವನು ಚೂರಿಹಿಡಿದು ವೃದ್ಧೆಯು ಮಲಗುವ ಕೋಣೆಗೆ ಹೋದನು; ತಾನು ಅಲ್ಲಿ ಮಾಡಬೇಕೆಂದಿದ್ದ ಕೃತ್ಯವನ್ನು ತನ್ನ ಬುದ್ಧಿನೆಟ್ಟಗಿರುವಾಗ ನಡೆಸುವುದು ಸಾಧ್ಯವಿಲ್ಲವೆಂದು ಅವನಿಗೆ ತೋರಿತು; (ಬುದ್ಧಿ ಸ್ಥಿಮಿತವಾಗಿರುವವನು ಅದಕ್ಕೆ ಹೇಸುತ್ತಾನೆ. ಅಲ್ಲವೆ?). ಹಿಂದಿರುಗಿ ಬಂದು ಮೊದಲೇ ತಾನು ಸಿದ್ಧವಾಗಿಟ್ಟುಕೊಂಡಿದ್ದ ಎರಡು ಲೋಟ ವೋಡ್ಕಾಕುಡಿದ ಮೇಲೆ ಅವನಿಗೆ ಮನಸ್ಸು ಗಟ್ಟಿಯಾಯಿತು; ಮುದುಕಿಯ ಕೊಲೆ ಸುಸೂತ್ರವಾಗಿ ನಡೆಯಿತು. ತನ್ನ ಸಾಕ್ಷ್ಯದಲ್ಲಿ ಅವನೇ ಹೀಗೆಲ್ಲ ಹೇಳಿದ್ದಾನೆ.

ಹತ್ತರಲ್ಲಿ ಒಂಬತ್ತು ದುಷ್ಕೃತ್ಯಗಳು ನಡೆಯುವುದು ಹೀಗೆಯೇ: "ಮನಸ್ಸನ್ನು ಗಟ್ಟಿಮಾಡಿಕೊಳ್ಳಲು ಕುಡಿ".

ಮಹಿಳೆಯರಲ್ಲೂ ಅರೆಪಾಲು ಇಂಥ ಕೃತ್ಯಗಳಿಗೆ ಕೈಹಾಕುವುದು ದ್ರಾಕ್ಷಾರಸದ ಅಮಲಿನಲ್ಲಿಯೇ. ಸೂಳೆಗೇರಿಗೆ ಹೋಗುವ ಗಂಡಸರೆಲ್ಲರೂ ಸುಮಾರು ಕುಡಿದೇ ಇರುತ್ತಾರೆ. ಆತ್ಮಸಾಕ್ಷಿಯನ್ನು ಅಡಗಿಸುವ ಶಕ್ತಿ ದ್ರಾಕ್ಷಾರಸಕ್ಕಿರುವುದು ಎಲ್ಲರಿಗೂ ಗೊತ್ತು; ಮತ್ತು ಅದನ್ನು ಅವರು ಆ ಕಾರಣದಿಂದಲೇ ಉದ್ದೇಶಪೂರ್ವಕವಾಗಿ ಸೇವಿಸುತ್ತಾರೆ.

ಆತ್ಮಸಾಕ್ಷಿಗೆ ವಿರುದ್ಧವಾಗಿ ವರ್ತಿಸುವವರು ಅದನ್ನು ಅಡಗಿಸಲೆಂದೇ ತಾವು ಮತ್ತುಬರಿಸಿಕೊಳ್ಳುವುದರ ಜತೆಗೆ, ದ್ರಾಕ್ಷಾರಸ ಏನುಮಾಡಬಲ್ಲದು ಎಂಬುದರ ಅರಿವು ತಮಗಿರುವುದರಿಂದ, ಉದ್ದೇಶಪೂರ್ವಕವಾಗಿಯೇ ಇತರರಿಗೂ ಮತ್ತುಬರಿಸುತ್ತಾರೆ: ಮತ್ತು ಹಾಗೆ ಮಾಡಿ ಆ ಇತರರೂ ತಮ್ಮ ತಮ್ಮ ಆತ್ಮಸಾಕ್ಷಿಗೆ ವಿರುದ್ಧವಾಗಿ ವರ್ತಿಸುವಂತೆ ಮಾಡುತ್ತಾರೆ; ಅಂದರೆ ಅವರ ಆತ್ಮಸಾಕ್ಷಿಯನ್ನು ಅಪಹರಿಸುವುದಕ್ಕಾಗಿಯೇ ಇತರರಿಗೆ ಮತ್ತುಬರಿಸುತ್ತಾರೆ. ಯುದ್ಧಸಮಯದಲ್ಲಿ ಮುಖಾಮುಖಿ ಹೊಡೆದಾಟಕ್ಕೆ ಕಳಿಸುವ ಯೋಧರಿಗೆ ಮತ್ತುಬರಿಸುವುದು ರೂಢಿ. ಸೆವಾಸ್ಟಪೋಲಿನ ಮೇಲೆರಗಿದ ಫ್ರೆಂಚ್‌ಯೋಧರೆಲ್ಲರೂ ಕುಡಿದಿದ್ದರು.

ಒಂದು ದುರ್ಗಕ್ಕೆ ಮುತ್ತಿಗೆ ಹಾಕಿ ಅದನ್ನು ಗೆದ್ದುಕೊಂಡಾಗ ವಿಜಯೀ ಯೋಧರು ಅಲ್ಲಿರುವ ನಿಸ್ಸಹಾಯಕರಾದ ಮುದುಕರನ್ನೂ ಮಕ್ಕಳನ್ನೂ ಕೊಲ್ಲಲು ಹಿಂದೆಗೆದಾಗ, ಅವರಿಗೆ ಚೆನ್ನಾಗಿ ಕುಡಿಸಿ ಕಳಿಸುತ್ತಾರೆ: ಆಗ ಅವರು ಹೇಳಿದಂತೆ ಕೇಳುತ್ತಾರೆ.

ತಮ್ಮ ಆತ್ಮಸಾಕ್ಷಿಯನ್ನು ಬಾಧಿಸುವ ಯಾವುದೋ ಒಂದು ಅಕೃತ್ಯದ ಕಾರಣ ದಿಂದಾಗಿ ಕುಡಿತಕ್ಕೆ ಬಿದ್ದಿರುವುದುಂಟು. ನೀತಿಗೆಟ್ಟ ಬದುಕನ್ನು ನಡೆಸುತ್ತಿರುವವರೇ ಮತ್ತುಬರಿಸುವ ವಸ್ತುಗಳಿಗೆ ವಶವಾಗುವುದು ಹೆಚ್ಚು. ಕಳ್ಳಕಾಕರೂ ದರೋಡೆಗಾರರೂ ಹಾದರಗಿತ್ತಿಯರೂ ಮಾದಕವಸ್ತುಗಳಿಲ್ಲದೆ ಬದುಕಲಾರರು.

ಆತ್ಮಸಾಕ್ಷಿಯನ್ನು ನೋಯಿಸುವುದರ ಪರಿಣಾಮವೇ ಮಾದಕ ವಸ್ತುಗಳ ಸೇವನೆ. ಕೆಲವು ಅನೀತಿಯುತ ಜೀವನ ವಿಧಾನಗಳಲ್ಲಿ ಆತ್ಮಸಾಕ್ಷಿಯನ್ನು ದಮನಮಾಡುವುದೇ ಮಾದಕ ವಸ್ತುಗಳ ಬಳಕೆಗೆ ಕಾರಣವೆಂದೂ, ಮಾದಕ ವಸ್ತುಗಳು ಆತ್ಮಸಾಕ್ಷಿಯನ್ನು ಅಡಗಿಸುತ್ತವೆಂದೂ, ಬುದ್ಧಿವಿಕಲ್ಪವಾದವನು ಮಾಡಬಲ್ಲಂಥ ಕೃತ್ಯಗಳನ್ನು ಬುದ್ಧಿ ನೆಟ್ಟಗಿರುವ ಯಾವನೂ ಒಂದರೆ ನಿಮಿಷವೂ ಯೋಚಿಸಲಾರನೆಂದೂ ಎಲ್ಲರೂ ಬಲ್ಲರು, ಎಲ್ಲರೂ ಹಾಗೆಂದು ಒಪ್ಪುತ್ತಾರೆ. ಆದರೂ ಮಾದಕ ವಸ್ತುಗಳ ಬಳಕೆಯು ಕಳವು, ಕೊಲೆ, ನಿಯಮೋಲ್ಲಂಘನೆ ಮುಂತಾದುವುಗಳಲ್ಲಿ ಪರಿಣಮಿಸದಿರುವಾಗ, ಯಾವುದೋ ಘೋರ ಕೃತ್ಯದ ತರುವಾಯವೇ ಈ ಮಾದಕ ವಸ್ತುಗಳನ್ನು ಸೇವಿಸದಿರುವಾಗ, ಇವು ಗಳನ್ನು ಸೇವಿಸುವವರು ಅಪರಾಧಿಗಳ ವರ್ಗಕ್ಕೆ ಸೇರದವರೂ ಆಗಿರುವಾಗ, ಮತ್ತು ಅಂಥವರು ಇವುಗಳನ್ನು ಯಾವಾಗಲೂ ಮಿತ ಪ್ರಮಾಣದಲ್ಲಿ ಸೇವಿಸುತ್ತಿರುವಾಗ, ಈ ಮಾದಕ ವಸ್ತುಗಳು ಆತ್ಮಸಾಕ್ಷಿಯನ್ನು ಅಡಗಿಸುವ ಭೀತಿಯಿಲ್ಲವೆನ್ನುವುದು ವಿಚಿತ್ರವಾ ಗಿದೆ.

ಶ್ರೀಮಂತ ರಷ್ಯನರು ಊಟಕ್ಕೆ ಮುನ್ನ ಒಂದು ಲೋಟ ವೋಡ್ಕಾವನ್ನೂ ಊಟದ ಜತೆಗೆ ಒಂದು ಲೋಟ ದ್ರಾಕ್ಷಾರಸವನ್ನೂ ಸೇವಿಸುವುದು; ಫ್ರೆಂಚರು ಅಬ್ಸಿಂಥೆಯನ್ನೂ, ಇಂಗ್ಲಿಷರು ಪೋರ್ಟ್‌ವೈನ್ ಮತ್ತು ಪೋರ್ಟರನ್ನೂ, ಜರ್ಮನರು ಲಾಜರ್–ಬೀರನ್ನೂ ಚೀಣೀಯರು ಮಿತವಾಗಿ ಅಫೀಮನ್ನೂ ಸೇವಿಸುವುದು, ಮತ್ತು ಹಾಗೆಯೇ ಎಲ್ಲರೂ ಧೂಮಪಾನಮಾಡುವುದು-ಇವೆಲ್ಲ ಕೇವಲ ಮೋಜಿಗಾಗಿ; ಯಾರ ಆತ್ಮಸಾಕ್ಷಿಗೂ ಇದರಿಂದ ಬಾಧಕವಿಲ್ಲ ಎನ್ನುತ್ತಾರೆ.

ಈ ರೂಢಿಗಾಗಿ ಮತ್ತುಬರಿಸಿಕೊಳ್ಳುವುದರಿಂದ ಕಳುವು, ಕೊಲೆ ಮುಂತಾದ ಯಾವುದೂ ನಡೆಯುವುದಿಲ್ಲ; ಕೆಲವು ಕುಚೇಷ್ಟೆಗಳೂ ಹುಚ್ಚಾಟಗಳೂ ನಡೆಯಬಹುದಷ್ಟೇ- ಅವು ಅನೈಚ್ಛಿಕ ವ್ಯಾಪಾರವೇ ಹೊರತು ಅಮಲೇರಿಕೆಯಿಂದ ಪ್ರೇರಿತವಾದವಲ್ಲ ಎಂದು ನಂಬುವವರಿದ್ದಾರೆ. ಕಾನೂನಿನ ಪ್ರಕಾರ ನಿರಪರಾಧಿಗಳಾದ ಇಂಥವರಿಗೆ ಆತ್ಮಸಾಕ್ಷಿ ಯನ್ನು ದಮನಮಾಡುವ ಅಗತ್ಯವಿರುವುದಿಲ್ಲವೆಂದೂ, ಮಾದಕ ವಸ್ತುಗಳ ಸೇವನೆ ಯಿಂದ ಮತ್ತುಬರಿಸಿಕೊಳ್ಳುವ ಚಟವಿರುವವರ ಜೀವನವೂ ಬಲು ಒಳ್ಳೆಯದಾಗಿಯೇ ಇರುತ್ತದೆಂದೂ, ಮತ್ತುಬರಿಸಿಕೊಳ್ಳದಿರುವಾಗಲೂ ಅವರು ಅಷ್ಟೇ ಒಳ್ಳೆಯವರೆಂದೂ ನಂಬುವವರಿದ್ದಾರೆ. ಮಾದಕ ವಸ್ತುಗಳನ್ನು ಪದೇ ಪದೇ ಸೇವಿಸುವುದರಿಂದ ಆತ್ಮಸಾಕ್ಷಿಗೆ ಮಸಿಹಿಡಿಯದೆಂದೂ ನಂಬುವವರಿದ್ದಾರೆ.

ದ್ರಾಕ್ಷಾರಸ ಅಥವಾ ತಂಬಾಕಿನ ಸೇವನೆಯಿಂದ ಚಿತ್ತಸ್ವಾಸ್ಥ್ಯ ಕೆಡುವುದು; ಮದ್ಯಪಾನಮಾಡದಿದ್ದಾಗ ಯಾರು ತನ್ನೊಂದು ದುಷ್ಕೃತಿಗೆ ಹೇಸುತ್ತಿದ್ದನೋ, ಅವನೇ ಮದ್ಯಪಾನಮಾಡಿದ ಬಳಿಕ ಅದಕ್ಕೆ ಹೇಸದಿರುವುದು; ಆತ್ಮಸಾಕ್ಷಿಯು ಎಚ್ಚರಿಸುತ್ತಿದ್ದರೂ –(ಆ ಎಚ್ಚರಿಕೆ ಎಷ್ಟೇ ಲಘುವಾಗಿರಲಿ) – ಯಾವುದಾದರೊಂದು ಮಾದಕವಸ್ತುವಿನ ಪ್ರಭಾವಕ್ಕೊಳಗಾಗಿ ತನ್ನ ಬದುಕಿನ ಸ್ಥಾನಮಾನಗಳನ್ನು ಕುರಿತು ಯೋಚಿಸುವುದು ಕಷ್ಟವಾಗುವುದು; ಇವು ಅನುಭವವುಳ್ಳ ಎಲ್ಲರಿಗೂ ಗೊತ್ತು. ಮಾದಕ ವಸ್ತುಗಳನ್ನು ಆಗಿಂದಾಗ್ಗೆ ಮಿತಿಮೀರಿ ಸೇವಿಸುವುದರ ಪರಿಣಾಮವೇ ಅವುಗಳನ್ನು ಅನುದಿನವೂ ಮಿತವಾಗಿ ಸೇವಿಸುವುದರಿಂದಲೂ ಉಂಟಾಗುತ್ತದೆ ಎಂಬುದನ್ನು ಎಲ್ಲರೂ ಬಲ್ಲರು. ಇಷ್ಟಾದರೂ ಮದ್ಯವನ್ನೂ ತಂಬಾಕನ್ನೂ ಮಿತವಾಗಿ ಸೇವಿಸುವುದು, ಮತ್ತುಬರಿಸಿ ಕೊಳ್ಳುವುದು–ಆತ್ಮಸಾಕ್ಷಿಯ ದಮನಕ್ಕಲ್ಲ. ಕೇವಲ ರುಚಿಗಾಗಿ, ಮೋಜಿಗಾಗಿ ಎನ್ನುವವರಿದ್ದಾರೆ.

ಆಗಿಂದಾಗ್ಗೆ ಹೆಚ್ಚುಹೆಚ್ಚಾಗಿ ಮಾದಕ ವಸ್ತುಗಳನ್ನು ಸೇವಿಸುವುದರಿಂದ ಮನುಷ್ಯನ ಆತ್ಮಸಾಕ್ಷಿಯ ಉಸಿರು ಕಟ್ಟುವುದಾದರೆ, ಅವುಗಳನ್ನು ಯಾವುದೇ ಪ್ರಮಾಣದಲ್ಲಿ ಅನುದಿನವೂ ಸೇವಿಸುವುದರಿಂದಲೂ ಪರಿಣಾಮ ಅದೇ: ಮೊದಲು ಬುದ್ಧಿಶಕ್ತಿಯನ್ನು ಚುರುಕುಗೊಳಿಸಿ ಅನಂತರ ಮಂಕಾಗಿಸುವುದು. ನಾವು ಇದನ್ನು ಅರ್ಥಮಾಡಿಕೊಳ್ಳ ಬೇಕಾದರೆ, ಈ ವಿಷಯವನ್ನು ಇನ್ನಷ್ಟು ಗಂಭೀರವಾಗಿ, ನಿಷ್ಪಾಕ್ಷಿಕವಾಗಿ ವಿವೇಚಿಸ ಬೇಕಾಗುತ್ತದೆ. ಎರಡನೆಯದಾಗಿ, ಎಲ್ಲ ಮಾದಕ ವಸ್ತುಗಳಿಗೂ ಆತ್ಮಸಾಕ್ಷಿಯನ್ನು ದಮನಮಾಡುವ ಶಕ್ತಿಯಿದೆ; ಅದು ಯಾವಾಗಲೂ ಇರುತ್ತದೆ. ಅವುಗಳ ಪ್ರಭಾವಕ್ಕೊಳ ಗಾಗಿ ಕೊಲೆ, ದರೋಡೆ, ಮತ್ತು ಇತರ ಶಾಸನೋಲ್ಲಂಘನೆಗಳನ್ನು ಮಾಡಿದಾಗಲೋ ಆಡಬಾರದ ಮಾತು ಬಾಯಿಂದ ಹೊರಟಾಗಲೋ, ಬರಬಾರದ ದುರಾಲೋಚನೆಗಳು ಮನಸ್ಸಿನಲ್ಲಿ ಸುಳಿದಾಗಲೋ ಇದು ವ್ಯಕ್ತವಾಗುತ್ತದೆ. ಮೂರನೆಯದಾಗಿ ಕಳ್ಳಕಾಕರ, ದರೋಡೆಕಾರರ ಮತ್ತು ಹಾದರಗಿತ್ತಿಯರ ಆತ್ಮಸಾಕ್ಷಿಗಳನ್ನು ಶಾಂತಗೊಳಿಸಲೂ, ದಮನಮಾಡಲೂ ಮಾದಕವಸ್ತುಗಳು ಅಗತ್ಯವಾದಲ್ಲಿ, ತಮ್ಮ ತಮ್ಮ ಆತ್ಮಸಾಕ್ಷಿಗಳು ಖಂಡಿಸುವ ವ್ಯವಹಾರಗಳಲ್ಲಿ ನಿರತರಾಗಿರುವವರಿಗೂ (ಹೊರಗಿನವರು ಇದನ್ನೇ ಸೂಕ್ತ, ಸಭ್ಯವೆಂದು ಕರೆದರೂ) ಅವು ಅಷ್ಟೇ ಬೇಕಾಗುತ್ತವೆ.

ಒಂದು ಮಾತಿನಲ್ಲಿ ಹೇಳುವುದಾದರೆ, ಮಾದಕ ವಸ್ತುಗಳ ಬಳಕೆಗೆ-ಅದು ದೊಡ್ಡ ಪ್ರಮಾಣದಲ್ಲಿರಲಿ, ಸಣ್ಣ ಪ್ರಮಾಣದಲ್ಲಿರಲಿ ಸಾಂದರ್ಭಿಕವಾಗಿರಲಿ ನಿತ್ಯರೂಢಿಯಾಗಿರಲಿ, ಸಮಾಜದ ಉನ್ನತವರ್ಗಗಳಲ್ಲಿರಲಿ ಕೆಳವರ್ಗಗಳಲ್ಲಿರಲಿ–ಇರುವುದು ಒಂದೇ ಕಾರಣ: ವ್ಯಕ್ತಿಯು ತನ್ನ ಜೀವನ ಪಥಕ್ಕೂ ಆತ್ಮಸಾಕ್ಷಿಗೂ ನಡುವಣ ವಿರಸವನ್ನು ತನ್ನ ಮನಸ್ಸಿಗೆ ಹಚ್ಚಿಕೊಳ್ಳದಿರುವುದಕ್ಕಾಗಿ ಆತ್ಮಸಾಕ್ಷಿಯನ್ನೇ ಅಡಗಿಸಿ ಕೂರಿಸುವುದು ಅಷ್ಟೆ.

3

ಎಲ್ಲ ಮಾದಕ ವಸ್ತುಗಳ, ಮತ್ತು ಸಾಮಾನ್ಯವಾಗಿ ರೂಢಿಯಲ್ಲಿದ್ದು ಅತೀವ ಅಪಾಯಕರವಾದ ತಂಬಾಕಿನ, ವ್ಯಾಪಕವಾದ ಬಳಕೆಗೆ ಕಾರಣವಿರುವುದು ಅಲ್ಲೇ.

ತಂಬಾಕು ಭಾವಶುದ್ಧಿಗೂ ಉಲ್ಲಾಸಕ್ಕೂ ಸಾಧನವೆಂದೂ, ಇತರ ಅಭ್ಯಾಸ ಗಳಂತೆಯೇ ಅದು ಮನುಷ್ಯನನ್ನು ಆಕರ್ಷಿಸುವುದೆಂದೂ, ದ್ರಾಕ್ಷಾರಸದ ಹಾಗೆ ಆತ್ಮಸಾಕ್ಷಿಯನ್ನು ನಿಶ್ಚೇತನಗೊಳಿಸುವುದಿಲ್ಲವೆಂದೂ ನಂಬಲಾಗಿದೆ. ಆದರೆ ನೀವು ಈ ವಿಷಯವನ್ನು ಎಚ್ಚರದಿಂದ ಪರಿಶೀಲಿಸಿ ಯಾವ ಸಂದರ್ಭಗಳು ಧೂಮಪಾನದ ವಿಶೇಷಾಸಕ್ತಿಯನ್ನು ಕೆರಳಿಸುತ್ತವೆ ಎಂಬುದನ್ನು ಗಮನಿಸಿದಲ್ಲಿ ಅದು ದ್ರಾಕ್ಷಾರಸದಷ್ಟೇ ದುಷ್ಟಭಾವವನ್ನು ಬೀರಬಲ್ಲ ಮಾದಕವಸ್ತುವೆನ್ನುವುದು ನಿಮಗೆ ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಮತ್ತು ಆ ಉದ್ದೇಶಕ್ಕೆ ಅಗತ್ಯವೆನಿಸಿದಾಗಲೇ, ಜನರು ತಂಬಾಕನ್ನು ಆಶ್ರಯಿಸುತ್ತಾರೆ; ತನ್ಮೂಲಕ ಮತ್ತುಬರಿಸಿಕೊಳ್ಳುತ್ತಾರೆ. ತಂಬಾಕಿನಿಂದ ಕೇವಲ ಭಾವಶುದ್ಧಿಯಾಗಲೀ ಉಲ್ಲಾಸವಾಗಲೀ ಲಭಿಸುವುದಾದರೆ ಅದಕ್ಕಾಗಿ ಯಾರೂ ಇಷ್ಟು ತೀವ್ರವಾಗಿ ಹಂಬಲಿಸುತ್ತಿರಲಿಲ್ಲ. ಆ ಹಂಬಲವೂ ಕೆಲವು ನಿರ್ದಿಷ್ಟ ಪ್ರಕರಣಗಳಲ್ಲಿ ಮಾತ್ರ ಗೋಚರವಾಗುತ್ತದೆ ಎನ್ನುವುದು ನಿಜ. ಆದರೆ ಹೊಟ್ಟೆಗೆ ಬೇಕಾದ ಹಿಟ್ಟಿಗಿಂತ ತಂಬಾಕೇ ಹೆಚ್ಚು–ಎಂದು ಯಾರೂ ಹೇಳಲಾರರು; ಅವರೆಂದಿಗೂ ಹಿಟ್ಟಿಗೆ ಬದಲು ತಂಬಾಕನ್ನು ಕೊಡಿ ಎಂದು ವಾಸ್ತವವಾಗಿ ಕೇಳಲಾರರು.

ತನ್ನ ಒಡತಿಯನ್ನು ಕೊಲೆಮಾಡಿದ ಅಡುಗೆಯವನ ಪ್ರಕರಣವನ್ನು ಈ ಹಿಂದೆಯೇ ಗಮನಿಸಿದ್ದೇವೆ. ತಾನು ಆಕೆಯ ಮಲುಗುವ ಕೋಣೆಗೆ ಹೋಗಿ ಆಕೆಯ ಗಂಟಲನ್ನು ಚೂರಿಯಿಂದ ಇರಿದುದಾಗಿಯೂ, ಆಗ ಆಕೆ ಗೊರಗೊರ ಎನ್ನುತ್ತ ಬಿದ್ದಳೆಂದೂ, ರಕ್ತದ ಬುಗ್ಗೆ ಹರಿದು ತನ್ನ ಧೈರ್ಯವೇ ಉಡುಗಿತೆಂದೂ ಅವನೇ ಹೇಳಿಕೊಂಡಿದ್ದಾನೆ. ಅಷ್ಟೇ ಅಲ್ಲ, ಆಗ ತಾನು ಅಲ್ಲಿಂದ ಬೇರೆ ಕೋಣೆಗೆ ಹೋಗಿ ಕುಳಿತು ಒಂದು ಸಿಗರೇಟನ್ನು ಸೇದಿ ಮತ್ತುಬರಿಸಿಕೊಂಡ ಮೇಲೆಯೇ ಅವನಿಗೆ ಆಕೆಯ ಮಲಗುವ ಕೋಣೆಗೆ ಮತ್ತೆ ಹೋಗುವ, ಆಕೆಯ ಗಂಟಲನ್ನು ಪೂರ್ತಿಯಾಗಿ ಕತ್ತರಿಸುವ ಮತ್ತು ಆಕೆಯ ಒಡವೆ ವಸ್ತು ಗಳನ್ನು ಹುಡುಕುವ ಎದೆಗಾರಿಕೆ ಬಂತಂತೆ.

ಆಗ ಅವನಿಗೆ ಸಿಗರೇಟ್ ಸೇದುವ ಅಪೇಕ್ಷೆಯುಂಟಾದದ್ದು ಭಾವಶುದ್ಧಿಗಾಗಲೀ ಉಲ್ಲಾಸಕ್ಕಾಗಲೀ ಅಲ್ಲ; ತನ್ನ ಸಂಚಿಗೆ ತಡೆಹಾಕಿದ್ದ ಯಾವುದನ್ನೋ ಅಗಿಸಬೇಕಾಗಿ ಬಂದದ್ದರಿಂದ. ಎನ್ನುವುದು – ಇದರಿಂದ ಎದ್ದು ಕಾಣುತ್ತದೆ.

ಅಂಥ ಕೆಲವು ದುಸ್ತರ ಸಂದರ್ಭಗಳಲ್ಲಿ ತಂಬಾಕಿನ ಸೇವನೆಯಿಂದ ಮತ್ತುಬರಿಸಿ ಕೊಳ್ಳುವ ನಿರ್ದಿಷ್ಟ ಅಪೇಕ್ಷೆ ತನಗುಂಟಾಗುವುದನ್ನು ಧೂಮಪಾನದಲ್ಲಿ ಆಸಕ್ತಿಯುಳ್ಳವನು

ಕಂಡುಕೊಳ್ಳಬಲ್ಲನು. ನಾನೂ ಒಂದು ಕಾಲದಲ್ಲಿ ಧೂಮಪಾನ ಮಾಡುತ್ತಿದ್ದೆ. ಆ ದಿನಗಳನ್ನು ನೆನೆಯುತ್ತೇನೆ. ಈ ತಂಬಾಕಿನ ಚಟ ನನ್ನಲ್ಲಿ ಯಾವಾಗ ಹುಟ್ಟಿತು? ನಾನು ಯಾವುದನ್ನು ಯೋಚಿಸಬಾರದು. ಮರೆಯಲೇಬೇಕು ಎಂದಿದ್ದೆನೋ ಅದನ್ನು ನೆನಪಿನಿಂದ ಅಳಿಸಿಬಿಡುವ ಅಗತ್ಯ ತೋರಿದಾಗ ತಂಬಾಕು ಬೇಕಾಗುತ್ತದೆ. ನಾನು ನಿಷ್ಕ್ರಿಯವಾಗಿ ಕುಳಿತಾಗ. ಮಾಡಬೇಕಾದ ಕೆಲಸವಿದ್ದರೂ ಮಾಡುವ ಇಚ್ಛೆ ಬರದಿದ್ದಾಗ, ಧೂಮಪಾನ ಮಾಡುತ್ತ ಕುಳಿತುಬಿಡುತ್ತೇನೆ. ಐದು ಘಂಟೆಗೆ ಅವರ ಮನೆಗೆ ಬರುವುದಾಗಿ ನಾನು ಒಬ್ಬರಿಗೆ ಹೇಳಿದ್ದೆ: ಆದರೆ ಇನ್ನೆಲ್ಲೋ ಬಹಳ ಹೊತ್ತು ಇದ್ದುಬಿಟ್ಟೆ: ಆಮೇಲೆ ಅವರಿಗೆ ಕೊಟ್ಟಿದ್ದ ಮಾತು ನೆನಪಿಗೆ ಬಂತು. ಆದರೆ ಅದನ್ನು ಜ್ಞಾಪಿಸಿಕೊಳ್ಳುವುದು ನನಗೆ ಇಷ್ಟವಿಲ್ಲ; ಆದ್ದರಿಂದ ಧೂಮಪಾನ ಮಾಡುತ್ತೇನೆ. ನನ್ನ ಮನಸ್ಸು ಪೇಚಿಗೆ ಸಿಕ್ಕಿರುವಾಗ ಯಾರೋ ಬರುತ್ತಾರೆ: ನಾನು ಆಗ ಕೆಟ್ಟಮಾತು ಆಡುತ್ತೇನೆ. ನಾನು ಮಾಡಿದ್ದು ತಪ್ಪೆಂದೂ ಅದನ್ನು ತಡೆಯಬೇಕೆಂದೂ ನನಗೆ ಗೊತ್ತಾಗುತ್ತದೆ. ಆದರೆ ನನ್ನ ಸಿಟ್ಟಿಗೆ ಪೂರ್ತಿ ಅವಕಾಶಕೊಡಬೇಕೆನಿಸುತ್ತದೆ: ಅದಕ್ಕಾಗಿ ನಾನು ಧೂಮಪಾನ ಮಾಡಿ ನನ್ನ ಸಿಟ್ಟನ್ನು ಮುಂದುವರಿಸುತ್ತೇನೆ. ನಾನು ಇಸ್ಪೀಟು ಆಟಕ್ಕೆ ಕೂರುತ್ತೇನೆ; ತಡೆದುಕೊಳ್ಳಲಾಗದಷ್ಟು ಸೋಲುತ್ತೇನೆ; ಅದಕ್ಕಾಗಿ ಧೂಮಪಾನ ಮಾಡುತ್ತೇನೆ; ನಾನು ನನ್ನ ಅವಿವೇಕದಿಂದ. ತಪ್ಪಿನಿಂದ ಕಷ್ಟಕ್ಕೆ ಸಿಕ್ಕುತ್ತೇನೆ. ಹಾಗೆ ಒಪ್ಪಿಕೊಂಡು ಅದರಿಂದ ಪಾರಾಗುವುದು ನನಗಿಷ್ಟವಿಲ್ಲವಾದ್ದರಿಂದ ಇತರರ ಮೇಲೆ ತಪ್ಪು ಹೊರಿಸುತ್ತೇನೆ —ಆಗ ಧೂಮಪಾನ ಮಾಡುತ್ತೇನೆ. ನಾನು ಏನನ್ನೋ ಬರೆಯುತ್ತೇನೆ; ಅದು ನನಗೆ ತೃಪ್ತಿಕರವಾಗಿರುವುದಿಲ್ಲ; ಅದನ್ನು ನಾನು ಕೈಬಿಡಬೇಕು. ಇಲ್ಲ: ಅದನ್ನು ಬರೆದು ಮುಗಿಸಲೇ ಬೇಕೆನ್ನುತ್ತೇನೆ—ಅದಕ್ಕಾಗಿ ಧೂಮಪಾನ ಮಾಡುತ್ತೇನೆ. ನಾನು ಇನ್ನೊಬ್ಬನ ಮೇಲೆ ವ್ಯಾಜ್ಯ ಹೂಡುತ್ತೇನೆ: ನನಗೂ ನನ್ನ ವಿರೋಧಿಗೂ ಪರಸ್ಪರ ತಿಳಿವಳಿಕೆ ಕುದುರದಂತೆ ಮಾಡುತ್ತೇನೆ: ಆದರೆ ನನ್ನ ಅಭಿಪ್ರಾಯವನ್ನು ಹೇಳಲೇಬೇಕೆಂದುಕೊಂಡು ಮಾತಾಡುತ್ತಲೇ ಇರುತ್ತೇನೆ—ಆಗ ಧೂಮಪಾನ ಮಾಡುತ್ತೇನೆ.

ತಂಬಾಕಿನಿಂದ ಮತ್ತುಬರಿಸಿಕೊಳ್ಳುವುದು ಸಲುಭ ಮತ್ತು ಮೇಲುನೋಟಕ್ಕೆ ಅದು ಅಪಾಯಕರವೂ ಅಲ್ಲ ಎಂದಿಟ್ಟುಕೊಂಡರೆ. ಇತರ ಮಾದಕ ವಸ್ತುಗಳಲ್ಲಿಲ್ಲದ ಯಾವ ವಿಶಿಷ್ಟಗುಣ ಅದರಲ್ಲಿದೆ?—ಅದನ್ನು ಒಯ್ಯುವುದು ಸುಲಭವೆನ್ನುವುದೆ? ಅಪರೂಪವಾಗಿ ಬರುವ ಸಣ್ಣಪುಟ್ಟ ವ್ಯಸನಗಳನ್ನೆದುರಿಸುವುದಾಗಿಕ್ಕಾಗಿ ಅದನ್ನು ಬಳಸುವುದು ಸಾಧ್ಯವೆನ್ನುವುದೆ? ಅಫೀಮು. ದ್ರಾಕ್ಷಾರಸ ಮತ್ತು ಹಶೀಷ್‌ಗಳ ಸೇವನೆಗೆ ಬೇಕಾದ ಕೆಲವು ಸಾಧನಗಳು ಯಾವಾಗಲೂ ಬಳಿಯಲ್ಲೇ ಇರುವುದಿಲ್ಲವೆಂದೂ. ಧೂಮಪಾನಕ್ಕೆ ತಂಬಾಕನ್ನೂ ಕಾಗದವನ್ನೂ ಜೇಬಿನಲ್ಲೇ ಇಟ್ಟುಕೊಳ್ಳಬಹುದು ಎನ್ನುವುದೆ? ಭಂಗೀಕೋರನನ್ನಾಗಲೀ ಕುಡುಕನನ್ನಾಗಲೀ ಕಂಡರೆ ತಂಬಾ ಗಾಬರಿಯಾಗುತ್ತದೆ: ತಂಬಾಕಿನ ಹೊಗೆ ಕುಡಿಯುವವನು ಅಷ್ಟು ಅಸಹ್ಯವಾಗಿ ಕಾಣುವುದಿಲ್ಲ ಎನ್ನುತ್ತಾರೆ. ಹಾಗಾದರೆ

ಇತರ ಮಾದಕ ವಸ್ತುಗಳಿಗಿಂತಲೂ ತಂಬಾಕು ಹೆಚ್ಚು ಅನುಕೂಲವಾದದ್ದು ಎಂದರೆ ಅರ್ಥವೇನು? ಅದರ ಅರ್ಥವಿಷ್ಟೇ: ಅಫೀಮು, ಹಶೀಷ್ ಅಥವಾ ದ್ರಾಕ್ಷಾರಸಗಳ ಸೇವನೆಯಿಂದ ಬರುವ ಅಮಲು ಸಾಕಷ್ಟು ದೀರ್ಘಾವಧಿಕಾಲ ಎಲ್ಲ ಇಂದ್ರಿಯಗಳನ್ನೂ ಎಲ್ಲ ಕ್ರಿಯೆಗಳನ್ನೂ ತನ್ನ ವಶಮಾಡಿಕೊಂಡಿರುತ್ತದೆ--ತಂಬಾಕಿನಿಂದ ಬರುವ ಅಮಲು ಯಾವುದಾದರೊಂದು ಬಿಡಿ ಘಟನೆಗೆ ಮಾತ್ರ ಸೀಮಿತವಾಗಿರುತ್ತದೆ. ಇದನ್ನು ಹೀಗೆ ವಿವರಿಸಬಹುದು. ಯಾವುದೋ ಮಾಡಬಾರದ ಕೆಲಸಕ್ಕೆ ಕೈಹಾಕುವ ಅಪೇಕ್ಷೆ ನಿಮಗೆ ಬರುತ್ತದೆ, ಆಗ ಆ ಅಕೃತ್ಯವನ್ನು ನಡೆಸುವುದಕ್ಕೆ ಎಷ್ಟು ಮತ್ತು ಬೇಕೋ ಅಷ್ಟನ್ನು ಮಾತ್ರ ಬರಿಸಿಕೊಳ್ಳುವುದಕ್ಕಾಗಿ ನೀವು ಸಿಗರೇಟ್ ಸೇದುತ್ತೀರಿ. ಆಮೇಲೆ ನೀವು ಪೂರ್ವ ಸ್ಥಿತಿಗೆ ಬರುತ್ತೀರಿ. ಸ್ಪಷ್ಟವಾಗಿ ಆಲೋಚಿಸುವ ಮತ್ತು ಮಾತನಾಡುವ ಸಾಮರ್ಥ್ಯ ನಿಮಗೆ ಬರುತ್ತದೆ; ಅಥವಾ ಮಾಡಬಾರದ್ದನ್ನು ಮಾಡಿದ್ದಕ್ಕಾಗಿ ನಿಮಗೆ ಪಶ್ಚಾತ್ತಾಪವುಂಟಾಗುತ್ತದೆ—ಮತ್ತೆ ಸಿಗರೇಟ್ ಸೇದುತ್ತೀರಿ: ನಿಮ್ಮ ತಪ್ಪಿನಿಂದ ಅಥವಾ ಚೇಷ್ಟೆಯಿಂದ ನಿಮಗೆ ತೊಂದರೆಯಾದ್ದರ ಅರಿವನ್ನು ತೊಡೆದುಹಾಕುತ್ತೀರಿ, ಇತರ ಕೆಲಸಗಳಿಗೆ ತೊಡಗಿ ಅದನ್ನು ಮರೆತುಬಿಡುತ್ತೀರಿ.

ಧೂಮಪಾನಾಸಕ್ತಿಯುಳ್ಳ ಪ್ರತಿಯೊಬ್ಬನೂ ಯಾವುದೋ ಒಂದು ಚಟವನ್ನು ತೀರಿಸಿಕೊಳ್ಳುವುದಕ್ಕಾಗಲೀ, ಹೊತ್ತುಕಳೆಯುವುದಕ್ಕಾಗಲೀ ಅಲ್ಲ. ತಾನು ಮಾಡ ಲಿರುವ ಅಥವಾ ಮಾಡಿರುವ ಯಾವುದೋ ಕೃತ್ಯಕ್ಕೆ ಸಂಬಂಧಿಸಿದಂತೆ ತನ್ನ ಆತ್ಮಸಾಕ್ಷಿ ಯನ್ನು ಸ್ತಬ್ಧಗೊಳಿಸುವ ಒಂದು ಸಾಧನವಾಗಿ ಧೂಮಪಾನವನ್ನು ಪ್ರಯೋಗಿಸುವ ಬಿಡಿ ಪ್ರಸಂಗಗಳಿರಬಹುದು. ಆದರೆ, ಮಾನವರ ಜೀವನ ವಿಧಾನಕ್ಕೂ ಅವರ ಧೂಮ ಪಾನಾಭಿಲಾಷೆಗೂ ಒಂದು ನಿಕಟವಾದ ನಿರ್ದಿಷ್ಟವಾದ ಸಂಬಂಧವಿರುವುದು ಎದ್ದು ಕಾಣುವುದಿಲ್ಲವೆ?

ಚಿಕ್ಕಹುಡುಗರೂ ಹೊಗೆ ಸೇದುತ್ತಾರಲ್ಲಾ, ಅದು ಯಾವಾಗ?

ಸಾಮಾನ್ಯವಾಗಿ ತಮ್ಮ ಶೈಶವ ಮುಗ್ಧತೆಯನ್ನು ಕಳೆದುಕೊಂಡಾಗ. ಜೀವನದಲ್ಲಿ ನೀತಿ ನಿಷ್ಠೆಯುಳ್ಳವರೊಂದಿಗಿರುವಾಗ ಹೊಗೆ ಸೇದುವುದನ್ನು ಬಿಟ್ಟುಬಿಡುವುದೂ, ದುಸ್ಸಹವಾಸಕ್ಕೆ ಬಿದ್ದಾಗ ಮತ್ತೆ ಹೊಗೆ ಸೇದುವುದನ್ನು ಪ್ರಾರಂಭಿಸುವುದೂ ಸಾಧ್ಯ ವಾದದ್ದು ಹೇಗೆ? ಸಾಮಾನ್ಯವಾಗಿ ಎಲ್ಲ ಜೂಜು ಕೋರರೂ ಧೂಮಪಾನ ಮಾಡುವುದೇಕೆ? ಹೆಂಗಸರಲ್ಲಿ, ಸಂಭಾವಿತರಾದ ಯಾರೂ ಧೂಮಪಾನಮಾಡದಿರುವು ದೇಕೆ? ಎಲ್ಲ ಪಾದರಗಿತ್ತಿಯರೂ ಎಲ್ಲ ಕುಡುಕರೂ ಏಕೆ ಧೂಮಪಾನ ಮಾಡುತ್ತಾರೆ? ರೂಢಿಯ ವಿಷಯ ಬೇರೆ: ಆದರೆ ಧೂಮಪಾನದ ಚಟಕ್ಕೂ ಆತ್ಮಸಾಕ್ಷಿಯನ್ನು ಸ್ತಬ್ಧಗೊಳಿಸುವ ಹಂಬಲಕ್ಕೂ ಯಾವುದೋ ಒಂದು ಸಂಬಂಧವಿದ್ದೇ ಇದೆ ಎನ್ನುವುದೂ ತಾನು ಮಾಡಬೇಕಾದದ್ದನ್ನು ಅದು ಮಾಡಿಯೇ ತೀರುತ್ತದೆ ಎನ್ನುವುದೂ ಸುಸ್ಪಷ್ಟ.

ಈ ಧೂಮಪಾನದ ಚಟ ಆತ್ಮಸಾಕ್ಷಿಯ ಧ್ವನಿಯನ್ನು ಎಷ್ಟರಮಟ್ಟಿಗೆ ಕುಗ್ಗಿಸಿಬಿಡುತ್ತದೆ ಎನ್ನುವುದನ್ನು ನಾವು ಒಬ್ಬೊಬ್ಬ ಧೂಮಪಾಯಿಯ ಪ್ರಕರಣದಿಂದಲೂ ಕಂಡುಕೊಳ್ಳಬಹುದು. ಪ್ರತಿಯೊಬ್ಬ ಧೂಮಪಾಯಿಯೂ ಸಾಮಾಜಿಕ ಜೀವನದ ಕೇವಲ ಪ್ರಾಥಮಿಕ ಕೇಳಿಕೆಗಳನ್ನೂ – ಅಂದರೆ, ಎಲ್ಲರೂ ಮಾನ್ಯಮಾಡಬೇಕೆಂದು ತಾನು ಭಾವಿಸುವ ಮತ್ತು ತಾನೇ ಉಳಿದೆಲ್ಲ ಸಂದರ್ಭಗಳಲ್ಲಿಯೂ ಮಾನ್ಯಮಾಡುವ ಕೇಳಿಕೆಗಳನ್ನು, ಎಲ್ಲಿಯವರೆಗೆ ತನ್ನ ಆತ್ಮಸಾಕ್ಷಿಯು ತಂಬಾಕಿನ ಅಮಲಿನಿಂದ ನಿಶ್ಚೇತನವಾಗಿರುತ್ತದೆಯೋ ಅಲ್ಲಿಯವರೆಗೆ, ಬೇಕೆಂದೇ ಮರೆತುಬಿಡುತ್ತಾನೆ, ಇಲ್ಲವೇ ನಿರರ್ಥಕಗೊಳಿಸುತ್ತಾನೆ. ಎಂಥ ಸಾಧಾರಣ ವಿದ್ಯಾವಂತನೂ ಇತರರ ಶಾಂತಿ ನೆಮ್ಮದಿಗಳನ್ನು ಮುರಿಯಲೂ, ಮಿಗಿಲಾಗಿ ತನ್ನ ಸಂತೋಷಕ್ಕಾಗಿ ಇತರರ ಆರೋಗ್ಯಕ್ಕೆ ಧಕ್ಕೆ ತರಲೂ ಹಿಂದೆಗೆಯುತ್ತಾನೆ. ಜನಭರಿತವಾದ ಕೊಠಡಿಯಲ್ಲಿ ಮೂತ್ರ ವಿಸರ್ಜನೆ ಮಾಡುವುದು, ಗದ್ದಲವೆಬ್ಬಿಸುವುದು, ಕಿರಿಚುವುದು, ಬಿಸಿಬಿಸಿಯಾದ ಇಲ್ಲವೇ ತಣ್ಣಗೆ ಕೊರೆಯುತ್ತಿರುವ ಇಲ್ಲವೇ ದುರ್ವಾಸನೆಯಿಂದ ಕೂಡಿದ ಗಾಳಿಯನ್ನು ನುಗ್ಗಿಸುವುದು, ಮತ್ತು ಇತರರಿಗೆ ತೊಂದರೆಯಾಗುವ ಅಥವಾ ಅಪಾಯವೊದಗುವ ಯಾವುದೇ ಕೆಲಸವನ್ನು ಮಾಡುವುದು ಅವನಿಂದಾಗದು. ಆದರೆ ಧೂಮಪಾನದ ಅಭ್ಯಾಸವೇ ಇಲ್ಲದ ಹೆಂಗಸರೂ ಮಕ್ಕಳೂ ಇರುವ ಕೊಠಡಿಯಲ್ಲಿ ಕೆಟ್ಟ ಹೊಗೆಯನ್ನು ಬಿಡಲು ಹಿಂಜರಿಯುವ ಧೂಮಪಾಯಿ ನಿಮಗೆ ಸಾವಿರಕ್ಕೊಬ್ಬ ಸಿಕ್ಕಾನು.

ತನ್ನ ಸುತ್ತಮುತ್ತ ಇರುವವರನ್ನು 'ನಿಮ್ಮದೇನೂ ಅಭ್ಯಂತರವಿಲ್ಲವಷ್ಟೆ?' ಎಂದು ಕೇಳುವುದು ಧೂಮಪಾಯಿಯ ಸಾಮಾನ್ಯ ಪದ್ಧತಿ. 'ಖಂಡಿತ ಇಲ್ಲ' ಎಂದು ಅವರು ಉತ್ತರಕೊಡುವರೆಂದು ಎಲ್ಲರಿಗೆ ಗೊತ್ತು. (ಅಂಥ ಕಲುಷಿತ ವಾತಾವರಣದಲ್ಲಿ ಉಸಿರಾಡುವುದಾಗಲಿ, ಎಲ್ಲೆಂದರಲ್ಲಿ – ಲೋಟಗಳಲ್ಲಿ, ಬಟ್ಟಲುಗಳಲ್ಲಿ, ತಟ್ಟೆಗಳಮೇಲೆ ಮೊಂಬತ್ತಿಗಳಲ್ಲಿ, ಬೂದಿಯನ್ನು ಶೇಖರಿಸಲು ಇಡುವ ಬೋಗುಣಿಗಳಲ್ಲಿ–ದುರ್ವಾಸನೆಯ ಸಿಗರೇಟ್ ಮುರುಕುಗಳು ಬಿದ್ದಿರುವುದನ್ನು ನೋಡುವುದಾಗಲಿ ಅಪ್ಯಾಯಮಾನವಲ್ಲವೆನ್ನುವುದು ಹಾಗೆ ಉತ್ತರ ಕೊಡುವವರಿಗೆ ಗೊತ್ತು)[1] ಧೂಮಪಾಯಿಗಳಲ್ಲದ ಗಂಡಸರೇನೋ ತಂಬಾಕಿನ ಹೊಗೆಗೆ ಆಕ್ಷೇಪಣೆಯೆತ್ತುವುದಿಲ್ಲ. ಆದರೆ ಮಕ್ಕಳ ಒಪ್ಪಿಗೆಯನ್ನು ಯಾರೂ ಕೇಳುವುದಿಲ್ಲ; ಆ ಹೊಗೆ ಮಕ್ಕಳಿಗೆ ಒಳ್ಳೆಯದಲ್ಲ, ಹಿತಕರವೂ ಅಲ್ಲ. ಆದರೂ ಸಂಭಾವಿತರೂ, ಉಳಿದೆಲ್ಲ ವಿಷಯಗಳಲ್ಲಿ ಉದಾರ ಹೃದಯಿಗಳೂ ಆದ ದೊಡ್ಡವರು ಚಿಕ್ಕ ಕೊಠಡಿಗಳಲ್ಲಿ ಕುಳಿತು ಭೋಜನ ಮಾಡುವಾಗ ಮಕ್ಕಳೆದುರಿಗೆ

---

[1] ಇಲ್ಲಿ ಒಂದು ಮಾತು: ಇಂಗ್ಲಿಷರಲ್ಲಿರುವ ರೂಢಿಗಳಿಗಿಂತ ರಷ್ಯನರಲ್ಲಿರುವ ರೂಢಿಗಳು ಹೆಚ್ಚು ಕೆಟ್ಟವು. ಹೀಗೆ ಕೋಣೆಯ ತುಂಬ ಹಳಸಲು ತಂಬಾಕಿನ ದುರ್ನಾತ ಹೊಡೆಯುವುದನ್ನು ರಷ್ಯದಲ್ಲಿ ಅಷ್ಟಾಗಿ ವಿರೋಧಿಸುವುದಿಲ್ಲ. ಬಹುಶಃ ಒಣಹವೆಯ ಕಾರಣದಿಂದ, ಅದಕ್ಕೆ ಇಂಗ್ಲೆಂಡಿನಲ್ಲಿ ಹೆಚ್ಚು ವಿರೋಧವಿದೆ.

ಧೂಮಪಾನ ಮಾಡುತ್ತಾರೆ: ಇಡೀ ವಾತಾವರಣವನ್ನು ತಂಬಾಕಿನ ಹೊಗೆಯಿಂದ ಕಲುಷಿತಗೊಳಿಸುತ್ತಾರೆ. ಧೂಮಪಾನದಿಂದ ಬುದ್ಧಿಯ ಕೆಲಸಗಳಿಗೆ ಹಾದಿ ಸುಗಮ ವಾಗುತ್ತದೆ ಎನ್ನುತ್ತಾರೆ: ನಾನೂ ಹಿಂದೆ ಹಾಗೆಯೇ ಹೇಳುತ್ತಿದ್ದೆ. ಒಬ್ಬ ಮನುಷ್ಯ ತನ್ನ ಬುದ್ಧಿಯನ್ನುಪಯೋಗಿಸಿ ಮಾಡಿದ ಎಲ್ಲ ಕೆಲಸಕಾರ್ಯಗಳ ಮೊತ್ತವನ್ನು ಮಾತ್ರ ಪರಿಗಣಿಸಿದಾಗ ಇದು ನಿಜವೆನಿಸುತ್ತದೆ. ಮೊದಲು ಧೂಮಪಾನ ಮಾಡಿ ಆ ಬಳಿಕ ಅದನ್ನು ತ್ಯಜಿಸಿ ತನ್ನ ಆಲೋಚನೆಗಳನ್ನು ವಿಮರ್ಶಿಸಿ ತೂಗಿ ನೋಡುವ ಯಾರಿಗಾಗಲೀ ತನಗೆ ಇದ್ದಕ್ಕಿದ್ದಂತೆಯೇ ಅನೇಕಾನೇಕ ಆಲೋಚನೆಗಳು ಹೊಳೆದಂತೆ ತೋರಬಹುದು. ಇದಕ್ಕೆ ಕಾರಣ ಅವನಿಗೆ ಅನೇಕಾನೇಕ ಆಲೋಚನೆಗಳು ಆಗ ಸಿಕ್ಕಿಬಿಟ್ಟವು ಎನ್ನುವುದಲ್ಲ. ಅವನಿಗೆ ತನ್ನ ಆಲೋಚನೆಗಳ ಮೇಲೆ ಹತೋಟಿಯೇ ತಪ್ಪಿಹೋಯಿತು ಎನ್ನುವುದು.

ಕಾರ್ಯನಿರತನಾದ ಯಾವ ವ್ಯಕ್ತಿಗಾಗಲಿ ತನ್ನಲ್ಲಿ ಎರಡು ಶಕ್ತಿಗಳಿರುವುದರ ಅರಿವಾಗುತ್ತದೆ: ಒಂದು ಕ್ರಿಯಾಶಕ್ತಿ, ಇನ್ನೊಂದು ವಿಮರ್ಶನಶಕ್ತಿ. ವಿಮರ್ಶನ ಶಕ್ತಿ ಎಷ್ಟೆಷ್ಟು ಬಿಗಿಯಾದರೆ ಕೆಲಸ ಅಷ್ಟಷ್ಟು ತಡವಾಗುತ್ತದೆ. ಆದರೆ ಚೆನ್ನಾಗುತ್ತದೆ. ಇದನ್ನೇ ಹಿಂದೆ ಮುಂದೆ ಮಾಡಿಯೂ ಹೇಳಬಹುದು. ಆದರೆ ಅವನ ವಿಮರ್ಶನ ಶಕ್ತಿಯೇ ಮಾದಕ ವಸ್ತುವೊಂದಕ್ಕೆ ಅಧೀನವಾಗಿದ್ದರೆ ಹೆಚ್ಚು ಕೆಲಸವೇನೋ ಆಗುತ್ತದೆ; ಅದರ ಗುಣಮಾತ್ರ ಕೆಳುವಾಗಿರುತ್ತದೆ.

'ಹೊಗೆ ಸೇದದಿದ್ದರೆ ನಾನು ಬರೆಯಲಾರೆ. ಕೆಲಸ ಮುಂದುವರಿಯುವುದಿಲ್ಲ. ಕೆಲಸವನ್ನು ಶುರುಮಾಡುತ್ತೇನೆ, ಆದರೆ ಅದು ಸಾಗುವುದಿಲ್ಲ' – ಹೀಗೆಲ್ಲ ಹೇಳುವುದು ರೂಢಿ; ನಾನೂ ಹಿಂದೆ ಹೀಗೆಯೇ ಹೇಳುತ್ತಿದ್ದೆ. ಇದರ ನಿಜವಾದ ಅರ್ಥವೇನು? ಬರೆಯಲು ನಿನ್ನಲ್ಲಿ ಏನೂ ಇಲ್ಲ, ಅಥವಾ, ನೀನು ಬರೆಯಬೇಕೆಂದಿರುವುದು ನಿನ್ನ ಪ್ರಜ್ಞಾವಲಯದಲ್ಲಿ ಇನ್ನೂ ಪಕ್ವವಾಗಿಲ್ಲ. ಈಗೀಗ ನಿನಗದು ಮಸಕು ಮಸುಕಾಗಿ ಗೋಚರಿಸಲಾರಂಭಿಸಿದೆ, ನಿನ್ನೊಳಗಿನ ವಿಮರ್ಶನ ಶಕ್ತಿಯೂ ಹೀಗೆಯೇ ಹೇಳುತ್ತದೆ. ಒಂದು ವೇಳೆ ನೀನು ಧೂಮಪಾನ ಮಾಡದೇ ಇದ್ದಿದರೆ, ಶುರುಮಾಡಿದ ಬರವಣಿಗೆಯನ್ನು ಅಲ್ಲಿಗೇ ಕೈಬಿಡುತ್ತಿದ್ದೆ; ಅಥವಾ ನಿನಗೆ ಹೊಳೆದ ಆಲೋಚನೆಗಳು ನಿನ್ನ ಮನಸ್ಸಿನಲ್ಲೇ ಸ್ಪಷ್ಟಗೊಳ್ಳುವವರೆಗೂ ನೀನೇ ಕಾಯುತ್ತಿದ್ದೆ. ನಿನ್ನ ಬುದ್ಧಿಗೆ ಮಸಕು ಮಸಕಾಗಿ ತೋರಿದ್ದನ್ನು ನೀನು ಒಳಹೊಕ್ಕು ನೋಡುತ್ತಿದ್ದೆ. ಪರಿಶೀಲಿಸುತ್ತಿದ್ದೆ. ನಿನ್ನ ಆಲೋಚನೆ ಗಳಿಗೆ ಒದಗಿದ ವಿರೋಧಗಳನ್ನು ಗಮನಕ್ಕೆ ತಂದುಕೊಳ್ಳುತ್ತಿದ್ದೆ. ನಿನ್ನ ಗಮನ ವಷ್ಟನ್ನೂ ಭಾವಸ್ಪಷ್ಟತೆಯನ್ನೂ ಸಾಧಿಸುವುದಕ್ಕಾಗಿ ಕೇಂದ್ರೀಕರಿಸುತ್ತಿದ್ದೆ; ಆದರೆ ನೀನು ಧೂಮಪಾನ ಮಾಡುತ್ತೀಯೆ. ನಿನ್ನೊಳಗಿನ ವಿಮರ್ಶನಶಕ್ತಿಗೆ ಮತ್ತು ಬರುತ್ತದೆ; ಇದರಿಂದ ನಿನ್ನ ಕೆಲಸಕ್ಕೆ ಒದಗಿದ ಅಡ್ಡಿ ನಿವಾರಣೆಯಾಗುತ್ತದೆ; ತಂಬಾಕಿನ ಅಮಲೇರುವ ಮುನ್ನ ಯಾವುದು ನಿನಗೆ ಅಲ್ಪ ವಿಷಯವೆಂದು ತೋರಿತ್ತೋ ಅದೇ ನಿನಗೆ ಈಗ ಅತಿ ಮುಖ್ಯವೆಂದು ತೋರುತ್ತದೆ. ಯಾವುದು ಆಗ ದುರೂಹ್ಯವೆಂದು ತೋರಿತ್ತೋ,

ಈಗ ನಿನಗದು ಹಾಗೆ ತೋರುವುದಿಲ್ಲ; ನಿನ್ನ ಆಲೋಚನೆಗಳನ್ನೆದುರಿಸಿದ ಆಕ್ಷೇಪಣೆಗಳು ಮಾಯವಾಗುತ್ತವೆ: ನೀನು ಬರೆಯುತ್ತಾ ಹೋಗುತ್ತೀಯೆ; ಬೇಕಾದಷ್ಟು ಬರೆಯುತ್ತೀಯೆ. ಬೇಗ ಬೇಗ ಬರೆಯುತ್ತೀಯೆ.

## 4

ದ್ರಾಕ್ಷಾರಸವನ್ನಾಗಲಿ ತಂಬಾಕನ್ನಾಗಲಿ ಮಿತ ಪ್ರಮಾಣದಲ್ಲಿ ಸೇವಿಸುವುದರಿಂದ ಬರುವ ಅಲ್ಪಸ್ವಲ್ಪ ಮತ್ತಿನಿಂದ ಉಂಟಾಗುವ ಅತ್ಯಲ್ಪ ಪರಿವರ್ತನೆಯೇ ಅಂಥ ಮುಖ್ಯ ಪರಿಣಾಮಗಳಿಗೆ ಕಾರಣವಾಗಬಲ್ಲದೆ? ಒಬ್ಬ ಮನುಷ್ಯ ಅಫೀಮಿನ ಅಥವಾ ಹಶೀಶಿನ ಹೊಗೆಯನ್ನು ಕುಡಿದರೆ. ಅಥವಾ ತಾನು ಪ್ರಜ್ಞೆ ತಪ್ಪಿ ಬೀಳುವತನಕ ದ್ರಾಕ್ಷಾರಸವನ್ನು ತೆಗೆದುಕೊಂಡು ಮತ್ತುಬರಿಸಿಕೊಂಡರೆ ಆಗ ಮಾತ್ರ ಅನಾಹುತವಾಗಬಹುದು ಎನ್ನುತ್ತಾರೆ. ಆದರೆ ಧಾನ್ಯಮದ್ಯದ ಅಥವಾ ತಂಬಾಕಿನ ಪ್ರಭಾವಕ್ಕೆ ಒಳಗಾಗುವುದು ಪ್ರಮಾದವಲ್ಲ ಎನ್ನುತ್ತಾರೆ. ಸ್ವಲ್ಪ ಮತ್ತುಬರಿಸಿಕೊಳ್ಳುವುದರ, ವಿವೇಕವನ್ನು ಕೊಂಚಮಟ್ಟಿಗೆ ಮಬ್ಬುಗೊಳಿಸುವುದರ ಪ್ರಭಾವವನ್ನು ಅಷ್ಟು ಗಮನಿಸಬೇಕಾಗಿಲ್ಲ ಎನ್ನುತ್ತಾರೆ. ಅಂದರೆ ಕಲ್ಲಿಗೆ ತಗುಲಿಸಿದಾಗ ಮಾತ್ರ ಗಡಿಯಾರಕ್ಕೆ ಅಪಾಯವೊದಗುತ್ತದೆ; ಅದರೊಳಗೆ ಕೊಳೆ ಸೇರುವುದರಿಂದ ಅಪಾಯವಿಲ್ಲ ಎಂದ ಹಾಗಾಗುತ್ತದೆ.

ಮಾನವನ ಇಡೀ ಜೀವಿತವನ್ನು ಸಾಗಿಸುವ ಪ್ರಮುಖ ಕಾರ್ಯ ನಡೆಯುವುದು ಅವನ ಪ್ರಜ್ಞಾವಲಯದಲ್ಲಿಯೇ ಹೊರತು. ಅವನ ಕೈಗಳಿಂದಲೂ ಅಲ್ಲ. ಕಾಲುಗಳಿಂದಲೂ ಅಲ್ಲ. ಬೆನ್ನಿನಿಂದಲೂ ಅಲ್ಲ. ಅವನು ಕೈಕಾಲುಗಳನ್ನು ಉಪಯೋಗಿಸಿ ಯಾವುದಾದರೊಂದು ಕೆಲಸವನ್ನು ಮಾಡುವ ಮುನ್ನ ಒಂದು ನಿರ್ದಿಷ್ಟ ಪರಿವರ್ತನೆ ಅವನ ಪ್ರಜ್ಞಾವಲಯದಲ್ಲಿ ಮೊದಲು ಆಗಬೇಕು. ಈ ಪರಿವರ್ತನೆಯೇ ಅವನ ಮುಂದಿನ ಚಲನವಲನಗಳಿಗೆ ಒಂದು ನಿರ್ದಿಷ್ಟ ರೂಪವನ್ನು ಕೊಡುತ್ತದೆ. ಆದರೆ ಈ ಪರಿವರ್ತನೆಗಳು ಯಾವಾಗಲೂ ಅತಿಸೂಕ್ಷ್ಮವಾಗಿರುತ್ತವೆ, ಬಹುಶಃ ನಮ್ಮ ಗ್ರಹಿಕೆಗೆ ಮೀರಿದ್ದಾಗಿರುತ್ತವೆ.

ಬ್ರ್ಯುಯುಲೇವ್[2] ಒಂದು ದಿನ ತನ್ನ ವಿದ್ಯಾರ್ಥಿಯೊಬ್ಬನ ಅಭ್ಯಾಸ ಚಿತ್ರವನ್ನು ನೋಡಿ ಅದನ್ನು ಕೊಂಚ ತಿದ್ದಿದನಂತೆ. ಬದಲಾದ ಚಿತ್ರವನ್ನು ಕಂಡು ಬೆರಗಾದ ವಿದ್ಯಾರ್ಥಿ 'ನೀವು ಒಂದು ಸಣ್ಣ ತಿದ್ದುಪಡಿಯನ್ನು ಮಾಡಿದ್ದರಿಂದಲೇ ಈಗ ಚಿತ್ರ ಪೂರ್ತಿ ಬದಲಾಗಿಹೋಯಿತು!' ಎಂದನಂತೆ. ಅದಕ್ಕೆ ಬ್ರ್ಯುಯುಲೇವ್ ಕೊಟ್ಟ ಉತ್ತರ 'ಆ ಅತಿಸಣ್ಣದರ ಉಗಮವೇ ಕಲೆಯ ಉಗಮ'.

ಅಚ್ಚರಿಯೆಂದರೆ, ಈ ಸೂತ್ರ ಕಲೆಯೊಂದಕ್ಕೇ ಅಲ್ಲದೆ ಇಡೀ ಜೀವನಕ್ಕೇ ಅನ್ವಯಿಸುವ ಸತ್ಯವಾಗಿರುವುದು. ಆ ಸಣ್ಣದರ ಉಗಮವೇ ನಿಜಜೀವನದ ಉಗಮವೆನ್ನಬಹುದು;

---

2 ಇ. ಪಿ ಬ್ರ್ಯುಯುಲೇವ್, ಒಬ್ಬ ಸುಪ್ರಸಿದ್ಧ ರಷ್ಯನ್ ಕಲಾವಿದ (1799–1852)

ಸೂಕ್ಷ್ಮಾತಿಸೂಕ್ಷ್ಮವೆಂದು ನಮಗೆ ತೋರುವ ಈ ಸಣ್ಣದರಲ್ಲೇ ಪರಿವರ್ತನೆಗಳುಂಟಾಗುವುದು. ಓಡಾಟ, ಹೊಡೆದಾಟ, ಹೋರಾಟ, ಪರಸ್ಪರ ಪ್ರಾಣಹಾನಿಗಳಂಥ ಮಹತ್ತರ ಬಾಹ್ಯ ಪರಿವರ್ತನೆಗಳಲ್ಲಲ್ಲ, ಈ ಸೂಕ್ಷ್ಮಾತಿಸೂಕ್ಷ್ಮ ಸಣ್ಣ ಪರಿವರ್ತನೆಗಳಲ್ಲಿ ಮಾತ್ರ ನಿಜಜೀವನ ಸಾಗುವುದು.

ರಾಸ್ಕೋಲ್‌ನಿಕೋವ್[3] ಆ ಮುದುಕಿಯನ್ನಾಗಲೀ ಅವಳ ಸೋದರಿಯನ್ನಾಗಲೀ ಕೊಂದಾಗ ತನ್ನ ಬದುಕಿನ ನಿಜಸ್ಥಿತಿಯಲ್ಲಿರಲಿಲ್ಲ. ಮುದುಕಿಯನ್ನು ಕೊಂದಾಗ, ಮಿಗಿಲಾಗಿ ಆಕೆಯ ಸೋದರಿಯನ್ನು ಕೊಂದಾಗ ಅವನು ತನ್ನ ಬದುಕಿನ ನಿಜಸ್ಥಿತಿಯಲ್ಲಿರದೆ ಕೇವಲ ಯಂತ್ರದಂತೆ ವರ್ತಿಸುತ್ತಿದ್ದನು: ತಾನು ಮಾಡಲೇ ಬೇಕಾಗಿ ಬಂದದ್ದನ್ನು ಮಾಡುತ್ತಿದ್ದನು; ತನ್ನ ಬಂದೂಕಿನ ನಳಿಗೆಗೆ ತಾನೇ ಮೊದಲು ತುಂಬಿದ್ದ ಗುಂಡುಗಳನ್ನು ಹಾರಿಸುತ್ತಿದ್ದನು, ಅಷ್ಟೆ. ಒಬ್ಬ ಮುದುಕಿಯ ಕೊಲೆಯಾಯಿತು: ಇನ್ನೊಬ್ಬಳು ಎದುರಿಗೆ ಬಂದಳು; ಇವನ ಕೈಯಲ್ಲಿ ಕೊಡಲಿಯಿತ್ತು.

ರಾಸ್ಕೋಲ್‌ನಿಕೋವ್ ತನ್ನ ಬದುಕಿನ ನಿಜಸ್ಥಿತಿಯಲ್ಲಿದ್ದುದು ಆ ಮುದುಕಿಯ ಸೋದರಿಯನ್ನು ಕೊಂದಾಗ ಅಲ್ಲ; ಅದಕ್ಕೆ ಮುಂಚೆ. ಆ ಮುದುಕಿಯನ್ನಾಗಲೀ ಯಾರನ್ನಾಗಲೀ ಕೊಲೆಮಾಡದಿದ್ದಾಗ, ಕೊಲೆಯ ಉದ್ದೇಶದಿಂದ ಅಪರಿಚಿತರ ಮನೆಗೆ ನುಗ್ಗದಿದ್ದಾಗ, ಕೈಗೆ ಕೊಡಲಿ ಇನ್ನೂ ಬರದಿದ್ದಾಗ, ಆ ಕೊಡಲಿ ತನ್ನ ಮೇಲಂಗಿಯಲ್ಲಿ ಕುಣಿಕೆಯಿಂದ ತೂಗುತ್ತಿದ್ದುದಕ್ಕೂ ಮುಂಚೆ. ಅವನು ತನ್ನ ನಿಜವಾದ ಬಾಳನ್ನು ಬದುಕುತ್ತಿದ್ದುದು ಯಾವಾಗ ಎಂದರೆ: ಆ ಮುದುಕಿಯ ಬಗೆಗೆ ಏನನ್ನೂ ಯೋಚಿಸದೆ ತನ್ನ ಕೊಠಡಿಯಲ್ಲಿ ತಾನು ಸೋಫಾದ ಮೇಲೆ ಮಲಗಿದ್ದಾಗ, ಇನ್ನೊಬ್ಬ ವ್ಯಕ್ತಿಯ ಜೀವವನ್ನು ಈ ಪ್ರಪಂಚದಿಂದಲೇ ತೊಡೆದುಹಾಕಿಬಿಡುವುದು ಒಬ್ಬನ ಇಚ್ಛೆಗೆ ಮಾತ್ರ ಸೇರಿದ್ದೆ, ಸರಿಯೆ, ತಪ್ಪೆ, ಅನಗತ್ಯವಲ್ಲವೆ, ಅಪಾಯಕರವಲ್ಲವೆ ಮುಂತಾದ ವಿಷಯಗಳನ್ನು ಯೋಚಿಸದಿದ್ದಾಗ; ಮತ್ತು ತಾನು ಪೀಟರ್ಸ್‌ಬರ್ಗಿನಲ್ಲಿ ಇರಬೇಕೆ, ಬೇಡವೆ, ತನ್ನ ತಾಯಿ ಕಳಿಸಿದ ಹಣವನ್ನು ಸ್ವೀಕರಿಸಬೇಕೆ, ಬೇಡವೆ, ಮುಂತಾದ – ಆ ಮುದುಕಿಗೆ ಯಾವರೀತಿಯಲ್ಲೂ ಸಂಬಂಧವಿಲ್ಲದ – ವಿಷಯಗಳನ್ನು ಯೋಚಿಸುತ್ತಿದ್ದಾಗ. ಆಮೇಲೆ – ಪಶುಜೀವನದ ಚಟುವಟಿಕೆಗಳಿಂದ ಸಂಪೂರ್ಣವಾಗಿ ಮುಕ್ತವಾದ ವಲಯದಲ್ಲಿ – ತಾನು ಮುದುಕಿಯನ್ನು ಕೊಲ್ಲುವುದೆ, ಬೇಡವೆ ಎನ್ನುವ ಪ್ರಶ್ನೆ ಇತ್ಯರ್ಥಗೊಂಡಿತು. ಆ ಪ್ರಶ್ನೆ ಇತ್ಯರ್ಥಗೊಂಡದ್ದು – ಒಬ್ಬ ಮುದುಕಿಯನ್ನು ಕೊಂದವನು, ಕೊಡಲಿಹಿಡಿದು ಇನ್ನೊಬ್ಬಳೆದುರಿಗೆ ನಿಂತಾಗ ಅಲ್ಲ – ಅವನು ಮಾಡಲು ಕೆಲಸವಿಲ್ಲದೆ ಸುಮ್ಮನೆ ಆಲೋಚಿಸುತ್ತಿದ್ದಾಗ ಅವನ ಪ್ರಜ್ಞೆ ಮಾತ್ರ ಜಾಗ್ರತವಾಗಿದ್ದಾಗ. ಆ ಪ್ರಜ್ಞಾ ವಲಯದಲ್ಲಿ ಸೂಕ್ಷ್ಮಾತಿಸೂಕ್ಷ್ಮ ಪರಿವರ್ತನೆಗಳಾಗುತ್ತಿದ್ದವು. ತಲೆದೋರಿದ ಪ್ರಶ್ನೆಗಳನ್ನ-

---

[3] ದೋಸ್ತೋವ್‌ಸ್ಕಿಯ 'ಕ್ರೈಂ ಎಂಡ್ ಪನಿಷ್ಮೆಂಟ್' ಎಂಬ ಕಾದಂಬರಿಯ ನಾಯಕ.

ಮುರಿಸಿ ಸರಿಯಾದ ತೀರ್ಮಾನಕ್ಕೆ ಬರಲು ಅತಿ ಸ್ಪಷ್ಟ ವಿವೇಚನೆ ಬೇಕಾಗುವುದು ಅಂಥ ಸಂದರ್ಭಗಳಲ್ಲೇ; ಒಂದು ಲೋಟ ಬೀರಾಗಲೀ ಒಂದು ಸಿಗರೇಟಾಗಲೀ ತೀರ್ಮಾನಕ್ಕೆ ಅಡ್ಡಿಮಾಡುವುದೂ. ತೀರ್ಮಾನವನ್ನು ಮುಂದೂಡುವುದೂ ಆತ್ಮಸಾಕ್ಷಿ-ಯನ್ನಡಗಿಸಿ ಕೀಳು ಪಶು ಸ್ವಭಾವದ ಪರವಾಗಿ ತೀರ್ಮಾನಕ್ಕೆ ಬರುವುದೂ ಆಗಲೇ. ರಾಸ್ಕೊಲ್‌ನಿಕೋವಿನ ಪ್ರಸಂಗದಲ್ಲಿ ನಡೆದದ್ದೇ ಹೀಗೆ.

ಈ ಪರಿವರ್ತನೆಗಳು 'ಸೂಕ್ಷ್ಮಾತಿಸೂಕ್ಷ್ಮವಾದರೂ. ಮಹತ್ತರವೂ ಭಯಂಕರವೂ ಆದ ಪರಿಣಾಮಗಳು ಇವುಗಳನ್ನೇ ಅವಲಂಬಿಸಿರುತ್ತವೆ. ಅನೇಕ ಭೌತಿಕ ಬದಲಾವಣೆ ಗಳಾಗುವುದು ಯಾವುದೇ ತೀರ್ಮಾನಕ್ಕೆ ಬಂದವನು ಕಾರ್ಯೋನ್ಮುಖನಾದಾಗ ಏನಾಗುತ್ತದೆ ಎನ್ನುವುದರ ಫಲ; ಮನೆಮಠಗಳೂ. ಸಂಪತ್ತೂ, ಮಾನವ ಶರೀರವೂ ನಾಶವಾಗಬಹುದು. ಆದರೆ ಮಾನವ ಪ್ರಜ್ಞೆಯಲ್ಲಿ ಹುದುಗಿರುವುದಕ್ಕಿಂತ ಹೆಚ್ಚು ಮುಖ್ಯವಾದದ್ದು ಏನೂ ನಡೆಯುವುದಿಲ್ಲ. ಈ ಪ್ರಜ್ಞೆಯೇ ಕಾರ್ಯಸಾಧ್ಯತೆಯ ಮಿತಿಗಳನ್ನು ನಿರ್ಧರಿಸುತ್ತದೆ.

ಪ್ರಜ್ಞಾವಲಯದಲ್ಲಿ ನಡೆಯುವ ಈ ಅತಿಸೂಕ್ಷ್ಮ ಪರಿವರ್ತನೆಗಳಿಂದಲೇ ನಮ್ಮ ಕಲ್ಪನೆಗೂ ಮೀರಿದ ಪ್ರಾಧಾನ್ಯವುಳ್ಳ ಅನಂತ ಪರಿಣಾಮಗಳುದ್ಭವಿಸುವುದು.

ನಾನೀಗ ಹೇಳುತ್ತಿರುವುದಕ್ಕೂ ಇಚ್ಛಾ ಸ್ವಾತಂತ್ರ್ಯದ ವಿಷಯಕ್ಕೂ ಒಂದಲ್ಲ ಒಂದು ರೀತಿಯ ಸಂಬಂಧವಿದೆಯೆಂದು ಭಾವಿಸಲಾಗದು. ಆ ವಿಷಯಕ್ಕೆ ಬಂದರೆ. ನನ್ನ ಉದ್ದೇಶಕ್ಕಾಗಲಿ ಇತರ ಉದ್ದೇಶಕ್ಕಾಗಲಿ, ಆ ಚರ್ಚೆ ಅನಾವಶ್ಯಕ. ವ್ಯಕ್ತಿ ತನ್ನಿಷ್ಟ ಬಂದಂತೆ ವರ್ತಿಸಬಲ್ಲನೆ, ಅಥವಾ ವರ್ತಿಸಲಾರನೆ ಎಂಬ ಪ್ರಶ್ನೆಯನ್ನು ಬಗೆಹರಿಸುವುದಕ್ಕೆ ನಾನೀಗ ತೊಡಗುವುದಿಲ್ಲ; (ಈ ಪ್ರಶ್ನೆ ಸರಿಯಾಗಿ ಮಂಡಿತವಾಗಿಲ್ಲವೆಂದೇ ನನ್ನೆಣಿಕೆ). ಆದರೆ, ಮಾನವನ ಪ್ರಜ್ಞಾವಲಯದಲ್ಲಿ ನಡೆಯುವ ಈ ಸೂಕ್ಷ್ಮಾತಿಸೂಕ್ಷ್ಮ ಪರಿವರ್ತನೆ ಗಳೇ ಮಾನವನ ಎಲ್ಲ ಚಟುವಟಿಕೆಗಳನ್ನೂ ನಿಯಂತ್ರಿಸುತ್ತವೆ ಎಂದು ಮಾತ್ರ ನಾನು ಹೇಳಬಲ್ಲೆ. ಇದರಿಂದ ಸ್ಥಿರಪಡುವುದೇನೆಂದರೆ, (ನಾವು ಇಚ್ಛಾಸ್ವಾತಂತ್ರ್ಯವನ್ನು ಒಪ್ಪಲಿ, ಬಿಡಲಿ) ಈ ಸೂಕ್ಷ್ಮ ಪರಿವರ್ತನೆಗಳು ಯಾವ ಪರಿಸ್ಥಿತಿಯಲ್ಲಿ ಉಂಟಾಗುತ್ತವೆ ಎಂಬುದರ ಕಡೆಗೆ ವಿಶೇಷ ಗಮನವನ್ನು ಕೊಡಬೇಕು; ಬೇರೆ ಬೇರೆ ಪದಾರ್ಥಗಳನ್ನು ತೂಕಮಾಡ ಬೇಕಾಗಿರುವ ತಕ್ಕಡಿಯನ್ನು ನಾವು ಕಣ್ಣಿಟ್ಟು ನೋಡುತ್ತೇವಲ್ಲ. ಹಾಗೆ ನೋಡಬೇಕು. ಆತ್ಮಸಾಕ್ಷಿಯು ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸಲು ಅಗತ್ಯವಾದ ನಿರ್ಮಲವೂ ಸೂಕ್ಷ್ಮವೂ ಆದ ಚಿತ್ತವೃತ್ತಿಗೆ ಭಂಗ ಬಾರದ ಸ್ಥಿತಿಯಲ್ಲಿ ನಾವು ಮಾತ್ರವಲ್ಲ ನಮ್ಮ ಕೈಲಿರುವಮಟ್ಟಿಗೆ ಇತರರೂ. ಇರುವಂತೆ ನೋಡಿಕೊಳ್ಳಲು ಪ್ರಯತ್ನಿಸಬೇಕು: ಮಾದಕ ವಸ್ತುಗಳನ್ನು ಸೇವಿಸಿ ಆತ್ಮಸಾಕ್ಷಿಯ ಕಾರ್ಯವನ್ನು ತಡೆಯುವ ಅಥವಾ ಗೊಂದಲಕ್ಕೀಡುಮಾಡುವ ತಪ್ಪು ರೀತಿಯಲ್ಲಿ ವರ್ತಿಸಬಾರದು.

## 5

ಜನ ಏಕೆ ಕುಡಿಯುತ್ತಾರೆ? ಏಕೆ ಹೊಗೆ ಕುಡಿಯುತ್ತಾರೆ? ಎಲ್ಲೋ ಅಪರೂಪವಾಗಿ ಅಲ್ಲ, ಬೇಸರ ಪರಿಹಾರಕ್ಕಲ್ಲ, ಉಲ್ಲಾಸಕ್ಕಲ್ಲ, ಅದು ರುಚಿ ಎಂದೂ ಅಲ್ಲ: ತಮ್ಮ ಆತ್ಮಸಾಕ್ಷಿಯ ಧ್ವನಿಯನ್ನು ಮುಳುಗಿಸಿಬಿಡುವುದಕ್ಕಾಗಿ. ಅಂದಮೇಲೆ, ಅದರ ಪರಿಣಾಮಗಳು ಎಷ್ಟು ಘೋರವಾಗಿರಬೇಕು! ಮನೆಕಟ್ಟುವವರು ಗೋಡೆಗಳನ್ನು ನೆಟ್ಟಗೆ ನಿಲ್ಲಿಸುವುದಕ್ಕಾಗಿ ನೇರವಾದ ತೂಗುಪಟ್ಟಿಯನ್ನೂ, ಮೂಲೆಗಳನ್ನು ಸರಿಪಡಿಸುವುದಕ್ಕಾಗಿ ಬಿಗಿಯಾದ ಚೌಪಟ್ಟಿಯನ್ನೂ ಉಪಯೋಗಿಸುತ್ತಾರಷ್ಟೆ: ಮೆತ್ತನೆಯ ತೂಗುಪಟ್ಟಿಯನ್ನೂ ಸಡಿಲವಾದ ಚೌಪಟ್ಟಿಯನ್ನೂ ಉಪಯೋಗಿಸಿ ಕಟ್ಟಿದ ಮನೆ ಹೇಗಿರುವುದೆಂದು ನೀವೇ ಯೋಚಿಸಿ. ಬಳುಕುವ ತೂಗುಪಟ್ಟಿ ಸೊಟ್ಟಸೊಟ್ಟ ಗೋಡೆಗಳಿಗೂ ಹೊಂದಿಕೊಳ್ಳುತ್ತದೆ; ಸಡಿಲವಾದ ಚೌಪಟ್ಟಿ ಮೂಲೆಗಳ ಯಾವ ಕೋನಗಳಿಗಾದರೂ ಹೊಂದಿಕೊಳ್ಳುತ್ತದೆ

ಜೀವನದಲ್ಲೂ ಹೀಗೆಯೇ ನಡೆಯುತ್ತದೆ: ಇದಕ್ಕೆ ಅಮಲೇರಿಸುವ ವಸ್ತುಗಳೇ ಕಾರಣ. ಬದುಕಿಗೂ ಆತ್ಮಸಾಕ್ಷಿಗೂ ಹೊಂದಾಣಿಕೆಯೇ ಇಲ್ಲ. ಆದ್ದರಿಂದ, ಆತ್ಮಸಾಕ್ಷಿಯನ್ನೇ ಬದುಕಿಗೆ ಹೊಂದಿಸಿಕೊಳ್ಳಲಾಗುತ್ತಿದೆ.

ಒಬ್ಬೊಬ್ಬ ವ್ಯಕ್ತಿಯ ಬದುಕಿನಲ್ಲೂ ಎಲ್ಲ ವ್ಯಕ್ತಿಗಳ ಬದುಕನ್ನೊಳಗೊಂಡ ಇಡೀ ಮಾನವ ಪ್ರಪಂಚದಲ್ಲೂ ನಡೆಯುತ್ತಿರುವುದಿದೇ.

ತನ್ನ ಪ್ರಜ್ಞೆಗೆ ಮತ್ತುಬರಿಸಿಕೊಳ್ಳುವುದರಿಂದ ಏನಾಗುತ್ತದೆ ಎಂಬುದನ್ನು ಗ್ರಹಿಸಬೇಕಾದರೆ, ಪ್ರತಿಯೊಬ್ಬನೂ ತನ್ನ ಜೀವನದ ಒಂದೊಂದು ಘಟ್ಟದಲ್ಲೂ ತಾನು ದಾಟಿದ ಆಧ್ಯಾತ್ಮಿಕ ಸ್ಥಿತಿಗಳನ್ನು ಸ್ಮರಿಸಲಿ. ತಾನು ಜೀವನದ ಒಂದೊಂದು ಘಟ್ಟದಲ್ಲೂ ಎದುರಿಸಿ ಬಗೆಹರಿಸಬೇಕಾಗಿ ಬಂದ ನೈತಿಕ ಸಮಸ್ಯೆಗಳನ್ನೂ, ಆ ಸಮಸ್ಯೆಗಳ ಪರಿಹಾರವನ್ನೇ ಅವಲಂಬಿಸಿರುವ ತನ್ನ ಇಡೀ ಜೀವನದ ಕ್ಷೇಮವನ್ನೂ ಅವನು ಆಗ ಕಂಡುಕೊಳ್ಳುತ್ತಾನೆ.

ಮಾನವನಲ್ಲಿ ಆಧ್ಯಾತ್ಮಿಕ ಚೇತನವೂ ಇದೆ, ಪಶುಚೇತನವೂ ಇದೆ. ಗಡಿಯಾರವನ್ನು ನಡೆಯಿಸುವುದಕ್ಕೆ ಎರಡು ಮಾರ್ಗಗಳಿವೆ; ಒಂದು, ಅದರ ಮುಳ್ಳುಗಳನ್ನು ಕೈಯಿಂದ ತಳ್ಳುವುದು, ಎರಡನೆಯದು, ಅದರ ಮುಖ್ಯಚಕ್ರಕ್ಕೆ ಕೀಲುಕೊಡುವುದು. ಅದೇ ರೀತಿಯಲ್ಲಿ ಮಾನವನ ಕಾರ್ಯಕ್ರಮಗಳನ್ನು ಅವನ ಆಧ್ಯಾತ್ಮಿಕ ಚೇತನದ ಮೇಲೆ ಪ್ರಭಾವ ಬೀರುವ ವಸ್ತುಗಳಿಂದ ನಿಯಂತ್ರಿಸಬಹುದು; ಅಥವಾ ಅವನ ಪಶು ಚೇತನದ ಮೇಲೆ ಪ್ರಭಾವ ಬೀರುವ ವಸ್ತುಗಳಿಂದ ನಿಯಂತ್ರಿಸಬಹುದು. ಗಡಿಯಾರವನ್ನು ಅದರೊಳಗಿನ ಯಂತ್ರ ಭಾಗಗಳ ನೆರವಿನಿಂದ ನಡೆಯಿಸುವುದೇ ಉತ್ತಮ. ಅಂತೆಯೇ, ಮಾನವನ ವರ್ತನೆಯನ್ನು ಅವನೊಳಗಿನ ಪ್ರಜ್ಞಾ ಸಾಧನದಿಂದಲೇ ನಿಯಂತ್ರಿಸುವುದು

ಉತ್ತಮ. ಗಡಿಯಾರದೊಳಗಿನ ಇಡೀ ಯಂತ್ರ ವ್ಯವಸ್ಥೆಯನ್ನು ನಿರ್ದೇಶಿಸುವ ಮುಖ್ಯ ಭಾಗಕ್ಕೆ ವಿಶೇಷ ಗಮನಕೊಡುವುದು ಅಗತ್ಯ. ಮಾನವನ ವಿಷಯದಲ್ಲೂ ಅಂತೆಯೇ: ಅವನ ಇಡೀ ಮನುಷ್ಯತ್ವವನ್ನು ಉತ್ತಮವಾಗಿ ನಡೆಯಿಸಬಲ್ಲ ಪ್ರಜ್ಞೆಯನ್ನು ಶುಚಿಯಾಗಿ ಸ್ವಚ್ಛವಾಗಿ ಇಡುವುದರತ್ತ ಅವನು ವಿಶೇಷ ಗಮನಕೊಡುವುದಗತ್ಯ. ಇದರಲ್ಲಿ ಯಾವ ಸಂದೇಹಕ್ಕೂ ಎಡೆಯಿಲ್ಲ: ಇದು ಎಲ್ಲರೂ ಬಲ್ಲ ವಿಷಯ. ಆದರೆ ತನ್ನನ್ನು ತಾನೇ ಮೋಸಗೊಳಿಸುವ ಅಗತ್ಯವೂ ಅವನಿಗೆ ಒದಗುತ್ತದೆ. ಆಗ ಎಲ್ಲರೂ, ತಾವು ಮಾಡುವುದೇ ಸರಿ ಎಂದು ತಮಗೆ ತೋರಿದರೆ ಸಾಕು, ಎನ್ನುತ್ತಾರೆಯೇ ಹೊರತು ತಮ್ಮ ಪ್ರಜ್ಞೆಯನ್ನು ಸರಿಯಾಗಿಟ್ಟುಕೊಳ್ಳುವುದರಲ್ಲಿ ಅವರಿಗೆ ಎಷ್ಟೂ ಆಸಕ್ತಿಯಿರುವು ದಿಲ್ಲ. ಆದ್ದರಿಂದಲೇ ಅವರು ತಮ್ಮ ಪ್ರಜ್ಞೆಯ ಕರ್ತವ್ಯ ನಿರ್ವಹಣೆಯನ್ನೇ ಹದ ಗೆಡಿಸುವ ವಸ್ತುಗಳನ್ನು ಉದ್ದೇಶಪೂರ್ವಕವಾಗಿ ಉಪಯೋಗಿಸುತ್ತಾರೆ.

ಈ ಸಮಸ್ಯೆಗಳನ್ನು ಬಿಡಿಸುವುದಕ್ಕೆ ಅತಿ ತೀಕ್ಷ್ಣವಾದ ಚಿತ್ತೈಕಾಗ್ರತೆ ಬೇಕಿತ್ತು. ಅಂಥ ಚಿತ್ತೈಕಾಗ್ರತೆ ಸಂತಸದ ಪರಿಶ್ರಮದಿಂದ ಬರುತ್ತದೆ. ಪ್ರತಿಯೊಂದು ದುಡಿಮೆ ಯಲ್ಲೂ — ವಿಶೇಷವಾಗಿ ಮೊದಮೊದಲಲ್ಲಿ — ಈ ಕೆಲಸ ಕಷ್ಟವಾದ್ದು, ನೋವಿನಿಂದ ಕೂಡಿದ್ದು ಎನ್ನಿಸುವ ಮತ್ತು ಮಾನವ ದೌರ್ಬಲ್ಯದಿಂದಾಗಿ ಇದನ್ನು ಬಿಟ್ಟುಬಿಡ ಬೇಕೆನ್ನಿಸುವ ಸಮಯವೂ ಬರುತ್ತದೆ. ಮೊದಲಲ್ಲಿ ದೈಹಿಕ ಶ್ರಮವೇ ತ್ರಾಸದಾಯಕ ವೆಂದು ತೋರಿದರೆ, ಬುದ್ಧಿಯ ಕೆಲಸ ಇನ್ನಷ್ಟು ದುಸ್ತರವೆನ್ನಿಸುತ್ತದೆ. ಆಲೋಚನೆಯೇ ಕ್ಲಿಷ್ಟವಾಗಿ ತೋರತೊಡಗುವಾಗ ಮನುಷ್ಯರು ಇನ್ನು ಆಲೋಚಿಸದಿರುವುದೇ ಲೇಸೆಂದು ಭಾವಿಸುವುದುಂಟು: ಆದರೆ ನನ್ನನ್ನು ಕೇಳಿದರೆ, ಆಲೋಚನೆ ಸಫಲವಾಗತೊಡಗುವ ಸಮಯವೇ ಅದೆನ್ನುತ್ತೇನೆ. ತನ್ನನ್ನೆದುರಿಸಿದ ಸಮಸ್ಯೆಗಳನ್ನು ನಿವಾರಿಸಬೇಕಾದರೆ ತುಂಬ ಶ್ರಮ ಪಡಬೇಕಾಗುತ್ತದೆ (ಅದು ಅನೇಕವೇಳೆ ಕಷ್ಟಕಾರ್ಪಣ್ಯಗಳಿಂದ ಕೂಡಿದ ದುಡಿಮೆಯೂ ಆಗಿರುತ್ತದೆ) ಎನ್ನಿಸಿದಾಗ, ಮನುಷ್ಯನು ಅದರಿಂದ ನುಣಿಚಿಕೊಳ್ಳ ಬಯಸುತ್ತಾನೆ. ತನ್ನ ಇಂದ್ರಿಯಗಳಿಗೆ ಮತ್ತುಬರಿಸುವ ಸಾಧನಗಳು ತನ್ನಲ್ಲಿಲ್ಲದೆ ಹೋದರೆ, ಅವನು ಈ ಸಮಸ್ಯೆಗಳನ್ನು ತನ್ನ ಪ್ರಜ್ಞಾವಲಯದಿಂದ ಹೊರದೂಡಲು ಸಾಧ್ಯವಾಗುವುದಿಲ್ಲ: ಆಗ ತಾನೇ ಅವುಗಳನ್ನು ನಿವಾರಿಸುವುದು ಅವನಿಗೆ ಅನಿವಾರ್ಯ ವಾಗುತ್ತದೆ. ಆದರೆ ಈ ಸಮಸ್ಯೆಗಳನ್ನು ಹೊಡೆದೋಡಿಸುವುದಕ್ಕೆ ಅನುಕೂಲವಾದ ಸಾಧನಗಳಿರುವುದೂ ಅವನಿಗೆ ಗೊತ್ತು — ಮತ್ತು ಅವುಗಳನ್ನು ಅವನು ತಪ್ಪದೆ ಬಳಸುತ್ತಾನೆ. ಪರಿಹಾರಕ್ಕಾಗಿ ಕಾಯುತ್ತಿರುವ ಸಮಸ್ಯೆಗಳು ತನ್ನನ್ನು ಬಾಧಿಸ ತೊಡಗಿದಾಗ ಅವನು ಈ ಹಾದಿ ಹಿಡಿಯುತ್ತಾನೆ: ಜಟಿಲ ಸಮಸ್ಯೆಗಳಿಂದ ಉದ್ಭವಿಸಿದ ಗೊಂದಲದಿಂದ ಪಾರಾಗುತ್ತಾನೆ. ಆಗ ಪ್ರಜ್ಞೆಯು ಅವನನ್ನು ಸಮಸ್ಯಾ ಪರಿಹಾರಕ್ಕಾಗಿ ಒತ್ತಾಯಪಡಿಸುವುದಿಲ್ಲ; ಬಗೆಹರಿಯದ ಸಮಸ್ಯೆಗಳು ಮುಂದಿನ ಅವಧಿಯಲ್ಲಿ ಅವನಿಗೆ ಜ್ಞಾನೋದಯವಾಗುವ ತನಕ ಕಾದಿರುತ್ತವೆ. ಆದರೆ ಮತ್ತೆ ಆ ಅವಧಿ ಬಂದಾಗಲೂ

ಹಿಂದೆ ನಡೆದದ್ದೇ ನಡೆಯುತ್ತದೆ. ತಿಂಗಳುಗಳು. ವರ್ಷಗಳು. ಇಡೀ ಆಯುಷ್ಯ ಹೀಗೆಯೇ ಕಳೆದುಹೋಗುತ್ತದೆ: ತನ್ನ ನೈತಿಕ ಸಮಸ್ಯೆಗಳ ಪರಿಹಾರದತ್ತ ಅವನು ಒಂದು ಹೆಜ್ಜೆಯಷ್ಟೂ ಮುಂದುವರಿದಿರುವುದಿಲ್ಲ. ಇಡೀ ಜೀವನದ ಪ್ರವೃತ್ತಿಯಡಗಿರುವುದು ಈ ನೈತಿಕ ಸಮಸ್ಯೆಗಳ ಪರಿಹಾರದಲ್ಲಿಯೇ.

ಆಗುವುದಿಷ್ಟೇ: ಕೆಸರು ನೀರಿರುವ ಒಂದು ಕೊಳದಲ್ಲಿ ಬಿದ್ದ ಮುತ್ತನ್ನು ಎತ್ತ ಬಯಸುವವನು ಅದರ ತಳಕ್ಕೆ ಇಳಿದು ಹುಡುಕಬೇಕಾಗುತ್ತದೆ: ಆ ನೀರಿಗಿಳಿಯುವುದು ಅವನಿಗಿಷ್ಟವಿಲ್ಲವಾದರೆ ಆ ನೀರು ನಿಶ್ಚಲವಾಗಿ ತಿಳಿಯಾಗುತ್ತಾ ಬಂದಂತೆಲ್ಲ ಅವನು ಅದನ್ನು ಕಲಕುತ್ತಲೇ ಇರಬೇಕು, ಎಂದಹಾಗೆ! ಎಷ್ಟೋ ಜನ ತಮ್ಮ ಜೀವಮಾನಪರ್ಯಂತ ಮತ್ತುಬರಿಸಿಕೊಳ್ಳುತ್ತಲೇ ಇರುತ್ತಾರೆ. ಅಂಥವನು ಯಾವುದೋ ಸಮಕಲಾದ. ದುರೂಪ್ಯವಾದ, ವಿರೋಧಾಭಾಸಗಳಿಂದ ತುಂಬಿರುವ ಜೀವನ ದೃಷ್ಟಿಗೇ ನಿಂತು ಜಡವಾಗಿ ಬಿಡುತ್ತಾನೆ: ಜ್ಞಾನೋದಯದ ಅವಕಾಶ ಒದಗಿದಾಗಲೆಲ್ಲ ಅವನು. ತಾನು ಹತ್ತಿಪ್ಪತ್ತು ವರ್ಷಗಳಿಂದ ತಟ್ಟುತ್ತಿರುವ ಗೋಡೆಯನ್ನೇ ತಟ್ಟುತ್ತಾನೆ; ಅದನ್ನು ಭೇದಿಸಬಲ್ಲ ತನ್ನ ಧೀಶಕ್ತಿಯ ಮೊನೆಯನ್ನೇ ಅವನು ಬೇಕೆಂದೇ ಮೊಂಡುಮಾಡಿಕೊಂಡಿರುವುದರಿಂದ ಆ ಗೋಡೆಯನ್ನು ದಾಟುವುದು ಅವನಿಗೆ ಅಸಾಧ್ಯವಾಗುತ್ತದೆ.

ಪ್ರತಿಯೊಬ್ಬನೂ ಕುಡಿತದಲ್ಲಿ ಅಥವಾ ಧೂಮಪಾನದಲ್ಲಿ ತಾನು ಕಳೆದ ವರ್ಷಗಳುದ್ದಕ್ಕೂ ಇದ್ದ ತನ್ನ ನೈಜಿಕಸ್ಥಿತಿಯನ್ನು ಸ್ಮರಿಸಲಿ; ತನಗೆ ಇತರರ ಬಗೆಗಾದ ಅನುಭವದ ಬೆಳಕಿನಲ್ಲಿ ಇದನ್ನು ಪರೀಕ್ಷಿಸಲಿ. ಮಾದಕಗಳ ಚಟವಿರುವವರಿಗೂ. ಅದರ ಗಂಧವೇ ಇಲ್ಲದವರಿಗೂ ನಡುವೆ ಒಂದು ಸ್ಪಷ್ಟವಾದ ನಿರಂತರ ವಿಭಜನ ರೇಖೆಯಿರುವುದು ಅವನಿಗೆ ಗೋಚರವಾಗುತ್ತದೆ. ಅವನು ಎಷ್ಟೆಷ್ಟು ಮತ್ತುಬರಿಸಿಕೊಂಡರೆ ಅಷ್ಟಷ್ಟು ಜಡವಾಗುತ್ತಾನೆ, ನೈತಿಕವಾಗಿ.

## 6

ನಾವು ಕೇಳಿರುವಂತೆ, ಅಫೀಮು ಹಶೀಷುಗಳಿಂದ ವ್ಯಕ್ತಿಗಳ ಮೇಲಾಗುವ ಪರಿಣಾಮಗಳು ಭಯಂಕರ. ನಮಗೆ ತಿಳಿದಿರುವ ಮಟ್ಟಿಗೆ. ಪಟ್ಟಾಗಿ ಕುಡಿಯುವವರ ಮೇಲೆ ಮದ್ಯಸಾರದಿಂದಾಗುವ ಪರಿಣಾಮಗಳೂ ಭಯಂಕರವೇ. ಮಿತ ಪ್ರಮಾಣದಲ್ಲಿ ಸೇವಿಸಿದರೆ ಅಪಾಯವಿಲ್ಲವೆಂದು ಭಾವಿಸಲಾದ ಮತ್ತು ಬಹುಸಂಖ್ಯಾತರ – ಅದರಲ್ಲೂ ಸುಸಂಸ್ಕೃತರೆನಿಸಿಕೊಂಡಿರುವವರ – ಮುಚ್ಚಟವಾಗಿರುವ. ತೀಕ್ಷ್ಣಮದ್ಯ. ದ್ರಾಕ್ಷಾರಸ. ಬೀರ್ ಮತ್ತು ತಂಬಾಕುಗಳ ಸೇವನೆಯು ಅವೆರಡಕ್ಕಿಂತಲೂ ಹೆಚ್ಚು ಭಯಂಕರವಾದದ್ದು. ರಾಜಕೀಯದಲ್ಲಿ, ಅಧಿಕಾರ ನಿರ್ವಹಣೆಯಲ್ಲಿ, ಎಲ್ಲ ವೈಜ್ಞಾನಿಕ ಸಾಹಿತ್ಯಿಕ ಕಲಾತ್ಮಕಕ್ಷೇತ್ರಗಳಲ್ಲಿ ಸಮಾಜಕ್ಕೆ ಮಾರ್ಗದರ್ಶನ ಮಾಡುತ್ತಿರುವವರು ಬಹುಮಟ್ಟಿಗೆ ಈ ಅತಿರೇಕಾವಸ್ಥೆಯಲ್ಲಿರುವ ವ್ಯಕ್ತಿಗಳೇ – ಕುಡುಕರೇ – ಆಗಿರುವುದರಿಂದ. ಪರಿಣಾಮಗಳು ಭಯಂಕರವಾಗಿರಲೇ ಬೇಕು; ಹಾಗೆಂದು ಒಪ್ಪಿಕೊಳ್ಳದೆ ವಿಧಿಯಿಲ್ಲ.

ಭೋಜನ ಸಮಯದಲ್ಲಿ ಮದ್ಯಪಾನ ಮಾಡುವುದು ನಮ್ಮ ಶ್ರೀಮಂತ ವರ್ಗದಲ್ಲಿನ ಹಲವರ ಪದ್ಧತಿ: ಅಂಥವನು ಮರುದಿನದ ಕೆಲಸಕ್ಕೆ ತೊಡಗುವ ಹೊತ್ತಿಗೆ ಚಿತ್ತಸ್ವಾಸ್ಥ್ಯವನ್ನು ಮರಳಿ ಪಡೆದಿದ್ದು, ಸುಸ್ಥಿತಿಯಲ್ಲಿರುವನೆನ್ನುವುದು ಸಾಮಾನ್ಯ ಭಾವನೆ. ಇದು ಶುದ್ಧ ಸುಳ್ಳು. ನಿನ್ನೆಯ ದಿನ ಒಂದು ಬಾಟ್ಲಿ ದ್ರಾಕ್ಷಾರಸವನ್ನೋ, ಒಂದು ಬಟ್ಟಲು ಮದ್ಯಸಾರವನ್ನೋ, ಎರಡು ಲೋಟ ಸಾರಾಯಿಯನ್ನೋ ಕುಡಿದಿದ್ದ ಮನುಷ್ಯ, ಅದರ ಉದ್ರೇಕದಿಂದಲೇ ಈ ದಿನ ಅರ್ಧ ನಿದ್ರಾವಸ್ಥೆಯಲ್ಲಿರುತ್ತಾನೆ. ಕುಗ್ಗಿ ಹೋಗಿರುತ್ತಾನೆ, ಮಾನಸಿಕವಾಗಿಯೂ ಅವನು ಸೋತು ಹೋಗಿರುತ್ತಾನೆ: ಧೂಮಪಾನವು ಅವನನ್ನು ಇನ್ನಷ್ಟು ನಿತ್ರಾಣಗೊಳಿಸುತ್ತದೆ. ಹೆಚ್ಚು ಕುಡಿಯದ ಮತ್ತು ಮಿತವಾಗಿ ಹೊಗೆಸೇದುವ ರೂಢಿಯಿಟ್ಟುಕೊಂಡಿರುವವನು ಕೂಡ ತನ್ನ ಸಾಧಾರಣ ಸ್ಥಿತಿಗೆ ಬರಬೇಕಾದರೆ, ಒಂದು ವಾರದ ಮಟ್ಟಿಗಾದರೂ ಅವನು ಈ ಚಟಗಳನ್ನು ತ್ಯಜಿಸಬೇಕಾಗುತ್ತದೆ. ಆದರೆ ಇದು ನಡೆಯದ ಮಾತು.[4]

ಹೀಗಿರಲು ನಮ್ಮಲ್ಲಿನ ಅನೇಕ ವ್ಯವಹಾರಗಳನ್ನು – ಅವು ಅಧಿಕಾರಿಗಳಿಂದ ಮತ್ತು ಇತರರಿಗೆ ಮಾರ್ಗದರ್ಶನ ಮಾಡುತ್ತಿರುವವರಿಂದ ನಡೆದಿರಲಿ. ಅಥವಾ ಸಾಮಾನ್ಯ

---

[4] ಕುಡುಕರಲ್ಲದವರೂ ಧೂಮಪಾಯಿಗಳಲ್ಲದವರೂ ಕುಡುಕರಿಗಿಂತ ಧೂಮಪಾಯಿಗಳಿಗಿಂತ ನೈತಿಕವಾಗಿ ತೀರಾ ಕೆಳಮಟ್ಟದಲ್ಲಿರುವುದೇಕೆ? ಕುಡುಕರೂ ಧೂಮಪಾಯಿಗಳೂ ಅಲ್ಲದವರಲ್ಲಿ ಹಲವೇಳೆ ಬೌದ್ಧಿಕವಾಗಿ ನೈತಿಕವಾಗಿ ಅತಿಶ್ರೇಷ್ಠವಾದ ಗುಣಗಳು ಕಂಡುಬರುವುದೇಕೆ?

ಉತ್ತರವಿಷ್ಟೇ: ಮೊದಲನೆಯದಾಗಿ, ಅಂಥ ಕುಡುಕರು ಧೂಮಪಾಯಿಗಳು ಒಂದುವೇಳೆ ಕುಡಿಯದೆ ಹೋಗಿದ್ದರೆ ಧೂಮಪಾನ ಮಾಡದೆ ಹೋಗಿದ್ದರೆ ಇನ್ನೆಷ್ಟೆತ್ತರಕ್ಕೆ ಏರುತ್ತಿದ್ದರೆನ್ನುವುದು ನಮಗೆಗೊತ್ತಿಲ್ಲ. ಎರಡನೆಯದಾಗಿ ತಮ್ಮ ಮೇಲೆ ಈ ಮಾದಕವಸ್ತುಗಳ ದುಷ್ಪರಿಣಾಮ ಇದ್ದರೂ, ನೀತಿವಂತರಾದ ಜನರು ಮಹತ್ಕಾರ್ಯಗಳನ್ನು ಸಾಧಿಸುತ್ತಾರೆ ಎಂಬಂಶವನ್ನು ಗಮನಿಸಿದ ನಾವು, ಅಂಥವರೂ ಹಾಗೆ ಮತ್ತುಬರಿಸಿಕೊಳ್ಳದೆ ಹೋಗಿದ್ದರೆ ಇನ್ನಷ್ಟು ಅತಿಶಯವಾದ ಮಹತ್ಕಾರ್ಯಗಳನ್ನು ಸಾಧಿಸುತ್ತಿದ್ದರು ಎಂಬ ತೀರ್ಮಾನಕ್ಕೆ ಬರುತ್ತೇವೆ. ಕ್ಯಾಂಟ್ ಅತಿಯಾಗಿ ಧೂಮಪಾನ ಮಾಡದೆ ಹೋಗಿದ್ದರೆ ಅವನ ಉದ್ಗ್ರಂಥಗಳ ಶೈಲಿ ಅಷ್ಟು ವಿಚಿತ್ರವಾಗಿ ಕೆಟ್ಟದಾಗಿ ಇರುತ್ತಿರಲಿಲ್ಲವೆಂದು ನನ್ನ ಗೆಳೆಯನೊಬ್ಬ ಹೇಳಿದ್ದು ನಿಜವಿರಲೂ ಬಹುದು. ಕಡೆಯದಾಗಿ ಯಾವ ವ್ಯಕ್ತಿಯ ಬೌದ್ಧಿಕ ಮತ್ತು ನೈತಿಕ ಮಟ್ಟಗಳು ಕೀಳಾಗಿವೆಯೋ, ಅವನಿಗೆ ತನ್ನ ಬದುಕಿಗೂ ಆತ್ಮಸಾಕ್ಷಿಗೂ ನಡುವಣ ವಿರಸವೇ ಗೊತ್ತಿರುವುದಿಲ್ಲ; ಆದ್ದರಿಂದ ಅವನಿಗೆ ಮತ್ತುಬರಿಸಿಕೊಳ್ಳುವ ಹಂಬಲವೂ ಅಷ್ಟಿರುವುದಿಲ್ಲ. ಇದಕ್ಕಿನ್ನೊಂದು ಸಮಾನಾಂತರ ಕಾರಣವೂ ಇದೆ: ಸೂಕ್ಷ್ಮಸ್ವಭಾವದವರಲ್ಲಿ ಅನೇಕರು, ತಮ್ಮ ಬದುಕಿಗೂ ಆತ್ಮಸಾಕ್ಷಿಗೂ ನಡುವಣ ವಿರಸವನ್ನು ಕ್ಷಿಪ್ರವಾಗಿ ಮತ್ತು ವಿಕೃತರೀತಿಯಲ್ಲಿ ಅರ್ಥಮಾಡಿಕೊಳ್ಳುವವರು, ಮತ್ತುಬರಿಸುವ ಸಾಧನಗಳಿಗೆ ವಶವಾಗುತ್ತಾರೆ. ಅವುಗಳಿಂದ ನಾಶವಾಗುತ್ತಾರೆ.

ಪ್ರಜೆಗಳಿಂದ ಮತ್ತು ಮಾರ್ಗದರ್ಶನಪಡೆಯುತ್ತಿರುವವರಿಂದ ನಡೆದಿರಲಿ – ಬುದ್ಧಿ ಸ್ತಿಮಿತವಿಲ್ಲದವರೇ ನಡೆಸುತ್ತಿದ್ದಾರೆ.

ಇದನ್ನು ಅತಿಶಯೋಕ್ತಿಯೆಂದಾಗಲೀ ಲೇವಡಿಯೆಂದಾಗಲೀ ಯಾರೂ ಭಾವಿಸಬಾರದು. ನಮ್ಮ ಬದುಕಿನ ಗೊಂದಲಕ್ಕೂ ದೌರ್ಬಲ್ಯಕ್ಕೂ ನಮ್ಮ ಹೆಚ್ಚುಪಾಲು ಜನತೆ ನಿರಂತರ ಮತ್ತಿನಲ್ಲಿರುವುದೇ ಪ್ರಧಾನ ಕಾರಣ. ನಮ್ಮ ಸುತ್ತಲೂ ನಡೆಯುತ್ತಿರುವ ಎಲ್ಲಾ ಕೆಲಸಕಾರ್ಯಗಳನ್ನು ಕುಡುಕರಲ್ಲದವರು ಮಾಡಬಲ್ಲರೆ? –ಈ ಕಾರ್ಯಕ್ಷೇತ್ರ ಐಫೆಲ್ ಗೋಪುರದ ನಿರ್ಮಾಣದಿಂದ ಹಿಡಿದು. ಸೈನ್ಯದಲ್ಲಿ ಕೆಲಸಕ್ಕೆ ಸೇರಿಕೊಳ್ಳುವುದರ ವರೆಗೆ ಹಬ್ಬಿದೆ.

ಅನಾವಶ್ಯಕವಾದ ಒಂದು ವಾಣಿಜ್ಯ ಸಂಸ್ಥೆಯನ್ನು ಯಾರೋ ಕಟ್ಟುತ್ತಾರೆ; ಬಂಡವಾಳವನ್ನು ಶೇಖರಿಸುತ್ತಾರೆ: ಅನೇಕರು ದುಡಿಯುತ್ತಾರೆ; ಲೆಕ್ಕಹಾಕುತ್ತಾರೆ: ನಕ್ಷೆಗಳನ್ನು ಬರೆಸುತ್ತಾರೆ. ಇದಕ್ಕಾಗಿ ಲಕ್ಷ ಲಕ್ಷ ಜನರ ದುಡಿಮೆಯು. ಸಹಸ್ರ ಸಹಸ್ರ ಟನ್ನುಗಳಷ್ಟು ಕಬ್ಬಿಣವೂ ವೆಚ್ಚವಾಗುತ್ತದೆ. ಅದರ ಮೇಲಕ್ಕೆ ಹತ್ತುವುದೂ. ಅಲ್ಲಿ ಅರೆಘಳಿಗೆ ನಿಲ್ಲುವುದೂ. ಮತ್ತೆ ಇಳಿಯುವುದೂ ತಮ್ಮ ಕರ್ತವ್ಯವೆಂದು ಅನೇಕರು ಭಾವಿಸುತ್ತಾರೆ. ಈ ಗೋಪುರದ ನಿರ್ಮಾಣದಿಂದ. ಎಲ್ಲರೂ ಅಲ್ಲಿಗೆ ಹೋಗಿ ಬರುವುದರಿಂದ ಆದದ್ದೇನಪ್ಪಾ ಅಂದರೆ. ಬೇರೆ ಬೇರೆ ಸ್ಥಳಗಳಲ್ಲಿ. ಇನ್ನೂ ಭಾರಿ ಭಾರಿ ಗೋಪುರಗಳನ್ನು ಕಟ್ಟಬೇಕೆಂಬ ಅಪೇಕ್ಷೆಯೂ ಉದ್ದೇಶವೂ ಉಂಟಾಗುವುದು. ಅಷ್ಟೆ! ಬುದ್ಧಿನೆಟ್ಟಗಿರುವ ಯಾರು ತಾನೆ ಹೀಗೆ ಮಾಡಿಯಾರು? ಇನ್ನೊಂದು ವಿಚಾರವನ್ನೀಗ ತೆಗೆದುಕೊಳ್ಳೋಣ. ಯೂರೋಪಿನ ಎಲ್ಲ ಜನಾಂಗಗಳೂ ಹಲವಾರು ವರ್ಷಗಳಿಂದ ಈ ಮಾನವ ಕುಲದ ಸಂಹಾರಕ್ಕೆ ಸರ್ವೋತ್ತಮವಾದ ಅಸ್ತ್ರವೊಂದನ್ನು ಕಂಡು ಹಿಡಿಯಲು ತುಂಬಾ ಶ್ರಮಪಡುತ್ತಿದ್ದಾರೆ: ಮತ್ತು ಪ್ರಾಪ್ತವಯಸ್ಕರಾದ ಕಿರಿಯರೆಲ್ಲರಿಗೂ ಕೊಲೆ ಮಾಡುವುದು ಹೇಗೆ ಎನ್ನುವುದನ್ನು ಹೇಳಿಕೊಡುತ್ತಿದ್ದಾರೆ. ಈಗ ಯಾವ ಬರ್ಬರರೂ ನಮ್ಮಮೇಲೆ ಬೀಳುವ ಸಂದರ್ಭವಿಲ್ಲವೆಂದು ಎಲ್ಲರೂ ಬಲ್ಲರು. ಆದ್ದರಿಂದ ಈ ಸಮರ ಸಿದ್ಧತೆಗಳು ನಡೆಯುತ್ತಿರುವುದು ನಾಗರಿಕರಾದ ವಿವಿಧ ಕ್ರಿಶ್ಚಿಯನ್ ಜನಾಂಗಗಳು ಪರಸ್ಪರ ಹೋರಾಡುವುದಕ್ಕೆ ಮಾತ್ರ. ಇದು ವ್ಯರ್ಥವಾದ ಹೊರೆ; ತುಂಬಾ ಹಿಂಸೆಗೆ ಕಾರಣವಾಗುತ್ತದೆ; ಇದರಿಂದ ಯಾವ ಅನುಕೂಲವೂ ಇಲ್ಲ: ಇದು ವಿನಾಶಕಾರಿ. ಅನೈತಿಕ, ಅಧರ್ಮ, ವಿವೇಕಶೂನ್ಯ – ಎನ್ನುವುದು ಎಲ್ಲರಿಗೆ ಗೊತ್ತು. ಆದರೆ ಪ್ರತಿಯೊಬ್ಬನೂ ನರಹತ್ಯೆಗಾಗಿ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಲೇ ಇದ್ದಾನೆ. ಯಾರ ಮೈತ್ರಿಯೊಂದಿಗೆ ಸೇರಿಕೊಂಡು ಯಾರನ್ನು ಯಾರು ಕೊಲ್ಲಬೇಕೆಂಬುದನ್ನು ನಿರ್ಧರಿಸಲು ಕೆಲವರು ರಾಜಕೀಯ ಕೂಟಗಳನ್ನು ಕಟ್ಟುತ್ತಾರೆ; ಇತರರು ನರಹತ್ಯೆಯಲ್ಲಿ ಶಿಕ್ಷಣ ಪಡೆಯುತ್ತಿರುವವರನ್ನು ಅಲ್ಲಿಗೆ ಕಳಿಸುತ್ತಾರೆ; ಇನ್ನಿತರರು – ತಮ್ಮ ಇಚ್ಛೆಯ ವಿರುದ್ಧ. ತಮ್ಮ ಆತ್ಮಸಾಕ್ಷಿಯ ವಿರುದ್ಧ. ವಿವೇಕದ ವಿರುದ್ಧ – ಈ ನರಹತ್ಯೆಯ ಸಿದ್ಧತೆಗಳನ್ನು

ಬಿಟ್ಟುಕೊಳ್ಳುತ್ತಾರೆ. ಬುದ್ಧಿ ನೆಟ್ಟಗಿರುವವರು ಈ ಕೆಲಸವನ್ನು ಮಾಡಿಯಾರೆ? ಎಂದೂ ಸ್ಥಿಮಿತ ಚಿತ್ತವನ್ನು ಸಾಧಿಸಲಾರದ ಕೇವಲ ಕುಡುಕರು ಮಾತ್ರ ಹಾಗೆ ಮಾಡ ಬಲ್ಲರು: ಮತ್ತು ಅವರು ಮಾತ್ರ ತಮ್ಮ ಆತ್ಮಸಾಕ್ಷಿಗೂ ಬದುಕಿಗೂ ನಡುವೆ ಉಂಟಾದ ವಿರಸದ ಘೋರ ಪರಿಸ್ಥಿತಿಯಲ್ಲಿ (ಇದು ಮೇಲೆ ಹೇಳಿದ ಸಂದರ್ಭವೊಂದಕ್ಕೆ ಅಲ್ಲ ಇತರ ವಿಷಯಗಳಿಗೂ ಅನ್ವಯಿಸುತ್ತದೆ) ನಮ್ಮ ಸಮಾಜದ ಜನತೆ ಈಗ ಬದುಕುತ್ತಿರುವಂತೆ ಬದುಕಬಲ್ಲರು.

ಜನತೆ ಹಿಂದೆಂದೂ ಹೀಗೆ. ಇಷ್ಟು ನಿರ್ಭಯವಾಗಿ. ತಮ್ಮ ಆತ್ಮಸಾಕ್ಷಿಯ ತಗಾದೆ ಗಳಿಗೆ ವಿರುದ್ಧವಾಗಿ ನಡೆದುಕೊಂಡಿರಲಿಲ್ಲವೆಂದು ನನ್ನೆಣಿಕೆ.

ಮಾನವ ಕುಲ ಈ ದಿನಗಳಲ್ಲಿ ಅಧೋಗತಿಗಿಳಿದಂತೆ ತೋರುತ್ತದೆ. ಅದರ ಅರಿವು ತಕ್ಕ ಸ್ಥಾನಕ್ಕೇರದಿರುವುದಕ್ಕೆ ಯಾವುದೋ ಬಾಹ್ಯ ಕಾರಣವಿರಬೇಕೆಂದು ತೋರುತ್ತದೆ. ಆ ಕಾರಣ – (ಅದೊಂದೇ ಅಲ್ಲದಿರಬಹುದು. ಆದರೆ ಅದೇ ಅತಿ ಮುಖ್ಯ ಕಾರಣ–ನಮ್ಮ ಸಮಾಜದಲ್ಲಿನ ಹೆಚ್ಚುಪಾಲು ಜನತೆಯನ್ನು ವಶಮಾಡಿಕೊಂಡಿರುವ ದ್ರಾಕ್ಷಾರಸ ತಂಬಾಕುಗಳಿಂದ ಒದಗುವ ಪ್ರಜ್ಞಾಹೀನ ಸ್ಥಿತಿ.

ಈ ಘೋರ ವಿಪತ್ತಿನಿಂದ ಬಿಡುಗಡೆಯುಂಟಾದರೆ. ಮಾನವನ ಇತಿಹಾಸದಲ್ಲೇ ಒಂದು ಹೊಸಯುಗ ಪ್ರಾರಂಭವಾದಂತೆ. ಆ ಕಾಲವೂ ಸನ್ನಿಹಿತವಾಗಿದೆ ಎಂದು ತೋರುತ್ತದೆ. ವಿಪತ್ತನ್ನು ಕಂಡುಕೊಂಡಿದ್ದಾಗಿದೆ. ನಮ್ಮ ಅರಿವಿನಲ್ಲಿ ಹೊಸತೊಂದು ಪರಿವರ್ತನೆಯಾಗಿದೆ. ಜನರಿಗೆ ಈ ಮಾದಕ ವಸ್ತುಗಳ ಸೇವನೆಯಿಂದಾಗುವ ಅಪಾಯದ ಅರಿವು ಆಗಿದೆ: ಅದರ ಬಗೆಗೆ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದಾರೆ. ಅರಿವಿನಲ್ಲಾದ ಈ ಸೂಕ್ಷ್ಮ ಪರಿವರ್ತನೆ ಜನರನ್ನು ಈ ಮಾದಕವಸ್ತುಗಳ ಸೆರೆಯಿಂದ ಪಾರುಮಾಡುವುದು ಖಂಡಿತ. ಈ ಪರಿವರ್ತನೆ ಅವರವರ ಆತ್ಮಸಾಕ್ಷಿಯ ತಗಾದೆಗಳತ್ತ ಕಣ್ತೆರೆಯಿಸುತ್ತಿದೆ. ತಮ್ಮ ಗ್ರಹಿಕೆಗಳಿಗನುಸಾರವಾಗಿ ಅವರು ತಮ್ಮ ಬದುಕನ್ನು ತಿದ್ದಿಕೊಳ್ಳಲು ತೊಡಗುತ್ತಾರೆ

ಇದು ಈಗಾಗಲೇ ಪ್ರಾರಂಭವಾಗಿರುವಂತೆ ತೋರುತ್ತದೆ: ಎಂದಿನಂತೆಯೇ ಇದು ಸಮಾಜದ ಕೆಳವರ್ಗಗಳೆಲ್ಲಕ್ಕೂ ಸೋಂಕುತಗುಲಿದ ಬಳಿಕವೇ ಮೇಲಿನ ವರ್ಗಗಳಲ್ಲಿ ಪ್ರಾರಂಭವಾಗುತ್ತಿದೆ.

[ಜೂನ್ 10. .1890]

---

ನನ್ನ ಭಾವ ಡಾ॥ ಪಿ. ಎಸ್. ಅಲೆಕ್ಸೆಯೇವನಿಂದ ರಚಿತವಾದ ಕುಡಿತದ ಅಮಲನ್ನು ಕುರಿತ ಪುಸ್ತಕಕ್ಕೆ ಪ್ರಸ್ತಾವನೆಯಾಗಿ ಲಿಯೋ ಟಾಲ್‌ಸ್ಟಾಯ್ ಈ ಪ್ರಬಂಧವನ್ನು ಬರೆದರು.

# ಮೊದಲ ಹೆಜ್ಜೆ

ಒಬ್ಬ ಮನುಷ್ಯ ದುಡಿಮೆಯ ಸೋಗುಹಾಕದೆ, ಕೈಯಲ್ಲಿರುವ ಕೆಲಸವನ್ನು ಮುಗಿಸಬೇಕೆಂದು ದುಡಿಯುತ್ತಿದ್ದರೆ, ಆಗ ಅವನ ಕೆಲಸಗಳೆಲ್ಲಾ, ಆ ದುಡಿಮೆಗೆ ವಿಶಿಷ್ಟವಾದ ರೀತಿಯಲ್ಲಿ ಒಂದನ್ನೊಂದು ಹಿಂಬಾಲಿಸುತ್ತವೆ. ಆ ದುಡಿಮೆಯಲ್ಲಿ ಸಹಜವಾಗಿ ಮೊದಲು ಮುಗಿಸಬೇಕಾಗಿರುವುದನ್ನು ಮುಂದಕ್ಕೆ ಹಾಕಿದರೆ ಅಥವಾ ಯಾವುದಾದರೂ ಒಂದು ಮುಖ್ಯಭಾಗವನ್ನು ಪೂರ್ತಿಬಿಟ್ಟುಬಿಟ್ಟರೆ, ಆತ ಕೇವಲ ಸೋಗುಹಾಕುತ್ತಿರುತ್ತಾನೆಯೇ ಹೊರತು ಗಮನವಿಟ್ಟು ದುಡಿಯುತ್ತಿರುವುದಿಲ್ಲ. ದೈಹಿಕವಾದದ್ದಿರಲಿ, ಇಲ್ಲದಿರಲಿ ಯಾವುದೇ ಬಗೆಯ ದುಡಿಮೆಯಾದರೂ ಈ ನಿಯಮ ಒಂದು ಚೂರೂ ಬದಲಾವಣೆಯಿಲ್ಲದೆ ಹೊಂದುತ್ತದೆ. ಬ್ರೆಡ್ ಬೇಯಿಸಬೇಕಾದವನು ಹೇಗೆ ಮೊದಲು ಹಿಟ್ಟನ್ನು ಹದಗೊಳಿಸಿ ಆಮೇಲೆ ಒಲೆಯನ್ನು ಸಿದ್ಧಪಡಿಸಿ, ಬೂದಿಯನ್ನು ತೆಗೆದು ಮುಂದುವರಿಯುತ್ತಾನೋ ಹಾಗೆ ಒಳ್ಳೆಯ ಬದುಕಿಗೆ ಆಸೆಪಡುವವನು ಅದಕ್ಕೆ ಬೇಕಾದ ಗುಣಗಳನ್ನು ನಿರ್ದಿಷ್ಟವಾದ ಕ್ರಮದಲ್ಲಿಯೇ ಗಳಿಸುತ್ತಾ ಹೋಗುತ್ತಾನೆ.

ನೇರವಾದ ಬದುಕಿನ ವಿಷಯದಲ್ಲಂತೂ ಈ ಸೂತ್ರ ಮುಖ್ಯ. ಏಕೆಂದರೆ ಬ್ರೆಡ್ ತಯಾರಿಸುವಂತಹ ದುಡಿಮೆಯಲ್ಲಿ, ಕೆಲಸಮಾಡುವಾತ ಗಮನವಿಟ್ಟಿದ್ದಾನೆಯೋ ಅಥವಾ ಕೇವಲ ಸೋಗು ಹಾಕುತ್ತಿದ್ದಾನೆಯೋ ಎಂಬುದನ್ನು ಫಲಿತಾಂಶದಿಂದ ಗೊತ್ತುಮಾಡಿಕೊಳ್ಳಬಹುದಾಗಿದ್ದರೆ, ಒಳ್ಳೆಯಬಾಳಿನ ವಿಷಯದಲ್ಲಿ ಹೀಗೆ ತಾಳೆ ನೋಡುವುದಕ್ಕೆ ಅವಕಾಶಗಳಿಲ್ಲ. ನಾಟಕಗಳಲ್ಲಿ ಮಾಡುವಂತೆ – ಹಿಟ್ಟನ್ನು ಮಿದಿಯದೆ ಅಥವಾ ಒಲೆಗೂಡನ್ನು ಕಾಯಿಸದೆ ಜನರು ಬ್ರೆಡ್ಡನ್ನು ಮಾಡುವಂತೆ ಸೋಗುಹಾಕಿದರೆ ಆಗ ಬ್ರೆಡ್ ತಯಾರಾಗದೆ ಹೋಗುವುದರಿಂದ ಅವರು ಸೋಗು ಹಾಕುತ್ತಿದ್ದರೆಂಬುದು ನಿಶ್ಚಯವಾಗುತ್ತದೆ. ಆದರೆ ಒಬ್ಬಾತ ಒಳ್ಳೆಯ ಬದುಕಿನ ಸೋಗನ್ನು ಹಾಕುತ್ತಿದ್ದರೆ ಆಗ ಆತ ನಿಜವಾಗಿಯೂ ಅದಕ್ಕಾಗಿ ಪ್ರಯತ್ನಿಸದೆ ಕೇವಲ ಸೋಗುಹಾಕುತ್ತಿದ್ದಾನೆಂಬುದನ್ನು ತಿಳಿಯಲು ಅಂತಹ ನೇರವಾದ ಸೂಚನೆಗಳು ಸಿಗುವುದಿಲ್ಲ. ಏಕೆಂದರೆ ಒಳ್ಳೆಯ ಬದುಕಿನ ಪರಿಣಾಮಗಳು ಯಾವಾಗಲೂ ಎದ್ದುಕಾಣುವಂತೆ ಮತ್ತು ಸುತ್ತಮುತ್ತಿನವರಿಗೆ ಸಹ್ಯವಾಗುವಂತೆ ಇರುವುದಿಲ್ಲ ಮಾತ್ರವಲ್ಲದೆ ಅವು ಅವರಿಗೆ ಅಪಾಯಕಾರಿಯಾಗಿಯೂ ಕಾಣುತ್ತವೆ. ಒಬ್ಬನ ಚಟುವಟಿಕೆಗಳಿಗೆ ಇರುವ ಮನ್ನಣೆ ಅವುಗಳಲ್ಲಿನ ಉಲ್ಲಾಸ ಮತ್ತು ಉಪಯೋಗಗಳನ್ನು ಅವನ ಸಮಕಾಲೀನರು ಕಂಡುಕೊಳ್ಳುವುದು – ಇವಿಷ್ಟು ಅವನ ಬದುಕು ಒಳ್ಳೆಯದೆಂಬುದಕ್ಕೆ ಆಧಾರಗಳಲ್ಲ.

ಆದ್ದರಿಂದ ಒಳ್ಳೆಯ ಬುದುಕಿನಂತೆ ಕಾಣುವುದರಿಂದ ನಿಜವನ್ನು ಬೇರ್ಪಡಿಸಲು ಬೇಕಾದ ಗುಣಗಳನ್ನು ಗಳಿಸಿಕೊಳ್ಳುವುದರಲ್ಲಿ ಇರುವ ನಿಶ್ಚಿತ ಸರದಿಯು ನೀಡುವ ಮಾಹಿತಿ ಬೆಲೆಯುಳ್ಳದ್ದಾಗುತ್ತದೆ. ಒಬ್ಬನು ಒಳ್ಳೆಯವನಾಗಲು ನಡೆಸುವ ಪ್ರಯತ್ನದ ಗಹನತೆಯನ್ನು ಪತ್ತೆ ಹಚ್ಚುವುದಕ್ಕಿಂತ ಹೆಚ್ಚಾಗಿ ನಮ್ಮಲ್ಲಿನ ಪ್ರಾಮಾಣಿಕತೆಯನ್ನು ಪರೀಕ್ಷಿಸಿಕೊಳ್ಳುವುದಕ್ಕೆ ಅನುವುಮಾಡಿಕೊಡುವುದರಿಂದ ಬೆಲೆಯುಳ್ಳದ್ದಾಗುತ್ತದೆ: ಏಕೆಂದರೆ ಈ ನಿಟ್ಟಿನಲ್ಲಿ ನಾವು ಅನ್ಯರನ್ನು ಮೋಸಗೊಳಿಸುವುದಕ್ಕಿಂತ ನಮಗೆ ನಾವೇ ಮೋಸಮಾಡಿಕೊಳ್ಳುವ ಸಾಧ್ಯತೆಗಳಿವೆ.

ಯಾವುದು ಮೊದಲು, ಯಾವುದು ಆಮೇಲೆ ಎಂಬುದನ್ನು ಹೇಳುವ ಒಂದು ಸರಿಯಾದ ಕ್ರಮಕ್ಕನುಗುಣವಾಗಿ ಒಳ್ಳೆಯತನದ ಗುಣಗಳನ್ನು ಗಳಿಸಿಕೊಳ್ಳುವುದು ಒಳ್ಳೆಯ ಬುದಕಿನತ್ತ ಹೆಜ್ಜೆ ಇಡಬೇಕಾದರೆ ಅನಿವಾರ್ಯ. ಇದರಿಂದಾಗಿ ಮಾನವ ಜನಾಂಗದ ಎಲ್ಲ ಬೋಧಕರೂ ಅವುಗಳನ್ನು ಸಾಧಿಸುವ ಒಂದು ನಿಶ್ಚಿತ ಕ್ರಮವನ್ನು ಸೂಚಿಸಿದ್ದಾರೆ.

ಚೀನಿಯರ ವಿವೇಕದ ಪ್ರಕಾರ, ಎಲ್ಲ ನೀತಿಯ ಬೋಧನೆಗಳೂ ನೆಲದಿಂದ ಸ್ವರ್ಗಕ್ಕೆ ಒಯ್ಯುವ ಏಣಿಗಳು. ಅಲ್ಲದೆ ಈ ಏಣಿಯನ್ನು ಕೊಟ್ಟಕೊನೆಯ ಮೆಟ್ಟಲಿನಿಂದ ಪ್ರಾರಂಭಿಸುವುದರ ಮೂಲಕವೇ ಏರಲು ಸಾಧ್ಯ. ವೈದಿಕರ, ಬೌದ್ಧರ, ಕಾನ್ಫೂಶಿಯನ್ನರ ಬೋಧನೆಗಳಂತೆ ಗ್ರೀಕ್ ಸಂತರ ಬೋಧನೆಗಳಲ್ಲೂ ಕೂಡ ಈ ಹಂತಗಳು ನಿಶ್ಚಿತವಾಗಿದ್ದು, ಒಂದು ಎತ್ತರದ ಹಂತವನ್ನು ಮೊದಲು ಅದರ ಕೆಳಗಿನ ಹಂತವನ್ನು ಏರದೆಯೇ, ತಲುಪುವುದು ಸಾಧ್ಯವಿಲ್ಲವೆನ್ನಲಾಗಿದೆ. ಋಜು ಜೀವನಕ್ಕೆ ಬೇಕಾದ ಎಲ್ಲ ಗುಣಗಳನ್ನು ಹೊಂದುವಲ್ಲಿ ಅನುಸರಿಸಬೇಕಾದ ನಿರ್ದಿಷ್ಟ ಮಾರ್ಗದ ಅವಶ್ಯಕತೆಯನ್ನೂ ಮಾನವ ಜನಾಂಗದ ಎಲ್ಲ ಬೋಧಕರೂ, ಧರ್ಮಬೋಧಕರಾಗಿರಲಿ, ಅಲ್ಲದಿರಲಿ, ಒಪ್ಪಿದ್ದಾರೆ. ಈ ಅನುಕ್ರಮದ ಅವಶ್ಯಕತೆ ಸಾಧನೆಗೆ ತೀರಾ ಮೂಲಭೂತವಾದುದು ಆದ್ದರಿಂದ ಎಲ್ಲರೂ ಅದನ್ನು ಒಪ್ಪಲೇ ಬೇಕು.

ಆದರೆ ಸೋಜಿಗದ ಮಾತೆಂದರೆ, ಚರ್ಚ್ ಕ್ರಿಶ್ಚಿಯನ್ ಧರ್ಮ ಕಾಲದಿಂದ ಕಾಲಕ್ಕೆ ಹರಡುತ್ತಾ ಬಂದಂತೆ, ಈ ಅವಶ್ಯಕ ಅನುಕ್ರಮದ ಬಗ್ಗೆ ಕಾಳಜಿಗಳು ಕ್ರಮೇಣ ಕಳೆದು ಹೋಗುತ್ತಾ ಬಂದು ಈಗ ಋಷಿಗಳಲ್ಲಿ, ಭಕ್ತರಲ್ಲಿ ಮಾತ್ರ ಉಳಿದಿದೆ. ಮೇಲುವರ್ಗದ ಒಳ್ಳೆಯ ಗುಣಗಳನ್ನು, ಅವುಗಳ ಗಳಿಕೆಗೆ ನೆಲೆಗಳಾದ, ಕೆಳವರ್ಗದ ಗುಣಗಳ ಗೈರು ಹಾಜರಿನಲ್ಲಿ ಅಷ್ಟೇಕೆ ದುರ್ಗುಣಗಳ, ಅಸ್ತಿತ್ವವಿದ್ದರೂ, ಸಾಧಿಸಬಹುದೆಂದು ಕ್ರಿಶ್ಚಿಯನ್ ಲೇಖಕರು ನಂಬುತ್ತಾರೆ: ಹೀಗಾಗಿ ಋಜು ಜೀವನವೆಂದರೇನು ಎಂಬುದರ ಬಗ್ಗೆ, ಈ ಜಗತ್ತಿನ ಬಹುಸಂಖ್ಯಾತ ಜನರ ಮನಸ್ಸಿನಲ್ಲಿ ದೊಡ್ಡ ಗೊಂದಲದ ಸ್ಥಿತಿ ಇದೆ.

## 2

ಒಬ್ಬ ವ್ಯಕ್ತಿ ಋಜುಜೀವನವನ್ನು ನಡೆಸಲು ಅವಶ್ಯಕವಾದ ಗುಣಗಳ ಅನುಕ್ರಮದ ಬಗ್ಗೆ ನಮ್ಮ ಕಾಲದ ಜನರು ಎಚ್ಚರವಾಗಿಲ್ಲ; ಹೀಗಾಗಿ ಒಳ್ಳೆಯ ಬದುಕಿನ ಕಲ್ಪನೆಯನ್ನೇ ಕಳೆದುಕೊಂಡಿದ್ದಾರೆ. ನನಗೆ ತೋರುವಂತೆ ಇದು ಹೀಗೆ ಘಟಿಸುತ್ತದೆ.

ಕ್ರಿಶ್ಚಿಯನ್ ಧರ್ಮ ತನ್ನ ಪೂರ್ವದ ಧರ್ಮಗಳನ್ನು ಸ್ಥಾನಪಲ್ಲಟಗೊಳಿಸಿದಾಗ, ಆ ಧರ್ಮಗಳು ಬಯಸುವುದಕ್ಕಿಂತಲೂ ಶ್ರೇಷ್ಠವಾದ ನೈತಿಕ ನಿಷ್ಠೆಗಳನ್ನು ಸೂಚಿಸಿತು. ಅದೇ ವೇಳೆಗೆ (ಪೂರ್ವದ ಧರ್ಮಗಳಲ್ಲೂ ಇದ್ದಂತೆ) ಒಳ್ಳೆಯ ಗುಣಗಳ ಸಾಧನೆಗೆ ಇರುವ ಅನಿವಾರ್ಯ ಅನುಕ್ರಮವನ್ನು. ಋಜು ಜೀವನವನ್ನು ನಡೆಸಲು ಕೆಲವು ನಿರ್ದಿಷ್ಟ ಹಂತಗಳನ್ನೂ ನಿರ್ಧರಿಸಿತು.

ಪ್ಲೇಟೋ ಹೇಳುವ ಗುಣಗಳು ಆತ್ಮನಿಗ್ರಹದಿಂದ ಪ್ರಾರಂಭವಾಗಿ. ಧೈರ್ಯ, ವಿವೇಕಗಳ ಮೂಲಕ ನ್ಯಾಯವನ್ನು ತಲುಪುತ್ತವೆ; ಕ್ರಿಶ್ಚಿಯನ್ ಗುಣಗಳು ಸ್ವಾರ್ಥತ್ಯಾಗ ದಿಂದ ಪ್ರಾರಂಭವಾಗಿ ದೇವ ನಿಯಮದಲ್ಲಿನ ನಿಷ್ಠೆಯ ಮೂಲಕ. ಪ್ರೀತಿಯನ್ನು ತಲುಪುತ್ತವೆ.

ನಿಜವಾಗಿ ಕ್ರಿಶ್ಚಿಯನ್ ಧರ್ಮವನ್ನು ಒಪ್ಪಿಕೊಂಡು, ಅರ್ಥಪೂರ್ಣ ಕ್ರಿಶ್ಚಿಯನ್ ಬದುಕಿಗಾಗಿ ಹೋರಾಟ ನಡೆಸುವವರು ಹೀಗೆ ಕ್ರಿಶ್ಚಿಯನ್ ಧರ್ಮವನ್ನು ಅರ್ಥಮಾಡಿ ಕೊಂಡಿದ್ದಾರೆ. ಅಲ್ಲದೆ ಪೂರ್ವದ ಧರ್ಮೀಯರಲ್ಲಿ ಆತ್ಮನಿಗ್ರಹವನ್ನು ಒಳಗೊಳ್ಳುವ ತ್ಯಾಗವಾದ ಕಾಮನೆಗಳ ತ್ಯಾಗದಿಂದ ಋಜು ಜೀವನವನ್ನು ನಡೆಯಿಸಲು ಪ್ರಾರಂಭಿಸಿದರು.

ಆದರೆ ಪೂರ್ವಧರ್ಮಗಳ ಬೋಧನೆಯನ್ನೇ ಕ್ರಿಶ್ಚಿಯನ್ ಧರ್ಮವೂ ಈ ವಿಚಾರದಲ್ಲಿ ಪ್ರತಿಧ್ವನಿಸುತ್ತಿತ್ತೆಂದು ಊಹಿಸುವುದು ಬೇಡ. ಕ್ರಿಶ್ಚಿಯನ್ ಧರ್ಮವನ್ನು ಭವ್ಯಸ್ಥಾನದಿಂದ ಬರ್ಬರ ಧರ್ಮಗಳ ಮಟ್ಟಕ್ಕೆ ಎಳೆಯುವ ಆರೋಪಣೆಗೆ ನಾನು ಗುರಿಯಾಗಲಾರೆ. ಅಂತಹ ಆರೋಪಣೆ ನಿಜವಾಗಿಯೂ ಅನ್ಯಾಯ, ಏಕೆಂದರೆ ನಾನು ಕ್ರಿಶ್ಚಿಯನ್‌ರ ಬೋಧನೆಗಳನ್ನು ಪ್ರಪಂಚದಲ್ಲೇ ಉತ್ತಮವಾದುದೆಂದು, ಬರ್ಬರತೆಯಿಂದ ಸಂಪೂರ್ಣ ಭಿನ್ನವಾದುದೆಂದು ಪರಿಗಣಿಸುತ್ತೇನೆ. ಬರ್ಬರ ಧರ್ಮಕ್ಕಿಂತ ಭಿನ್ನವಾಗಿದ್ದು ಶ್ರೇಷ್ಠವೂ ಆಗಿದ್ದರಿಂದ ಕ್ರಿಶ್ಚಿಯನ್ ಧರ್ಮವು ಅದನ್ನು ಸ್ಥಾನಪಲ್ಲಟಗೊಳಿಸಿತು. ಆದರೆ ಬರ್ಬದ ಧರ್ಮಗಳಿರಲಿ ಕ್ರಿಶ್ಚಿಯನ್ ಧರ್ಮವಿರಲಿ, ಎಲ್ಲಾ ಒಂದೇ ಬಗೆಯಲ್ಲಿ ಮಾನವನನ್ನು ಸತ್ಯ ಮತ್ತು ಶಿವದ ಕಡೆಗೆ ಕರೆದೊಯ್ಯುತ್ತವೆ. ಇವೆರಡೂ ಎಂದೂ ಒಂದೇ ಆಗುವುದರಿಂದ ಅವುಗಳಿಗಿರುವ ದಾರಿಯೂ ಒಂದೇ ಆಗುತ್ತದೆ. ಹಾಗಾಗಿ ಈ ದಾರಿಯಲ್ಲಿನ ಮೊದಲ ಹೆಜ್ಜೆ ಅನಿವಾರ್ಯವಾಗಿ ಕ್ರಿಶ್ಚಿಯನ್ ಮತ್ತು ಬರ್ಬರ ಧರ್ಮೀಯರಿಬ್ಬರೂ ಒಂದೇ ಆಗಿರಲೇಬೇಕು.

ಕ್ರಿಶ್ಚಿಯನ್ ಮತ್ತು ಬರ್ಬರರ ಬೋಧನೆಗಳಲ್ಲಿ. ಒಳ್ಳೆಯತನವನ್ನು ಕುರಿತು ಹೇಳುವ ಮಾತುಗಳಲ್ಲಿ ಇರುವ ವ್ಯತ್ಯಾಸ ಇಷ್ಟು: ಬರ್ಬರ ಬೋಧನೆ ಅಂತ್ಯದಲ್ಲಿ ಸಮಗ್ರತೆಯನ್ನು ಕುರಿಯುತ್ತದೆ. ಕ್ರಿಶ್ಚಿಯನ್ ಬೋಧನೆ ಬಯಸುವ ಸಮಗ್ರತೆ ಅನಂತಸ್ವರೂಪಿ. ಎಲ್ಲ ಬರ್ಬರರೂ. ಕ್ರಿಶ್ಚಿಯನ್ ಅಲ್ಲದವರು. ವ್ಯಕ್ತಿಯ ಎದುರಿನಲ್ಲಿ ಅಂತ್ಯದಲ್ಲಿ ಸಮಗ್ರತೆಯನ್ನು ಬಯಸುವ ಚೌಕಟ್ಟನ್ನು ಇಡುತ್ತವೆ. ಆದರೆ ಕ್ರಿಶ್ಚಿಯನ್ ಬೋಧನೆ ನೀಡುವ ಚೌಕಟ್ಟು ಅನಂತ ಕಾಲದವರೆಗೂ ಸಮಗ್ರತೆಯನ್ನು ರೂಪಿಸುವಂತ ಹುದು.

ಉದಾಹರಣೆಗೆ ಪ್ಲೇಟೋ, ನ್ಯಾಯವನ್ನು ಸಮಗ್ರತೆಯ ಒಂದು ಚೌಕಟ್ಟನ್ನಾಗಿ ಕಾಣುತ್ತಾನೆ. ಆದರೆ ಕ್ರಿಶ್ಚಿಯನ್ನರು ಅಲ್ಲಿ ಪ್ರೀತಿಯನ್ನು ಕಲ್ಪಿಸಿದ್ದಾರೆ 'ಅಲ್ಲಿ ನಿನ್ನ ತಂದೆ ಪೂರ್ಣನಾಗಿರುವಂತೆ ನೀನೂ ಪೂರ್ಣವಾಗಿರು' ಇಲ್ಲಿ ವ್ಯತ್ಯಾಸವಿದೆ ಹಾಗೂ ಇದರಿಂದಲೇ ಗುಣಗಳ ಅನುಕ್ರಮಕ್ಕೆ ಸಂಬಂಧಿಸಿದಂತೆ ಕ್ರಿಶ್ಚಿಯನ್ ಹಾಗೂ ಬರ್ಬರ ದೃಷ್ಟಿಕೋನಗಳಲ್ಲಿನ ವ್ಯತ್ಯಾಸ ಫಲಿತಗೊಳ್ಳುತ್ತದೆ. ಬರ್ಬರ ದೃಷ್ಟಿಕೋನದಿಂದ ಗರಿಷ್ಠ ಸ್ತರದ ಗುಣವನ್ನು ಸಾಧಿಸಬಹುದು ಅಲ್ಲದೆ ಈ ಸಾಧನೆಗೆ ಸಂಬಂಧಿಸಿದ ಪ್ರತಿಯೊಂದು ಹಂತಕ್ಕೂ ತನ್ನದೇ ಆದ ಬೆಲೆಯಿರುತ್ತದೆ – ಮುಂದುಮುಂದಿನ ಹಂತಕ್ಕೆ ಹೆಚ್ಚುಹೆಚ್ಚಾಗಿ ಬೆಲೆ: ಆದ್ದರಿಂದ ಈ ದೃಷ್ಟಿಕೋನದ ಪ್ರಕಾರ ಜನರನ್ನು ನೀತಿವಂತರು ಅಲ್ಲವೇ ಅನೀತಿವಂತರೆಂದೇ ಅಥವಾ ಹೆಚ್ಚು ನೀತಿವಂತರು. ಕಡಿಮೆ ನೀತಿವಂತರು ಎಂದು ವಿಭಾಗಿಸಬಹುದು. ಅನಂತ ಸಮಗ್ರತೆಯ ಆದರ್ಶವನ್ನು ಎದುರಿಗಿಟ್ಟುಕೊಂಡ ಕ್ರಿಶ್ಚಿಯನ್ ಬೋಧನೆಯಲ್ಲಿ ಈ ಬಗೆಯ ವಿಭಜನೆ ಸಾಧ್ಯವಿಲ್ಲ. ಅಲ್ಲಿ ಎತ್ತರದ ಅಥವಾ ಕೀಳ್ಮೆಯ ಹಂತಗಳೆಂಬುವು ಇರಲಾರವು. ಅನಂತ ಸೂಕ್ಷ್ಮತೆಗಳನ್ನು ಪ್ರದರ್ಶಿಸುವ ಕ್ರಿಶ್ಚಿಯನ್ನರ ಪೂರ್ಣತೆಯಲ್ಲಿ ಎಲ್ಲ ಹಂತಗಳೂ ಆದರ್ಶಕ್ಕೆ ಅನ್ವಯಿಸಿದಂತೆ ಸಮಾನವಾಗಿರುತ್ತವೆ.

ಬರ್ಬರರ ಪ್ರಕಾರ ಒಬ್ಬ ಮನುಷ್ಯ ಸ್ಥಾಪಿಸಿದ ಗುಣದ ಸ್ತರ ಆತನ ಬೆಲೆಯನ್ನು ನಿರ್ಧರಿಸುತ್ತದೆ: ಕ್ರಿಶ್ಚಿಯನ್ನರಲ್ಲಿ ಸಾಧನೆಯ ಹಾದಿಯಲ್ಲಿ. ಸಾಧನೆಯ ವೇಗದಲ್ಲಿ ಬೆಲೆಯನ್ನು ಗುರುತಿಸಲಾಗುತ್ತದೆ. ತರ್ಕಶೀಲತೆಯನ್ನುಳ್ಳ ಒಬ್ಬ ಮನುಷ್ಯ. ಬರ್ಬರರ ಪ್ರಕಾರ. ಆ ಗುಣದ ಕೊರತೆಯಿರುವ ಮನುಷ್ಯನಿಗಿಂತ ನೈತಿಕವಾಗಿ ಎತ್ತರ ಸ್ಥಾನದಲ್ಲಿ ನಿಲ್ಲುತ್ತಾನೆ. ಈ ವ್ಯಕ್ತಿಗಿಂತಲೂ ಎತ್ತರದ ಸ್ಥಾನದಲ್ಲಿ. ತರ್ಕಶೀಲತೆಯೊಂದಿಗೆ ಧೈರ್ಯವನ್ನು ಹೊಂದಿರುವ ವ್ಯಕ್ತಿ ನಿಲ್ಲುತ್ತಾನೆ. ಇವೆರಡು ಗುಣಗಳ ಜತೆ ನ್ಯಾಯಪರತೆಯನ್ನು ಪಡೆದವನು ಇನ್ನೂ ಎತ್ತರದಲ್ಲಿರುತ್ತಾನೆ. ಆದರೆ ಯಾವನು ಕ್ರಿಶ್ಚಿಯನ್‌ವ್ಯಕ್ತಿಯನ್ನು ಇನ್ನೊಬ್ಬನಿಗಿಂತ ನೈತಿಕವಾಗಿ ಎತ್ತರದ ಅಥವಾ ಕೆಳಗಿನ ಸ್ಥಾನದಲ್ಲಿ ಪರಿಗಣಿಸುವುದು ಸಾಧ್ಯವಿಲ್ಲ. ಒಬ್ಬ ವ್ಯಕ್ತಿ ಎಷ್ಟರಮಟ್ಟಿಗೆ ಕ್ರಿಶ್ಚಿಯನ್ ಎಂಬುದು. ಅನಂತ ಸ್ವರೂಪದ ಪೂರ್ಣತೆಯತ್ತ ನಡೆಯುವ ವೇಗದ ಪ್ರಮಾಣವನ್ನು ಅನುಸರಿಸಿ ನಿರ್ಣಯಿಸಲಾಗುತ್ತದೆಯೇ ಹೊರತು ಆತ ಯಾವ ಹಂತದಲ್ಲಿ ಇದ್ದಾನೆಯೆಂಬುದನ್ನು ಗಮನಿಸಿ

ಅಲ್ಲ. ಆದ್ದರಿಂದ ಒಬ್ಬ ಪಾರ್ಸಿಯು ಸ್ಥಗಿತ ಋಜುತೆ ನಿಲುವೆಯನ್ನು ಧರಿಸಿದ. ಪಶ್ಚಾತ್ತಾಪವನ್ನು ಅನುಭವಿಸಿದ ಕಳ್ಳನೊಬ್ಬನ ಪ್ರಗತಿಗಿಂತ ಕಡಿಮೆ ಬೆಲೆಯನ್ನುಳ್ಳದ್ದು.

ಇದು ಕ್ರಿಶ್ಚಿಯನ್ ಹಾಗೂ ಬರ್ಬರ ಬೋಧನೆಗಳ ನಡುವೆ ಇರುವ ವ್ಯತ್ಯಾಸ. ಇದರಿಂದಾಗಿ ಆತ್ಮನಿಗ್ರಹ. ಧೈರ್ಯದಂತಹ ಗುಣಗಳ ಹಂತಗಳು ಬರ್ಬರ ಧರ್ಮದಲ್ಲಿ ಒಂದು ಗೌರವದ ಸಂಗತಿಗಳಾಗಿದ್ದರೆ. ಕ್ರಿಶ್ಚಿಯನ್ ಧರ್ಮದಲ್ಲಿ ಏನೇನೂ ಅಲ್ಲ. ಈ ವಿಚಾರದಲ್ಲಿ ಇವೆರಡೂ ಬೇರೆಬೇರೆಯಾಗುತ್ತವೆ. ಕೆಳಗಿನ ಹಂತಗಳನ್ನು ಹತ್ತದೇ, ಗುಣಗಳ ಕಡೆಗೆ. ಪೂರ್ಣತೆಯ ಕಡೆಗೆ ಬರುವುದು ಸಾಧ್ಯವೇ ಇಲ್ಲ ಎನ್ನುವ ವಿಚಾರದಲ್ಲಿ ಕ್ರಿಶ್ಚಿಯನ್ ಮತ್ತು ಬರ್ಬರ ಧರ್ಮಗಳೆರಡೂ ಒಂದೇ. ಇಲ್ಲಿ ಅಭಿಪ್ರಾಯ ಭೇದ ಇರುವುದು ಸಾಧ್ಯವಿಲ್ಲ.

ಬರ್ಬರನಂತೆ. ಕ್ರಿಶ್ಚಿಯನ್ ಕೂಡ ಆತ್ಮನಿಗ್ರಹವೆನ್ನುವ ಮೊದಲ ಹಂತದಿಂದಲೇ ತನ್ನನ್ನು ಸಮಗ್ರಗೊಳಿಸಿಕೊಳ್ಳುವ ಕಾರ್ಯವನ್ನು ಪ್ರಾರಂಭಿಸಬೇಕು; ಏಣಿಯನ್ನು ಏರಬೇಕು ಎಂದು ಹೇಳಿಕೊಳ್ಳುವಾತ ಮೊದಲ ಹಂತವನ್ನು ತಪ್ಪಿಸಲು ಸಾಧ್ಯವಿಲ್ಲ. ಬರ್ಬರ ಧರ್ಮಾನುಯಾಯಿಗೆ ಆತ್ಮನಿಗ್ರಹ ಒಂದು ಗುಣವಾದರೆ. ಕ್ರಿಶ್ಚಿಯನ್ನರಿಗೆ ಅದು, ಪೂರ್ಣತೆಯ ಸಾಧನೆಗೆ ಅನಿವಾರ್ಯವಾದ ಒಂದು ಸಿದ್ಧಿಯಾದ ಸ್ವಾರ್ಥತ್ಯಾಗದ ಒಂದು ಭಾಗ ಮಾತ್ರ. ಬರ್ಬರ ಧರ್ಮ ಸೂಚಿಸಿದ ಹಾಗೂ ನಿರ್ವಹಿಸಿದ ದಾರಿಯಲ್ಲಿ ಅಲ್ಲದೆ ಪ್ರಾಮಾಣಿಕವಾಗಿ ಕ್ರಿಶ್ಚಿಯನ್ ಧರ್ಮ ರೂಪಗೊಳ್ಳಲಾರದು.

ಎಲ್ಲರೂ ಕ್ರಿಶ್ಚಿಯನ್ ಧರ್ಮವನ್ನು. ಸ್ವರ್ಗದಲ್ಲಿರುವ ದೇವನ ಹಾಗೇ ಪರಿಪೂರ್ಣರಾಗುವ ಆಕಾಂಕ್ಷೆ ಎಂದು ತಿಳಿದಿಲ್ಲ. ಬಹುಸಂಖ್ಯಾತರು ಅದನ್ನು ರಕ್ಷಣೆಯ ಮಾರ್ಗದ ಬೋಧನೆಯೆಂದು ತಿಳಿದಿದ್ದಾರೆ. ಇದು ಕ್ಯಾಥೋಲಿಕ್ ಹಾಗೂ ಗ್ರೀಕ್ ಸಂಪ್ರದಾಯವಾದಿಗಳ ಪ್ರಕಾರ ಚರ್ಚ್ ಪಾಪಗಳಿಂದ ವರದಾನವಾಗಿ ನೀಡುವ ಬಿಡುಗಡೆ: ಪ್ರಾಟೆಸ್ಟೆಂಟ್. ಸುಧಾರಿತ ಚರ್ಚ್ ಹಾಗೂ ಕ್ಯಾಲ್ವಿನಿಸ್ಟರ ಪ್ರಕಾರ ಪಶ್ಚಾತ್ತಾಪದಲ್ಲಿ ನಂಬುಗೆ, ಉಳಿದವರ ಪ್ರಕಾರ ಇವೆರಡೂ ಕೂಡಿಕೊಳ್ಳುವುದರಿಂದ ಸಿದ್ಧವಾಗುವ ಹಾದಿ ಇವಿಷ್ಟನ್ನು ಸಾರವನ್ನಾಗಿ ಗ್ರಹಿಸಿದ್ದಾರೆ.

ಕ್ರಿಶ್ಚಿಯನ್ ಧರ್ಮದ ನೈತಿಕ ಬೋಧನೆಗಳ ಬಗ್ಗೆ ಮನುಷ್ಯ ಸಂಬಂಧದ ಪ್ರಾಮಾಣಿಕತೆ. ಗಂಭೀರತೆಗಳನ್ನು ಈ ಬೋಧನೆ ಹಾಳುಮಾಡಿದೆ. ಈ ನಂಬುಗೆಗಳನ್ನು ಪ್ರತಿನಿಧಿಸುವವರು ಈ ಮುಕ್ತಿಮಾರ್ಗಗಳು ಋಜುಜೀವನದ ಆಕಾಂಕ್ಷೆಗೆ ಅಡ್ಡಿಗಳಲ್ಲವೆಂದು. ನಿಜವಾಗಿ ಅದಕ್ಕೆ ಪೋಷಕವೆಂದು ಎಷ್ಟಾದರೂ ಬೋಧಿಸಲಿ. ಕೆಲವು ನಿಲುವುಗಳಿಂದ ಕೆಲವು ನಿರ್ಣಯಗಳು ಖಂಡಿತಾ ಹುಟ್ಟುತ್ತವೆ ಹಾಗೂ ಯಾವ ನಿಲುವುಗಳಿಂದ ಈ ನಿರ್ಣಯಗಳು ಹುಟ್ಟುತ್ತವೋ ಆ ನಿಲುವುಗಳನ್ನು ನಂಬಿದ ಮೇಲೆ ನಿರ್ಣಯಗಳನ್ನು

ಯಾವ ಪಾಪವೂ ತಡೆಯಲಾರದು. ಚರ್ಚ್ ನೀಡುವ ದಯಾ ಭಿಕ್ಷೆಯಿಂದ. ಪಶ್ಚಾ-ತ್ತಾಪದ ಶಿಕ್ಷೆಯಿಂದ ತನ್ನನ್ನು ತಾನು ಉಳಿಸಿಕೊಳ್ಳಬಹುದು ಎಂದು ಯಾವನಾದರೊಬ್ಬ ನಂಬಿಕೊಂಡಿದ್ದರೆ ತಾನೇ ಋಜು ಜೀವನವನ್ನು ನಡೆಸಲು ಪ್ರಯತ್ನಿಸುವುದು. ಅದರಲ್ಲೂ ಆತನ ಪ್ರಯತ್ನಗಳನ್ನು ಬೆಲೆಯುಳ್ಳದ್ದನ್ನಾಗಿ ಮಾಡುವ ಅವಕಾಶ ಪಾಪವನ್ನು ಮಾಡುವುದರಲ್ಲಿ ಎಂದು ಹೇಳಿದ ಮೇಲೆ. ಅನವಶ್ಯಕವೆಂದು ಯೋಚಿಸುವುದು ಸಹಜ. ಪಾಪಗಳಿಂದ. ಅದರ ಫಲಗಳಿಂದ ಮುಕ್ತನಾಗಲು ವೈಯಕ್ತಿಕ ಪ್ರಯತ್ನಗಳಲ್ಲದ ಮಾರ್ಗಗಳಿವೆ ಎಂದು ತಿಳಿದಿರುವಾಗ. ಅಂತಹ ಮಾರ್ಗಗಳೇನೂ ತಿಳಿಯದ ವ್ಯಕ್ತಿಯಷ್ಟು ಶಕ್ತಿ ಹಾಗೂ ಶ್ರದ್ಧೆಯಿಂದ ದುಡಿಯಲಾರ. ವೈಯಕ್ತಿಕ ಪ್ರಯತ್ನಗಳಿಲ್ಲದ ಅನ್ಯಮಾರ್ಗಗಳ ಅರಿವು. ಸಂಪೂರ್ಣ ಶ್ರದ್ಧೆಯಿಲ್ಲದ ದುಡಿಮೆ. ಋಜು ಜೀವನಕ್ಕೆ ಅತ್ಯವಶ್ಯಕವಾದ ಬಲವಾದ ಅನುಕ್ರಮವನ್ನು ತಿರಸ್ಕರಿಸುವಂತೆ ಮಾಡುತ್ತವೆ. ಕ್ರಿಶ್ಚಿಯನ್ ಧರ್ಮವನ್ನು ನಂಬುವ ಬಹುಸಂಖ್ಯಾತರ ವಿಚಾರದಲ್ಲಿ ಇದು ಘಟಿಸಿದೆ.

## 3

ವ್ಯಕ್ತಿಯ ಅನ್ಯೂನ ಆತ್ಮಶುದ್ಧಿಯ ಸಾಧನೆಗೆ ವೈಯಕ್ತಿಕ ಪ್ರಯತ್ನಗಳು ಅನವಶ್ಯಕವೆಂಬ. ಅದನ್ನು ಸ್ಥಾಪಿಸಲು ಬೇರೆ ದಾರಿಗಳಿವೆಯೆಂಬ. ಸಿದ್ಧಾಂತ ಋಜು ಜೀವನವನ್ನು ನಡೆಸುವ ಪ್ರಯತ್ನಗಳಲ್ಲಿ ಸಡಿಲತನಕ್ಕೆ. ಅಂತಹ ಬದುಕಿಗೆ ಅನಿವಾರ್ಯವಾದ ಅನುಕ್ರಮಣಿಕೆಯ ಬಗ್ಗೆ ತಿರಸ್ಕಾರಕ್ಕೆ ಕಾರಣವಾಯಿತು.

ಕ್ರಿಶ್ಚಿಯನ್ ಧರ್ಮವನ್ನು. ಮೇಲು ಮೇಲೆ ಮಾತ್ರ ಸ್ವೀಕರಿಸಿದ ಬಹುಪಾಲು ಜನರು ಬರ್ಬರ ಧರ್ಮಕ್ಕೆ ಕ್ರಿಶ್ಚಿಯನ್ ಧರ್ಮವನ್ನು ಹೊಂದಿಸಿಕೊಳ್ಳುವ ನೆಪದಲ್ಲಿ ಸಿಕ್ಕ ಅವಕಾಶವನ್ನು ಉಪಯೋಗಿಸಿಕೊಂಡು – ಬರ್ಬರ ಧರ್ಮದ ಒಳ್ಳೆಯ ಗುಣಗಳನ್ನು ಬಯಸುವ ನಿಷ್ಠೆಯನ್ನೂ – ಕ್ರಿಶ್ಚಿಯನ್ನರಾಗಿರುವುದರಿಂದ ಈಗ ತಮ್ಮ ಮೇಲೆ ಹೊರಿಸಲಾಗದಿರುವುದರಿಂದ ಮೃಗೀಯ ಸ್ವಭಾವಗಳೊಂದಿಗೆ ಎಲ್ಲ ತಾಕಲಾಟಗಳನ್ನು ಬಿಟ್ಟುಕೊಟ್ಟರು.

ಚರ್ಚ್‌ನ ಬೋಧನೆಯನ್ನು ನಂಬುವುದನ್ನು ಕೈ ಬಿಟ್ಟವರದೂ ಇದೇ ಕಥೆ. ಮೇಲೆ ಹೇಳಿದ ನಂಬಿಕೆಯುಳ್ಳವರಂತೆ ಇವರೂ ಕೂಡ, ಚರ್ಚ್‌ನಿಂದ ದತ್ತವಾದ. ಅಥವಾ ಮುಕ್ತಿಯಲ್ಲಿ ನಂಬುಗೆಯಿಂದಾಗಿ ಬಂದ ಘನತೆಯ ಬದಲು. ವಿಜ್ಞಾನಕ್ಕೆ. ಕಲೆಗೆ. ಮಾನವ ಜನಾಂಗಕ್ಕೆ ಸೇವೆ ಸಲ್ಲಿಸುವಂತಹ ಸೋಗಿನ ಒಳ್ಳೆಯ ಕೆಲಸಗಳನ್ನು. ಅದರೆ ಬಹುಸಂಖ್ಯಾತರು ಒಳ್ಳೆಯದೆಂದು ಒಪ್ಪಿದವನ್ನು ಮಾಡಿ ಇಂತಹ ಕೆಲಸಗಳ ಹೆಸರಿನಲ್ಲಿ ಋಜು ಜೀವನಕ್ಕೆ ಬೇಕಾದ ಗುಣಗಳ ಅನುಕ್ರಮದ ಸಾಧನೆಯಿಂದ ಮುಕ್ತರಾಗಿ. ರಂಗ-ಭೂಮಿ ಮೇಲಿನ ನಟರಂತೆ. ಒಳ್ಳೆಯ ಬದುಕನ್ನು ನಡೆಸುತ್ತಿರುವ ಸೋಗಿನಿಂದಲೇ ತೃಪ್ತರಾಗುತ್ತಾರೆ.

ಬರ್ಬರ ಧರ್ಮದಿಂದ ಹೊರಬಂದ, ಕ್ರಿಶ್ಚಿಯನ್ ಧರ್ಮವನ್ನು ಅದರ ಪ್ರಾಮಾಣಿಕ ನೆಲೆಯಲ್ಲಿ ಸ್ವೀಕರಿಸಿದವರು, ಸ್ವಾರ್ಥತ್ಯಾಗವಿಲ್ಲದಿದ್ದರೂ, ದೇವರು, ಮನುಷ್ಯರಲ್ಲಿ ಪ್ರೀತಿಯನ್ನೂ, ಆತ್ಮ ನಿಗ್ರಹವಿಲ್ಲದಿದ್ದರೂ ನ್ಯಾಯವನ್ನೂ ಬೋಧಿಸತೊಡಗುತ್ತಾರೆ. ಎಂದರೆ, ಅವರು ಕೆಳದರ್ಜೆಯ ಗುಣಗಳನ್ನು ಕಡೆಗಣಿಸಿ ಮೇಲುದರ್ಜೆಯ ಗುಣಗಳನ್ನು ಬೋಧಿಸಿದ್ದಾರೆ. ಅವರ ಬೋಧನೆ ಮಿಥ್ಯೆ.

ಕೆಲವರು ಸ್ವಾರ್ಥತ್ಯಾಗವಿಲ್ಲದ ಪ್ರೀತಿಯನ್ನು ಮನುಷ್ಯರಲ್ಲಿ ಬೆಳೆಸಿಕೊಳ್ಳಲು ಬೋಧಿಸಿದರೆ ಕೆಲವರು ಆತ್ಮನಿಗ್ರಹವಿಲ್ಲದ ಮಾನವೀಯತೆಯನ್ನೂ ಮಾನವ ಜನಾಂಗಕ್ಕೆ ಸೇವೆಯನ್ನೂ ಬೋಧಿಸುತ್ತಾರೆ. ವ್ಯಕ್ತಿಯನ್ನು ಶ್ರೇಷ್ಠ ನೈತಿಕ ಸ್ತರಗಳಿಗೆ ಒಯ್ಯುವ ಸೋಗನ್ನು ಹಾಕುವಾಗಲೇ ಅತ್ಯಂತ ಪ್ರಾಥಮಿಕ ನೈತಿಕ ಹೊಣೆಗಳಿಂದ – ಇವುಗಳು ಬರ್ಬರರಿಂದ ಗುರುತಿಸಲ್ಪಟ್ಟಿದ್ದವಲ್ಲದೆ, ಕ್ರಿಶ್ಚಿಯನ್ನರಿಂದ ತಿರಸ್ಕರಿಸಲ್ಪಡದೆ ಬಲಿಗೊಳಿಸಲ್ಪಟ್ಟಂತವು – ಮುಕ್ತನನ್ನಾಗಿಸಿ ಅವನಲ್ಲಿನ ಮೃಗೀಯ ಸ್ವಾಭಾವಗಳನ್ನು ಪುಷ್ಟಿಗೊಳಿಸುವುದರಿಂದ ಈ ಬಗೆಯ ಬೋಧನೆಯನ್ನು ನಂಬುವವರೂ, ನಂಬದವರೂ ಒತ್ತಟ್ಟಿಗೆ ಸ್ವೀಕರಿಸುತ್ತಾರೆ.

ಈಗ ತಾನೇ ಸಮಾಜವಾದವನ್ನು ಕುರಿತು, ಧರ್ಮಗುರುಗಳ Encyclical * ಪ್ರಕಟವಾಗಿದೆ. ಅದರಲ್ಲಿ ಸ್ವಂತ ಆಸ್ತಿಯನ್ನು ಬೆಳಸುವುದು ತಪ್ಪೆನ್ನುವ ಸಮಾಜವಾದಿಯನ್ನು ಖಂಡಿಸಲಾಗಿದೆ. ವಾದ ಹೀಗೆ: 'ತನಗೆ ಮತ್ತು ತನ್ನವರಿಗೆ ಅವಶ್ಯವಿದ್ದುದ್ದನ್ನು ಹಂಚಬೇಕೆಂದಾಗಲೀ, ತನ್ನ ಬದುಕಿನ ಸ್ಥಿತಿಗತಿಗಳನ್ನು ಉತ್ತಮಪಡಿಸಿಕೊಳ್ಳಲು ಬೇಕಾದುದನ್ನು, ದರಿದ್ರರಾಗುತ್ತ ಹೋಗುವುದನ್ನು ಯಾರೂ ಬಯಸುವುದಿಲ್ಲವಾದ್ದರಿಂದ, ಕೊಟ್ಟುಬಿಡಬೇಕೆಂದು ಆಜ್ಞೆಮಾಡಲಾಗುವುದಿಲ್ಲ (ಇದು St. Thomas Aquinas ನಿಂದ). "ಆದರೆ ಅವಶ್ಯಕತೆಯ ಪೂರೈಕೆಯಾದಮೇಲೆ, ತನ್ನ ಸ್ಥಿತಿಯ ಕಡೆಗೆ ಸಾಕಷ್ಟು ಗಮನನೀಡಿದಮೇಲೆ, ಇಲ್ಲದವರಿಗೆ ಕೊಡಬೇಕಾಗಿರುವುದು ಕರ್ತವ್ಯ. ಉಳಿದದ್ದನ್ನು ದಾನಮಾಡಬೇಕು.

ಬಹು ಪ್ರಸಾರವುಳ್ಳ ಚರ್ಚಿನ ಗುರುವಿನ ಬೋಧನೆ ಹೀಗಿದೆ. ದುಡಿಮೆಯಿಂದಾಗುವ ಪಳಿಗೆ ಸಾಲದೆಂದು ಹೇಳುವ ಚರ್ಚ್ ಗುರುಗಳಿಲ್ಲ ಹೀಗೆ ಬೋಧಿಸಿದ್ದಾರೆ. ನಿಮಗೆ ಏನು ಬೇಡವೋ ಅದನ್ನು ನಿಮ್ಮ ನೆರೆಯವನಿಗೆ ಕೊಡಲು ಹೇಳುವ ಸ್ವಾರ್ಥಗುಣದ ಬೋಧನೆಯೊಂದಿಗೆ ಪ್ರೀತಿಯನ್ನು ಬೋಧಿಸುತ್ತಾರೆ. ಹಾಗೆ ಕೊರಿಂತ್ಯನರಿಗೆ ಪಾಲ್‌ಗುರುಗಳು ಬೋಧಿಸಿದ ಮೊದಲ Epistleನ ಹದಿಮೂರನೆಯ ಅಧ್ಯಾಯದಲ್ಲಿ ಬರುವ ಪ್ರೀತಿಯನ್ನು ಕುರಿತ ಮಾತುಗಳನ್ನು ಭಾರವಾದ ಧ್ವನಿಯಲ್ಲಿ ನೆನೆದುಕೊಳ್ಳುತ್ತಾರೆ.

---

* ಇದು XIIIನೇ ಪೋಪ್ ಲಿಯೋನ Encyclical ಅನ್ನು ನಿರ್ದೇಶಿಸುತ್ತದೆ. ಇಲ್ಲಿನ ಉಲ್ಲೇಖ ಅದರ ಅಧಿಕೃತ ಇಂಗ್ಲಿಷ್ ಭಾಷಾಂತರವನ್ನು ಆಧರಿಸಿದೆ.

ಎಲ್ಲ ಸುವಾರ್ತೆಗಳೂ, ಸಂಪೂರ್ಣವಾಗಿ ಕ್ರಿಶ್ಚಿಯನ್ ಆಗಲು ಸ್ವಾರ್ಥತ್ಯಾಗವೇ ಮೊದಲಹೆಜ್ಜೆ ಎಂದು ಸೂಚಿಸುವುದರ ಮೂಲಕ, ಸ್ವಾರ್ಥತ್ಯಾಗದಲ್ಲಿ ನಿಷ್ಠೆಯನ್ನೇ ಕುರಿತು ಹೇಳುತ್ತಿದ್ದರೂ, 'ಯಾರು ತನ್ನ ಶಿಲುಬೆಯನ್ನು ತೆಗೆಯುವುದಿಲ್ಲವೋ ......', 'ಯಾರು ತನ್ನ ಪ್ರಾಣವನ್ನು ಕಳೆದುಕೊಳ್ಳುತ್ತಾನೋ'. 'ಯಾರು ತನ್ನ ತಂದೆತಾಯಿಯರನ್ನು ತೊರೆಯುವುದಿಲ್ಲವೋ' ಎಂಬಂಥ ಉಕ್ತಿಗಳು ಸ್ಪಷ್ಟವಾಗಿದ್ದರೂ, ಯಾವುದಕ್ಕೆ ಒಬ್ಬ ಹೊಂದಿಕೊಂಡಿದ್ದಾನೋ ಅದನ್ನು ಅಥವಾ ತನ್ನ ಆಕಾಂಕ್ಷೆಗಳು ಏನಿವೆಯೋ ಅವನ್ನು ತ್ಯಾಗಮಾಡದೆ ಕೂಡ ಜನರನ್ನು ಪ್ರೀತಿಸುವುದು ಸಾಧ್ಯವೆಂದು ತಮ್ಮನ್ನು ತಾವೇ, ತಾವು ಇತರರನ್ನು ಕೂಡ, ನಂಬಿಸುತ್ತಾರೆ.

ಚರ್ಚ್ ಜನರ ಮಾತು ಹೀಗೆ ಸಾಗುತ್ತದೆ.

ಚರ್ಚನ್ನಲ್ಲದೆ, ಕ್ರಿಶ್ಚಿಯನ್ ಆಲೋಚನೆಯನ್ನೇ ಧಿಕ್ಕರಿಸುವ ಮುಕ್ತರು ಕೂಡ ಅದೇ ಬಗೆಯಲ್ಲೇ ಮಾತನಾಡುತ್ತಾರೆ, ಬರೆಯುತ್ತಾರೆ, ವರ್ತಿಸುತ್ತಾರೆ. ತಮ್ಮ ಬಯಕೆಗಳನ್ನು ಕಿಂಚಿತ್ತೂ ಅಡಗಿಸಿಕೊಳ್ಳದೆಯೂ ಕಾಮನೆಗಳನ್ನು ಒತ್ತಿಹಿಡಿಯದೆಯೂ ಮನುಷ್ಯ ಜನಾಂಗಕ್ಕೆ ಸೇವೆ ಸಲ್ಲಿಸಿರಬಹುದು, ಋಜು ಜೀವನವನ್ನು ನಡೆಸಬಹುದೆಂದು ನಂಬಿಸುತ್ತಾರೆ.

ಬರ್ಬರ ಧರ್ಮದ ಗುಣಾನುಕ್ರಮಣಿಯನ್ನು ಪಕ್ಕಕ್ಕೆ ತಳ್ಳಿದ್ದರೂ ಕ್ರಿಶ್ಚಿಯನ್ ಬೋಧನೆಯನ್ನು ಅದರ ನಿಜವಾದ ನೆಲೆಯಲ್ಲಿ ಗ್ರಹಿಸದ ಜನರು ಕ್ರಿಶ್ಚಿಯನ್ ಗುಣಾನುಕ್ರಮಣಿಯನ್ನು ಒಪ್ಪಿಕೊಂಡಿಲ್ಲ. ಹಾಗಾಗಿ ಸುಮ್ಮನೆ ಮಾರ್ಗದರ್ಶನವಿಲ್ಲದೆ ಉಳಿದಿದ್ದಾರೆ.

## 4

ಕ್ರಿಶ್ಚಿಯನ್ ಬೋಧನೆ ಇರದಿದ್ದ ಪ್ರಾಚೀನ ಕಾಲದಲ್ಲಿ, ಸಾಕ್ರಟೀಸನಿಂದ ಪ್ರಾರಂಭಿಸಿ, ಎಲ್ಲ ಮಾರ್ಗದರ್ಶಿಗಳೂ ಆತ್ಮನಿಗ್ರಹವನ್ನು, ಬದುಕಿನ ಮೊದಲ ಗುಣವೆಂದು ಪರಿಗಣಿಸಿದ್ದಾರೆ: ಎಲ್ಲ ಗುಣಗಳೂ ಇದರಿಂದಲೇ ಪ್ರಾರಂಭವಾಗಬೇಕು ಮತ್ತು ಇದರ ಮೂಲಕವೇ ಬೆಳೆಯಬೇಕು ಎಂಬುದು ನಿಹಿತವಾಗಿತ್ತು. ಅಸಂಖ್ಯಾತ ಬಯಕೆಗಳನ್ನು ಬೆಳೆಸಿಕೊಂಡು ಅವುಗಳಿಗೆ ತಾನೇ ಬಲಿಯಾಗಿರುವ ಆತ್ಮನಿಗ್ರಹವಿಲ್ಲದ ವ್ಯಕ್ತಿ ಋಜು ಜೀವನವನ್ನು ನಡೆಸಲಾರನೆಂಬುದು ಸ್ಪಷ್ಟವಿತ್ತು. ಧಾರಾಳತನ, ಪ್ರೀತಿ ಇವುಗಳ ಮಾತಿರಲಿ – ಅನಾಸಕ್ತಿ, ನ್ಯಾಯ ಮುಂತಾದುವುಗಳನ್ನು ಕುರಿತು ಯೋಚಿಸಲು ಪ್ರಾರಂಭಿಸುವ ಮೊದಲು ತನ್ನನ್ನು ತಾನು ನಿಗ್ರಹಿಸಿಕೊಳ್ಳಲು ಕಲಿಯಬೇಕೆಂದು ಹೇಳಲಾಗಿತ್ತು. ನಮ್ಮ ಇಂದಿನ ಆಲೋಚನೆಗಳ ಪ್ರಕಾರ ಈ ವಿಚಾರಗಳೆಲ್ಲಾ ಅನವಶ್ಯಕ. ತನ್ನಲ್ಲಿ ಬಯಕೆಗಳ ರಾಶಿಯನ್ನೇ ಬೆಳೆಸಿಕೊಂಡ ಒಬ್ಬ, ತನ್ನನ್ನು ಆಳುವ ನೂರಾರು ಆಸಕ್ತಿಗಳನ್ನು ಪೂರೈಸಿಕೊಳ್ಳದೆ ಬದುಕಲಾರದ ಒಬ್ಬ, ನೀತಿಯಿಂದ ಕೂಡಿದ ಋಜುವಾದ ಜೀವನವನ್ನು ನಡೆಸುವ ಸಾಧ್ಯತೆಗಳು ಇನ್ನೂ ಇವೆ ಎಂದು ನಂಬಿದ್ದೇವೆ.

ಲೌಕಿಕವನ್ನು ಹೇಳುವ ಕೆಳದರ್ಜೆಯದ್ದಿರಲಿ. ನ್ಯಾಯವನ್ನು ಬಯಸುವ ಬರ್ಬರ ಧರ್ಮದ ಇನ್ನಷ್ಟು ಮೇಲುವರ್ಗದ್ದಿರಲಿ, ಪ್ರೀತಿಯನ್ನು ಬಯಸುವ ಕ್ರಿಶ್ಚಿಯನ್ ಧರ್ಮದ ಶ್ರೇಷ್ಠದರ್ಜೆಯದ್ದಿರಲಿ. ಯಾವುದೇ ದೃಷ್ಟಿಕೋನದಿಂದ ನೋಡಿದರೂ, ತಾನು ಸುಲಭವಾಗಿ ತ್ಯಜಿಸಬಹುದಾದ ಸ್ವಸಂತೋಷಕ್ಕಾಗಿ ಬೇರೆಯವರ ದುಡಿಮೆಯನ್ನು, ಹೆಚ್ಚು ಸಂದರ್ಭಗಳಲ್ಲಿ ನೋವುತುಂಬಿದ ದುಡಿಮೆಯನ್ನು ಬಳಸಿಕೊಳ್ಳುವಾತ ತಪ್ಪಾಗಿ ವರ್ತಿಸುತ್ತಾನೆ ಹಾಗೂ ಋಜುಜೀವನವನ್ನು ನಡೆಸಬೇಕಾದರೆ ಆತ ಮಾಡಬಾರದ ತಪ್ಪುಗಳಲ್ಲಿ ಇದು ಮೊದಲನೆಯದು ಎಂಬುದು ಎಲ್ಲರಿಗೂ ಸ್ಪಷ್ಟವಾಗಿ ತಿಳಿಯಬೇಕು.

ಲೌಕಿಕ ದೃಷ್ಟಿಕೋನದಿಂದ ಈ ಬಗೆಯ ವರ್ತನೆ ತಪ್ಪು. ಏಕೆಂದರೆ ಎಲ್ಲಿಯವರೆಗೆ ಇತರರ ದುಡಿಮೆ ತನಗೆ ದಕ್ಕುವಂತೆ ಮಾಡಿಕೊಳ್ಳುತ್ತಾನೋ ಅಲ್ಲಿಯವರೆಗೆ ಆತ ಅಸ್ಥಿರ: ತನ್ನ ಬಯಕೆಗಳನ್ನು ತೃಪ್ತಿಪಡಿಸುವುದಕ್ಕೆ ಹೊಂದಿಕೊಂಡು. ಅವುಗಳಿಗೆ ಆಳಾಗಿಬಿಡುತ್ತಾನೆ. ಇಲ್ಲಿ ಅವನಿಗಾಗಿ ದುಡಿಯುವವರು ದ್ವೇಷದಿಂದಲೇ ದುಡಿದು. ಈ ಬಗೆಯ ದುಡಿಮೆಯಿಂದ ಮುಕ್ತರಾಗಲು ಅವಕಾಶಕ್ಕಾಗಿ ಕಾಯುತ್ತಾರೆ. ಇದರಿಂದಾಗಿ ಅಂತಹ ಮನುಷ್ಯನಲ್ಲಿ ಅವನಿಂದ ತೃಪ್ತಿಗೊಳಿಸಲು ಸಾಧ್ಯವಾಗದ ಬೇಡಿಕೆಗಳನ್ನು ಬೆಳೆಸುವ. ಅಭ್ಯಾಸಗಳು ಆಳಕ್ಕೆ ಬೇರುಬಿಡುವ ಅಪಾಯ ಯಾವಕಾಲಕ್ಕೂ ಉಳಿಯುತ್ತದೆ.

ನ್ಯಾಯದ ದೃಷ್ಟಿಯಲ್ಲಿ ಇಂತಹ ನಡತೆ ಕೆಟ್ಟದ್ದು. ಏಕೆಂದರೆ ತಾವು ಯಾರಿಗಾಗಿ ದುಡಿಯುತ್ತಾರೋ ಅವರು ಅನುಭವಿಸುವ ಸಂತೋಷದ ನೂರರಲ್ಲೊಂದು ಭಾಗವನ್ನೂ ಕೂಡ ಅನುಭವಿಸಲಾರದ ಜನರ ದುಡಿಮೆಯನ್ನು. ತನ್ನ ಸಂತೋಷಕ್ಕಾಗಿ ಪಡೆಯುವುದು ಸರಿಯಲ್ಲ.

ಕ್ರಿಶ್ಚಿಯನ್ನರ ಪ್ರೀತಿಯ ದೃಷ್ಟಿಯಿಂದ. ಇತರರನ್ನು ಪ್ರೀತಿಸುವ ವ್ಯಕ್ತಿ ತನ್ನ ಸ್ವಸಂತೋಷಕ್ಕಾಗಿ ಅನ್ಯರ ದುಡಿಮೆಯ ಫಲವನ್ನು ಸ್ವೀಕರಿಸುವ ಬದಲು ತನ್ನ ದುಡಿಮೆಯನ್ನೇ ಉಳಿದವರಿಗೆ ನೀಡುತ್ತಾನೆ ಎಂಬುದನ್ನು ಸಾಧಿಸುವುದು ಅನವಶ್ಯಕ.

ಐಹಿಕ ಪ್ರಯೋಜನ. ನ್ಯಾಯ ಹಾಗೂ ಪ್ರೀತಿ ಮುಂತಾದ ನಿಷ್ಠೆಗಳು ಸಂಪೂರ್ಣವಾಗಿ ನಮ್ಮ ನವ ಸಮಾಜದಿಂದ ಕಡೆಗಣಿಸಲ್ಪಟ್ಟಿವೆ. ನಮ್ಮ ಬಯಕೆಗಳನ್ನು ನಿಯಂತ್ರಿಸಿಕೊಳ್ಳಲು ಪ್ರಯತ್ನಿಸಬೇಕೆಂಬ ಉಪಾಧಿ ಋಜುಜೀವನಕ್ಕೆ ಮೊದಲನೆಯದೂ ಅಲ್ಲ, ಕೊನೆಯದೂ ಅಲ್ಲ. ಪೂರ್ಣವಾಗಿ ಅನವಶ್ಯಕವೆಂದು ನಾವು ತಿಳಿದಿದ್ದೇವೆ.

ಇದಕ್ಕೆ ವಿರುದ್ಧವಾಗಿ. ಇಂದಿನ ಅತ್ಯಂತ ಪ್ರಚಲಿತ ಜೀವಂತ ಜೀವನಾದರ್ಶದ ಪ್ರಕಾರ ಪ್ರಗತಿ. ನಾಗರಿಕತೆ, ಸಂಸ್ಕೃತಿ, ಸಮಗ್ರತೆ ಇತ್ಯಾದಿಗಳ ಸಂಕೇತವಾಗಿ ಬಯಕೆಗಳ ಹೆಚ್ಚಳವನ್ನೇ ಅವಶ್ಯ ಸ್ಥಿತಿಯೆಂದು ಪರಿಗಣಿಸಲಾಗಿದೆ. ವಿದ್ಯಾವಂತರೆಂದು ಕರೆಸಿ

ಕೊಳ್ಳುವವರು ಕೂಡ ಸೌಕರ್ಯದ ಎಂದರೆ ನಪುಂಸಕತನ ಅಭ್ಯಾಸಗಳನ್ನು ಸಾಧುವೆಂದಿರಲಿ. ಒಳ್ಳೆಯದೆಂದು ಪರಿಗಣಿಸಿ, ಒಂದು ಗುಣಕ್ಕೆ ಸಮಾನವಾದ ನೈತಿಕ ಅರ್ಹತೆಯನ್ನು ಸೂಚಿಸಿದ್ದಾರೆ.

ಬಯಕೆಗಳು ಹೆಚ್ಚಿದಷ್ಟೂ, ಈ ಬಯಕೆಗಳು ಸ್ಪಷ್ಟವಾದಷ್ಟೂ ಒಳ್ಳೆಯದೆಂದು ತಿಳಿಯಲಾಗುತ್ತಿದೆ.

ಕಳೆದ ಎರಡು ಶತಮಾನಗಳ ವರ್ಣನಾತ್ಮಕ ಕಾವ್ಯದಲ್ಲಿ ಹಾಗೂ ಇನ್ನೂ ಹೆಚ್ಚಾಗಿ ಕಾದಂಬರಿಗಳಲ್ಲಿ ಈ ವಿಚಾರವನ್ನು ಸಮರ್ಥಿಸಲಾಗಿದೆ.

ಗುಣಾದರ್ಶಗಳನ್ನು ಪ್ರತಿನಿಧಿಸುವ ನಾಯಕ. ನಾಯಕಿಯರನ್ನು ಹೇಗೆ ಚಿತ್ರಿಸಲಾಗಿದೆ.?

Childe Harold ನಿಂದ ಹಿಡಿದು ಇತ್ತೀಚಿನ Fenillet, Trollope ಅಥವಾ Maupassantನ ನಾಯಕರವರೆಗೆ ಕೆಲವು ಗಹನವಾದದ್ದನ್ನು ಶ್ರೇಷ್ಠವಾದುದನ್ನು ಪ್ರತಿನಿಧಿಸುವ ಮನುಷ್ಯರು. ಬೇರೆಯವರಿಗೆ ಉಪಯೋಗವಾದ ಏನನ್ನೂ ಮಾಡದ. ಸುಖಾಸಕ್ತಿಯಲ್ಲಿ ಸಾವಿರಾರು ಜನರ ದುಡಿಮೆಯನ್ನು ನುಂಗುತ್ತಾ ಬದುಕುವ ಹೊಣೆಗೇಡಿ ಸೋಮಾರಿಗಳು. ಒಂದು ತರದಲ್ಲಿ ಪತ್ನಿಯರೂ, ಇನ್ನೊಂದು ಬಗೆಯಲ್ಲಿ ಈ ಪುರುಷರನ್ನೂ ಉಲ್ಲಾಸಗೊಳಿಸುವ ಸಾಧನಗಳೂ ಆದ ನಾಯಕಿಯರು ತಾವೇ ಸೋಮಾರಿಗಳಾಗುವುದರ ಜತೆಗೆ. ಸುಖಕ್ಕಾಗಿ ಅನ್ಯರ ದುಡಿಮೆಯನ್ನು ಸ್ವೀಕರಿಸಲು ಸದಾಕಾಲವೂ ಸಿದ್ಧರಿರುತ್ತಾರೆ.

ಸಾಹಿತ್ಯದಲ್ಲಿ ಆಗಾಗ ನಾವು ಕಾಣಬಹುದಾದ ಪ್ರಾಮಾಣಿಕರಾದ. ಕ್ರಿಯಾಶೀಲ ವ್ಯಕ್ತಿಗಳ ಹಿಡಿಯಷ್ಟು ಪ್ರತಿನಿಧಿಗಳನ್ನು ಕುರಿತು ನಾನು ಹೇಳುತ್ತಿಲ್ಲ. ಸಾಮಾನ್ಯವಾಗಿ ಜನಸಮುದಾಯಕ್ಕೆ ಆದರ್ಶವಾಗಿ ನಿಲ್ಲುವ. ಬಹುಸಂಖ್ಯಾತ ಸ್ತ್ರೀ ಪುರುಷರು ಅನುಕರಿಸುವ ಪಾತ್ರಗಳನ್ನು ಕುರಿತು ನಾನು ಹೇಳುತ್ತಿದ್ದೇನೆ. ನಾನು ಕಾದಂಬರಿಗಳನ್ನು ಬರೆದಾಗ. (ಆಗ ವಿವರಿಸಲು ಅಸಾಧ್ಯವಾಗಿದ್ದ) ಎದುರಿಸಿದ ಕಷ್ಟ ನೆನಪಿಗೆ ಬರುತ್ತದೆ: ನಾನು ಯಾವುದರೊಡನೆ ಹೋರಾಡಿದೆನೋ ಆ ಕಷ್ಟವನ್ನು, ನಿಜವಾದ ನೈತಿಕ ಸೌಂದರ್ಯದ ಕಿಂಚಿತ್ತು ಕಲ್ಪನೆಯನ್ನಾದರೂ ಹೊಂದಿದ ಎಲ್ಲ ಕಾದಂಬರಿಕಾರರೂ. ಮೇಲುವರ್ಗದ ಒಂದು ಪಾತ್ರವನ್ನು ಒಳ್ಳೆಯದೂ ದಯಾಶೀಲವೂ ಆಗಿರುವುದರ ಜೊತೆಗೆ ಬದುಕಿಗೆ ನಿಷ್ಠವೂ ಆಗಿರುವಂತೆ ಚಿತ್ರಿಸುವಲ್ಲಿ ಎದುರಿಸುತ್ತಾರೆಂದು ನಾನು ಭಾವಿಸುತ್ತೇನೆ. ಬದುಕಿಗೆ ನಿಷ್ಠವಾಗಿರುವಂತಿರಬೇಕಾದರೆ. ಮೇಲುವರ್ಗದ. ವಿದ್ಯಾವಂತ ಗಂಡಸು ಇಲ್ಲವೇ ಹೆಂಗಸಿನ ವರ್ಣನೆ ಅವರನ್ನು ಸೂಕ್ತವಾದ ಆವರಣದಲ್ಲಿ ಎಂದರೆ ಸುಖ. ಸೋಮಾರಿತನ. ತೀವ್ರವಾದ ಬಯಕೆ ಇವುಗಳ ನಡುವೆ. ಇರಿಸಬೇಕು.

ನೈತಿಕ ದೃಷ್ಟಿಯಿಂದ ಅಂತಹ ವ್ಯಕ್ತಿ ನಿಜವಾಗಿಯೂ ಆಕ್ಷೇಪಾರ್ಹ ಆದರೆ ಈ ವ್ಯಕ್ತಿ ಆಕರ್ಷಕನಾಗಿ ತೋರುವಂತೆ ಚಿತ್ರಿತವಾಗುವುದು ಅವಶ್ಯಕ. ಹಾಗೇ ಕಾದಂಬರಿಕಾರರೂ ಪ್ರಯತ್ನಿಸಿದ್ದಾರೆ. ನಾನೂ ಯತ್ನಿಸಿದ್ದೇನೆ. ಅಲ್ಲದೆ. ಆಶ್ಚರ್ಯದ ಮಾತೆಂದರೆ ಹೀಗೆ ಒಬ್ಬ ಅನೀತಿವಂತ ವ್ಯಭಿಚಾರಿಯ ಕೊಲೆಗಾರನ (ದ್ವಂದ್ವಯುದ್ಧ ಪ್ರವೀಣ ಅಥವಾ ಸೈನಿಕ). ಸಂಪೂರ್ಣವಾಗಿ ನಿರುಪಯೋಗಿಯಾಗಿ. ಸೋಮಾರಿತನದಲ್ಲಿ ಮುಳುಗಿ ಶೋಕಿಮಾಡುವ ವಿದೂಷಕನ ಪ್ರತಿನಿಧಿಸುವಿಕೆ ಆಕರ್ಷವಾಗಿ ತೋರುವಂತೆ ಮಾಡುವುದಕ್ಕೆ, ಕಲೆಗಾರಿಕೆಯಾಗಲೀ ಪ್ರಯತ್ನವಾಗಲೀ ಬೇಕಾಗಿಲ್ಲ. ಈ ಕಾದಂಬರಿಯ ಓದುಗರೂ ಕೂಡ ಬಹಳ ಪಾಲು ಇಂತಹ ಮನುಷ್ಯರೇ ಆಗಿರುವುದರಿಂದ. ಈ Childe Harold ಗಳನ್ನು Onegins, Messieurs de Camors[1] ಇತ್ಯಾದಿಗಳನ್ನು ಶ್ರೇಷ್ಠವ್ಯಕ್ತಿಗಳೆಂದು ಉಸಿರೆತ್ತದೆ ಸ್ವೀಕರಿಸುತ್ತಾರೆ.

## 5

ನಮ್ಮ ಕಾಲದ ಜನರು ನಿಜವಾಗಿಯೂ ಬರ್ಬರರ ಆತ್ಮನಿಗ್ರಹ ಮತ್ತು ಕ್ರಿಶ್ಚಿಯನ್ನರ ಸ್ವಾರ್ಥತ್ಯಾಗಗಳನ್ನು ಒಳ್ಳೆಯ ಹಾಗೂ ಅ[illegible]ಗುಣಗಳೆಂದು ಸ್ವೀಕರಿಸದೇ, ಅವರ ಬದಲು ಆಸೆಗಳ ಪೂರೈಕೆಯನ್ನೇ ಸೂಕ್ತವೆಂದೂ. ಒಳ್ಳೆಯದೆಂದೂ ತಿಳಿಯುತ್ತಾರೆನ್ನುವುದಕ್ಕೆ ನಮ್ಮ ಸಮಾಜದ ಬಹುಪಾಲು ಮಕ್ಕಳಿಗೆ ನೀಡಲಾಗುವ ಶಿಕ್ಷಣದಲ್ಲಿ ಬಲವಾದ ಸಮರ್ಥನೆ ಸಿಗುತ್ತದೆ. ಬರ್ಬರರಲ್ಲಿಯಂತೆ ಅವರಿಗೆ ಆತ್ಮನಿಗ್ರಹವನ್ನಾಗಲೀ ಕ್ರಿಶ್ಚಿಯನ್ನರಿಗೆ ಸೂಕ್ತವಾದ ಸ್ವಾರ್ಥತ್ಯಾಗವನ್ನಾಗಲೀ ಕಲಿಸುವುದಿಲ್ಲವೆಂಬುದಿರಲಿ. ಅವರ ಬದಲು ಗೊತ್ತಿದ್ದಂತೆಯೇ ನಪುಂಸಕತ್ವದ ಅಭ್ಯಾಸಗಳು. ದೈಹಿಕ ಸೋಮಾರಿತನ ಹಾಗೂ ಸುಖಾಸಕ್ತಿ ಇವನ್ನು ಅವರಲ್ಲಿ ರೂಢಿಸಲಾಗುತ್ತದೆ.

ನಾನು ಇಂತಹ ಒಂದು ರಮ್ಯ ಕಥೆಯನ್ನು ಬರೆಯಬೇಕೆಂದು ಬಹು ಕಾಲದಿಂದಲೂ ಇಚ್ಛೆಪಟ್ಟಿದ್ದೇನೆ. ಒಬ್ಬಳು ಹೆಂಗಸು. ತನಗೆ ನೋವನ್ನುಂಟುಮಾಡಿದ ಒಬ್ಬನ ಮೇಲೆ ಸೇಡುತೀರಿಸಿಕೊಳ್ಳುವ ಸಲುವಾಗಿ. ಅವನ ಮಗುವನ್ನು ಹೊತ್ತುಕೊಂಡು ಹೋಗಿ ಒಬ್ಬ ಮಂತ್ರವಾದಿಯ ಬಳಿಗೆ ಬಂದು. ತನ್ನ ಶತ್ರುವಿನ ಒಂದೇ ಕುಡಿಯಾದ ಈ, ಮಗುವಿನ ಮೇಲೆ ತನ್ನ ಸೇಡನ್ನು ಕ್ರೂರವಾಗಿ ತೀರಿಸಿಕೊಳ್ಳುವ ಬಗೆಯನ್ನು ಕೇಳುತ್ತಾಳೆ. ಆ ಮಂತ್ರವಾದಿ. ತಾನು ಹೇಳುವ ಜಾಗಕ್ಕೆ ಆ ಮಗುವನ್ನು ಒಯ್ಯಬೇಕೆಂದು, ಅದರಿಂದ ಭಯಂಕರವಾದ ರೀತಿಯಲ್ಲಿ ಸೇಡನ್ನು ತೀರಿಸಿದಂತಾಗುವುದೆಂದು ಭರವಸೆ ನೀಡುತ್ತಾನೆ. ಆ ದುರುಳ ಹೆಂಗಸು ಅವನ ಸೂಚನೆಯನ್ನು ಅನುಸರಿಸುತ್ತಾಳೆ. ಆ ಮಗುವಿನ ಮೇಲೆ ಒಂದು ಕಣ್ಣಿಟ್ಟು ಗಮನಿಸುತ್ತಿರುವಾಗ, ಅದನ್ನು ಒಬ್ಬ

---

1 Onegin ಎಂಬಾತ ಪುಷ್ಕಿನ್‌ನ ಪ್ರಖ್ಯಾತ ರಷಿಯನ್ ಕವನದ ನಾಯಕ.

M.de Camors ಎಂಬಾತ Oclave Fenilletನ ಫ್ರೆಂಚ್ ಕಾದಂಬರಿಯ ನಾಯಕ.

ಐಶ್ವರ್ಯವಂತ. ಅಪುತ್ರಕ ವ್ಯಕ್ತಿಯೊಬ್ಬ ದತ್ತವಾಗಿ ಪಡೆಯುವುದನ್ನು ಕಂಡು ಆಶ್ಚರ್ಯಪಡುತ್ತಾಳೆ. ಆವಳು ಮಂತ್ರವಾದಿಯ ಬಳಿಗೆ ಓಡಿರುಗಿ ಅವನನ್ನು ತೆಗೆದಾಗ ಆತ ಕಾಯ್ದು ನೋಡುವಂತೆ ಹೇಳುತ್ತಾನೆ. ಆ ಮಗು ಲೋಲುಪತೆ ಹಾಗೂ ನಪುಂಸಕತನಗಳಲ್ಲಿ ಬೆಳೆಯುತ್ತದೆ. ಆ ಹೆಂಗಸು ಗೊಂದಲಕ್ಕೆ ಒಳಗಾಗುತ್ತಾಳೆ; ಆಗ ಮತ್ತೆ ಆ ಮಂತ್ರವಾದಿ ಆಕೆಗೆ ಕಾಯ್ದು ನೋಡಲು ಹೇಳುತ್ತಾನೆ. ದಿನಕಳೆದಂತೆ ಆ ದುರುಳ ಹೆಂಗಸು ತೃಪ್ತಳಾಗುತ್ತಾಳೆ. ಅಲ್ಲದೆ ತನ್ನ ಬಲಿಯ ಸ್ಥಿತಿಗೆ ಮರುಗುವಂತಹ ಕಾಲವೂ ಬಂತು. ಆತ ನಪುಂಸಕತೆ, ಐಶ್ವರ್ಯದ ಅನೈತಿಕತೆಗಳಲ್ಲಿ ಬೆಳೆಯುತ್ತಾನೆ. ಇದರಿಂದಾಗಿ ಅವನ ಒಳ್ಳೆಯತನ ನಾಶವಾಗುತ್ತದೆ. ಆಮೇಲೆ ಬಡತನ. ದೈನ್ಯತೆ ಮುಂತಾದ ನೋವುಗಳ ಸರಣಿ ಪ್ರಾರಂಭವಾಗುತ್ತದೆ; ಇವುಗಳಿಗೆ ಆತ ಸೂಕ್ಷ್ಮವೇದಿಯಾಗಿರುತ್ತಾನೆ; ಅಲ್ಲದೆ ಅವುಗಳನ್ನು ನಿವಾರಿಸಿಕೊಳ್ಳುವ ರೀತಿಯನ್ನು ತಿಳಿದಿರುವುದಿಲ್ಲ. ನೀತಿವಂತ ಬದುಕಿಗಾಗಿ ಆಸಕ್ತಿ, ಸುಖಾಸಕ್ತಿ, ಸೋಮಾರಿತನಗಳಿಗೆ ಹೊಂದಿಕೊಂಡ ತನ್ನ ನಪುಂಸಕ ದೇಹದ ದೌರ್ಬಲ್ಯ; ನಿಷ್ಫಲ ಹೋರಾಟ; ಕೆಳಕ್ಕೆ ಮತ್ತೂ ಕೆಳಕ್ಕೆ ಇಳಿತ; ಆಲೋಚನೆಗಳನ್ನು ಮರೆಸಲು ಕುಡಿತ. ಆಮೇಲೆ ಅಪರಾಧ. ಹಾಗೆ ಬುದ್ಧಿವಿಕಲ್ಪ ಅಥವಾ ಆತ್ಮಹತ್ಯೆ.

ನಮ್ಮ ದಿನಗಳಲ್ಲಿ ಸಿರಿವಂತ ಮಕ್ಕಳಿಗೆ ವಿದ್ಯಾಭ್ಯಾಸವನ್ನು ಭಯಮಿಶ್ರಿತವಲ್ಲದಂತಹ ರೀತಿಯಲ್ಲಿ ಗಮನಿಸುವುದು ಸಾಧ್ಯವಿಲ್ಲ.

ಆ ಮಗುವಿನಲ್ಲಿ, ಅವನ ತಂದೆತಾಯಿಗಳಿಂದ, ಅದರಲ್ಲೂ ತಾಯಿಯಿಂದ, ತುಂಬಲ್ಪಡುತ್ತಿರುವ ದುರ್ಗುಣಗಳನ್ನು, ತಪ್ಪುಗಳನ್ನು, ಹಾಗೆ ಯೋಚಿಸಿದರೆ, ಅತ್ಯಂತ ಕ್ರೂರನಾದ ಶತ್ರು ಮಾತ್ರ ಆ ಮಗುವಿಗೆ ರೂಢವನ್ನಾಗಿಸಲು ಯೋಚಿಸಬಲ್ಲ.

ತಮ್ಮ ತಂದೆತಾಯಿಗಳಿಂದಾಗಿ ಇಷ್ಟು ಎಚ್ಚರಿಕೆಯಿಂದ ಹಾನಿಯನ್ನು ಹೊಂದುತ್ತಿರುವ ಈ ಮಕ್ಕಳ ಮನಸ್ಸಿನೊಳಗೆ ಆಗುತ್ತಿರುವುದನ್ನು ಯಾರಾದರೂ ಗ್ರಹಿಸುವುದಕ್ಕೆ ಸಾಧ್ಯವಾದರೆ ಆಗ ಈ ಪರಿಸ್ಥಿತಿಯಿಂದ, ಅದರಲ್ಲೂ ಇವರ ಫಲಿತಾಂಶದಿಂದ ದಂಗು ಬಡಿಯುತ್ತದೆ. ನಪುಂಸಕ ಅಭ್ಯಾಸಗಳನ್ನು, ಅವುಗಳ ನೈತಿಕ ಹೊಣೆಯನ್ನು ಅರಿಯುವ ಮೊದಲೇ ಮಕ್ಕಳಲ್ಲಿ ಬೆಳೆಸಲಾಗುತ್ತದೆ. ತಾಳ್ಮೆ, ಆತ್ಮನಿಗ್ರಹಗಳ ಅಭ್ಯಾಸವನ್ನು ಕಡೆಗಣಿಸಲಾಗಿದೆಯಷ್ಟೇ ಅಲ್ಲದೆ, ಸ್ಪಾರ್ಟಾದ ಹಾಗೂ ಸಾಮಾನ್ಯವಾಗಿ ಪ್ರಾಚೀನ ವಿದ್ಯಾಭ್ಯಾಸ ಕ್ರಮಕ್ಕೆ ವಿರುದ್ಧವಾಗಿ ಈ ಗುಣಗಳನ್ನು ದುರ್ಬಲಗೊಳಿಸಲಾಗುತ್ತಿದೆ. ಮನುಷ್ಯನಿಗೆ ದುಡಿಯಲು, ಹಾಗೂ ಫಲಪ್ರದ ದುಡಿಮೆಯ ಗುಣಗಳಾದ ಮನಸ್ಸಿನ ಏಕಾಗ್ರತೆ, ಶ್ರಮವನ್ನು ತಾಳಿಕೊಳ್ಳುವಿಕೆ, ಶ್ರದ್ಧೆ, ಉತ್ಸಾಹ, ನಾಶವಾದುದನ್ನು ಮತ್ತೆ ನಿರ್ಮಿಸುವುದು, ಆಯಾಸವನ್ನು ಸಹಿಸುವುದು, ಸಾಧನೆಯ ಹರ್ಷ ಇವನ್ನು ಕಲಿಸುವುದಿಲ್ಲ-ವಷ್ಟೇ ಅಲ್ಲ; ಆತನಲ್ಲಿ ಸೋಮಾರಿತನ, ಶ್ರಮದ ಫಲಗಳ ಬಗ್ಗೆ ತಿರಸ್ಕಾರಗಳು ರೂಢ

ವಾಗುವಂತೆ ಮಾಡಲಾಗುತ್ತದೆ: ಹಾಳುಮಾಡಲು. ಎಸೆಯಲು, ತನಗೆ ಇಷ್ಟಬಂದದ್ದನ್ನೆಲ್ಲ
ವನ್ನು ಅದನ್ನು ಹೇಗೆ ತಯಾರಿಸಲಾಗಿದೆ ಎಂಬುದನ್ನು ಕಿಂಚಿತ್ತೂ ಯೋಚಿಸದೆ.
ಹಣಕೊಟ್ಟು ಪಡೆಯುವುದನ್ನು ಕಲಿಸಲಾಗುತ್ತದೆ. ಎಲ್ಲ ಗುಣಗಳಿಗೂ ಪ್ರಾಥಮಿಕ
ಅವಶ್ಯಕತೆಯಾದ ತರ್ಕಶೀಲತೆಯನ್ನು ಬೆಳೆಸಿಕೊಳ್ಳುವ ಅವಕಾಶದಿಂದ ವ್ಯಕ್ತಿಯನ್ನೇ
ವಂಚಿಸಿ ದೊಡ್ಡ ಗುಣಗಳಾದ ನ್ಯಾಯ, ಮನುಷ್ಯನ ಕರ್ತವ್ಯ ಪ್ರೀತಿ ಮುಂತಾದವುಗಳನ್ನು
ಬೋಧಿಸುವ. ಎತ್ತಿಹಿಡಿಯುವ ಜಗತ್ತಿನಲ್ಲಿ ಬಿಡಲಾಗುತ್ತಿದೆ.

ಪಾಮಾಣಿಕವಾದ ಒಳ್ಳೆಯತನ ಹಾಗೂ ಒಳ್ಳೆಯದೆಂದು ನಂಬಲಾಗಿರುವುದರ
ಮಧ್ಯೆ ಇರುವ ವ್ಯತ್ಯಾಸವನ್ನು ಗುರುತಿಸಲಾಗದ, ಅಲ್ಲದೆ ಇವೆರಡರ ನಡುವೆ ಇರುವ
ಭ್ರಮೆಯಲ್ಲೇ ತೃಪ್ತವಾಗುವ. ನೈತಿಕವಾಗಿ ದುರ್ಬಲವಾದ. ಅಸ್ಪಷ್ಟವಾದ ಮನೋಭಾವ
ವನ್ನಾದರೂ ಯುವಕರಲ್ಲಿ ಬೆಳೆಸಿದರೆ ಆದೀತು. ಹೀಗಾದಾಗ ತೋರಿಕೆಗೆ ಎಲ್ಲವೂ
ಸರಿಯಾಗಿಯೇ ನಡೆಯುತ್ತದೆ. ಆ ಮನುಷ್ಯ ತನ್ನ ಅಂತಿಮ ಕಾಲದವರೆಗೂ ಜಾಗೃತ
ಗೊಳ್ಳದ ನೈತಿಕ ಪ್ರಜ್ಞೆಯೊಂದಿಗೆ ಸ್ವಲ್ಪಕಾಲವಾದರೂ ಹಾಯಾಗಿ ಬದುಕುತ್ತಾನೆ.

ಆದರೆ ಅದು ಯಾವಾಗಲೂ ಅದರಲ್ಲೂ ಇತ್ತೀಚಿಗೆ. ಹಾಗಲ್ಲ ಈಗ ಬದುಕಿನ
ಅನೈತಿಕತೆಯ ಅರಿವು ಉಸಿರಿನಲ್ಲಿ ತುಂಬಿ. ಹೃದಯವನ್ನು ಛೇದಿಸುತ್ತದೆ. ಆಗಾಗ
ಎಂದಿಗಿಂತ ಹೆಚ್ಚಾಗಿ ಪ್ರಾಮಾಣಿಕವಾದ, ಭ್ರಮಾದೂರವಾದ ನೈತಿಕ ಜಾಗೃತಿಗಾಗಿ
ತಹತಹವುಂಟಾಗುತ್ತದೆ: ಆಮೇಲೆ ಎಲ್ಲೋ ಕೆಲವು ಬಾರಿ ಮಾತ್ರ ನೈತಿಕ ಭಾವನೆಗಳಿಗೆ
ಜಯ ತರುವ ತಾಕಲಾಟವೊಂದು ನೋವನ್ನು ಹೊತ್ತು ಒಳಗೆ ಪ್ರಾರಂಭವಾಗುತ್ತದೆ.

ಬೇರುಗಳಿಂದಲೇ ಪುನರ್ನಿರ್ಮಿಸಬೇಕೆನಿಸುವ ಮಟ್ಟಿಗೆ ವ್ಯಕ್ತಿಗೆ ತನ್ನ ಬದುಕು ಅಸಹ್ಯ
ವಾಗಿ ತೋರಿಬಂದು, ಹಾಗೆ ಮಾಡಲು ಯತ್ನಿಸುತ್ತಾನೆ: ಆದರೆ ಇದೇ ಬಗೆಯ ಹೋರಾಟ
ವನ್ನು ನಡೆಸಿ ಹೇಳ ಹೆಸರಿಲ್ಲದವರಾದ ಹಲವರು ಅವನನ್ನು ಸುತ್ತುವರೆದು, ಸಾಧ್ಯವಿರುವ
ಎಲ್ಲ ದಾರಿಗಳಿಂದಲೂ ಈ ಸುಧಾರಣೆ ಅನವಶ್ಯಕವೆಂದು, ಒಳ್ಳೆಯತನವೆಂಬುದು ಆತ್ಮ
ನಿಗ್ರಹ ಹಾಗೂ ಸ್ವಾರ್ಥತ್ಯಾಗಗಳನ್ನು ಖಂಡಿತವಾಗಿಯೂ ಅವಲಂಬಿಸಿಲ್ಲವೆಂದು,
ಹೊಟ್ಟೆಬಾಕತನ, ಲೋಲುಪತೆ, ಸೋಮಾರಿತನ ಇಷ್ಟೇಕೆ ವ್ಯಭಿಚಾರಗಳಿಗೆ ಬಲಿಯಾಗಿ
ದ್ದರೂ ಒಬ್ಬ ಶುದ್ಧಾಂಗವಾಗಿ ಒಳ್ಳೆಯ, ಚೈತನ್ಯವಂತ ಮನುಷ್ಯನಾಗಿರಲು ಸಾಧ್ಯವೆಂದು
ಒಪ್ಪಿಸಲು ಅವರು ಶ್ರಮಿಸುತ್ತಾರೆ. ಹಲವಾರು ಸಂದರ್ಭಗಳಲ್ಲಿ ಹೋರಾಟ ದುಃಖ
ದಾಯಕವಾಗಿ ಕೊನೆಗೊಳ್ಳುತ್ತದೆ. ಅವನ ದೌರ್ಬಲ್ಯವೇ ಮೇಲಾಗಿ, ಸಾಮಾನ್ಯ
ಅಭಿಪ್ರಾಯಕ್ಕೆ ಕಟ್ಟುಬಿದ್ದು. ಅಂತರಂಗದ ಕೂಗನ್ನು ಅಡಗಿಸಿ, ತನ್ನನ್ನು ಸಮರ್ಥಿಸಿ
ಕೊಳ್ಳಲು ತರ್ಕವನ್ನು ತಲೆಕೆಳಗುಮಾಡಿ, ಮುಕ್ತಿಯಲ್ಲಿ, ಸ್ಯಾಕ್ರಿಮೆಂಟ್‌ನಲ್ಲಿ ನಂಬಿಕೆ
ಯನ್ನಿಡುವುದರಿಂದ, ವಿಜ್ಞಾನ, ದೇಶ, ಕಲೆ ಇವುಗಳಿಗೆ ಸೇವೆ ಸಲ್ಲಿಸುವುದರ ಮೂಲಕ
ಈ ಪರಿಸ್ಥಿತಿಯಿಂದ ಮುಕ್ತನಾಗಬಹುದೆಂಬ ನಂಬಿಕೆಯೊಂದಿಗೆ ಅದೇ ಹಳೆಯ ಬದುಕಿಗೆ

ಹಿಂತಿರುಗುತ್ತಾನೆ. ಇಲ್ಲವೇ ಏದ್ವಾಡಿ. ನೋವನ್ನನುಭವಿಸಿ ಕೊನೆಗೆ ಮತಿಭ್ರಾಂತನಾಗುತ್ತಾನೆ ಅಥವಾ ಗುಂಡಿಟ್ಟುಕೊಳ್ಳುತ್ತಾನೆ.

ಸಾವಿರಾರು ವರ್ಷಗಳ ಹಿಂದೆ ಹೇಗಿತ್ತೆಂಬುದು ಒಬ್ಬನಿಗೆ ತಿಳಿಯುವುದು ಅಸಾಧ್ಯವಾದಂತೆ ತನ್ನನ್ನು ಆವರಿಸಿರುವ ಆಮಿಷಗಳ ನಡುವೆ ಋಜು ಜೀವನವನ್ನು ನಡೆಸುವ ಮೊದಲು ಅರಿವ ಬದುಕನ್ನು ನಿಲ್ಲಿಸಬೇಕೆಂಬ. ಶ್ರೇಷ್ಠವಾದ ಗುಣಗಳನ್ನು ಗಳಿಸುವ ಮೊದಲು ಬರ್ಬರರು ಆತ್ಮನಿಗ್ರಹವೆಂದು, ಕ್ರಿಶ್ಚಿಯನ್ನರು ಸ್ವಾರ್ಥತ್ಯಾಗವೆಂದು ಕರೆವ ಗುಣವನ್ನು ಗಳಿಸಿಕೊಳ್ಳಬೇಕೆಂಬ ಪ್ರಾಥಮಿಕ ಸತ್ಯ ಎಲ್ಲಿ ತರ್ಕಶೀಲ ವ್ಯಕ್ತಿಗಳಿಗೂ ತಿಳಿಯುವುದಿಲ್ಲ. ಹಾಗಾಗಿ ಈ ಪ್ರಾಥಮಿಕ ಗುಣವನ್ನು ಕ್ರಮೇಣ ಪ್ರಯತ್ನದ ಮೂಲಕ ಗಳಿಸುವುದೂ ದೂರದ ಮಾತು.

6

1840ರ ಸುಮಾರಿನಲ್ಲಿದ್ದ ನಮ್ಮ ಒಬ್ಬ ಶ್ರೇಷ್ಠ ವಿದ್ಯಾವಂತ, ಪ್ರಗತಿಪರ ವ್ಯಕ್ತಿಯಾದ, ದೇಶಭ್ರಷ್ಟನಾದ Ogaryevನ, ಇನ್ನೊಬ್ಬ ವಿದ್ಯಾವಂತ ಪ್ರತಿಭಾವಂತ ವ್ಯಕ್ತಿ Herzenಗೆ ಬರೆದ ಪತ್ರಗಳನ್ನು ನಾನು ಓದುತ್ತಿದ್ದೆ. ಈ ಪತ್ರಗಳಲ್ಲಿ ಆತ ತನ್ನ ಪ್ರಾಮಾಣಿಕವಾದ ಆಲೋಚನೆಗಳನ್ನು ವ್ಯಕ್ತಪಡಿಸಿರುವುದನ್ನು ಗಮನಿಸದೇ ಇರುವುದು ಸಾಧ್ಯವಿಲ್ಲ, ಅಲ್ಲದೆ ಒಬ್ಬ ಯುವಕನಿಗೆ ಸಹಜವಾದ ರೀತಿಯಲ್ಲಿ ಆತ ತನ್ನ ಗೆಳೆಯನ ಎದುರಿನಲ್ಲಿ ಎಲ್ಲವನ್ನೂ ಬಿಚ್ಚಿಡುತ್ತಾನೆ. ಸಮಗ್ರ ವ್ಯಕ್ತಿತ್ವದ ನಿರ್ಮಿತಿ, ಪವಿತ್ರ ಸ್ನೇಹ, ವಿಜ್ಞಾನದ ಸೇವೆ. ಮಾನವ ಜನಾಂಗ ಹೀಗೆ ಇಂತಹ ವಿಚಾರಗಳನ್ನು ಕುರಿತು ಮಾತನಾಡುತ್ತಾನೆ. ಕೆಲವು ವೇಳೆ ಆತ ಸ್ವಸ್ಥವಾಗಿಯೇ ಆಗಾಗ 'ಅಸ್ತವ್ಯಸ್ತ ಸ್ಥಿತಿಯಲ್ಲಿ ಮನೆಗೆ ಹಿಂತಿರುಗುವುದರಿಂದಲೋ ಇಲ್ಲವೇ ಯಾವಳೋ ಬೆಲೆವೆಣ್ಣಾದರೂ, ಪ್ರೀತಿಯುಳ್ಳವಳ ಜೊತೆ ಗಂಟೆಗಟ್ಟಲೆ ಮಾಯವಾಗುವುದರಿಂದಲೋ.........' (ಅವನದೇ ಮಾತು) ತನ್ನ ಜೀವನಸಂಗಾತಿಗೆ ಕಿರಿಕಿರಿಯನ್ನುಂಟುಮಾಡುವುದಾಗಿ ಬರೆಯುತ್ತಾನೆ.

ಈ ದಯಾಶೀಲ, ಪ್ರತಿಭಾವಂತ, ಉತ್ತಮ ಶಿಕ್ಷಣಪಡೆದ ವ್ಯಕ್ತಿಗೆ, ವಿವಾಹಿತನಾಗಿ ಪತ್ನಿಯ ಹೆರಿಗೆಯನ್ನು ಕಾಯುತ್ತಿರುವ ತಾನು (ಮುಂದಿನ ಪತ್ರದಲ್ಲಿ ತನ್ನ ಪತ್ನಿ ಮಗುವೊಂದನ್ನು ಹಡೆದುದನ್ನು ಬರೆದಿದ್ದಾನೆ) ಕುಡಿದು ಮನೆಗೆ ಬಂದದ್ದರಲ್ಲಿ, ವೇಶ್ಯೆಯೊಬ್ಬಳೊಡನೆ ಮಾಯವಾದುದರಲ್ಲಿ ಏನಾದರೂ ಆಕ್ಷೇಪಾರ್ಹವಿದೆಯೆಂಬುದು. ಅಸ್ಪಷ್ಟವಾಗಿಯೂ ಕೂಡ ಇರಲಿಲ್ಲವೆಂಬುದು ಖಂಡಿತ. ತಾನು ನಿಜವಾಗಿ ಹೋರಾಟ ಪ್ರಾರಂಭಿಸಿ, ಕೊಂಚಮಟ್ಟಿಗಾದರೂ ಕುಡಿತ, ವ್ಯಭಿಚಾರದತ್ತ ತನಗಿರುವ ಒಲವನ್ನು ನಿಗ್ರಹಿಸಿಕೊಳ್ಳುವ ಹೊರತು, ಸ್ನೇಹ, ಪ್ರೀತಿಯ ಬಗ್ಗೆ ಯೋಚಿಸುವುದಿರಲಿ, ಯಾರಿಗಾದರೂ ಏನನ್ನಾದರೂ ಮಾಡಬಹುದೆಂದುಕೊಳ್ಳುವುದೂ ಸಾಧ್ಯವಿಲ್ಲವೆಂಬುದು ಈ ಮನುಷ್ಯನ ತಲೆಗೆ

ಹೋಗಲೇ ಇಲ್ಲ. ಆತ ಈ ದುರ್ಗುಣಗಳ ವಿರುದ್ಧ ಹೋರಾಡಲಿಲ್ಲವಷ್ಟೇ ಅಲ್ಲ – ಸ್ಪಷ್ಟವಿದ್ದಂತೆ ಅವುಗಳಲ್ಲಿ ಏನೋ ಖುಷಿಯಿದೆ ಎಂದುಕೊಂಡು, ಅವುಗಳು ಸಮಗ್ರತೆಯ ಬೆಳವಣಿಗೆಯನ್ನು ಕೊಂಚವೂ ತಡೆಯುವುದಿಲ್ಲವೆಂದು ಭಾವಿಸಿದ: ಹಾಗಾಗಿಯೇ ತಾನು ಶುಭ್ರವಾಗಿ ಕಾಣಬೇಕಾದ ಗಳಿಯನಿಂದ ಅವೆಲ್ಲವನ್ನು ಮುಚ್ಚಿಡುವ ಬದಲು, ಬಿಚ್ಚಿಡುತ್ತಾನೆ.

ಇದು ಅರ್ಧಶತಮಾನದ ಹಿಂದಿನ ಕಥೆ. ನಾನು ಅಂತವರ ಸಮಕಾಲೀನ, ಅವರಿಬ್ಬರನ್ನು, ಅದೇ ಬಗೆಯವರನ್ನು. ಅದೇ ಸಂಪ್ರದಾಯದಲ್ಲಿ ಶಿಕ್ಷಣ ಪಡೆದವರನ್ನು ನಾನು ಬಲ್ಲೆ. ಅವರೆಲ್ಲರ ಬದುಕಿನಲ್ಲಿ ಎದ್ದು ಕಾಣುವಂತೆ ಹೊಂದಾಣಿಕೆಯ ಕೊರತೆಯಿತ್ತು. ಒಳ್ಳೆಯದಕ್ಕಾಗಿ ಗಾಢವಾದ, ಪ್ರಾಮಾಣಿಕವಾದ ಆಸಕ್ತಿ ಇರುವುದರ ಜೊತೆಗೆ, ಶುಚಿ ಜೀವನವನ್ನು ನಡೆಸುವಲ್ಲಿ ದೊಡ್ಡದನ್ನು ಸಾಧಿಸುವಲ್ಲಿ ಅಡ್ಡಗಾಲು ಹಾಕಬಲ್ಲುದೆಂದು ಅವರು ತಿಳಿಯದೇ ಹೋದ ಸ್ವಂತ ಬಯಕೆಗಳ ಸಡಿಲತನವೂ ಇತ್ತು. ಮಿದಿಯದ ಹಿಟ್ಟನ್ನು, ಬಿಸಿಮಾಡದ ಒಲೆಗಳಲ್ಲಿಟ್ಟು ಬ್ರೆಡ್ ತಯಾರಿಸಬಹುದೆಂದು ಅವರು ನಂಬಿದರು. ಆಮೇಲೆ ವರ್ಷಕಳೆದಂತೆಲ್ಲಾ ಬ್ರೆಡ್ ಆಗದೇ ಹೋದುದನ್ನು, ಎಂದರೆ ಒಳ್ಳೆಯದೇನೂ ತಮ್ಮ ಬದುಕಿನಲ್ಲಿ ಬಾರದೇ ಹೋದುದನ್ನು ಗುರುತಿಸಿದ ಅವರು ಎಂತದೋ ವಿಚಿತ್ರ ದುರಂತವೊಂದನ್ನು ಇದರಲ್ಲಿ ಕಂಡರು.

ಅಂತಹ ಬದುಕುಗಳ ದುರಂತ ನಿಜವಾಗಿಯೂ ಗಂಭೀರವಾದುದು. Herzen, Ogaryev ಮತ್ತು ಅವರ ಕಾಲದ ಇತರ ಬದುಕಿನಲ್ಲಿ ಎದ್ದುಕಂಡ ದುರಂತ, ಅದೇ ಅಭಿಪ್ರಾಯಗಳನ್ನು ಹೊಂದಿದ ಇಂದಿನ ಹಲವಾರು ವಿದ್ಯಾವಂತರೆಂದು ಕರೆಯಲಾದವರ ಬದುಕಿನಲ್ಲೂ ಇದೆ. ಒಬ್ಬ ಶುಚಿಯಾದ ಬದುಕನ್ನು ನಡೆಸಲು ಆಶಿಸುತ್ತಾನೆ, ಆದರೆ ಅದಕ್ಕೆ ಅನಿವಾರ್ಯವಾದ ಅನುಕ್ರಮಣಿಕೆ ಮಾತ್ರ ಆವನು ಬದುಕುತ್ತಿರುವ ಸಮಾಜದಲ್ಲಿ ಕಳೆದುಹೋಗಿದೆ. ಐವತ್ತು ವರ್ಷಗಳ ಹಿಂದಿನ Ogaryev, Herzen ಮತ್ತಿತರರಂತೆ, ಎಲ್ಲವಿಧದಲ್ಲೂ ಉಲ್ಲಾಸದಿಂದ ಇರಲು, ತಮ್ಮ ಬಯಕೆಗಳನ್ನು ಪೂರೈಸಿಕೊಳ್ಳಲು, ನಪುಂಸಕರಾಗಿ ಬದುಕುವುದು, ರುಚಿಯಾದ, ಪುಷ್ಟಿದಾಯಕ ಆಹಾರವನ್ನು ತಿನ್ನುವುದು ಶುಚಿಜೀವನವನ್ನು ನಡೆಸದಂತೆ ತಡೆಯುವುದಿಲ್ಲವೆಂದು ಬಹುಸಂಖ್ಯಾತ ಜನರಲ್ಲು ಇಂದು ನಂಬಿಸಲಾಗುತ್ತಿದೆ. ಅವರ ಬದುಕು ಶುಚಿಯಾದುದಾಗುವುದಿಲ್ಲವೆಂಬುದು, ಖಂಡಿತವಾದುದರಿಂದ ಅವರು ನಿರಾಶಾವಾದಕ್ಕೆ ಬಿದ್ದು, 'ಮನುಷ್ಯ ಜೀವನದ ದುರಂತವೇ ಇದು' ಎನ್ನುತ್ತಾರೆ.

ಆಶ್ಚರ್ಯವೆಂದರೆ ಈ ಮನುಷ್ಯರೂ ಕೂಡ, ಮನುಷ್ಯರ ನಡುವೆ ಇರಬೇಕಾದ ಸೌಖ್ಯದ ಹಂಚಿಕೆಯಲ್ಲಿ ಏರುಪೇರಾಗಿದ್ದು, ಈ ಏರುಪೇರು ಕೆಟ್ಟದ್ದೆಂದು ಭಾವಿಸಿ, ಅದನ್ನು ಸರಿಪಡಿಸಲು ಆಶಿಸುವವರಾದರೂ, ತಮ್ಮ ಸ್ವಂತ ಸೌಖ್ಯಗಳ ಹೆಚ್ಚಳಕ್ಕಾಗಿ ಹೋರಾಡು

ವುದನ್ನು ನಿಲ್ಲಿಸುವುದಿಲ್ಲ: ಎಂದರೆ ಸೌಖ್ಯದ ಹಂಚಿಕೆಯು ಏರುಪೇರಿನ ಹೆಚ್ಚಳವನ್ನೇ ಬಯಸುತ್ತಾರೆ. ಹೀಗೆ ನಟಿಸುವ ಇವರು, ಒಂದು ತೋಟದೊಳಗೆ ಮೊದಲು ನುಗ್ಗಿದ ಕೆಲವರು ಬೇಗಬೇಗ ಕೈಗೆ ಸಿಕ್ಕಿದ ಹಣ್ಣುಗಳನ್ನೆಲ್ಲಾ ಕೇಬರಿಸಿಕೊಂಡು, ತಮ್ಮ ಮತ್ತು ನಂತರ ಬಂದವರಲ್ಲಿ ತೋಟದ ಹಣ್ಣಿನ ಹಂಚಿಕೆಯ ಬಗ್ಗೆ ಒಂದು ಸಮಾನ ಸೂತ್ರವಿರಬೇಕೆಂದು ಘೋಷಿಸುತ್ತಲೇ, ತಮ್ಮ ಕೈಗೆ ಸಿಕ್ಕಷ್ಟನ್ನು ದೋಚುವವರನ್ನು ಹೋಲುತ್ತಾರೆ.

## 7

ತಮ್ಮ ಆಸೆಗಳಿಗೆ ಬಲಿಬಿದ್ದು, ಈ ಆಸೆಗಳ ಬದುಕೇ ಉಚಿತವಾದುದೆಂದು ನಂಬಿಕೊಂಡಿದ್ದವರೂ ಕೂಡ, ಒಳ್ಳೆಯದಾದ, ಪ್ರಯೋಜನಕಾರಿಯಾದ, ನ್ಯಾಯಬದ್ಧವಾದ ಹಾಗೂ ಪ್ರೀತಿಪೂರ್ಣವಾದ ಬದುಕನ್ನು ನಡೆಸುವುದು ಸಾಧ್ಯವೆಂಬ ಭ್ರಮೆ ನನ್ನ ದಂಗುಬಡಿಸುತ್ತದೆ ಎಂದರೆ, ನಮ್ಮಕಾಲದ ಜನರು, ಐಶ್ವರ್ಯವಂತ ವರ್ಗಕ್ಕೆ ಸೇರಿದ ನಪುಂಸಕ, ಕಾಮುಕ, ಸೋಮಾರಿ ಹೊಟ್ಟೆಬಾಕರುಗಳು ಒಳ್ಳೆಯ ಜೀವನವನ್ನು ನಡೆಸಿದರೆಂದು ಹೇಳುವುದನ್ನು ಗಮನಿಸುವ ಮುಂದಿನ ಜನಾಂಗದವರು ನಮ್ಮ 'ಒಳ್ಳೆಯ ಬದುಕಿನ ಕಲ್ಪನೆಯನ್ನು ಅರ್ಥಮಾಡಿಕೊಳ್ಳಲಾರರೆಂದೇ ನನ್ನ ಭಾವನೆ. ಕ್ರಿಶ್ಚಿಯನ್ ದೃಷ್ಟಿಕೋನದಿಂದಿರಲಿ, ಅತ್ಯಂತ ಕಡಿಮೆ ಪ್ರಮಾಣದ ನ್ಯಾಯನಿಷ್ಠೆಯನ್ನು ಅಪೇಕ್ಷಿಸುವ ಬರ್ಬರ ದೃಷ್ಟಿಕೋನದಿಂದ. ನಮ್ಮ ಸಿರಿವಂತ ವರ್ಗವನ್ನು ಅಪರ ಸಾಂಪ್ರದಾಯಿಕ ಜೀವನ ದೃಷ್ಟಿಯಿಂದ ದೂರವಿಟ್ಟು ನೋಡುವುದರಿಂದ ಬರ್ಬರ ಜನರ ಮಕ್ಕಳೂ ಕೂಡ ತಮ್ಮ ಆಟಗಳಲ್ಲಿ ನ್ಯಾಯ ಮತ್ತು ಸಮಾನತೆಗಳ ಪ್ರಕಾರ ಯಾವ ನಿಯಮಗಳನ್ನೂ ಮೀರುವುದು ತಪ್ಪೆಂದು ಭಾವಿಸುತ್ತಾರೋ ಅಂತಹ ಸರಳ ನಿಯಮಗಳ ಉಲ್ಲಂಘನೆಯ ನಡುವೆಯೇ ಬದುಕುತ್ತಿರುವ ನಮ್ಮ ಸಿರಿವಂತ ವರ್ಗದ ಜನರಿಗೆ ಋಜು ಜೀವನದ ಬಗ್ಗೆ ಮಾತನಾಡುವುದಕ್ಕೆ ಕೂಡ ಅಧಿಕಾರವಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ನಮ್ಮ ಸಮಾಜದ ಯಾವನಾದರೂ ಒಬ್ಬ, ಒಳ್ಳೆಯ ಬದುಕನ್ನು ಪ್ರಾರಂಭಿಸುವುದಿರಲಿ ಅದಕ್ಕಾಗಿ ಕೊಂಚ ಪ್ರಯತ್ನಗಳನ್ನು ನಡೆಸುವವನಾದರೂ ಕೂಡ ಕೆಟ್ಟಬದುಕನ್ನು ನಡೆಸುವುದನ್ನು ನಿಲ್ಲಿಸಬೇಕು. ತನ್ನನ್ನು ಆವರಿಸಿರುವ ದುಷ್ಟಜೀವನದ ಎಲ್ಲ ಉಪಾಧಿಗಳನ್ನು ನಾಶಮಾಡಬೇಕು.

ಬದುಕಿನ ಎಂದಿನ ರೀತಿಗೆ ವಿರುದ್ಧವಾದ ಯಾವುದೇ ಕೆಲಸ ಕೂಡ ಅಸಹಜವಾಗಿ ಅಸಂಗತವಾಗುವುದರಿಂದ, ಅಂತಹ ಪ್ರಯತ್ನ ಜಂಭಗಾರಿಕೆಯಂತೆ ಕಾಣುತ್ತದೆಯಾಗಿ. ಅದು ಸರಿಯಾದುದಲ್ಲವೆಂದು ವಾದಮಾಡುತ್ತಾ ತಮ್ಮ ಬದುಕನ್ನು ಸುಧಾರಣೆ ಮಾಡಿಕೊಳ್ಳದೇ ಇರುವುದಕ್ಕೆ ವಿನಾಯಿತಿಗಳನ್ನು ಹುಡುಕುವುದನ್ನು ನಾನೆಷ್ಟು ಬಾರಿ ಕೇಳಿಲ್ಲ. ತಮ್ಮ ಕೆಟ್ಟ ಜೀವನವನ್ನು ಬದಲಾಯಿಸಿಕೊಳ್ಳಲು ಜನರು ಪ್ರಯತ್ನಿ

ಸುವುದನ್ನು ತಡೆಯಲೆಂದು ಈ ವಾದವನ್ನು ನಿರೂಪಿಸಲಾಗಿದೆ ಎಂದು ತೋರುತ್ತದೆ. ನಮ್ಮೆಲ್ಲರ ಜೀವನವೂ ನ್ಯಾಯ, ಒಳ್ಳೆಯತನ, ದಯೆಯಿಂದ ಕೂಡಿದ್ದಾಗಿದ್ದರೆ ಆಗ ಹಾಗೂ ಆಗ ಮಾತ್ರ, ಜೀವನದ ಎಂದಿನ ರೀತಿಗೆ ಅನುಗುಣವಾದ ಯಾವುದೋ ಕ್ರಿಯೆ ಕೂಡ ಶುದ್ಧವಾಗಿರಲು ಸಾಧ್ಯ. ಬದುಕು ಅರ್ಧ ಶುಚಿಯಾಗಿದ್ದು ಇನ್ನರ್ಧ ಅಶುಚಿಯಾಗಿದ್ದರೆ ಆಗ ಸಹಜವಾದ ಬದುಕಿನ ರೀತಿಗೆ ಹೊಂದದ ಕೆಲಸ ಒಳ್ಳೆಯದಾಗಿರುವುದಕ್ಕೆ ಎಷ್ಟು ಅವಕಾಶವಿರುತ್ತದೋ ಕೆಟ್ಟದಾಗಿ ಪರಿಣಮಿಸಲೂ ಅಷ್ಟೇ ಅವಕಾಶವಿರುತ್ತದೆ. ನಮ್ಮ ಮೇಲುವರ್ಗದಲ್ಲಿರುವಂತೆ ಬದುಕು ಯಾವಾಗ ಸಂಪೂರ್ಣವಾಗಿ ಕೆಟ್ಟದ್ದೂ, ತಪ್ಪುಹಾದಿ ಹಿಡಿದದ್ದೂ ಆಗಿರುತ್ತದೋ ಆಗ ಎಂದಿನ ಬದುಕಿನ ಪ್ರವಾಹವನ್ನು ವ್ಯಸ್ತಗೊಳಿಸದೇ ಯಾವುದೇ ಒಳ್ಳೆಯ ಕೆಲಸವನ್ನು ಮಾಡಲಾಗುವುದಿಲ್ಲ. ಈ ಪ್ರವಾಹವನ್ನು ವ್ಯಸ್ತಗೊಳಿಸದೆ ಒಂದು ಕೆಟ್ಟ ಕೆಲಸವನ್ನು ಮಾಡಬಹುದೇ ವಿನಃ ಒಳ್ಳೆಯ ಕೆಲಸವನ್ನಲ್ಲ.

'ಚೆನ್ನಾಗಿ' ಬದುಕುವ ನಮ್ಮ ಮೇಲುವರ್ಗದವರ ಪದ್ಧತಿಗೆ ಹೊಂದಿಕೊಂಡ ವ್ಯಕ್ತಿಯೊಬ್ಬ ತಾನು ಮುಳುಗಿರುವ ಕೆಡಕಿನಿಂದ ಹೊರಬಂದ ಹೊರತು ಶುಚಿ ಜೀವನವನ್ನು ನಡೆಸಲಾರ; ಕೆಟ್ಟದ್ದನ್ನು ಮಾಡುವುದನ್ನು ನಿಲ್ಲಿಸುವವರೆಗೂ ಒಳ್ಳೆಯದನ್ನು ಮಾಡಲಾರ. ಸುಖಾಸಕ್ತಿಯಲ್ಲಿ ಲೀನನಾದವನಿಗೆ ಒಳ್ಳೆಯ ಜೀವನ ಅಸಾಧ್ಯ. ತನ್ನ ಬದುಕನ್ನು ಪರಿವರ್ತಿಸಿಕೊಂಡ ಹೊರತು, ಅನುಕ್ರಮದಲ್ಲಿ ತನ್ನೆದುರಿಗೆ ಇರುವ ಮೊದಲ ಕೆಲಸವನ್ನು ಮಾಡಿದ ಹೊರತು ಋಜು ಜೀವನವನ್ನು ನಡೆಸಲು ಆತ ಮಾಡುವ ಪ್ರಯತ್ನಗಳೆಲ್ಲಾ ನಿಷ್ಫಲವಾಗುತ್ತವೆ. ಬರ್ಬರರ ದೃಷ್ಟಿಕೋನದಂತೆ, ಕ್ರಿಶ್ಚಿಯನ್ನರ ದೃಷ್ಟಿಕೋನದಲ್ಲಿ ಕೂಡ ಒಳ್ಳೆಯ ಜೀವನವನ್ನು ಸ್ವಂತದ ಬಗ್ಗೆ ಇರುವ ಮಮತೆ ಮತ್ತು ಇತರರ ಬಗ್ಗೆ ಇರುವ ಮಮತೆಗಳ ಅಕ್ಕಾಚಾರದ ಸಂಬಂಧದ ಮೂಲಕ ಮಾತ್ರ ಗುರುತಿಸಬಹುದು. ತನ್ನ ಬಗ್ಗೆ ಇರಬೇಕಾದ ಎಚ್ಚರ ಮತ್ತು ಇತರರ ದುಡಿಮೆಯಿಂದ ಸ್ವಾರ್ಥಸಾಧನೆಯ ಬಯಕೆಗಳ ಜತೆಗೆ ಸ್ವಂತವನ್ನು ಕುರಿತ ಮೋಹ ಕಡಿಮೆಯಾದಷ್ಟೂ, ಇತರರ ಬಗ್ಗೆ ಆಸಕ್ತಿ ಹಾಗೂ ಅವರಿಗಾಗಿ ದುಡಿಯುವುದರಲ್ಲಿ ಫಲಿತಗೊಳ್ಳುವ, ನೆರೆಯವರನ್ನು ಕುರಿತ ಮಮತೆ ಹೆಚ್ಚಾದಷ್ಟು ಬದುಕು ಒಳ್ಳೆಯದಾಗುತ್ತದೆ.

ಜಗತ್ತಿನ ಎಲ್ಲ ಋಷಿಗಳೂ, ನಿಜವಾದ ಕ್ರಿಶ್ಚಿಯನ್ನರೆಲ್ಲರೂ ಜೀವನದಲ್ಲಿನ ಒಳ್ಳೆಯತನವನ್ನು ಅರ್ಥಮಾಡಿಕೊಂಡಿರುವ ಬಗೆ ಹೀಗೇ ಇದೆ ಹಾಗೂ ಸರಳ ಮನಸ್ಸಿನ ಜನರು ಇಂದೂ ಕೂಡ ಇದೇ ಬಗೆಯಲ್ಲಿ ಅರ್ಥಮಾಡಿಕೊಳ್ಳುತ್ತಾರೆ. ಒಬ್ಬ ಇತರರಿಗೆ ನೀಡುವುದು ಹೆಚ್ಚಾದಷ್ಟೂ ತನಗಾಗಿ ಬಯಸುವುದು ಕಡಿಮೆಯಾದಷ್ಟೂ ಉತ್ತಮನಾಗುತ್ತಾನೆ, ಒಬ್ಬ ಇತರರಿಗೆ ನೀಡುವುದು ಕಡಿಮೆಯಾದಷ್ಟೂ ತನಗಾಗಿ ಬಯಸುವುದು ಹೆಚ್ಚಾದಷ್ಟೂ ಅಧಮನಾಗುತ್ತಾನೆ.

ಇತರರನ್ನು ಹೆಚ್ಚು ಪ್ರೀತಿಸಿದಷ್ಟೂ ಹಾಗೂ ತನ್ನನ್ನು ಪ್ರೀತಿಸಿಕೊಳ್ಳುವುದು ಕಡಿಮೆಯಾದಷ್ಟೂ ಮನುಷ್ಯ ನೈತಿಕವಾಗಿ ಉತ್ತಮನಾಗುತ್ತಾನಷ್ಟೇ ಅಲ್ಲದೆ, ತನ್ನನ್ನು ಪ್ರೀತಿಸಿಕೊಳ್ಳುವುದು ಕಡಿಮೆಯಾದಷ್ಟೂ ಉತ್ತಮನಾಗುವುದು ಅವನಿಗೆ ಸುಲಭವಾಗುತ್ತದೆ; ಈ ಮಾತು ಇನ್ನೊಂದು ದಿಕ್ಕಿನಿಂದಲೂ ನಿಜ. ತನ್ನನ್ನು ಪ್ರೀತಿಸಿಕೊಳ್ಳುವುದು ಹೆಚ್ಚಿದಷ್ಟೂ, ಅದರಿಂದಾಗಿ ಇತರರ ದುಡಿಮೆಯ ಫಲಗಳಿಗಾಗಿ ಆಸೆಪಡುವುದು ಹೆಚ್ಚಿದಷ್ಟೂ, ಇತರರಿಗಾಗಿ ದುಡಿಯಲು, ಅವರನ್ನು ಪ್ರೀತಿಸಲು ಇರುವ ಅವಕಾಶಗಳು ಕಡಿಮೆಯಾಗುತ್ತಾ ಹೋಗುತ್ತವೆ: ತನ್ನ ಬಗ್ಗೆ ಎಷ್ಟೆಷ್ಟು ಪ್ರೀತಿ ಹೆಚ್ಚಾಗುತ್ತೋ ಅಷ್ಟಷ್ಟು ಮಾತ್ರವಲ್ಲ, ಇನ್ನೂ ಹೆಚ್ಚಾಗಿ ಕಡಿಮೆಯಾಗುತ್ತದೆ; ಒಂದು ಉದಾಹರಣೆ ಗಮನಿಸಿ: ಒಂದು ಸನ್ನೆಗೋಲಿನ ಆಧಾರ ಬಿಂದುವನ್ನು ಉದ್ದ ತುದಿಯಿಂದ ಚಿಕ್ಕತುದಿಯ ಕಡೆಗೆ ಸರಿಸುತ್ತಾ ಹೋದಂತೆ ನಾವು ಉದ್ದತುದಿಯನ್ನು ಇನ್ನೂ ಉದ್ದಮಾಡುತ್ತಿರುವುದೇ ಅಲ್ಲದೇ ಚಿಕ್ಕತುದಿಯನ್ನು ಇನ್ನೂ ಚಿಕ್ಕದನ್ನಾಗಿಸಿರುತ್ತೇವೆ. ಪ್ರೀತಿಸುವ ಒಂದು ವೈಶಿಷ್ಟ್ಯವನ್ನು ಹೊಂದಿರುವ ಮನುಷ್ಯನೊಬ್ಬ ತನ್ನ ಬಗ್ಗೆ ಇಚ್ಛೆ ಪ್ರೀತಿಗಳನ್ನು ಹೆಚ್ಚಿಸಿಕೊಳ್ಳುತ್ತಾ ಹೋದಂತೆ, ಇತರರನ್ನು ಕುರಿತ ಪ್ರೀತಿ ಹಾಗೂ ಇಚ್ಛೆಗಳನ್ನು ತನ್ನ ಪಾಲಿಗೆ ಬಂದ ಹೆಚ್ಚಳದ ಪ್ರಮಾಣಕ್ಕಿಂತಲೂ ಹೆಚ್ಚಾಗಿ ಕಡಿಮೆಮಾಡುತ್ತಾ ಹೋಗುತ್ತಾನೆ. ಇತರರಿಗೆ ತಿನ್ನಲು ಏನನ್ನೂ ಕೊಡದೆ ಒಬ್ಬ ತಾನೇ ಹೆಚ್ಚಾಗಿ ತಿನ್ನುತ್ತಾನೆ; ಹಾಗೆ ಮಾಡುವುದರಿಂದ ಮಿಕ್ಕಿದ್ದನ್ನು ದಾನವಾಗಿ ಕೊಡುವ ಸಾಧ್ಯತೆಗಳನ್ನು ಕಡಿಮೆ ಮಾಡಿಕೊಳ್ಳುವುದರ ಜತೆಗೆ, ಹೆಚ್ಚು ತಿನ್ನುವುದರಿಂದಾಗಿ ಇತರರಿಗೆ ಸಹಾಯಮಾಡುವ ಶಕ್ತಿಯನ್ನು ಕಳೆದುಕೊಳ್ಳುತ್ತಾನೆ.

ಇತರರನ್ನು ಕೇವಲ ಶಬ್ದಗಳಲ್ಲೇ ಅಲ್ಲದೇ ಪ್ರಾಮಾಣಿಕವಾಗಿ ಪ್ರೀತಿಸಬೇಕೆಂದುಕೊಳ್ಳುವಾತ ತನ್ನನ್ನು ಪ್ರೀತಿಸಿಕೊಳ್ಳುವುದನ್ನು ಕೇವಲ ಶಬ್ದಗಳಲ್ಲೇ ನಿಲ್ಲದೆ ಪ್ರಾಮಾಣಿಕವಾಗಿಯೂ ನಿಲ್ಲಿಸಬೇಕು. ಬಹಳ ಸಂದರ್ಭದಲ್ಲಿ ಹೀಗಾಗುತ್ತದೆ; ನಾವು ಇತರರನ್ನು ಪ್ರೀತಿಸುತ್ತೇವೆ ಎಂದು ತಿಳಿಯುತ್ತೇವೆ. ನಮ್ಮನ್ನು ನಾವೆ, ಮತ್ತು ಇತರರನ್ನು ಅದು ನಿಜವೆಂದು ನಂಬಿಸುತ್ತೇವೆ: ಆದರೆ ನಾವು ಇತರರನ್ನು ಕೇವಲ ಶಬ್ದಗಳಲ್ಲಿ ಪ್ರೀತಿಸುತ್ತೇವೆ. ಅದೇ ವೇಳೆಗೆ ನಿಜವಾಗಿ ನಮ್ಮನ್ನು ನಾವೇ ಪ್ರೀತಿಸುತ್ತಿರುತ್ತೇವೆ. ಇತರರಿಗೆ ಆಹಾರ ಕೊಡದೇ ಉಪವಾಸಕ್ಕೆ ಗುರಿಮಾಡುತ್ತೇವೆ. ಆದರೆ ನಾವು ಮಾತ್ರ – ಎಂದಿಗೂ ಸಾಧ್ಯವಿಲ್ಲ. ಆದ್ದರಿಂದ ನಿಜವಾಗಿ ಇತರರನ್ನು ಪ್ರೀತಿಸಬೇಕಾದರೆ, ನಮ್ಮನ್ನು ಪ್ರೀತಿಸಿಕೊಳ್ಳುವುದನ್ನು ಕಲಿಯಬಾರದಷ್ಟೇ ಅಲ್ಲದೆ, ಇತರರಿಗೆ ನೀಡದೇ ಉಪವಾಸಕ್ಕೆ ಹೇಗೆ ಗುರಿಮಾಡುತ್ತೇವೋ ಹಾಗೆ ನಾವೇ ತಿನ್ನದೆ ಉಪವಾಸಕ್ಕೆ ಗುರಿಯಾಗುವುದನ್ನು ಕಲಿಯಬೇಕು.

ಆತ್ಮ ಪ್ರತ್ಯಯವುಳ್ಳ, ಒಬ್ಬ ವ್ಯಕ್ತಿ ಸುಖಿ. ಸೌಕರ್ಯಗಳಿಂದ ತುಂಬಿದ ಬದುಕನ್ನು ನಡೆಸಿದರೆ ಆತನು 'ಒಳ್ಳೆಯವನು' ಎಂದೂ 'ಒಳ್ಳೆಯ ಬದುಕನ್ನು ನಡೆಸುತ್ತಾನೆಂದೂ

ಹೇಳುತ್ತೇವೆ. ಆದರೆ ಅಂತಹ ಮನುಷ್ಯ –ಹೆಂಗಸಿರಲಿ ಗಂಡಸಿರಲಿ ಶ್ರೇಷ್ಠ – ನಡೆವಳಿಕೆಗಳು. ದಯಾಶೀಲತೆ. ಸರಳ ಮನಸ್ಸುಗಳೆಲ್ಲವನ್ನೂ ಪಡೆದಿದ್ದರೂ, ಅತ್ಯಂತ ಶ್ರೇಷ್ಠ ದರ್ಜೆಯ ಕೌಶಲ್ಯ ಮತ್ತು ಯುಕ್ತಿನಿಂದ ತಯಾರಾದ ಚೌಕವೊಂದು ಹರಿತಗೊಳಿಸಲ್ಪಟ್ಟ ಹೊರತು ಹೇಗೆ ಹರಿತವಾಗಿರದೆ, ಚೆನ್ನಾಗಿ ಕತ್ತರಿಸಲಾರದೋ ಹಾಗೆ ಆತ ಶುಚಿ ಜೀವನವನ್ನು ನಡೆಸಲಾರ. ಒಳ್ಳೆಯವನೂ ಆಗಿರಲಾರ. ಒಳ್ಳೆಯವನಾಗಿದ್ದು ಒಳ್ಳೆಯ ಬದುಕನ್ನು ನಡೆಸುವುದೆಂದರೆ ಇತರರಿಂದ ಪಡೆಯುವುದಕ್ಕಿಂತ ಹೆಚ್ಚಾಗಿ ಕೊಡುವುದು ಎಂದರ್ಥ. ಆದರೆ ಸುಖಾಸಕ್ತಿಯ ಆತ್ಮಪ್ರತ್ಯಯದ ವ್ಯಕ್ತಿ ಹಾಗೆಮಾಡಲಾರ. ಏಕೆಂದರೆ ಮೊದಲನೆಯದಾಗಿ ಅವನಿಗೆ ಸಾಕಷ್ಟು ಬೇಕಾಗಿರುತ್ತದೆ: [ಇದು ಅವನು ಸ್ವಾರ್ಥಿಯಾದುದರಿಂದಲ್ಲ, ಆತ ಸೌಕರ್ಯಗಳಿಗೆ ಹೊಂದಿಕೊಂಡುಬಿಟ್ಟಿದ್ದಾನೆ ಅಲ್ಲದೆ ತಾನು ಹೊಂದಿಕೊಂಡಿರುವುದನ್ನು ಬಿಟ್ಟುಕೊಡುವುದೆಂದರೆ ನೋವಿನ ಸಂಗತಿ] ಎರಡನೆಯದಾಗಿ. ಇತರರಿಂದ ಸಿಕ್ಕಿದ್ದನ್ನೆಲ್ಲ ತಿನ್ನುವುದರಿಂದಾಗಿ ತನ್ನನ್ನು ತಾನೇ ದುರ್ಬಲಗೊಳಿಸಿಕೊಂಡು ದುಡಿಮೆಗೆ ಅವರಿಂದಾಗಿ ಇತರರಿಗೆ ಸೇವೆಸಲ್ಲಿಸಲು ಅನರ್ಹನಾಗುತ್ತಾನೆ. ಮೃದುವಾದ ಹಾಸಿಗೆಯಲ್ಲಿ ದೀರ್ಘಕಾಲದವರೆಗೆ ನಿದ್ರಿಸುವ, ಪುಷ್ಟಿದಾಯಕವಾದ ರುಚಿಕಟ್ಟಾದ ಆಹಾರವನ್ನು ಭಾರಿಪ್ರಮಾಣ ಸ್ವೀಕರಿಸುವ, ಶುಭ್ರವಾದ ಋತುಮಾನಕ್ಕೆ ಹೊಂದುವ ಬಟ್ಟೆಗಳನ್ನೇ ಯಾವಾಗಲೂ ಧರಿಸುವ. ಶ್ರಮದಾಯಕವಾದ ಕೆಲಸಗಳಿಗೆ ಎಂದೂ ಹೊಂದಿಕೊಳ್ಳದ ಸ್ವಾರ್ಥವ್ಯಕ್ತಿ ಏನನ್ನೂ ಮಾಡಲಾರ.

ನಮ್ಮ ಮತ್ತು ಇತರರ ಸುಳ್ಳುಗಳಿಗೆ ನಾವೆಷ್ಟು ಹೊಂದಿಕೊಂಡಿದ್ದೇವೆಂದರೆ. ಅಲ್ಲದೆ ನಮ್ಮ ಸುಳ್ಳುಗಳನ್ನು ಇತರರು ಪತ್ತೆಮಾಡದಂತೆ ಅವರ ಸುಳ್ಳುಗಳಿಗೆ ಕಣ್ಣುಮುಚ್ಚಿಕೊಳ್ಳುವುದು ಎಷ್ಟು ಸುಲಭವಾಗಿದೆಯೆಂದರೆ. ಜನರು ಕೊಂಚ ಕೂಡ ಗೊಂದಲಗಳಿಲ್ಲದೆ ನಡೆಸುವ ಜೀವನದಲ್ಲಿನ ಗುಣಗಳ ಘೋಷಣೆಯನ್ನು ಕೆಲವುವೇಳೆ ಪಾವಿತ್ರ್ಯದ ಘೋಷಣೆ ಕೇಳಿ ಸಂದೇಹದಿಂದ ನೋಡುವುದೂ ಇಲ್ಲ, ಆಶ್ಚರ್ಯ ಪಡುವುದೂ ಇಲ್ಲ.

ಒಬ್ಬ ವ್ಯಕ್ತಿ, ಹೆಂಗಸಾಗಲೀ ಗಂಡಸಾಗಲೀ. ಎರಡು ಜಮಖಾನಗಳು, ಎರಡು ಮೃದುವಾದ ಶುಭ್ರವಾದ ಮೇಲುಹೊದಿಕೆಗಳು, ತಲೆದಿಂಬಿನ ಹೊದಿಕೆಯೊಳಗೆ ತುಂಬಿದ ತುಪ್ಪುಟದ ತಲೆದಿಂಬುಗಳು ಇರುವ ಸ್ಪ್ರಿಂಗಿನ ಹಾಸಿಗೆಯ ಮೇಲೆ ಮಲಗುತ್ತಾನೆ. ಹಾಸಿಗೆಯ ಪಕ್ಕದಲ್ಲಿ, ಕಾಲುಚಾಚಿದಾಗ ಥಂಡಿಯಾಗದಿರಲೆಂದು ಕಂಬಳಿ ಪಕ್ಕದಲ್ಲೇ ಚಪ್ಪಲಿಗಳು ಬಿದ್ದಿವೆಯಾದರೂ, ಹಾಸಿದೆ. ಅವನಿಂದ ಆಗಬಹುದಾದ ಎಲ್ಲ ಅಶುಚಿಯೂ ತಂತಾನೇ ಹೊರಗೆ ಹೋಗಿ ಎಲ್ಲವೂ ಠೀಕಾಗಿ ಇರುವಂತೆ ನೋಡಿಕೊಳ್ಳಲು, ಅವನು ಹೊರಗೆಹೋಗುವುದು ಬೇಕಾಗದಂತೆ ಸಾಕಷ್ಟು ಪಾತ್ರೆಗಳು ಆ ಕೊಠಡಿಯಲ್ಲಿವೆ. ಬಿಸಿಲಿನಿಂದ ಅವನು ಎಚ್ಚರಗೊಳ್ಳದಂತೆ ಕಿಟಕಿಗಳನ್ನು ಪರದೆಗಳು ಮುಚ್ಚಿವೆ. ಅದರಿಂದ ಬೇಕೆನಿಸಿದಷ್ಟು. ಆತ ಮಲಗಬಲ್ಲ. ಇಷ್ಟಲ್ಲದೆ ಚಳಿಗಾಲದಲ್ಲಿ ಕೊಠಡಿ ಬೆಚ್ಚಗಿರುವಂತೆ

ಬೇಸಿಗೆಯಲ್ಲಿ ತಂಪಾಗಿರುವಂತೆ ನೋಡಿಕೊಳ್ಳಲು. ನೊಳ್ಳೆಯಾದಿಯಾಗಿ ಇತರ ಕೀಟಗಳ ಸದ್ದಿನಿಂದ ಎಚ್ಚರಗೊಳ್ಳದಂತಿರಲು ಬೇಕಾದ ವ್ಯವಸ್ಥೆಗಳನ್ನು ಕೈಗೊಳ್ಳಲಾಗಿದೆ. ಅವನು ಮಲಗಿರುವಂತೆ ಅವನು ಶುದ್ಧಿಕ್ರಿಯೆಗಳಿಗಾಗಿ, ಕೆಲವು ವೇಳೆ ಸ್ನಾನ ಹಾಗೂ ಕ್ಷೌರಗಳಿಗಾಗಿ ಬಿಸಿ ಹಾಗೂ ತಣ್ಣೀರು ಸಿಗುವಂತೆ ವ್ಯವಸ್ಥೆಯಿದೆ. ಟೀ, ಕಾಫಿಗಳು ಮುಂತಾಗಿ ಎದ್ದ ವೇಳೆಗೆ ಸ್ವೀಕರಿಸಬೇಕಾದ ಉತ್ತೇಜಕ ಪಾನೀಯಗಳು ಸಿದ್ಧವಿವೆ. ಹಿಂದಿನ ದಿವಸ ಕೊಳಕಾಗಿದ್ದ ಬಗೆ ಬಗೆಯ ಪಾದರಕ್ಷೆಗಳ ಹಲವು ಜತೆಗಳನ್ನು ಈಗಾಗಲೇ ಧೂಳಿನ ಕಣಕಣವನ್ನು ಹೊರತೆಗೆದು ಶುಚಿಗೊಳಿಸಿ, ಗಾಜಿನಂತೆ ಹೊಳೆಯುವ ಹಾಗೆ ಮಾಡಲಾಗಿದೆ. ಹಿಂದಿನ ದಿವಸ ಕೊಳೆಯಾಗಿದ್ದ ಹಲವು ದಿರುಸುಗಳನ್ನು ಕೂಡ ಶುಭ್ರಗೊಳಿಸಿಡಲಾಗಿದೆ: ಈ ದಿರುಸುಗಳು ಕೇವಲ ಬೇಸಿಗೆ ಹಾಗೂ ಚಳಿಗಾಲಗಳಿಗೇ ಅಲ್ಲದೆ ಉಳಿದ ಎಲ್ಲ ಋತುಗಳಿಗೂ ಹೊಂದಿಕೊಳ್ಳುವ ಹಾಗೆ ಬೇರೆ ಬೇರೆಯ ರಚನೆಗಳನ್ನು ಪಡೆದಿವೆ. ತೊಳೆದು, ಗಂಜಿಮಾಡಿ, ಇಸ್ತ್ರಿಮಾಡಿದ ಶುಭ್ರವಾದ ಒಳ ದಿರುಸುಗಳು ಸಿದ್ಧವಿವೆ. ಗುಂಡಿಗಳು ಸರಿಯಿವೆಯೋ ಇಲ್ಲವೋ ಎಂಬುದನ್ನು ಅದಕ್ಕಾಗಿಯೇ ವಿಶೇಷವಾಗಿ ನಿಯಮಿಸಿದ ಜನರು ಪರೀಕ್ಷಿಸಿದ್ದಾರೆ.

ಆ ಮನುಷ್ಯ ಚಟುವಟಿಕೆಯುಳ್ಳವನಾಗಿದ್ದರೆ ಬೇಗನೇ – ಎಂದರೆ ಬೆಳಿಗ್ಗೆ ಏಳು ಘಂಟೆಗೆ – ಆದರೂ ತನಗಾಗಿ ಈ ಸಿದ್ಧತೆಗಳನ್ನು ಮಾಡುತ್ತಿರುವವರಿಗಿಂತಲೂ ಕೆಲವು ಘಂಟೆ ತಡವಾಗಿ ಏಳುತ್ತಾನೆ. ಅವನಿಗೆ ಹಗಲಿನ ಹಾಗೂ ರಾತ್ರಿಯ ಉಡುಗೆಗಳಿರುವುದರ ಜತೆಗೆ ಡ್ರೆಸ್ಸಿಂಗ್ ಸಮಯಕ್ಕೆಂದೆ ವಿಶೇಷವಾದ ದಿರುಸು ಹಾಗೂ ಪಾದರಕ್ಷೆಗಳಿರುತ್ತವೆ. ಈಗವನು ತನ್ನ ನಿತ್ಯಕರ್ಮಗಳಿಗೆ, ಶುಚಿಗೊಳಿಸಿಕೊಳ್ಳುವುದಕ್ಕೆ ಉಜ್ಜಿಕೊಳ್ಳುವುದಕ್ಕೆ ಪ್ರಾರಂಭಿಸುತ್ತಾನೆ. ಅದಕ್ಕಾಗಿ ವಿಧವಿಧ ಬ್ರಷ್‌ಗಳು, ಸೋಪುಗಳನ್ನು ಹಾಗೂ ಭಾರಿ ಪ್ರಮಾಣದಲ್ಲಿ ನೀರನ್ನು ಬಳಸಲಾಗುತ್ತದೆ (ಹಲವು ಇಂಗ್ಲಿಷ್ ಸ್ತ್ರೀಪುರುಷರು, ಯಾವ ಕಾರಣಕ್ಕೋ ಏನೋ ಹೆಚ್ಚು ಸಾಬೂನನ್ನು ಉಪಯೋಗಿಸುವುದರಲ್ಲಿ, ಹೆಚ್ಚು ಹೆಚ್ಚು ನೀರನ್ನು ತಮ್ಮ ಮೇಲೆ ಸುರಿದುಕೊಳ್ಳುವುದರಲ್ಲಿ ಹೆಮ್ಮೆ ಪಡುತ್ತಾರೆ). ಆಮೇಲೆ ವಸ್ತ್ರಗಳನ್ನು ಧರಿಸುತ್ತಾನೆ. ವಿಶೇಷ ಬಗೆಯ ಕನ್ನಡಿ (ಆ ಮನೆಯ ಎಲ್ಲ ಕೋಣೆಗಳಲ್ಲೂ ಇರುವ ಕನ್ನಡಿಗಳಿಗಿಂತ ಭಿನ್ನವಾದ ಕನ್ನಡಿ) ಯ ಎದುರು ನಿಂತು ತಲೆಬಾಚಿಕೊಳ್ಳುತ್ತಾನೆ. ಕನ್ನಡಕದಂತಹ ತನಗೆ ಬೇಕಾದ ವಸ್ತುಗಳನ್ನು ತೆಗೆದುಕೊಂಡು ತನ್ನ ಮೂಗೊರಸಿಕೊಳ್ಳಲೆಂದು ಒಂದು ಶುಭ್ರ ಕರವಸ್ತ್ರವನ್ನು, ಅವನು ಹೋಗುವ ಪ್ರತಿಕೋಣೆಯಲ್ಲೂ ಒಂದೊಂದು ಗಡಿಯಾರವಿದ್ದರೂ, ಸರಪಳಿ ಇರುವ ಗಡಿಯಾರವನ್ನು, ಎಲ್ಲ ಬಗೆಯ ಹಣ, ಚಿಲ್ಲರೆಗಳನ್ನು (ಯಾವುದೋ ಒಂದು ನಿರ್ದಿಷ್ಟ ಮೌಲ್ಯದ ನಾಣ್ಯಕ್ಕಾಗಿ ತಡಕಾಡಬೇಕಾಗಿ ಬರುವ ಇಕ್ಕಟ್ಟಿನ ಸನ್ನಿವೇಶದಿಂದ ಬಿಡಿಸಿಕೊಳ್ಳಲು) ಹಾಗೂ ಚೆಕ್‌ಗಳನ್ನು ಹಾಗೇ ಅವನ ಹೆಸರು ಮುದ್ರಿತವಾಗಿರುವ ವಿಸಿಟಿಂಗ್ ಕಾರ್ಡ್‌ಗಳನ್ನು (ಹೆಸರನ್ನು ಹೇಳುವ ಅಥವಾ ಬರೆಯುವ ಕಷ್ಟವನ್ನು ಅದು ತಪ್ಪಿಸುತ್ತದೆ) ಚಿಕ್ಕ ಪುಸ್ತಕ ಪೆನ್ಸಿಲ್

ಗಳನ್ನು ಬೇರೆಬೇರೆ ಜೇಬುಗಳಲ್ಲಿ ಇಟ್ಟುಕೊಳ್ಳುತ್ತಾನೆ. ಹೆಂಗಸಿನ ವಿಚಾರದಲ್ಲಿಯಾದರೆ ಪ್ರಸಾಧನ ಸಾಮಗ್ರಿ ಇನ್ನೂ ಹೆಚ್ಚು: ಒಳಉಡುಪುಗಳು. ಚೋಲಿಗಳು. ಅಲಂಕಾರಗಳು, ಕಸೂತಿವಸ್ತ್ರಗಳು. ರಿಬ್ಬನ್ನುಗಳು. ಹೇರ್‌ಪಿನ್ನುಗಳು. ಪಿನ್ನುಗಳು. ಬ್ರೋಚುಗಳು ಇತ್ಯಾದಿ.

ಅಂತೂ ಕೊನೆಗೆ ಎಲ್ಲವೂ ಮುಗಿದು ದಿನ ಪ್ರಾರಂಭವಾಗುತ್ತದೆ. ಅದೂ ಸಾಮಾನ್ಯವಾಗಿ ತಿನ್ನುವುದರೊಂದಿಗೆ: ಹೆಚ್ಚು ಸಕ್ಕರೆಯೊಂದಿಗೆ ಕಾಫಿ ಅಥವಾ ಟೀಯನ್ನು ಕುಡಿಯಲಾಗುತ್ತದೆ; ಹೆಚ್ಚು ಬೆಣ್ಣೆಯ ಜತೆಯಲ್ಲಿ ಶುಭ್ರವಾದ ಹಿಟ್ಟಿನಿಂದ ಮಾಡಿದ ಬ್ರೆಡ್ಡನ್ನು ಕೆಲವುವೇಳೆ ಹಂದಿಯ ಮಾಂಸದ ಜತೆಯಲ್ಲಿ ತಿನ್ನಲಾಗುತ್ತದೆ. ಇದು ನಡೆಯುವಾಗಲೇ ಗಂಡಸರು ಸಿಗಾರನ್ನೋ ಸಿಗರೇಟನ್ನೋ ಸೇದುತ್ತಿರುತ್ತಾರೆ: ಇಲ್ಲವೇ ಅದೇ ತಾನೇ ತರಲಾಗಿರುವ ವೃತ್ತಪತ್ರಿಕೆಗಳನ್ನು ಓದುತ್ತಾರೆ. ಅನಂತರ, ಅಸ್ತವ್ಯಸ್ತಗೊಂಡ, ಕೊಳಕು ತುಂಬಿದ ಕೊಠಡಿಯನ್ನು ಸರಿಪಡಿಸುವ ಕೆಲಸವನ್ನು ಬೇರೆಯವರಿಗೆ ಬಿಟ್ಟು ಆಫೀಸಿಗೋ ಅಥವಾ ವ್ಯವಹಾರಗಳಿಗೋ ಹೋಗುತ್ತಾರೆ; ಇಲ್ಲವೇ ಅಂತಹ ವ್ಯಕ್ತಿಗಳು ಚಲಿಸುವುದಕ್ಕೆಂದೇ ಹೇಳಿ ಮಾಡಿಸಿದ ಗಾಡಿಗಳಲ್ಲಿ ಪ್ರಯಾಣ ಮಾಡುತ್ತಾರೆ. ಆಮೇಲೆ ಪ್ರಾಣಿಗಳನು ಪಕ್ಷಿಗಳನ್ನು, ಮೀನುಗಳನ್ನು ಕೊಂದು ತಯಾರಿಸಿದ ಮಧ್ಯಾಹ್ನದ ಊಟ ಸಿದ್ಧವಾಗುತ್ತದೆ. ಅದರ ಹಿಂದೆಯೇ, ಸಾಮಾನ್ಯವಾದ ಸಂದರ್ಭಗಳಲ್ಲಿ, ಮೂರುಸಾರಿ ಬಡಿಸಿದ ಭೋಜನ, ಜತೆಗೆ ಹಣ್ಣುಗಳು ಹಾಗೂ ಕಾಫಿ ಬರುತ್ತವೆ. ಇದೆಲ್ಲ ಮುಗಿದ ಮೇಲೆ ಇಸ್ಪೇಟಾಟ ಮತ್ತು ಸಂಗೀತ ಅಥವಾ ನಾಟಕ. ಓದು ಹಾಗೂ ಮೃದು ಸ್ಪ್ರಿಂಗ್ ಕುರ್ಚಿಗಳಮೇಲೆ ಕುಳಿತು, ಕೇಂದ್ರಿತವಾದರೂ ರಕ್ಷಿತವಾದ. ದೀಪದ ಬೆಳಕಿನಲ್ಲಿ ಕುಳಿತು ಸಂಭಾಷಣೆ. ಇದಾದ ಮೇಲೆ ಇನ್ನಷ್ಟು ಟೀ. ಇನ್ನಷ್ಟು ತಿನ್ನುವುದು – ರಾತ್ರಿ ಊಟ – ಅನಂತರ ಚೆನ್ನಾಗಿ ಧೂಳುಕೊಡಹಿದ, ಶುಭ್ರ ಬಟ್ಟೆಗಳಿಂದ ಸಿದ್ಧಪಡಿಸಿದ ಹಾಸಿಗೆಯಲ್ಲಿ ಪವಡಿಸುವಿಕೆ. ಎಲ್ಲ ಪಾತ್ರೆಗಳೂ, ಮತ್ತೆ ಕೊಳಕಾಗಲೆಂದೇ ಶುಭ್ರಗೊಳಿಸಲ್ಪಟ್ಟಿರುತ್ತವೆ. ಒಬ್ಬ ಸುಸ್ವಭಾವದ ಸಾಧಾರಣ ವ್ಯಕ್ತಿಯ ದಿನಗಳು ಹೀಗೆ ಸಾಗುತ್ತವೆ: ಈತ ತನ್ನ ಸುತ್ತಲಿನವರಿಗೆ ಕೆಡುಕನ್ನು ತರುವ ಯಾವುದೇ ಅಭ್ಯಾಸಗಳನ್ನು ಹೊಂದಿರದೇ ಇದ್ದರೆ ಋಜು ಮಾರ್ಗದಲ್ಲಿ ಜೀವನ ಸಾಗಿಸುತ್ತಿದ್ದಾನೆ ಎಂದು ಹೇಳಲಾಗುತ್ತದೆ.

ಆದರೆ ಇತರರಿಗೆ ಒಳಿತನ್ನುಂಟು ಮಾಡುವವನ ಬದುಕು ಮಾತ್ರ ಋಜು ಮಾರ್ಗದಲ್ಲಿರುತ್ತದೆ: ಹಾಗೆ ಬದುಕನ್ನು ಸಾಗಿಸುವವನು ಎಂದಾದರೂ, ಇತರರಿಗೆ ಒಳಿತನ್ನು ಮಾಡುವುದು ಸಾಧ್ಯವೇ? ಇತರರಿಗೆ ಒಳ್ಳೆಯದನ್ನು ಮಾಡುವ ಮೊದಲು ಕೆಟ್ಟದ್ದನ್ನು ಮಾಡುವುದನ್ನಾತ ನಿಲ್ಲಿಸಬೇಕು. ಈ ಮನುಷ್ಯ ಬಹಳಮಟ್ಟಿಗೆ ತನಗೆ ಅರಿವಿಲ್ಲದಂತೆಯೇ ಮಾಡುತ್ತಿರುವ ಕೆಡುಕುಗಳನ್ನು ಲೆಕ್ಕಹಾಕಿ ನೋಡಿದಾಗ, ಆತನಿಗೂ ಒಳ್ಳೆಯದನ್ನು ಮಾಡುವುದಕ್ಕೆ ಅರ್ಥಾತ್ ಸಂಬಂಧವಿಲ್ಲವೆನ್ನುವುದು ತಿಳಿಯುತ್ತದೆ. ತಾನು ಮಾಡಿದ ಕೆಡುಕುಗಳನ್ನು ಅಳಿಸಲು ವಿರೋಚಿತವಾದ ಹಲವು ಕೆಲಸಗಳನ್ನಾತ ಮಾಡಬೇಕಾಗಿ ಬರುತ್ತದೆ. ಆದರೆ ಆತನೇ ಸೃಷ್ಟಿಸಿಕೊಂಡಿರುವ ಆವಶ್ಯಕತೆಗಳು ಆ

ಬಗೆಯ ಯಾವುದೇ ಕೆಲಸವನ್ನು ಮಾಡಲಾಗದಂತೆ ದುರ್ಬಲನನ್ನಾಗಿ ಮಾಡಿರುತ್ತದೆ. ಮಾರ್ಕಸ್ ಒರೇಲಿಯಸ್ ಮಾಡಿದ ಹಾಗೆ ನೆಲದಮೇಲೆ ತನ್ನದೆ ಬಟ್ಟೆಗಳನ್ನು ಸುತ್ತಿಕೊಂಡು, ದೈಹಿಕವಾಗಿ. ಮತ್ತು ನೈತಿಕವಾಗಿ ಹೆಚ್ಚು ಸೌಕರ್ಯದೊಡನೆ ಮಲಗುವುದರ ಮೂಲಕ. ಮಕ್ಕಳನ್ನು ಹೆತ್ತು, ಸಾಕಬೇಕಾಗಿರುವ ದುರ್ಬಲ ವರ್ಗಕ್ಕೆ ಸೇರಿದ, ಈ ಬಲಶಾಲಿ ಮನುಷ್ಯನ ಬಟ್ಟೆಗಳನ್ನು ಒಗೆಯುವ ಅಗಸಗಿತ್ತಿಯ ನಿತ್ಯದ ದುಡಿಮೆ, ಜಮಖಾನ, ಸ್ಪ್ರಿಂಗ್‌ಗಳು. ದಿಂಬುಗಳು ಇವನ್ನು ತಯಾರಿಸುವಲ್ಲಿ ಉಂಟಾಗಿರುವ ತೊಂದರೆಗಳು ಹಾಗೂ ದುಡಿಮೆ ಇವುಗಳನ್ನು ತಪ್ಪಿಸಬಹುದು, ಬೇಗ ಮಲಗಿ ಬೇಗ ಎದ್ದರೆ ಕಿಟಿಕಿಯಪರದೆಗಳು ಹಾಗೂ ರಾತ್ರಿಯ ದೀಪವನ್ನು ಆತ ತಪ್ಪಿಸಬಹುದು. ಹಗಲಿನಲ್ಲಿ ತೊಟ್ಟ ಅಂಗಿಯನ್ನೇ ಹಾಕಿಕೊಂಡು ಮಲಗಬಹುದು, ಬರಿಗಾಲಲ್ಲಿ ನೆಲದ ಮೇಲೆ. ಅಂಗಳದಲ್ಲಿ ಓಡಾಡಬಹುದು; ನಲ್ಲಿಯ ಬಳಿಗೆ ಹೋಗಿ ನೀರನ್ನು ಉಪಯೋಗಿಸಬಹುದು. ಒಟ್ಟಾರೆ ಈಗ ತನಗಾಗಿ ದುಡಿಯುವವರು ಬದುಕುವ ಹಾಗೆ ಬದುಕಬಲ್ಲ ಅದರಿಂದಾಗಿ ತನಗಾಗಿ ನಡೆಯುತ್ತಿರುವ ದುಡಿಮೆಯನ್ನು ಉಳಿಸಬಲ್ಲ. ತನ್ನ ಬಟ್ಟೆ, ಶ್ರೇಷ್ಠವಾದ ಆಹಾರ. ಮನರಂಜನೆಗಳಿಗಾಗಿ ವೆಚ್ಚವಾಗುವ ದುಡಿಮೆಯನ್ನು ಉಳಿಸಬಲ್ಲ. ಈ ಎಲ್ಲಾ ದುಡಿಮೆಯೆಲ್ಲಾ ಯಾವ ಸ್ಥಿತಿಯಲ್ಲಿ ಜರಗುತ್ತದೆ ಎಂಬುದನ್ನಾತ ಬಲ್ಲ; ಈ ಕೆಲಸಗಳನ್ನು ಮಾಡುತ್ತಾ ಹೇಗೆ ಜನರು ನರಳುತ್ತಾರೆ: ನಾಶವಾಗುತ್ತಾರೆ ಹಾಗೂ ತಮ್ಮ ಬಡತನದ ದುರುಪಯೋಗವನ್ನು ಪಡೆದು ಇಂತಹ ಸ್ಥಿತಿಯಲ್ಲಿ ಇರುವ ಹಾಗೆ ಮಾಡುವ ಜನರನ್ನು ಹೇಗೆ ದ್ವೇಷಿಸುತ್ತಾರೆ ಎಂಬುದನ್ನು ಆತ ಬಲ್ಲ.

ಈ ಎಲ್ಲ ಸ್ವಾರ್ಥ, ಸುಖಾಸಕ್ತಿಗಳನ್ನು ತ್ಯಜಿಸದೇ ವ್ಯಕ್ತಿಯೊಬ್ಬ ಇತರರಿಗೆ ಒಳ್ಳೆಯದನ್ನು ಮಾಡುವುದು. ಋಜುಜೀವನವನ್ನು ನಡೆಸುವುದು ಹೇಗೆ ತಾನೆ ಸಾಧ್ಯ.

ಆದರೆ ನಾವು ನಮ್ಮ ದೃಷ್ಟಿಗೆ ಇತರರು ಹೇಗೆ ಇದ್ದಾರೆಂಬುದನ್ನು ಕಂಡು ಅದನ್ನೇ ಹೇಳಬೇಕಾಗಿಲ್ಲ – ಪ್ರತಿಯೊಬ್ಬನೂ ತನ್ನ ಬದುಕನ್ನು ಕಂಡುಕೊಂಡು. ಅದರ ಬಗ್ಗೆ ಯೋಚಿಸಬೇಕು.

ನನ್ನ ಮಾತುಗಳನ್ನು ಎಷ್ಟೇ ನಿರಾಸಕ್ತಿಯಿಂದ. ಕೆರಳಿಸಬಲ್ಲ ಮೌನದಿಂದ ಸ್ವೀಕರಿಸಿದರೂ ಈ ವಿಚಾರವನ್ನೇ ನಾನು ಮತ್ತೆ ಮತ್ತೆ ಹೇಳದೇ ಇರಲಾರೆ.

ಸೌಕರ್ಯಗಳಿರುವ ಬದುಕನ್ನು ನಡೆಸುವ. ಮಧ್ಯಮವರ್ಗದ (ತಮ್ಮ ಆಸಕ್ತಿಗಳ ಪೂರೈಕೆಗಾಗಿ ನಿತ್ಯವೂ ನೂರಾರು ಶ್ರಮದ ದಿನಗಳನ್ನು ಕಬಳಿಸುವ ಮೇಲುವರ್ಗದವರನ್ನು ನಾನು ಇಲ್ಲಿ ಗಮನಿಸುವುದಿಲ್ಲ) ಒಬ್ಬ ನೀತಿವಂತ ಮನುಷ್ಯ, ತಾನು ಉಪಯೋಗಿಸುತ್ತಿರುವ ವಸ್ತುಗಳೆಲ್ಲಾ. ಗಣಿಗಳಲ್ಲಿ. ಕಾರ್ಖಾನೆಗಳಲ್ಲಿ. ಹೊಲಗದ್ದೆಗಳಲ್ಲಿ ದುಡಿಯುತ್ತಾ ಇರುವ. ಯಾವುದೇ ಬಗೆಯ ಆಕಾಂಕ್ಷೆಗಳೂ ಇರದ. ಅಜ್ಞಾನಿ. ಕುಡುಕ. ಒರಟು ಅನಾಗರಿಕ ಸಮೂಹ ಬದುಕನ್ನು ನಡೆಸುತ್ತಾ ಸಾಯುತ್ತಿರುವ ಜನರ ದುಡಿಮೆಯ ಫಲವೆಂದು ತಿಳಿದೂ ಕೂಡ ನಿರಾತಂಕವಾಗಿ ಬದುಕಲಾರ.

ಇದನ್ನು ಬರೆಯುತ್ತಿರುವ ನಾನು. ಓದುತ್ತಿರುವ ನೀವು. ನೀವು ಯಾರಾದರೂ ಆಗಿರಿ, – ಕೊರತೆಯಿಲ್ಲದ, ಸಾಕಾಗುವಂತ. ಕೊಂಚ ಹೆಚ್ಚು ಇರಬಹುದಾದ ಸಿರಿವಂತರ ಆಹಾರ, ಉಸಿರಾಡಲು ಶುದ್ಧವಾದ ಬೆಚ್ಚನೆಯ ಗಾಳಿ. ಬೇಸಿಗೆ ಚಳಿಗೆ ಉಡಿಗೆಗಳು. ಹಲವು ಬಗೆಯ ಆಹ್ಲಾದಗಳು. ಇವೆಲ್ಲಕ್ಕೂ ಮಿಗಿಲಾಗಿ ಹಗಲಿನಲ್ಲಿ ವಿರಾಮ. ರಾತ್ರಿಯಲ್ಲಿ ತಡೆಯಿಲ್ಲದ ವಿಶ್ರಾಂತಿ ಇವಿಷ್ಟನ್ನೂ ಪಡೆದಿದ್ದೇವೆ. ನಮ್ಮ ಪಕ್ಕದಲ್ಲೇ ಪುಷ್ಟಿನೀಡುವ ಆಹಾರವಾಗಲೀ. ಆರೋಗ್ಯದಾಯಕ ವಸತಿಯಾಗಲೀ. ಸಾಕಾಗುವಷ್ಟು ಉಡುಪಾಗಲೀ, ಉಲ್ಲಾಸವಾಗಲೀ ಇಲ್ಲದೆ, ಇವೆಲ್ಲಕ್ಕೂ ಮಿಗಿಲಾಗಿ ವಿರಾಮವಾಗಲೀ ವಿಶ್ರಾಂತಿಯಾಗಲೀ ಇಲ್ಲದ ಜನರು ಬದುಕುತ್ತಾರೆ: ದುಡಿಮೆಯಿಂದಾಗಿ. ನಿದ್ರೆಯಿಲ್ಲದ ರಾತ್ರಿಗಳಿಂದಾಗಿ, ರೋಗಗಳಿಂದಾಗಿ ಕುಂದಿದ ವೃದ್ಧರು. ಮಕ್ಕಳು. ಹೆಂಗಸರು. ನಮ್ಮ ಮೂಲಭೂತ ಅವಶ್ಯಕತೆಗಳಾಗಿರದೇ ಕೇವಲ ಶೋಭೆಗಳಿಗೆ ಬೇಕಾದ ಹಲವು ಹತ್ತು ಸೌಕರ್ಯ. ಸುಖಲೋಲುಪತೆಗಳ ಪ್ರತೀಕಗಳಾಗುವ ವಸ್ತುಗಳನ್ನು ಅಂತಹವುಗಳನ್ನು ತಾವೇ ಹೊಂದಿರದಿದ್ದರೂ ಕೂಡ. ನಮಗಾಗಿ ತಯಾರಿಸುತ್ತಾ ತಮ್ಮ ಬದುಕನ್ನು ನವೆಸುತ್ತಾರೆ. ಆದ್ದರಿಂದ ಒಬ್ಬ ನೀತಿವಂತ (ಆತನನ್ನು ಕ್ರಿಶ್ಚಿಯನ್ ಎಂದು ನಾನು ಸೂಚಿಸುವುದಿಲ್ಲ, ಮಾನವೀಯ ದೃಷ್ಟಿಯನ್ನು ಘೋಷಿಸುವ. ನ್ಯಾಯವನ್ನು ಎತ್ತಿಹಿಡಿಯುವ ಯಾವನೇ ವ್ಯಕ್ತಿಯಾಗಬಹುದು) ಇಂತಹ ಸ್ಥಿತಿಯಲ್ಲಿ ತಯಾರಿಸಲಾದ ಲೋಲುಪತೆಯ ವಸ್ತುಗಳ ಬಳಕೆಯನು ತಡೆಹಿಡಿಯಲು ತನ್ನ ಬದುಕನ್ನು ಬದಲಾಯಿಸಿಕೊಳ್ಳಲು ಹಾತೊರೆಯದಿರಲಾರ.

ಹೊಗೆಸೊಪ್ಪಿನ ಜತೆ ಕೆಲಸಮಾಡುವ ಜನರ ಬಗ್ಗೆ ಅನುಕಂಪೆಯಿರುವ ವ್ಯಕ್ತಿ ಮೊದಲು ಧೂಮಪಾನವನ್ನು. ಸಹಜವಾಗಿಯೇ ಕೈಬಿಡಬೇಕು. ಏಕೆಂದರೆ ಹೊಗೆಸೊಪ್ಪನ್ನು ಕೊಂಡು ಸೇದುವುದನ್ನು ಮುಂದುವರೆಸುವುದರಿಂದ ಆತ. ಮನುಷ್ಯನ ಆರೋಗ್ಯವನ್ನು ಹಾಳುಗೆಡಹುವ ಹೊಗೆಸೊಪ್ಪಿನ ತಯಾರಿಕೆಯನ್ನು ಪ್ರೋತ್ಸಾಹಿಸುತ್ತಾನೆ. ಎಲ್ಲ ಲೋಲುಪತೆಯ ವಸ್ತುಗಳ ಕಥೆಯೂ ಹೀಗೆ. ಬ್ರೆಡ್ ತಯಾರಿಸಲು ಆಗಿರುವ ಶ್ರಮವನ್ನು ಪರಿಗಣಿಸದೆ ಒಬ್ಬ ಅದನ್ನು ತಿನ್ನುವುದನ್ನು ಮುಂದುವರಿಸುತ್ತಾನೆಯೆಂದರೆ. ಆತ ವಸ್ತುಸ್ಥಿತಿ ಬದಲಾಗುವುದನ್ನು ಕಾಯುತ್ತಲೇ. ಅನಿವಾರ್ಯವಾದುದನ್ನು ಕೈಬಿಡಲಾರನೆಂಬುದು ಅದಕ್ಕೆ ಕಾರಣ. ಕೇವಲ ಅನವಶ್ಯಕವಷ್ಟೇ ಅಲ್ಲದೆ ತೋರಿಕೆಗಾಗಿ ಉಪಯೋಗಿಸಲಾಗುವ ವಸ್ತುಗಳ ವಿಚಾರದಲ್ಲಿ ಮಾತ್ರ, ಕೆಲವು ವಸ್ತುಗಳ ತಯಾರಿಕೆಯಲ್ಲಿ ತೊಡಗಿರುವ ಜನರ ಬಗ್ಗೆ ನಾನು ಅನುಕಂಪವನ್ನುಳ್ಳವನಾದರೆ ಆ ವಸ್ತುಗಳನ್ನು ಕೊಳ್ಳುವುದನ್ನು ಕೈಬಿಡಲೇಬೇಕು ಎನ್ನುವ ನಿರ್ಣಯವಲ್ಲದೇ ಬೇರೆ ದಾರಿಯೇ ಇಲ್ಲ.

ಆದರೆ ಈ ದಿನಗಳಲ್ಲಿ ಜನರು ಇನ್ನೊಂದು ವಿಧದಲ್ಲಿ ವಾದಿಸುತ್ತಾರೆ. ಅವರು ಅತ್ಯಂತ ಜಟಿಲವಾದ. ವಿಚಿತ್ರವಾದ ವಾದಗಳನ್ನು ಹುಡುಕುತ್ತಾರೆಯೇ ಹೊರತು ನಿಜವಾಗಿ ಒಬ್ಬ ಮನುಷ್ಯನಿಗೆ ಏನು ಹೊಳೆಯುತ್ತದೆಂಬುದನ್ನು ಗಮನಿಸುವುದಿಲ್ಲ.

ಅವರ ಪ್ರಕಾರ ಲೋಲುಪತೆಯಿಂದ ದೂರವಿರಬೇಕಾಗಿಲ್ಲ. ದುಡಿಮೆಗಾರರ ಪರಿಸ್ಥಿತಿಗೆ ಒಬ್ಬ ಅನುಕಂಪವನ್ನು ವ್ಯಕ್ತಪಡಿಸಬಹುದು. ಅವರನ್ನು ಕುರಿತು ಭಾಷಣಗಳನ್ನು ಮಾಡಬಹುದು. ಪುಸ್ತಕಗಳನ್ನು ಬರೆಯಬಹುದು ಮತ್ತು ಅದೇ ವೇಳೆಗೆ. ಆ ಜನರನ್ನು ನಾಶದತ್ತ ಒಯ್ಯುತ್ತಿರುವ ದುಡಿಮೆಯಿಂದ ಲಾಭಗಳಿಸುತ್ತಲೂ ಇರಬಹುದು.

ಇನ್ನೊಂದು ವಾದದ ಪ್ರಕಾರ. ದುಡಿಮೆಗಾರರಿಗೆ ಕೆಡುಕನ್ನು ತರುವ ಶ್ರಮದಿಂದ ಲಾಭಗಳನ್ನು ಪಡೆಯಬಹುದು ಏಕೆಂದರೆ ಹಾಗೆ ನಾನು ಮಾಡದೇ ಇದ್ದರೂ ಬೇರೆಯವರಾದರೂ ಪಡೆದೇ ಪಡೆಯುತ್ತಾರೆ. ಈ ವಾದ ಹೇಗಿದೆಯೆಂದರೆ. ನಾನು ನನ್ನ ಆರೋಗ್ಯಕ್ಕೆ ಹಾನಿಯನ್ನುಂಟುಮಾಡುವ ವೈನನ್ನು ಕುಡಿಯಬೇಕು ಏಕೆಂದರೆ ಅದನ್ನು ಕೊಂಡು ತಂದಾಗಿದೆ ಹಾಗೂ ನಾನು ಕುಡಿಯದಿದ್ದರೂ ಇತರರಾದರೂ ಕುಡಿಯುತ್ತಿರುತ್ತಾರೆ ಎಂದಂತೆ.

ಇನ್ನೂ ಒಂದು ವಾದವಂತೆ. ಲೋಲುಪತೆಯ ವಸ್ತುಗಳನ್ನು ಉತ್ಪನ್ನಮಾಡಲು ಅವಕಾಶನೀಡುವುದು ಒಂದು ರೀತಿಯಿಂದ ಉಪಯೋಗಕಾರಿ, ಏಕೆಂದರೆ ಅದರ ಮೂಲಕ ಕೆಲಸಗಾರರಿಗೆ ಬದುಕುವ ಮಾರ್ಗವನ್ನು ತೋರಿಸಿದಂತೆ ಆಗುತ್ತದೆ ಎಂದು ಹೇಳಲಾಗುತ್ತದೆ: ಈ ವಾದದ ಪ್ರಕಾರ. ನಮಗೆ ಅನವಶ್ಯಕವಾದ. ಶ್ರಮಜೀವಿಗಳಿಗೆ ಕೆಡಕನ್ನು ತರುವ ವಸ್ತುಗಳನ್ನು ತಯಾರಿಸುವುದಲ್ಲದೆ ಅನ್ಯ ಮಾರ್ಗಗಳಾವುದರಿಂದಲೂ. ಅವರು ಬದುಕುವಂತೆ ಮಾಡುವುದು ಅಸಾಧ್ಯವೆಂದು ಕೊಳ್ಳಬೇಕಾಗುತ್ತದೆ.

ಈಚೆಗೆ ಜನಪ್ರಿಯವಾಗಿರುವ ಇನ್ನೊಂದು ವಾದದ ಪ್ರಕಾರ. ದುಡಿಮೆಯ ಹಂಚಿಕೆ ಎನ್ನುವ ಸಿದ್ಧಾಂತದಂತೆ ಒಬ್ಬ ವ್ಯಕ್ತಿ ಯಾವುದೇ ಕೆಲಸದಲ್ಲಿರಲಿ. ಸರ್ಕಾರಿ ನೌಕರ. ಧರ್ಮಗುರು. ಜಮೀನುದಾರ. ಉತ್ಪಾದಕ ಅಥವಾ ವ್ಯಾಪಾರಿ ಹೀಗೆ ಯಾವುದೇ ಆಗಬಹುದು. ಆ ಕೆಲಸವೂ ಕೂಡ. ಅತ ಲಾಭಪಡೆಯುತ್ತಿರುವ ಶ್ರಮಜೀವಿ ವರ್ಗದ ದುಡಿಮೆಗೆ ಸಮಾನವಾದುದು ಎನ್ನಲಾಗುತ್ತಿದೆ. ಒಬ್ಬ ದೇಶಕ್ಕಾಗಿ ದುಡಿದರೆ. ಇನ್ನೊಬ್ಬ ಚರ್ಚಿನಲ್ಲಿ. ಮೂರನೆಯವನು ವೈಜ್ಞಾನಿಕ ಕ್ಷೇತ್ರದಲ್ಲಿ ನಾಲ್ಕನೆಯವನು ಕಲೆಯ ಮೂಲಕ ಹಾಗೆ ಐದನೆಯವನೊಬ್ಬ ದೇಶ, ಚರ್ಚ್. ವಿಜ್ಞಾನ. ಕಲೆಗಳಿಗಾಗಿ ದುಡಿಯುವವರಿಗಾಗಿ ದುಡಿಯುತ್ತಾನೆ. ಇವರೆಲ್ಲಾ ಮನುಷ್ಯರಿಂದ ದುಡಿಮೆಯ ರೂಪದಲ್ಲಿ ಏನನ್ನು ಪಡೆಯುತ್ತಾರೋ ಅದಕ್ಕೆ ತಮ್ಮ ದುಡಿಮೆ ಸಮಾನವಾಗಿರುತ್ತದೆ ಎಂದು ನಂಬುತ್ತಾರೆ. ತಮ್ಮ ಕರ್ತೃತ್ವಶಾಲಿಗುಣವನ್ನು ಹೆಚ್ಚಿಸಿಕೊಳ್ಳದೆ: ಲೋಲುಪತೆಯ ಆಸಕ್ತಿಯನ್ನು ಮಾತ್ರ ಹೆಚ್ಚಿಸಿಕೊಳ್ಳುತ್ತಾ ಹೋಗುವುದರಿಂದಲೇ ತಮ್ಮ ಶ್ರಮದ ಫಲ ತಾವು ಸ್ವೀಕರಿಸುವ ಶ್ರಮದ ಫಲಕ್ಕೆ ಸರಿಸಾಟಿ ಎಂದು ಈ ಜನರು ನಂಬುತ್ತಾರೆ ಎನ್ನುವುದು ಆಶ್ಚರ್ಯ ತರುತ್ತದೆ.

ಇತರರ ಬಗ್ಗೆ ಈ ಜನರು ನೀಡುವ ನಿರ್ಣಯಗಳನ್ನು ಗಮನಿಸಿದರೆ ಪ್ರತಿಯೊಬ್ಬನೂ ತಾನು ಸ್ವೀಕರಿಸುವ ಶ್ರಮದ ಫಲಕ್ಕೆ ಅನರ್ಹನೆಂಬುದು ಗೊತ್ತಾಗುತ್ತದೆ. ಸರ್ಕಾರಿ

ನೌಕರರು. ಜಮೀನುದಾರರು ತಮ್ಮ ಪಕ್ಷಕ್ಕೆ ಸರಿದೂಗುವಂತೆ ದುಡಿಯುವುದಿಲ್ಲ ವೆನ್ನುತ್ತಾರೆ, ಜಮೀನುದಾರರು ಇದನ್ನೇ ವ್ಯಾಪಾರಿಗಳ ಬಗ್ಗೆ ಹೇಳಿದರೆ, ವ್ಯಾಪಾರಿಗಳು ಸರ್ಕಾರಿ ನೌಕರರ ಬಗ್ಗೆ ಹಾಗೇ ಮುಂದುವರಿಯುತ್ತದೆ. ಆದರೆ ಇದರಿಂದ ಸ್ವತಃ ಅವರೇನು ಗೊಂದಲಕ್ಕೆ ಒಳಗಾಗುವುದಿಲ್ಲ. ಹಾಗೇ ತಾವು ಇತರರಿಗೆ ಎಷ್ಟು ದುಡಿಯು ತ್ತಾರೊ ಅಷ್ಟೇ ಪ್ರಮಾಣದಲ್ಲಿ ಮಾತ್ರ ಇತರರ ದುಡಿಮೆಯಿಂದ ಲಾಭ ಪಡೆಯುತ್ತಿರು ವುದಾಗಿ ನಂಬಿಸುತ್ತಾರೆ. ಶ್ರಮವನ್ನು ಅವಲಂಬಿಸಿ ಸಂಬಳವನ್ನು ನಿಗದಿಮಾಡುವುದಿಲ್ಲ. ಸಂಬಳವನ್ನು ಗಮನಿಸಿ ಈ ಕಲ್ಪನಾಶ್ರಮದ ಬೆಲೆಯನ್ನು ನಿಗದಿಮಾಡಲಾಗುತ್ತಿದೆ. ಒಬ್ಬರನ್ನೊಬ್ಬರು ಅವರು ನಂಬಿಸಿಕೊಂಡರೂ, ಅವರ ಎಲ್ಲ ವಾದಗಳೂ ಅವರನ್ನು ಸಮರ್ಥಿಸುವುದಿಲ್ಲವೆಂದೂ ಹೃದಯಾಂತರಾಳದಲ್ಲಿ ಅವರೆಲ್ಲಾ ತಿಳಿದಿದ್ದಾರೆ. ಶ್ರಮ ಜೀವಿಗಳಿಗೆ ತಾವು ಆವಶ್ಯಕವಲ್ಲವೆಂದೂ ಆ ಜನರ ದುಡಿಮೆಯನ್ನು ತಾವು ಕಬಳಿಸುತ್ತಿರು ವುದಕ್ಕೆ 'ದುಡಿಮೆಯ ಹಂಚಿಕೆ' ಸಿದ್ಧಾಂತ ಕಾರಣವಾಗಿರದೇ ಹಾಗೆ ಮಾಡುವುದಕ್ಕೆ ಅಧಿಕಾರವಿರುವುದು ಹಾಗೂ ಹಾಗೆಮಾಡದೆ ಇರಲಾರದಷ್ಟು ಮಟ್ಟಿಗೆ ತಾವು ಪತಿತರಾಗಿರುವುದು ಕಾರಣವೆಂದೂ ಗೊತ್ತಿದೆ.

ಇದೆಲ್ಲಾ. ಋಜು ಜೀವನಕ್ಕೆ ಬೇಕಾದ ಮೂಲಭೂತ ಗುಣಗಳನ್ನು ಗಳಿಸಿಕೊಳ್ಳದೇ ಋಜು ಜೀವನವನ್ನು ಬದುಕಬಹುದೆಂದು ಈ ಜನರು ಕಲ್ಪಿಸಿಕೊಂಡದ್ದರಿಂದ ಉಂಟಾದದ್ದು.

ಆ ಮೂಲಭೂತ ಗುಣವೇ ಆತ್ಮನಿಗ್ರಹ.

## 8

ಆತ್ಮನಿಗ್ರಹವಿಲ್ಲದ ಶುದ್ಧ ಜೀವನ ಇರಲಿಲ್ಲವಷ್ಟೇ ಅಲ್ಲ, ಇರಲೂ ಸಾಧ್ಯವೂ ಇಲ್ಲ. ಅದು ಕಲ್ಪನಾತೀತ. ಒಳ್ಳೆಯತನದ ಗಳಿಕೆ ಅದರಿಂದಲೇ ಪ್ರಾರಂಭವಾಗಬೇಕು.

ಒಳ್ಳೆಯ ಗುಣಗಳ ಏಣಿಯೊಂದಿದೆ. ಒಬ್ಬ ಎತ್ತರದ ಮೆಟ್ಟಿಲನ್ನು ಏರಬೇಕಾದಲ್ಲಿ ಕೆಳಗಿನದರಿಂದಲೇ ಪ್ರಾರಂಭಿಸುವುದು ಅವಶ್ಯಕ. ಯಾವುದನ್ನು ನಮ್ಮ ಪೂರ್ವಜರು ಆತ್ಮನಿಗ್ರಹ ಅಥವಾ ಹದಗೊಳ್ಳುವಿಕೆ ಎಂದು ಕರೆದರೋ ಅದನ್ನು. ಇತರ ಗುಣಗಳನ್ನು ಸ್ಥಾಪಿಸಬೇಕೆಂದಿರುವಾತ. ಮೊದಲು ಸಾಧಿಸಬೇಕು.

ಕ್ರಿಸ್ತನ ಬೋಧನೆಯಲ್ಲಿ ಸ್ವಾರ್ಥ–ತ್ಯಾಗದಲ್ಲೇ ಆತ್ಮನಿಗ್ರಹವೂ ಸೇರಿಕೊಂಡಿತ್ತಾ ದರೂ ಅನುಕ್ರಮ ಮಾತ್ರ ಹಾಗೇ ಉಳಿದಿತ್ತು ಮತ್ತು ಯಾವುದೇ ಕ್ರಿಶ್ಚಿಯನ್ ಗುಣಗಳನ್ನು ಆತ್ಮನಿಗ್ರಹವಿಲ್ಲದೆ ಗಳಿಸುವುದು ಸಾಧ್ಯವಿಲ್ಲ. ಇದು ಹೀಗಾಗುವುದು ನಿಯಮವನ್ನು ಸೂಚಿಸಲಾಗಿದೆ ಎಂದಲ್ಲ, ವಸ್ತುಸ್ಥಿತಿಯ ಸ್ವರೂಪವೇ ಹಾಗಿದೆ.

ಇಷ್ಟಾದರೂ ಋಜು ಜೀವನದ ಮೊದಲ ಹೆಜ್ಜೆಯಾದ ಆತ್ಮನಿಗ್ರಹ ಕೂಡ ಒಂದೇ ಬಾರಿಗೆ ಸಾಧಿತವಾಗದೆ ಹಂತ ಹಂತಗಳಲ್ಲಿ ಮಾತ್ರ ಲಭಿಸುತ್ತದೆ.

ಆತ್ಮನಿಗ್ರಹವೆಂದರೆ ಬಯಕೆಗಳಿಂದ ಮನುಷ್ಯನಿಗೆ ಮುಕ್ತಿ ದೊರೆತು. ಹದಗೊಂಡ ಸ್ಥಿತಿಗೆ ಬರುವಂತೆ ಮಾಡುವುದು. ಆದರೆ ಮನುಷ್ಯನ ಬಯಕೆಗಳು ಹಲವು. ಅವುಗಳನ್ನು ತಣಿಸಲು ಆತ. ಯಾವುದನ್ನು ಆಧರಿಸಿ ದೊಡ್ಡ ಆಸೆಗಳು ಬೆಳೆಯುತ್ತವೋ ಅಂತಹ ಚಿಕ್ಕ ಆಸೆಗಳನ್ನು ಪೂರೈಸುವುದಕ್ಕೆ ಆರಂಭಿಸಬೇಕೇ ಹೊರತು ದೊಡ್ಡ ಆಸೆಗಳಿಂದಲ್ಲ. ದೇಹವನ್ನು ಅಲಂಕರಿಸಿಕೊಳ್ಳುವುದು. ಕ್ರೀಡೆಗಳು. ಮನರಂಜನೆ. ಹರಟೆ, ಕುತೂಹಲ ಇಂತಹ ದೊಡ್ಡ ಆಸೆಗಳ ಜತೆ ಹೊಟ್ಟೆಬಾಕತನ, ಸೋಮಾರಿತನ. ದೈಹಿಕ ಕಾಮುದಂತಹ ಮೂಲಭೂತ ಆಸೆಗಳೂ ಇರುತ್ತವೆ. ಈ ಆಸೆಗಳನ್ನು ಮೊದಲಿನಿಂದ ತಣಿಸಲು ಆರಂಭಿಸಬೇಕು; ಸರಳವಾದುವು ಮೊದಲೇ ವಿನಃ ಸಂಕೀರ್ಣವಾದುವುಗಳಲ್ಲ. ಅಲ್ಲದೆ ಅದರಲ್ಲೂ ಒಂದು ಕ್ರಮ ಇರುತ್ತದೆ. ಮನುಷ್ಯನ ವಿವೇಕ ಹಾಕಿಕೊಟ್ಟ ಸಂಪ್ರದಾಯ ಹಾಗೂ ವಸ್ತು ಸ್ಥಿತಿಯನ್ನು ಆಧರಿಸಿ ಈ ಕ್ರಮ ನಿರ್ಧಾರಿತವಾಗಿರುತ್ತದೆ.

ಹೆಚ್ಚು ತಿನ್ನುವ ಮನುಷ್ಯ ಸೋಮಾರಿತನವನ್ನು ಪರಿಹರಿಸಿಕೊಳ್ಳಲಾರ ಹಾಗೇ ಹೊಟ್ಟೆಬಾಕತನ ಮತ್ತು ಸೋಮಾರಿತನದವನೊಬ್ಬ ದೈಹಿಕ ಕಾಮಲಾಲಸೆಯನ್ನು ತಣಿಸಲಾರ. ಆದರಿಂದಾಗಿ, ಎಲ್ಲ ನೀತಿಬೋಧನೆಗಳ ಪ್ರಕಾರ, ಆತ್ಮ ನಿಗ್ರಹದ ಪ್ರಯತ್ನದ ಮೊದಲ ಹೆಜ್ಜೆ ಹೊಟ್ಟೆಬಾಕತನದ ವಿರುದ್ಧ ಹೋರಾಡುವುದು – ಉಪವಾಸಮಾಡುವುದು. ನಮ್ಮ ಕಾಲದಲ್ಲಂತೂ, ಋಜು ಜೀವನದ ಸಾಧನೆಗೆ ಸಂಬಂಧಿಸಿದ ಎಲ್ಲ ಗಂಭೀರ ಅಂಶಗಳನ್ನು ಎಷ್ಟು ಸಂಪೂರ್ಣವಾಗಿ ಮತ್ತು ಎಷ್ಟು ಹಿಂದೆಯೇ ಮರೆತಿದ್ದೇವೆಯೆಂದರೆ, ಯಾವುದನ್ನು ಸಾಧಿಸಕೊಳ್ಳದೆ ಇದ್ದರೆ ಉಳಿದವು ಅಸಾಧ್ಯ ವಾಗುತ್ತವೋ ಅಂತಹ ಮೊದಲ ಗುಣವಾ ದಆತ್ಮನಿಗ್ರಹವನ್ನು ಅನವಶ್ಯಕವೆಂದು ಪರಿಗಣಿಸಲಾಗಿದೆಯೆಂಬುದಷ್ಟೇ ಅಲ್ಲ. ಈ ಗುಣದ ಸಾಧನೆಗೆ ಅವಶ್ಯಕವಾದ ಅನುಕ್ರಮವನ್ನು ಕೂಡ ಕಡೆಗಣಿಸಿ, ಉಪವಾಸವನ್ನು ಇಲ್ಲವೇ ಮರೆಯಲಾಗಿದೆ ಅಥವಾ ಅರ್ಥಹೀನ ಮೂಢ ನಂಬಿಕೆಯೆಂದೋ. ಖಂಡಿತವಾಗಿಯೂ ಅನವಶ್ಯಕವಾದುದೆಂದೋ ತಿಳಿಯಲಾಗಿದೆ.

ಇಷ್ಟಾದರೂ. ಋಜು ಜೀವನಕ್ಕೆ ಆತ್ಮನಿಗ್ರಹ ಹೇಗೆ ಮೊದಲ ಹಂತವೋ ಹಾಗೇ ಉಪವಾಸ ಆತ್ಮನಿಗ್ರಹವುಳ್ಳ ಜೀವನಕ್ಕೆ ಮೊದಲ ಹಂತ.

ಒಬ್ಬ ಉಪವಾಸಮಾಡದೆ ಒಳ್ಳೆಯವನಾಗಿರಲು ಇಷ್ಟಪಡಬಹುದು, ಒಳ್ಳೆಯತನದ ಕನಸು ಕಾಣಬಹುದು. ಆದರೆ ಉಪವಾಸವನ್ನು ಆಚರಿಸದೆ ಒಳ್ಳೆಯವನಾಗಿ ಇರುವುದು. ಕುಳಿತವನು ಕಾಲೂರಿ ನಿಲ್ಲದೆ ನಡೆಯಬೇಕೆನ್ನುವಷ್ಟೇ ಅಸಾಧ್ಯ. ಉಪವಾಸ ಋಜ ಜೀವನಕ್ಕೆ ಅತ್ಯಂತ ಅವಶ್ಯಕವಾದ ಸಿದ್ಧಿ. ಹಾಗೆ ಹೊಟ್ಟೆಬಾಕತನ ಯಾವಾಗಲೂ ಇದಕ್ಕೆ ವಿರುದ್ಧವಾದ ಬದುಕಿನ ಮೊದಲ ಗುರುತು: ದುರದೃಷ್ಟವಶದಿಂದ ಈ ಕೆಟ್ಟಗುಣವೇ ನಮ್ಮಕಾಲದ ಬಹುಸಂಖ್ಯಾತ ಜನರ ಬದುಕಿನ ಪ್ರಮುಖ ಲಕ್ಷಣವಾಗಿದೆ.

ನಮ್ಮ ನಿತ್ಯದ ಬದುಕಿನಲ್ಲಿ ಸುತ್ತಲೂ ಕಾಣುವ ಜನರ ಮುಖಗಳನ್ನು. ದೇಹಗಳನ್ನು ನೋಡಿ. ಜೋಲಾಡುವ ಕೆನ್ನೆಗಳು ಗಲ್ಲಗಳು ಇರುವ ಮುಖಗಳಲ್ಲಿ ಕೊಬ್ಬಿದ ತೋಳು. ಮೀನಖಂಡಗಳಲ್ಲಿ. ಎದ್ದುಕಾಣುವ ಬೊಜ್ಜಿನಲ್ಲಿ ಅವರ ಸೋಮಾರಿ ಬದುಕು ಕೊಟ್ಟಿರುವ. ಮುಚ್ಚಿಡಲಾಗದ ಗುರುತುಗಳಿವೆ. ಇದು ಬೇರೇನೋ ಆಗಿರಲು ಸಾಧ್ಯವಿಲ್ಲ. ನಮ್ಮ ಬದುಕು ಮತ್ತು ನಮ್ಮ ಸಮಾಜದ ಬಹುಸಂಖ್ಯಾತ ಜನರ ಬದುಕಿನ ಹಿಂದೆ ಇರುವ ತ್ರಾಣವನ್ನು ಗಮನಿಸಿ ನಿಮ್ಮನ್ನು ನೀವೇ ಕೇಳಿಕೊಳ್ಳಿ. ಬಹುಸಂಖ್ಯಾತರ ಮುಖ್ಯ ಆಸಕ್ತಿ ಯಾವುದು? ನಿಜವಾದ ಆಸಕ್ತಿಗಳನ್ನು ಬಚ್ಚಿಟ್ಟು. ಅಸಹಜವಾದ ಸುಳ್ಳಾಗಿರುವ ಆಸಕ್ತಿಗಳನ್ನು ಘೋಷಿಸಿಕೊಳ್ಳುವ ನಮಗೆ. ಅವರ ಬದುಕಿನ ಪ್ರಮುಖ ಆಸಕ್ತಿ ಹಸಿವನ್ನು ತಣಿಸುವುದರಲ್ಲಿ. ತಿನ್ನುವುದರಲ್ಲಿ ಸಿಗುವ ಖುಷಿಯನ್ನು ಪಡೆಯುವುದರಲ್ಲಿ ಇದೆ ಎಂಬುದು ತಿಳಿದಾಗ ಆಶ್ಚರ್ಯವಾಗುತ್ತದೆ. ಬಡವರಿಂದ ಬಲ್ಲಿದರವರೆಗೆ ತಿನ್ನುವುದು ಬದುಕಿನ ಶ್ರೇಷ್ಠ ಗುರಿ. ಮುಖ್ಯ ಆಸಕ್ತಿ ಎಂದು ನನ್ನ ಅನಿಸಿಕೆ.

ದುಡಿಯುವ ಬಡವರು ಈ ಬಗೆಯ ಕಾಮನೆಗೆ ಅಂಟಿಕೊಳ್ಳದಂತೆ ಅವರ ಆದಾಯ ತಡೆಹಾಕಿರುವುದರಿಂದ, ಕೊಂಚಮಟ್ಟಿಗೆ ಬೇರೆಯಾಗುತ್ತಾರೆ. ಅವಕಾಶ ಹಾಗೂ ಆದಾಯ ಸಾಕಷ್ಟು ಸಿಕ್ಕಿದ್ದೇ ಆದರೆ, ಅವರೆಲ್ಲಾ ಮೇಲುವರ್ಗದವರನ್ನು ಅನುಕರಿಸುತ್ತಾ, ರುಚಿರುಚಿಯಾದ. ಪುಷ್ಟಿದಾಯಕ ಆಹಾರವನ್ನು ಶೇಖರಿಸಿ. ಸಾಕೆನಿಸುವಷ್ಟು ತಿಂದು ಕುಡಿಯುತ್ತಾರೆ. ಹೆಚ್ಚು ತಿಂದಂತೆಲ್ಲಾ ತಾವು ಉಲ್ಲಾಸದಿಂದ ತುಂಬಿರುವಂತೆಷ್ಟೇ ಅಲ್ಲದೆ. ಬಲಶಾಲಿಗಳಾಗಿ. ಆರೋಗ್ಯವಂತರಾಗಿ ಇರುವಂತೆ ಕನಸು ಕಾಣುತ್ತಾರೆ. ಆಹಾರವನ್ನು ಇದೇ ರೀತಿಯಲ್ಲಿ ಅರ್ಥವಿಸುವ ಮೇಲುವರ್ಗದವರು ಇವರಿಗೆ ಪ್ರೋತ್ಸಾಹವನ್ನು ನೀಡುತ್ತಾರೆ. ವಿದ್ಯಾವಂತ ವರ್ಗದವರು (ತುಟ್ಟಿಯಾದ ಆಹಾರ. ಮಾಂಸ ಮುಂತಾದವು ಸಮಗ್ರವಾದ ಆಹಾರಗಳೆಂದು ಅವರಿಗೆ ಭರವಸೆ ನೀಡುವ ಮಧ್ಯಕಾಲೀನ ಜನರ ಮೇಲ್ಪಂಕ್ತಿಯನ್ನನುಸರಿಸಿ) ಆನಂದ ಮತ್ತು ಆರೋಗ್ಯಗಳು ರುಚಿಯಾದ. ಪುಷ್ಟಿನೀಡುವ, ಸುಲಭವಾಗಿ ಜೀರ್ಣವಾಗುವ ಆಹಾರದಲ್ಲಿ ಅಡಗಿದೆಯೆಂದು, ಮುಚ್ಚಿಡಲು ಪ್ರಯತ್ನಿಸುತ್ತಾರಾದರೂ. ನಂಬಿದ್ದಾರೆ.

ಸಿರಿವಂತರ ಬದುಕನ್ನು ನೋಡಿ. ಅವರ ಮಾತುಕತೆ ಕೇಳಿ. ಎಷ್ಟು ಗಹನವಾದ ವಿಚಾರಗಳಿಂದ ತುಂಬಿರುತ್ತದೆ: ತತ್ತ್ವಶಾಸ್ತ್ರ, ವಿಜ್ಞಾನ. ಕಲೆ, ಕಾವ್ಯ ಐಶ್ವರ್ಯದ ವಿತರಣೆ. ಜನರ ಸುಖದುಃಖ. ಎಳೆಯರ ವಿದ್ಯಾಭ್ಯಾಸ! ಆದರೆ ಇದೆಲ್ಲಾ ಬಹು ಸಂಖ್ಯಾತರಿಗೆ ಹರಟೆ, ಅವರ ವ್ಯವಹಾರ. ಪ್ರಾಮಾಣಿಕವಾದ ವ್ಯವಹಾರಗಳ ನಡುವೆ ಸಿಗುವ ವಿರಾಮದಲ್ಲಿ ಬರುವಂತಹುದು. ಊಟಗಳ ನಡುವೆ, ಹೊಟ್ಟೆತುಂಬಿದ್ದು ಇನ್ನು ತಿನ್ನುವುದು ಸಾಧ್ಯವಿಲ್ಲವೆನ್ನುವ ಸ್ಥಿತಿಯಲ್ಲಿ ದೊರಕುವ ಬಿಡುವಿನಲ್ಲಿ ಮಾತ್ರ. ಯೌವನವನ್ನು ದಾಟಿದ ಬಹುಸಂಖ್ಯಾತ ಹೆಂಗಸರು ಗಂಡಸರಲ್ಲಿ ಉಳಿದಿರುವ ಏಕೈಕ ಜೀವಂತ ಆಸಕ್ತಿ—

ತಿನ್ನುವುದು. ಹೇಗೆ ತಿನ್ನುವುದು. ಏನನ್ನು ತಿನ್ನುವುದು. ಎಲ್ಲಿ ತಿನ್ನುವುದು ಹಾಗೇ ಯಾವಾಗ ತಿನ್ನುವುದು ಇತ್ಯಾದಿ.

ಗಂಭೀರ ಸನ್ನಿವೇಶವಾಗಲೀ, ಹರ್ಷವಾಗಲೀ, ಹಬ್ಬವಾಗಲಿ ಉದ್ಘಾಟನೆಯಾಗಲೀ 'ತಿನ್ನುವ' ವಿಧಿಯನ್ನು ಬಿಟ್ಟು ಇರಲಾರದು.

ಪ್ರಯಾಣಿಕರನ್ನು ನೋಡಿ. ಅವರ ವಿಷಯದಲ್ಲಂತೂ ಇದು ಖಂಡಿತ. "ಸಂಗ್ರಹಾಲಯ, ಪುಸ್ತಕಭಂಡಾರ. ಶಾಸನಸಭೆ...ಎಷ್ಟು ಚೆನ್ನ...ನಾವೀಗ ಎಲ್ಲಿ ಊಟಮಾಡೋಣ? ಎಲ್ಲಿ ಚೆನ್ನಾಗಿ ಊಟ ನೀಡುತ್ತಾರೆ?" ಸೊಗಸಾದ ದಿರುಸಿನಲ್ಲಿ ಸುಗಂಧ ದ್ರವ್ಯಗಳನ್ನು ಸಿಂಪಡಿಸಿಕೊಂಡು. ಹೂಗಳಿಂದಲಂಕೃತವಾದ ಮೇಜಿನ ಸುತ್ತ, ಔತಣಕೂಟಗಳಿಗೆ ಬರುವ ಜನರನ್ನು ನೋಡಿ......ಹಸ್ತಲಾಘವ. ನಗೆ ಎಷ್ಟು ಸೊಗಸಾಗಿರುತ್ತದೆ?

ಬಹುಸಂಖ್ಯಾತ ಜನರ ಮನಸ್ಸನ್ನು ಹೊಕ್ಕು ನೋಡುವುದು ಸಾಧ್ಯವಾದರೆ ಅವರಿಗೆಲ್ಲಾ ತುಂಬಾ ಇಷ್ಟವಾದುದು ಯಾವುದೆಂದು ಕಾಣುತ್ತೇವೆ? ಊಟ ತಿಂಡಿಗಾಗಿ ಬಯಕೆ. ಬಾಲ್ಯದ ನಂತರ ವ್ಯಕ್ತಿಗೆ ಕೊಡಬಹುದಾದ ಅತ್ಯಂತ ಕ್ರೂರವಾದ ಶಿಕ್ಷೆಯಾವುದು? ಕೇವಲ ರೊಟ್ಟಿ ನೀರುಗಳಲ್ಲಿ ಇಡುವುದು. ಅತ್ಯಂತ ಹೆಚ್ಚು ಸಂಬಳ ಪಡೆಯುವ ಕುಶಲ ಕರ್ಮಿಗಳು ಯಾರು? ಅಡಿಗೆಯವರು. ಮನೆಯೊಡತಿಯ ಮುಖ್ಯ ಆಸಕ್ತಿಯಾವುದು? ಮಧ್ಯಮವರ್ಗದ ಗೃಹಿಣಿಯರ ಮಾತುಕತೆಗಳಲ್ಲಿ ಸಾಮಾನ್ಯವಾಗಿ ಎತ್ತ ತಿರುಗುತ್ತವೆ? ಸಿರಿವಂತ ಗೃಹಿಣಿಯರ ಮಾತುಕತೆಯೂ ಆ ಕಡೆಯೇ ತಿರುಗದಿದ್ದರೆ. ಅದಕ್ಕೆ ಅವರು ವಿದ್ಯಾವಂತರಾಗಿರುವುದಾಗಲಿ. ಇನ್ನೂ ಪ್ರಮುಖವಾದ ಆಸಕ್ತಿಯನ್ನು ಹೊಂದಿರುವುದಾಗಲೀ ಕಾರಣವಾಗಿರದೆ. ಊಟದ ಕಾತರದಿಂದ ಅವರನ್ನು ಬಿಡುಗಡೆ ಮಾಡುವ ಮನೆಗೆಲಸದವಳೋ. ಅಡಿಗೆಯವನೋ ಅವರಲ್ಲಿ ಇರುತ್ತಾರೆ. ಈ ಸೌಕರ್ಯದಿಂದ ಅವರನ್ನೊಮ್ಮೆ ವಂಚಿತರನ್ನಾಗಿಸಿ ಯಾವುದು ಅವರ ಕಾತರಕ್ಕೆ ಕಾರಣವಾಗುತ್ತದೆ ಗಮನಿಸಿ. ಇದೆಲ್ಲಾ ಮತ್ತೆ ತಿನ್ನುವ ವಿಷಯದ ಕಡೆಗೆ ಬರುತ್ತದೆ, ಮಾಂಸದ ಬೆಲೆ. ಕಾಫಿ ತಯಾರಿಸುವ ಅತ್ಯುತ್ತಮ ವಿಧಾನ. ಸಿಹಿ ಕೇಕುಗಳ ತಯಾರಿಕೆ...ಹೀಗೆ...ಜನರು ಯಾವ ಸಮಾರಂಭವೇ ಆಗಲೀ...ನಾಮಕರಣ ಅಂತ್ಯಕ್ರಿಯೆ. ಮದುವೆ, ಪ್ರತಿಷ್ಠಾಪನೆ, ಗೆಳೆಯರ ಆಗಮನ, ಬೀಳ್ಕೊಡುಗೆ. ಸೇನೆಯ ತುಕಡಿಯ ನಾಮಕರಣ. ಖ್ಯಾತ ವಿಜ್ಞಾನಿಯ. ತತ್ತ್ವಶಾಸ್ತ್ರಜ್ಞನ ಇಲ್ಲವೇ ಧರ್ಮ ಬೋಧಕರ ಹುಟ್ಟಿದ ಅಥವಾ ಮೃತಿಹೊಂದಿದ ದಿನದ ಆಚರಣೆ......ಒಟ್ಟಿಗೆ ಸೇರುತ್ತಾರೆ. ಯಾವುದೇ ಗಹನವಾದ ಆಸಕ್ತಿಯುಳ್ಳವರಂತೆ ಒಟ್ಟಿಗೆ ಸೇರುತ್ತಾರೆ. ಆದರೆ ಅದೆಲ್ಲಾ ಸೋಗು. ಎಲ್ಲರಿಗೂ ಅಲ್ಲಿ ತಿನ್ನಲಿಕ್ಕೆ ಭಾರಿಭೋಜನವಿದೆ ಎನ್ನುವುದು ಗೊತ್ತು: ಕುಡಿತವೂ ಇರುತ್ತದೆ. ನಿಜವಾಗಿ ಇದೇ ಅವರನ್ನೆಲ್ಲಾ ಒಂದೆಡೆಗೆ ತರಲು ಕಾರಣ.

ಈ ಸಾಧನೆಗಾಗಿ, ಹಲವಾರು ದಿನಗಳಿಂದ ಪ್ರಾಣಿಗಳು ಅಸುನೀಗಿರುತ್ತವೆ. ಪಕ್ಕಂಗಟ್ಟಲೆ ಸಾಮಗ್ರಿಗಳು? ಅಂಗಡಿಗಳಿಂದ ಬಂದಿರುತ್ತವೆ. ಅಡುಗೆಯವರೂ ಅವರ ನೆರವಿನವರೂ ಅಡುಗೆಮನೆಯ ಸಹಾಯಕರೂ, ಕೆಲಸದ ಹೆಂಗಸರೂ, ಶುಭ್ರವಾದ ವಿಶೇಷ ತೊಡಿಗೆಗಳು, ಉದ್ದನೆಯ ಲಂಗಗಳು, ಟೋಪಿಗಳನ್ನು ತೊಟ್ಟು ದುಡಿದಿರುತ್ತಾರೆ. ತಿಂಗಳಿಗೆ 50 ಪೌಂಡುಗಳಿಗೂ ಹೆಚ್ಚು ಪಡೆಯುವ ಬಾಣಸಿಗರನ್ನು ನಿರ್ದೇಶನಗಳನ್ನು ಕೊಡಲು ನಿಯಮಿಸಲಾಗಿರುತ್ತದೆ. ಅಡುಗೆಯವರು ಕೊಚ್ಚುತ್ತಾ, ಮಿದಿಯುತ್ತಾ ಬೇಯಿಸುತ್ತಾ, ಸಿದ್ಧಗೊಳಿಸುತ್ತಾ, ಅಲಂಕರಿಸುತ್ತಾ ಇರುತ್ತಾರೆ. ಸಮಾರಂಭದ ಯಜಮಾನನೊಬ್ಬ ಎಲ್ಲ ಗಾಂಭೀರ್ಯ, ಗಹನತೆಯೊಡನೆ ಕಲೆಗಾರನಂತೆ, ತನ್ನ ಕಣ್ಣಿನಿಂದಲೇ ಎಲ್ಲವನ್ನೂ ಮಾಡುತ್ತಾ, ಲೆಕ್ಕಹಾಕುತ್ತಾ, ಶತಪಥ ತಿರುಗುತ್ತಾ, ಸರಿಪಡಿಸುತ್ತಾ ಇರುತ್ತಾನೆ. ಹೂಗಳಿಗಾಗಿ ಒಬ್ಬ ಮಾಲಿಯನ್ನು ನೇಮಿಸಿಕೊಳ್ಳಲಾಗುತ್ತಿದೆ........ ಜನರ ಒಂದು ಸೈನ್ಯವೇ, ಸಾವಿರಾರು ಕೆಲಸದ ದಿನಗಳನ್ನು ನುಂಗುತ್ತಾ, ಕಾರ್ಯನಿರತವಾಗಿರುತ್ತದೆ. ಜನರು ಒಂದೆಡೆ ಸೇರಿ, ಯಾರೋ ಮಹಾ ವಿಜ್ಞಾನಿಯ, ಧರ್ಮಬೋಧಕನನ್ನು ಕುರಿತು ಮಾತನಾಡಿಕೊಳ್ಳಲೆಂದು, ಮೃತಿಹೊಂದಿದ ಗೆಳೆಯನನ್ನು ನೆನಪಿಸಿಕೊಳ್ಳಲೆಂದೋ ಅಥವಾ ಹೊಸ ಬದುಕಿಗೆ ಕಾಲಿಡುತ್ತಿರುವ ನವದಂಪತಿಗಳನ್ನು ಹಾರಯಿಸಲೆಂದೋ ಇಷ್ಟೆಲ್ಲವೂ ಕೂಡ ನಡೆದಿರುತ್ತದೆ.

ಮಧ್ಯಮ ಹಾಗೂ ಕೆಳವರ್ಗದಲ್ಲಿಯಂತೂ ಪ್ರತಿ ಹಬ್ಬಗಳಲ್ಲೂ, ಪ್ರತಿ ಶ್ರಾದ್ಧ ಅಥವಾ ಮದುವೆಗಳಲ್ಲೂ ಭೂರಿಭೋಜನವೆಂಬುದು ಕಟ್ಟಿಟ್ಟಿದ್ದು. ಅಲ್ಲಿ ಈ ವಿಷಯ ಎಲ್ಲರಿಗೂ ಗೊತ್ತಾಗಿರುತ್ತದೆ. ಎಲ್ಲ ಗೋಷ್ಠಿಗಳ ಉದ್ದೇಶವೂ ಭೂರಿಭೋಜನವೆಂಬುದು ಎಷ್ಟು ನಿಶ್ಚಿತವೆಂದರೆ ಗ್ರೀಕ್ ಮತ್ತು ಫ್ರೆಂಚ್ ಭಾಷೆಗಳಲ್ಲಿ 'ಮದುವೆ' ಮತ್ತು 'ಔತಣ'ಗಳೆರಡಕ್ಕೂ ಒಂದೇ ಪದವಿದೆ. ಸಿರಿವಂತ ಮೇಲುವರ್ಗದಲ್ಲಿ, ಅವರಲ್ಲೂ ತಲೆಮಾರುಗಳಿಂದ ಐಶ್ವರ್ಯವಂತರಾಗಿದ್ದು ತಿದ್ದಿಕೊಂಡವರಲ್ಲಿ, ಔತಣ ಕೇವಲ ತೋರಿಕೆಗೆ ಬೇಕಾಗಿದ್ದು. ಗೌಣ ವಿಷಯವೆಂದು ಕಾಣುವಂತೆ ಮಾಡಲು ಸಾಕಷ್ಟು ಚಾತುರ್ಯವನ್ನು ಬಳಸಲಾಗುತ್ತದೆ. ಬಹಳ ಸಂದರ್ಭದಲ್ಲಿ ಅತಿಥಿಗಳು ಸಂಪೂರ್ಣವಾಗಿ ತೃಪ್ತರಾಗುತ್ತಾರೆ. ಆದ್ದರಿಂದ ತೋರಿಕೆ ಸುಲಭವಾಗುತ್ತದೆ.

ಅವರೆಲ್ಲಾ ಔತಣ, ತಿನ್ನುವುದು ಇತ್ಯಾದಿಗಳು ಬೇಕಿರಲಿಲ್ಲ ಅಲ್ಲದೆ ಭಾರಕೂಡ ಎಂದು ನೋಗುಹಾಕುತ್ತಾರೆ: ಆದರೆ ಅದು ಸುಳ್ಳು. ಅವರಿಗೆ 'ಒಂದುಸಾರಿ' ಅವರು ನಿರೀಕ್ಷಿಸುವ ರುಚಿಕರವಾದ ತಿಂಡಿಗಳ ಬದಲು, ಬ್ರೆಡ್ ಮತ್ತು ನೀರುಗಳು ಬೇಡ. ಗಂಜಿಯನ್ನೋ ಅಥವಾ ಅಂತದೇ ಏನನ್ನಾದರೂ ಕೊಟ್ಟು ಅದರಿಂದಾಗುವ ಗೊಂದಲವನ್ನು ಗಮನಿಸಿ ಹಾಗೆಯೇ ಒಂದು ಗೋಷ್ಠಿಯ ಉದ್ದೇಶ ಗಹನವಾದದ್ದೇನೂ ಆಗಿರದೆ ಔತಣವೇ ಆಗಿರುತ್ತದೆ ಎನ್ನುವ ಸತ್ಯ ಸಿದ್ಧವಾಗುವುದನ್ನು ನೋಡಿ.

ಮನುಷ್ಯರು ಏನನ್ನು ಮಾಡುತ್ತಾರೆ ನೋಡಿ. ಒಂದು ಪೇಟೆಯಲ್ಲಿ ಹೋಗಿ ಜನರು ಏನನ್ನು ಕೊಳ್ಳುತ್ತಾರೆ ಗಮನಿಸಿ – ಅಲಂಕಾರ ಸಾಮಗ್ರಿಗಳು ಹಾಗೂ ಭೋಜನ ವಸ್ತುಗಳು. ಒಬ್ಬ ತನ್ನ ಅವಶ್ಯಕತೆಯನ್ನು ಮೀರಿ ತಿನ್ನದೆ ಇದ್ದಲ್ಲಿ ಮಾತ್ರ ಈ ಬಯಕೆಯನ್ನು ನಿಗ್ರಹಿಸಲು. ತಿನ್ನುವುದರ ಬಗ್ಗೆ ಯೋಚಿಸದಿರಲು ಸಾಧ್ಯವಾಗುತ್ತದೆ. ತನ್ನ ಅವಶ್ಯಕತೆಗೆ ಅನುಗುಣವಾಗಿ ತಿನ್ನುವುದನ್ನು ನಿಲ್ಲಿಸಿದರೆ – ಎಂದರೆ ಹೊಟ್ಟೆ ತುಂಬಿದ್ದರೂ ತಿಂದರೆ ಆಗ ಈಗ ಇರುವ ಪರಿಸ್ಥಿತಿ ಉಂಟಾಗುತ್ತದೆ. ಮನುಷ್ಯರು ತಿನ್ನುವುದರಲ್ಲಿರುವ ಆನಂದವನ್ನು ಮೆಚ್ಚಿಕೊಂಡರೆ. ಈ ಆನಂದದ ಮೆಚ್ಚಿಗೆಗೆ ತಮ್ಮನ್ನು ತಾವು ತೆರೆದುಕೊಂಡರೆ. ಇದನ್ನು ಒಳ್ಳೆಯದೆಂದು ಭಾವಿಸಿದರೆ (ಇದೆಲ್ಲವೂ ನಿಜವಲ್ಲವೆಂದು ಸೋಗುಹಾಕುವ ವಿದ್ಯಾವಂತರ ಹಾಗೂ ಅವಿದ್ಯಾವಂತರಲ್ಲಿ ಬಹು ಜನರ ವಿಷಯದಲ್ಲಿ ನಿಜವಿದ್ದಂತೆ) ಈ ಆನಂದಕ್ಕೆ ಮಿತಿಯಿಲ್ಲ; ಅಲ್ಲದೆ ಅದು ಮೀರಲಾಗದ ಸೀಮೆಯಿಲ್ಲ. ಒಂದು ಅವಶ್ಯಕತೆಯ ಪೂರೈಕೆಗೆ ಮಿತಿಗಳಿರುತ್ತವೆ. ಆದರೆ, ಆನಂದಕ್ಕೆ ಯಾವುದೂ ಇಲ್ಲ. ನಮ್ಮ ಬಯಕೆಯ ಪೂರೈಕೆಗೆ ರೊಟ್ಟಿ. ಗಂಜಿ ಅಥವಾ ಅನ್ನ ಇವನ್ನು ತಿನ್ನುವುದು ಬೇಕು ಮತ್ತು ಅಷ್ಟಕ್ಕೆ ಸಾಕು. ಆದರೆ ಆನಂದ ಹೆಚ್ಚಳ ಪಡೆಯುವ ಮುಖಗಳಿಗೆ ಕೊನೆಯಿಲ್ಲ.

ರೊಟ್ಟಿ ಬೇಕಾದ ಮತ್ತು ಸಾಕಾಗುವ ಆಹಾರ (ಇದು ಕೇವಲ ರೊಟ್ಟಿಯನ್ನೇ ತಿಂದು ಶಕ್ತಿವಂತರಾಗಿ. ಚಟುವಟಿಕೆಯುಳ್ಳವರಾಗಿ. ಆರೋಗ್ಯವಂತರಾಗಿದ್ದು ಕಷ್ಟಪಟ್ಟು ಕೆಲಸಮಾಡುವ ಮಿಲಿಯಗಟ್ಟಲೆ ಜನರಿಂದ ಸಾಧಿತವಾಗಿದೆ) ಆದರೆ ರೊಟ್ಟಿಯನ್ನು ಕೊಂಚ ವ್ಯಂಜನಗಳೊಂದಿಗೆ ತಿನ್ನುವುದು ಹರ್ಷದಾಯಕ ಮಾಂಸದೊಡನೆ ಬೇಯಿಸಿದ ನೀರಿನಲ್ಲಿ ರೊಟ್ಟಿಯನ್ನು ಅದ್ದುವುದು ಇನ್ನೂ ಹರ್ಷತರುತ್ತದೆ. ಒಂದೋ. ಎರಡೋ ತರಕಾರಿಗಳನ್ನು ಈ ಸಾರಿನಲ್ಲಿ ಹಾಕುವುದು ಒಳ್ಳೆಯದು. ಮಾಂಸವನ್ನು ಬೇಯಿಸುವುದಕ್ಕಿಂತ ಹುರಿಯುವುದು ಸೊಗಸು. ಮಾಂಸದ ಕೆಲವು ವಿಶೇಷವಾದ ಭಾಗಗಳನ್ನು ಆಯ್ದುಕೊಂಡು ಅದನ್ನು ಹದವಾಗಿ ಬೆಣ್ಣೆಯೊಡನೆ ಹುರಿಯುವುದಂತೂ ಬಲು ಸೊಗಸು. ಇದಕ್ಕೆ ಸಾಸುವೆ. ತರಕಾರಿಗಳನ್ನು ಸೇರಿಸಿ. ಆಮೇಲೆ ಜತೆಗೆ ವೈನ್ ಬೇಕಿದ್ದರೆ ರೆಡ್‌ವೈನ್ ಕುಡಿಯಿರಿ. ಒಬ್ಬನಿಗೆ ಇದಕ್ಕಿಂತ ಇನ್ನೇನೂ ಬೇಡ. ಆದರೂ ಸಾಸ್ ಬೆರಸಿದ ಸೊಗಸಾದ ಮೀನುಗಳನ್ನು ವೈಟ್‌ವೈನ್ ಜತೆಗೆ ನುಂಗುವವರೂ ಇರುತ್ತಾರೆ. ಇನ್ನೇನು ತೃಪ್ತಿಯಾಗಲೀ ರುಚಿಯಾಗಲೀ ಸಿಗದಿದ್ದರೂ ಕೆಲವರು ಒಂದು ಸಿಹಿತಿಂಡಿಯನ್ನು ಕೂಡ – ಬೇಸಿಗೆಯಲ್ಲಾದರೆ ಐಸ್. ಚಳಿಗಾಲದಲ್ಲಾದರೆ ಬೇಯಿಸಿದ ಹಣ್ಣುಗಳನ್ನು – ಇವರ ಮೇಲೂ ತಿನ್ನಬಲ್ಲರು. ಹೀಗೆ ಒಂದು ಔತಣ. ಅದೂ ಸಾಧಾರಣ. ನಡೆಯುತ್ತದೆ. ಇಂತಹ ಔತಣದ ಆನಂದವನ್ನು ಬಹುಮಟ್ಟಿಗೆ ಹೆಚ್ಚಿಸಬಹುದು. ಅದೂ ಕೂಡ ಹೆಚ್ಚುತ್ತದೆ; ಈ ಹೆಚ್ಚಳಕ್ಕೆ ಮಿತಿಯಿಲ್ಲ: ಚುರುಕಾದ ಕುರುಕು ತಿಂಡಿಗಳು. ಊಟದ ಮೊದಲಿನ ಕೆಲವು ಪಾನೀಯಗಳೂ ಹಣ್ಣುಗಳೂ ಹಾಗೆ ರುಚಿರುಚಿ ವಸ್ತುಗಳ ವಿಧವಿಧದ ಮಿಶ್ರಣಗಳು…… ಹೂವು ಅಲಂಕಾರ ಜತೆಗೆ ಔತಣದ ಮಧ್ಯ ಸಂಗೀತ.

ಸೋಜಿಗದ ಮಾತೆಂದರೆ ಇಂತಹ ಔತಣ ಕೂಟಗಳಲ್ಲಿ ಕಂಠಮಿೂರಿ ತಿನ್ನುವ ಜನರು ಇನ್ನೂ ನೀತಿವಂತರಾಗಿಯೇ ಇದ್ದಾರೆಂದು ನಂಬಿಸಲಾಗುತ್ತಿದೆ.

9

ಒಳ್ಳೆಯ ಬದುಕಿಗೆ ಖಂಡಿತ ಬೇಕಾದ ನೆಲೆಗಳಲ್ಲಿ ಉಪವಾಸ ಕೂಡ ಒಂದು. ಆದರೆ ಉಪವಾಸದಲ್ಲಿ, ಆತ್ಮನಿಗ್ರಹದಲ್ಲಿ ಕೂಡ, ಒಂದು ಪ್ರಶ್ನೆ ಏಳುತ್ತದೆ: ಹೇಗೆ ಪ್ರಾರಂಭಿಸುವುದು? ಉಪವಾಸ ಹೇಗೆ? ಎಷ್ಟುಸಾರಿ ತಿನ್ನುವುದು, ಏನನ್ನು ತಿನ್ನುವುದು, ತಿನ್ನುವುದನ್ನು ತಪ್ಪಿಸುವುದು ಹೇಗೆ? ಸರಿಯಾದ ಕ್ರಮದ ಪರಿಚಯವಿಲ್ಲದೆ ಯಾವ ಕೆಲಸವನ್ನೂ ನಮಗೆ ಗಂಭೀರವಾಗಿ ಮಾಡಲು ಆಗುವುದಿಲ್ಲವಾದ್ದರಿಂದ, ಯಾವುದರಿಂದ, ಆಹಾರದ ವಿಷಯದಲ್ಲಿನ ಆತ್ಮನಿಗ್ರಹವನ್ನು ಪ್ರಾರಂಭಿಸಬೇಕೆಂಬುದು ತಿಳಿಯದೆ ಉಪವಾಸವನ್ನು ಮಾಡಲಾರೆವು.

ಉಪವಾಸದ ಮಾತಿರಲಿ! ಅದು ಹೇಗೆ ಮತ್ತು ಎಲ್ಲಿ ಎಂಬುದರ ವಿಶ್ಲೇಷಣೆಯೇ ಸಾಕು. ಬಹುಸಂಖ್ಯಾತ ಜನರಿಗೆ ಇದೊಂದು ವಿಪರೀತವಾದ, ವ್ಯಗ್ರವಾದ ಆಸಕ್ತಿ ಯಾಗಿ ಕಾಣಬಹುದು.

ಒಮ್ಮೆ ಒಬ್ಬ ಧರ್ಮಗುರು ಆಶ್ರಮವಾಸಿಗಳ ತಪಸ್ಸನ್ನು ಟೀಕಿಸುತ್ತಾ ತನ್ನ ಸ್ವಾಂತಿಕೆಯನ್ನು ಕುರಿತು, ನನ್ನೊಡನೆ ಹೇಳಿದ ಮಾತುಗಳು ನೆನಪಿಗೆ ಬರುತ್ತವೆ: "ನಮ್ಮದು ಉಪವಾಸದ, ಏಕಾಂತಗಳ ಕ್ರಿಶ್ಚಿಯನ್ ಧರ್ಮವಲ್ಲ, ದನದ ಮಾಂಸದ್ದು". ಕ್ರಿಶ್ಚಿಯನ್ ಧರ್ಮ ಅಥವಾ ಒಟ್ಟಾರೆ ಒಳ್ಳೆಯಗುಣ ಮತ್ತು ದನದ ಮಾಂಸ!

ಕ್ರಿಶ್ಚಿಯನ್ ಇಲ್ಲವೇ ಇನ್ನಾವುದೇ ಮಾರ್ಗದರ್ಶನವಿಲ್ಲದಿದ್ದ ದೀರ್ಘಕಾಲದ ಅಂಧಕಾರದ ಸಮಯದಲ್ಲಿ ಎಷ್ಟೋ ಕ್ರೂರ-ಅನೈತಿಕ ಆಲೋಚನೆಗಳು ನಮ್ಮ ಬದುಕಿನೊಳಗೆ (ಅದರಲ್ಲೂ ಒಳ್ಳೆಯ ಬದುಕಿನ ಕಡೆಗೆ ಇಡಬೇಕಾದ ಮೊದಲ ಹೆಜ್ಜೆಗಳ ಕೆಳವಲಯಕ್ಕೆ ಎಂದರೆ ಯಾರೂ ಗಮನ ಕೊಡದಿರುವ, ನಮ್ಮ ಮತ್ತು ಆಹಾರದ ನಡುವಿನ ಸಂಬಂಧದೊಳಕ್ಕೆ) ಹೇಗೆ ಪ್ರವೇಶಿಸಿವೆಯೆಂದರೆ, ಕ್ರಿಶ್ಚಿಯನ್ ಧರ್ಮ ಅಥವಾ ದನದ ಮಾಂಸವನ್ನು ಒಳಗೊಳ್ಳುವ ಒಳ್ಳೆಯ ಗುಣವನ್ನು ಎತ್ತಿಹಿಡಿಯುವುದರಲ್ಲಿ ಇರುವ ಭಂಡತನ, ಅರ್ಥಹೀನತೆಗಳನ್ನು ಈಗ ಕೂಡ ನಾವು ಅರ್ಥಮಾಡಿಕೊಳ್ಳುವುದು ಕಷ್ಟವಾಗುತ್ತದೆ.

ಈ ಸಾಹಚರ್ಯದಿಂದ ನಾವು ಗಾಬರಿಯಾಗುವುದಿಲ್ಲವೇಕೆಂದರೆ ನಮ್ಮನ್ನು ವಿಚಿತ್ರ ಪರಿಸ್ಥಿತಿಯೊಂದು ಆವರಿಸಿದೆ. ನಾವು ನೋಡುತ್ತೇವೆ ಆದರೆ ಕಾಣುವುದಿಲ್ಲ; ಕಿವಿಗೊಡುತ್ತೇವೆ, ಕೇಳುವುದಿಲ್ಲ; ಯಾವುದಕ್ಕೂ ಹೊಂದಿಕೊಂಡಿರದ ಮನುಷ್ಯನಿಗೆ ಗೊತ್ತಾಗುವ ವ್ಯತ್ಯಾಸವನ್ನು ಗುರುತಿಸಲಾರದಮಟ್ಟಿಗೆ ಅಭ್ಯಾಸವನ್ನು ಬೆಳೆಸಿಕೊಳ್ಳಲಾಗದ ಕೆಟ್ಟವಾಸನೆಯಾಗಲೀ ಶಬ್ದವಾಗಲೀ, ವೈತ್ಯತೆಯಾಗಲೀ ಇಲ್ಲವೇ ಇಲ್ಲ.

ನೀತಿಯ ವಿಷಯದಲ್ಲೂ ಇದು ಹೀಗೇ ಇದೆ. ಕ್ರಿಶ್ಚಿಯನ್ ಧರ್ಮ ಮತ್ತು ದನದ ಮಾಂಸದ ನೈತಿಕತೆ!

ನಮ್ಮ ನಗರ. ತೂಲದಲ್ಲಿರುವ ಕಟುಕರ ಮನೆಗೆ ಕೆಲವು ದಿನಗಳ ಹಿಂದೆ ಭೇಟಿ ಕೊಟ್ಟಿದ್ದೆ. ಅದನ್ನು ದೊಡ್ಡ ನಗರಕ್ಕೆ ತಕ್ಕಂತೆ. ಪ್ರಾಣಿಗಳಿಗೆ ಆದಷ್ಟು ಕಡಿಮೆ ನೋವನ್ನು ತರುವ ದೃಷ್ಟಿಯಿಂದ ನೂತನ ಹಾಗೂ ಪರಿಷ್ಕೃತ ವಿಧಾನದಲ್ಲಿ ರಚಿಸಲಾಗಿದೆ. ಅದು Trinity ಭಾನುವಾರಕ್ಕೆ ಎರಡು ದಿನ ಹಿಂದಿನ ಶುಕ್ರವಾರ. ಅಲ್ಲಿ ಹತ್ತಾರು ದನಗಳಿದ್ದುವು.

ಇದಕ್ಕೆ ಮೊದಲು. ಬಹುದಿನದ ಹಿಂದೆಯೇ. ನಾನು The Ethics of Diet ಎನ್ನುವ ಶ್ರೇಷ್ಠ ಗ್ರಂಥವನ್ನು ಓದುತ್ತಿದ್ದಾಗ ಅಲ್ಲಿ ಸಸ್ಯಾಹಾರವನ್ನು ಸಮರ್ಥಿಸುವ ವಾದಗಳನ್ನು ಮಂಡಿಸುವುದರಲ್ಲಿ ಉಂಟಾದ ಪ್ರಶ್ನೆಗಳ ಸತ್ಯವನ್ನು ನನ್ನ ಕಣ್ಣಾರೆ ಕಾಣಲು ಒಂದು ಕಟುಕರ ಮನೆಯನ್ನು ನೋಡಬೇಕೆಂದು ಅಂದುಕೊಂಡಿದ್ದೆ. ಹಾಗ ಮಾಡಲು ಮೊದಲು ನಾನು ಸಂಕೋಚಪಟ್ಟೆ. ಏಕೆಂದರೆ ಯಾವುದನ್ನು ತಾನು ತಡೆಯಲು ಸಾಧ್ಯವಿಲ್ಲವೋ ಆ ಹಿಂಸೆ ತನ್ನೆದುರಿಗೆ ನಡೆಯುತಿರುವುದನ್ನು ಕಾಣಲು ಹೋಗುವುದಕ್ಕೆ ಯಾರಾದರೂ ಸಂಕೋಚಪಡುತ್ತಾರಷ್ಟೆ. ಆದ್ದರಿಂದ ನನ್ನ ಭೇಟಿಯನ್ನು ಮುಂದಕ್ಕೆ ಹಾಕುತ್ತಾ ಬಂದೆ.

ಸ್ವಲ್ಪಹೊತ್ತಿಗೆ ಮುಂಚೆ ಕಟುಕರ ಮನೆಯಿಂದ ತೂಲಕ್ಕೆ ಬರುತ್ತಿದ್ದ ಒಬ್ಬ ಕಟುಕನನ್ನು ಭೇಟಿಯಾಗಿದ್ದೆ. ಅತ ಇನ್ನೂ ಪಳಗಿರಲಿಲ್ಲ. ಅವನ ಕೆಲಸವೆಲ್ಲಾ ಚೂರಿಯಿಂದ ಇರಿಯುವುದು. ನೀನು ಕೊಲ್ಲುವ ಪ್ರಾಣಿಗಳ ಬಗ್ಗೆ ನಿನಗೆ ಅಯ್ಯೋ ಎನಿಸುವುದಿಲ್ಲವೇ ಎಂದವನನ್ನು ಕೇಳಿದೆ. ಅತನ ಉತ್ತರ ಸಹಜವಾಗಿತ್ತು 'ಯಾಕೆ ನನಗೆ ಅಯ್ಯೋ ಅನಿಸಬೇಕು? ಕೊಲ್ಲುವುದು ಅವಶ್ಯಕವಲ್ಲವೇ?' ಆಮೇಲೆ ನಾನವನಿಗೆ ಮಾಂಸ ತಿನ್ನುವುದು ಅನಿವಾರ್ಯವಲ್ಲ. ಭೋಗವೆಂದು ವಿವರಿಸಿದ ಮೇಲೆ ಒಪ್ಪಿಕೊಂಡ. ಪ್ರಾಣಿಗಳ ಬಗ್ಗೆ ಅನುಕಂಪವಿದೆಯೆಂದು. 'ಆದರೆ ನಾನೇನು ಮಾಡಲಾಗುತ್ತದೆ! ನನ್ನ ಬದುಕು ಸಾಗಬೇಕಲ್ಲವೇ? ಮೊದಮೊದಲು ನನಗ ಕೊಲ್ಲುವುದೆಂದರೆ ಹೆದರಿಕೆಯಾಗುತ್ತಿತ್ತು. ನನ್ನ ತಂದೆ ಅವನು ಬದುಕಿರುವವರೆಗೂ ಒಂದು ಕೋಳಿಮರಿಯನ್ನು ಕೂಡ ಕೊಲ್ಲಲಿಲ್ಲ'. ರಷಿಯನ್ನರಲ್ಲಿ ತುಂಬ ಜನರು ಕೊಲ್ಲಲು ಹಿಂಜರಿಯುತ್ತಾರೆ. ಅವರಲ್ಲಿ ಅನುಕಂಪವಿದೆ: ಅದನ್ನವರು 'ಭಯ' ಎನ್ನುವ ಶಬ್ದದಿಂದ ವ್ಯಕ್ತಪಡಿಸುತ್ತಾರೆ. ಈ ಮನುಷ್ಯನಿಗೂ 'ಭಯ'ವುಂಟಾಗಿತ್ತು: ಆದರೆ ಈಗ ಹಾಗೇನಿಲ್ಲ. ಬಹಳಪಾಲು ಕೆಲಸ ಶುಕ್ರವಾರಗಳಲ್ಲಿ. ಅದೂ ಸಾಯಂಕಾಲದವರೆಗೆ. ನಡೆಯುತ್ತದೆ ಎಂದನು.

ಸ್ವಲ್ಪ ದಿನಗಳ ಹಿಂದೆ ತಾನೇ ಒಬ್ಬ ನಿವೃತ್ತ ಸೈನಿಕನೊಡನೆ ಮಾತನಾಡಿದೆ. ಅತ ಒಬ್ಬ ಕಟುಕ. ನಾನು ಕೊಲ್ಲುವುದು ಕೆಟ್ಟದ್ದು ಎಂದಾಗ ಆಶ್ಚರ್ಯಪಟ್ಟು. ಅದು

ಅಧಾರ್ಮಿಕವಲ್ಲವೆಂಬುದನ್ನು ಸಮರ್ಥಿಸುವ ಎಂದಿನ ಮಾತುಗಳನ್ನೊಪ್ಪಿಸಿದ. ಅನಂತರ ನನ್ನ ಮಾತನ್ನು ಒಪ್ಪಿದ. 'ಅದರಲ್ಲೂ ಅವು ತೆಪ್ಪಗಿದ್ದಾಗ. ಸಾಧು ಹಸುಗಳ ಹಾಗೆ. ನಿಮ್ಮನ್ನು ನಂಬಿಕೊಂಡು . ಬರುತ್ತವೆ. ಬಡಪ್ರಾಣಿಗಳು. ಅಯ್ಯೋ ಎನ್ನಿಸುತ್ತದೆ'.

ಇದು ಭಯಾನಕ. ಪ್ರಾಣಿಗಳು ನೊಂದು ಸಾಯುವುದಲ್ಲ. ಮನುಷ್ಯ ತನ್ನಂತಿರುವ ಜೀವಂತ ಪ್ರಾಣಿಗಳ ಬಗ್ಗೆ ಅನುಕಂಪ. ಸಹಾನುಭೂತಿಗಳನ್ನು ತೋರಿಸುವ ಒಂದು ದೈವಿಕ ಗುಣವನ್ನು. ಬೇಡದಿದ್ದರೂ ತಡೆಹಿಡಿದುಕೊಂಡು. ತನ್ನ ಭಾವನೆಗಳನ್ನು ಹಿಂಸೆಗೆ ಒಳಪಡಿಸಿಕೊಂಡು ಕ್ರೂರನಾಗುತ್ತಾನೆಂಬುದು. ಜೀವವನ್ನು ತೆಗೆಯಬಾರದೆನ್ನುವುದು ಮನುಷ್ಯನ ಹೃದಯದಲ್ಲಿ ಎಷ್ಟು ಆಳದಲ್ಲಿ ಹುದುಗಿಕೊಂಡಿದೆ!

ಒಮ್ಮೆ ಮಾಸ್ಕೋದಿಂದ ನಡೆದು ಬರುತ್ತಿದ್ದಾಗ* ಸೆರ್ಪುಖೋವ್‌ನಿಂದ ಹತ್ತಿರದ ಅರಣ್ಯಗಳಿಗೆ ಸೌದೆಗಾಗಿ ಹೋಗುತ್ತಿದ್ದ ಗಾಡಿಯವರು ಕೂರಿಸಿಕೊಳ್ಳುವೆವೆಂದು ಕರೆದರು. ಅದು ಈಸ್ಟರ್‌ನ ಹಿಂದಿನ ಗುರುವಾರ. ಮೊದಲ ಗಾಡಿಯಲ್ಲಿ (ಅದನ್ನು ನಡೆಸುವಾತ ಬಲಿಷ್ಠನಾಗಿ, ಕೆಂಪಗೆ, ಒರಟಾಗಿದ್ದ. ಎಂದಿನಂತೆ ಕುಡಿದಿದ್ದ) ಕುಳಿತಿದ್ದೆ. ಒಂದು ಹಳ್ಳಿಯ ಒಳಗೆ ನಾವು ಹೋಗುತ್ತಿದ್ದಂತೆ ಒಂದು ಕೊಬ್ಬಿದ. ಕಂದು ಹಂದಿಯನ್ನು ಕಡಿಯುವುದಕ್ಕೆಂದು ಅಂಗಳದ ಆಚೆಗೆ ಎಳೆದೊಯ್ಯುತ್ತಿದ್ದರು. ಮನುಷ್ಯನ ರೋದನವನ್ನು ಹೋಲುವ ದನಿಯಲ್ಲಿ ಅದು ಅರಚುತ್ತಿತ್ತು. ನಾವು ಹೋಗುತ್ತಿದ್ದಂತೆ ಅದನ್ನವರು ಕೊಲ್ಲಲು ಆರಂಭಿಸಿದರು. ಅದರ ಗಂಟಲನ್ನು ಒಬ್ಬಾತ ಇರಿದ. ಹಂದಿ ಇನ್ನೂ ಜೋರಾಗಿ. ಮರ್ಮಭೇದಕವಾಗಿ ಅರಚಿತು. ಹಿಡಿದವರಿಂದ ಕಿತ್ತುಕೊಂಡು. ರಕ್ತ ಹರಿಯುತ್ತಿದ್ದರೂ ಓಡಿಹೋಯಿತು. ನನಗೆ ದೂರದಲ್ಲಿದ್ದುದು ಕಾಣುವುದಿಲ್ಲವಾದ್ದರಿಂದ ಎಲ್ಲ ವಿವರಗಳೂ ನನಗೆ ಕಾಣಲಿಲ್ಲ.

ಮನುಷ್ಯನ ಹಾಗೆ ಕೊಬ್ಬಿದ್ದ ಹಂದಿ ಮಾತ್ರ ಕಾಣಿಸಿತು; ಅದರ ಅರಚುವಿಕೆಯನ್ನು ಕೇಳಿದೆ. ಅದರೆ ಗಾಡಿಯವನು ಎಲ್ಲವನ್ನು ಸೂಕ್ಷ್ಮವಾಗಿ ನೋಡಿದ. ಅವರು ಆ ಹಂದಿಯನ್ನು ಹಿಡಿದರು. ಉರುಳಿಸಿ. ಅದರ ಗಂಟಲನ್ನು ಕತ್ತರಿಸಿ ಮುಗಿಸಿದರು. ಗಾಡಿ ಭಾರವಾಗಿ ಉರುಳುತ್ತಾ. ಹೋದಂತೆ ಅದರ ಅರಚು ನಿಲ್ಲುತ್ತಾ ಬಂತು. "ಇದನ್ನೆಲ್ಲಾ ಮಾಡುವ ಮನುಷ್ಯರು ಫಲವನ್ನುಣ್ಣದೇ ಇರುವುದಕ್ಕೆ ಆಗುತ್ತಾ?" ಎಂದ.

---

* ಯಸ್ನಾಯ ಪೋಲ್ಯಾನಕ್ಕೆ ಒಂದು ವಸಂತದಲ್ಲಿ. ಮಾಸ್ಕೋವಿನಲ್ಲಿ ತನ್ನ ಚಳಿಗಾಲವನ್ನು ಕಳೆದ ಮೇಲೆ ಹಿಂತಿರುಗುತ್ತಿದ್ದಾಗ ಟಾಲ್‌ಸ್ಟಾಯ್ ಬೇಕೆಂದೇ ಆ ದೂರವನ್ನು (ಸುಮಾರು 130 ಮೈಲಿಗೂ ಮಿಕ್ಕು) ರೈಲಿನ ಬದಲು ನಡಿಗೆಯಿಂದ ಕ್ರಮಿಸಲು ಯೋಚಿಸಿದ. ಸೆರ್ಪುಖೋವ್ ಎಂಬುದು ಆ ದಾರಿಯ ಒಂದು ನಗರ.

ಮನುಷ್ಯ ಕೊಲ್ಲುವಿಕೆಯನ್ನು ದ್ವೇಷಿಸುತ್ತಾನೆ. ಆದರೆ ಈ ಉದಾಹರಣೆಯನ್ನು ಗಮನಿಸಿ. ದುರಾಸೆ ಹೆಚ್ಚಿದರೆ, ದೇವರು ಅನುಮತಿ ನೀಡಿದ್ದಾನೆಂದು ಸಾಧಿಸಿದರೆ, ಇದಕ್ಕಿಂತ ಮಿಗಿಲಾಗಿ ಅಭ್ಯಾಸ ಬೆಳೆದರೆ, ಜನರು ಈ ಭಾವನೆಯನ್ನು ಕಳೆದುಕೊಳ್ಳುತ್ತಾರೆ.

ತೂಲಕ್ಕೆ ಶುಕ್ರವಾರ ಹೋಗುವುದೆಂದು, ಹಾಗೆ ನನ್ನೊಬ್ಬ ಮುಗ್ಧ ಬಂಧುವನ್ನು ಅಲ್ಲಿ ಕಾಣುವುದೆಂದು ನಿರ್ಧರಿಸಿದೆ. ಅವನನ್ನೂ ಜತೆಗೆ ಕರೆದೆ.

"ಹಾಂ. ಅಲ್ಲಿನ ವ್ಯವಸ್ಥೆಗಳು ಸೊಗಸಾಗಿವೆ, ನಾನೂ ಹೋಗಿ ನೋಡಬೇಕೆಂದಿದ್ದೆ. ಆದರೆ ಈಗ ಅಲ್ಲಿ ಕೊಲ್ಲುತ್ತಾ ಇರುವುದಾದರೆ ನಾನು ಒಳಗೆ ಬರುವುದಿಲ್ಲ."

"ಯಾಕೆ? ಅದನ್ನು ನೋಡಬೇಕೆಂದೇ ಅಲ್ಲವೇ ನಾವಿರುವುದು? ಮಾಂಸ ತಿನ್ನಬೇಕಾದರೂ ಕೊಲ್ಲಲೇಬೇಕಲ್ಲವೇ?

'ಇಲ್ಲ. ನನಗೆ ಆಗೋಲ್ಲ'.

ಇಲ್ಲಿ ಆ ಮನುಷ್ಯ, ಬೇಟೆಗಾರ ಹಾಗೂ ಪ್ರಾಣಿಗಳನ್ನು ಪಕ್ಷಿಗಳನ್ನು ಕೊಲ್ಲುತ್ತಿದ್ದವನ್ನುವುದನ್ನು ಗಮನಿಸಬೇಕು.

ಹಾಗೇ ನಾವು ಕಟುಕರ ಮನೆಗೆ ಹೋದೆವು. ಬಾಗಿಲಲ್ಲೇ ಬಡಗಿ ಮೆತ್ತಿದ್ದ ಅಂಟಿನದೋ ಬಣ್ಣದ್ದೋ ಗಾಢವಾದ, ಅಸಹ್ಯ, ವಾಕರಿಕೆ ತರಿಸುವ ವಾಸನೆ ಬಂತು. ಹತ್ತಿರ ಹೋದಂತೆಲ್ಲ ವಾಸನೆ ಗಾಢವಾಗುತ್ತಿತ್ತು. ಅದು ಕೆಂಪು ಇಟ್ಟಿಗೆಯಿಂದ ಕಟ್ಟಿದ, ದೊಡ್ಡದಾದ ಕಿಟಕಿ ಗವಾಕ್ಷಿಗಳು ಇದ್ದ ಕಟ್ಟಡ. ನಾವು ಬಾಗಿಲನ್ನು ತೆರೆದು ಒಳಗೆ ಹೋದೆವು. ಬಲಕ್ಕೆ ವಿಶಾಲವಾದ ಮುಚ್ಚಿದ ಅಂಗಣ – ಮುಕ್ಕಾಲು ಎಕರೆಯಷ್ಟು ವಿಸ್ತಾರ – ವಾರಕ್ಕೆರಡು ಬಾರಿ ಪಶುಗಳನ್ನು ಇಲ್ಲಿಗೆ ಮಾರಲೆಂದು ತರುತ್ತಾರೆ. ಈ ಅಂಗಣದ ಪಕ್ಕದಲ್ಲಿ ಬಾಗಿಲು ಕಾಯುವವನ ಮನೆ. ಎಡಕ್ಕೆ ಕೊಠಡಿಗಳಿದ್ದುವು – ಹಾಗೆಂದೇ ಅವುಗಳನ್ನು ಕರೆಯಲಾಗುತ್ತದೆ – ಕಮಾನು ಬಾಗಿಲಿನ ಕೋಣೆಗಳು, ಜಾರುವ, ಆಸ್ಫಾಲ್ಟ್ ನೆಲಗಳು, ಸತ್ತ ಪ್ರಾಣಿಯ ದೇಹಗಳನ್ನು ನೂಕಲು ನೇತುಹಾಕಲು ವ್ಯವಸ್ಥೆಗಳು.

ಬಾಗಿಲು ಕಾಯುವವನ ಮನೆಯ ಗೋಡೆಯ ಎದುರಿಗೆ ಇದ್ದ ಬೆಂಚಿನಮೇಲೆ ಆರೇಳು ಕಟುಕರು ಕುಳಿತಿದ್ದರು. ಮೇಲುಡಿಗೆಗಳು, ಬಲಿಷ್ಠವಾದ ತೋಳುಗಳು ಕಾಣುವಂತೆ ಮಡಿಚಲಾಗಿದ್ದ ಅಂಗಿಯ ತೋಳುಗಳು ಕೂಡ, ರಕ್ತಸಿಕ್ತವಾಗಿದ್ದುವು. ಅರ್ಧಗಂಟೆಗೆ ಮೊದಲು ಅವರ ಕೆಲಸ ಮುಗಿದಿತ್ತಾದ್ದರಿಂದ ಖಾಲಿ ಕೋಣೆಗಳು ಮಾತ್ರ ಉಳಿದಿದ್ದುವು. ಎರಡೂ ಕಡೆ ತೆರೆದಿದ್ದರೂ ಬಿಸಿ ರಕ್ತದ ದಟ್ಟವಾಸನೆ ಇತ್ತು: ಪಕ್ಕಗಳಲ್ಲಿ ಹೆಪ್ಪುಗಟ್ಟಿದ ರಕ್ತವಿದ್ದು ನೆಲ ಕಂದುಬಣ್ಣಕ್ಕೆ ತಿರುಗಿ ಹೊಳೆಯುತ್ತಿತ್ತು.

ಆ ಕಟುಕರಲ್ಲೊಬ್ಬ ಕಡಿಯುವ ಕೆಲಸವನ್ನು ವಿವರಿಸುತ್ತಾ, ಅದು ನಡೆಯುವ ಜಾಗವನ್ನು ತೋರಿಸಿದ. ಆತ ಹೇಳಿದ್ದು ನನಗೆ ಸರಿಯಾಗಿ ಅರ್ಥವಾಗದೇ, ಪ್ರಾಣಿಗಳನ್ನು ಕೊಲ್ಲುವುದರ ಬಗ್ಗೆ ತಪ್ಪಾದ, ಆದರೆ ಭಯಂಕರವಾದ ವಿಧಾನವೊಂದನ್ನು ಕಲ್ಪಿಸಿಕೊಂಡೆ. ಆದರೆ ನಿಜಸ್ಥಿತಿಯು ಕಲ್ಪಿಸಿಕೊಂಡದ್ದಕ್ಕಿಂತಲೂ ಕಡಿಮೆ ಭಯಾನಕ ಪರಿಣಾಮವನ್ನುಂಟು ಮಾಡಬಹುದೆಂದು ಸಹಜವಾಗಿ ನಾನು ಅಂದುಕೊಂಡಿದ್ದೆ. ನನ್ನ ಅನಿಸಿಕೆ ಇಲ್ಲಿ ತಪ್ಪಾಗಿತ್ತು.

ಮುಂದಿನ ಸಾರಿ ನಾನು ಕಟುಕರ ಮನೆಗೆ ಭೇಟಿಕೊಟ್ಟಾಗ ಸರಿಯಾದ ವೇಳೆಗೆ ಹೋಗಿದ್ದೆ. ಅದು ಟ್ರಿನಿಟಿಯ ಹಿಂದಿನ ಶುಕ್ರವಾರ – ಜೂನ್ ತಿಂಗಳ – ಒಂದು ಸೆಖೆಯ ದಿನ. ರಕ್ತ ಮತ್ತು ಅಂಟಿನ ವಾಸನೆ ಹಿಂದಿಗಿಂತಲೂ ಕಟುವಾಗಿತ್ತು. ಕೆಲಸ ಕೊನೆಯ ಹಂತದಲ್ಲಿತ್ತು. ಧೂಳುತುಂಬಿದ ಅಂಗಣದ ತುಂಬಾ ಹಸುಗಳಿದ್ದುವು. ಕೋಣೆಯ ಪಕ್ಕದಲ್ಲಿದ್ದ ಮುಚ್ಚಿದ ಅಂಗಣಕ್ಕೆ ಪ್ರಾಣಿಗಳನ್ನು ದಬ್ಬುತ್ತಿದ್ದರು.

ಹೊರಬಾಗಿಲ ಮುಂದೆ ಇದ್ದ ರಸ್ತೆಯಲ್ಲಿ ಎತ್ತುಗಳು, ಹೋರಿಗರುಗಳು ಹಾಗೂ ಹಸುಗಳನ್ನು ಬಿಗಿದಿದ್ದ ಗಾಡಿಗಳಿದ್ದುವು. ಒಳ್ಳೆಯ ಕುದುರೆಗಳಿಂದ ಎಳೆಯಲಾಗುತ್ತಿದ್ದ ಗಾಡಿಗಳಲ್ಲಿ ಜೀವಂತ ಕರುಗಳಿದ್ದುವು; ಅವುಗಳ ಬಾಗಿದ ತಲೆಯನ್ನು ಮೇಲಕ್ಕೆಳೆದು ಹೊರಗೆ ತಂದು ಗಾಡಿಗಳನ್ನು ಬರಿದುಮಾಡುತ್ತಿದ್ದರು. ತಲೆಗಳು ಕೆಂಪಾಗಿ ಹೊಳೆಯುವ ಶ್ವಾಸಕೋಶಗಳು, ಕಂದುಪಿತ್ತಕೋಶಗಳು ಅಲುಗಾಡುವ ಚಾಚಿದ ಕಾಲುಗಳು ಇದ್ದ ಸತ್ತ ಎತ್ತುಗಳನ್ನು ಅದೇ ಬಗೆಯ ಗಾಡಿಗಳಲ್ಲಿ ತುಂಬಿ ಆ ಕಟುಕರ ಮನೆಯಿಂದ ಹೊರ ಗೊಯ್ಯುತ್ತಿದ್ದರು. ಬೇಲಿಯ ಹತ್ತಿರ ಹಸುಗಳ ವ್ಯಾಪಾರಿಗಳ ಕುದುರೆಗಳು. ಉದ್ದ ಅಂಗಿತೊಟ್ಟ ಆ ವ್ಯಾಪಾರಿಗಳು, ಕೈಯಲ್ಲಿ ಚಾಟಿಗಳನ್ನೋ ಚಿತ್ರಗಳನ್ನೋ ಹಿಡಿದು ಅಂಗಳದಲ್ಲಿ, ಡಾಂಬರಿನಲ್ಲಿ ತನಗೆ ಸೇರಿದ ಹಸುಗಳ ಮೇಲೆ ಗುರುತು ಹಚ್ಚುತ್ತಲೋ, ಚೌಕಾಸಿಮಾಡುತ್ತಲೋ, ಹೋರಿಗಳನ್ನು ಎತ್ತುಗಳನ್ನು ಅಂಗಳದಿಂದ ಹೋಗುವ ಮುಚ್ಚಿದ ಅಂಗಳದೊಳಕ್ಕೆ ನುಗ್ಗಿಸುತ್ತಲೋ, ತಿರುಗುತ್ತಿದ್ದರು.

ಇವರೆಲ್ಲ ಸಹಜವಾಗಿಯೇ ಹಣಕಾಸು ಲೆಕ್ಕಾಚಾರದಲ್ಲಿ ಮುಳುಗಿದ್ದು ಈ ಪ್ರಾಣಿಗಳನ್ನು ಕೊಲ್ಲುವುದು ಸರಿಯೋ ತಪ್ಪೋ ಎನ್ನುವ ಯೋಚನೆ, ಕೋಣೆಯ ನೆಲವನ್ನು ಆವರಿಸಿದ ರಕ್ತದಲ್ಲಿರುವ ರಾಸಾಯನಿಕ ವಸ್ತುಗಳ ಬಗೆಗಿನ ಪ್ರಶ್ನೆಯಷ್ಟೇ, ಅವರ ಮನಸ್ಸಿನಿಂದ ಹೊರಗಿತ್ತು.

ಅಂಗಳದಲ್ಲಿ ಕಟುಕರು ಇರಲಿಲ್ಲ; ಎಲ್ಲರೂ ಕೋಣೆಯೊಳಗೆ ಕೆಲಸದಲ್ಲಿದ್ದರು. ಆದಿನ ಸುಮಾರು ನೂರು ಹಸುಗಳ ತಲೆಗಳನ್ನು ಕತ್ತರಿಸಲಾಗಿತ್ತು. ನಾನು ಇನ್ನೇನು ಕೋಣೆಯೊಂದರ ಒಳಗೆ ಹೋಗಬೇಕೆಂದುಕೊಳ್ಳುವಷ್ಟರಲ್ಲೇ ಬಾಗಿಲಲ್ಲಿ ಸ್ವಲ್ಪ

ತಡೆದು ನಿಂತೆ. ನಾನು ನಿಂತಿದ್ದು, ಕೋಣೆ ಶವಗಳಿಂದ ತುಂಬಿದ್ದು ಅವು ಅತ್ತಿಂದಿತ್ತ ನೇತುಬಿದ್ದಿದ್ದಹಾಗೆ, ಚಲಿಸುತ್ತಿದ್ದುದರಿಂದ ಮತ್ತು ನೆಲದ ಮೇಲೆ ರಕ್ತಹರಿದಿದ್ದಲ್ಲದೆ ಮೇಲಿಂದಲೂ ತೊಟ್ಟಿಕುತ್ತಿದ್ದುದರಿಂದ. ಅಲ್ಲಿದ್ದ ಎಲ್ಲ ಕಟುಕರೂ ರಕ್ತಸಿಕ್ತರಾಗಿದ್ದರು. ನಾನೂ ಒಳಗೆ ಹೋಗಿದ್ದರೆ, ಅದರಿಂದ ತೊಯ್ದು ಹೋಗುತ್ತಿದ್ದೆ. ನೇತುಹಾಕಿದ್ದ ಶವವೊಂದನ್ನು ಕೆಳಗಿಳಿಸುತ್ತಿದ್ದರೆ, ಇನ್ನೊಂದನ್ನು ಬಾಗಿಲಿಗೆ ಒಯ್ಯುತ್ತಿದ್ದರು. ತನ್ನ ಬಿಳಿಯ ಕಾಲುಗಳನ್ನೆತ್ತಿ ಬಿದ್ದಿದ್ದ ಮತ್ತೊಂದು ಎತ್ತಿನ ಬಿಗಿದ ಚರ್ಮವನ್ನು ಕಟುಕನೊಬ್ಬ ತನ್ನ ಬಲವಾದ ಕೈಗಳಿಂದ ಸಿಗಿಯುತ್ತಿದ್ದ.

ನಾನು ನಿಂತಿದ್ದಕ್ಕೆ ಎದುರಿಗಿದ್ದ ಬಾಗಿಲಿನಿಂದ ಒಂದು ಕೊಬ್ಬಿದ, ಕೆಂಪಾದ ಭಾರಿ ಎತ್ತನ್ನು ಕರೆತಂದರು. ಇಬ್ಬರು ಅದನ್ನು ಎಳೆಯುತ್ತಿದ್ದರು. ಅದಿನ್ನು ಒಳಗೆ ಬಂತೆನ್ನುವಾಗಲೇ ಒಬ್ಬ ಕಟುಕ ಕತ್ತಿಯನ್ನು ಮೇಲೆತ್ತಿ ಅದರ ಕತ್ತನ್ನು ಕತ್ತರಿಸುವುದನ್ನು ಕಂಡೆ. ತನ್ನ ನಾಲ್ಕುಕಾಲುಗಳು ಮುರಿದಂತೆ ಆ ಎತ್ತು ತನ್ನ ಹೊಟ್ಟೆಯಮೇಲೆ ದೊಪ್ಪನೆ ಬಿತ್ತು. ತಕ್ಷಣವೇ ಅದನ್ನು ಪಕ್ಕಕ್ಕೆ ತಿರುಗಿಸಿದಾಗ ತನ್ನ ಮುಂಗಾಲು: ಹಿಂಗಾಲುಗಳನ್ನು ಬಡಿಯಲು ಪ್ರಾರಂಭಿಸಿತು. ಇನ್ನೊಬ್ಬ ಕಟುಕ ಆ ಎತ್ತಿನಮೇಲೆ ಬಿದ್ದು, ಅದರ ಕೊಂಬುಗಳನ್ನು ಹಿಡಿದು ತಲೆಯನ್ನು ನೆಲಕ್ಕೆ ಬಾಗಿಸಿದಾಗ ಮತ್ತೊಬ್ಬ ಕಟುಕಚೂರಿಯಿಂದ ಅದನ್ನು ಕತ್ತರಿಸಿದ. ತಲೆಯಡಿಯಿಂದ ಕಪ್ಪು ಮೇಲಾದ ಕೆಂಪು ರಕ್ತಹರಿಯಲು ಪ್ರಾರಂಭವಾದಾಗ ಅದನ್ನೊಬ್ಬ ರಕ್ತದಲ್ಲಿ ಮಿಂದ ಹುಡುಗ ಪಾತ್ರೆಯಲ್ಲಿ ತುಂಬಿಕೊಂಡ. ಇದೆಲ್ಲ ನಡೆಯುವಾಗಲೂ ಆ ಎತ್ತು ಏಳಲು ಪ್ರಯತ್ನಿಸುವಂತೆ ಒಂದೇ ಸಮನೆ ತನ್ನ ತಲೆಯನ್ನು ನುಲಿಚುತ್ತಾ ಗಾಳಿಯಲ್ಲಿ ತನ್ನ ಕಾಲಗಳನ್ನು ಬೀಸುತ್ತಿತ್ತು. ಪಾತ್ರೆ ತುಂಬುತ್ತಾ ಬಂದಿತ್ತಾದರೂ ಎತ್ತು ಇನ್ನೂ ಬದುಕಿತ್ತು. ಹೊಟ್ಟೆ ಜೋರಾಗಿ ಏರಿಳಿಯುತ್ತಿತ್ತು; ತನ್ನ ಹಿಂಗಾಲು, ಮುಂಗಾಲುಗಳನ್ನು ಎಷ್ಟು ಬಿರುಸಾಗಿ ಬಡಿಯುತ್ತಿತ್ತೆಂದರೆ ಕಟುಕರು ಅವನ್ನು ಬಿಡಿಸಿ ಹಿಡಿದಿದ್ದರು. ಒಂದು ಪಾತ್ರೆ ತುಂಬಿದಾಗ ಹುಡುಗ ಅದನ್ನು ತಲೆಯಮೇಲೆ ಹೊತ್ತು ಸಸಾರಜನಕಗಳ ಕಾರ್ಖಾನೆಯ ಕಡೆಗೆ ಹೊರಟರೆ ಇನ್ನೊಬ್ಬ ಬೇರೊಂದು ಪಾತ್ರೆಯನ್ನು ಇಟ್ಟ. ಅದೂ ತುಂಬಲು ಪ್ರಾರಂಭಿಸಿತು. ಆದರೆ ಎತ್ತು ಇನ್ನೂ ಉಸಿರಾಡುತ್ತಾ, ತನ್ನ ಹಿಂಗಾಲುಗಳನ್ನು ಬಡಿಯುತ್ತಿತ್ತು.

ರಕ್ತ ಹರಿಯುವುದು ನಿಂತಮೇಲೆ ಕಟುಕ ಆ ಪ್ರಾಣಿಯ ತಲೆಯನ್ನೆತ್ತಿ ಅದರ ಚರ್ಮವನ್ನು ಸಿಗಿಯಲನುವಾದ. ಎತ್ತು ಹೊರಳಾಡುತ್ತಲೇ ಇತ್ತು. ಚರ್ಮ ಸಿಗಿದಿದ್ದರಿಂದ ಬಿಳಿ. ಕೆಂಪು ರಕ್ತನಾಳಗಳು ಕಾಣುತ್ತಿದ್ದ ತಲೆ ಕಟುಕ ಇಟ್ಟ ಕಡೆಯೇ ಇರುತ್ತಿತ್ತು; ಚರ್ಮ ಎರಡೂ ಕಡೆಗೆ ನೇತಾಡುತ್ತಿತ್ತು. ಇನ್ನಾದರೂ ಆ ಪ್ರಾಣಿಯ ಹೋರಾಟ ನಿಂತಿರಲಿಲ್ಲ. ಆಗ ಇನ್ನೊಬ್ಬ ಕಟುಕ ಒಂದು ಕಾಲನ್ನೆತ್ತಿ ಹಿಡಿದುಕೊಂಡು ಅದನ್ನು ಮುರಿದು ಕತ್ತರಿಸಿಹಾಕಿ. ಉಳಿದ ಕಾಲುಗಳಲ್ಲಿ. ಹೊಟ್ಟೆಯಲ್ಲಿ ನಡುಕ ಇನ್ನೂ ಇತ್ತು. ಉಳಿದ ಕಾಲುಗಳನ್ನು ಕತ್ತರಿಸಿ ಆ ಎತ್ತಿನ ಮಾಲೀಕನಿಗೆ ಸಂಬಂಧಿಸಿದ

ರಾಶಿಯ ಕಡೆಗೆ ಎಸೆಯಲಾಯಿತು. ನೇತು ಹಾಕುವೆಡೆಗೆ ಹೆಣವನ್ನು ಎಳೆದೊಯ್ದು ನೇತುಹಾಕಿದಾಗ ನಡುಕ ನಿಂತಿತು.

ಹೀಗೆ ಬಾಗಿಲಲ್ಲೇ ನಿಂತು ಎರಡನೆಯ. ಮೂರನೆಯ. ನಾಲ್ಕನೆಯ ಎತ್ತುಗಳನ್ನು ನೋಡಿದೆ. ಎಲ್ಲದರ ವಿಷಯವೂ ಹೀಗೆ: ಹಾಗೇ ಸದ್ದಿಲ್ಲದೆ ತಲೆಕತ್ತರಿಸುವುದು. ಹಾಗೇ ನಡುಗುವ ಪ್ರಾಣಿಗಳು. ಒಂದೇ ವ್ಯತ್ಯಾಸವೆಂದರೆ. ಕಟುಕ ಯಾವಾಗಲೂ ಒಂದೇ ಬಾರಿಗೆ ಪ್ರಾಣಿ ನೆಲಕ್ಕೆ ಬೀಳುವಂತೆ ಕತ್ತರಿಸಲಾಗುತ್ತಿರಲಿಲ್ಲ. ಗುರಿ ತಪ್ಪುತ್ತಿದ್ದರಿಂದ ಎತ್ತು ಓಡಿಹೋಗಲು, ತಪ್ಪಿಸಿಕೊಳ್ಳಲು ಯತ್ನಿಸುತ್ತಿತ್ತು. ಆಗ ಅದರ ತಲೆಯನ್ನು ಕಂಬಿಯೊಂದರ ಅಡಿಗೆ ಎಳೆದು ಎರಡನೆ ಬಾರಿಗೆ ಕತ್ತರಿಸಿದಾಗ ಅದು ಕೆಳಗೆ ಬೀಳುತ್ತಿತ್ತು.

ಆಮೇಲೆ ನಾನು ಎತ್ತುಗಳನ್ನು ಎಳೆದು ತರುತ್ತಿದ್ದ ಬಾಗಿಲಿನಿಂದ ಒಳಗೆ ಹೋದೆ. ಇಲ್ಲಿ ಅವನ್ನೇ ಹತ್ತಿರದಿಂದ ನೋಡಿದೆ. ನಾನು ಆಗ ನೋಡದೆ ಇದ್ದು ಈಗ ನೋಡಿದ್ದೆಂದರೆ ಎತ್ತುಗಳನ್ನು ಹೇಗೆ ಬಲವಂತವಾಗಿ ಈ ಬಾಗಿಲೊಳಗೆ ಬರುವಂತೆ ಮಾಡುತ್ತಾರೆ ಎಂಬುದು. ಪ್ರತಿಸಲವೂ ಮುಚ್ಚಿದ ಅಂಗಳದಲ್ಲಿ ಒಂದು ಎತ್ತನ್ನು ಹಿಡಿದುಕೊಂಡು ಅದರ ಕೊಂಬಿಗೆ ಹಗ್ಗ ಕಟ್ಟಿ ಮುಂದಕ್ಕೆ ಎಳೆಯುತ್ತಿದ್ದರೆ. ಆ ಪ್ರಾಣಿ. ರಕ್ತದ ವಾಸನೆ ಹಿಡಿದು ಮುಂದಕ್ಕೆ ಬರಲು ನಿರಾಕರಿಸುತ್ತಿತ್ತು. ಕೆಲವು ವೇಳೆ ಅರಚುತ್ತಾ ಹಿಂದಕ್ಕೆ ಎಳೆಯುತ್ತಿತ್ತು. ಇಬ್ಬರಿಗೆ ಅದನ್ನು ಎಳೆಯುವುದು ಶಕ್ತಿಮೀರಿದ್ದಾದ್ದರಿಂದ. ಕಟುಕರಲ್ಲೊಬ್ಬ ಹಿಂದೆ ಹೋಗಿ. ಅದರ ಬಾಲವನ್ನು ಹಿಡಿದು ಕೀಲುಗಳು ಮುರಿಯುವಂತೆ ಜೋರಾಗಿ ತಿರುಚುತ್ತಿದ್ದರಿಂದ ಎತ್ತು ಮುಂದಕ್ಕೆ ಬರುತ್ತಿತ್ತು.

ಒಬ್ಬ ಮಾಲೀಕನ ಹಸುಗಳೆಲ್ಲಾ ತೀರಿದಮೇಲೆ ಇನ್ನೊಬ್ಬನವನ್ನು ತರುತ್ತಿದ್ದರು. ಇನ್ನೊಂದು ಗುಂಪಿನಿಂದ ಅವರು ತಂದ ಪ್ರಾಣಿ ಎತ್ತಾಗಿರಲಿಲ್ಲ: ಅದೊಂದು ಹೋರಿ. ಒಳ್ಳೆಯ ತಳಿಯ, ಸೊಗಸಾದ, ಕಾಲಮೇಲೆ ಬಿಳಿ ಚುಕ್ಕಿಗಳಿದ್ದ ಕಪ್ಪುಬಣ್ಣದ. ಚಿಕ್ಕವಯಸ್ಸಿನ. ಕೊಬ್ಬಿದ ಶಕ್ತಿಶಾಲಿ ಹೋರಿ. ಅದನ್ನು ಮುಂದಕ್ಕೆ ಎಳೆಯುತ್ತಿದ್ದರೆ. ಅದು ತನ್ನ ಕತ್ತನ್ನು ಕೆಳಗೆ ಬಾಗಿಸಿ ಬಲವಾಗಿ ವಿರೋಧಿಸುತ್ತಿತ್ತು. ಆಗ ಅಲ್ಲಿ ಬಂದ ಕಟುಕ ಬಾಲವನ್ನು. ಶಿಳ್ಳೆಯ ಹ್ಯಾಂಡಲನ್ನು ಹಿಡಿಯುವ ಮೋಟಾರು ಚಾಲಕನಂತೆ. ಹಿಡಿದುಕೊಂಡು ತಿರುಚಿದಾಗ. ಕೀಲು ಕಟಕಟ ಎಂದಿತ್ತು. ಹೋರಿ ತನ್ನ ಹಗ್ಗವನ್ನು ಹಿಡಿದವರನ್ನು ದಿಕ್ಕುಗೆಡಿಸಿ ಮುನ್ನುಗ್ಗಿತು. ಅಲ್ಲಿ ಅದು ನಿಂತು ಬಿಳಿಯ ಭಾಗದಲ್ಲಿ ರಕ್ತತುಂಬಿಕೊಂಡಿದ್ದ ತನ್ನ ಕಪ್ಪುಕಣ್ಣುಗಳಿಂದ ಆಚೀಚೆ ನೋಡಿತು. ಮತ್ತೆ ಬಾಲವನ್ನು ಮುರಿದರು, ಹೋರಿ ಮುಂದೆ ಹಾರಿ. ಸೂಕ್ತ ಸ್ಥಳವನ್ನು ತಲುಪಿತು. ಹೊಡೆಯುವವ ಮುಂದೆ ಬಂದು ಗುರಿಹಿಡಿದು. ಹೊಡೆದ. ಹೊಡೆತ ಗುರಿ ತಪ್ಪಿತು. ಹೋರಿ ಮೇಲೆ ನೆಗೆದು. ತಲೆಕೊಡಹಿ. ಅರಚುತ್ತಾ ರಕ್ತದಿಂದ ತೋಯ್ದು ಕಿತ್ತುಕೊಂಡು ಹಿಂದಕ್ಕೆ ಓಡಿತು. ಬಾಗಿಲಲ್ಲಿ ನಿಂತವರೆಲ್ಲ ಆಚೀಚೆ ಓಡಿದರು. ಆದರೆ ಅನುಭವಿಗಳಾದ ಕಟುಕರು. ಅಪಾಯಕ್ಕೆ

ಜಗ್ಗುವ ಕೆಲವು ಜನರೊಡನೆ. ಬೇಗನೆ ಹಗ್ಗ ಹಿಡಿದರು! ಬಾಲದ ಚಿಕಿತ್ಸೆ ಮತ್ತೆ ನಡೆಯಿತು. ಹೋರಿ ಕೋಣೆಯೊಳಗೆ ಬಂತು. ಅಲ್ಲಿ ಅದನ್ನು ಕಂಬಿಯ ಅಡಿಗೆ ತಂದರು. ಅಲ್ಲಿಂದ ಅದು ಮತ್ತೆ ತಪ್ಪಿಸಿಕೊಳ್ಳಲಿಲ್ಲ. ಹೊಡೆಯುವವ ಕೂದಲು ನಕ್ಷತ್ರದಂತೆ ಭಾಗವಾಗುವ ಸ್ಥಳವನ್ನು, ಅಲ್ಲಿ ರಕ್ತತುಂಬಿದ್ದರೂ ಗುರುತಿಸಿ, ಗುರಿಯನ್ನು ಬೇಗ ತೆಗೆದುಕೊಂಡು ಹೊಡೆದ. ಜೀವಂತವಾಗಿದ್ದ ಆ ಭಾರಿ ಪ್ರಾಣಿ ತಲೆಕಾಲುಗಳನ್ನು ನುಲಿಚುತ್ತಾ ಕೆಳಗೆ ದೊಪ್ಪನೆ ಬಿತ್ತು. ಅಲ್ಲಿ ಅದರ ರಕ್ತ ಚೆಲ್ಲುತ್ತಿತ್ತು: ಹಾಗೇ ಅದರ ತಲೆಯ ಚರ್ಮವನ್ನು ಸಿಗಿದರು. 'ಈ ಪಾಪಿ ಪಿಶಾಚಿ ಸರಿಯಾಗಿ ಬಿದ್ದಿಲ್ಲ'ವೆಂದು ತಲೆಯ ಚರ್ಮವನ್ನು ಕತ್ತರಿಸುತ್ತಿದ್ದ ಕಟುಕನೊಬ್ಬ ಗೊಣಗಿಕೊಂಡ.

ಐದು ನಿಮಿಷಗಳ ನಂತರ ಕಪ್ಪಿನ ಬದಲು. ಕೆಂಪಾದ. ಚರ್ಮವಿಲ್ಲದ ಅದರ ತಲೆಯನ್ನು ನೇತುಹಾಕಿದರು. ಐದು ನಿಮಿಷಗಳ ಮೊದಲು ಅಷ್ಟು ಭವ್ಯವಾದ ಬಣ್ಣದಲ್ಲಿ ಹೊಳೆಯುತ್ತಿದ್ದ ಆ ಕಣ್ಣುಗಳು ಗಾಜಿನಂತಾಗಿ ನೆಟ್ಟಿದಂತಿದ್ದುವು.

ಆಮೇಲೆ ಚಿಕ್ಕಪ್ರಾಣಿಗಳನ್ನು ಕೊಲ್ಲಲಾಗುವ ಭಾಗಕ್ಕೆ ಹೋದೆ – ಆಸ್ಫಾಲ್ಟಿನ ನೆಲವುಳ್ಳ ಬಹಳ ದೊಡ್ಡ ಕೋಣೆಯಲ್ಲಿ. ಕುರಿಗಳು. ಕರುಗಳನ್ನು ಕೊಲ್ಲಲು ಆಗುವ ದೊಡ್ಡ ಮೇಜುಗಳಿದ್ದುವು. ಕೆಲಸ ಆಗಲೇ ಮುಗಿದಿತ್ತು. ರಕ್ತದ ವಾಸನೆ ತುಂಬಿದ್ದ ದೊಡ್ಡ ಕೋಣೆಯಲ್ಲಿ ಇಬ್ಬರೇ ಕಟುಕರಿದ್ದರು. ಒಬ್ಬ ಸತ್ತ ಕುರಿಮರಿಯ ಕಾಲೊಂದನ್ನು ಊದುತ್ತಾ ತನ್ನ ಕೈಯಿಂದ ಅದರ ಉಬ್ಬಿದ ಹೊಟ್ಟೆಯನ್ನು ತಟ್ಟುತ್ತಿದ್ದನು; ಇನ್ನೊಬ್ಬ ರಕ್ತಸಿಕ್ತ ಮೇಲುಡಿಗೆ ತೊಟ್ಟ ಚಿಕ್ಕವನು ಮುರಿದ ಸಿಗರೇಟೊಂದನ್ನು ಸೇದುತ್ತಿದ್ದ. ಅಷ್ಟೊಂದು ವಾಸನೆ ತುಂಬಿದ್ದ ಆ ಉದ್ದನೆ ಕತ್ತಲ ಕೋಣೆಯಲ್ಲಿ ಇನ್ನಾರೂ ಇರಲಿಲ್ಲ. ಒಬ್ಬ ಮಾಜಿ ಸೈನಿಕನಂತಿದ್ದೊಬ್ಬ. ನನ್ನ ಹಿಂದೆಯೇ. ಅರಚುತ್ತಿದ್ದ ಕತ್ತಿನ ಮೇಲೆ ಬಿಳಿ ಚುಕ್ಕೆಗಳಿದ್ದ ಕಾಲುಗಳನ್ನು ಬಿಗಿದಿದ್ದ ಮರಿ ಕುರಿಯೊಂದನ್ನು ಹೊತ್ತು ಒಳಗೆ ಬಂದ. ಹಾಸಿಗೆ ಮೇಲೆ ಮಲಗಿಸುವ ಹಾಗೆ ಈ ಪ್ರಾಣಿಯನ್ನು ಆತ ಒಂದು ಮೇಜಿನ ಮೇಲೆ ಮಲಗಿಸಿದ. ಅವನ ಪರಿಚಯವಿದ್ದಹಾಗೆ ತೋರುತ್ತಿದ್ದ ಕಟುಕನನ್ನು ಆ ಸೈನಿಕ ಅಭಿನಂದಿಸಿದ. ಆತನ ಒಡೆಯ ಏನಾದರೂ ರಜೆ ಕೊಡುತ್ತಾನೋ ಇಲ್ಲವೋ ಎಂದು ವಿಚಾರಿಸಿದ. ಸಿಗರೇಟು ಇದ್ದವನು ಚೂರಿಯೊಂದನ್ನು ಹಿಡಿದು ಹತ್ತಿರ ಹೋಗಿ, ಮೇಜುವಿನ ಅಂಚಿನಲ್ಲಿ ಮಸೆಯುತ್ತಾ. ರಜಾ ದಿನಗಳಲ್ಲಿ ಮಾತ್ರ ತಾವು ಮುಕ್ತರೆಂದು ಹೇಳಿದ. ಆ ಜೀವಂತ ಕುರಿಮರಿ ತನ್ನ ಪುಟ್ಟ ಬಾಲವನ್ನು ಜೋರಾಗಿ ಅಲುಗಿಸುವುದು ಮತ್ತು ಎಂದಿನಂತೆ ವೇಗವಾಗಿ ಪಕ್ಕೆಗಳನ್ನು ಹೊಯ್ದುಕೊಳ್ಳುವುದನ್ನು ಬಿಟ್ಟರೆ ಸತ್ತು ಉಬ್ಬಿದಂತೆ ಬಿದ್ದಿತ್ತು. ಆ ಸೈನಿಕ ಅದರ ಎತ್ತಿದ ತಲೆಯನ್ನು ಮೆಲ್ಲಗೆ. ಶ್ರಮವಿಲ್ಲದೆ ಒತ್ತಿ ಹಿಡಿದ: ಆ ಕಟುಕ. ಮಾತುಕತೆ ಮುಂದುವರೆಸುತ್ತಲೇ. ಆ ಪ್ರಾಣಿಯ ಕತ್ತನ್ನು ಎಡಗೈಯಲ್ಲಿ ಹಿಡಿದುಕೊಂಡು. ಕತ್ತರಿಸಿದ. ಪ್ರಾಣಿ ನಡುಗಿತು. ಅದರ ಪುಟ್ಟಬಾಲ ನಿಮಿರುತ್ತಾ ಬಂದು ಅಲುಗಾಟ ನಿಲ್ಲಿಸಿತು. ಆತ ರಕ್ತ ಹೋಗುವುದನ್ನೇ ಕಾಯುತ್ತಾ,

ಆರಿಹೋಗಿದ್ದ ತನ್ನ ಸಿಗರೇಟನ್ನು ಮತ್ತೆ ಹೊತ್ತಿಸಿದ. ರಕ್ತ ಹರಿಯುತ್ತಿದ್ದಂತೆ ಕುರಿಮರಿ ಒದ್ದಾಡಲು ಪ್ರಾರಂಭಿಸಿತು. ಒಂದು ಚೂರು ಅಡೆತಡೆಯಿಲ್ಲದೆ ಸಂಭಾಷಣೆ ಮುಂದುವರಿಯುತ್ತಿತ್ತು. ಇಡೀ ಸನ್ನಿವೇಶ ಖಂಡಿತವಾಗಿ ಕೆರಳಿಸುತ್ತಿತ್ತು.

ಸಾವಿರಾರು ಅಡುಗೆ ಮನೆಗಳಲ್ಲಿ. ನಿತ್ಯವೂ ತಲೆಕೆಡಿಸಿಕೊಂಡು. ರಕ್ತಸುರಿಸುತ್ತ. ನಗೆ ಬರಿಸುವಂತೆ ಭಯದಿಂದ. ರೆಕ್ಕೆಗಳನ್ನು ಬಡಿಯುತ್ತಾ ಹಾರಾಡುವ ಕೋಳಿಗಳ. ಅವುಗಳ ಮರಿಗಳ ಕಥೆ?

ತಾವು ಸರಿಯಾದುದನ್ನೇ ಮಾಡುತ್ತಿದ್ದೇವೆಂದು ತಿಳಿದು. ಈ ಪ್ರಾಣಿಗಳನ್ನು ಕೊಲ್ಲುವ. ದಯಾವಂತ. ನಾಗರಿಕ ಮಹಿಳೆಯನ್ನು ನೋಡಿ. ಆಕೆ ಒಂದೇ ಕಾಲಕ್ಕೆ ಎರಡು ಪರಸ್ಪರ ವಿರೋಧವನ್ನುಳ್ಳ ನಿಲುವುಗಳನ್ನು ಸಮರ್ಥಿಸುತ್ತಿದ್ದಾಳೆ.

ಮೊದಲಿಗೆ. ಆಕೆಯ ಡಾಕ್ಟರರು ಸಮರ್ಥಿಸುವಂತೆ ಆಕೆ ಸಸ್ಯಾಹಾರದಿಂದಲೇ ಜೀವಿಸಲು ಸಾಧ್ಯವಿಲ್ಲ ಹಾಗೂ ಮಾಂಸಾಹಾರ ಆಕೆಯ ದುರ್ಬಲ ದೇಹಕ್ಕೆ ಅತ್ಯವಶ್ಯಕ. ಎರಡನೆಯದಾಗಿ. ಆಕೆ ತಾನು ಪ್ರಾಣಿಗಳನ್ನು ನೋಯಿಸುವುದಿರಲಿ. ನೋವಿನ ದೃಶ್ಯವನ್ನು ಕೂಡ ಸಹಿಸಲಾರದಷ್ಟು ಮೃದುಸ್ವಭಾವದವಳು.

ಆದರೆ ನಿಜವಾಗಿ ಆ ಹೆಂಗಸಿಗೆ ಮನುಷ್ಯನಿಗೆ ಅಸಹಜವಾದ ಆಹಾರದ ಮೇಲೆ ಬದುಕುವಂತೆ ಕಲಿಸಲಾಗಿರುವುದರಿಂದ ದುರ್ಬಲಳಾಗಿದ್ದಾಳೆ; ಅಲ್ಲದೆ ಪ್ರಾಣಿಗಳಿಗೆ ನೋವನ್ನುಂಟುಮಾಡುವುದನ್ನು ಆಕೆ ತಪ್ಪಿಸಲಾರಳು—ಏಕೆಂದರೆ ಆಕೆ ಅವನ್ನು ತಿನ್ನುತ್ತಾಳೆ.

## 10

ಇದು ನಮಗೆ ಗೊತ್ತಿಲ್ಲವೆಂದು ಸೋಗುಹಾಕುವುದು ಸಾಧ್ಯವಿಲ್ಲ. ನಾವು ನೋಡಲು ಇಷ್ಟಪಡದೆ ತಿರಸ್ಕರಿಸುವಂತಹವರ ಅಸ್ತಿತ್ವವನ್ನೇ ಅಲ್ಲಗಳೆಯಲು ನಾವು ಆಸ್ಟ್ರಿಚ್‌ಪಕ್ಷಿಗಳಲ್ಲ. ನಾವು ತಿನ್ನಲು ಇಷ್ಟಪಡುವುದನ್ನೇ. ನೋಡಲು ಇಷ್ಟಪಡದೇ ಇದ್ದಾಗಲಂತೂ ಈ ಮಾತು ಖಂಡಿತಾ. ಅದನ್ನು ಬಿಟ್ಟುಬಿಡಲು ಸಾಧ್ಯವಾಗದಂತದ್ದೋ ಅಥವಾ ನಿಜವಾಗಿ ಬೇಕಾದದ್ದೋ ಆಗಿ. ಕೊನೆಯಪಕ್ಷ ಒಂದಲ್ಲ ಒಂದು ವಿಧದಲ್ಲಿ ಉಪಯೋಗಕ್ಕೆ ಬರುವಂತದ್ದೋ ಆಗಿರಬೇಕು. ಆದರೆ ಅದು ಖಂಡಿತ ಅನವಶ್ಯಕ*

---

* ಈ ಮಾತನ್ನು ನಂಬದವರು ವಿಜ್ಞಾನಿಗಳು, ವೈದ್ಯರುಗಳು ಬರೆದಿರುವ, ಮಾಂಸವು ಮನುಷ್ಯನ ಪೋಷಣೆಗೆ ಅತ್ಯವಶ್ಯಕವಲ್ಲವೆಂದು ವಾದಿಸಿರುವ ಅಸಂಖ್ಯ ಪುಸ್ತಕಗಳನ್ನು ಓದಲಿ. ಮಾಂಸವನ್ನು ಅನಾದಿಕಾಲದಿಂದಲೂ ತಮ್ಮ ಪೂರ್ವಜರು ಬಳಸಿದ್ದರಿಂದ ಹಾಗೂ ತಾವು ಬಳಸುತ್ತಿರುವುದರಿಂದ ಮಾತ್ರಕ್ಕೇ ಅದು ಅವಶ್ಯಕವೆಂದು ಸಾಧಿಸುವ ಹಳೆಯ ತರಹದ ವೈದ್ಯರ ಮಾತನ್ನು ಯಾರೂ ನಂಬುವುದು ಬೇಡ; ಅವರು ಎಲ್ಲ ಸಂಪ್ರದಾಯಸ್ಥ ಹಳೆಯ ತಲೆಗಳಂತೆ ಹಿಡಿದ ಪಟ್ಟು ಬಿಡದಂತೆ, ಅನ್ಯರಿಗೆ ಉಂಟಾಗುವ ಕೇಡನ್ನು ಗಮನಿಸದೆ ತಮ್ಮ ಅಭಿಪ್ರಾಯಗಳನ್ನು ಸಾಧಿಸುತ್ತಾರೆ.

ಅಲ್ಲದೆ ಮೃಗೀಯ ಭಾವನೆಗಳನ್ನು, ಬಯಕೆಗಳನ್ನು ಕೆರಳಿಸಲು, ಕಾಮಾಸಕ್ತಿ, ಕುಡಿತದ ಅಮಲುಗಳು ಹೆಚ್ಚಲು ಕಾರಣವಾಗುತ್ತದೆ. ಚಿಕ್ಕವಯಸ್ಸಿನ ಮುಗ್ಧ, ದಯಾವಂತರು – ಅದರಲ್ಲೂ ಹೆಂಗಸರು ಹುಡುಗಿಯರು-ಈ ತರ್ಕ ಗೊತ್ತಿಲ್ಲದಿದ್ದರೂ ಒಳ್ಳೆಯ ಗುಣಗಳಿಗೂ ವನದ ಮಾಂಸಕ್ಕೂ ಹೊಂದಿಕೆಯಾಗದೆಂದು ತಿಳಿಯುತ್ತಾರೆ. ಇವರೆಲ್ಲಾ ಒಳ್ಳೆಯವರಾಗಬೇಕೆಂದುಕೊಂಡ ಕೂಡಲೇ ಮಾಂಸ ತಿನ್ನುವುದನ್ನು ಬಿಟ್ಟುಕೊಡುತ್ತಾರೆ ಎನ್ನುವ ಸಂಗತಿ ಮತ್ತೆ ಮತ್ತೆ ಮೇಲಿನ ಮಾತನ್ನು ಸಮರ್ಥಿಸುತ್ತದೆ.

ಹಾಗಿದ್ದಮೇಲೆ, ನಾನು ಹೇಳಬೇಕೆಂದು ಬಯಸುವುದಾದರೂ ಏನನ್ನು? ನೀತಿವಂತರಾಗಬೇಕಾದರೆ ಜನರು ಮಾಂಸವನ್ನು ತಿನ್ನುವುದನ್ನು ನಿಲ್ಲಿಸಬೇಕೆಂದೇನು? ಖಂಡಿತಾ ಅಲ್ಲ.

ಒಳ್ಳೆಯ ಬದುಕಿಗೆ ಒಳ್ಳೆಯ ಕೆಲಸಗಳ ಅನುಕ್ರಮಣಿಕೆ ಅನಿವಾರ್ಯವೆಂದು ಮಾತ್ರ ನಾನು ಹೇಳಬೇಕಾಗಿದೆ: ಒಬ್ಬಾತ ಒಳ್ಳೆಯ ಬದುಕಿಗಾಗಿ ವಹಿಸುವ ಆಸ್ಥೆಗಳು ನಿಜವಾದುದಾದರೆ, ಅವೆಲ್ಲಾ ಒಂದು ಗೊತ್ತಾದ ಅನುಕ್ರಮವನ್ನು ಹೊಂದಿರುತ್ತವೆ. ಹಾಗೂ ಈ ಅನುಕ್ರಮಣಿಕೆಯಲ್ಲಿ ಆತ ಸಾಧಿಸಲು ಹೊರಡುವ ಮೊದಲ ಗುಣ ಆತ್ಮ-ನಿಗ್ರಹ. ಈ ಆತ್ಮನಿಗ್ರಹವನ್ನು ಸಾಧಿಸುವಾಗ ಆತ ಅನಿವಾರ್ಯವಾಗಿ ಒಂದು ಕ್ರಮವನ್ನು ಅನುಸರಿಸಬೇಕು. ಈ ಕ್ರಮದಲ್ಲಿ ಆಹಾರಕ್ಕೆ ಸಂಬಂಧಿಸಿದಂತೆ ಮನಸ್ಸನ್ನು ನಿಗ್ರಹಿಸುವುದು ಮೊದಲು ಬರುತ್ತದೆ. ಆತ ನಿಜವಾಗಿ, ಗಂಭೀರವಾಗಿ ಶುದ್ಧ ಜೀವನವನ್ನು ಆಶಿಸುವವನಾದರೆ, ಉಪವಾಸದ ಮೊದಲ ಹಂತದಲ್ಲಿ ಮಾಂಸಾಹಾರವನ್ನು ತ್ಯಜಿಸುತ್ತಾನೆ, ಏಕೆಂದರೆ, ಆ ಆಹಾರವೇ ಕಾರಣವಾಗಿ ಉಂಟಾಗುವ ಕಾಮನೆಗಳ ಕೆರಳುವಿಕೆಯ ಮಾತು ಹಾಗಿರಲಿ, ನೈತಿಕ ಭಾವನೆಗಳಿಗೆ ವಿರುದ್ಧವಾದ ಕ್ರಿಯೆಯಾದ, ದುರಾಸೆ ಮತ್ತು ರುಚಿಯಾದ ಆಹಾರಕ್ಕಾಗಿ ಇರುವ ಬಯಕೆಯಿಂದಾಗಿಯೇ ಜರುಗುವ ಕೊಲ್ಲುವಿಕೆಯನ್ನು ಒಳಗೊಳ್ಳುವುದರಿಂದ, ಮಾಂಸವನ್ನು ಬಳಸುವುದೇ ಅನೈತಿಕ.

The Ethics of Diet ಎನ್ನುವ ಪುಸ್ತಕದಲ್ಲಿ ಮಾಂಸಾಹಾರವನ್ನು ತ್ಯಜಿಸುವುದು ನೀತಿಯುತ ಬಾಳುವೆಗೆ ಮತ್ತು ಉಪವಾಸ ಕ್ರಿಯೆಗೆ ಮೊದಲ ಹಂತ ಹೇಗೆ ಆಗುತ್ತದೆ ಎಂಬುದನ್ನು, ಒಬ್ಬರಿಂದ ಮಾತ್ರವಲ್ಲ; ಮಾನವನ ಪ್ರಜ್ಞಾವಂತ ಬದುಕಿನ ಶ್ರೇಷ್ಠ ಪ್ರತಿನಿಧಿಗಳಿಂದ, ಮೆಚ್ಚುವಂತೆ ವಿವರಿಸಲ್ಪಟ್ಟಿದೆ.

ತರ್ಕಕ್ಕಿಂತ ಹೆಚ್ಚಾಗಿ ಜನಾಭಿಪ್ರಾಯವನ್ನೇ ಗಣನೆಗೆ ತೆಗೆದುಕೊಳ್ಳುವ ಅಭ್ಯಾಸವನ್ನು ಹೊಂದಿದವರಿಂದ, ಮಾಂಸ ತಿನ್ನುವುದು ಅನೀತಿ, ತಪ್ಪು ಎಂಬುದು ಮಾನವನಿಗೆ ಹಿಂದಿನಿಂದಲೂ ತಿಳಿದಿರುವ ಸಂಗತಿಯಾಗಿದ್ದರೆ ಜನರೇಕೆ ಅದನ್ನು ನಿಯಮದಂತೆ ಅನುಸರಿಸುತ್ತಿಲ್ಲವೆನ್ನುವ ಪ್ರಶ್ನೆ ಬರುತ್ತದೆ.

ಮಾನವನ ನೈತಿಕಪ್ರಗತಿ – ಇದು ಆತನ ಎಲ್ಲ ಪ್ರಗತಿಗಳಿಗೂ ಅಡಿಗಲ್ಲು – ಯಾವಾಗಲೂ ನಿಧಾನವೆಂಬುದೇ ಈ ಪ್ರಶ್ನೆಗೆ ಉತ್ತರ. ಅದು ಅಪ್ರತಿಹತವಾಗಿರುವುದು ಮತ್ತು

ಅವಿರತವಾಗಿ ವೇಗೋತ್ಕರ್ಷವನ್ನು ಪಡೆಯುತ್ತಿರುವುದು. ತಳ್ಳಿಹಾಕಲಾಗದ. ನಿಜವಾದ ಪ್ರಗತಿಯ ಗುರುತು.

ಸಸ್ಯಾಹಾರ ಚಳುವಳಿಯ ಪ್ರಗತಿ ಹೀಗಿದೆ. ಮೇಲೆ ಹೇಳಿದ ಪುಸ್ತಕದ ಲೇಖಕರ ಶಬ್ದಗಳಲ್ಲಿ ಹಾಗೂ ತನ್ನವೇ ಆದ ಹಲವು ಕಾರಣಗಳಿಂದಾಗಿ ಮಾಂಸಾಹಾರದ ಅಭ್ಯಾಸದಿಂದ ಸಸ್ಯಾಹಾರದ ಕಡೆಗೆ ಓಲುತ್ತಿರುವ. ಈ ಮಾರ್ಗವನ್ನೇ ಹಿಡಿದು ಮುಂದುವರೆದು ಸಸ್ಯಾಹಾರ ಚಳುವಳಿಯನ್ನು ಬಲಪಡಿಸಿ. ಹರಡುತ್ತಿರುವ ಮಾನವ ಜನಾಂಗದ ಕ್ರಿಯೆಗಳಲ್ಲಿ. ಈ ಪ್ರಗತಿಯ ಸೂಚನೆಗಳಿವೆ.

ಈ ಚಳುವಳಿ ಕಳೆದ ಹತ್ತುವರ್ಷದಲ್ಲಿ ಹೆಚ್ಚುಹೆಚ್ಚು ವೇಗವಾಗಿ ಮುಂದುವರೆದಿದೆ. ಈ ವಿಷಯವನ್ನು ಕುರಿತ ಪುಸ್ತಕಗಳು. ನಿಯತಕಾಲಿಕಗಳು ಪ್ರತಿವರ್ಷವೂ ಕಾಣಿಸಿಕೊಳ್ಳುತ್ತಿವೆ: ಮಾಂಸವನ್ನು ತ್ಯಜಿಸಿದ ಹೆಚ್ಚುಹೆಚ್ಚು ಜನರನ್ನು ಭೇಟಿಯಾಗುತ್ತೇವೆ; ವಿದೇಶಗಳಲ್ಲಿ ಅದರಲ್ಲೂ ಜರ್ಮನಿ. ಇಂಗ್ಲೆಂಡ್ ಮತ್ತು ಅಮೆರಿಕಾದಲ್ಲಿ ಸಸ್ಯಾಹಾರ ಭೋಜನಶಾಲೆಗಳು. ಉಪಾಹಾರ ಗೃಹಗಳ ಸಂಖ್ಯೆ ವರ್ಷ ವರ್ಷ ಅಧಿಕಗೊಳ್ಳುತ್ತಿವೆ.

ನೈತಿಕವಾದ ಶ್ರೇಷ್ಠತೆಗಾಗಿ ಇರುವ ಮಾನವ ಜನಾಂಗದ ಆಕಾಂಕ್ಷೆ. ಮೊದಲ ಹೆಜ್ಜೆಯಿಂದಲೇ (ಎಲ್ಲ ನಿಜವಾದ ಹೆಜ್ಜೆಗಳೂ ಮುಖ್ಯವೂ ಹೌದು. ಅಮುಖ್ಯವೂ ಹೌದು) ತನಗೆ ಸಹಜವಾದ ಬದಲಾಗದ ಅನುಕ್ರಮಣಿಕೆಯೊಂದನ್ನು ಕಂಡುಕೊಂಡು, ತನ್ನ ಪ್ರಯತ್ನ ಪ್ರಾಮಾಣಿಕವೂ ಗಂಭೀರವೂ ಆದುದೆಂಬುದನ್ನು ತೋರಿಸುವ ಈ ಚಳುವಳಿ. ಪ್ರಭುವಿನ ರಾಜ್ಯವನ್ನು ನೆಲಕ್ಕೆ ತರಲು ಬದುಕನ್ನು ಮುಡುಪಿಟ್ಟವರಿಗಂತೂ ಹರ್ಷವನ್ನು ತರುತ್ತದೆ. ಸಸ್ಯಾಹಾರವನ್ನು ಸ್ವೀಕರಿಸುವುದೇ ಆ ರಾಜ್ಯದತ್ತ ಹಾಕಿದ ಪ್ರಮುಖ ಹೆಜ್ಜೆ.

ಮನೆಯ ಮೇಲಣ ಮಾಳಿಗೆ ತಲುಪಬೇಕೆಂದು ಯತ್ನಿಸಿ. ಯಾವು ಯಾವುದೋ ದಿಕ್ಕುಗಳಿಂದ ಗೋಡೆಗಳ ಮೇಲೆ ಹತ್ತಲು ವ್ಯರ್ಥವಾಗಿ ಪ್ರಯತ್ನಿಸಿ ಸೋತು, ಕೊನೆಗಾದರೂ ಅಟ್ಟಣಿಗೆಯ ಮೊದಲ ಹಂತದ ಬಳಿ. ಎಲ್ಲರೂ ಸೇರಿ ಆ ಕಡೆಗೆ ಮುತ್ತಿಕೊಂಡು. ಈ ಮೊದಲ ಹಂತದ ಮೂಲಕವಲ್ಲದೇ ಬೇರೆ ಮಾರ್ಗವೇ ಇಲ್ಲವೆಂದು ಒಪ್ಪಿಕೊಳ್ಳುವ ಸ್ಥಿತಿಯನ್ನು ತಲುಪಿದ್ದಕ್ಕೆ ಜನರು ಹರ್ಷಿಸದೇ ಇರುವುದು ಹೇಗೆ ಸಾಧ್ಯವಿಲ್ಲವೋ ಹಾಗೆ ಮೇಲೆ ಹೇಳಿದ ಘಟ್ಟವನ್ನು ತಲುಪಿದ್ದಕ್ಕೆ ನಾವು ಹರ್ಷಪಡದಿರುವುದು ಸಾಧ್ಯವಿಲ್ಲ.*

---

* ಹೋವಾರ್ಡ್ ವಿಲಿಯಮ್ ಬರೆದ The Ethics of Diet ಗ್ರಂಥದ ರಷಿಯನ್ ಭಾಷಾಂತರಕ್ಕೆ ಈ ಪ್ರಬಂಧ ಮುನ್ನುಡಿಯಾಗಿ ಪ್ರಕಟವಾಗಿತ್ತು.

# ದೇವರ ರಾಜ್ಯ ನಿಮ್ಮೊಳಗೇ ಇದೆ

ಈ ಎರಡು ವರ್ಷಗಳ ಕೆಲಸವನ್ನು ಮುಗಿಸುತ್ತಿದ್ದ ವೇಳೆಗೆ 1892ರ ಸೆಪ್ಟೆಂಬರ್ 9 ರಂದು ನಾನು ಟೂಲ ಮತ್ತು ರೈಜಾನ್ ಜಿಲ್ಲೆಗಳಲ್ಲಿ ರೈಲು ಪ್ರಯಾಣ ಮಾಡಬೇಕಾಯಿತು. ಈ ಜಿಲ್ಲೆಗಳಲ್ಲಿ ಜನ ಕಳೆದ ವರ್ಷ ಭೀಕರ ಕ್ಷಾಮಕ್ಕೆ ತುತ್ತಾಗಿದ್ದರು. ಈ ವರ್ಷ ಅವರ ಕ್ಷೋಭೆ ಇನ್ನೂ ಉಗ್ರವಾಗಿತ್ತು. ಅಲ್ಲಿನ ಒಂದು ಸ್ಟೇಷನ್‌ನಲ್ಲಿ ಆ ಸಂಸ್ಥಾನದ ಗವರ್ನರನ ನೇತೃತ್ವದಲ್ಲಿ ಹೊರಟ ಸೈನಿಕ ಪಡೆ ತುಂಬಿಕೊಂಡಿದ್ದ ಒಂದು ವಿಶೇಷ ರೈಲನ್ನು ನೋಡಿದೆವು. ಅವರು ಹೊಟ್ಟೆಗಿಲ್ಲದೆ ನರಳುತ್ತಿದ್ದ ರೈತರನ್ನು ಬಡಿದು ಕೊಲ್ಲುವುದಕ್ಕೆಂದೇ ಬಂದೂಕಗಳು. ಈಟಿಗಳು. ದೊಣ್ಣೆಗಳು ಮದ್ದುಗುಂಡುಗಳು ಮೊದಲಾದ ಯುದ್ಧ ಸಾಮಗ್ರಿಗಳಿಂದ ಸನ್ನದ್ಧರಾಗಿದ್ದರು.

ಕಾನೂನಿನಲ್ಲಿ, ಮೂವತ್ತು ವರ್ಷಗಳ ಹಿಂದೆಯೇ ಈ ದೇಹ ದಂಡನೆಯ ಶಿಕ್ಷೆ ರದ್ದಾಗಿತ್ತು ನಿಜ. ಆದರೆ ಅಧಿಕಾರಿಗಳು ಹೊರಡಿಸುತ್ತಿದ್ದ ಶಾಸನಗಳನ್ನು ಜಾರಿಗೆ ತರುವುದಕ್ಕಾಗಿ ಜನರಿಗೆ ಛಡಿಯೇಟು ಬಾರಿಸುವುದು ರಷ್ಯಾದಲ್ಲಿ ಈಚೀಚೆಗೆ ಹೆಚ್ಚು ವ್ಯಾಪಕವಾಗಿ ಬೆಳೆಯುತ್ತಿರುವ ಪದ್ಧತಿಯಾಗಿದೆ.

ನನಗೆ ಇವೆಲ್ಲ ಗೊತ್ತಿತ್ತು. ಅಲ್ಲದೆ ನಿಜ್ನಿ–ನೊವ್‌ಗೊರೊಡ್‌ನ ಗವರ್ನರ್ ಆದ ಬರನೊವ್ ಎಂಬಾತ ಇಂಥ ಪ್ರಹಾರಗಳ ಬಗೆಗೆ ತುಂಬ ಹೆಮ್ಮೆಪಟ್ಟು ಕೊಳ್ಳುತ್ತಾನೆಂದೂ. ಚೆರ್ನಿಗೊವ್. ತಾಂಬೊವ್. ಸರಟೊವ್. ಅಸ್ಟ್ರಖಿನ್ ಒರ್ಯೋಲ್ ಗಳಲ್ಲಿ ಇಂಥ ಹಲವಾರು ಪ್ರಕರಣಗಳು ನಡೆದಿವೆಯೆಂದೂ ನಾನು ಪತ್ರಿಕೆಗಳಲ್ಲಿ ಓದಿದ್ದೆ. ಆದರೆ ಇಂಥ ಹಿಂಸಾಕಾರ್ಯಗಳಲ್ಲಿ ತೊಡಗುವ ಸೈನಿಕ ಪಡೆಯನ್ನು ಇದುವರೆಗೆ ನಾನು ಕಂಡಿರಲಿಲ್ಲ.

ಕ್ರಿಸ್ತ ತತ್ತ್ವದಿಂದ ಪ್ರಭಾವಿತರಾದ ಈ ದಯಾಳು ರಷ್ಯನ್ ಸೈನಿಕರು ಹಸಿವಿನಿಂದ ನರಳುತ್ತಿರುವ ತಮ್ಮ ಸೋದರರನ್ನು ಹೊಡೆದು ಬಡಿದು ಕೊಲ್ಲುವುದಕ್ಕಾಗಿ ಬಂದೂಕು ಬಡಿಗೆಗಳನ್ನು ಹಿಡಿದು ಹೊರಟ ಈ ದೃಶ್ಯವನ್ನು ನಾನು ಕಣ್ಣಾರೆ ಕಂಡಂತಾಯಿತು.

ಅವರ ಪ್ರಯಾಣಕ್ಕೆ ಕಾರಣ ಇದು:

ರೈತರು, ಒಬ್ಬ ಶ್ರೀಮಂತ ಜಮೀನುದಾರನ ಒಂದು ಎಸ್ಟೇಟಿನಲ್ಲಿ ಮರದ ತೋಪು ಬೆಳೆಸಿದ್ದರು. ಅದನ್ನು ಸದಾ ಅವರು ತಮ್ಮ ಉಪಯೋಗಕ್ಕೆ ಬಳಸಿಕೊಳ್ಳುತ್ತಿದ್ದರು.

ಆದ್ದರಿಂದ ಅದು ಅವರಿಗೇ ಸೇರಿದ್ದು ಅಥವಾ ಅವರೂ ಅದರಲ್ಲಿ ಸಮಾನ ಹಕ್ಕು ಉಳ್ಳವರು ಎಂಬ ಭಾವನೆ ಬಂದುಬಿಟ್ಟಿತ್ತು. ಆದರೆ ಜಮೀನುದಾರ ಅದನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ಮರಗಳನ್ನೆಲ್ಲ ಕಡಿಸಲಾರಂಭಿಸಿದ. ರೈತರು ದೂರು ಕೊಟ್ಟರು. ಮೊದಲಿನ ನ್ಯಾಯಾಧೀಶರು ತುಂಬ ಅನ್ಯಾಯವಾಗಿ (ಇದು ನನ್ನ ಮಾತಲ್ಲ. ಚೆನ್ನಾಗಿ ತಿಳಿದ ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು ಗವರ್ನರರ ಮಾತು) ಶ್ರೀಮಂತ ಜಮೀನುದಾರನ ಪರವಾಗಿ ತೀರ್ಪುಕೊಟ್ಟರು. ಮೇಲಿನ ಕೋರ್ಟುಗಳು ಮತ್ತು ಸೆನೆಟ್ ಇಲ್ಲಿ ರೈತರಿಗೆ ಅನ್ಯಾಯವಾಗುವಂತೆ ತೀರ್ಪುಕೊಡಲಾಗಿದೆ ಎಂಬುದು ಚೆನ್ನಾಗಿ ಗೊತ್ತಿದ್ದರೂ ಸಹ ತೀರ್ಪನ್ನು ಕ್ರಮವೆಂದು ಸಾರಿ ತೋಪನ್ನು ಜಮೀನ್ದಾರರಿಗೇ ಕೊಡಬೇಕೆಂದು ಘೋಷಿಸಿದುವು. ಜಮೀನುದಾರ ಮತ್ತೆ ಮರಗಳನ್ನು ಕಡಿಸಲಾರಂಭಿಸಿದ. ಆದರೆ ಮೇಲಾಧಿಕಾರಿಗಳಿಂದ ತಮಗೆ ಇಂಥ ಅನ್ಯಾಯವಾಗಬಹುದೆಂದು ನಂಬದಿದ್ದ ರೈತರು ಈ ತೀರ್ಪಿಗೆ ಬೆಲೆಕೊಡಲಿಲ್ಲ. ತೋಪು ಈಗಲೂ ತಮಗೇ ಸೇರಿದ್ದೆಂದು ಘೋಷಿಸಿ. ಈ ದೂರನ್ನು ದೊರೆಯವರೆಗೂ ಕೊಂಡೊಯ್ಯುವುದಾಗಿ ಹೇಳುತ್ತಾ ಮರಕಡಿಯುವ ಕಾರ್ಯಕ್ಕೆಂದು ಬಂದಿದ್ದ ಕೆಲಸಗಾರರನ್ನೆಲ್ಲ ಓಡಿಸಿಬಿಟ್ಟರು.

ಸುದ್ದಿ ಪೀಟರ್ಸ್‌ಬರ್ಗ್‌ಗೆ ತಲುಪಿತು. ನ್ಯಾಯಾಲಯದ ತೀರ್ಪನ್ನು ಕಡ್ಡಾಯವಾಗಿ ಜಾರಿಗೆ ತರಬೇಕೆಂದು ಗವರ್ನರನಿಗೆ ಸೂಚನೆ ಹೋಯಿತು. ಆತ ಸೈನಿಕರ ನೆರವನ್ನು ಕೋರಿದ. ಹೀಗಾಗಿ ಬಂದೂಕುಗಳು. ಮದ್ದುಗುಂಡುಗಳು ಮತ್ತು ಈ ಕೆಲಸಕ್ಕೆಂದೇ ವಿಶೇಷವಾಗಿ ತಯಾರಿಸಿ ಟ್ರಕ್ಕುಗಳಲ್ಲಿ ತುಂಬಿಸಲಾಗಿದ್ದ ಛಡಿಗಳು – ಇವುಗಳಿಂದ ಸನ್ನದ್ಧರಾದ ಸೈನಿಕರು ಮೇಲಾಧಿಕಾರಿಗಳ ಆಜ್ಞೆಯನ್ನು ಜಾರಿಗೆ ತರುವುದಕ್ಕಾಗಿ ಹೊರಟಿದ್ದರು.

ಸಾಮಾನ್ಯವಾಗಿ ಕೊಲೆ. ಚಿತ್ರಹಿಂಸೆ ಅಥವಾ ಒಂದಿಲ್ಲೊಂದು ಬಗೆಯ ಬೆದರಿಕೆಯ ಮೂಲಕ ಮೇಲಾಧಿಕಾರಿಗಳ ಆಜ್ಞೆಯನ್ನು ಜಾರಿಗೆ ತರಲಾಗುತ್ತದೆ. ಪ್ರತಿಭಟನೆ ಹೇಗಿರುತ್ತದೆಂಬುದರ ಮೇಲೆ ಈ ಕಾರ್ಯಾಚರಣೆ ಅವಲಂಬಿತವಾಗಿರುತ್ತದೆ.

ರಷ್ಯಾದಲ್ಲಿ (ಅಥವಾ ರಾಜ್ಯವ್ಯವಸ್ಥೆ ಮತ್ತು ಖಾಸಗಿ ಆಸ್ತಿಗಳಿರುವ ಯಾವುದೇ ದೇಶದಲ್ಲಿ) ರೈತರು ಪ್ರತಿಭಟಿಸಿದರೆ ಈ ಕ್ರಮವನ್ನು ಅನುಸರಿಸಲಾಗುತ್ತದೆ: ಸೇನಾಮುಖಂಡ ಒಂದು ಭಾಷಣ ಬಿಗಿದು ಎಲ್ಲರೂ ಶರಣು ಬರಬೇಕೆಂದು ಕೋರುತ್ತಾನೆ. ಆದರೆ ಉದ್ರಿಕ್ತರಾದ ಜನರು ತಮ್ಮ ನಾಯಕರಿಂದ ಭ್ರಾಂತಿಗೆ ಒಳಗಾಗಿ. ಅಧಿಕಾರಿಯು ಅಧಿಕೃತ. ಗ್ರಾಂಥಿಕ ಭಾಷೆಯಲ್ಲಿ ಹೇಳಿದ ಎಚ್ಚರಿಕೆಯನ್ನು ಸ್ವಲ್ಪವೂ ಅರ್ಥಮಾಡಿಕೊಳ್ಳದೆ ಕ್ಷೋಭೆಯನ್ನುಂಟು ಮಾಡುತ್ತಾರೆ. ಆಗ ಗವರ್ನರನು. ಅವರು ಶರಣು ಬಂದು ಅಲ್ಲಿಂದ ಹೊರಟುಹೋಗದಿದ್ದರೆ ಅಧಿಕಾರವನ್ನು ಚಲಾಯಿಸಬೇಕಾಗುತ್ತದೆಂದು ಘೋಷಿಸುತ್ತಾನೆ. ಗುಂಪು ಹಾಗೆ ಮಾಡದಿದ್ದರೆ ಅಧಿಕಾರಿಯು ಬಂದೂಕಗಳಿಗೆ ತೋಟಾ ತುಂಬಿ ಜನರ

ಮೇಲ್ಭಾಗದಲ್ಲಿ ಉಡಾಯಿಸುವಂತೆ ಸೈನಿಕರಿಗೆ ಆಜ್ಞೆ ಕೊಡುತ್ತಾನೆ. ಅಲ್ಲಿಗೂ ಜನರು ಚದುರದಿದ್ದರೆ ಅವರ ಮಧ್ಯೆ ಗುಂಡು ತೂರುವಂತೆ ಆಜ್ಞೆಕೊಡಲಾಗುತ್ತದೆ. ಸೈನಿಕರು ಬಂದೂಕು ಚಲಾಯಿಸುತ್ತಾರೆ. ಸತ್ತ, ಗಾಯಗೊಂಡ ಜನ ರಸ್ತೆಯಲ್ಲೇ ಉರುಳುತ್ತಾರೆ. ಸಾಮಾನ್ಯವಾಗಿ ಉಳಿದವರು ದಿಗ್ಭ್ರಾಂತರಾಗಿ ಓಡಿಹೋಗುತ್ತಾರೆ. ಸೈನಿಕರು ಗವರ್ನರನ ಆಜ್ಞೆಯಂತೆ ಯಾರು ಯಾರು ಗುಂಪಿನ ಮುಖಂಡರೆಂದು ಆತ ಭಾವಿಸುತ್ತಾನೋ ಅವರನ್ನೆಲ್ಲ ಹಿಡಿದು ಎಳೆದುಕೊಂಡು ಹೋಗುತ್ತಾರೆ.

ಅನಂತರ ಅವರು ರಕ್ತದ ಮಡುಗಟ್ಟಿರುವ, ಸತ್ತ, ಸಾಯುತ್ತಿರುವ ಅಂಗಹೀನರಾದ ಗಾಯಾಳುಗಳಾದ ಎಲ್ಲರನ್ನೂ ಒಂದೆಡೆಗೆ ಎಳೆದುಹಾಕುತ್ತಾರೆ. ಈ ದೌರ್ಜನ್ಯಕ್ಕೆ ಗುರಿಯಾದವರಲ್ಲಿ ಹೆಂಗಸರೂ ಮಕ್ಕಳೂ ಇರುವುದುಂಟು. ಸತ್ತವರನ್ನು ಹೂಳಿ ಗಾಯಾಳುಗಳನ್ನು ಆಸ್ಪತ್ರೆಗೆ ದಾಖಲು ಮಾಡಲಾಗುತ್ತದೆ. ಮುಖಂಡರುಗಳೆಂದು ಭಾವಿಸಲಾದವರನ್ನು ಊರಿಗೆ ಮೆರವಣಿಗೆಯಲ್ಲಿ ಕರೆದೊಯ್ದು ಅಲ್ಲಿ ಒಂದು ವಿಶೇಷ ಮಿಲಿಟರಿ ಕೋರ್ಟಿನಲ್ಲಿ ವಿಚಾರಣೆಗೆ ಗುರಿಪಡಿಸಲಾಗುತ್ತದೆ. ಅವರು ಹಿಂಸಾಚಾರ ಮಾಡಿದರೆಂದು ಸಾಬೀತಾದರೆ ಅವರನ್ನು ನೇಣುಹಾಕಬೇಕೆಂದು ತೀರ್ಪುಕೊಡಲಾಗುತ್ತೆ. ಕೂಡಲೇ ಒಂದು ನೇಣುಗಂಬ ಸಿದ್ಧವಾಗುತ್ತದೆ. ನಿಸ್ಸಹಾಯಕರಾದ ಅನೇಕರು ಉರುಲಿಗೆ ಸಿಕ್ಕು ಸಾಯುತ್ತಾರೆ. ರಷ್ಯಾದಲ್ಲಿ ಅಥವಾ ಹಿಂಸೆಯಮೇಲೆ ಕಟ್ಟಿದ ಸಾಮಾಜಿಕ ವ್ಯವಸ್ಥೆಯುಳ್ಳ ಯಾವುದೇ ರಾಜ್ಯದಲ್ಲಿ ಇವೆಲ್ಲಾ ಸರ್ವೇಸಾಮಾನ್ಯವಾದ ಸಂಗತಿ. ಪ್ರತಿಭಟನೆಯನ್ನು ಜನರು ತೋರಿದಾಗ ಹೀಗೆ ನಡೆಯುತ್ತದೆ.

ಹಾಗಾಗದೆ ಜನರು ಶರಣುಬಂದರೆ ತುಂಬ ವಿಚಿತ್ರವಾದ, ರಷ್ಯಕ್ಕೇ ವಿಶಿಷ್ಟವಾದ ಘಟನೆ ಜರುಗುತ್ತದೆ. ಕಾರ್ಯಾಚರಣೆಯ ಸ್ಥಳದಲ್ಲಿ ಗವರ್ನರ್ ಕಾಣಿಸಿಕೊಳ್ಳುತ್ತಾನೆ. ಜನರ ಶಿಸ್ತುಗೇಡಿತನಕ್ಕಾಗಿ ಅವರನ್ನು ಬೈದು ಭಾಷಣ ಮಾಡುತ್ತಾನೆ. ಅನಂತರ ಹಳ್ಳಿಯ ಜನರ ಮನೆಗಳಲ್ಲಿ ತನ್ನ ಸೈನಿಕರು ಇರಲು ಬಿಡುತ್ತಾನೆ (ಇವರು ಅಲ್ಲಿ ತಿಂಗಳವರೆಗೆ ಉಳಿದು ಇವರನ್ನು ಸಾಕುವುದು ರೈತರಿಗೆ ತುಂಬ ಕಷ್ಟವಾಗುತ್ತದೆ). ಅಥವಾ ಬರಿಯ ಬೆದರಿಕೆಗಳನ್ನು ಹಾಕಿ ಸಮಾಧಾನಗೊಂಡು ಜನರನ್ನೆಲ್ಲ ಉದಾರವಾದ ಬುದ್ಧಿಯಿಂದ ಕ್ಷಮಿಸಿ ಹೊರಟುಬಿಡುತ್ತಾನೆ. ಅಥವಾ ಹೆಚ್ಚು ಚಾಲ್ತಿಯಲ್ಲಿರುವ ಪದ್ಧತಿಯಂತೆ ಗುಂಪಿನ ಮುಖಂಡರೆಲ್ಲ ಶಿಕ್ಷೆಗೆ ಒಳಗಾಗಲೇಬೇಕೆಂದು ಘೋಷಿಸುತ್ತಾನೆ. ಯಾವ ವಿಚಾರಣೆಯೂ ಇಲ್ಲದೆ ತನಗೆ ತೋಚಿದ ಹಾಗೆ ಕೆಲವರು ಮುಖಂಡರನ್ನು ಹಿಡಿತರಿಸಿ ತನ್ನ ಎದುರಿಗೆ ಅವರಿಗೆ ಛಡಿ ಏಟಿನ ಶಿಕ್ಷೆ ವಿಧಿಸುತ್ತಾನೆ.

ಇದೆಲ್ಲಾ ನಡೆಯುವ ಬಗೆ ಹೇಗೆಂಬುದಕ್ಕೆ ಮೇಲಾಧಿಕಾರಿಗಳ ಮಂಜೂರಾತಿಯನ್ನು ಪಡೆದ ಒಂದು ಘಟನೆ ಒರ್ಯೋಲ್‌ನಲ್ಲಿ ಹೇಗೆ ನಡೆಯಿತೆಂಬುದನ್ನು ವಿವರಿಸುತ್ತೇನೆ.

ಒರ್ಯೋಲಿನಲ್ಲಿ ನಡೆದದ್ದು ಇಷ್ಟು. ಇಲ್ಲಿ ಟೂಲ ಸಂಸ್ಥಾನದಲ್ಲಿ ನಡೆದಂತೆಯೇ ಒಬ್ಬ ಜಮೀನುದಾರ. ರೈತರ ಆಸ್ತಿ ಅವರ ಕೈಸೇರದಂತೆ ಮಾಡಬೇಕೆಂದು ಬಯಸಿದ.

ರೈತರೂ ಅಲ್ಲಿಯಂತೆಯೇ ಪ್ರತಿಭಟಿಸಿದರು. ಜಮೀನುದಾರನು ರೈತರ ಅನುಮತಿಯೇ ಇಲ್ಲದೆ ತನ್ನ ಬೀಸುಯಂತ್ರವಿದ್ದ ಕಾರಖಾನೆಯ ಕುಂಟೆಯ ನೀರಿನ ಮಟ್ಟವನ್ನು ರೈತರ ಜಮೀನುಗಳನ್ನು ಮುಳುಗಿಸುವಷ್ಟು ಎತ್ತರಕ್ಕೆ ಏರಿಸಬೇಕೆಂದು ಯೋಜಿಸಿದ. ರೈತರು ಪ್ರತಿಭಟಿಸಿದ್ದರಿಂದ ಜಮೀನುದಾರನು ಜಿಲ್ಲೆಯ ಪೋತಿಖಾನೆಯ ಭಕ್ಷಿಯ ಬಳಿಗೆ ದೂರು ಕೊಟ್ಟ. ಆತ ಅಕ್ರಮವಾಗಿ (ಮುಂದೆ ನ್ಯಾಯಾಲಯ ಹೀಗೆ ತೀರ್ಪುಕೊಟ್ಟಿತು.) ಜಮೀನುದಾರನ ಪರವಾಗಿ ತೀರ್ಪುಕೊಟ್ಟು ನೀರಿನ ಮಟ್ಟವನ್ನು ಹೆಚ್ಚಿಸಿಕೊಳ್ಳಲು ಅವನಿಗೆ ಅನುಮತಿ ಕೊಟ್ಟ. ಈ ಅಕ್ರಮವಾದ ತೀರ್ಪಿನ ಬಗ್ಗೆ ಜನ ರೊಚ್ಚಿಗೆದ್ದರು. ಜಮೀನುದಾರನು ನೀರು ಹರಿದು ಬರುತ್ತಿದ್ದ ಕಾಲುವೆಗೆ ಕಟ್ಟೆಹಾಕಲು ಜನರನ್ನು ಕಳಿಸಿದ. ಆಗ ರೈತರು ಈ ಕಾರ್ಯ ಜರುಗದಂತೆ ತಡೆಯಲು ತಮ್ಮ ಹೆಂಗಸರನ್ನು ಕಳಿಸಿದರು. ಹೆಂಗಸರು ಕಟ್ಟೆಯ ಬಳಿ ಹೋಗಿ ಕೆಲಸಗಾರರ ಗಾಡಿಗಳನ್ನೆಲ್ಲ ಉರುಳಿಸಿ ಅವರನ್ನೆಲ್ಲಾ ಓಡಿಸಿಬಿಟ್ಟರು. ಹೆಂಗಸರು ಮಾಡಿದ ಈ ಕೆಲಸದ ವಿರುದ್ಧ ಜಮೀನುದಾರ ಜಿಲ್ಲೆಯ ಪೋತಿಖಾನೆಯ ಭಕ್ಷಿಗೆ ದೂರುಕೊಟ್ಟ. ಆ ಭಕ್ಷಿ ಆ ಹಳ್ಳಿಯ ಪ್ರತಿಯೊಂದು ಮನೆಯಿಂದಲೂ ಒಬ್ಬೊಬ್ಬ ಹೆಂಗಸನ್ನು ಬಂಧಿಸುವ ಆಜ್ಞೆ ಹೊರಡಿಸಿದ. ಈ ಆಜ್ಞೆ ಪಾಲಿಸುವುದು ಕಷ್ಟದ ಕೆಲಸವಾಯಿತು. ಏಕೆಂದರೆ ಪ್ರತಿ ಹೊಲ ಮನೆಯಲ್ಲೂ ಅನೇಕ ಹೆಂಗಸರಿರುತ್ತಿದ್ದರು. ಅವರಲ್ಲಿ ಯಾರನ್ನು ಬಂಧಿಸಬೇಕೆಂಬುದು ಗೊಂದಲಕ್ಕೆ ಕಾರಣವಾಯಿತು. ಪೋಲೀಸರಿಗೆ ಏನೂ ತೋಚಲಿಲ್ಲ. ಅವರು ಸುಮ್ಮನಾದರು. ಆಗ ಪೋಲೀಸರ ನಿಷ್ಕ್ರಿಯತೆಯ ಬಗೆಗೆ ಜಮೀನುದಾರನು ಗವರ್ನರನಿಗೆ ದೂರುಕೊಟ್ಟ. ಸಂಗತಿಯೊಂದೂ ತಿಳಿಯದ ಗವರ್ನರನು ಕೂಡಲೇ ಜಿಲ್ಲೆಯ ಭಕ್ಷಿಯ ಆಜ್ಞೆಯನ್ನು ನೆರವೇರಿಸಲೇಬೇಕೆಂದು ಗ್ರಾಮ ಪೋಲೀಸ್ ಅಧಿಕಾರಿಗೆ ಕಡ್ಡಾಯವಾದ ಆಜ್ಞೆ ಹೊರಡಿಸಿದ. ಈ ಆಜ್ಞೆಯನ್ನು ಪಾಲಿಸುವುದಕ್ಕಾಗಿ ಗ್ರಾಮ ಪೋಲೀಸ್ ಅಧಿಕಾರಿ ತಾನೇ ಹಳ್ಳಿಗೆ ಹೋದ. ಯಾರ ಬಗೆಗೂ ಗೌರವ ತೋರದ ಇತರ ಎಲ್ಲ ರಷ್ಯನ್ ಅಧಿಕಾರಿಗಳಂತೆಯೇ ಆತ ಕೂಡ ಪ್ರತಿಯೊಂದು ಮನೆಯಿಂದಲೂ ಒಬ್ಬೊಬ್ಬ ಹೆಂಗಸನ್ನು ಹಿಡಿದು ತರುವಂತೆ ತನ್ನ ಜನಕ್ಕೆ ನೇಮಿಸಿದ. ಆದರೆ ಪ್ರತಿಯೊಂದು ಮನೆಯಲ್ಲೂ ಹೆಚ್ಚು ಜನ ಹೆಂಗಸರಿದ್ದುದರಿಂದ ಮತ್ತು ಯಾರನ್ನು ಬಂಧಿಸಬೇಕೆಂದು ಖಚಿತವಾಗಿ ತಿಳಿಯದಿದ್ದುದರಿಂದ ಘರ್ಷಣೆ, ಪ್ರತಿರೋಧ ಆರಂಭವಾಯಿತು. ಆದರೂ ಲೆಕ್ಕಿಸದೆ ಗ್ರಾಮ ಪೋಲೀಸ್ ಅಧಿಕಾರಿಯು ಪ್ರತಿಯೊಂದು ಮನೆಯಿಂದ ಯಾವುದೋ ಒಂದು ಹೆಂಗಸನ್ನು ತಂದು ಬಂಧನದಲ್ಲಿಡಬೇಕೆಂದು ಆಜ್ಞೆಮಾಡಿದ. ಆದರೆ ಜನ ತಮ್ಮ ಪತ್ನಿ. ತಾಯಿಯರನ್ನು ರಕ್ಷಿಸಿಕೊಳ್ಳುವ ಪ್ರಯತ್ನ ಮಾಡಿದರು. ಈ ಗಲಾಟೆಯಲ್ಲಿ ಗ್ರಾಮ ಪೋಲೀಸ್ ಮುಖ್ಯಾಧಿಕಾರಿಗೂ ಅವನ ಸಿಬ್ಬಂದಿಗೂ ಏಟುಗಳು ಬಿದ್ದುವು. ಇದು ಒಂದು ಹೊಸ ಭಯಂಕರ ಅಪರಾಧ; ಆಜ್ಞಾ ವಿರೋಧ. ಈ ಹೊಸ ಅಪರಾಧದ ವರದಿ ಪಟ್ಟಣಕ್ಕೆ ಹೋಯಿತು. ಆಗ ಗವರ್ನರನು ಘಟನೆ ನಡೆದ ಜಾಗಕ್ಕೆ ತಾನೇ ಖುದ್ದಾಗಿ ಬಂದ. ಒಂದು ಬೆಟಾಲಿಯನ್ ಸೈನಿಕರನ್ನು ಕರೆತಂದ. ಬಂದೂಕು,

ಛಡಿಗಳಿಂದ ಸನ್ನದ್ಧರಾಗಿ ಟೆಲಿಗ್ರಾಫ್. ದೂರವಾಣಿ ಮತ್ತು ರೈಲು ಪ್ರಯಾಣದ ಸೌಲಭ್ಯವನ್ನು ಹೊಂದಿದ ಸೇನೆ ಹೊರಟಿತು. ಅವರ ಜತೆಗೆ ಒಬ್ಬ ತಜ್ಞವೈದ್ಯನೂ ಇದ್ದ. ಛಡಿಶಿಕ್ಷೆಯ ಆರೋಗ್ಯ ತತ್ವಗಳನ್ನು ನೋಡಿಕೊಳ್ಳುವುದು ಆತನ ಕೆಲಸವಾಗಿತ್ತು. ಹೀಗೆ ಆಧುನಿಕ ಚೆಂಗೀಸ್‌ಖಾನನ ಸೇನೆ ಹೊರಟಿತು.

ಗ್ರಾಮ ಕಚೇರಿಯ ಬಳಿ ಸೈನಿಕರು. ಕೆಂಪು ಹುರಿಗೆ ರಿವಾಲ್ವರನ್ನು ತೂಗಬಿಟ್ಟಿದ್ದ ಪೋಲೀಸ್ ಸೈನಿಕರು. ಗ್ರಾಮಾಧಿಕಾರಿಗಳು ಮತ್ತು ಅಪಾದಿತರು ನಿಂತಿದ್ದರು. ಸುಮ್ಮ ಸಾವಿರದಷ್ಟು ಅಥವಾ ಅದಕ್ಕೂ ಹೆಚ್ಚಿನ ಸಂಖ್ಯೆಯ ಜನ ಸೇರಿದ್ದರು. ವಾಹನದಲ್ಲಿ ಧಾವಿಸಿದ ಗವರ್ನರ್. ವಾಹನದಿಂದ ಇಳಿದು ಒಂದು ಪರಿಚಯ ಭಾಷಣ ಮಾಡಿ ಅಪರಾಧಿಗಳನ್ನೂ ಒಂದು ಬೆಂಚನ್ನೂ ಹಾಜರುಪಡಿಸುವಂತೆ ಆಜ್ಞಾಪಿಸಿದ. ಬೆಂಚು ಏಕೆ ಎಂಬುದು ಮೊದಲು ಯಾರಿಗೂ ಗೊತ್ತಾಗಲಿಲ್ಲ. ಆಗ ಗವರ್ನರನ ಸಂಗಡವೇ ಸದಾ ಇದ್ದು ದೇಶದಲ್ಲಿ ಹಲವಾರು ಬಾರಿ ನಡೆಯುತ್ತಿದ್ದ ಇಂಥ ಹಿಂಸಾ ಕೃತ್ಯಗಳಿಗೆ ಸಿದ್ಧತೆ ನಡೆಸುವ ಜವಾಬ್ದಾರಿ ಹೊತ್ತಿದ್ದ ಕಾವಲು ಸೈನಿಕನೊಬ್ಬ ಮುಂದೆ ಬಂದು ಛಡಿ ಏಟಿನ ಶಿಕ್ಷೆವಿಧಿಸಲು ಬೆಂಚೊಂದು ಅಗತ್ಯವೆಂದು ವಿವರಿಸಿದ. ಒಂದು ಬೆಂಚನ್ನು ತರಲಾಯಿತು. ಛಡಿಗಳನ್ನೂ ಒದಗಿಸಲಾಯಿತು. ಥಳಿಸುವ ಜನರನ್ನೂ ಕರೆಯಲಾಯಿತು. ಸೈನಿಕರು ಅಂಥ ಹೊಡೆಯುವ ಕೆಲಸವನ್ನು ನಿರಾಕರಿಸಿದ್ದರಿಂದ ಆ ಊರಿನ ಕುದುರೆಗಳ್ಳರ ಪೈಕಿ ಕೆಲವರನ್ನು ಈ ಹೊಡೆತದ ಕೆಲಸಕ್ಕೆ ನೇಮಿಸಲಾಗಿತ್ತು.

ಎಲ್ಲ ಸಿದ್ಧವಾದ ಮೇಲೆ ಜಮೀನುದಾರನು ಅಲ್ಲಿ ನಿಲ್ಲಿಸಿದ್ದ 12 ಅಪರಾಧಿಗಳ ಪೈಕಿ ಯಾರನ್ನು ತುಂಬ ದಂಡನೀಯನೆಂದು ತೋರಿಸಿದನೋ. ಆ ಅಪರಾಧಿ ಮುಂದೆ ಬರಬೇಕೆಂದು ಸೇನಾ ಮುಖಂಡ ಆಜ್ಞೆಮಾಡಿದ. ಬಂದವನು ನಲವತ್ತು ವರ್ಷ ವಯಸ್ಸಿನ ಒಬ್ಬ ಸಂಸಾರಿ. ತನ್ನ ಜನಾಂಗದ ಹಕ್ಕುಗಳ ರಕ್ಷಣೆಗಾಗಿ ಸದಾ ವೀರನಂತೆ ಮುನ್ನುಗ್ಗುತ್ತಿದ್ದ ಅವರೆಲ್ಲರ ಪ್ರೀತ್ಯಾದರಗಳಿಗೆ ಪಾತ್ರನಾಗಿದ್ದ ವ್ಯಕ್ತಿ ಆತ. ಅವನ ಬಟ್ಟೆಯನ್ನು ಬಿಚ್ಚಿ ಬೆಂಚಿನ ಬಳಿಗೆ ಎಳೆದು ತಂದು ಅದರ ಮೇಲೆ ಮಲಗುವಂತೆ ತಿಳಿಸಲಾಯಿತು.

ದಯೆಗಾಗಿ ಯಾಚನೆ ಮಾಡಲು ಪ್ರಯತ್ನಿಸಿದ ಆತ ಅದು ವ್ಯರ್ಥವೆಂದು ತಿಳಿದು ತಾನಾಗಿ ಬೆಂಚಿನ ಮೇಲೆ ಮುಖವಡಿಯಾಗಿ ಮಲಗಿಬಿಟ್ಟ. ಇಬ್ಬರು ಕಾವಲು ಸೈನಿಕರು ಅವನನ್ನು ಹಿಡಿಯಲು ಮುಂದೆ ಬಂದರು. ಅಗತ್ಯಬಿದ್ದಲ್ಲಿ ಯಥೋಚಿತ ವೈದ್ಯಕೀಯ ನೆರವನ್ನು ನೀಡುವುದಕ್ಕಾಗಿ ಆ ವೈದ್ಯ ಮಹಾಶಯನು ಪಕ್ಕದಲ್ಲೇ ಸಿದ್ಧನಾಗಿ ನಿಂತು ಕೊಂಡಿದ್ದ. ತೊಗಲಪಟ್ಟಿಯ ಆ ಕುದುರೆಗಳ್ಳರು ಬಾರುಕೋಲನ್ನು ಬೀಸಿ ಹೊಡೆಯ ಲಾರಂಭಿಸಿದರು. ಆದರೆ ಆ ಬೆಂಚು ತುಂಬ ಸಣ್ಣದಾಗಿದ್ದುದರಿಂದ ಅವರ ಹಿಂಸೆಗೆ ಒಳಗಾದ ಆತನ ಹೊರಳಾಟವನ್ನು ತಡೆಯಲು ಕಷ್ಟವಾಯಿತು. ಆಗ ಗವರ್ನರ್

ಇನ್ನೊಂದು ಬೆಂಚು ತರುವಂತೆ ಆಜ್ಞೆಮಾಡಿ ಅವೆರಡರ ಮಧ್ಯೆ ಹಲಗೆಯನ್ನಿಡಿಸಲು ಸೂಚಿಸಿದ. ಕೆಲಸದ ಅಧಿಕಾರಿಗಳು ತಲೆಯವರೆಗೂ ಕೈಯೆತ್ತಿ 'ಆಗಲಿ ದಣಿ' ಎನ್ನುತ್ತ ಆಜ್ಞೆಪಾಲಿಸಲು ಧಾವಿಸುತ್ತಿದ್ದರು. ಈ ಮಧ್ಯೆ ಅರೆನಗ್ನನಾಗಿ ವಿಷಣ್ಣ ಮುಖದಿಂದ, ಆ ವ್ಯಕ್ತಿ ನೆಲದ ಕಡೆ ದೃಷ್ಟಿ ನೆಟ್ಟು ಮಲಗಿದ್ದ. ಅವನ ಹಲ್ಲು ಕಿರುಗುಟ್ಟುತ್ತಿದ್ದುವು. ಬತ್ತಲೆಗಾಲುಗಳು ನಡುಗುತ್ತಿದ್ದುವು. ಇನ್ನೊಂದು ಬೆಂಚು ಬಂತು. ಅವನನ್ನು ಮತ್ತೆ ಹೊಂದಿಸಿ ಮಲಗಿಸಲಾಯಿತು. ಕುದುರೆಗಳ್ಳರು ಮತ್ತೆ ಬಡಿಯಲಾರಂಭಿಸಿದರು. ಅವನ ಬೆನ್ನು, ಪೃಷ್ಠ, ತೊಡೆ ಮತ್ತು ಪಾರ್ಶ್ವಗಳೆಲ್ಲ ಗಾಯ–ಬಾಸುಂಡೆಗಳಿಂದ ತುಂಬಿಹೋದವು. ಒಂದೊಂದು ಹೊಡೆತಕ್ಕೂ ತಾಳಲಾರದೆ ಅತನ ಗಂಟಲಿನಿಂದ ದೀನ ಸ್ವರ ಹೊರಡುತ್ತಿತ್ತು. ಸೇರಿದ್ದ ಆ ಮನುಷ್ಯನ ಮತ್ತು ಇತರ ಅಪರಾಧಿಗಳ ಹೆಂಡತಿ, ತಾಯಿ, ಮಕ್ಕಳು ಮತ್ತು ಇತರರ ಗೋಳಾಟ ಚೀರಾಟ ಹೆಚ್ಚಾಯಿತು.

ಮದೋನ್ಮತ್ತನಾಗಿದ್ದ ಮತ್ತು ತಾನು ಆ ರೀತಿ ಮಾಡುತ್ತಿರುವುದೇ ಸರಿಯೆಂದು ಭಾವಿಸಿದ್ದ ಆ ಗವರ್ನರ್ ಹೊಡೆತಗಳನ್ನು ಎಣಿಸುತ್ತ, ಬೆರಳುಗಳನ್ನು ಮಡಿಸುತ್ತ ಒಂದೇ ಸಮನೆ ಸಿಗರೇಟುಗಳನ್ನು ಸೇದುತ್ತ ನಿಂತಿದ್ದ. ಕೆಲವರು ಅಧಿಕಾರಿಗಳು ಆ ಗವರ್ನರನ ಸಿಗರೇಟಿಗೆ ಬೆಂಕಿಯನ್ನು ಹಚ್ಚುವುದಕ್ಕೆಂದೇ ಆತುರ ಪಡುತ್ತಿದ್ದ ಹಾಗಿತ್ತು. ಐವತ್ತು ಹೊಡೆತಗಳಾದ ಮೇಲೆ ಆ ರೈತನ ನರಳಾಟ ಹೊರಳಾಟ ಸ್ತಬ್ಧವಾಯಿತು. ಆಗ ರಾಜಪರಿವಾರದಲ್ಲಿ ಸೇರಿ ಜಾರ್ ದೊರೆಯ ಮತ್ತು ತಂದೆನಾಡಿನ ಸೇವೆಗಾಗಿ ತನ್ನ ವೈಜ್ಞಾನಿಕ ಪ್ರತಿಭೆಯನ್ನು ಅರ್ಪಿಸಲು ಶಿಕ್ಷಣ ಪಡೆದಿದ್ದ ವೈದ್ಯ ಮಲಗಿದ್ದವನ ಬಳಿಗೆ ಹೋದ. ಅವನ ನಾಡಿ ಹಿಡಿದು ನೋಡಿದ. ಎದೆಯ ಬಡಿತಕ್ಕೆ ಕಿವಿಗೊಟ್ಟ. ಅಪರಾಧಿಗೆ ಜ್ಞಾನ ತಪ್ಪಿದೆ, ವಿಜ್ಞಾನದ ತಿಳುವಳಿಕೆಯಂತೆ, ಶಿಕ್ಷೆಯನ್ನು ಮುಂದುವರಿಸಿದರೆ ಜೀವಕ್ಕೆ ಅಪಾಯ ಕಾದಿದೆ ಎಂದು ಗವರ್ನರನಿಗೆ ಹೇಳಿದ. ಆದರೆ ಆ ನಿಸ್ಸಹಾಯಿ ಗವರ್ನರ್ ಈಗಾಗಲೇ ರಕ್ತದ ದೃಶ್ಯದಿಂದ ಪೂರ್ಣವಾಗಿ ಮತ್ತನಾಗಿದ್ದವನು ಹೊಡೆತಗಳನ್ನು ಮುಂದುವರಿಸಬೇಕೆಂದು ಆಜ್ಞೆಮಾಡಿದ. ಎಪ್ಪತ್ತರವರೆಗೂ ಪ್ರಹಾರ ಮುಂದುವರಿ–ಯಿತು. ಈ ಸಂಖ್ಯೆ ಆಗತ್ಯವೆಂದು ಗವರ್ನರನ ಭಾವನೆಯಾಗಿತ್ತು. ಎಪ್ಪತ್ತನೇ ಹೊಡೆತ ಬಿದ್ದಮೇಲೆ "ಸಾಕು", ಮುಂದಿನವನು ಬರಲಿ" ಎಂದು ಅಪ್ಪಣೆ ಮಾಡಿದ. ಹೊಡೆತ ತಿಂದು ಮೈ ಊದಿಸಿಕೊಂಡಿದ್ದ ಆ ಗಾಯಾಳುವನ್ನು ಪ್ರಜ್ಞೆತಪ್ಪಿರುವಂತೆಯೇ ಎಳೆದುಕೊಂಡು ಹೋಗಲಾಯಿತು. ಅವನ ಸ್ಥಾನಕ್ಕೆ ಮತ್ತೊಬ್ಬ ಬಂದ. ಜನರ ಆರ್ತನಾದ ನರಳಾಟ ಹೆಚ್ಚಾಯಿತು. ಆದರೆ ದೇಶದ ಪ್ರತಿನಿಧಿ ತನ್ನ ಹಿಂಸಾಚಾರವನ್ನು ಮುಂದುವರಿಸಿದ.

ಹನ್ನೆರಡು ಮಂದಿಯನ್ನು ಇದೇ ರೀತಿ ಶಿಕ್ಷಿಸಲಾಯಿತು. ಪ್ರತಿಯೊಬ್ಬನಿಗೂ ಎಪ್ಪತ್ತು ಹೊಡೆತ ಬಿದ್ದುವು. ಪ್ರತಿಯೊಬ್ಬನೂ ದಯಾಯಾಚನೆ ಮಾಡುತ್ತಿದ್ದ, ನರಳಿ ಚೀರಿಡುತ್ತಿದ್ದ. ಗುಂಪಿನ ಜನರ ಅಳು ಚೀರಾಟ ಇನ್ನೂ ಹೃದಯ ವಿದ್ರಾವಕವಾಗಿ

ಏರುತ್ತಿತ್ತು. ಜನರ ಮುಖ ಮಂಕಾಗುತ್ತಲೇ ಹೋಯಿತು. ಆದರೆ ಅವರ ಸುತ್ತ ಸೈನಿಕರು ಇದ್ದರು. ಗವರ್ನರ್ ಎಂಬ ಹೆಸರಿನ ಅರ್ಥಮದಿಸಿದ ಘೃಣಾಚಿತ್ತ ಪ್ರಾಣಿಯ ಮನಸ್ಸಿಗೆ ತೃಪ್ತಿಯಾಗುವವರೆಗೂ ಆ ಚಿತ್ರಹಿಂಸೆ ನಿಲ್ಲುವಂತಿರಲಿಲ್ಲ.

ಅಲ್ಲಿದ್ದ ಅಧಿಕಾರಿಗಳು, ಕೆಲಸಗಾರರು ಸೈನಿಕರು ಬರೇ ಅಲ್ಲಿದ್ದುದಷ್ಟೇ ಅಲ್ಲ. ತಮ್ಮ ಹಾಜರಿಯಿಂದ ರಾಜ್ಯದ ಕಾರ್ಯಾಚರಣೆಯಲ್ಲಿ ಪಾಲುಗೊಂಡಿದ್ದ ಅವರು, ಜನರ ಗುಂಪು ಈ ಹಿಂಸಾಚಾರಕ್ಕೆ ಅಡ್ಡಿ ಬರದಂತೆ ನೋಡಿಕೊಳ್ಳುವುದರಲ್ಲೂ ತೊಡಗಿದ್ದರು.

ಜನ ಶರಣಾಗತರಾಗಿರುವಾಗ, ಹಳ್ಳಿಯಲ್ಲೆಲ್ಲಾ ಸೈನಿಕರು ತುಂಬಿಕೊಂಡಿರುವಾಗ ಇಂಥ ಕ್ರೂರ ಹಿಂಸಾಚಾರದ ಅಗತ್ಯವೆಲ್ಲಿದೆ ಎಂದು ನಾನು ಒಬ್ಬ ಗವರ್ನರನನ್ನು ಕೇಳಿದೆ. ಆಗ ಆತ ರಾಜ್ಯಕಲೆಯ ಎಲ್ಲ ಕುಸಿರುಗಸುಬುಗಳನ್ನು ಚೆನ್ನಾಗಿ ಬಲ್ಲ ಅನುಭವಿಯಂತೆ ಮುಖವುಬ್ಬಿಸಿ ಉತ್ತರಕೊಟ್ಟ. ರೈತರನ್ನು ಇಂಥ ಕ್ರೂರ ಶಿಕ್ಷೆಗಳಿಗೆ ಒಳಪಡಿಸದಿದ್ದರೆ ಅವರು ರಾಜಶಾಸನವನ್ನು ಮತ್ತೆ ಧಿಕ್ಕರಿಸುತ್ತಾರೆ: ಕೆಲವರನ್ನು ಹಿಡಿದು ಉಗ್ರವಾಗಿ ಎಲ್ಲರೆದುರಿಗೆ ದಂಡಿಸಿಬಿಟ್ಟರೆ ರಾಜಶಾಸನಕ್ಕೆ ಸರ್ವತ್ರ ಭಯಮಿಶ್ರವಾದ ಗೌರವ ದೊರೆಯುತ್ತದೆ. ಇದು ತನಗೆ ಮನವರಿಕೆಯಾಗಿರುವ ವಿಚಾರ ಎಂದೆಲ್ಲ ಹೇಳಿದ.

ಅಂದರೆ ಈಗ ಟೂಲದ ಗವರ್ನರ್‌ಸಾಹೇಬನು ಅಧಿಕಾರಿಗಳನ್ನು, ಕೆಲಸಗಾರರನ್ನು ಮತ್ತು ಸೈನಿಕರನ್ನು ಕಟ್ಟಿಕೊಂಡು ಇಂಥದೇ ಒಂದು ಕಾರ್ಯವನ್ನು ನಡೆಸಲು ಹೊರಟ್ಟಿದ್ದ! ರಾಜಶಾಸನವನ್ನು – ಇದೇ ಬಗೆಯ ಕೊಲೆ ಹಿಂಸಾಚಾರಗಳಿಂದಲೇ ಜಾರಿಗೆ ತರಬೇಕಾಗಿತ್ತು. ಈಗಿನ ತೀರ್ಪು ಏನೆಂದರೆ ವರ್ಷಕ್ಕೆ ಲಕ್ಷ ರೂಬೆಲ್ ಆದಾಯವಿದ್ದ ಒಬ್ಬ ಜಮೀನುದಾರ, ಚಳಿ ಹಸಿವುಗಳಿಂದ ಸಾಯುತ್ತಿದ್ದ ಒಂದು ಜನವರ್ಗದ ತೋಟದಿಂದ ಕಸಿದುಕೊಂಡಿದ್ದ ಮರಮುಟ್ಟಿನ ಮೂಲಕ ತನ್ನ ಆದಾಯವನ್ನು ಇನ್ನೂ ಮೂರು ಸಾವಿರ ರೂಬೆಲ್‌ಗಳಿಗೆ ಏರಿಸಿಕೊಳ್ಳಲು ಅವಕಾಶ ಕೊಡತಕ್ಕದ್ದು. ಆ ಹಣವನ್ನೆಲ್ಲ ಆತ ಮಾಸ್ಕೋ ಪೀಟರ್ಸ್‌ಬರ್ಗ್ ಅಥವಾ ಪ್ಯಾರಿಸ್ಸಿನ ಪಾನಮಂದಿರಗಳಲ್ಲಿ ಎರಡುಮೂರು ವಾರಗಳಲ್ಲಿ ಮುಂದುಗಾರಿಕೆ ಮಾಡಿ ಕಳೆಯಬಹುದಾಗಿತ್ತು.

ನಾನು ನೋಡಿದ ಮಂದಿ ಹೊರಟಿದ್ದುದು ಆ ತೀರ್ಪನ್ನು ಕಾರ್ಯಗತಗೊಳಿಸುವುದಕ್ಕೆ.

ನಾನು ಎರಡು ವರ್ಷಕ್ಕಿಂತ ಹೆಚ್ಚುಕಾಲ ಇದೇ ಚಿಂತನೆಯಲ್ಲಿ ತೊಡಗಿದ್ದೆ. ಆದರೆ ವಿಧಿ ನನ್ನನ್ನು ಮೊದಲಬಾರಿಗೆ ಇಂಥ ಒಂದು ದೃಶ್ಯಕ್ಕೆ ಮುಖಾಮುಖಿಯಾಗಿಸಿದೆ. ಇದರಿಂದ ನಾನು ಬಹುಕಾಲದಿಂದ ತಾತ್ವಿಕವಾಗಿ ಯಾವ ಭಾವನೆ ತಳೆದಿದ್ದೆನೋ ಅದನ್ನು ಈ ದೃಶ್ಯ ಪ್ರಾಯೋಗಿಕವಾಗಿ ತೋರಿಸಿಕೊಟ್ಟಿದೆ ಅಷ್ಟೆ. ಅದೆಂದರೆ. ತುಂಬ ಅನುಕೂಲಕರವಾದ ದೊಡ್ಡ ಹುದ್ದೆಗಳಲ್ಲಿರುವ ಜನರು ನಮ್ಮ ಜೀವನ ವ್ಯವಸ್ಥೆಯಲ್ಲಿ

ಯಾವ ನ್ಯಾಯಶಾಸ್ತ್ರದ ತತ್ವದ ಮೇಲೆ ಬಲವಾಗಿ ನಿಂತಿದೆ ಎಂದು ಚಪ್ಪರಿಸಿ ಹೇಳುತ್ತಾರೋ ಅದು ಸುಳ್ಳು. ಅದು ಇನ್ನೂ ಸರಳವಾದ ತೀರ ಒರಟಾದ ತತ್ತ್ವದ ಮೇಲೆ ನಿಂತಿದೆ. ಆ ತತ್ವವೆಂದರೆ ಜನರ ಹಿಂಸೆ ಮತ್ತು ಕೊಲೆ.

ತುಂಬ ದೊಡ್ಡ ನಿಧಿಗಳನ್ನೂ ಜಮೀನುಗಳನ್ನೂ ಹೊಂದಿರುವ ಶ್ರೀಮಂತರು; ಅಥವಾ ಬದುಕಿನ ಆಗತ್ಯಗಳಿಂದ ವಂಚಿತರಾದ ಕಾರ್ಮಿಕ ವರ್ಗದವರಿಂದ ದೊಡ್ಡ ಮೊತ್ತಗಳನ್ನು ವಸೂಲು ಮಾಡುವವರು: ಮತ್ತು ಅಂಥ ಶ್ರೀಮಂತರನ್ನು ಸೇವಿಸಿಕೊಂಡು ವ್ಯಾಪಾರಿಗಳಂತೆ ಬದುಕುವ ವೈದ್ಯರು. ಕಲಾವಿದರು. ಕರಣಿಕರು. ವಿಜ್ಞಾನಿಗಳು. ಅಡುಗೆಯವರು, ಬರಹಗಾರರು. ರಾಜಭೃತ್ಯರು. ವಕೀಲರು – ಇವರೆಲ್ಲ ಒಂದು ರೀತಿಯಲ್ಲಿ ಯೋಚಿಸುತ್ತಾರೆ. ತಮಗೆ ಲಭ್ಯವಾಗಿರುವ ಪ್ರಯೋಜನಗಳೆಲ್ಲ ಹಿಂಸೆಯ ಪರಿಣಾಮ ದಿಂದ ಬಂದವಲ್ಲವೆಂದೂ ತುಂಬ ಮುಕ್ತವಾದ ಮತ್ತು ಉಚಿತವಾದ ಸೇವಾ ವಿನಿಮಯ ದಿಂದ ಬಂದವೆಂದೂ ಅವರು ಭಾವಿಸುತ್ತಾರೆ. ಈ ಜೇಸಗೆಯಲ್ಲಿ ಒರ್ಯೇಲಿನಲ್ಲಿ ನಡೆದ ಮತ್ತು ರಷ್ಯದ ಅನೇಕ ಭಾಗಗಳಲ್ಲಿ ನಡೆಯುವ. ಯೂರೋಪು ಅಮೆರಿಕಾಗಳಲ್ಲಿ ಕೂಡ ಅವ್ಯಾಹತವಾಗಿ ಇದೇ ಬಗೆಯಲ್ಲಿ ಸಾಗುವ ಹಿಂಸಾಚಾರದ ಮೂಲಕವಾಗಿ ಕೆಲವರು ಪಡೆಯುವ ಸೌಲಭ್ಯಕ್ಕೂ ತಮ್ಮ ಸೌಲಭ್ಯಕ್ಕೂ ಯಾವುದೇ ಬಗೆಯ ಸಂಬಂಧವೂ ಇಲ್ಲವೆಂದು ಅವರು ನಂಬುತ್ತಾರೆ. ತಮಗಿರುವ ಸೌಲಭ್ಯಗಳೆಲ್ಲಾ ಸಹಜವಾಗಿ ಬಂದಿವೆಯೆಂದೂ ಜನರಲ್ಲಿನ ಪರಸ್ಪರ ಒಪ್ಪಂದದ ಮೂಲಕ ಬಂದಿವೆಯೆಂದೂ ಅವರು ಹೇಳುತ್ತಾರೆ. ಅದೇ ರೀತಿ ಹಿಂಸಾಚಾರವೂ ತನ್ನಷ್ಟಕ್ಕೇ ಸಹಜವಾದುದೆಂದೂ ಅದು ಸಾಮಾನ್ಯವಾದ, ನ್ಯಾಯಸಂಬಂಧವಾದ ರಾಜಕೀಯ ಅಥವಾ ಆರ್ಥಿಕ ಸೂತ್ರಗಳ ಪರಿಣಾಮವಾಗಿ ಬಂದದ್ದೆಂದೂ ಅವರು ತಿಳಿದಿದ್ದಾರೆ. ಆದರೆ ರೈತರು ತೋಪಿನಲ್ಲಿ ಶಾವೇ ಮರಗಿಡಗಳನ್ನು ನೆಟ್ಟು ಬೆಳೆಸಿದ್ದರೂ, ಅವು ಅವರ ಬದುಕಿಗೆ ತುಂಬ ಅಗತ್ಯ ವಾಗಿದ್ದರೂ. ಆ ಮರಗಳ ಆರೈಕೆಯಲ್ಲಿ ಯಾವ ಪಾತ್ರವನ್ನೂ ವಹಿಸದ ಮತ್ತು ಅವುಗಳ ಅಗತ್ಯ ಅಷ್ಟಾಗಿ ಇಲ್ಲದ ಜಮೀನುದಾರನ ಕೈಗೆ ಅವುಗಳನ್ನು ಒಪ್ಪಿಸಿಕೊಡಬೇಕಾಗುತ್ತದೆ. ಹಾಗೆ ಕೊಡದಿದ್ದರೆ ಚಾವಟಿಯೇಟಿಗೆ ಅಥವಾ ಜೀವ ಒಪ್ಪಿಸುವುದಕ್ಕೆ ಸಿದ್ಧವಾಗ ಬೇಕಾಗುತ್ತದೆ ಎಂಬ ಅರಿವು ಮೇಲೆ ಹೇಳಿದ ವೈದ್ಯ ಕರಣಿಕಾದಿ ಜನರಿಗೆ ಬರುವುದೇ ಇಲ್ಲ. ತಾವು ಅನುಭವಿಸುತ್ತಿರುವ ಸೌಲಭ್ಯಗಳೇ ಈ ರೈತರ ಪಾಲಿಗಿಲ್ಲ ಎಂಬುದು ಅವರಿಗೆ ಅರ್ಥವಾಗುವುದಿಲ್ಲ.

ಆದರೆ ಇಷ್ಟು ನಿಜ. ಒರ್ಯೇಲಿನ ಕಾರ್ಖಾನೆ ಮಾಲಿಕನಿಗೆ ಹೇರಳ ಲಾಭವನ್ನು ಒದಗಿಸುತ್ತಿತ್ತು. ಅಲ್ಲದೆ ರೈತರು ನೆಟ್ಟು ಬೆಳೆಸಿದ ಮರಗಿಡಗಳು, ಹೊಡೆತ ಹಿಂಸೆ ಕೊಲೆ ಗಳನ್ನು ಮಾಡುವ ಅಥವಾ ಹಾಗೆ ಹೆದರಿಸುವ ಕ್ರಿಯೆಯ ಮೂಲಕವೇ ಆ ಜಮೀನು ದಾರನ ಸ್ವಂತ ಆಸ್ತಿಗೆ ಸೇರಿಹೋಯಿತು. ಇದೇ ರೀತಿಯಲ್ಲಿ ಬಡವರ ಅಗತ್ಯಗಳನ್ನು ವಂಚಿಸಿ ಶ್ರೀಮಂತ ವರ್ಗದವರು ಅನುಭವಿಸುವ ಅಪೂರ್ವವಾದ ಹಕ್ಕು ಸೌಲಭ್ಯಗಳೆಲ್ಲ

ಇದೇ ಸೂತ್ರದ ಮೇಲೆ ನಿಂತಿದೆ ಎಂಬುದನ್ನು ಮರೆಯಬಾರದು. ರೈತರಿಗೆ ತಮ್ಮ ಸಂಸಾರಗಳನ್ನು ನಿರ್ವಹಿಸಲು ಜಮೀನು ಬೇಕಿದೆ. ಸಾವಿರಾರು ಕುಟುಂಬಗಳನ್ನು ಸಾಕಬಲ್ಲಷ್ಟು ದೊಡ್ಡ ಜಮೀನು ಅವರ ಸುತ್ತಲೂ ಇದೆ. ಆದರೆ ಅದು ಒಬ್ಬನೇ ಒಬ್ಬ ಆಸ್ಟ್ರಿಯನ್, ರಷ್ಯನ್ ಅಥವಾ ಇಂಗ್ಲೀಷ್ ಜಮೀನುದಾರನ ಸುಪರ್ದಿನಲ್ಲಿದೆ. ಆತ ಅಲ್ಲಿ ತಾನೇ ಕೃಷಿಗೆ ತೊಡಗುವುದಿಲ್ಲ. ಇಂಥ ಒಂದು ಸಂದರ್ಭವನ್ನು ಇಟ್ಟುಕೊಳ್ಳೋಣ. ಅಥವಾ ಒಬ್ಬ ಶ್ರೀಮಂತ ವ್ಯಾಪಾರಿ. ರೈತರಿಗೆ ಹಣದ ಅಗತ್ಯವಿದ್ದಾಗ ಅವರ ಧಾನ್ಯಗಳನ್ನು ಕೊಂಡುಕೊಂಡು. ಜನ ಹಸಿವಿನಿಂದ ನರಳುತ್ತಿದ್ದರೂ ಆ ಧಾನ್ಯವನ್ನು ಸುಖವಾಗಿ ತನ್ನ ಕಣಜದಲ್ಲಿ ದಾಸ್ತಾನು ಮಾಡಿಕೊಂಡು ಮುಂದೆ ಅದೇ ರೈತರಿಗೆ ಒಂದಕ್ಕೆ ಮೂರರಷ್ಟು ಬೆಲೆಗೆ ಮಾರುತ್ತಾನೆ ಎನ್ನೋಣ. ಇವೂ ಅದೇ ತತ್ವದ ಮೇಲೆ ನಿಂತವು ಎನ್ನಬಹುದು. ಇನ್ನೂ ಕೆಲವಿವೆ. ಒಂದು ಗಡಿನಾಡಿನ ಆಚೆ ಸುಲಭ ಬೆಲೆಗೆ ಸಿಗುವ ಆಹಾರ ಪದಾರ್ಥಗಳನ್ನು ಕೊಳ್ಳಬೇಕಾದರೆ ಈ ಉತ್ಪಾದನೆಯಲ್ಲಿ ಯಾವುದೇ ರೀತಿಯಲ್ಲಿ ಭಾಗವಹಿಸದ ಜನರಿಗೆ ಸುಂಕದ ಹಣವನ್ನು ಕೊಡದಿದ್ದರೆ ಅವರು ಬಿಡುವುದಿಲ್ಲ: ಅಲ್ಲದೆ ಸರಕಾರವು ತನ್ನ ಅಧಿಕಾರಿಗಳಿಗಾಗಿ. ಸೇನೆಯ ನಿರ್ವಹಣೆಗಾಗಿ (ಈ ಸೇನೆ ತೆರಿಗೆ ಕೊಡುವ ಜನರನ್ನೇ ಆಹುತಿ ತೆಗೆದುಕೊಳ್ಳಲು ಸಿದ್ಧವಾಗಿರುತ್ತದೆ). ಜನ ತಮ್ಮ ಹಸುಗಳನ್ನು ಮಾರಿಯಾದರೂ ತೆರಿಗೆ ಪಾವತಿ ಮಾಡಬೇಕು ಎಂದು ಆಜ್ಞೆ ವಿಧಿಸುತ್ತದೆ. ಒರ್ಯೋಲಿನಲ್ಲಿ ಹೀಗೆ ನಡೆಯಿತು. ಈಗ ಟೂಲ ಸಂಸ್ಥಾನದಲ್ಲಿ ಹೀಗೆ ನಡೆದೀತು. ಎಲ್ಲೆಲ್ಲಿ ಸರಕಾರದ ವ್ಯವಸ್ಥೆ ರಚನೆಯಾಗಿದೆಯೋ ಎಲ್ಲಿ ಉಳ್ಳವರು ಇಲ್ಲದವರು ಎಂಬ ವರ್ಗಗಳಿವೆಯೋ ಅಲ್ಲೆಲ್ಲ ಜಗತ್ತಿನ ಯಾವುದೇ ಭಾಗದಲ್ಲಿ ಮತ್ತೆ. ಮತ್ತೆ ಹೀಗೆ ನಡೆಯುತ್ತಲೇ ಇರುತ್ತದೆ. ಯಾವುದೇ ಅಮೂರ್ತ ಹಕ್ಕುಗಳಿಂದ ಹೀಗಾಗಿದೆ ಎಂದು ಭಾವಿಸುವುದಕ್ಕೆ ಕಾರಣವಿಲ್ಲ.

ದಬ್ಬಾಳಿಕೆಯ ಎಲ್ಲ ಪ್ರಕರಣಗಳಲ್ಲೂ ಹಿಂಸಾಚಾರ ಕೊಲೆಗಳ ತಂತ್ರ ಬಳಕೆಯಾಗುವುದಿಲ್ಲವಾದುದರಿಂದ ಆಳುವ ವರ್ಗದ ವಿಶಿಷ್ಟ ಸೌಕರ್ಯಗಳನ್ನು ಅನುಭವಿಸುವ ಜನರು. ತಮ್ಮ ಹಕ್ಕುಗಳು ಯಾವುದೇ ಬಗೆಯ ಹಿಂಸಾಚಾರ ಕೊಲೆಗಳ ನೆಲೆಗಟ್ಟಿನಮೇಲೆ ನಿಂತಿಲ್ಲವೆಂದೂ ಬದಲಿಗೆ ಕೆಲವು ಗೂಢವಾದ ಸಾಮಾನ್ಯ ನಿಯಮಗಳ ಅಮೂರ್ತ ಹಕ್ಕುಗಳ ಮೇಲೆ ನಿಂತಿವೆಯೆಂದೂ ತಿಳಿದಿದ್ದಾರೆ. ಹಾಗೆಂದು ಇತರರಿಗೂ ತಿಳಿಸುತ್ತಾರೆ. ರೈತರು ತಾವು ಕಷ್ಟಪಟ್ಟು ಬೆಳೆದ ಬೆಳೆಯ ಹೆಚ್ಚಿನ ಪಾಲನ್ನು ಬಂಡವಾಳಗಾರನಿಗೆ ಅಥವಾ ಜಮೀನುದಾರನಿಗೆ ಕೊಡುವುದು ಏಕೆ? ಅಥವಾ ತಾವು ಕೊಡುವ ತೆರಿಗೆಯ ಹಣವನ್ನು ಸರಿಯಾಗಿ ವಿನಿಯೋಗಿಸುತ್ತಿಲ್ಲ ಎಂಬುದು ತಿಳಿದಿದ್ದರೂ ತೆರಿಗೆ ಕೊಡುವುದನ್ನು ನಿಲ್ಲಿಸದಿರುವುದು ಏಕೆ? ತಮಗೆ ತಿಳಿದಿರದ ಯಾವುದೋ ಅಮೂರ್ತ ಹಕ್ಕುಗಳನ್ನು ಗೌರವಿಸುವುದಕ್ಕಾಗಿ ಅವರು ಹೀಗೆ ಮಾಡುತ್ತಿಲ್ಲ. ಅವರೆ ಪ್ರತಿಭಟಿಸಿದರೆ ಹೊಡೆತ ತಿನ್ನಲು ಅಥವಾ ಸಾಯಲು ಸಿದ್ಧರಾಗಬೇಕಾದೀತೆಂಬುದು ಅವರಿಗೆ ಚೆನ್ನಾಗಿ ಗೊತ್ತು.

ಆದರೆ ಜಮೀನುದಾರರು ಗೇಣಿ ವಸೂಲು ಮಾಡುವಾಗ, ಅಥವಾ ಧಾನ್ಯದ ಅವಶ್ಯಕತೆ ಇದ್ದವನು ಶೋಷಕ ವ್ಯಾಪಾರಿಗೆ ಮೂರರಷ್ಟು ಬೆಲೆ ತೆರುವಾಗ, ಅಥವಾ ಕಾರ್ಖಾನೆಯ ಕೆಲಸಗಾರ ತನ್ನ ಸಾಹುಕಾರ ಪಡೆಯುವ ಹಣದಲ್ಲಿ ತುಂಬ ಕಡಿಮೆ ಪಾಲಿಗೆ ಒಪ್ಪಿ ಸಹಿಸಿಕೊಳ್ಳುವಾಗ ಅಥವಾ ಒಬ್ಬ ಬಡವ ತೆರಿಗೆ ಶುಲ್ಕಾದಿಗಳಿಗಾಗಿ ತನ್ನಲ್ಲಿ ಅಳಿದುಳಿದುದನ್ನೆಲ್ಲ ಕೊಟ್ಟುಬಿಡುವಾಗ – ಇಂಥಲ್ಲೆಲ್ಲ ಬಂಧಿಸುವ, ಹೊಡೆಯುವ ಅಥವಾ ಕೊಲ್ಲುವ ಅಗತ್ಯ ಬೀಳುವುದಿಲ್ಲ ನಿಜ. ಇದಕ್ಕೆ ಕಾರಣ ಗೊತ್ತೇ? ಇದನ್ನು ಪ್ರತಿಭಟಿಸಲು ಯತ್ನಿಸಿದ ಎಷ್ಟೋ ಜನ ಹೊಡೆತ ತಿಂದಿದ್ದಾರೆ, ಬಂಧನಕ್ಕೆ ಒಳಗಾಗಿದ್ದಾರೆ, ಪ್ರಾಣವನ್ನೂ ಅರ್ಪಿಸಿದ್ದಾರೆ. ಈ ಸಂಗತಿ ಎಲ್ಲರಿಗೂ ಚೆನ್ನಾಗಿ ನೆನಪಿನಲ್ಲಿ ಉಳಿದಿರುತ್ತದೆ.

ಪಂಜರದಲ್ಲಿರುವ ಹುಲಿ ತನ್ನ ಮುಂದೆ ಹಿಡಿದ ಮಾಂಸವನ್ನು ತಿನ್ನುವುದಿಲ್ಲ, ಅಪ್ಪಣೆಯಾದ ಕೂಡಲೆ ಒಂದು ಕೋಲಿನ ಮೇಲೆ ಹಾರುತ್ತದೆ. ಇದಕ್ಕೆ ಕಾರಣ ಆ ಹುಲಿಗೆ ಅದು ಇಷ್ಟ ಎಂದಲ್ಲ. ಆದರೆ ಪ್ರತಿಭಟಿಸಿದಾಗೆಲ್ಲ ಸಿಗುತ್ತಿದ್ದ ಕಾದ ಕೆಂಪು ಸಲಾಕೆಯ ಶಿಕ್ಷೆ ಅಥವಾ ಉಪವಾಸ ನರಳಬೇಕಾಗಿ ಬಂದ ಶಿಕ್ಷೆಗಳ ನೆನಪು ಅದನ್ನು ಕಾಡುತ್ತಿರುತ್ತದೆ. ಅದೇ ರೀತಿಯಲ್ಲಿ ಜನರು ತಮಗೆ ತುಂಬ ಅನಾನುಕೂಲ ಎನ್ನಿಸಿದರೂ, ತಮ್ಮ ಬುಡಕ್ಕೇ ಬರುವಂಥಾದ್ದು, ತುಂಬ ಅನ್ಯಾಯವಾದದ್ದು ಎಂದು ತಿಳಿದಿದ್ದರೂ, ಪ್ರತಿಭಟಿಸಿದಾಗೆಲ್ಲ ಏನು ಅನಾಹುತವಾಗಿದೆಯೆಂಬುದನ್ನು ಬಲ್ಲವರಾದುದರಿಂದ ತಲೆಬಾಗುತ್ತಾರೆ. ಆದರೆ ಹಿಂದೆ ಹಿಂಸಾಚಾರ ನಡೆಸಿದ್ದರ ಪರಿಣಾಮವಾಗಿ ಕೆಲವು ಲಾಭಗಳನ್ನು ಪಡೆದುಕೊಂಡ ಜನ ಆ ಸೌಲಭ್ಯಗಳು ಹೇಗೆ ಬಂದವೆಂಬುದನ್ನು ಪ್ರತಿಸಾರಿಯೂ ಸುಲಭವಾಗಿ ಮರೆತುಬಿಡುತ್ತಾರೆ. ಆದರೂ ನಾವು ಚರಿತ್ರೆಯ ವಿಷಯ ಯೋಚಿಸಬೇಕು. ಚರಿತ್ರೆ ಎಂದರೆ ಬೇರೆ ಬೇರೆ ರಾಜಶಾಹಿಗಳ, ರಾಜರ ವಿಜಯಗಳ ಚರಿತ್ರೆಯನ್ನಲ್ಲ, ನಿಜವಾದ ಚರಿತ್ರೆ. ಅಂದರೆ ಒಂದು ಸಣ್ಣ ಅಲ್ಪಮತೀಯರ ಗುಂಪು ಬಹುಮತೀಯರ ಮೇಲೆ ಹೇಗೆ ಕ್ರೂರ ದಬ್ಬಾಳಿಕೆ ನಡೆಸಿದೆ ಎಂಬುದರ ಇತಿಹಾಸ. ಇದರಿಂದ ಮಥಿತವಾಗುವ ಸತ್ಯ ಇಷ್ಟು: ಶ್ರೀಮಂತರು ಬಡವರ ಮೇಲೆ ಹಕ್ಕುಗಳನ್ನು ಸ್ಥಾಪಿಸಿಕೊಂಡಿರುವುದು ಬಡಿಗೆ, ಸೆರೆಮನೆ, ಅಪರಾಧ ನಿರ್ಣಯ, ಕೊಲೆ ಮುಂತಾದುವುಗಳ ಮೂಲಕವೇ.[1]

ಲೌಕಿಕ ಪ್ರಗತಿ ನಮ್ಮೆಲ್ಲರ ಆದರ್ಶ. ಅದಕ್ಕಾಗಿಯೇ ನಾವೆಲ್ಲ ಕೊನೆಯಿಲ್ಲದ ಅವ್ಯಾಹತ ಹೋರಾಟ ನಡೆಸುತ್ತಿದ್ದೇವೆ. ಈ ಕ್ರಮಗಳನ್ನು ನೋಡಿದರೆ ಉಳ್ಳವರ ವರ್ಗ ದಲಿತವರ್ಗದ ಮೇಲೆ ಸ್ಥಾಪಿಸಿರುವ ಪ್ರಭುತ್ವವನ್ನು ಹಿಂಸಾಚಾರದಿಂದಲ್ಲದೆ

---

[1] ಟಾಲ್‌ಸ್ಟಾಯ್ ಎಷ್ಟು ಪ್ರಭಾವಪೂರ್ಣವಾಗಿ ಉಲ್ಲೇಖಗಳನ್ನು ಬಳಸಿದ್ದಾನೆಯೋ ಅಷ್ಟೇ ಚೆನ್ನಾಗಿ ಸೋವಿಯೆತ್ ರಷ್ಯಾ ಮತ್ತು ಜರ್ಮನಿಗಳಲ್ಲಿ ಇಂದು ಆಳುವವರು ಪ್ರಜೆಗಳ ಬಗೆಗೆ ನಡೆದುಕೊಳ್ಳುವ ಉಲ್ಲೇಖಗಳ ಹಿನ್ನೆಲೆಯಲ್ಲಿ ಈ ಆಪಾದನೆಯನ್ನು ವಿವರಿಸಬಹುದು.

ಬೇರೆ ಯಾವ ರೀತಿಯಲ್ಲೂ ಉಳಿಸಿಕೊಳ್ಳಲು ಸಾಧ್ಯವಿಲ್ಲವೆಂಬ ಸಂಗತಿ ಮನವರಿಕೆ ಯಾಗದಿರುವುದಿಲ್ಲ.

ದಬ್ಬಾಳಿಕೆ, ಹೊಡೆತ, ಬಂಧನ ಮತ್ತು ಶಿಕ್ಷಾಕ್ರಮಗಳನ್ನು ವಿಧಿಸದೆ ಶ್ರೀಮಂತ ವರ್ಗದ ಸೌಲಭ್ಯಗಳನ್ನು ಪಡೆದಿರುವ ಪ್ರಸಂಗಗಳು ಇಲ್ಲವೇ ಇಲ್ಲ ಎಂದಲ್ಲ. ಅವು ತುಂಬ ಅಪರೂಪ ಅಷ್ಟೆ. ಆದರೆ ಧೈರ್ಯವಾಗಿ ಇಷ್ಟು ಹೇಳಬಹುದು. ಎಲ್ಲೆಲ್ಲಿ ಪ್ರತಿ ಒಬ್ಬ ಸುಖಜೀವನ ನಡೆಸುತ್ತಿರುವ ಶ್ರೀಮಂತನಿರುತ್ತಾನೋ ಅಲ್ಲಿ ದುಡಿದು ದುಡಿದು ಜೀರ್ಣರಾದ ಅಸೂಯಾಪರರಾದ, ದುರಾಶಾಪೀಡಿತರಾದ, ಇಡೀ ಸಂಸಾರವೇ ಘೋರ ಸಂಕಟದಲ್ಲಿ ನರಳುತ್ತಿರುವ ಹತ್ತುಮಂದಿಯಾದರೂ ಇರುತ್ತಾರೆ. ಇಂಥ ನಮ್ಮ ಸಮಾಜದಲ್ಲಿ ಶ್ರೀಮಂತರ ಎಲ್ಲ ಸೌಲಭ್ಯಗಳೂ, ಅವರ ಎಲ್ಲ ವೈಭವ ದುಂದುಗಾರಿಕೆ ಗಳೂ, ಸಾಮಾನ್ಯ ಕಾರ್ಮಿಕನ ಅಳವಿಗೆ ಮೀರಿದ ಎಲ್ಲ ಅನುಕೂಲಗಳೂ ಅವರಿಗೆ ಪ್ರಾಪ್ತವಾಗಿರುವುದು ಮತ್ತು ಇನ್ನೂ ಉಳಿದುಕೊಂಡು ಬಂದಿರುವುದು ಹಿಂಸಾಚಾರ, ಬಂಧನ ಮತ್ತು ಶಿಕ್ಷಾಕ್ರಮಗಳಿಂದಲೇ.

ಸೆಪ್ಟೆಂಬರ್ ಒಂಬತ್ತರಂದು ಶ್ರೀಮಂತ ಜಮೀನುದಾರನಿಗೆ ಅಷ್ಟಾಗಿ ಬೇಕಿಲ್ಲದಿದ್ದ ತೋಪನ್ನು ಅದರ ಅಗತ್ಯ ತುಂಬ ಇದ್ದ ಹಸಿದ ಕೆಲಸಗಾರರಿಂದ ಅವನು ಕಿತ್ತುಕೊಂಡಿದ್ದನ್ನು ಮಾನ್ಯಮಾಡುವುದಕ್ಕಾಗಿ, ಬಂದೂಕು ಮದ್ದುಗುಂಡುಗಳಿಂದ ಸನ್ನದ್ಧರಾಗಿ ಹೊರಟಿದ್ದ ಸೈನಿಕರ ವಿಶೇಷ ರೈಲನ್ನು ನಾನು ನೋಡಿದ್ದು ಒಂದು ಸಂಗತಿಯನ್ನು ಸ್ಪಷ್ಟಪಡಿಸಿತು. ಜನ ತಮಗೇ ಅರಿವಿಲ್ಲದಂತೆ ತಮ್ಮ ನಂಬಿಕೆಗಳಿಗೆ ವಿರೋಧವಾದ ಕೆಲಸಗಳನ್ನು ಮಾಡುವ ಕಾರ್ಯದಲ್ಲಿ ಯಾವ ಮಟ್ಟವನ್ನು ಮುಟ್ಟಿದ್ದಾರೆಂಬುದನ್ನು ಅದು ಖಚಿತವಾಗಿ ತೋರಿಸಿಕೊಟ್ಟಿತು.

ಆ ವಿಶೇಷ ರೈಲಿನಲ್ಲಿ ಗವರ್ನರ್, ಅಧಿಕಾರಿಗಳು ಮತ್ತು ಕರಣಿಕರಿಗಾಗಿ ಒಂದು ಪ್ರಥಮ ದರ್ಜೆಯ ಬೋಗಿ ಇತ್ತು. ಅನೇಕ ಲಗೇಜ್ ವ್ಯಾನುಗಳಲ್ಲಿ ಸೈನಿಕರು ತುಂಬಿಕೊಂಡಿದ್ದರು.

ಅಚ್ಚುಕಟ್ಟಾಗಿ ಸಮವಸ್ತ್ರ ಧರಿಸಿದ್ದ ಈ ಚುರುಕಿನ ತರುಣ ಸೈನಿಕರು ಗುಂಪುಗುಂಪಾಗಿ ನಿಂತಿದ್ದರು. ಕೆಲವರು ಟ್ರಕ್ಕಿನ ತೆರೆದ ಬಾಗಿಲ ಬಳಿ ಕಾಲಾಡಿಸುತ್ತ ಕುಳಿತಿದ್ದರು. ಕೆಲವರು ಸಿಗರೇಟು ಸೇದುತ್ತಿದ್ದರು. ಉಳಿದವರು ಅವರಿವರನ್ನು ತಿವಿಯುತ್ತ, ಲೇವಡಿ ಮಾಡುತ್ತಾ ಕಿರುಚುತ್ತಾ, ನಗುತ್ತ ಕುಳಿತಿದ್ದರು. ಇನ್ನು ಕೆಲವರು ಹೂವಿನ ಪಟಲವನ್ನು ಬಿಡಿಸುತ್ತ ಅದರ ಬೀಜಗಳನ್ನು ಸಿಡಿಸುತ್ತಿದ್ದರು. ಕೆಲವರು ದಾಹ ಶಮನಕ್ಕಾಗಿ ನೀರ ನೆಲೆಯನ್ನು ಹುಡುಕಿಕೊಂಡು ಪ್ಲಾಟ್‌ಫಾರ್ಮಿನ ಉದ್ದಕ್ಕೂ ಹೊರಟವರು. ಅಧಿಕಾರಿಯೊಬ್ಬನನ್ನು ಕಂಡ ಕೂಡಲೇ ತಮ್ಮ ನಡಿಗೆಯನ್ನು ಮಂದಗೊಳಿಸಿ ತಾವೇನೋ ಬಹಳ ಸಕಾರಣವಾಗಿ ರುವ ಬಹಳ ಮುಖ್ಯವಾಗಿರುವ ಕೆಲಸವನ್ನೇ ಮಾಡುತ್ತಿರುವವರ ಹಾಗೆ ಗಂಭೀರವಾದ

ಮುಖಮಾಡಿಕೊಂಡು ಕೈಗಳನ್ನು ಹಣೆಯವರೆಗೂ ಎತ್ತಿ ಸೆಲ್ಯೂಟ್ ಮಾಡುವ ಮೂರ್ಖಭಂಗಿಯನ್ನು ಪ್ರದರ್ಶಿಸುತ್ತಿದ್ದರು. ಅಧಿಕಾರಿ ಮರೆಯಾಗುವವರೆಗೂ ಅವನ ಮೇಲೆ ಕಣ್ಣಿಟ್ಟು ಆಮೇಲೆ ಇನ್ನಷ್ಟು ಖುಷಿಯಿಂದ ಪ್ಲಾಟ್‌ಫಾರ್ಮಿನ ಹಲಗೆಗಳ ಮೇಲೆ ದೊಪ್ಪನೆ ಕುಣಿಯುತ್ತ. ನಗುತ್ತ. ಜೋರಾಗಿ ಹರಟುತ್ತ. ಗೆಳೆಯರ ಜೊತೆ ಊರಿಂದೂರಿಗೆ ಪ್ರಯಾಣಮಾಡುತ್ತಿರುವ ಸುಮನಸ್ಕ. ಆರೋಗ್ಯವಂತ ತರುಣರ ಹಾಗೆ ಭಾವಿಸುತ್ತಿದ್ದರು.

ಅವರು ಹೊರಟಿದ್ದುದು ಹಸಿದ ತಂದೆ ಅಜ್ಜಂದಿರನ್ನು ಕೊಲ್ಲುವುದಕ್ಕಾಗಿ. ಅವರ ತೀರ ಸಾಮಾನ್ಯವಾದ ವ್ಯವಹಾರಕ್ಕಾಗಿ ಅಥವಾ ಒಂದು ಸಂತೋಷದ ಕಾರ್ಯಕ್ಕಾಗಿ ಹೊರಟವರಂತೆ ಉತ್ಸಾಹದಿಂದ ಕೂಡಿದ್ದರು.

ಪ್ಲಾಟ್ ಫಾರ್ಮಿನ ಸುತ್ತ ಮುತ್ತ ಪ್ರಥಮ ವರ್ಗದ ಉಪಾಹಾರ ಮಂದಿರದ ಸುತ್ತ ಚೆದರಿದ್ದ ಚಾಲಾಕಿನ ಅಧಿಕಾರಿಗಳ ವರ್ಗವೂ ಇದೇ ಬಗೆಯಲ್ಲಿತ್ತು. ಬಾಟಲಿಗಳನ್ನು ಹರಡಿಕೊಂಡ ಟೇಬಲ್ಲಿನ ಮುಂದೆ ದಂಡಯಾತ್ರೆಯ ಮುಖ್ಯಾಧಿಕಾರಿಯಾದ ಗವರ್ನರ್ ಅರೆಸಮವಸ್ತ್ರದಲ್ಲಿ. ಸಮಾಧಾನದಿಂದ ತಿನ್ನುತ್ತ ತನ್ನ ಪರಿಚಿತನೊಬ್ಬನ ಜತೆ ಹವಾಮಾನದ ವಿಚಾರವಾಗಿ ಹರಟುತ್ತ ಕುಳಿತಿದ್ದ. ತನ್ನ ಪ್ರಯಾಣದ ಉದ್ದೇಶ ತುಂಬ ಸಾಮಾನ್ಯವಾದದ್ದು. ಸರಳವಾದದ್ದು ಎಂಬ ಹಾಗೆ. ಅದು ತನ್ನ ಸಮಾಧಾನದ ಚಿತ್ತವೃತ್ತಿಯನ್ನು ಕವಲಿಸಲಾರದು ಎಂಬ ಹಾಗೆ. ಬದಲಾದ ಹವೆಯ ವಿಚಾರವಾದ ಅವನ ಆಸಕ್ತಿಯನ್ನು ಅದು ಅಡ್ಡಿಪಡಿಸಲಾರದು ಎಂಬ ಹಾಗೆ ಆತ ಆರಾಮವಾಗಿ ಕುಳಿತಿದ್ದ.

ಟೇಬಲ್‌ಗೆ ಸ್ವಲ್ಪದೂರದಲ್ಲಿ ಏನನ್ನೂ ತಿನ್ನದೆ ಪೋಲೀಸು ಸೈನಿಕರ ಮುಖಂಡ ಕುಳಿತಿದ್ದ. ಅಳ ತಿಳಿಯಲಾಗದ ಆತನ ಮುಖದಲ್ಲಿ ಮುಂದೆ ನಡೆಯಬೇಕಾಗಿರುವ ರೂಢಿಯ ಕಾರ್ಯಾಚರಣೆಯ ಬೇಸರದಿಂದ ಬಳಲಿದವನ ಮುಖಚರ್ಯೆಯಿತ್ತು.

ಸುತ್ತಮುತ್ತಲೂ, ಸುಂದರವಾದ ಚಿನ್ನದ ಸರಿಗೆಗಳ ಸಮವಸ್ತ್ರ ಧರಿಸಿದ್ದ ಅಧಿಕಾರಿಗಳು ಹರಟುತ್ತ ಓಡಾಡುತ್ತಿದ್ದರು. ಒಬ್ಬ ಟೇಬಲ್ ಮುಂದೆ ಕುಳಿತು ಒಂದು ಬಾಟಲ್ ಬೀರ್‌ಮುಗಿಸುತ್ತಿದ್ದ. ಇನ್ನೊಬ್ಬ ಭಕ್ಷ್ಯದ ಕಟಕಟೆಯ ಮುಂದೆ ನಿಂತು ತಿಂಡಿ ತಿನ್ನುತ್ತ ತನ್ನ ಸಮವಸ್ತ್ರದ ಮೇಲೆ ಬಿದ್ದ ತುಣುಕುಗಳನ್ನು ಸವರಿಕೊಳ್ಳುತ್ತ ತುಂಬ ಆತ್ಮವಿಶ್ವಾಸದಿಂದ ಒಂದು ನಾಣ್ಯವನ್ನು ಚಿಮ್ಮಿದ. ಇನ್ನೊಬ್ಬ ನಿಧಾನವಾಗಿ ಕಾಲೆಳೆಯುತ್ತ ನಮ್ಮ ಗಾಡಿಯ ಮುಂದೆ ಸಾಗಿ ಹೆಂಗಸರ ಕಡೆ ಕಣ್ಣಾಡಿಸುತ್ತ ಅಡ್ಡಾಡುತ್ತಿದ್ದ.

ಯಾವ ಜನರ ತೆರಿಗೆಗಳಿಂದ ಇವರೆಲ್ಲರ ನಿರ್ವಹಣೆ ಸಾಗಿತ್ತೋ. ಅಂಥ ನಿಸ್ಸಹಾಯಕ ಹಸಿದ ಜನರ ಕೊಲೆ ಅಥವಾ ಹಿಂಸೆಗಾಗಿ ಹೊರಟಿದ್ದ ಈ ಜನ ತಮ್ಮ ಕರ್ತವ್ಯವನ್ನು ತಾವು ಮಾಡುತ್ತಿದ್ದೇವೆಂಬ ದೃಢ ವಿಶ್ವಾಸದಿಂದ ಹೊರಟವರಂತೆ ಕಂಡರು. ಅಷ್ಟೇ ಏಕೆ ಆ ಬಗೆಗೆ ಅವರು ತುಂಬ ಹೆಮ್ಮೆ ಪಟ್ಟುಕೊಂಡವರಂತೆ ಕೊಚ್ಚಿಕೊಳ್ಳುತ್ತಿದ್ದರು.

ಇದು ಹೇಗೆ?

ಒಬ್ಬ ಶ್ರೀಮಂತ ಯುವಕ. ಹಸಿವಿನಿಂದ ಕಂಗಾಲಾಗಿರುವ ರೈತವರ್ಗದಿಂದ ಮೂರು ಸಾವಿರ ರೂಬೆಲ್‌ಗಳನ್ನು ಪಡೆಯುವುದನ್ನು ಸ್ವೀಕರಿಸುವುದಕ್ಕಾಗಿ ಹೊರಟಿದ್ದ ಈ ವಿಶೇಷ ರೈಲಿನ ಜನ ಅಲ್ಲಿಗೆ ತಲುಪಲು ಇನ್ನು ಅರ್ಧಗಂಟೆಯ ಪ್ರಯಾಣ ಸಾಕಾಗಿತ್ತು. ಅಲ್ಲಿ ಒರ್ಯೇಲಿನಲ್ಲಿ ನಡೆದಂತೆಯೇ ಊಹೆಗೆ ಮೀರಿದ ದೌರ್ಜನ್ಯಗಳಲ್ಲಿ ತೊಡಗುವ ಮುಗ್ಧ ಜನರ ಕೊಲೆ. ಹಿಂಸೆಗಳಲ್ಲಿ ತೊಡಗುವ ಸಿದ್ಧತೆ ನಡೆಸಿದ್ದರು. ಈ ಕಾರ್ಯ ನಡೆಯಬೇಕಾದ ಜಾಗ ಹತ್ತಿರ ಬಂದಂತೆಲ್ಲ ಕಾಲ ಹತ್ತಿರ ಬಂದಂತೆಲ್ಲ ಅವರು ಮೊದಲಿನಂತೆಯೇ ಶಾಂತರಾಗಿಯೇ ಇದ್ದರು.

ಈ ಎಲ್ಲ ಜನ. ಅಧಿಕಾರಿಗಳು. ಸೈನಿಕರು ಮೊದಲಾದ ಎಲ್ಲ ಜನ. ತಾವು ಏಕೆ ಹೊರಟಿದ್ದೇವೆಂಬುದನ್ನಾಗಲೀ ಮುಂದೆ ಏನು ಕಾದಿದೆಯೆಂಬುದನ್ನಾಗಲೀ ತಿಳಿದಿರಲಿಲ್ಲ ಎನ್ನುವುದು ಅಸಾಧ್ಯ. ಏಕೆಂದರೆ ಅವರು ಅದಕ್ಕೆಲ್ಲ ಸಿದ್ಧರಾಗಿಯೇ ಬಂದಿದ್ದಾರೆ. ಗವರ್ನರ್ ಮೊದಲೇ ಎಲ್ಲ ಸೂಚನೆಗಳನ್ನೂ ಕೊಟ್ಟಿರಬೇಕು. ಸಿಬ್ಬಂದಿಯವರು ಬಾರುಕೋಲುಗಳನ್ನು ಮಾರುಕಟ್ಟೆಯಲ್ಲಿ ಚೌಕಾಶಿಮಾಡಿ ಕೊಂಡುಕೊಂಡಿರಬೇಕು ಮತ್ತು ಅದನ್ನೆಲ್ಲ ಲೆಕ್ಕದ ಖಾತೆಯಲ್ಲಿ ನಮೂದಿಸಿರಲೂ ಬೇಕು. ಮದ್ದುಗುಂಡು. ತೋಟಾಗಳ ವಿಚಾರವಾಗಿ ಅಧಿಕಾರಿಗಳು ಆಜ್ಞೆಯನ್ನು ಸ್ವೀಕರಿಸಿರಬೇಕು ಪ್ರಸಿದ್ಧಿಪಡಿಸಿರಬೇಕು. ಹಸಿವಿನಿಂದ ಕ್ಷೋಭೆಗೊಂಡಿರುವ ರೈತವರ್ಗದ ತಮ್ಮ ಸೋದರರನ್ನು ಹಿಂಸಿಸಬೇಕಾಗುತ್ತದೆ. ಬಹುಶಃ ಕೊಲ್ಲಬೇಕಾಗುತ್ತದೆ. ಇನ್ನು ಒಂದು ಗಂಟೆಯ ಒಳಗೆ ಕಾರ್ಯಾಚರಣೆಗೆ ಸಿದ್ಧವಾಗಬೇಕಾಗುತ್ತದೆ – ಎಂಬೆಲ್ಲ ಸಂಗತಿಗಳು ಅವರಿಗೆ ಗೊತ್ತು.

ಸಾಮಾನ್ಯವಾಗಿ ಹೇಳುವ ಹಾಗೆ ಮತ್ತು ಅವರೇ ಮತ್ತೆ ಮತ್ತೆ ಹೇಳುವ ಹಾಗೆ ರಾಜ್ಯವ್ಯವಸ್ಥೆಯನ್ನು ಕಡ್ಡಾಯವಾಗಿ ಪಾಲಿಸುವ ನಂಬಿಕೆಯಿಂದ ಅವರು ಹೀಗೆ ಮಾಡುತ್ತಿದ್ದಾರೆಂದು ಹೇಳುವುದು ತಪ್ಪಾಗುತ್ತದೆ. ಏಕೆಂದರೆ ಈ ಜನ ಎಂದಿಗೂ ರಾಜ್ಯವ್ಯವಸ್ಥೆ ಮತ್ತು ಅದರ ಅಗತ್ಯಗಳ ವಿಚಾರವಾಗಿ ತಲೆಕೆಡಿಸಿಕೊಳ್ಳುವಂಥವರೇ ಅಲ್ಲ. ಅವರು ಕೈಗೊಂಡಿರುವ ಶಿಸ್ತಿನ ಕ್ರಮದಿಂದ ರಾಜ್ಯ ವ್ಯವಸ್ಥೆಗೆ ಬೆಂಬಲ ಬರುತ್ತದೆ, ರಾಜ್ಯವ್ಯವಸ್ಥೆ ಕುಸಿಯುವುದಿಲ್ಲ ಎಂದು ಅವರನ್ನು ನಂಬಿಸುವುದು ತುಂಬ ಕಷ್ಟವೇ ಸರಿ. ಅವರಲ್ಲಿ ಎಲ್ಲರೂ ಅಲ್ಲದಿದ್ದರೂ ಬಹುಪಾಲಿನಷ್ಟು ಮಂದಿ ರಾಜ್ಯದ ಬೆಂಬಲಕ್ಕೆ ತಮ್ಮ ಸುಖಸಂತೋಷಗಳನ್ನು ತ್ಯಾಗಮಾಡುವುದಕ್ಕೆ ಬದಲಾಗಿ ರಾಜ್ಯದ ವತಿಯಿಂದ ತಮ್ಮ ಸ್ವಂತ ಸುಖಾಭಿವೃದ್ಧಿಗೆ ಅವಕಾಶ ಸಿಕ್ಕುವಂತಿದ್ದ ಪಕ್ಷದಲ್ಲಿ ಅಂಥ ಅವಕಾಶಗಳನ್ನು ಎಂದಿಗೂ ಬಿಡುವುದಿಲ್ಲ. ಅಂದರೆ ರಾಜ್ಯದ ಅಮೂರ್ತ ತತ್ವಗಳಲ್ಲಿ ಅವರಿಗೆ ನಂಬಿಕೆಯಿಲ್ಲ.

ಹಾಗಾದರೆ?

ನನಗೆ ಈ ಎಲ್ಲ ಜನರ ಪರಿಚಯವೂ ಉಂಟು. ಪ್ರತಿಯೊಬ್ಬನೂ ವೈಯಕ್ತಿಕವಾಗಿ ನನಗೆ ಪರಿಚಯವಿಲ್ಲದಿದ್ದರೂ ನನಗೆ ಅವರ ಸ್ವಭಾವ. ಹಿಂದೆ ಅವರು ನಡೆದುಕೊಂಡಿರುವ

ರೀತಿ. ಅವರ ಆಲೋಚನಾಸರಣಿ ಎಲ್ಲ ಚೆನ್ನಾಗಿ ಗೊತ್ತು. ಅವರಿಗೆಲ್ಲ ತಾಯಂದಿರಿದ್ದರು. ಅನೇಕರಿಗೆ ಹೆಂಡತಿ ಮಕ್ಕಳಿದ್ದಾರೆ. ಬಹುಮಟ್ಟಿಗೆ ಅವರು ಮೃದುಸ್ವಭಾವದವರು. ದಯಾಳುಗಳು. ಕ್ರೌರ್ಯವನ್ನು ದ್ವೇಷಿಸುವ ಸೂಕ್ಷ್ಮ ಹೃದಯದವರು. ಮನುಷ್ಯರನ್ನು ಕೊಲ್ಲುವ ಸಂಗತಿ ಇರಲಿ. ಅವರಲ್ಲಿ ಎಷ್ಟೋ ಜನ ಒಂದು ಪ್ರಾಣಿಯನ್ನು ಹಿಂಸಿಸಿ ಕೊಲ್ಲುವುದಕ್ಕೆ ಕೂಡ ಹಿಂಜರಿಯುವಂಥವರು. ಅಲ್ಲದೆ ಅವರೆಲ್ಲ ತಾವು ಕ್ರೈಸ್ತ ಪಂಥೀಯರೆಂದು ಹೇಳಿಕೊಂಡು. ರಕ್ಷಣೆಯಿಲ್ಲದ ಜನರನ್ನು ಹಿಂಸೆಗೆ ಒಳಪಡಿಸುವುದು ಒಂದು ತುಚ್ಛ ಅಮಾನವೀಯ ದುಷ್ಕೃತ್ಯವೆಂದು ಭಾವಿಸುತ್ತಾರೆ. ಒರ್ಯೋಲ್‌ನ ಗವರ್ನರ್ ಮಾಡಿದ್ದರಲ್ಲಿ ನೂರನೇ ಒಂದು ಭಾಗದಷ್ಟು ದೌರ್ಜನ್ಯವನ್ನು ಕೂಡ ಯಾವ ಒಬ್ಬ ಸೈನಿಕನೂ ಸಾಮಾನ್ಯವಾಗಿ ತನ್ನ ಸ್ವಲಾಭಕ್ಕಾಗಿ ತನ್ನ ಖಾಸಗೀ ಜೀವನದಲ್ಲಿ ಮಾಡಬಯಸುವುದಿಲ್ಲ. ಖಾಸಗೀ ಜೀವನದಲ್ಲಿ ಅಂಥ ಕೃತ್ಯಕ್ಕೆ ಹೇಸುವವನು ನೀನಲ್ಲ ಎಂದು ಯಾರಾದರೂ ಹೇಳಿದರೆ ಪ್ರತಿಯೊಬ್ಬನೂ ತುಂಬ ಅಪಮಾನಿತನಾದವನಂತೆ ಭಾವಿಸುತ್ತಾನೆ.

ಇಷ್ಟಾದರೂ ಅವರೆಲ್ಲ ತಾವು ಬಲಾತ್ಕಾರದಿಂದ ಮಾಡಲೇಬೇಕಾಗಿರುವ ಕಾರ್ಯಾಚರಣೆಯ ಜಾಗಕ್ಕೆ ಅರ್ಧಗಂಟೆಯ ಪ್ರಯಾಣದ ದೂರದಲ್ಲಿದ್ದಾರೆ.

ಇದರ ಅರ್ಥವೇನು?

ರೈಲಿನಲ್ಲಿ ಪ್ರಯಾಣ ಮಾಡುತ್ತಿರುವ. ಹಿಂಸೆ ಕೊಲೆಗಳಿಗೆ ಸಿದ್ಧರಾಗಿರುವ ಈ ಜನ ಇರಲಿ. ಉಳಿದವರು ತಾನೇ ಹೇಗೆ ಇದರಲ್ಲಿ ಶರೀಕಾಗಿದ್ದಾರೆ? ಈ ವ್ಯವಹಾರವನ್ನು ಆರಂಭಿಸಿದವರು: ಜಮೀನುದಾರ. ಅವನ ಬಂಟ. ನ್ಯಾಯಾಧಿಪತಿಗಳು. ಪೀಟರ್ಸ್‌ಬರ್ಗ್‌ನಲ್ಲಿ ಈ ಕೃತ್ಯಕ್ಕೆ ಒಪ್ಪಿಗೆಕೊಟ್ಟು ಇದಕ್ಕೆಲ್ಲ ಕಾರಣವಾಗಿರುವ ಮಂತ್ರಿಗಳು. ಜಾರ್ ದೊರೆ. ಇವರೆಲ್ಲ ಕ್ರೈಸ್ತ ತತ್ವದಲ್ಲಿ ನಂಬುಗೆಯುಳ್ಳವರೇ. ಆಗುವ ಅನಾಹುತಗಳನ್ನು ತಿಳಿದಿದ್ದೂ ಈ ಜನ ಹೇಗೆ ತಾನೇ ಇಂಥ ಒಂದು ಯೋಜನೆಯನ್ನು ತಯಾರಿಸಿ ಮುಂದಿಟ್ಟರು? ಇವರಲ್ಲದೆ ಪ್ರೇಕ್ಷಕರು ಇದರಲ್ಲಿ ಯಾವ ಭಾಗವನ್ನು ವಹಿಸದಿದ್ದುದು ಏಕೆ? ಖಾಸಗಿ ಜೀವನದ ಮೇಲೆ ಯಾವುದೇ ಹಿಂಸಾಕಾರ್ಯ ಜರುಗುವುದನ್ನು ಪ್ರಬಲವಾಗಿ ವಿರೋಧಿಸುವ ಈ ಜನ ಇಂಥ ರೌದ್ರ ಕೃತ್ಯಕ್ಕೆ ಹೇಗೆ ಒಪ್ಪಿಗೆ ಕೊಟ್ಟರು? "ಇಲ್ಲ. ಮೋಸದಿಂದ. ತಮ್ಮಲ್ಲಿ ಅಳಿದುಳಿದ ಆಸ್ತಿಯನ್ನು ಕಿತ್ತುಕೊಳ್ಳಲು ಬಿಡದ ಆ ಹಸಿದ ಬಡ ಜನಗಳನ್ನು ನೀವು ಬಡಿದು ಸಾಯಿಸುವುದಕ್ಕೆ ನಾವು ಒಪ್ಪುವುದಿಲ್ಲ" ಎಂದು ರಸ್ತೆಯ ಮಧ್ಯೆ ನಿಂತು ಕ್ರೋಧಾವೇಶದ ಕೊರಳಲ್ಲಿ ಅವರೇಕೆ ಘೋಷಿಸಲಿಲ್ಲ? ಇಲ್ಲ. ಅವರಲ್ಲಿ ಯಾರೊಬ್ಬರೂ ಹಾಗೆ ಮಾಡಲಿಲ್ಲ. ಅದಕ್ಕೆ ಬದಲಾಗಿ ಹೆಚ್ಚಿನಷ್ಟು ಜನ. ವ್ಯವಹಾರವನ್ನು ಆರಂಭಿಸಿದ ಜನಕೂಡ (ಅಂದರೆ ಜಮೀನುದಾರ. ಅವನ ಬಂಟ. ನ್ಯಾಯಾಧೀಶರು. ಮತ್ತು ರೈತರು ತಲೆಬಾಗುವಂತೆ ವ್ಯವಸ್ಥೆ ಮಾಡಿದ ಗವರ್ನರ್, ಮಂತ್ರಿ ಚಕ್ರವರ್ತಿ) ತುಂಬ ಸಮಾಧಾನ ಚಿತ್ತದಿಂದಿದ್ದಾರೆ. ಪ್ರಜ್ಞೆಯ ಮುಳ್ಳು ಅವರನ್ನು ಎಂದಿಗೂ ಚುಚ್ಚುವುದೇ ಇಲ್ಲ.

ಹಾಗೆಯೇ ಹತ್ಯಾಕಾಂಡವನ್ನು ನಡೆಸಲು ಹೊರಟಿರುವ ಈ ಮಿಲಿಟರಿ ಜನ ಕೂಡ ಅಷ್ಟೇ ಸಮಾಧಾನ ಚಿತ್ತದಿಂದಿದ್ದಾರೆ.

ಪ್ಲಾಟ್‌ಫಾರ್ಮಿನ ಪ್ರೇಕ್ಷಕರು ಕೂಡ ಅಷ್ಟಾಗಿ ಚಕಿತರಾದಂತೆ ತೋರಲಿಲ್ಲ. ಈ ದೌರ್ಜನ್ಯವನ್ನೆಸಗಲು ಹೊರಟವರ ಬಗೆಗೆ ಅಸಮ್ಮತಿಯ ದೃಷ್ಟಿಗಿಂತ ಹೆಚ್ಚಾಗಿ ಸಹಾನುಭೂತಿಯ ದೃಷ್ಟಿಯನ್ನು ಅವರು ಬೀರುತ್ತಿದ್ದ ಹಾಗೆ ಕಂಡರು. ನನ್ನ ಗಾಡಿಯಲ್ಲಿ ರೈತವರ್ಗದ ಒಬ್ಬ ಮರಮುಟ್ಟಿನ ವ್ಯಾಪಾರಿಯಿದ್ದ. ರೈತರಿಗೆ ಕಾದಿದ್ದ ಶಿಕ್ಷಾಚರಣೆಯ ವಿಚಾರವಾಗಿ ಅತ ತುಂಬ ಸರಳವಾಗಿ ಸ್ಪಷ್ಟವಾಗಿ ಸಹಾನುಭೂತಿಯನ್ನು ವ್ಯಕ್ತಪಡಿಸುತ್ತ ಹೇಳಿದ: "ರೈತರು ಅಧಿಕಾರಿಗಳ ಆಜ್ಞೆಯನ್ನು ಪ್ರತಿಭಟಿಸಬಾರದು. ಅಧಿಕಾರಿಗಳು ಇರುವುದು ಅದಕ್ಕೆ ಅಲ್ಲವೇ? ಸ್ವಲ್ಪ ಕಾದುನೋಡಿ. ಜನರ ಮೊಂಡು ಧೈರ್ಯ ಓಡಿಹೋಗುತ್ತದೆ. ಮುಂದೆ ಹಾಗೆ ಮಾಡಬಾರದು ಎಂಬ ಅಂಶ ಅವರಿಗೆ ಮನವರಿಕೆ ಯಾಗುತ್ತದೆ. ಹೆದರಿಕೆಗೆ ಕಾರಣವಿಲ್ಲ. ಅವರ ವರ್ತನೆಗೆ ತಕ್ಕ ಪ್ರತಿಫಲ ದೊರೆಯುವುದು ಖಂಡಿತ"

ಏಕೆ ಹೀಗೆ?

ಈ ಎಲ್ಲ ಜನ ಅಂದರೆ ಇದನ್ನು ಪ್ರಚೋದಿಸಿದವರು, ಭಾಗವಹಿಸಿದವರು ಮತ್ತು ಸಹಿಸಿಕೊಂಡಿರುವವರು ಎಲ್ಲರೂ ತುಂಬ ಹೀನಾಯದ ಜನ ಎಂದಾಗಲೀ, ಸಂಬಳ ಕ್ಕಾಗಿ, ಲಾಭಕ್ಕಾಗಿ ಅಥವಾ ಶಿಕ್ಷೆಯ ಹೆದರಿಕೆಯಿಂದಾಗಿ ತಾವು ಮಾಡುತ್ತಿರುವುದು ಎಷ್ಟೇ ತುಚ್ಛವಾದುದೆಂದು ತಿಳಿದಿದ್ದರೂ ತಮ್ಮ ನಂಬಿಕೆಗಳಿಗೆ ವಿರುದ್ಧವಾಗಿ ಈ ಕಾರ್ಯ ವನ್ನು ಮಾಡುತ್ತಿದ್ದಾರೆಂದಾಗಲೀ ನಾನು ಹೇಳುತ್ತಿಲ್ಲ. ಕೆಲವು ನಿರ್ದಿಷ್ಟ ಸಂದರ್ಭಗಳಲ್ಲಿ ಅವರೆಲ್ಲರೂ ತಾವು ನಂಬಿದ ತತ್ವಗಳನ್ನು ಧೈರ್ಯವಾಗಿ ಎತ್ತಿಹಿಡಿಯಬಲ್ಲ ಸ್ವಭಾವ ದವರೇ. ಅವರಲ್ಲಿ ಒಬ್ಬ ಅಧಿಕಾರಿ ಕೂಡ ಇನ್ನೊಬ್ಬರ ಹಣದ ಚೀಲವನ್ನು ಲಪಟಾಯಿ ಸುವುದಿಲ್ಲ, ಇನ್ನೊಬ್ಬರಿಗೆ ಬಂದ ಪತ್ರವನ್ನು ಕದ್ದು ಓದುವುದಿಲ್ಲ. ಮುಖಭಂಗವಾದಾಗ ಸುಮ್ಮಸುಮ್ಮನೆ ಸಹಿಸಿಕೊಳ್ಳುವುದಿಲ್ಲ. ಅಧಿಕಾರಿಗಳ ಪೈಕಿ ಯಾರೊಬ್ಬ ಕೂಡ ಇಸ್ಪೀಟು ಆಡುವಾಗ ಮೋಸಮಾಡ ಬಯಸುವುದಿಲ್ಲ. ಇಸ್ಪೀಟಿನಲ್ಲಿ ಸೋತ ಹಣದ ಋಣವನ್ನು ತೀರಿಸದೆ ಇರುವುದಿಲ್ಲ. ಮಿತ್ರವಂಚನೆ ಮಾಡುವುದಿಲ್ಲ, ಯುದ್ಧರಂಗದಿಂದ ಓಡಿಹೋಗುವುದಿಲ್ಲ, ತನ್ನ ಸಂಕೇತದ ಜಾಗದಿಂದ ಕದಲುವುದಿಲ್ಲ. ಧರ್ಮದ ಹೆಸರಿನಲ್ಲಿ ಪ್ರತಿಜ್ಞೆಮಾಡುವುದಿಲ್ಲ. ಕೊನೆಗೆ 'ಶುಭಶುಕ್ರವಾರ'ದ ದಿನ ಮಾಂಸವನ್ನೂ ತಿನ್ನುವುದಿಲ್ಲ ತಾವು ಅಧರ್ಮ ಎಂದು ಭಾವಿಸಿದುದನ್ನು ಮಾಡುವುದಕ್ಕೆ ಪ್ರತಿಭಟಿಸುವ ಈ ಜನ ಬೇಕಾದರೆ ಅದಕ್ಕಾಗಿ ಎಂಥ ಅಪಾಯ, ಶಿಕ್ಷೆ, ಸಂಕಟ, ಸೆರೆವಾಸವನ್ನು ಬೇಕಾದರೂ ಸಹಿಸಲು ಸಿದ್ಧರಾಗುತ್ತಾರೆ. ಆದುದರಿಂದ ತಮ್ಮ ತತ್ವಕ್ಕೆ ವಿರೋಧವಾದುದನ್ನು ಪ್ರಬಲವಾಗಿ ಪ್ರತಿಭಟಿಸುವ ಸತ್ವ ಅವರಲ್ಲಿದೆ.

ಅಲ್ಲದೆ ಈ ಜನ ತುಂಬ ದೌಷ್ಟ್ಯವುಳ್ಳವರು. ಯಾವ ಕ್ರೂರ ಕೆಲಸ ಮಾಡುವುದಕ್ಕೂ ವ್ಯಥೆಪಟ್ಟುಕೊಳ್ಳುವ ಜನರಲ್ಲ. ನಿರಾತಂಕವಾಗಿ ಎಲ್ಲ ಕ್ರೂರ ಕರ್ಮಗಳನ್ನೂ ಮಾಡಿ ಬಿಡುತ್ತಾರೆ ಎಂದರೆ ಅದೂ ತಪ್ಪಾಗುತ್ತದೆ ಅವರ ಹತ್ತಿರ ಈ ವಿಚಾರವಾಗಿ ಮಾತನಾಡಿದರೆ ಸಾಕು ಆಗ ತಿಳಿಯುತ್ತದೆ. ಇವರೆಲ್ಲ. ಅಂದರೆ ಜಮೀನುದಾರರು. ನ್ಯಾಯಾಧೀಶರು. ಮಂತ್ರಿ. ಚಕ್ರವರ್ತಿ. ಗವರ್ನರ್. ಅಧಿಕಾರಿಗಳು. ಸೈನಿಕರು. ಇವರೆಲ್ಲ ತಮ್ಮ ಹೃದಯಾಂತರಾಳದಲ್ಲಿ ಈ ಕೃತ್ಯಗಳನ್ನು ಒಪ್ಪುವುದಿಲ್ಲ. ಅಷ್ಟೇ ಅಲ್ಲದೆ ಈ ಕೃತ್ಯಗಳ ಪರಿಣಾಮವನ್ನು ವಿವರಿಸಿದಾಗ ತಾವೂ ಅದರಲ್ಲಿ ಭಾಗವಹಿಸಿದ್ದೇವಲ್ಲ ಎಂಬ ಪ್ರಜ್ಞೆ ಅವರನ್ನು ಚುಚ್ಚುತ್ತಿರುತ್ತದೆ.

ಆದರೆ ಯಾರೂ ಆ ವಿಷಯವನ್ನು ಕುರಿತು ಯೋಚಿಸಲು ಬಯಸುವುದಿಲ್ಲ.

ಜಮೀನುದಾರನಿಂದ ಹಿಡಿದು ಕನಿಷ್ಠ ಪೋಲೀಸ್ ಸೈನಿಕನನ್ನಾಗಲೀ. ಸೈನಿಕನನ್ನಾಗಲೀ ಕೇಳಿನೋಡಿ. ಈ ಕಾರ್ಯಾಚರಣೆಯಲ್ಲಿ ಭಾಗವಹಿಸುವ ಪ್ರತಿಯೊಬ್ಬನ ಹೃದಯಾಂತರಾಳದಲ್ಲಿಯೂ ಅದು ತುಂಬ ಅಪವಿತ್ರ ಕಾರ್ಯವೆಂಬ ಭಾವನೆ, ಅದಕ್ಕೂ ತಮಗೂ ಸಂಬಂಧವಿಲ್ಲದಿದ್ದರೇ ಚೆನ್ನಾಗಿತ್ತು ಎಂಬ ಭಾವನೆ. ಆದರಿಂದಾಗಿಯೇ ತಮ್ಮ ಮನುಸ್ಸಿಗೆ ಕಿರಿಕಿರಿಯಾಗುತ್ತದೆ ಎಂಬ ಭಾವನೆ ಮೂಡಿರುವುದನ್ನು ಸುಲಭವಾಗಿ ತಿಳಿದುಕೊಳ್ಳಬಹುದು.

ನಮ್ಮ ಜತೆಯಲ್ಲಿ ತುಂಬ ಉದಾರ ಸ್ವಭಾವದ ಒಬ್ಬಳು ಮಹಿಳೆ ಪ್ರಯಾಣ ಮಾಡುತ್ತಿದ್ದಳು. ಗವರ್ನರ್ ಮತ್ತು ಆಫೀಸರುಗಳನ್ನು ಪ್ರಥಮ ವರ್ಗದ ಉಪಾಹಾರ ಮಂದಿರದಲ್ಲಿ ನೋಡಿದ ಆಕೆ ಅವರ ಪ್ರಯಾಣದ ಉದ್ದೇಶವನ್ನು ತಿಳಿದಿದ್ದಳು. ಆಕೆ ಇದ್ದಕ್ಕಿದ್ದಂತೆಯೇ ಉದ್ದೇಶಪೂರ್ವಕವಾಗಿ ಗಂಟಲನ್ನು ಏರಿಸಿ ಈಗಿನ ರಾಜ್ಯದ ಅವ್ಯವಸ್ಥೆಗಳನ್ನು ಕುರಿತು ಮಾತನಾಡತೊಡಗಿದಳು. ಎಲ್ಲರೂ ತನ್ನ ಮಾತು ಕೇಳಲಿ ಎಂಬ ಉದ್ದೇಶ ಆಕೆಯದು. ಅಲ್ಲಿದ್ದ ಎಲ್ಲರಿಗೂ ಇರುಸು ಮುರುಸಾಯಿತು. ಯಾವ ಕಡೆ ನೋಡಬೇಕೆಂಬುದೂ ಯಾರಿಗೂ ತಿಳಿಯಲಿಲ್ಲ. ಪುಣ್ಯಕ್ಕೆ ಯಾರೂ ಅವಳನ್ನು ವಿರೋಧಿಸುವ ಸಾಹಸ ಮಾಡಲಿಲ್ಲ. ಅಂಥ ಪೊಳ್ಳು ಹೇಳಿಕೆಗಳಿಗೆ ಉತ್ತರ ನೀಡುವಷ್ಟು ಪುರಸ್ಕಾರ ಕೊಡಬಾರದೆಂದು ಗತ್ತಿನೊಂದಿಗೆ ಅವರೆಲ್ಲ ಕುಳಿತಿದ್ದರು. ಆದರೆ ಅವರ ತೇಲುಗಣ್ಣುಗಳನ್ನು ಹ್ಯಾಪ ಮೋರೆಗಳನ್ನು ನೋಡಿದ ಯಾರಿಗೂ ಅವರು ತೀರ ಅವಮಾನಿತರಾದಂತೆ ಕಂಡುಬರುತ್ತಿದ್ದುದು ಖಚಿತ. ಸೈನಿಕರ ಮುಖಚರ್ಯೆಗಳಲ್ಲೂ ನಾನು ಅದೇ ಭಾವವನ್ನು ಗುರುತಿಸಿದೆ. ತುಂಬ ನಾಚಿಕೆಗೇಡಿನ ಒಂದು ಕಾರ್ಯಾಚರಣೆಗಾಗಿ ತಮ್ಮನ್ನೆಲ್ಲಾ ಕಳಿಸಲಾಗಿದೆ ಎಂಬ ಸಂಗತಿ ಅವರಿಗೆಲ್ಲ ತಿಳಿದಿತ್ತು. ಆದರೆ ಆ ಬಗೆಗೆ ಯೋಚಿಸಲು ಯಾರೂ ಸಿದ್ಧರಿರಲಿಲ್ಲ.

ಆಗ ಮರಮುಟ್ಟಿನ ವ್ಯಾಪಾರಿ (ಅಪ್ರಾಮಾಣಿಕವಾಗಿ. ತನ್ನ ಸಭ್ಯತೆಯನ್ನು ಮರೆಯುವುದಕ್ಕಾಗಿಯೇ ಆತ ಬಾಯಿ ಬಿಟ್ಟಂತೆ ನನಗೆ ತೋರಿತು) ಅಂಥ ಕಾರ್ಯಾ-

ಚರಣೆಗಳ ಅಗತ್ಯವನ್ನು ಮನಗಾಣಿಸಲು ಮಾತಿಗಾರಂಭಿಸಿದ. ಆತನ ಮಾತು ಕೇಳಿದ ಸೈನಿಕರೆಲ್ಲ ಮುಖ ಸಿಂಡರಿಸಿಕೊಂಡು ಆವನ ಮಾತನ್ನೇ ಕೇಳಿಸಿಕೊಳ್ಳದವರ ಹಾಗೆ ಮುಖವನ್ನು ಅತ್ತಕಡೆ ತಿರುಗಿಸಿದರು.

ಅಲ್ಲಿದ್ದ ಎಲ್ಲ ಜನ. ಅಂದರೆ ಈ ಕಾರ್ಯಾಚರಣೆಗೆ ಪ್ರಚೋದಕರಾದ ಜಮೀನುದಾರ. ಆವನ ಬಂಟ. ಮಂತ್ರಿ. ಚಕ್ರವರ್ತಿ ಮೊದಲಾದವರು ಮತ್ತು ಅದನ್ನು ನೆರವೇರಿಸಬೇಕಾದ ಸೈನಿಕರು ಮತ್ತು ಸುಮ್ಮನೆ ಪ್ರೇಕ್ಷಕರಾಗಿದ್ದವರು ಎಲ್ಲರೂ ಅದೊಂದು ಕೆಟ್ಟ ವ್ಯವಹಾರವೆಂದೂ ಅದರಲ್ಲಿ ಪಾಲ್ಗೊಳ್ಳುವುದು ಅವಮಾನಕರವೆಂದೂ ಚೆನ್ನಾಗಿ ತಿಳಿದಿದ್ದವರೇ.

ಹಾಗಾದರೆ ಏಕೆ ಹಾಗೆ ಮಾಡಿದರು? ಇನ್ನೂ ಏಕೆ ಹಾಗೆಯೇ ಮಾಡುತ್ತಿದ್ದಾರೆ? ಮುಂದೆ ಹಾಗಾಗಲು ಏಕೆ ಬಿಡುತ್ತಾರೆ?

ಜಮೀನುದಾರನಂತೆ ಈ ವ್ಯವಹಾರವನ್ನು ಆರಂಭಿಸಿದವರನ್ನೇ ಕೇಳಿನೋಡಿ. ರೂಪದಲ್ಲಿ ನ್ಯಾಯಬದ್ಧವಾಗಿ ಕಂಡರೂ ನಿಜವಾಗಿ ಅನ್ಯಾಯದ ತೀರ್ಪುಕೊಟ್ಟ ನ್ಯಾಯಾಧೀಶರನ್ನೇ ಕೇಳಿನೋಡಿ. ಆ ತೀರ್ಪನ್ನು ಜಾರಿಗೆ ತರಬೇಕೆಂದು ಘೋಷಿಸಿದವರನ್ನು ಕೇಳಿ ನೋಡಿ. ಕಾರ್ಯಾಚರಣೆಯನ್ನು ಮಾಡಿ ತಮ್ಮ ಸೋದರರನ್ನೇ ಹೊಡೆದು ಗೆಲ್ಲುವ ಸೈನಿಕವರ್ಗ. ಪೋಲೀಸ್ ಸೈನಿಕವರ್ಗ. ಜನವರ್ಗ ಇವರನ್ನೇ ಕೇಳಿ ನೋಡಿ. ಈ ದುಷ್ಕಾರ್ಯಕ್ಕೆ ತಳಹದಿ ಹಾಕಿದವರು. ನೆರವಾದವರು. ಇದನ್ನು ಜಾರಿಗೆ ತಂದವರು. ಸಹಿಸಿಕೊಂಡು ಸುಮ್ಮನೆ ನೋಡುತ್ತಿದ್ದವರು - ಇವರೆಲ್ಲರೂ ಒಂದೇ ಉತ್ತರವನ್ನು ಕೊಡುತ್ತಾರೆ.

ಈ ದುರ್ವ್ಯವಹಾರವನ್ನು ಆರಂಭಿಸಿ, ನೇರವಾಗಿ ಜಾರಿಗೆ ತಂದ ಅಧಿಕಾರ ವರ್ಗದವರು ಹೇಳುತ್ತಾರೆ: ನಮ್ಮ ಇಷ್ಟದಂತೆ ನಾವು ಆಚರಿಸುತ್ತೇವೆ. ಹಾಲಿ ವ್ಯವಸ್ಥೆಯನ್ನು ಕಾಪಾಡಿಕೊಳ್ಳಬೇಕಾದರೆ ಇದು ಅತ್ಯಗತ್ಯ. ಹಾಲಿ ಇರುವ ವ್ಯವಸ್ಥೆಯನ್ನು ಕಾಪಾಡಿಕೊಂಡು ಬರುವುದು ರಾಜ್ಯದ ಹಿತದೃಷ್ಟಿಯಿಂದ, ಮಾನವತೆಯ ಹಿತದೃಷ್ಟಿಯಿಂದ ಸಾಮಾಜಿಕ ಅಸ್ತಿತ್ವ ಮತ್ತು ಮಾನವರ ಪ್ರಗತಿಯ ಸಾಧ್ಯತೆಯ ದೃಷ್ಟಿಯಿಂದ ಅತ್ಯಗತ್ಯ.

ಇನ್ನು ಕೆಳಗಿನ ವರ್ಗದವರು ಅಂದರೆ ಸ್ವತಃ ತಮ್ಮ ಕೈಯಿಂದಲೇ ಈ ಹಿಂಸಾಚಾರವನ್ನು ನಡೆಸಬೇಕಾದ ಜನರು, ಸೈನಿಕರು ಮುಂತಾದವರು ಏನು ಹೇಳುತ್ತಾರೆ ಗೊತ್ತೆ? "ಮೇಲಧಿಕಾರಿಗಳು ಹೀಗೆ ಆಜ್ಞೆ ಮಾಡಿದ್ದಾರೆ. ತಾವು ಏನು ಮಾಡುತ್ತಿದ್ದೇವೆಂಬ ಅರಿವು ಮೇಲಧಿಕಾರಿಗಳಿಗೆ ಖಂಡಿತವಾಗಿ ಇರುತ್ತದೆ. ನಾವು ಅವರ ಆಜ್ಞೆಯನ್ನು ಕಾರ್ಯಗತಗೊಳಿಸುತ್ತಿದ್ದೇವೆ ಅಷ್ಟೆ" ಎಂದು ಅವರು ಹೇಳುತ್ತಾರೆ. ಅವರ ದೃಷ್ಟಿಯಲ್ಲಿ

ಯೋಗ್ಯ ಜನರೇ ಪಕ್ಕಿನ ಪಾಲಕರಾಗಿದ್ದಾರೆ. ಅವರಿಗೆ ತಾವು ಹೊರಡಿಸುವ ಆಜ್ಞೆಗಳ ಪರಿವೆ ಇರುತ್ತದೆ. ಒಂದು ವೇಳೆ ತಪ್ಪುಗಳಾಗುವ ಸಾಧ್ಯತೆಯಿದ್ದಲ್ಲಿ ಅದು ಕೆಳವರ್ಗದ ಅಧಿಕಾರಿಗಳಲ್ಲಿ ಮಾತ್ರ ಸಾಧ್ಯ ಎಂದೂ ಆ ಜನ ನಂಬುತ್ತಾರೆ. ಯಾರ ಮೇಲೆ ಎಲ್ಲ ವ್ಯವಹಾರದ ಜವಾಬ್ದಾರಿಯು ನಿಂತಿದೆಯೋ ಆ ಉನ್ನತಾಧಿಕಾರಿಗಳು ಅವರ ದೃಷ್ಟಿಯಲ್ಲಿ ನಿಸ್ಸಂದೇಹವಾಗಿ ಪರಿಶುದ್ಧರು. ಶಂಕಾತೀತರು.

ಅಧಿಕಾರದಲ್ಲಿರುವವರು ಮತ್ತು ಅವರ ಸಿಬ್ಬಂದಿಗಳು ತಮ್ಮ ನಡವಳಿಕೆಯ ಮೂಲೋದ್ದೇಶವನ್ನು ಬೇರೆ ಬೇರೆಯಾಗಿ ವಿವರಿಸುತ್ತಾರೆ ನಿಜ. ಆದರೆ ಈಗ ಜಾರಿಯಲ್ಲಿರುವ ವ್ಯವಸ್ಥೆ ಸದ್ಯಕ್ಕೆ ಇರಲೇಬೇಕಾದ ವ್ಯವಸ್ಥೆಯಾದುದರಿಂದ ಅದನ್ನು ಬೆಂಬಲಿಸಬೇಕಾದದ್ದು ಪ್ರತಿಯೊಬ್ಬನ ಪವಿತ್ರ ಕರ್ತವ್ಯ ಎಂಬುದೂ ಅವರೆಲ್ಲರಿಗೂ ಸಮಾನವಾದ ಭಾವನೆಯಾಗಿದೆ.

ಹೀಗೆ ಅವರು ಈಗಿನ ವ್ಯವಸ್ಥೆ ತುಂಬ ಅಗತ್ಯ ಅದರ ಬದಲಾವಣೆಗೆ ಅವಕಾಶ ವಿಲ್ಲ ಎಂದು ನಂಬಿದ್ದಾರೆ. ಈ ನಂಬಿಕೆಯ ಹಿನ್ನೆಲೆಯಲ್ಲಿ. ಸರಕಾರಿ ಹಿಂಸಾಚಾರದ ಕ್ರಮಗಳನ್ನು ಕೈಗೊಳ್ಳುವ ಅವರು ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳುತ್ತಾರೆ. ಅವರ ವಾದ ಇದು: ಈಗಿನ ವ್ಯವಸ್ಥೆ ನಿರ್ವಿಕಾರವಾದದ್ದು. ಆದ್ದರಿಂದ ಕರ್ತವ್ಯಕ್ಕೆ ಬದ್ಧನಾದ ಒಬ್ಬ ವ್ಯಕ್ತಿ ತನ್ನ ಕೆಲಸವನ್ನು ನಿರ್ವಹಿಸಲು ಒಪ್ಪದಿದ್ದ ಮಾತ್ರಕ್ಕೇ ಆ ವ್ಯವಸ್ಥೆಯ ಮೇಲೆ ಪ್ರಭಾವ ಬೀರಲು ಸಾಧ್ಯವಿಲ್ಲ. ಆಗ ಆತನ ಸ್ಥಾನಕ್ಕೆ ಇನ್ನೊಬ್ಬ ಬಂದು ಇನ್ನೂ ಉಗ್ರವಾದ ರೀತಿಯಲ್ಲಿ ಕಾರ್ಯ ನಿರ್ವಹಿಸಬಹುದು. ಅಪರಾಧಿಗಳ ಮೇಲೆ ಇನ್ನೂ ಕ್ರೌರ್ಯ ದೌರ್ಜನ್ಯಗಳನ್ನೆಸಗಬಹುದು.

ಹೀಗೆ ಈಗಿನ ವ್ಯವಸ್ಥೆ ತೀರ ಅಗತ್ಯವಾದದ್ದು, ನಿರ್ವಿಕಾರವಾದದ್ದು. ಇದನ್ನು ಕಾಪಾಡಬೇಕಾದದ್ದು ಪ್ರತಿಯೊಬ್ಬನ ಪವಿತ್ರ ಕರ್ತವ್ಯ ಎಂಬ ನಂಬಿಕೆ ಬೆಳೆದು ಬಂದಿದೆ ಈ ನಂಬಿಕೆಯಿರುವುದರಿಂದಲೇ ಖಾಸಗೀ ಜೀವನದಲ್ಲಿ ಉದಾತ್ತ ಮೌಲ್ಯಗಳನ್ನು ಪರಿಭಾವಿಸುವ ಸಜ್ಜನರು ಕೂಡ ಒರ್ಯೆಲ್‌ನಲ್ಲಿ ಮಾಡಿದಂತೆ ಅಥವಾ ಈಗ ಟೂಲಾದಲ್ಲಿ ಮಾಡಲಿರುವಂತೆ ತಮ್ಮ ಪ್ರಜ್ಞೆಗೆ ನೋವಾಗದಂತೆ ಕಾರ್ಯಾಚರಣೆಯಲ್ಲಿ ತೊಡಗುವುದು ಸಾಧ್ಯವಾಗಿದೆ.

ಆದರೆ ಈ ನಂಬಿಕೆ ಏತರಿಂದ ಬಂದಿದೆ?

ಈಗಿನ ವ್ಯವಸ್ಥೆ ಸಾಧುವಾದದ್ದು. ಅದನ್ನು ಬದಲಿಸುವ ಕಾರಣವಿಲ್ಲ ಎಂದು ಜಮೀನುದಾರ ಭಾವಿಸಿದರೆ ನಾವು ಅರ್ಥಮಾಡಿಕೊಳ್ಳಬಹುದು. ಏಕೆಂದರೆ ಈ ವ್ಯವಸ್ಥೆಯಿಂದಾಗಿಯೇ ಆತನಿಗೆ ತನ್ನ ಸಾವಿರಾರು ಎಕರೆ ಭೂಮಿಯಿಂದ ಉತ್ತಮ ಆದಾಯ ಬರುತ್ತದೆ ಮತ್ತು ಅವನು ತನ್ನ ಎಂದಿನ ಸೋಮಾರಿ. ಭೋಗ ಜೀವನವನ್ನು ಚೆನ್ನಾಗಿಯೇ ನಿರ್ವಹಿಸುತ್ತಾನೆ.

ನ್ಯಾಯಾಧಿಪತಿಯೂ ಈ ವ್ಯವಸ್ಥೆಯ ಅಗತ್ಯವನ್ನು ನಂಬುತ್ತಾನೆಂದರೆ ಅದನ್ನು ಅರ್ಥಮಾಡಿಕೊಳ್ಳಬಹುದು. ಏಕೆಂದರೆ ತುಂಬ ಕಷ್ಟಪಟ್ಟು ದುಡಿಯುವ ಕಾರ್ಮಿಕನಿಗಿಂತ ಐವತ್ತರಷ್ಟು ಹೆಚ್ಚು ಹಣವನ್ನು ಆತ ಸಂಬಳದ ರೂಪದಲ್ಲಿ ಪಡೆಯುವುದು ಈ ವ್ಯವಸ್ಥೆಯಿಂದ ತಾನೆ! ಇದೇ ತತ್ವ ಆರುಸಾವಿರ ಅಥವಾ ಅದಕ್ಕೂ ಹೆಚ್ಚಿನ ರೂಬೆಲ್‌ಗಳನ್ನು ಸಂಪಾದಿಸುವ ಮೇಲ್ದರ್ಜೆಯ ನ್ಯಾಯಾಧೀಶರಿಗೂ ದೊಡ್ಡ ಅಧಿಕಾರಿಗಳಿಗೂ ಅನ್ವಯಿಸುತ್ತದೆ. ಈ ವ್ಯವಸ್ಥೆಯ ಆಶ್ರಯದಲ್ಲಿ ಗವರ್ನರರು. ಪಬ್ಲಿಕ್ ಪ್ರಾಸಿಕ್ಯೂಟರ್‌ಗಳು. ಸೆನೆಟರುಗಳು. ಅನೇಕ ಪರಿಷತ್ತುಗಳ ಸದಸ್ಯರುಗಳು. ವರ್ಷಕ್ಕೆ ಹಲವಾರು ಸಾವಿರ ರೂಬೆಲ್‌ಗಳನ್ನು ಪಡೆಯುತ್ತಿದ್ದಾರೆ. ಅದಿಲ್ಲದಿದ್ದರೆ ಅವರೂ ಅವರ ಸಂಸಾರದವರೂ ಕೂಡಲೇ ಸಾಯಬೇಕಾಗುತ್ತದೆ. ಏಕೆಂದರೆ ಅವರ ಜ್ಞಾನ ಸಾಮರ್ಥ್ಯ ಕಾರ್ಯಪಟುತ್ವಗಳಿಗೆ ಆಯಾ ವೃತ್ತಿ ವಲಯವನ್ನು ಬಿಟ್ಟರೆ ಬೇರೆಲ್ಲೂ ಅವರು ಪಡೆಯುತ್ತಿದ್ದ ಸಂಬಳದ ಸಾವಿರದ ಒಂದು ಭಾಗದಷ್ಟು ಸಂಬಳಕೂಡ ದೊರೆಯುತ್ತಿರಲಿಲ್ಲ. ಮಂತ್ರಿ. ಚಕ್ರವರ್ತಿ ಮತ್ತಿತರ ಎಲ್ಲ ಹಿರಿಯ ಅಧಿಕಾರಿಗಳದೂ ಇದೇ ಸ್ಥಿತಿ. ವ್ಯತ್ಯಾಸ ಇಷ್ಟೆ. ಸ್ಥಾನಮಾನ ಉನ್ನತವಾಗುತ್ತ ತುಂಬ ವಿಶಿಷ್ಟವಾಗುತ್ತ ಹೋದಂತೆ ಈಗಿನ ವ್ಯವಸ್ಥೆಯೊಂದೇ ಸಾಧ್ಯವಾದ ವ್ಯವಸ್ಥೆ ಎಂದು ಅದೇ ಪ್ರಮಾಣದಲ್ಲಿ ನಂಬುತ್ತ ಹೋಗಬೇಕು. ಅದಿಲ್ಲದಿದ್ದರೆ ಅವರಿಗೆ ತಾವು ಹೊಂದಿರುವ ಸ್ಥಾನದಷ್ಟು ಉತ್ತಮ ಸ್ಥಾನ ದೊರೆಯುತ್ತಿರಲಿಲ್ಲ: ಅಷ್ಟೇ ಅಲ್ಲ ಉಳಿದ ಮಾನವರ ಸ್ಥಾನಕ್ಕಿಂತ ಎಷ್ಟೋ ಪಟ್ಟು ಕೀಳುಸ್ಥಾನದಲ್ಲಿ ಅವರು ಉಳಿಯಬೇಕಾಗುತ್ತಿತ್ತು. ತಿಂಗಳಿಗೆ ಹತ್ತು ರೂಬೆಲ್‌ನ ವೇತನಕ್ಕೆ ತಾನಾಗಿ ಪೋಲೀಸ್ ಇಲಾಖೆಗೆ ಸೇರುವ ಒಬ್ಬ ಆ ಸಂಬಳವನ್ನು ಎಲ್ಲಿ ಬೇಕಾದರೂ ಸಂಪಾದಿಸಬಲ್ಲ. ಆದ್ದರಿಂದ ಅಂಥವನಿಗೆ ಈಗಿನ ರಾಜ್ಯವ್ಯವಸ್ಥೆಯಿಲ್ಲದೆಯೇ ಬದುಕಬಹುದೆಂದು ಗೊತ್ತಿರುವುದರಿಂದ ಅದು ಬದಲಾವಣೆಗೆ ಹೊರತಾದುದೆಂದು ನಂಬದೆ ಅವನು ಜೀವನವನ್ನು ನಿರ್ವಹಿಸಬಲ್ಲ. ಆದರೆ ದೊರೆ. ಚಕ್ರವರ್ತಿಗಳು ಹಾಗಲ್ಲ. ಅವರು ಆ ವ್ಯವಸ್ಥೆಯಲ್ಲಿ ಕೋಟ್ಯಂತರ ಸಂಪಾದಿಸುತ್ತಾರೆ. ತಮ್ಮ ಸುತ್ತ ಸಾವಿರಾರು ಜನ ಇದ್ದಾರೆ, ತಮ್ಮನ್ನು ತಳ್ಳಿ ಆ ಜಾಗಕ್ಕೆ ಬರಲು ತುಂಬ ಅಪೇಕ್ಷೆ ಪಡುತ್ತಾರೆ ಎಂಬ ಸಂಗತಿ ಚೆನ್ನಾಗಿ ಗೊತ್ತು. ಬೇರೆಯಾವ ಅಧಿಕಾರ ಸ್ಥಾನದಲ್ಲೂ ಅಷ್ಟೊಂದು ಆದಾಯ, ಗೌರವ ಲಭಿಸುವುದಿಲ್ಲವೆಂಬುದು ಅವರಿಗೆ ತಿಳಿದಿರುತ್ತದೆ. ನಿರಂಕುಶ ಪ್ರಭುತ್ವದ ಅನೇಕ ಉದಾಹರಣೆಗಳನ್ನು ಗಮನಿಸಿದರೆ ದೊರೆಯ ಸ್ಥಾನದಿಂದ ತನ್ನನ್ನು ಉಚ್ಚಾಟಿಸಿದ ಕೂಡಲೆ ತಮ್ಮ ಅಧಿಕಾರದ ದುರುಪಯೋಗದ ವಿಚಾರವಾಗಿ ದೊಡ್ಡ ವಿಚಾರಣೆ ನಡೆಯುತ್ತದೆಂದೂ ಅವರಿಗೆ ವಿದಿತವಾಗಿರುತ್ತದೆ. ಆದುದರಿಂದ ದೊರೆ ಅಥವಾ ಚಕ್ರವರ್ತಿ ಈಗಿನ ವ್ಯವಸ್ಥೆಯ ಅಪರಿವರ್ತನೀಯತೆಯನ್ನೂ ಪಾವಿತ್ರ್ಯವನ್ನೂ ನಂಬದಿದ್ದರೆ ವಿಧಿಯಿಲ್ಲ. ಅಧಿಕಾರದ ಏಣಿಯಲ್ಲಿ ಎಷ್ಟು ಎತ್ತರ ಏರುತ್ತಾನೋ ಅಷ್ಟು ಪ್ರಯೋಜನಕಾರಿ, ಮತ್ತು ಅಷ್ಟೇ ಅಭದ್ರ: ಪತನವೂ ಅಷ್ಟೇ ಭಯಂಕರ ಮತ್ತು ಅಪಾಯಕರ. ಅಂಥವನಿಗೆ ಈಗಿನ ವ್ಯವಸ್ಥೆಯ ಅಪರಿವರ್ತನೀಯತೆಯಲ್ಲಿ

ಅಷ್ಟೇ ನಂಬಿಕೆ ಹೆಚ್ಚುತ್ತದೆ. ಆದುದರಿಂದ ತನಗಾಗಿ ಅಲ್ಲದಿದ್ದರೂ ಆ ವ್ಯವಸ್ಥೆಯ ಪಾಲನೆಗಾಗಿ ಅತಿ ತುಂಬ ಸಮಾಹಿತವಾದ ಮನಸ್ಸಿನಿಂದಲೇ ತುಂಬ ಕ್ರೂರವಾದ ದುಷ್ಕೃತ್ಯಗಳನ್ನು ಮಾಡುತ್ತಾನೆ.

ಈಗಿನ ವ್ಯವಸ್ಥೆಯಿರುವುದರಿಂದ ಮಾತ್ರ ಯಾರಿಗೆ ಹೆಚ್ಚು ಅನುಕೂಲಕರವಾದ ಸ್ಥಾನ ಗೌರವ ಪ್ರಾಪ್ತವಾಗಿದೆಯೋ ಅವರೆಲ್ಲರ. ಅಂದರೆ ಕೆಳ ಪೋಲಿಸ್ ಅಧಿಕಾರಿಗಳಿಂದ ಹಿಡಿದು ಉನ್ನತ ದರ್ಜೆಯ ಅಧಿಕಾರಿಗಳವರೆಗೆ ಎಲ್ಲರ ಸ್ಥಿತಿಯೂ ಇದೇ ಆಗಿದೆ. ಮುಖ್ಯವಾಗಿ ತಮಗೆ ತುಂಬ ಅನುಕೂಲಕರವಾಗಿರುವುದರಿಂದ ಹಾಲಿ ರಾಜ್ಯವ್ಯವಸ್ಥೆಯು ಬದಲಾಗಬಾರದೆಂದು ಅವರೆಲ್ಲ ಬಯಸುತ್ತಾರೆ.

ಆದರೆ ರೈತರು ಮತ್ತು ಸಾಮಾನ್ಯಯೋಧರು ಈ ಏಣಿಯ ಕೆಳಗೋಲಿನವರಾಗಿದ್ದು. ಹಾಲಿ ರಾಜ್ಯವ್ಯವಸ್ಥೆಯಿಂದ ಅವರಿಗೆ ಅಷ್ಟೇನೂ ಪ್ರಯೋಜನವಿಲ್ಲ ಮತ್ತು ಈ ವ್ಯವಸ್ಥೆಯಿಂದ ಅವರು ತುಂಬ ದಬ್ಬಾಳಿಕೆ ಮತ್ತು ತೇಜೋವಧೆಗೆ ಗುರಿಯಾಗುತ್ತಿದ್ದಾರೆ. ಆದರೂ ಅವರು ಈಗಿನ ರಾಜ್ಯವ್ಯವಸ್ಥೆ ಮುಂದುವರಿಯಲೇಬೇಕೆಂದು ನಂಬುತ್ತಾರೆ ಮತ್ತು ತಮ್ಮ ಆತ್ಮಸಾಕ್ಷಿಗೆ ವಿರೋಧವಾಗಿ ದುಷ್ಕೃತ್ಯಗಳನ್ನು ಮಾಡಿ ಆ ವ್ಯವಸ್ಥೆಯ ಆಚರಣೆಗೆ ಸಹಾಯಮಾಡುತ್ತಾರೆ. ಹೀಗೇಕೆ?

ವಾಸ್ತವವಾಗಿ ಇವರೆಲ್ಲ ಬೆಂಬಲಿಸುತ್ತಿರುವ ಕಾರಣದಿಂದಲೇ ಈ ರಾಜ್ಯವ್ಯವಸ್ಥೆ ಭದ್ರವಾಗಿದೆ. ಬದಲಾವಣೆ ಹೊಂದದಿದೆ. ಆದರೆ ಈ ಜನ ಮಾತ್ರ ಈ ವ್ಯವಸ್ಥೆ ಅಪರಿವರ್ತನೀಯವಾದುದರಿಂದ ತಾವು ಬೆಂಬಲಕೊಡಬೇಕೆಂದು ತಪ್ಪು ತಿಳಿದಿದ್ದಾರಲ್ಲ ಏಕೆ?

ಇವರೆಲ್ಲ ನಿನ್ನೆ ಮೊನ್ನೆ ಹೊಲಗದ್ದೆಗಳಿಂದ ಬಂದವರು. ತಿಳುನೀಲಿ ಕಾಲರ್ ಮತ್ತು ಹೊಳೆಯುವ ಗುಂಡಿಯುಳ್ಳ, ಅಸಭ್ಯವಾದ ತಮಗೆ ಒಪ್ಪದ ಸಮವಸ್ತ್ರಗಳನ್ನು ಧರಿಸಿದ ಈ ಜನ ಬಂದೂಕುಗಳನ್ನೂ ಕಿರುಗತ್ತಿಗಳನ್ನೂ ಹಿಡಿದು ತಮ್ಮ ತಪಿಸುವ ಸೋದರರನ್ನು ಮಿತ್ರಗಳನ್ನು ಏಕೆ ಕೊಲ್ಲಲು ಮುಂದೆ ನುಗ್ಗುತ್ತಾರೆ? ಹಾಗೆ ಮಾಡುವುದರಿಂದ ಅವರಿಗೆ ಯಾವ ಹೆಚ್ಚಿನ ಪ್ರಯೋಜನವೂ ಲಭಿಸುವುದಿಲ್ಲ. ಅಥವಾ ಹಾಗೆ ಮಾಡದಿದ್ದರೆ ಅಂಥ ಕಳೆದುಕೊಳ್ಳಲಾಗದ ಸ್ಥಾನಮಾನವನ್ನೇನೂ ಅವರು ಕಳೆದು ಕೊಳ್ಳುವುದಿಲ್ಲ. ಏಕೆಂದರೆ ಅವರ ಮೂಲವೃತ್ತಿ ಈಗಿನ ವೃತ್ತಿಗಿಂತ ಎಷ್ಟೋ ಉತ್ತಮವಾದದ್ದು.

ಉನ್ನತ ವರ್ಗದ ಮಂದಿ, ಅಂದರೆ ರಾಜರು, ಜಮೀನುದಾರರು, ವರ್ತಕರು, ನ್ಯಾಯಾಧೀಶರು, ಸೆನೆಟರುಗಳು, ಗವರ್ನರುಗಳು, ಮಂತ್ರಿಗಳು ಮತ್ತು ಅಧಿಕಾರಿಗಳು ಇಂಥ ದುಷ್ಕೃತ್ಯಗಳಲ್ಲಿ ತೊಡಗಿ ಈಗಿನ ವ್ಯವಸ್ಥೆಯನ್ನು ತುಂಬ ಬೆಂಬಲಿಸುತ್ತಾರೆ.

ಏಕೆಂದರೆ ಅದು ಅವರಿಗೆ ತುಂಬ ಪ್ರಯೋಜನಕಾರಿಯಾಗಿದೆ. ಇವರಲ್ಲಿ ಅನೇಕರು ತುಂಬ ಒಳ್ಳೆಯವರೂ ದಯಾಳುಗಳೂ ಆಗಿದ್ದಾರೆ. ಅಲ್ಲದೆ ಅವರು ಇಂಥ ಕಾರ್ಯಾ-ಚರಣೆಯನ್ನು ಸುಲಭವಾಗಿ ಪಾಲ್ಗೊಳ್ಳುವುದಕ್ಕೆ ಕಾರಣ. ವಿಚಾರಣೆಯನ್ನು ನಡೆಸುವುದು, ತೀರ್ಪುಕೊಡುವುದು. ಆಜ್ಞೆಮಾಡುವುದು ಇವಿಷ್ಟೇ ಅವರ ಕೆಲಸ. ತಮ್ಮ ವಿಚಾರಣೆ ತೀರ್ಪು ಆಜ್ಞೆಗಳನ್ನು ಅವರೇ ಜಾರಿಗೆ ತರಬೇಕಾಗಿಲ್ಲ ಎಷ್ಟೋ ಸಲ ತಾವು ಎತ್ತಿಕಟ್ಟಿ ತೀರ್ಪು ಕೊಟ್ಟು ಆಜ್ಞೆಹೊರಡಿಸಿದ ಶಾಸನಗಳು ಹೇಗೆ ಜಾರಿಯಾಗುತ್ತವೆಂಬುದನ್ನು ಅವರು ಕಂಡಿರುವುದಿಲ್ಲ.

ಆದರೆ ಈ ವ್ಯವಸ್ಥೆಯನ್ನು ಜಾರಿಗೆ ತರುವುದರಲ್ಲಿ ತುಂಬ ಶ್ರಮಿಸುವ ಕೆಳವರ್ಗದ ಜನರಿಗೆ ಇದರಿಂದ ಅಷ್ಟಾಗಿ ಪ್ರಯೋಜನವೇನೂ ಇಲ್ಲ. ಅಷ್ಟೇ ಅಲ್ಲ ಇದರಿಂದಾಗಿ ಜನರು ಇವರನ್ನು ತುಂಬ ತುಚ್ಛವಾಗಿ ಕಾಣುತ್ತಾರೆ. ಏಕೆಂದರೆ ಇವರು ವ್ಯವಸ್ಥೆಯ ರಕ್ಷಣೆಗಾಗಿ ಏನೆಲ್ಲ ಕೆಲಸಮಾಡುತ್ತಾರೆ. ಸಂಸಾರದಿಂದ ಜನರನ್ನು ದೂರೀಕರಿಸುತ್ತಾರೆ, ಬಂಧಿಸುತ್ತಾರೆ. ಸೆರೆಮನೆಗಳಲ್ಲಿಡುತ್ತಾರೆ. ಗಡೀಪಾರು ಮಾಡುತ್ತಾರೆ, ಸದಾ ಅವರ ಮೇಲೆ ಕಾವಲಿರುತ್ತಾರೆ ಮತ್ತು ಕೆಲವು ಸಲ ಗುಂಡಿಟ್ಟು ಕೊಲ್ಲುತ್ತಾರೆ. ಹೀಗೇಕೆ ಮಾಡುತ್ತಾರೆ?

ಹಾಲಿ ರಾಜ್ಯವ್ಯವಸ್ಥೆ ಗಟ್ಟಿಯಾದುದೆಂದೂ ಬದಲಾಗದಂತೆ ರಕ್ಷಿಸಬೇಕೆಂದೂ ಅವರು ಹೇಗೆ ನಂಬುತ್ತಾರೆ?

ನಿಜವಾದ ದೈಹಿಕ ಹಿಂಸಾಚಾರದ ಜವಾಬ್ದಾರಿ ಇವರ ಮೇಲೆ ಬಿದ್ದಿದೆ. ಏಕೆಂದರೆ ಹೊಡೆಯುವವರು. ಕಟ್ಟಿಹಾಕುವವರು. ಬಂಧಿಸುವವರು ಎಲ್ಲ ಇವರೇ. ಇವರಿಲ್ಲದಿದ್ದರೆ ಏನೂ ಆಗುತ್ತಿರಲಿಲ್ಲ. ಈ ಸೈನಿಕರು. ಪೋಲಿಸರು. ಆಜ್ಞೆಯನ್ನು ಪಾಲಿಸುವುದಕ್ಕಾಗಿ ಯಾವ ಬಗೆಯ ಹಿಂಸಾಚಾರಕ್ಕೂ ಕೊಲೆಗೂ ಸಿದ್ಧರಾಗಿರುತ್ತಾರೆ. ಹಾಗೆ ಇವರು ಒಪ್ಪದಿದ್ದರೆ? ಆಗ ಮೃತ್ಯು ಶಾಸನವನ್ನು ಬರೆಯುವವರಲ್ಲಿ. ಬಂಧನದ ವಾರೆಂಟ್ ಹೊರಡಿಸುವವರಲ್ಲಿ. ಉಚ್ಚಾಟನೆಯ ಆಜ್ಞೆ ಹೊರಡಿಸುವ ಅಧಿಕಾರಿಗಳಲ್ಲಿ ಯಾರೊಬ್ಬರೂ ಸಾವಿರದಲ್ಲಿ ಒಂದುಭಾಗದಷ್ಟು ಕೂಡ ಹಿಂಸೆ. ಕೊಲೆ. ಬಂಧನ. ನೇಣುಗಳನ್ನು ಯಶಸ್ವಿಯಾಗಿ ನಿರ್ವಹಿಸಲು ಸಾಧ್ಯವಾಗುತ್ತಿರಲಿಲ್ಲ. ಅವರೆಲ್ಲಾ ಶಾಂತವಾಗಿ ತಮ್ಮ ಡೆಸ್ಕುಗಳ ಮುಂದೆ ಕುಳಿತು ಕೊಲ್ಲಬೇಕೆಂದೊ. ಹಿಂಸಿಸಬೇಕೆಂದೊ ಬಗೆ ಬಗೆಯಾಗಿ ಬರೆದುಬಿಡುತ್ತಾರೆ. ಅವರ ಕಣ್ಣಿಗೆ ಒಂದೂ ಬೀಳುವುದಿಲ್ಲ ಏಕೆಂದರೆ ಅವರ ಆಜ್ಞೆಯನ್ನು ಅವರೇ ಜಾರಿಗೆ ತರುವುದಿಲ್ಲ. ಎಲ್ಲೋ ದೂರದಲ್ಲಿರುವ ಗುಲಾಮೀ ವ್ಯಕ್ತಿಗಳು ಅದನ್ನು ನಿರ್ವಹಿಸುತ್ತಾರೆ.

ಇಂದಿನ ವ್ಯವಹಾರ ಜೀವನದಲ್ಲಿ ಬಳಕೆಯಲ್ಲಿರುವ ಎಲ್ಲ ಅನ್ಯಾಯಗಳು ಮತ್ತು ದುಷ್ಕೃತ್ಯಗಳು ರೂಢಿಯಾಗಿರುವುದು ಏಕೆಂದರೆ ಸದಾ ಇಂಥ ಕಾರ್ಯಾಚರಣೆಗಳಲ್ಲಿ

ತೊಡಗಬಲ್ಲ ಜನ ಇದ್ದೇ ಇರುತ್ತಾರೆ. ಅವರು ಮುಂದೆ ಬರದೆ ಹೋದರೆ ದಬ್ಬಾಳಿಕೆಯಿಂದ ಪೀಡಿತರಾದ ಮುಗ್ಧ ಜನ ವರ್ಗದ ಮೇಲೆ ಹಿಂಸಾಚಾರ ನಡೆಸಲು ಯಾರೂ ಮುಂದೆ ಬರುತ್ತಿರಲಿಲ್ಲ. ಅಷ್ಟೇ ಅಲ್ಲ ಈಗ ಆರಾಮವಾಗಿ ತುಂಬ ಧೈರ್ಯದಿಂದ ತೀರ್ಪು ಆಜ್ಞೆಗಳನ್ನು ಬರೆಯುವ ಜನಕ್ಕೆ ಅಂಥ ದೊಡ್ಡ ಸಾಹಸ ಕಾರ್ಯಗಳನ್ನು ಮಾಡುವ ಧೈರ್ಯ ಇರುತ್ತಿರಲಿಲ್ಲ.

ಇನ್ನೂ ಒಂದು ಸಂಗತಿ. ಈ ಸೈನಿಕವರ್ಗ ಹಿಂಸಾಚಾರಕ್ಕೆ ಕೊಲೆಗೆಲಸಕ್ಕೆ ಆಜ್ಞೆ ಬಂದಕೂಡಲೆ ಸಿದ್ಧವಾಗಿ ನಿಲ್ಲದಿದ್ದರೆ ಮೈಗಳ್ಳನಾದ ಜಮೀನುದಾರರು ತಮ್ಮದಲ್ಲದ ಜಮೀನನ್ನು ಇಷ್ಟು ಧೈರ್ಯದಿಂದ ತನಗೆ ಬೇಕೆಂದು ಕೇಳುತ್ತಿರಲಿಲ್ಲ. ಭೂಮಿಯಲ್ಲಿ ಕೆಲಸಮಾಡುವ ರೈತರೇ ಭೂಮಿಯಿಲ್ಲದೆ ನರಳುತ್ತಿರುವಾಗ ಕೆಲಸಮಾಡದೆ ಮೈಗಳ್ಳನಾದ ಜಮೀನುದಾರ ಅದರ ಮೇಲೆ ಹಕ್ಕನ್ನು ಸ್ಥಾಪಿಸುವ ಸಾಹಸಮಾಡುತ್ತಿರಲಿಲ್ಲ. ಅದೇರೀತಿ ರೈತಾಪಿ ವರ್ಗದಿಂದಲೇ ಕೃತ್ರಿಮವಾಗಿ ಸಂಪಾದಿಸಿ ಕೂಡಿಹಾಕಿದ ಧಾನ್ಯವನ್ನು ಹೊಟ್ಟೆಗಿಲ್ಲದೆ ಸಾಯುತ್ತಿರುವ ಜನಗಳ ಮಧ್ಯವೇ ಬಹುಕಾಲ ಬಳಸದೆ ದಾಸ್ತಾನುಮಾಡಿ ಲಾಭವನ್ನು ಗಳಿಸುವ ಧೈರ್ಯವನ್ನು ವರ್ತಕರು ಮಾಡುತ್ತಿರಲಿಲ್ಲ. ಆದರೆ ಈ ಸೈನಿಕ ವರ್ಗ ಇರುವುದರಿಂದ. ಮೇಲಧಿಕಾರಿಗಳ ಹಿಂಸಾಚಾರದ. ಕೊಲೆಯ ಆಜ್ಞೆಯನ್ನು ಅವರು ಚಾಚೂ ತಪ್ಪದೆ ಜಾರಿಗೆ ತರುವುದರಿಂದ ರೈತರಿಗೆ ನ್ಯಾಯವಾಗಿ ಬರಬೇಕಾದ ಅವರೇ ಬೆಳೆಸಿದ್ದ ಮರಮುಟ್ಟುಗಳನ್ನು ಅವರಿಗೆ ಕೊಡದೆ ವಂಚಿಸಬಾರದು ಎಂಬ ಅಂಶ ಜಮೀನುದಾರನ ತಲೆಗೆ ಹೋಗುವುದೇ ಇಲ್ಲ. ಹೊಟ್ಟೆಗಿಲ್ಲದೆ ನರಳುತ್ತಿರುವ ಜನರಿಂದ ಸುಲಿದ ಹಣದಿಂದ ಸಂಬಳ ಪಡೆಯುತ್ತಿದ್ದೇವೆಂಬ ಅಂಶ ಅವರನ್ನೇ ತೊತ್ತಳದುಳಿಯುವ ಅಧಿಕಾರಿ ವರ್ಗದ ತಲೆಗೆ ಹೋಗುವುದೇ ಇಲ್ಲ. ಅದನ್ನು ಮರೆತವರ ಹಾಗೆ ಈ ಅಧಿಕಾರ ವರ್ಗದ ಜನ. ಸತ್ಯವನ್ನೇ ನುಡಿಯುವ ಅಸತ್ಯದ ಪೊಳ್ಳನ್ನು ಹೊರಗೆಳೆಯುವ ಜನರನ್ನು[2] ಹಿಂಸಿಸುವ. ಬಂಧಿಸುವ. ದೇಶದಿಂದ ಉಚ್ಚಾಟಿಸುವ ಕಾರ್ಯದಲ್ಲಿ ನಿರತರಾಗುತ್ತಾರೆ. ಅವರ ಕೋರಿಕೆಯಂತೆಯೇ ಎಲ್ಲ ಕಾರ್ಯಗಳೂ ಕಡ್ಡಾಯವಾಗಿ ನೆರವೇರುತ್ತವೆ. ಏಕೆಂದರೆ ಕೊಲೆ ಹಿಂಸಾಚಾರಗಳ ಮೂಲಕ ತಮ್ಮ ಎಲ್ಲ ಬೇಡಿಕೆಗಳನ್ನು ಪೂರೈಸಬಲ್ಲಂಥ ಗುಲಾಮ ಸೈನಿಕವರ್ಗ ಸದಾ ತಮ್ಮ ಕೈಯಲ್ಲಿರುತ್ತದೆಂಬ ಸಂಗತಿ ಅಧಿಕಾರವರ್ಗದವರಿಗೆ ಸಂಪೂರ್ಣವಾಗಿ ಮನದಟ್ಟಾಗಿದೆ.

ಇಂಥ ಒಂದು ಪ್ರಬಲ ನಂಬಿಕೆಯೇ ಎಲ್ಲ ಪೀಡಕರ ದುಷ್ಕೃತ್ಯಗಳಿಗೆ ಮೂಲ ಪ್ರೇರಣೆಯಾಗಿದೆ. ನೆಪೋಲಿಯನ್‌ನಿಂದ ಹಿಡಿದು. ಗುಂಪಿನ ಮೇಲೆ ಗುಂಡುಹಾರಿಸಲು ಆಜ್ಞೆಕೊಡುವ ತುಂಬಾ ಅಮುಖ್ಯನಾದ ಒಬ್ಬ ಕಂಪನಿ ಕಮಾಂಡರನವರೆಗೆ ಈ ಮಾತು

---

2 ನಾನ್ ಕನ್‌ಫಾರ್ಮಿಸ್ಟ್ ರೈತರ ಮೇಲೆ ನಡೆಸಿದ ಧಾರ್ಮಿಕ ದಳ್ಳಿಗೂ ಈ ಮಾತಿಗೂ ಸಂಬಂಧವಿದೆ. ಆ ಕಾಲದಲ್ಲಿ ಮತ್ತು ಮುಂದಿನ ದಿನಗಳಲ್ಲಿ ಈ ವಿಚಾರ ಟಾಲ್‌ಸ್ಟಾಯ್‌ನ ಗಮನವನ್ನು ತುಂಬ ಸೆಳೆದಿತ್ತು.

ಸತ್ಯ. ತಮ್ಮ ಹಿಂದೆ ನಿಂತು ಯಾವುದೇ ಬಗೆಯ ಆಜ್ಞೆಯನ್ನು ಪಾಲಿಸಲು ಸನ್ನದ್ಧರಾಗುವ ಆ ವಿಧೇಯ ಸೈನಿಕ ವರ್ಗದವರು ಒದಗಿಸುವ ಶಕ್ತಿಯ ಪರಿಣಾಮವಾಗಿ ನಾಯಕರ ಮದ ಉಕ್ಕೇರುತ್ತದೆ. ಅಂದರೆ ಹಿಂಸಾ ಕಾರ್ಯಗಳನ್ನು ಯಾರು ನಿಜವಾಗಿ ಕಾರ್ಯಗತಗೊಳಿಸುತ್ತಾರೋ ಅಂಥವರ ಮೇಲೆ ಎಲ್ಲಾ ಶಕ್ತಿಯೂ ನಿಂತಿದೆ. ಅವರೇ ಪೋಲೀಸರು ಮತ್ತು ಸೈನಿಕರು. ಪೋಲೀಸರು ಕೂಡ ಸೈನಿಕರ ಬೆಂಬಲ ಬೆನ್ನೆಲೆಯಲ್ಲಿರುವುದರಿಂದ ಮುಂದೆ ನುಗ್ಗುತ್ತಾರೆ. ಆದುದರಿಂದ ನಿಜವಾಗಿ ಸೈನಿಕರೆಂದೇ ಹೇಳಬೇಕು.

ಈ ಸೇನಾವರ್ಗದ ಜನ ಈ ಎಲ್ಲ ಭಯಂಕರ ಕಾರ್ಯಗಳನ್ನೂ ತಾವೇ ಸ್ವತಃ ಮಾಡುತ್ತಾರೆ. ಆದರಿಂದ ಅವರಿಗೆ ಸ್ವಂತಕ್ಕೆ ಅಂಥ ಪ್ರಯೋಜನವೇನೂ ಇಲ್ಲ. ಆದರೂ ಈ ಬಗೆಯ ಜನಕ್ಕೆ ಈಗ ಜಾಲ್ತಿಯಲ್ಲಿರುವ ಲಾಭದಾಯಕವಲ್ಲದ, ವಿನಾಶಕಾರಿಯಾದ ತಮಗೂ ತಾಪದಾಯಕವಾದ ವ್ಯವಸ್ಥೆಯೇ ಮುಂದುವರಿಯಬೇಕೆಂಬ ವಿಲಕ್ಷಣವಾದ ಭ್ರಮೆ ಬರಲು ಕಾರಣವೇನು?

ಈ ವಿಲಕ್ಷಣ ಭ್ರಮೆಯನ್ನು ಅವರಿಗೆ ಕರುಣಿಸಿದವರು ಯಾರು?

ತುಂಬ ತಾಪದಾಯಕವಾದ, ಅಪ್ರಯೋಜಕವಾದ ಮತ್ತು ತಮಗೂ ತಮ್ಮ ಸಮಸ್ತ ಜನವರ್ಗಕ್ಕೂ (ಇವರ ಸಂಖ್ಯೆ ಜನಸಂಖ್ಯೆಯ ಶೇಕಡ ತೊಂಬತ್ತರಷ್ಟು) ವಿನಾಶಕಾರಿಯಾದ ಅಷ್ಟೇ ಅಲ್ಲದೆ ತಮ್ಮ ಪ್ರಜ್ಞೆಗೆ ವಿರೋಧವಾದ ಈ ಕಾರ್ಯವನ್ನು ತಾವೇಕೆ ಮಾಡುತ್ತಿದ್ದೇವೆಂಬ ವಿಚಾರವಾಗಿ ಅವರು ಆತ್ಮಶೋಧನೆ ಮಾಡಿಕೊಂಡಿಲ್ಲ.

ನಾನು ಅನೇಕ ಸಲ ಎಷ್ಟೆಷ್ಟೋ ಸೈನಿಕರನ್ನು ಕೇಳಿದ್ದೇನೆ. "ದೇವರ ನ್ಯಾಯವು 'ಕೊಲ್ಲಬೇಡ' ಎಂದು ಹೇಳಿರುವಾಗ ನೀವು ಜನರನ್ನು ಹೇಗೆ ಕೊಲ್ಲುತ್ತೀರಿ?" ಸೈನಿಕರು ಯಾವುದನ್ನು ಸದಾ ಮರೆಯಬೇಕೆಂದಿರುತ್ತಾರೋ ಅದನ್ನೇ ನಾನು ಕೆದಕಿ ಕೇಳಿದಂತಾದಾಗ ಅವರು ತುಂಬ ಪೇಚು ಸಂಕಟಗಳಿಗೆ ಗುರಿಯಾಗಿರುವುದುಂಟು. "ಕೊಲ್ಲಬೇಡ" ಎಂಬ ಕಡ್ಡಾಯವಾದ ದೈವ ನಿಯಮವೊಂದಿದೆ ಎಂಬ ಸಂಗತಿ ಸೈನಿಕನಿಗೆ ಗೊತ್ತು. ಅಲ್ಲದೆ ಕಡ್ಡಾಯವಾದ ಮಿಲಿಟರಿ ವಿಧಿಗಳೂ ಇವೆಯೆಂದು ಅವನಿಗೆ ಗೊತ್ತು. ಇವೆರಡರ ನಡುವೆ ಇರುವ ಘರ್ಷಣೆಯನ್ನು ಕುರಿತು ಅವನು ಎಂದಿಗೂ ಯೋಚಿಸಿರಲಿಲ್ಲ. ನನಗೆ ಬಂದ ದುರ್ಬಲ ಉತ್ತರಗಳ ಸಾರಾಂಶ ಇಷ್ಟು: ಯುದ್ಧದಲ್ಲಿ ಕೊಲ್ಲುವುದು ಮತ್ತು ಸರಕಾರದ ಆಜ್ಞೆಯನ್ನು ಪಾಲಿಸಲು ಅಪರಾಧಿಗಳನ್ನು ಕೊಲ್ಲುವುದು ಇವೆರಡೂ ಸಾಮಾನ್ಯ ಕೊಲೆಯ ನಿಷಿದ್ಧ ವರ್ಗಕ್ಕೆ ಸೇರುವುದಿಲ್ಲ. ದೈವ ನಿಯಮದಲ್ಲಿ ಈ ಸೀಮಿತ ವ್ಯಾಖ್ಯಾನ ಇಲ್ಲವೆಂದು ಹೇಳಿ ನಾನು ಭ್ರಾತೃತ್ವ, ನೊಂದವರಿಗೆ ಕ್ಷಮಾಯಾಚನೆ, ಪ್ರೀತಿ ಈ ದೈವ ಬೋಧೆಗಳಿಗೂ ಕೊಲೆಯ ತತ್ತ್ವಕ್ಕೂ ಯಾವ ಹೊಂದಾಣಿಕೆಯೂ ಇಲ್ಲವೆಂದು ವಿವರಿಸಿದಾಗ ಅವರು ಅದಕ್ಕೆ ಸಾಮಾನ್ಯವಾಗಿ ಒಪ್ಪಿದರು. ಕೆಲವರು ತಿರುಗಿಸಿ ನನಗೇ ಒಂದು ಪ್ರಶ್ನೆ ಹಾಕಿದರು. "ಹಾಗಾದರೆ ಸರಕಾರ (ಇದು ಎಂದಿಗೂ ತಪ್ಪು ಮಾಡುವುದಿಲ್ಲವೆಂಬುದು ಅವರ ನಂಬಿಕೆಯಾಗಿತ್ತು)

ಆಗತ್ಯ ಬಿದ್ದಾಗಲೆಲ್ಲ ಸೈನ್ಯವನ್ನು ಯುದ್ಧಕ್ಕೆ ಕಳಿಸುವುದು ಏಕೆ? ತಪ್ಪಿತಸ್ಥರನ್ನು ಶಿಕ್ಷೆಗೆ ಒಳಪಡಿಸಬೇಕೆಂದು ಆಜ್ಞೆ ವಿಧಿಸುವುದು ಏಕೆ?" ಹಾಗೆ ಆಜ್ಞೆ ನೀಡುವುದರಿಂದ ಸರಕಾರವೂ ತಪ್ಪು ಮಾಡಿದಂತಾಗುತ್ತದೆ ಎಂದು ನಾನು ಉತ್ತರ ಕೊಟ್ಟಾಗ ಆ ಸೈನಿಕರಿಗೆ ಇನ್ನಷ್ಟು ದಿಗ್ಭ್ರಮೆಯಾಯಿತು. ಕೆಲವರು ನನ್ನೊಂದಿಗೆ ಮಾತನಾಡುವುದನ್ನೇ ನಿಲ್ಲಿಸಿ ಬಿಟ್ಟರು; ಇನ್ನು ಕೆಲವರು ನನ್ನ ಮೇಲೆ ಕೆನಲಿ ಕೆಂಡವಾದರು.

"ಅಂಥ ಒಂದು ದೈವ ನಿಯಮವೂ ಇರಬಹುದೋ ಏನೋ. ಈ ವಿಚಾರದಲ್ಲಿ ನಮಗಿಂತ ಬಿಷಪ್‌ರಿಗೆ ಹೆಚ್ಚಿನ ಜ್ಞಾನವಿರುತ್ತದೆ" ಎಂದು ಒಬ್ಬ ಸೈನಿಕ ಉತ್ತರಕೊಟ್ಟ. ಈ ಉತ್ತರದಿಂದ ಅವನಿಗೇ ತುಂಬ ಸಮಾಧಾನವಾಗಿ ಅವನು ಮುಂದೆ ಯೋಚಿಸುವುದನ್ನೇ ಕೈಬಿಟ್ಟಂತೆ ಕಾಣಿಸಿತು. ಈ ಧಾರ್ಮಿಕ ಗುರುಗಳು ಒಂದು ದೈವೀ ನಿಯಮವನ್ನು ಕಂಡುಹಿಡಿದಿರಬೇಕು. ಅದರ ಪ್ರಕಾರವೇ ತಮ್ಮ ಅಜ್ಜಪಜ್ಜಂದಿರು ಜಾರ್ ದೊರೆಯ ಅಥವಾ ಅವನ ವಂಶೀಯರ ಸೇವೆಮಾಡಿಕೊಂಡು ಬಂದಿರಬೇಕು. ಆದರಿಂದಲೇ ಲಕ್ಷಾಂತರ ಮಂದಿ ತನ್ನಂತೆಯೇ ಸೇವೆಗೆ ಬದ್ಧರಾಗಿರಬೇಕು ಎಂಬುದು ಅವನ ಗ್ರಹಿಕೆಯಾಗಿತ್ತು. ನಾನು ಹೇಳಿದ್ದೆಲ್ಲ ಬರಿಯ ವಿನೋದ ಎಂದೋ, ಸೂಕ್ಷ್ಮವಾದ ಒಗಟೆಂದೋ ಅಥವಾ ಬುರುಡೆಯೆಂದೋ ಅವನು ಭಾವಿಸಿದ್ದ.

"ಕೊಲೆ ಎಂಬುದು ಮನುಷ್ಯ ಮಾಡಬಹುದಾದ ಪಾಪವೇ ಕೃತ್ಯಗಳಲ್ಲಿ ಒಂದು" ಎಂದು ಸುವಾರ್ತೆ ಹೇಳುತ್ತದೆ. ನಮ್ಮ ಕ್ರಿಸ್ತೀಯ ಜಗತ್ತಿನಲ್ಲಿ ಪರಂಪರೆ. ಅಂತರ್ಬೋಧೆ ಮತ್ತು ಅದಮ್ಯವಾದ ಪ್ರಜ್ಞಾವಾಣಿಗಳಿಂದ ಪ್ರತಿಯೊಬ್ಬನೂ ಈ ಮಾತನ್ನು ಬಲವಾಗಿ ನಂಬುತ್ತಾನೆ. ಈ ಕೊಲೆಯ ಪಾತಕ ಎಲ್ಲರಿಗೂ ಸಮಾನವಾದದ್ದು. ಕೆಲವರಿಗೆ ಮಾತ್ರ ಸೀಮಿತವಾದದ್ದಲ್ಲ. ಆದ್ದರಿಂದ ಕೆಲವರು ಕೊಲೆ ಮಾಡಿದರೆ ಅದು ಪಾತಕ, ಇನ್ನು ಕೆಲವರು ಮಾಡಿದಾಗ ಪಾತಕವಲ್ಲ ಎಂಬುದು ಸರಿಯಲ್ಲ. ಹಾದರ, ಕಳ್ಳತನ ಅಥವಾ ಇನ್ನಾವುದೇ ಪಾತಕದಂತೆ ಕೊಲೆ ಒಂದು ಪಾತಕ ಎಂದಾದ ಮೇಲೆ ಯಾರನ್ನು ಕೊಂದರೂ ಅದು ಪಾಪ ಎಂಬ ಸಂಗತಿ ಎಲ್ಲರಿಗೂ ಗೊತ್ತು. ಆದರೂ, ದೇವರಿಂದ ನೇಮಕ ಹೊಂದಿ ಧಾರ್ಮಿಕ ಗುರುಗಳೆಂದು ಪರಂಪರೆಯಿಂದ ನಂಬುವ ಧರ್ಮ ಗುರುಗಳು ಕೊಲೆಗೆ ತಾತ್ವಿಕವಾಗಿ ಒಪ್ಪಿಗೆಕೊಟ್ಟಿದ್ದಾರೆ ಆಶೀರ್ವಾದವನ್ನೂ ಮಾಡಿದ್ದಾರೆ ಎಂಬ ಸಂಗತಿ ಚಿಕ್ಕಂದಿನಿಂದ ತಾರುಣ್ಯದವರೆಗೆ ಜನರ ಅನುಭವಕ್ಕೆ ಬಂದ ವಿಷಯವಾಗಿದೆ. ಅದೇ ರೀತಿಯಲ್ಲಿ ದೇಶದ ನಾಯಕರೂ ಧೈರ್ಯವಾಗಿ ಕೊಲೆಯ ವ್ಯವಸ್ಥೆ ಮಾಡುತ್ತಾ ತಾವೇ ಸ್ವತಃ ಕೊಲೆಯ ಉಪಕರಣಗಳನ್ನು ಹೆಮ್ಮೆಯಿಂದ ಹೊತ್ತು, ದೇಶದ ಮತ್ತು ದೇವರ ನಿಯಮದ ಹೆಸರಿನಲ್ಲಿ ಎಲ್ಲರೂ ಕೊಲೆಯಲ್ಲಿ ಭಾಗವಹಿಸಬೇಕೆಂದು ಕೋರುತ್ತಾರೆ. ಜನಕ್ಕೆ ಇಲ್ಲಿ ಒಂದು ಸಂದಿಗ್ಧ ಇರುವುದೆಂದು ಗೊತ್ತು. ಆದರೆ ಅದರ ಕಗ್ಗಂಟನ್ನು ಬಿಡಿಸಲು ಸಾಧ್ಯವಾಗದೆ ಈ ಸಂದಿಗ್ಧವು ತಮ್ಮ ಅಜ್ಞಾನದಿಂದ ಉಂಟಾಗಿದೆಯೇ ಹೊರತು ಬೇರೆಯಲ್ಲ ಎಂಬ ತೀರ್ಮಾನಕ್ಕೆ ಬಂದುಬಿಡುತ್ತಾರೆ. ಈ ಸಂದಿಗ್ಧದ ಸ್ಥೂಲತೆ ಮತ್ತು ಖಚಿತತೆಗಳೇ ಅವರ ಈ ತೀರ್ಮಾನ–ನಂಬಿಕೆಗಳಿಗೆ ಕಾರಣ.

ಖಚಿತವಾಗಿ ಪರಸ್ಪರ ವಿರೋಧವಾಗಿರುವ ಕ್ರಿಸ್ತತತ್ತ್ವ ಮತ್ತು ಕೊಲೆ ಇವೆರಡನ್ನು ಬುದ್ಧಿವಂತರಾದ ಧರ್ಮಗುರುಗಳು ಬಹಳ ಆತ್ಮವಿಶ್ವಾಸದಿಂದ ಬೋಧಿಸಬಲ್ಲರು ಎಂಬುದು ಸಾಮಾನ್ಯ ಯೋಧರಿಗೆ ಅರ್ಥವಾಗುವುದಿಲ್ಲ. ಮನೋವಿಕಾರವಿಲ್ಲದ ಹುಡುಗ ಅಥವಾ ತರುಣನು ತಾನು ತುಂಬ ಪವಿತ್ರ ವ್ಯಕ್ತಿಗಳೆಂದು ಜ್ಞಾನಿಗಳೆಂದು ತುಂಬ ದೊಡ್ಡವರೆಂದು ಗೌರವಿಸುವ ಧರ್ಮಗುರುಗಳು. ಯಾವ ಕಾರಣಕ್ಕೇ ಆಗಲಿ ಅಷ್ಟು ಹೀನಾಯಕರವಾದ ರೀತಿಯಲ್ಲಿ ತನ್ನನ್ನು ತಪ್ಪು ದಾರಿಗೆಳೆಯುತ್ತಿದ್ದಾರೆಂದು ಊಹಿಸಿಕೊಳ್ಳಲಾರ.

ಆದರೆ ನಿಜಕ್ಕೂ ನಡೆದಿರುವುದು. ಅವ್ಯಾಹತವಾಗಿ ನಡೆದು ಬಂದಿರುವುದು ಹೀಗೆಯೇ. ಹಿಂಸೆ ಮತ್ತು ಕೊಲೆ ಕ್ರಿಸ್ತಮತದೊಂದಿಗೆ ಸಮನ್ವಯಗೊಳ್ಳತಕ್ಕ ಅಂಶಗಳು. ರಾಜ್ಯದ ಹಿತದ ಕೆಲವು ಸಂದರ್ಭಗಳಲ್ಲಿ ಅವು ಅಂಗೀಕಾರಾರ್ಹವಾದವು ಮತ್ತು ತುಂಬ ಅಗತ್ಯವಾದವು ಎಂದು ಅವರು ಹೇಳುತ್ತಾರೆ. ಚಿಕ್ಕಮಕ್ಕಳಿಂದ ಹಿಡಿದು ಮುದುಕರವರೆಗೆ ಎಲ್ಲ ಕೆಲಸಗಾರರಿಗೆ ಉದಾಹರಣೆಗಳ ಮೂಲಕ ಮತ್ತು ನೇರ ಬೋಧನೆಯ ಮೂಲಕ ಮೊದಲಿಗೆ ಇದನ್ನು ತುರುಕುತ್ತಾರೆ. ಧಾರ್ಮಿಕವಾದ ಮತ್ತು ನೀತಿಯ ಪ್ರಶ್ನೆಗಳಿಗೆ ತಮ್ಮಲ್ಲೇ ಉತ್ತರ ಹುಡುಕಿಕೊಳ್ಳುವಷ್ಟು ವ್ಯವಧಾನ ಇಲ್ಲದಿರುವುದರಿಂದ ಜನತೆ ಇವರ ಬೋಧನೆಗೆ ಕಿವಿಗೊಡುತ್ತದೆ. ಎರಡನೆಯದಾಗಿ ಸಹಜವಾಗಿ ನಿರ್ಬಂಧನಪೂರ್ವಕವಾಗಿ ಮತ್ತು ಬಾಡಿಗೆಯ ಆಧಾರದ ಮೇಲೆ ಸೇರಿಸಿಕೊಂಡ ಸೈನಿಕರಿಗೆ ಈ ಹಿಂಸಾಚಾರ, ಕೊಲೆಗಳನ್ನು ನಡೆಸುವುದು ಒಂದು ಪವಿತ್ರ ಕರ್ತವ್ಯವೆಂದೂ ಮೆಚ್ಚುಗೆ ಬಹುಮಾನಗಳಿಗೆ ಯೋಗ್ಯವಾದ ಧೈರ್ಯಪೂರ್ಣ ಸಾಧನೆಯೆಂದೂ ಹೇಳಿ ಹೇಳಿ ಅವರ ಮನಸ್ಸಿಗೆ ಈ ವಿಚಾರವನ್ನು ತುಂಬಲಾಗುತ್ತದೆ.

ಮಕ್ಕಳಿಗೆ ಇಂದು ಕೊಡುತ್ತಿರುವ ಕಡ್ಡಾಯದ ಶಿಕ್ಷಣ ವ್ಯವಸ್ಥೆಯ ಕ್ರಮದಲ್ಲಿ ಇಂದು ಪ್ರಕಟಿಸುತ್ತಿರುವ ಎಲ್ಲ ಹೊಸ ಬಗೆಯ ಪುಸ್ತಕಗಳಲ್ಲಿ ಮತ್ತು ಸಂವಾದ ರೂಪಿಯಾದ ಬರಹಗಳಲ್ಲಿ ಸಾಮಾನ್ಯವಾಗಿ ಎಲ್ಲರಿಗೂ ಮಾಡುತ್ತಿರುವ ವಂಚನೆ ಇದು: ಹಿಂಸಾಕ್ರಮವು ಸಂಪೂರ್ಣವಾಗಿ ನ್ಯಾಯಬದ್ಧವಾದದ್ದು ಮತ್ತು ನೀತಿ. ಕ್ರಿಸ್ತತತ್ತ್ವಗಳೊಂದಿಗೆ ಯಾವುದೇ ಬಗೆಯ ಘರ್ಷಣೆಯನ್ನು ಅದು ಹೊಂದಿಲ್ಲ. ಹಿಂಸಾಕ್ರಮ ಎಂದರೆ ಅದರಲ್ಲಿ ಶಾರೀರಕ ಹಿಂಸೆ. ಬಂಧನಗಳು. ವಧೆ. ಸ್ಥಾನಿಕ ಅಥವಾ ವಿದೇಶೀ ಯುದ್ಧಗಳ ಸಂದರ್ಭಗಳಲ್ಲಿ ಹಾಲಿ ಇರುವ ಸರಕಾರದ ರಕ್ಷಣೆ ಮತ್ತು ಪೋಷಣೆಗಾಗಿ ಜನಹತ್ಯೆಮಾಡುವುದು ಇವೆಲ್ಲ ಸೇರಿದೆ. ಈ ಸರಕಾರ ಯಾವುದೇ ಬಗೆಯದಾಗಬಹುದು. ನಿರಂಕುಶಪ್ರಭುತ್ವ, ರಾಜಪದ್ಧತಿ. ರೂಢಿಯ ಆಸ್ತಿಕೆ. ಕಾನ್ಸಲ್ ಸರಕಾರ. ಮೊದಲ ಅಥವಾ ಮೂರನೆಯ ನೆಪೋಲಿಯನ್‌ನ ಅಥವಾ ಬೌಲಾಂಗರನ ಚಕ್ರಾಧಿಪತ್ಯ. ಸಂವಿಧಾನಬದ್ಧ ರಾಜಪದ್ಧತಿ. ಕಮ್ಯೂನ್. ಗಣರಾಜ್ಯ ಯಾವುದೇ ಆಗಬಹುದು.

ಶಾಲೆಗಳಲ್ಲಿ ಬಳಸಲಾಗುವ ಎಲ್ಲ ಪುಸ್ತಕಗಳಲ್ಲೂ ಸಂವಾದ ಗ್ರಂಥಗಳಲ್ಲೂ ಈ ಭಾವನೆಯನ್ನು ಹೇಳಲಾಗಿದೆ. ಜನರಿಗೆ ಅದು ಎಷ್ಟರಮಟ್ಟಿಗೆ ರಕ್ತಗತವಾಗಿ ಹೋಗಿದೆ

ಎಂದರೆ ಅವರು ಅದು ಸರಿಯೋ ತಪ್ಪೋ ಎಂಬ ವಿಮರ್ಶೆಯ ಗೋಜಿಗೆ ಕೂಡ ಹೋಗದೆ ಬೆಳೆದು, ಬದುಕಿ, ಸಾಯುತ್ತಾರೆ.

ಇದು ಒಂದು ಬಗೆಯ ವಂಚನೆ. ಸರ್ವವಂಚನೆ. ಎಲ್ಲರಲ್ಲೂ ಈ ಭಾವನೆಯನ್ನು ತುಂಬಲಾಗಿದೆ. ಆದರೆ ಇನ್ನೂ ಒಂದು ವಿಶೇಷ ಬಗೆಯ ವಂಚನೆ ಇದೆ. ರಾಜ್ಯವ್ಯವಸ್ಥೆಯ ರಕ್ಷಣೆ ಮತ್ತು ಪೋಷಣೆಗಾಗಿ ಹಿಂಸಾಚಾರ ಮತ್ತು ವಧೆಗಳನ್ನು ಕೈಕೊಂಡಿರುವ ಸೈನಿಕರ ಮೇಲೆ ಮತ್ತು ಪೋಲೀಸರ ಮೇಲೆ ಅದನ್ನು ಪ್ರಯೋಗಿಸಲಾಗಿದೆ.

ಮಿಲಿಟರಿ ನಿಬಂಧನೆಗಳನ್ನೆಲ್ಲ ರಷ್ಯನ್ ಮಿಲಿಟರಿ ಸಂಹಿತೆ ಸ್ಥೂಲವಾಗಿ ಹೀಗೆ ವಿವರಿಸುತ್ತದೆ:

(87ನೆಯ ವಿಧಿ) "ಮೇಲಧಿಕಾರಿಯ ಆಜ್ಞೆಗಳನ್ನು ಕರಾರುವಾಕ್ಕಾಗಿ ಮತ್ತು ಯಾವುದೇ ಕೊಂಕನ್ನೆತ್ತದೆ ಮಾಡತಕ್ಕದ್ದು. ಆಜ್ಞೆ ಒಳ್ಳೆಯದೇ, ಕೆಟ್ಟದ್ದೇ, ಅದನ್ನು ನಿರ್ವಹಿಸಲು ಸಾಧ್ಯವೇ ಎಂಬ ಯಾವ ಯೋಚನೆಯನ್ನು ಮಾಡದೆ ಖಚಿತವಾಗಿ ಆಜ್ಞೆಯನ್ನು ಪಾಲಿಸತಕ್ಕದ್ದು. ಯಾವಾಗಲೂ ಮೇಲಧಿಕಾರಿ ತಾನು ನೀಡಿದ ಆಜ್ಞೆಗಳ ಪರಿಣಾಮಕ್ಕೆ ಹೊಣೆಯಾಗಿರುತ್ತಾನೆ."

(88 ನೆಯ ವಿಧಿ) "ಕೆಳಗಿನವನು ಸರ್ವದಾ ಮೇಲಧಿಕಾರಿಯ ಆಜ್ಞೆಯಂತೆ ನಡೆಯತಕ್ಕದ್ದು. ಆದರೆ ಖಚಿತವಾಗಿ ಆತನಿಗೆ ಹಾಗೆ ಆಜ್ಞಾಪಾಲನೆ ಮಾಡುವುದರಿಂದ..." (ಇಲ್ಲಿ "ಹಾಗೆ ಆಜ್ಞಾಪಾಲನೆ ಮಾಡುವುದರಿಂದ ಖಚಿತವಾಗಿ ಆತನಿಗೆ ತಾನು ದೇವರ ನಿಯಮಗಳನ್ನು ಮುರಿಯುತ್ತಿದ್ದೇನೆ ಎನ್ನಿಸಿದಾಗ" ಎಂದು ಈ ವಾಕ್ಯ ಮುಂದುವರಿಯುತ್ತದೆಂದು ನಾವು ಭಾವಿಸಿದ್ದರೆ ಅದು ತಪ್ಪು)........."ಆದರೆ ಖಚಿತವಾಗಿ ಆತನಿಗೆ ಹಾಗೆ ಆಜ್ಞಾಪಾಲನೆ ಮಾಡುವುದರಿಂದ ಚಕ್ರವರ್ತಿಯ ಬಗೆಗೆ ವಿಧೇಯತೆ ಮತ್ತು ಸ್ವಾಮಿನಿಷ್ಠೆಗಳಿಗೆ ಅಪ್ರೋಹ ಬರುವುದಿಲ್ಲ ಎನ್ನಿಸುವವರೆಗೆ ಹಾಗೆ ಮಾಡತಕ್ಕದ್ದು."

ಒಬ್ಬ ಸೈನಿಕನು ಸರ್ವದಾ ತನ್ನ ಎಲ್ಲ ಮೇಲಧಿಕಾರಿಗಳ ಆಜ್ಞೆಗಳನ್ನು ಒಂದೂ ಬಿಡದಂತೆ ಪಾಲಿಸತಕ್ಕದ್ದು ಎಂದು ಸಂಹಿತೆ ಹೇಳುತ್ತದೆ. ಸೈನಿಕನ ಪಾಲಿಗೆ ಪಾಲನೆ ಎಂದರೆ ಮುಖ್ಯವಾಗಿ ವಧೆ ಎಂದರ್ಥ. ಅಂದರೆ ಸೈನಿಕನು ಮಾನವೀ ಮತ್ತು ದೈವೀ ನಿಯಮಗಳನ್ನೆಲ್ಲ ಮುರಿಯಬಹುದು. ಆದರೆ ಆ ಸಮಯದಲ್ಲಿ ಅಧಿಕಾರದಲ್ಲಿರತಕ್ಕವರ ಬಗೆಗೆ ವಿಧೇಯತೆ ಸ್ವಾಮಿನಿಷ್ಠೆಗಳನ್ನು ಮರೆಯಬಾರದು ಎಂದರ್ಥ.

ರಷ್ಯನ್ ಮಿಲಿಟರಿ ನಿಬಂಧನೆಗಳಲ್ಲಿ ಹೀಗೆ ಹೇಳಲಾಗಿದೆ. ಬೇರೆಬೇರೆ ರೀತಿಗಳಲ್ಲಿ ಹೇಳಲಾಗಿದ್ದರೂ ಜಗತ್ತಿನ ಎಲ್ಲ ಮಿಲಿಟರಿ ಸಂಹಿತೆಗಳೂ ಮುಖ್ಯವಾಗಿ ಇದನ್ನೇ ಹೇಳುತ್ತವೆ. ಅದು ಬೇರೆ ರೀತಿಯಲ್ಲಿರಲು ಸಾಧ್ಯವೇ ಇಲ್ಲ. ರಾಜ್ಯದ ಮತ್ತು ಸೈನ್ಯದ ಸಮಸ್ತ ಶಕ್ತಿಯೂ ಈ ವಂಚನೆಯಲ್ಲಿಯೇ ಅಡಗಿದೆ. ಅದು ಮನುಷ್ಯರಿಗೆ

ದೇವರ ಮತ್ತು ತಮ್ಮ ಪ್ರಜ್ಞೆಯ ಕರ್ತವ್ಯಗಳಿಂದ ವಿನಾಯಿತಿ ಕೊಡಿಸಿ ಬದಲಿಗೆ, ಆಜ್ಞೆ ನೀಡುತ್ತಿರುವ ಅಧಿಕಾರಿಗೆ ವಿಧೇಯರಾಗಿರಿ ಎಂದು ಹೇಳುತ್ತದೆ.

ಇದರ ಆಧಾರದ ಮೇಲೆ ಕೆಳಗಿನ ವರ್ಗದ ಸೈನಿಕರು ತಮಗೆ ನಿಜವಾಗಿ ಮಾರಕವಾಗಿರುವ ವ್ಯವಸ್ಥೆಯನ್ನೇ ಸುವ್ಯವಸ್ಥೆ ಎಂದು ತಿಳಿದು ಅದು ಉಳಿಯಬೇಕೆಂದೂ ಹಿಂಸೆ ಕೊಲೆಗಳಿಂದಲಾದರೂ ಅದನ್ನು ಬೆಂಬಲಿಸಬೇಕೆಂದೂ ಬಲವಾಗಿ ಆಶ್ವಾಸನೆ ಕೊಡುತ್ತಾರೆ.

ಮೇಲಿನವರ್ಗದವರು ಸತತ ಪ್ರಯತ್ನದ ಮೂಲಕ ಪ್ರಜ್ಞಾಪೂರ್ವಕವಾಗಿ ಈ ಭಾವನೆಯನ್ನು ಕೆಳವರ್ಗದವರ ಮೇಲೆ ತುಂಬಿದುದರ ಪರಿಣಾಮ ಇದು.

ಅದು ಬೇರೆ ಆಗಲೂ ಸಾಧ್ಯವಿಲ್ಲ. ಕೆಳಗಿನ ವರ್ಗದವರೇ ಸಂಖ್ಯಾದೃಷ್ಟಿಯಿಂದ ಹೆಚ್ಚಿನವರು. ಅವರು ತಮ್ಮ ಮನಸ್ಸಿಗೆ ವಿರುದ್ಧವಾದುದನ್ನೇ ಮಾಡುತ್ತ ತಮ್ಮ ಮೇಲೇ ತಿರಸ್ಕಾರ ಬೆಳೆಸಿಕೊಂಡು ಹೋಗುವಂತೆ ಮಾಡುವುದು. ಅವರನ್ನು ವಂಚಿಸಲು ಈ ಸಾಧನ ಅಗತ್ಯವಾಯಿತು. ಈಗ ನಡೆದಿರುವುದೂ ಅದೇ.

ಕೆಲವು ದಿನಗಳ ಹಿಂದೆ ಈ ನಾಚಿಕೆಗೆಟ್ಟ ವಂಚನೆಯು ಬಹಿರಂಗವಾಗಿ ಪ್ರಯೋಗಗೊಳ್ಳುತ್ತಿರುವುದನ್ನು ನೋಡಿದೆ. ಒಮ್ಮತದಿಂದ ನಾಚಿಕೆಗೆಟ್ಟ ರೀತಿಯಲ್ಲಿ ಅದು ಸಾಧ್ಯವಾದುದನ್ನು ನೋಡಿ ಮತ್ತೆ ಆಶ್ಚರ್ಯಪಟ್ಟೆ.

ನವೆಂಬರ್ ತಿಂಗಳ ಆರಂಭದಲ್ಲಿ ಟೂಲ ಪ್ರಾಂತದ ಮೂಲಕ ನಾನು ಹೋಗುತ್ತಿದ್ದೆ. ಕಾಂಟಿ ಕೌನ್ಸಿಲ್ ಕಚೇರಿಯ ಬಾಗಿಲ ಬಳಿ ಜನ ಒಟ್ಟಾಗಿ ಸೇರಿದ್ದನ್ನು ಮತ್ತೆ ನೋಡಿದೆ. ಕುಡಿದವರ ಕೂಗು ತಾಯಿ ಹೆಂಡತಿಯರ ಹೃದಯವಿದ್ರಾವಕ ಚೀರಾಟಗಳೆರಡನ್ನೂ ಕೇಳಿದೆ. ಸೈನ್ಯಕ್ಕೆ ಭರ್ತಿಮಾಡಿಕೊಳ್ಳುತ್ತಿದ್ದ ದೃಶ್ಯ ಅದು.

ಯಾವಾಗಲೂ ಅಷ್ಟೆ. ನನಗೆ ಅಂಥ ದೃಶ್ಯಗಳನ್ನು ನೋಡಿ ಸುಮ್ಮನಿರಲಾಗುವುದಿಲ್ಲ. ಯಾವುದೋ ಕೆಟ್ಟ ಮೋಡಿಯಿಂದ ಆಕರ್ಷಿತನಾದವನ ಹಾಗೆ ನಾನು ಅಲ್ಲಿಗೆ ಹೋಗುತ್ತೇನೆ. ಅದರಂತೆ ಮತ್ತೆ ಅಲ್ಲಿಗೆ ಹೋದೆ; ಜನಗಳ ಮಧ್ಯೆ ನಿಂತೆ: ಸುತ್ತ ನೋಡಿದೆ: ವಿಚಾರಿಸಿದೆ. ಒಂದು ದೊಡ್ಡ ಪಟ್ಟಣದಲ್ಲಿ ಹಾಡೇ ಹಗಲಿನಲ್ಲಿ ಹೀಗೆ ಯಾವ ವಿರೋಧವೂ ಇಲ್ಲದೆ ಈ ಹೀನ ಅಪರಾಧ ನಡೆಯುತ್ತಿರುವುದನ್ನು ಕಂಡು ನನಗೆ ಮತ್ತೆ, ಆಶ್ಚರ್ಯವಾಯಿತು.

ಹಿಂದಿನ ವರ್ಷಗಳಲ್ಲಿಯಂತೆ ಈ ನವೆಂಬರ್ 1 ರಂದು ಕೂಡ ಹತ್ತುಕೋಟಿ ಜನರಿರುವ ರಷ್ಯದ ಎಲ್ಲ ಹಳ್ಳಿ ಕೊಪ್ಪಲುಗಳಲ್ಲಿ. ಸೈನ್ಯಕ್ಕೆ ಭರ್ತಿಯಾದ (ಅದರಲ್ಲಿ ತಮ್ಮ ಮಕ್ಕಳೂ ಇರಬಹುದು) ತರುಣರನ್ನೆಲ್ಲ ಸೇರಿಸಿ ಹಿರಿಯರು ಪಟ್ಟಣಕ್ಕೆ ಕರೆತಂದಿದ್ದರು.

ದಾರಿಯಲ್ಲಿ ಈ ಸೈನ್ಯ ಪ್ರವೇಶಿಗಳು ಉದ್ದಕ್ಕೂ ಕುಡಿದುಕೊಂಡೇ ಬಂದಿದ್ದರೂ ಹಿರಿಯರು ಅಡ್ಡಿಪಡಿಸಿರಲಿಲ್ಲ. ಹೆಂಡತಿ ಮಕ್ಕಳನ್ನು ಬಿಟ್ಟು ಪವಿತ್ರವಾದದ್ದನ್ನೆಲ್ಲ ವರ್ಜಿಸಿ ಹುಚ್ಚು ಪ್ರಯಾಣವನ್ನು ಕೈಗೊಂಡು ಕೊಲೆಯ ನಿರ್ಜೀವ ಉಪಕರಣಗಳಾಗಿ ಹೋಗುವುದು ಹಾಗೆ ಕುಡಿತದಿಂದ ಬುದ್ಧಿಜಡರಾಗದಿದ್ದರೆ ಸೈನಿಕರಿಗೆ ಒಂದು ಯಾತನಾಮಯ ಅನುಭವವಾದೀತೆಂಬ ಭಾವನೆ ಹಿರಿಯರಿಗಿದ್ದೀತು. ಹೀಗೆ ಅವರು ಕುಡಿಯುತ್ತ ಆಣೆಹಾಕುತ್ತ, ಹಾಡುತ್ತ, ಬಡಿದಾಡುತ್ತ, ಕುಂಟುತ್ತ ದಾರಿಗುಂಟ ಸಾಗಿದ್ದರು. ಇಡೀ ರಾತ್ರಿಯನ್ನು ಅವರು ಹೆಂಡದಂಗಡಿಯಲ್ಲಿ ಕಳೆದಿದ್ದರು. ಬೆಳಗ್ಗೆ ಅವರಿಗೆ ಇನ್ನೊಂದು ಸುತ್ತು 'ಪಾನೀಯ' ಆಗಿತ್ತು. ಈಗ ಅವರೆಲ್ಲ ಕೌಂಟಿ ಕೌನ್ಸಿಲ್ ಕಚೇರಿಯ ಬಳಿ ಸೇರಿದ್ದರು.

ಕೆಲವರು ಹೊಸ ಕುರಿಯ ಚರ್ಮದ ಕೋಟುಗಳನ್ನು ಧರಿಸಿ ಕೊರಳಿಗೆ ಹೆಣಿಗೆ ಹಾಕಿದ ಕೊರಳವಸ್ತ್ರ ಸುತ್ತಿಕೊಂಡು ಕುಡಿದ ಮತ್ತಿನ ಕಣ್ಣುಗಳಿಂದ ಕೂಡಿ ಆವೇಶ ಭರಿತರಾಗಿ ಶೂರರಂತೆ ಕೂಗುತ್ತಿದ್ದರು. ಇನ್ನು ಕೆಲವರು ತೆಪ್ಪಗೆ ಮಂಕಾಗಿ, ಅಳು-ತ್ತಿರುವ ತಾಯಿ ಪತ್ನಿಯರ ಮಧ್ಯೆ ಸೇರಿಕೊಂಡು ತಮ್ಮ ಸರದಿಗಾಗಿ ಕಾಯುತ್ತಿದ್ದರು. (ಭರ್ತಿಮಾಡಿಕೊಳ್ಳುವ ದಿನದಂದು, ಅಂದರೆ ಪರೀಕ್ಷೆಗೆ ಒಳಪಡಿಸಿದ ದಿನದಂದು ನಾನು ಅಲ್ಲಿದ್ದೆ.) ಉಳಿದವರು ಕಾಯುವ ಕೋಣೆಯಲ್ಲಿ ಕಿಕ್ಕಿರಿದು ಸೇರಿದ್ದರು.

ಕಛೇರಿಯ ಒಳಗಡೆ ಕೆಲಸ ಬಹಳ ತೀವ್ರಗತಿಯಿಂದ ಸಾಗಿದೆ. ಬಾಗಿಲು ತೆರೆದು ಕಾವಲುಗಾರ ಪೀಟರ್ ಸಿದೆರೋವ್‌ನನ್ನು ಕರೆಯುತ್ತಾನೆ. ಪೀಟರ್ ಸಿದೆರೋವ್ ಹೊರಡುತ್ತಾನೆ. ಒಳಗೆ ಹೋಗಿ ಅಭ್ಯರ್ಥಿಗಳು ಬಟ್ಟೆ ಕಳಚಬೇಕಾದ ಗಾಜಿನ ಬಾಗಿಲಿರುವ ಒಂದು ಸಣ್ಣಕೋಣೆಯೊಳಗೆ ಹೋಗುತ್ತಾನೆ. ಅಲ್ಲಿ ಇವನ ಒಬ್ಬ ಗೆಳೆಯ ಸೇವೆಗೆ ಅಂಗೀಕೃತನಾಗಿ ಪರೀಕ್ಷಾ ಕೋಣೆಯಿಂದ ಬರೀ ಮೈಯಿಂದ ಬಂದು ಬೇಗಬೇಗ ಬಟ್ಟೆ ಹಾಕಿಕೊಳ್ಳುತ್ತಿದ್ದಾನೆ. ಅವನ ಹಲ್ಲು ಕಿರುಗುಟ್ಟುತ್ತಿದೆ. ಅವನ ಮುಖ ನೋಡಿದ ಕೂಡಲೇ ಈ ಗೆಳೆಯ ತೇರ್ಗಡೆಯಾಗಿದ್ದಾನೆಂಬ ಸಂಗತಿ ಪೀಟರ್ ಸಿದೆರೋವ್‌ಗೆ ಗೊತ್ತಾಗುತ್ತದೆ. ಅವನನ್ನು ಪ್ರಶ್ನಿಸಬೇಕೆಂದು ಆಸೆಪಡುತ್ತಾನೆ. ಆದರೆ ಅವನನ್ನು ಅವಸರಪಡಿಸಿ ಬಟ್ಟೆ ಕಳಚಲು ಅಪ್ಪಣೆ ಮಾಡುತ್ತಾರೆ. ಅವನು ಕುರಿಚರ್ಮದ ಕೋಟನ್ನು ಕಳಚುತ್ತಾನೆ. ಕಾಲಿನ ಉದ್ದನೆಯ ಬೂಟನ್ನು ಇನ್ನೊಂದು ಕಾಲಿನಿಂದ ಮೆಟ್ಟಿ ಕಳಚುತ್ತಾನೆ. ವೇಸ್ಟ್‌ಕೋಟನ್ನು ತೆಗೆದುಹಾಕುತ್ತಾನೆ. ಶರಟನ್ನು ತಲೆಯ ಭಾಗದಿಂದ ಮೇಲೆಳೆಯುತ್ತಾನೆ. ಬತ್ತಲೆಯಾಗಿ ಮೂಳೆಗಳು ಕಾಣುವಂತೆ. ಚಳಿಯಲ್ಲಿ ತುಂಬ ನಡುಗುತ್ತ, ಮದ್ಯದ ತಂಬಾಕಿನ ಮತ್ತು ಬೆವರಿನ ದುರ್ಗಂಧವನ್ನು ಮೂಸುತ್ತಾ ತನ್ನ ಮಾಂಸಲವಾದ ಬರಿದೋಳಿನಿಂದ ಏನುಮಾಡಬೇಕೆಂದು ತಿಳಿಯದೆ ಬರಿಗಾಲಿನಲ್ಲಿ ಪರೀಕ್ಷೆಯ ಕೊಠಡಿಗೆ ಹೋಗುತ್ತಾನೆ.

ಪರೀಕ್ಷೆಯ ಕೊಠಡಿಯಲ್ಲಿ ಅವನ ಎದುರಿಗೆ ಒಂದು ದೊಡ್ಡ ಚಿನ್ನದ ಚೌಕಟ್ಟಿನೊಳಗೆ ನಡುಪಟ್ಟಿಕಟ್ಟಿದ ಸಮವಸ್ತ್ರಧಾರಿಯಾದ ಜಾರ್‌ದೊರೆಯ ಛಾಯಾಚಿತ್ರ ತೂಗುಹಾಕಲ್ಪಟ್ಟಿದೆ. ಒಂದು ಮೂಲೆಯಲ್ಲಿ ಅಂಗಿಯನ್ನೂ, ಮುಳ್ಳಿನ ಕಿರೀಟವನ್ನೂ ಧರಿಸಿದ ಕ್ರಿಸ್ತನ ಒಂದು ಸಣ್ಣ ಚಿತ್ರವಿದೆ. ಕೋಣೆಯ ಮಧ್ಯಭಾಗದಲ್ಲಿ ಒಂದು ಟೇಬಲ್ ಹಸಿರು ಬಣ್ಣದ ಹೊದಿಕೆಯಿಂದ ಅಲಂಕೃತವಾಗಿದೆ. ಅದರ ಮೇಲೆ ಕಾಗದ ಪತ್ರಗಳು ಹರಡಿಕೊಂಡಿವೆ. ಅಲ್ಲೇ ಹದ್ದಿನ ಚಿತ್ರವಿರುವ, ಮೂರಂಚಿನ ಒಂದು ಅಲಂಕರಣ ವಸ್ತು. ಅದರ ಹೆಸರು 'ಧರ್ಮಗನ್ನಡಿ'. ಕೋಣೆಯ ಸುತ್ತ ಸೇನೆಗೆ ಸೇರಿಸಿಕೊಳ್ಳಲು ಪರೀಕ್ಷಾಧಿಕಾರಿಗಳು ಬಹಳ ಸಮಾಧಾನ ಚಿತ್ತದಿಂದ ವಿಶ್ವಾಸದ ನೋಟವನ್ನು ಬೀರುತ್ತಾ ಕುಳಿತಿದ್ದಾರೆ. ಒಬ್ಬ ಸಿಗರೇಟ್ ಸೇದುತ್ತಿದ್ದಾನೆ. ಇನ್ನೊಬ್ಬ ಕಾಗದ ಪತ್ರಗಳನ್ನು ಮಗುಚಿಹಾಕುತ್ತಿದ್ದಾನೆ. ಪೀಟರ್ ಸಿದೆರೋವ್ ಒಳಗೆ ಬಂದ ಕೂಡಲೆ ಕಾವಲುಗಾರ ಅವನ ಬಳಿ ಹೋಗಿ ಅವನನ್ನು ಒಂದು ಅಳತೆಯ ಪಟ್ಟಿಯ ಕೆಳಗೆ ನಿಲ್ಲಿಸುತ್ತಾನೆ. ಅವನ ಕೆನ್ನೆ ಹಿಡಿದು ಮೇಲೆತ್ತಿ ಕಾಲನ್ನು ನೇರವಾಗಿ ಇರಿಸುತ್ತಾನೆ. ಸಿಗರೇಟು ಹಿಡಿದಿದ್ದ ಮನುಷ್ಯ ಬರುತ್ತಾನೆ. ಈತನೇ ವೈದ್ಯ. ಅವನು ಸಿದೆರೋವ್‌ನ ಮುಖದ ಕಡೆ ನೋಡುವುದಿಲ್ಲ. ಅದರಾಚೆ ಇನ್ನೆಲ್ಲೋ ನೋಡುತ್ತಿರುತ್ತಾನೆ. ಒಂದು ಬಗೆಯ ಬೇಸರದ ಮುಖಭಾವದಿಂದ ಅವನು ಸಿದೆರೋವ್‌ನ ದೇಹವನ್ನು ಸವರುತ್ತಾನೆ. ಅವನನ್ನು ಅಳೆಯುತ್ತಾನೆ. ಚಿವುಟುತ್ತಾನೆ. ಆತನ ಬಾಯಿತೆರೆಸುವಂತೆ ಕಾವಲಿನವನಿಗೆ ಹೇಳುತ್ತಾನೆ. ಉಸಿರಾಡಬೇಕೆಂದೂ ಏನನ್ನಾದರೂ ಹೇಳಬೇಕೆಂದೂ ನಿರ್ದೇಶನ ಕೊಡುತ್ತಾನೆ. ಸುತ್ತ ಕುಳಿತವರಲ್ಲಿ ಒಬ್ಬ ಏನನ್ನೋ ಬರೆದುಕೊಳ್ಳುತ್ತಾನೆ. ಸಿದೆರೋವ್‌ನ ಮುಖವನ್ನು ಒಂದು ಸಲ ಕೂಡ ನೋಡದ ಆ ವೈದ್ಯ ಕೊನೆಗೆ "ಈತನನ್ನು ಅಂಗೀಕರಿಸಬಹುದು. ಮುಂದಿನವನು ಬರಲಿ" ಎಂದು ಹೇಳುತ್ತಾನೆ. ಸುಸ್ತಾದವನಂತೆ ಟೇಬಲ್‌ನ ಬಳಿ ಮತ್ತೆ ಕುಳಿತು ಕೊಳ್ಳುತ್ತಾನೆ. ಮತ್ತೆ ಯೋಧರು ಒಳಗೆ ಬಂದ ಈ ತರುಣನನ್ನು ಆತುರ ಪಡಿಸುತ್ತಾರೆ. ಅವನು ಅವಸರದಲ್ಲಿ ಹೇಗೆಹೇಗೋ ಶರಟನ್ನು ಎಳೆದುಕೊಳ್ಳುತ್ತಾನೆ. ತೋಳು ಸಿಗದೆ ತಡಕಾಡುತ್ತಾನೆ. ಚಲ್ಲಣವನ್ನು ಬೇಗ ಬೇಗ ತೊಟ್ಟುಕೊಳ್ಳುತ್ತಾನೆ. ಕಾಲುಪಟ್ಟಿಯನ್ನು ಕಾಲಸುತ್ತ ಸುತ್ತಿಕೊಳ್ಳುತ್ತಾನೆ. ಬೂಟುಗಳನ್ನು ಹಾಕಿಕೊಳ್ಳುತ್ತಾನೆ. ಕೊರಳಪಟ್ಟಿ ಮತ್ತು ಟೋಪಿಗಳನ್ನು ಹುಡುಕುತ್ತಾನೆ. ಕುರಿಯ ಚರ್ಮದ ಕೋಟನ್ನು ತೋಳಸಂದಿಯಲ್ಲಿ ತುರುಕಿಕೊಳ್ಳುತ್ತಾನೆ. ಮುಂದೆ ಅವನನ್ನು ಮುಖ್ಯ ಹಜಾರಕ್ಕೆ ಕರೆತರಲಾಗುತ್ತದೆ. ಅಲ್ಲಿ ಒಂದು ಬೆಂಚು. ಆ ಬೆಂಚಿನ ಹಿಂದೆ ದಾಖಲಾದ ಇತರ ಅಭ್ಯರ್ಥಿಗಳು ಕಾದಿದ್ದಾರೆ. ದೂರದಲ್ಲಿ ಒಬ್ಬ ಸೈನಿಕ ಬಂದೂಕನ್ನು ಹಿಡಿದು ಅವರನ್ನೆಲ್ಲಾ ಕಾಯುತ್ತಾನೆ. ಅವರೇನಾದರೂ ಓಡಲು ಪ್ರಯತ್ನಿಸಿದರೆ ತಿವಿದು ಕೊಲ್ಲಲು ಸಿದ್ಧನಾಗಿ ನಿಂತಿದ್ದಾನೆ. ಈಗ ಸೈನಿಕನಾಗಿರುವ ಅತ ಅವರಂತೆಯೇ ಒಬ್ಬ ಹಳ್ಳಿಗ. ದೂರದ ಪ್ರಾಂತದವನು.

ಈ ಮಧ್ಯೆ ಪೋಲೀಸರ ನಿರ್ಬಂಧಕ್ಕೆ ಒಳಗಾಗಿದ್ದ ತಂದೆ ತಾಯಿ ಪತ್ನಿಯರ ಗುಂಪು ಬಾಗಿಲ ಬಳಿ ಜಮಾಯಿಸಿ ಯಾರು ಯಾರು ಪ್ರವೇಶ ಪಡೆದಿದ್ದಾರೆ, ಯಾರು ತಿರಸ್ಕರಿಸಲ್ಪಟ್ಟಿದ್ದಾರೆ ಎಂದು ತಿಳಿಯಲು ಯತ್ನಿಸುತ್ತದೆ. ತಿರಸ್ಕೃತನಾದ ಒಬ್ಬ ಹುಡುಗ ಅವರ ಬಳಿಗೆ ಬಂದು ಪೆಟ್ರೂಕನನ್ನು ಸೇನೆಗೆ ಭರ್ತಿಮಾಡಿಕೊಂಡಿದ್ದಾರೆ ಎಂದು ಸುದ್ದಿಕೊಡುತ್ತಾನೆ. ಪೆಟ್ರೂಕನ ಚಿಕ್ಕವಯಸ್ಸಿನ ಹೆಂಡತಿ ಗಟ್ಟಿಯಾಗಿ ಚೀರುತ್ತಾಳೆ. ಏಕೆಂದರೆ ಸೇನೆಗೆ ಸೇರುವುದು ಎಂದರೆ ನಾಲ್ಕೈದು ವರ್ಷಗಳವರೆಗೆ ಅಗಲಿರುವುದು ಮತ್ತು ಯೋಧನ ಹೆಂಡತಿಯಾಗಿ ಅಡಿಗೆ ಮನೆಯಲ್ಲಿ ಸೇವೆಮಾಡುತ್ತಾ ಭ್ರಾಂತ ಜೀವನವನ್ನು ನಡೆಸುವುದು.

ಇಷ್ಟರಲ್ಲಿ ಉದ್ದಕೂದಲಿನ. ಉಳಿದೆಲ್ಲರಿಗಿಂತ ತನ್ನನ್ನು ಪ್ರತ್ಯೇಕಿಸಿಕೊಳ್ಳುವ ವಿಚಿತ್ರ ಪೋಷಾಕಿನ ಒಬ್ಬ ಮನುಷ್ಯ ವಾಹನದಲ್ಲಿ ಬರುತ್ತಾನೆ. ಗಾಡಿಯಿಂದ ಇಳಿದು ಆತ ಕೌಂಟಿಯ ಕೌನ್ಸಿಲ್ ಕಛೇರಿಗೆ ಹೋಗುತ್ತಾನೆ. ಪೋಲೀಸರು ಜನಜಂಗುಳಿಯನ್ನು ದೂರ ಸರಿಸಿ ಆತನಿಗೆ ದಾರಿಮಾಡಿ ಕೊಡುತ್ತಾರೆ. ಈ ಪೂಜ್ಯ ಪಾದ್ರಿ ಸೈನಿಕರಿಂದ ಪ್ರಮಾಣ ವಚನ ಮಾಡಿಸಲು ಬಂದಿದ್ದಾನೆ. ಈ ಪಾದ್ರಿ ತಾನು ಕ್ರಿಸ್ತನ ವಿಶೇಷ ಅನಿವಾರ್ಯ ದೂತನೆಂದು ಭಾವಿಸಿದ್ದಾನೆ. ಬಲುಮಟ್ಟಿಗೆ ಆತನಿಗೆ ತನ್ನದು ವಂಚನೆಯ ಕಾರ್ಯ ಎಂದು ಅರ್ಥವಾಗಿಲ್ಲ. ಸೈನ್ಯಕ್ಕೆ ಪ್ರವೇಶ ಬಯಸಿದವರು ಕಾಯುತ್ತಿರುವ ಹಜಾರಕ್ಕೆ ಆತ ಹೋಗುತ್ತಾನೆ. ಚಿನ್ನದ ಜರತಾರಿ ಉಳ್ಳ ನಿಲುವಂಗಿಯನ್ನು ಹಾಕಿಕೊಳ್ಳುತ್ತಾನೆ. ಆದರಿಂದ ತನ್ನ ಉದ್ದನೆಯ ಕೂದಲನ್ನು ಬಿಡಿಸಿಕೊಳ್ಳುತ್ತಾನೆ. ಸತ್ಯವೇದದ ಗ್ರಂಥವನ್ನು ತೆಗೆಯುತ್ತಾನೆ. (ಅದರಲ್ಲಿ ಪ್ರಮಾಣವನ್ನು ಮಾಡುವುದು ನಿಷಿದ್ಧ ಎಂದು ಹೇಳಲಾಗಿದೆ). ಶಿಲುಬೆಯನ್ನು ಎತ್ತಿ ಹಿಡಿಯುತ್ತಾನೆ. (ಈ ತನ್ನ ಕಪಟ ದೂತ ಜನರಿಗೆ ಏನು ಉಪದೇಶ ಮಾಡುತ್ತಿದ್ದಾನೋ ಅದನ್ನು ಕ್ರಿಸ್ತನು ತಾನೇ ಮಾಡಲು ಒಪ್ಪದೆ ಇದ್ದುದರಿಂದ ಈ ಶಿಲುಬೆಯ ಮೇಲೆ ಕ್ರಿಸ್ತನನ್ನು ತೂಗು ಹಾಕಲಾಯಿತು). ಅವರೆಡನ್ನೂ ವಾಚನ ಪೀಠದ ಮೇಲೆ ಇಡುತ್ತಾನೆ. ಆಗ ಈತ ಬರೇ ಅಭ್ಯಾಸ ಬಲದಿಂದ ಜೋರಾಗಿ ಉಚ್ಚರಿಸುವ ಸುಳ್ಳುಗಳನ್ನು ಅಲ್ಲಿರುವ ಎಲ್ಲ ಅಸಹಾಯಕರಾದ, ಅರಕ್ಷಿತರಾದ. ಭ್ರಾಂತರಾದ ಹುಡುಗರು ಪುನರುಚ್ಚರಿಸುತ್ತಾರೆ. ಆತ ಓದುತ್ತಾನೆ. ಅವರು ಪುನರುಚ್ಚರಿಸುತ್ತಾರೆ: "ಸರ್ವಶಕ್ತನಾದ ಭಗವಂತನ ಹೆಸರಿನಲ್ಲಿ, ಮತ್ತು ಆತನ ಪವಿತ್ರ ಗ್ರಂಥದ ಹೆಸರಿನಲ್ಲಿ" ಇತ್ಯಾದಿ...... ಇತ್ಯಾದಿ ...... "ರಕ್ಷಿಸುತ್ತೇವೆ" ಇತ್ಯಾದಿ ಇತ್ಯಾದಿ. ಅದರ ಅರ್ಥ ಇಷ್ಟೇ. ನನಗೆ ಹೆಚ್ಚು ಗೊತ್ತಿಲ್ಲದ ಅಧಿಕಾರಿಗಳು ಮತ್ತು, ಯಾರಿಗೆ ನಾನು ತುಂಬ ಅಗತ್ಯವೋ ಆ ಅಧಿಕಾರಿಗಳು ಆಜ್ಞೆ ಮಾಡಿದುದನ್ನೆಲ್ಲಾ ಮಾಡುತ್ತೇನೆ. ಕೊಲ್ಲು ಎಂದವರನ್ನೆಲ್ಲಾ ಕೊಲ್ಲುತ್ತೇನೆ. ನನ್ನ ಸೋದರರೆಲ್ಲರನ್ನು ತುಳಿದು ಆ ಅಧಿಕಾರಿಗಳು ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳುವುದಕ್ಕೋಸ್ಕರ ನಾನು ದುಷ್ಕಾರ್ಯಗಳನ್ನು ಅವರಿಗಾಗಿ ಮಾಡುತ್ತೇನೆ.

ಇದೇ ಅವರ ಪ್ರತಿಜ್ಞೆಯ ತಿರುಳು. ಈ ಉಗ್ರ ಶಬ್ದಗಳನ್ನು. ದಾಖಲಾದ ಸೈನಿಕರೆಲ್ಲಾ ಅರ್ಥಹೀನವಾಗಿ ಪುನರುಚ್ಚರಿಸುತ್ತಾರೆ. ಅನಂತರ ಪಾದ್ರಿ ಎಂದು ಕರೆಯಲಾಗುವ ಆತ ತನ್ನ ಕರ್ತವ್ಯಗಳನ್ನು ಬಹಳ ಮುತುವರ್ಜಿಯಿಂದ ಮತ್ತು ಆತ್ಮಸಾಕ್ಷಿಯಾಗಿ ಮಾಡಿದ್ದೇನೆ ಎಂಬ ನಂಬಿಕೆಯಿಂದ ಹೊರಕ್ಕೆ ಹೋಗುತ್ತಾನೆ. ಭ್ರಮಿತರಾದ ಈ ಎಲ್ಲ ಹುಡುಗರು ತಾವು ಈಗತಾನೇ ಉಚ್ಚರಿಸಿದ ಹುಚ್ಚು ಹುಚ್ಚಾದ, ಅರ್ಥವೇ ಆಗದ ಮಾತುಗಳಿಂದ, ಇಡೀ ಸೇವಾವಧಿಯಲ್ಲಿ ತಾವು ಕರ್ತವ್ಯಮುಕ್ತರಾದಂತೆ ಭಾವಿಸುತ್ತಾರೆ. ಮತ್ತು ಈ ಮಾತುಗಳು ಸೈನಿಕರಾದ ತಮ್ಮನ್ನು ಇನ್ನೂ ಹೊಸ ಕರ್ತವ್ಯಗಳಿಗೆ ಕಟ್ಟಿ ಹಾಕಿವೆ ಎಂದು ಭಾವಿಸುತ್ತಾರೆ.

ಈ ಅಪರಾಧ ಬಹಿರಂಗವಾಗಿ ನಡೆಯುತ್ತಿದೆ. ಆದರೆ ವಂಚಕರಿಗಾಗಲೀ ವಂಚಿತರಿಗಾಗಲೀ ಯಾರೂ ಮುಂದೆ ಬಂದು ಹೀಗೆ ಹೇಳುವುದಿಲ್ಲ: "ನಿಮ್ಮೊಳಗೆ ಯೋಚನೆ ಮಾಡಿಕೊಳ್ಳಿ ಇಲ್ಲಿಂದ ಹೊರಟುಹೋಗಿ: ನೀವು ಹೇಳುತ್ತಿರುವುದು ತುಂಬ ಅಸಹ್ಯ ತರುವ ಕೃತ್ರಿಮವಾದ ಸುಳ್ಳು. ಇದು ನಿಮ್ಮ ದೇಹಗಳನ್ನಷ್ಟೇ ಅಲ್ಲ ಆತ್ಮಗಳನ್ನು ನಾಶಮಾಡುತ್ತದೆ". ಆದರೆ ಯಾರೂ ಹಾಗೆ ಹೇಳುವುದಿಲ್ಲ. ಎಲ್ಲರೂ ಸೈನಿಕರಾಗಿ ದಾಖಲಾದಮೇಲೆ ಅವರನ್ನು ಸ್ವಲ್ಪಕಾಲ ಹೊರಗೆ ಬಿಡಬೇಕಲ್ಲ! ಅದಕ್ಕೆ ಮುಂಚೆ ಅವರನ್ನೆಲ್ಲಾ ಅಣಕಿಸುವ ಹಾಗೆ ಮಿಲಿಟರಿ ಕಮಾಂಡರ್ ಹಜಾರದೊಳಕ್ಕೆ ಹೋಗುತ್ತಾನೆ. ಅಲ್ಲಿ ಮೋಸಹೋದ ಕುಡುಕ ಹುಡುಗರೆಲ್ಲಾ ಸೇರಿರುವ ಕಡೆ ತುಂಬ ಆತ್ಮವಿಶ್ವಾಸ ಇದ್ದವನಂತೆ ಗಂಭೀರವಾದ ರೀತಿಯಲ್ಲಿ ದಪ್ಪ ಮಿಲಿಟರಿ ಕಂಠದಲ್ಲಿ ಉದ್ಘೋಷಿಸುತ್ತಾನೆ: "ಶುಭವಾಗಲಿ ಹುಡುಗರೆ. ಜಾರನ ಸೇವೆಗೆ ಸೇರಿರುವುದಕ್ಕಾಗಿ ನಿಮಗೆಲ್ಲಾ ಅಭಿನಂದನೆಗಳು". ಅದನ್ನು ಕೇಳಿ ಆ ಬಡ ಯುವಕರೆಲ್ಲಾ ಯಾರದೋ ಉಪದೇಶದಂತೆ ಅರ್ಧ ಅಮಲೇರಿದ ಕಂಠದಲ್ಲಿ ಅಸ್ಪಷ್ಟವಾಗಿ ತಮಗೂ ಸಂತೋಷವಾಗಿದೆ ಎಂಬಂತೆ ಹೇಳುತ್ತಾರೆ.

ಅಷ್ಟರಲ್ಲಿ ತಂದೆ ತಾಯಿ ಪತ್ನಿಯರ ಗುಂಪು ಹೊರಗಡೆ ಕಾಯುತ್ತಾ ನಿಂತಿರುತ್ತದೆ. ಹೆಂಗಸರೆಲ್ಲಾ ನೀರು ತುಂಬಿದ ಕಣ್ಣುಗಳಿಂದ ಬಾಗಿಲಕಡೆಗೇ ನೋಡುತ್ತಿರುತ್ತಾರೆ. ಬಾಗಿಲು ತೆರೆಯುತ್ತದೆ. ದಾಖಲಾದ ಹುಡುಗರೆಲ್ಲಾ ಕೂಗುತ್ತಾ ತೊನೆಯುತ್ತಾ ಹೊರಗೆ ಬರುತ್ತಾರೆ. ಪೆಟ್ರೂಕ್, ವಾನೂಖ – ಮಕಾರ್ ಮುಂತಾದವರು ತಮ್ಮ ಜನದ ಕಡೆಗೆ ನೋಡಬಾರದು, ಅವರನ್ನು ಕಾಣಬಾರದು ಎಂದು ಪ್ರಯತ್ನಿಸುತ್ತಾರೆ. ತಾಯಿಯರ ಹೆಂಡತಿಯರ ಗೋಳಾಟ ಕೇಳಿ ಬರುತ್ತದೆ. ಕೆಲವರು ಪರಸ್ಪರ ಅಪ್ಪಿಕೊಂಡು ಅಳುತ್ತಾರೆ, ಕೆಲವರು ಧೈರ್ಯಸ್ಥರಂತೆ ಕಾಣಲು ಪ್ರಯತ್ನಿಸುತ್ತಾರೆ. ಕೆಲವರು ಪರಸ್ಪರ ಸಮಾಧಾನ ಮಾಡಲು ತೊಡಗುತ್ತಾರೆ.

ತಾಯಿಯರು ಪತ್ನಿಯರು ಗಟ್ಟಿಯಾಗಿ ಅಳುತ್ತಾರೆ. ಏಕೆಂದರೆ ಸಂಪಾದಿಸಿ ತಂದುಹಾಕುತ್ತಿದ್ದ ಮಕ್ಕಳು ಇಲ್ಲದಂತಾಗಿ ಇನ್ನು ಮೂರೋ ನಾಲ್ಕೋ ವರ್ಷ ಅನಾಥ

ರಂತೆ ತಾವು ಉಳಿಯಬೇಕಾಗುತ್ತದೆಂಬ ಸಂಗತಿ ಅವರಿಗೆ ಗೊತ್ತು. ಪಿತೃಗಳು ಅಷ್ಟು ಮಾತನಾಡುವುದಿಲ್ಲ. ವಿಷಾದದಿಂದ ತುಂಬಿ ಅವರು ನಾಲಗೆ ಬಿಗಿಹಿಡಿಯುತ್ತಾರೆ. ತಾವು ಬೆಳಸಿ ತರಬೇತಿ ಕೊಟ್ಟಿದ್ದ ಮಕ್ಕಳು ಇನ್ನು ಮುಂದೆ ಸಹಾಯಕರಾಗಿರುವುದಿಲ್ಲವೆಂದು ಅವರಿಗೆ ಗೊತ್ತು. ಅಲ್ಲದೆ ಮಿಲಿಟರಿ ಸೇವೆಯಿಂದ ಹಿಂದಿರುಗಿದನಂತರ ಭ್ರಷ್ಟರೂ ಉದ್ಧಟರೂ ಆಗುವ ಸೈನಿಕರು ಸರಳವಾದ ಜೀವನ ಪದ್ಧತಿಗೆ ಒಗ್ಗಿಕೊಳ್ಳಲು ಸಾಧ್ಯವಿಲ್ಲದಿರುವುದರಿಂದ ಮೊದಲಿನಂತೆ ಶ್ರಮಸಾಧ್ಯವಾದ ದುಡಿಮೆ ಮಾಡಲಾರರೆಂದು ಅವರಿಗೆ ಚೆನ್ನಾಗಿ ತಿಳಿದಿದೆ.

ಈಗ ಗುಂಪು ಚದುರುತ್ತದೆ. ತಮ್ಮ ತಮ್ಮ ಗಾಡಿಗಳಿಗೆ ಹತ್ತಿಕೊಂಡು ಅವರೆಲ್ಲ ಹೋಟೆಲುಗಳಿಗೋ ಹೆಂಡದಂಗಡಿಗೋ ಹೊರಟಿದ್ದಾರೆ. ಹಾಡು, ಚೀರಾಟ. ಅಮಲಿನ ಕೂಗಾಟ. ಹೆಂಡತಿ. ತಾಯಿಯರ ಗೋಳಾಟ. ವಾದ್ಯಗಳ ಅರಚಾಟ. ಬೈಗಳದ ಪದಧಾರೆ ಇವೆಲ್ಲ ಒಂದರೊಡನೊಂದು ಬೆರೆತು ಇನ್ನೂ ಹೆಚ್ಚಾಗುತ್ತವೆ. ಅವರೆಲ್ಲ ಸರಕಾರಕ್ಕೆ ಹೆಚ್ಚು ಆದಾಯ ತರುವ ಸಾರಾಯಿ ಅಂಗಡಿಗಳಿಗೆ ನುಗ್ಗುತ್ತಾರೆ. ಅಲ್ಲಿ ಕುಡಿದು ಕುಡಿದು ಅದರ ಅಮಲಿನಲ್ಲಿ ತಮಗಾದ ಅನ್ಯಾಯಗಳನ್ನೆಲ್ಲ ಮರೆಯುವಷ್ಟು ಕ್ಷೀಣ ಪ್ರಜ್ಞೆ ಹೊಂದುತ್ತಾರೆ.

ಎರಡು ಮೂರು ವಾರ ಅವರು ಮನೆಗಳಲ್ಲಿ ಉಳಿಯುತ್ತಾರೆ. ಮುಕ್ಕಾಲು ಸಮಯವನ್ನೆಲ್ಲ ಹಗುರವಾಗಿ. ಅಂದರೆ ಕುಡಿತದಲ್ಲಿ. ಕಳೆಯುತ್ತಾರೆ.

ಗೊತ್ತುಪಡಿಸಿದ ದಿನದಂದು ಅವರೆಲ್ಲ ಸೇರುತ್ತಾರೆ. ದನದಂತೆ ಅವರನ್ನೆಲ್ಲ ಒಂದು ಜಾಗದಲ್ಲಿ ಕಲೆಹಾಕಲಾಗುತ್ತದೆ: ಅಲ್ಲಿ ವ್ಯಾಯಾಮ ಮಾಡುತ್ತ ಸೈನಿಕ ಪದ್ಧತಿಗಳನ್ನು ಕಲಿಯಲು ತೊಡಗುತ್ತಾರೆ. ಅವರಿಗೆ ಇದನ್ನೆಲ್ಲ ಕಲಿಸುವ ಜನರಾದರೂ ಯಾರು? ಅವರಂತೆಯೇ ಇರುವ. ಆದರೆ ಎರಡು ಮೂರು ವರ್ಷಗಳ ಹಿಂದೆ ಹೀಗೆ ಇದೇ ಬಗೆಯ ವಂಚನೆಗೆ ಸಿಕ್ಕು ಕಟುಕರಾದ ಜನ. ಬೋಧನೆಯ ವಿಧಾನಗಳು: ಆತ್ಮವಂಚನೆ. ಮಂಕು ಕವಿಸುವಿಕೆ. ಹೊಡೆತಗಳು ಮತ್ತು ಹೆಂಡ. ಒಂದು ವರ್ಷ ಕಳೆಯುವುದರೊಳಗೇ ಈ ಉತ್ತಮ ಬುದ್ಧಿವಂತ ಆರೋಗ್ಯಮನಸ್ಕ ಹುಡುಗರು ತಮ್ಮ ಶಿಕ್ಷಕರ ಹಾಗೆಯೇ ಕಟುಕರಾಗಲು ತಯಾರಿ ಹೊಂದಿಬಿಡುತ್ತಾರ.

"ಒಂದುವೇಳೆ ನಿಮ್ಮ ತಂದೆಯನ್ನೇ ಸೆರೆಯಲ್ಲಿಟ್ಟಿರುತ್ತಾರೆ ಎನ್ನೋಣ. ಅತ ಓಡಿಹೋಗಲು ಪ್ರಯತ್ನಿಸಿದರೆ ಏನು ಮಾಡುತ್ತೀ?" ಎಂದು ಒಬ್ಬ ತರುಣ ಸೈನಿಕನನ್ನು ನಾನು ಕೇಳಿದೆ.

"ಆಗ ಬಂದೂಕಿನ ಸನೀನಿನಿಂದ ತಿವಿದುಬಿಡುತ್ತೇನೆ" ಎಂದು ಆತ ವಿಶಿಷ್ಟವಾದ. ತೀಗೇಡಿತನದ ಸೈನಿಕನ ಕಂಠದಲ್ಲಿ ಉತ್ತರಕೊಟ್ಟ. "ಅಷ್ಟೇ ಅಲ್ಲ. ಹಾಗೆ ಓಡಿದರೆ

ನಾನು ಅವನನ್ನು ಗುಂಡಿಟ್ಟು ಕೊಲ್ಲಬೇಕಾಗುತ್ತದೆ." ಎಂದೂ ಹೇಳಿದ. ಅಂದರೆ ತಂದೆ ಓಡಲು ಪ್ರಯತ್ನಪಟ್ಟರೆ ಏನು ಮಾಡಬೇಕೆಂಬುದು ಗೊತ್ತಿರುವುದಕ್ಕಾಗಿ ತುಂಬ ಹೆಮ್ಮೆಪಟ್ಟುಕೊಂಡವನಂತೆ ಮಾತನಾಡಿದ.

ಯೋಚಿಸಿ. ದಯಾವಂತನಾದ ಒಬ್ಬ ಮನುಷ್ಯನನ್ನು ಪಶುವಿಗಿಂತ ಕೀಳಾದ ಈ ಅವಸ್ಥೆಗೆ ತರಲಾಗಿದೆ. ಅವನನ್ನು ಹಿಂಸಾಚಾರದ ಉಪಕರಣವಾಗಿ ಬಳಸುವುದಕ್ಕೆ ಇಂತಹ ಅವಸ್ಥೆಗೆ ಅವನನ್ನು ತರುವುದು ಅವರಿಗೆ ಮುಖ್ಯ. ಈಗ ಆತ ಯಾವುದಕ್ಕೂ ಸಿದ್ಧ. ಆತನನ್ನು ಹಾಳು ಮಾಡಲಾಗಿದೆ. ಬದಲಿಗೆ ಹಿಂಸೆಯ ಒಂದು ಹೊಸ ಉಪಕರಣವನ್ನು ತಯಾರಿಸಲಾಗಿದೆ.

ಇದನ್ನು ಪ್ರತಿವರ್ಷ. ಪ್ರತಿ ಶರತ್ಕಾಲದಲ್ಲೂ ರಷ್ಯಾದೇಶದ ಪ್ರತಿಯೊಂದು ದೊಡ್ಡ ಪಟ್ಟಣದಲ್ಲೂ ಎಲ್ಲ ನೋಡುತ್ತಿರುವಂತೆ ಹಾಡೇ ಹಗಲಿನಲ್ಲೇ ಮಾಡಲಾಗುತ್ತಿದೆ. ವಂಚನೆ ಎಷ್ಟು ಕಲಾತ್ಮಕವಾಗಿದೆ, ಕೃತ್ರಿಮವಾಗಿದೆ ಎಂದರೆ ಪ್ರತಿಯೊಬ್ಬನ ಹೃದಯಾಂತರಾಳಕ್ಕೂ ಇದು ತಾಕುತ್ತದೆ. ಅದರ ಪೀಡೆ ಮತ್ತು ಭಯಂಕರ ಪರಿಣಾಮಗಳಲ್ಲಿ ಪ್ರತಿಯೊಬ್ಬನ ಸಂವೇದನೆಗೂ ಸಿಲುಕುತ್ತದೆ. ಆದರೂ ಆತ ಮುಕ್ತನಾಗಲಾರ.

3

ಮನುಷ್ಯರ ಮೇಲೆ ನಡೆಯುತ್ತಿರುವ ಈ ಭೀಕರ ವಂಚನೆಯ ಕಡೆ ನಮ್ಮ ಕಣ್ಣು ತೆರೆಯಬೇಕು. ಆಗ, ಕ್ರೈಸ್ತ ನೀತಿ ಮತ್ತು ಧರ್ಮಗಳನ್ನು ಬೋಧಿಸುವ ಗುರುಗಳು, ತರುಣರಿಗೆ ಬೋಧಿಸುವ ಶಿಕ್ಷಕರು, ಸದ್ಬುದ್ಧಿಯುಳ್ಳ ದಯಾವಂತ ತಂದೆತಾಯಿಗಳು ಸಮಾಜದಲ್ಲಿ ಯಾವುದೇ ನ್ಯಾಯವನ್ನು ಬೇಕಾದರೂ ಸುಲಭವಾಗಿ ಉಪದೇಶಿಸುತ್ತಾರೆಂಬ ವಿಸ್ಮಯಕಾರಕವಾದ ಸಂಗತಿ ಬೆಳಕಿಗೆ ಬರುತ್ತದೆ. ಸಮಾಜದಲ್ಲಿ ಹಿಂಸಾಚಾರ ಮತ್ತು ಕೊಲೆಗಳು ಜನಜೀವನದ ಒಂದು ಅಗತ್ಯವಾದ ಕ್ರಮವೆಂದೂ ತಮ್ಮ-ವರನ್ನೇ ಕೊಲ್ಲಲು ಸಿದ್ಧರಾಗುವ ಒಂದು ವಿಶೇಷ ಜನವರ್ಗ ಇರಲೇಬೇಕೆಂದೂ, ನಮ್ಮಲ್ಲಿ ಎಲ್ಲರೂ ಇಂಥ ವ್ಯಕ್ತಿಯಾಗಲು ಸಿದ್ಧರಿರಬೇಕೆಂದೂ ಕ್ರೈಸ್ತಮತಗಳು ಮತ್ತು ಸರಕಾರಗಳು ಬಹಿರಂಗವಾಗಿ ಒಪ್ಪಿಕೊಂಡಿವೆ.

ಕ್ರಿಸ್ತತತ್ವದ ಮೇಲೆ ಬೆಳಕು ಚೆಲ್ಲುವ ವಿಚಾರ ಒತ್ತಟ್ಟಿಗಿರಲಿ. ಯಾವುದೇ ಬಗೆಯ ನೀತಿಯ ವಿಚಾರವನ್ನು ಹೇಳಿ ಅದರ ಜತೆಯಲ್ಲೇ ಸಾರ್ವಜನಿಕ ಹಾಗೂ ವೈಯಕ್ತಿಕ ಕಲ್ಯಾಣಕ್ಕೆ ಹಿಂಸಾತತ್ವ ಅಗತ್ಯವೆಂದೂ ನ್ಯಾಯಬದ್ಧವೆಂದೂ ಘೋಷಣೆ ಮಾಡಿ ಮಕ್ಕಳಿಗೆ, ತರುಣರಿಗೆ, ಸಾರ್ವಜನಿಕರಿಗೆ ಹೇಳುವುದು ಹೇಗೆ ಸಾಧ್ಯ? ಅಧಿಕಾರದಲ್ಲಿರುವವರ ಮರ್ಜಿಯ ಮೇರೆಗೆ ತಮ್ಮ ನೆರೆಹೊರೆಯವರನ್ನೇ ಹಿಂಸಿಸುವುದು ಕೊಲ್ಲುವುದು ಮತ್ತು ಎಲ್ಲ ಬಗೆಯ ಹೀನ ಕೃತ್ಯಗಳನ್ನು ಮಾಡುವುದು ಜನರ (ಇದರಲ್ಲಿ ನಾವೂ

ಸೇರಬಹುದಾದ ಸಾಧ್ಯತೆ ಇದೆ) ಪವಿತ್ರವಾದ ಕರ್ತವ್ಯವೆಂದು ಹೇಳುವುದು ಹೇಗೆ ಸಾಧ್ಯ? ಜನರು ಅಧಿಕಾರದಲ್ಲಿರುವವರ ಮರ್ಜಿಯ ಮೇರೆಗೆ ಕೊಲೆ, ಹಿಂಸೆ ಮತ್ತು ಯಾವುದೇ ಬಗೆಯ ಅನಾಚಾರಗಳನ್ನು ಮಾಡುತ್ತಾರೆ. ಮಾಡಲೇಬೇಕು ಎನ್ನುವುದಾದಲ್ಲಿ ನೈತಿಕ ನಿಯಮ ಎಂಬುದೇ ಲೋಕದಲ್ಲಿಲ್ಲ. ಬಲಿಷ್ಠರದೇ ಮೇಲುಗೈ ಎಂದು ಒಪ್ಪಿದಂತಾಗುತ್ತದೆ. ಈಗ ಇರುವುದೇ ಹಾಗೆ. ವಾಸ್ತವವಾಗಿ ನಮ್ಮ ಸಮಾಜದಲ್ಲಿ ಈಗ ಪ್ರಚಲಿತವಾಗಿರುವ ತತ್ವ ಅದೇ. ಕೆಲವು ಜನ ಇದನ್ನು ತಾತ್ವಿಕವಾಗಿ 'ಅಸ್ತಿತ್ವಕ್ಕಾಗಿ ಹೋರಾಟ' ಎಂಬ ತತ್ವದಿಂದ ಇದನ್ನು ಸಮರ್ಥಿಸಿಕೊಳ್ಳುತ್ತಾರೆ.

ಎಂಥ ಉದ್ದೇಶದಿಂದಲೇ ಆಗಲಿ ಹತ್ಯೆಯನ್ನು ಅಂಗೀಕರಿಸುವುದು ಯಾವ ನೀತಿ ಶಿಕ್ಷಣದಲ್ಲಿ ಸಾಧ್ಯ? ಎರಡನೆಯ ಸಂಖ್ಯೆ ಮೂರನೆಯ ಸಂಖ್ಯೆಗೆ ಸಮವಾಗಲು ಸಾಧ್ಯ ಎಂದು ಒಪ್ಪುವ ಗಣಿತ ತತ್ವದಷ್ಟೇ ಅಸಾಧ್ಯವಾದ ತತ್ವ ಇದು.

ಎರಡು ಮೂರಕ್ಕೆ ಸಮ ಎಂದು ಗಣಿತದಲ್ಲಿ ಸೋಗು ಹಾಕಬಹುದು. ಆದರೆ ನೈಜ ಗಣಿತಜ್ಞಾನ ಇದಕ್ಕೊಪ್ಪುವುದಿಲ್ಲ. ಹಾಗೆಯೇ ಹತ್ಯೆಗಳು, ಯುದ್ಧಗಳು, ಆತ್ಮರಕ್ಷಣೆ ಇವುಗಳ ರೂಪದಲ್ಲಿ ಹತ್ಯೆಯನ್ನು ಒಪ್ಪಿಕೊಳ್ಳುವ ನೈತಿಕ ಸೋಗು ಹಾಕಬಹುದು. ಆದರೆ ನೈಜ ನೀತಿ ಹಾಗಿರಲು ಸಾಧ್ಯವಿಲ್ಲ. ಎಲ್ಲಿ ನೀತಿಯ ಮೂಲತತ್ವ ಮತ್ತು ಪ್ರಥಮ ತತ್ವ ಎಂದರೆ ಪ್ರತಿಯೊಬ್ಬ ಮನುಷ್ಯನ ಜೀವನದ ಪವಿತ್ರತೆಯನ್ನು ಒಪ್ಪಿಕೊಳ್ಳುವುದು.

ಕ್ರಿಸ್ತ ತತ್ವವು ಕಣ್ಣಿಗೆ ಬದಲು ಕಣ್ಣು, ಹಲ್ಲಿಗೆ ಹಲ್ಲು, ಜೀವಕ್ಕೆ ಜೀವ ಎಂಬ ಸೇಡಿನ ತತ್ವವನ್ನು ಮನ್ನಾಮಾಡಿತು. ಏಕೆಂದರೆ ಅಂಥ ಸೇಡಿನ ತತ್ವದಲ್ಲಿ ಸಮಾನತೆಯ ಸೋಗು ಮಾತ್ರ ಇದ್ದು ವಾಸ್ತವವಾಗಿ ಅದು ಅರ್ಥವಿಲ್ಲದ್ದು ಮತ್ತು ಅನೀತಿಯನ್ನು ಸಮರ್ಥಿಸುವಂಥದ್ದು. ಜೀವ ಎನ್ನುವುದು ಪ್ರಧಾನವಾಗಿ, ತೂಕಕ್ಕಾಗಲಿ, ಅಳತೆಗಾಗಲಿ ಸಿಗದ, ಸಮಭಾಜ್ಯವಲ್ಲದ ಒಂದು ಪರಿಮಾಣ. ಆದ್ದರಿಂದ ಒಂದು ಜೀವದ ಬದಲಿಗೆ ಇನ್ನೊಂದು ಜೀವವನ್ನು ನಾಶಮಾಡುವುದು ಎಂದರೆ ಅರ್ಥವಿಲ್ಲದ ಮಾತಾಗುತ್ತದೆ. ಪ್ರತಿಯೊಂದು ಸಾಮಾಜಿಕ ನಿಯಮವೂ ಮಾನವ ಜೀವನದ ಉತ್ತಮೀಕರಣದ ದೃಷ್ಟಿ ಇಟ್ಟುಕೊಂಡಿರುತ್ತದೆ. ಹೀಗಿರುವಾಗ ಒಬ್ಬನ ಹತ್ಯೆ ಮತ್ತೊಬ್ಬನ ಬದುಕನ್ನು ಉತ್ತಮಗೊಳಿಸುವುದು ಹೇಗೆ ಸಾಧ್ಯ? ಜೀವಹತ್ಯೆ ಬದುಕಿನ ಉತ್ತಮೀಕರಣದ ಪ್ರಯತ್ನ ಅಲ್ಲ. ಅದೊಂದು ಆತ್ಮಘಾತಕವಾದ ವರ್ತನೆಯಾಗುತ್ತದೆ.

ನ್ಯಾಯಪಾಲನೆಗಾಗಿ ಇನ್ನೊಂದು ಜೀವವನ್ನು ನಾಶಗೊಳಿಸುವುದೆಂಬ ತತ್ವ, ಒಬ್ಬ ಮನುಷ್ಯ ತನ್ನ ಒಂದು ಕೈಯನ್ನು ಕಳೆದುಕೊಂಡಿದ್ದರೆ ಇನ್ನೊಂದನ್ನು ಕತ್ತರಿಸಿಕೊಂಡು ತನ್ನ ದುರ್ದಶೆಯನ್ನು ಸರಿಪಡಿಸಿಕೊಳ್ಳಬೇಕು ಎಂಬಂತೆ ಹಾಸ್ಯಾಸ್ಪದವಾಗುತ್ತದೆ.

ತುಂಬ ಹೀನಾಯಕರವಾದ ಅಪರಾಧವನ್ನು ಕರ್ತವ್ಯ ಎಂಬಂತೆ ಸ್ವೀಕರಿಸಿ ಎಂದು ಭ್ರಮೆ ಹುಟ್ಟಿಸುವ ಪಾತಕ. ಕ್ರಿಸ್ತನು ಯಾವುದನ್ನು ಪ್ರಬಲವಾಗಿ ವಿರೋಧಿಸುತ್ತಿದ್ದನೋ ಅಂಥ ಕೆಲಸಕ್ಕೆ ಜನರನ್ನು ಒಪ್ಪಿಸಲು ಕ್ರಿಸ್ತನ ಹೆಸರು. ಅಧಿಕಾರಗಳನ್ನೇ ಬಳಸಿ ಪ್ರತಿಜ್ಞಾ ವಿಧಿಯನ್ನು ಸೈನಿಕರಿಂದ ಮಾಡಿಸುವ ಪಾತಕ. ಈ 'ಕಿರು ಜೀವಿಗಳ' ದೇಹ ಮನಸ್ಸು ಗಳೆರಡನ್ನೂ ಹಾಳುಮಾಡುವ ಪಾತಕ – ಇವುಗಳ ಬಗೆಗೆ ಹೆಚ್ಚು ಹೇಳುವುದು ಬೇಡ. ತಮ್ಮದೇ ಆದ ಜೀವನದ ದಾರಿ. ತಮ್ಮ ಏಳಿಗೆ ಇವುಗಳಿಗೆ ಬೆಲೆಕೊಡುವ ಜನ ತಾನೆ, ತಮ್ಮ ವೈಯಕ್ತಿಕ ಕ್ಷೇಮಲಾಭಕ್ಕೇ ಆಗಲಿ ಇದನ್ನು ಹೇಗೆ ಸಹಿಸಿಕೊಂಡಿದ್ದಾರೆ? ತನ್ನ ಸೈನ್ಯದ ಬೆಂಬಲದ ಮೇಲೆ ನಿಂತ ಎಲ್ಲ ವ್ಯವಸ್ಥಿತ ಸರಕಾರಗಳೂ ರಚಿಸಿಕೊಂಡಿರುವ ಭಯಂಕರವೂ ಅರ್ಥಹೀನವೂ ಕ್ರೂರವೂ ಆದ ಸೇನಾಶಕ್ತಿಯನ್ನು ಹೇಗೆ ಸಹಿಸಿಕೊಂಡಿದ್ದಾರೆ ರಾಜ್ಯ 'ವ್ಯವಸ್ಥೆ' ಇದೆಯಲ್ಲ. ಅದಕ್ಕೆ ನಾವು ಹೆದರಬೇಕಾದಷ್ಟು ತುಂಬ ಕ್ರೂರವೂ ಭಯಾನಕವೂ ಆದ ಕಳ್ಳರ ಪಡೆಗೂ ಹೆದರಬೇಕಾಗಿಲ್ಲ. ಒಂದು ಕಳ್ಳರ ಪಡೆಯ ಮುಖಂಡನ ಅಧಿಕಾರ ಸ್ವಲ್ಪಮಟ್ಟಿಗೆ ಆತನ ಗುಂಪಿನ ಜನರಿಂದ ಸೀಮಿತಗೊಂಡಿರುತ್ತದೆ. ಆತನ ಗುಂಪಿನ ಜನರಿಗೆ ಸ್ವಲ್ಪಮಟ್ಟಿಗಾದರೂ ಮಾನವ ಸ್ವಾತಂತ್ರ್ಯದ ಅರಿವೆ ಇರುತ್ತದಾದ್ದರಿಂದ ಅವರು ತಮ್ಮ ಆತ್ಮಸಾಕ್ಷಿಗೆ ವಿರೋಧವಾದ ಕಾರ್ಯವನ್ನು ಮಾಡಲು ಧಿಕ್ಕರಿಸುತ್ತಾರೆ. ಆದರೆ ಇಂದು ಅಸ್ತಿತ್ವದಲ್ಲಿರುವ ಶಿಸ್ತಿನ ಸೇನೆಯನ್ನು ಕೈಯಲ್ಲಿಟ್ಟುಕೊಂಡಿರುವ ವ್ಯವಸ್ಥಿತ ಸರಕಾರದ ಭಾಗವಾಗಿರುವ ಅಧಿಕಾರಿಗಳ ಪರಮಾಧಿಕಾರಕ್ಕೆ ಮಿತಿಯೇ ಇಲ್ಲವಾಗಿದೆ.

ಸರಕಾರದ ಮುಖ್ಯಸ್ಥನಾಗಿರುವ (ಬೌಲಾಂಗರ್. ಪುಗಚ್ಯೆವ್. ನೆಪೋಲಿಯನ್ ಯಾರೇ ಆಗಬಹುದು) ವ್ಯಕ್ತಿಯ ಆದೇಶದ ಮೇರೆಗೆ. ಸರಕಾರದ ಅಧಿಕಾರ ಸ್ಥಾನದಲ್ಲಿರುವವರು, ಎಂಥ ಹೀನಾಯಕರವಾದ ದುಷ್ಕೃತ್ಯಗಳನ್ನು ಮಾಡುವುದಕ್ಕೂ ಹೇಸುವುದಿಲ್ಲ.

ಆಗಾಗ ದಾಖಲಾದ ಸೇನಾಪಡೆಗಳನ್ನು. ಮಿಲಿಟರಿ ವ್ಯಾಯಾಮಗಳನ್ನು ದಾಳಿಗಳನ್ನು ನೋಡಿದ್ದೇನೆ. ಮದ್ದು ತುಂಬಿಸಿದ ರಿವಾಲ್ವರ್‌ಗಳನ್ನು ಹಿಡಿದ ಪೋಲಿಸ್ ದಳದವರನ್ನು, ಸಗೀನನ್ನು ಸಿದ್ಧಪಡಿಸಿದ ಬಂದೂಕುಧಾರಿಗಳಾದ ಕಾವಲಿಗರನ್ನು ನೋಡಿದ್ದೇನೆ. ನಾನು ವಾಸಮಾಡುವ ಖಾಮೋವಿಂಕಿಯಂತೆ ಬೇರೆ ಎಡೆಗಳಲ್ಲೂ ಸೈನಿಕರು ಇಡೀ ದಿನ ಅಭ್ಯಾಸ ಮಾಡುತ್ತಿರುವಾಗ ಗುರಿಹಲಗೆಯತ್ತ ಹಾರಿಸುವ ಗುಂಡುಗಳ ಸಿಳ್ಳೆಗಳನ್ನೂ ಶಬ್ದವನ್ನೂ ಕೇಳಿದ್ದೇನೆ. ನಗರಗಳನ್ನು (ನಗರಗಳಲ್ಲಿ ಆತ್ಮ ರಕ್ಷಣೆಗಾಗಿ ಕೂಡ ಹಿಂಸಾಚಾರಮಾಡುವುದನ್ನು ನಿಷೇಧಿಸಲಾಗಿದೆ. ಔಷಧಗಳ ಮತ್ತು ಮದ್ದುಗುಂಡುಗಳ ಮಾರಾಟವನ್ನು ನಿಯಂತ್ರಿಸಲಾಗಿದೆ. ಬೇಕಾಬಿಟ್ಟಿ ವಾಹನವನ್ನು ನಡೆಸುವುದು. ಲೈಸೆನ್ಸ್ ಇಲ್ಲದೆ ವೈದ್ಯಮಾಡುವುದು ಇವನ್ನೆಲ್ಲ ಶಿಕ್ಷಾರ್ಹ ಅಪರಾಧ ಎಂದು ಪರಿಗಣಿಸಲಾಗಿದೆ) ಕಂಡಿದ್ದೇನೆ. ಎಲ್ಲ ಕಡೆಗಳಲ್ಲೂ ನನಗೆ ಕಾಣುವುದು ಒಬ್ಬ ಮನುಷ್ಯನ ಅಂಕೆಗೆ ಒಳಪಟ್ಟು. ಕೊಲೆಗೆಲಸಕ್ಕೆ ತರಬೇತಿ ಪಡೆದಿರುವ ಸಾವಿರಾರು

ಶಿಸ್ತಿನ ಜನಗಳ ಮುಖವೇ. ಆಗ ನನ್ನನ್ನು ನಾನೇ ಈ ಪ್ರಶ್ನೆ ಕೇಳಿಕೊಳ್ಳುತ್ತೇನೆ: ತಮ್ಮ ಸುಭದ್ರತೆಗೆ ಬೆಲೆಕೊಡುವ ಈ ಜನ ಇಂಥವು ನಡೆಯಲು ಹೇಗೆ ಅವಕಾಶ ಕೊಡುತ್ತಾರೆ? ಯಾಕೆ ಸುಮ್ಮನಿದ್ದುಬಿಡುತ್ತಾರೆ? ವಿನಾಶಕಾರಿಯೂ ಅನೈತಿಕವೂ ಆಗಿರುವುದರ ಜತೆಗೆ ಇದರಷ್ಟು ಅಪಾಯಕಾರಿಯಾದದ್ದು ಬೇರೆಯಾವುದೂ ಇಲ್ಲ. ಜನ ಇದರ ಬಗೆಗೆ ಏನು ಹೇಳುತ್ತಾರೆ? ಕ್ರಿಸ್ತಾನುಯಾಯಿಗಳ, ಧರ್ಮೋಪದೇಶಕರ, ಮಾನವತಾವಾದಿಗಳ, ನೀತಿವಾದಿಗಳ ವಿಚಾರ ನಾನು ಹೇಳುತ್ತಿಲ್ಲ. ಉಳಿದ ಜನ. ತಮ್ಮ ಬದುಕು. ಭದ್ರತೆ. ಕಲ್ಯಾಣಗಳಿಗೇ ಹೆಚ್ಚು ಬೆಲೆಕೊಡುವ ಜನ ಈ ಬಗೆಗೆ ಏನು ವಿಚಾರ ಮಾಡಿದ್ದಾರೆ? ರಾಜ್ಯವ್ಯವಸ್ಥೆ ಯಾರ ಕೈಗೆ ಹೋದರೂ ನಡೆಯುವುದೆಲ್ಲ ಹೀಗೆ ತಾನೆ. ಈ ದಿನ ನಾವು ಸಹಿಸಿಕೊಳ್ಳಬಹುದಾದ ರಾಜನ ಕೈಯಲ್ಲಿ ಅಧಿಕಾರವಿದೆ ಎನ್ನೋಣ. ಆದರೆ ನಾಳೆ ಅದನ್ನು ಆಕ್ರಮಿಸುವವನು ಒಬ್ಬ ಬಿರೆನ್[3], ಎಲಿಜಬೆತ್[4] ಕ್ಯಾಥರೀನ್[5], ಪುಗಚ್ಚೆವ್, ಒಂದನೇ ನೆಪೋಲಿಯನ್[6] ಅಥವಾ ಮೂರನೇ ನೆಪೋಲಿಯನ್ ಯಾರುಬೇಕಾದರೂ ಆಗಬಹುದು. ಅಧಿಕಾರದಲ್ಲಿರುವಾತ ಈ ದಿನ ಸಹನೀಯ ನೆನ್ನಿಸಬಹುದು. ಆದರೆ ನಾಳೆ ಆತನೇ ದುಷ್ಟನಾಗಬಹುದು ಅಥವಾ ಅವನ

---

[3] ಇ. ಜೆ. ಡಿ ಬಿರನ್ (1690–1772) ಕೊರ್ಲ್ಯಾಂಡಿನ ಮಾಲಿಕನಾದ ಬ್ಯುಹ್‌ರೆನ್‌ನ ಮಗ. ಪೀಟರ್ ಮಹಾಶಯನ ಸೋದರ ಸೊಸೆ ಅನ್ನಇವನೊವ್ನ ಈತನ ಹೆಂಡತಿ. ಇವಳು ರಷ್ಯದ ಸಿಂಹಾಸನವನ್ನೇರಿದಾಗ ಈತ ಫ್ರೆಂಚ್ ಡ್ಯೂಕನ ಹೆಸರು ಅಧಿಕಾರಗಳನ್ನು ತಾನು ಧರಿಸಿ ಅನ್ನಳ ಹೆಸರಿನಲ್ಲಿ ತಾನೇ ರಾಜ್ಯಾಧಿಕಾರ ನಡೆಸುತ್ತಿದ್ದ. ಸಾವಿರಕ್ಕಿಂತ ಹೆಚ್ಚು ಜನರನ್ನು ನೇಣು ಹಾಕಿಸಿದ ಈತ ರಾಣಿ ಸತ್ತನಂತರ ತಾನೇ ರಾಜಪ್ರತಿನಿಧಿಯಾಗಿ ಆಳ್ವಿಕೆ ನಡೆಸಿದ ಮೂರು ವಾರಗಳ ನಂತರ ಒಳಸಂಚುಗಾರರ ಒಂದು ಗುಂಪು ಇವನನ್ನು ಬಂಧಿಸಿ ಸೈಬೀರಿಯಾಕ್ಕೆ ಗಡೀಪಾರು ಮಾಡಿದರು.

[4] ಎಲಿಜಬೆತ್ (1709–62) ಇವಳು ಪೀಟರ್ ಮಹಾಶಯ ಮತ್ತು ಮೊದಲನೆ ಕ್ಯಾಥರಿನ್ ಇವರ ವಿವಾಹ ಪೂರ್ವದಲ್ಲಿ ಹುಟ್ಟಿದ ಮಗಳು. 1741ರಲ್ಲಿ ಈಕೆ ಒಂದು ಗುಪ್ತ ಒಳಸಂಚಿನ ಮೂಲಕ ಸಿಂಹಾಸನವನ್ನು ಆಕ್ರಮಿಸಿಕೊಂಡಳು.

[5] ಕ್ಯಾಥರೀನ್ ದಿ ಗ್ರೇಟ್ (1729–96) ಗಂಡ ಮೂರನೇ ಪೀಟರನ ಬಂಧನ ಮತ್ತು ಕೊಲೆಯ ಕಾರ್ಯದಲ್ಲಿ ಮತ್ತು ರಾಜಕುಮಾರ ಇವಾನನ ಕೊಲೆಯಲ್ಲಿ ಈಕೆ ಭಾಗಸ್ಥೆ. ಇವಳ ಆಳ್ವಿಕೆಯಲ್ಲಿ ಪುಗಚ್ಯೆವ್ ದಂಗೆಯೆದ್ದಿದ್ದನು ಮತ್ತು ಸ್ವಲ್ಪಕಾಲ ವೋಲ್ಗ ಜಿಲ್ಲೆಯ ಕೆಲವು ಪ್ರಾಂತ್ಯಗಳನ್ನು ವಶಪಡಿಸಿಕೊಂಡಿದ್ದನು.

[6] ವಾರ್ ಅಂಡ್ ಪೀಸ್ ಕಾದಂಬರಿಯನ್ನು ಓದಿದರೆ ಮೊದಲನೇ ನೆಪೋಲಿಯನ್ನನ ವಿಚಾರವಾಗಿ ಟಾಲ್‌ಸ್ಟಾಯ್‌ನ ಅಭಿಪ್ರಾಯವೇನಿತ್ತು ಎಂಬುದು ತಿಳಿಯುತ್ತದೆ. ಅಲ್ಲದೆ ಮೂರನೆಯ ನೆಪೋಲಿಯನ್ನನ ಕಾಲದಲ್ಲಿ ಪ್ಯಾರಿಸ್ಸಿನಲ್ಲಿ ಒಬ್ಬನನ್ನು ಗಿಲೋಟಿನ್ ಯಂತ್ರಕ್ಕೆ ಬಲಿಕೊಟ್ಟ ದೃಶ್ಯವನ್ನು ಕಣ್ಣಾರೆ ಕಂಡ ಈತ ಅವನ ಬಗ್ಗೆಯೂ ಸದಭಿಪ್ರಾಯ ಹೊಂದಿಲ್ಲ ಎನ್ನುವುದು ಸ್ಪಷ್ಟವಾಗಿದೆ.

ವಂಶೀಯನು ಬವೇರಿಯದ ದೊರೆಯ ಹಾಗೆ[7] ಅಥವಾ ಒಂದನೆಯ ಪಾಲ್‌ನ ಹಾಗೆ ಉನ್ಮತ್ತನೋ ಹುಚ್ಚನೋ ಆಗಬಹುದು.

ಈ ಉನ್ನತ ಅಧಿಕಾರಿಗಳು ಮಾತ್ರವಲ್ಲದೆ ರಾಜ್ಯದಲ್ಲೆಲ್ಲ ಹರಡಿಕೊಂಡಿರುವ ಸಣ್ಣ ಪುಟ್ಟ ಕುಳಗಳೂ – ಅಂದರೆ ಪೋಲೀಸ್ ಅಧಿಕಾರಿಗಳು, ಹಳ್ಳಿಯ ಪೋಲೀಸ್ ಅಧಿಕಾರಿಗಳು, ಕಂಪೆನಿ ಕಮ್ಯಾಂಡರ್‌ಗಳು, ಮೊದಲಾದವರೆಲ್ಲ – ತಾವು ಬರ್ತರ್ಫ್ ಆಗುವುದಕ್ಕೆ ಮೊದಲೇ ಭಯಾನಕವಾದ ಅಪಕೃತ್ಯಗಳನ್ನು ಮಾಡಬಲ್ಲರು. ಸರ್ವೇ ಸಾಧಾರಣವಾಗಿ ಹೀಗೆ ನಡೆಯುತ್ತದೆ.

ಸಹಜವಾಗಿ ನಮ್ಮ ಮನಸ್ಸಿನಲ್ಲಿ ಏಳುವ ಪ್ರಶ್ನೆ ಇದೇ: ಜನ ಹೇಗೆ ಇದನ್ನು ಸಹಿಸಿಕೊಳ್ಳುತ್ತಾರೆ? ಉನ್ನತ ರಾಜಕೀಯ ದೃಷ್ಟಿಕೋನದ ವಿಚಾರ ಬೇಡ, ತಮ್ಮ ಸ್ವಂತ ಸುಭದ್ರತೆಯ ದೃಷ್ಟಿಯಿಂದ ತಾನೇ ಇದನ್ನೆಲ್ಲ ಹೇಗೆ ಸಹಿಸಿಕೊಳ್ಳುತ್ತಾರೆ?

ಇದಕ್ಕೆ ಉತ್ತರ ಕೊಡಬಹುದು. ಎಲ್ಲರೂ ಸಹಿಸಿಕೊಳ್ಳುತ್ತಾರೆ ಎಂಬುದು ಸರಿಯಲ್ಲ. ಮುಕ್ಕಾಲುಮೂರು ವೀಸೆ ಪಾಲು ಮಂದಿ ಭ್ರಮಿತರು ಮತ್ತು ಸ್ವಾಮಿ ವಿಧೇಯರು. ಎಲ್ಲವನ್ನೂ ಸಹಿಸದೆ ಅವರಿಗೆ ಬೇರೆ ವಿಧಿಯೇ ಇಲ್ಲ. ಆದರೆ ಇನ್ನು ಕೆಲವರಿದ್ದಾರೆ: ಇಂಥ ರಾಜ್ಯವ್ಯವಸ್ಥೆ ಇರುವಾಗ ಮಾತ್ರ ಅವರಿಗೆ ಉನ್ನತ ಸ್ಥಾನಗಳು ಲಭಿಸುತ್ತವೆ. ಅವರು ಎಲ್ಲವನ್ನೂ ಸಹಿಸಿಕೊಳ್ಳುವುದಕ್ಕೆ ಕಾರಣವಿದೆ. ಸರಕಾರದ ಅಥವಾ ಸೇನೆಯ ಮುಖ್ಯಸ್ಥನಾದ ಒಬ್ಬ ಅವಿವೇಕಿಯಾದ ಕ್ರೂರ ಮನುಷ್ಯನಿಂದ ಯಾತನೆಗೆ ಒಳಗಾಗುವುದು ಆ ರಾಜ್ಯ ವ್ಯವಸ್ಥೆಯನ್ನೇ ರದ್ದುಪಡಿಸಿದಾಗ ತಮಗಾಗುವ ಅನಾನುಕೂಲಗಳಿಗಿಂತ ಹೆಚ್ಚು ಸಹನೀಯವಾದದ್ದು ಎಂಬುದು ಅವರ ಭಾವನೆ. ಒಬ್ಬ ನ್ಯಾಯಾಧಿಪತಿ, ಪೋಲೀಸಿನವನು, ಗವರ್ನರ್ ಅಥವಾ ಅಧಿಕಾರಿಯು, ಬೌಲಾಂಗರ್ ಪುಗಚ್ಚೆವ್ ಕ್ಯಾಥರೀನ್ ಇವರ ಅಥವಾ ಒಂದು ಗಣರಾಜ್ಯದ ಕೈಕೆಳಗೆ ಅವರು ತಮ್ಮ ಸ್ಥಾನವನ್ನು ಒಂದೇ ರೀತಿಯಾಗಿ ಉಳಿಸಿಕೊಳ್ಳಬಲ್ಲರು. ಆದರೆ ಇಂಥ ಒಂದು ಮೇಲ್ಪಟ್ಟಿನ ಅಧಿಕಾರವನ್ನು 'ತಮಗೆ ಕರುಣಿಸಿರುವ ಈ ರಾಜ್ಯವ್ಯವಸ್ಥೆ ಬಿದ್ದು ಹೋದರೆ ಅವರೆಲ್ಲಾ ಕೆಲಸ ಕಳೆದುಕೊಳ್ಳುವುದು ಖಂಡಿತ. ಆದ್ದರಿಂದ ಈ ಹಿಂಸಾವ್ಯವಸ್ಥೆಯ

---

[7] ಬವೇರಿಯಾದ ಎರಡನೇ ಲೂಯಿ (1845–86) ಅಧಿಕಾರಕ್ಕೆ ಬಂದದ್ದು 1864ರಲ್ಲಿ. ವ್ಯಾಗ್ನರ್‌ನನ್ನೂ ಆತನ ಸಂಗೀತವನ್ನೂ ಪ್ರೋತ್ಸಾಹಿಸಿ ಈತ ತುಂಬ ಹಣ ಖರ್ಚು ಮಾಡಿದ. ಮುಂದೆ ಈತ ಹುಚ್ಚನಾದ, ತನ್ನ ವೈದ್ಯನನ್ನು ಮುಳುಗಿಸಿ ಕೊಂದು ತಾನೂ ಕೊಳದಲ್ಲಿ ಮುಳುಗಿ ಸತ್ತ.

[8] ಮೊದಲನೆಯ ಪಾಲ್ (1754–1801) ಹುಚ್ಚನಾಗಿದ್ದ. ಈತನ ಮಗನಾದ ಅಲೆಗ್ಸಾಂಡರ್‌ನೊಂದಿಗೆ ಒಪ್ಪಂದ ಮಾಡಿಕೊಂಡು ಅಧಿಕಾರಿಗಳೇ ಈ ದೊರೆಯನ್ನು ಕೊಂದುಹಾಕಿದರು.

ಮುಖ್ಯಸ್ಥ ಯಾರೇ ಆದರೂ ಅವರು ಚಕಿತರಾಗುವುದಿಲ್ಲ. ಯಾರಿಗೆ ಬೇಕಾದರೂ ಅವರು ಹೊಂದಿಕೊಳ್ಳಬಲ್ಲರು. ರಾಜ್ಯ ವ್ಯವಸ್ಥೆಯೇ ಎಲ್ಲಿ ರದ್ದಾಗಿಬಿಡುತ್ತದೋ ಎಂಬುದೊಂದೇ ಅವರ ಹೆದರಿಕೆ. ಅವರು ಎಷ್ಟೋ ಸಲ ತಮಗೇ ಅರಿವಿಲ್ಲದಂತೆ ಇಂಥ ರಾಜ್ಯ ವ್ಯವಸ್ಥೆಯನ್ನು ಪೋಷಿಸಿಕೊಂಡು ಬರುವುದು ಈ ಕಾರಣಕ್ಕಾಗಿಯೇ.

ಸ್ವತಂತ್ರವಾದ ಬುದ್ಧಿಯುಳ್ಳ ಜನ, ಯಾವ ರೀತಿಯಲ್ಲೂ ಒತ್ತಾಯಕ್ಕೆ ಒಳಗಾಗದ ಜನ ಇದ್ದಾರೆ. ಅವರನ್ನು ಸಮಾಜದ ಪುಷ್ಪಗಳೆಂದು ಕರೆಯುವುದುಂಟು. ಅಂಥವರು ಕೂಡ ರಷ್ಯ, ಇಂಗ್ಲೆಂಡ್, ಜರ್ಮನಿ, ಆಸ್ಟ್ರಿಯಗಳಲ್ಲಿ (ಮತ್ತು ಫ್ರಾನ್ಸಿನಲ್ಲಿ ಕೂಡ) ಈ ಕೊಲೆಗೆಲಸದ ಅವಕಾಶಗಳನ್ನು ಏಕೆ ಬಯಸುತ್ತಾರೆ ಎಂಬುದು ತುಂಬ ಆಶ್ಚರ್ಯಕರವಾಗಿದೆ. ತಂದೆತಾಯಿಗಳು (ನೀತಿ ಪ್ರಜ್ಞೆಯುಳ್ಳ ತಂದೆ ತಾಯಿ ಕೂಡ) ಮಿಲಿಟರಿ ಶಿಕ್ಷಣದಲ್ಲಿ ತರಬೇತಿ ಪಡೆಯಲೆಂಬ ಉದ್ದೇಶದಿಂದ ತಮ್ಮ ಮಕ್ಕಳನ್ನು ಕಾಲೇಜಿಗೆ ಕಳುಹಿಸುವುದು ಏಕೆ? ತಾಯಂದಿರು ತಮ್ಮ ತುಂಬ ಮೆಚ್ಚಿನ ಆಟದ ಸಾಮಾನುಗಳೆಂದು ಭಾವಿಸಿ ತಮ್ಮ ಮಕ್ಕಳಿಗಾಗಿ ಶಿರಸ್ತ್ರಾಣಗಳು ಬಂದೂಕಗಳು ಮತ್ತು ಕತ್ತಿಗಳನ್ನು ಕೊಂಡುಕೊಳ್ಳುವುದೇಕೆ? (ರೈತರ ಮಕ್ಕಳು ಎಂದಿಗೂ ಸೈನಿಕರ ಆಟ ಆಡುವುದಿಲ್ಲ) ಅಷ್ಟೇಕೆ ಮಿಲಿಟರಿ ಸಂಗತಿಗಳಲ್ಲಿ ಸ್ವಲ್ಪವೂ ಸಂಬಂಧ ಹೊಂದಿರದ ಒಳ್ಳೆಯ ಗಂಡಸರು, ಹೆಂಗಸರೂ ಕೂಡ ಸ್ಕ್ಯೊಬೆಕ್ಯೋವ್[9] ಮತ್ತು ಇತರ ಸೇನಾಧಿಕಾರಿಗಳ ಅನೇಕ ಆಕ್ರಮಣಗಳ ವಿಚಾರವಾಗಿ ವರ್ಣಿಸಿ ರೋಮಾಂಚಗೊಳ್ಳುತ್ತಾ, ಅವುಗಳ ವೈಭವಗಳನ್ನು ಹೊಗಳುವುದರಲ್ಲಿ ಒಬ್ಬರನ್ನೊಬ್ಬರು ಮೀರಿಸುತ್ತಾ ಇರುವುದೇಕೆ? ಕಡ್ಡಾಯವಾಗಿ ಸೇನೆಗೆ ಸೇರಿಸುವ – ದೈಹಿಕವಾಗಿ ಒಪ್ಪಲಾಗದ ನೈತಿಕವಾಗಿ ನಿರಾಶಾದಾಯಕವಾದ ಕಾಯಕವನ್ನು ಒಪ್ಪಿಕೊಂಡು ಕುಲೀನವರ್ಗದ ಜನ ಆ ಕೆಲಸಮಾಡಬೇಕೆಂಬ ಒತ್ತಾಯ ಇಲ್ಲದಿದ್ದರೂ, ಅದಕ್ಕಾಗಿ ಸಂಬಳ ಬರದಿದ್ದರೂ ಅತ್ಯುತ್ಸಾಹದಿಂದ ತಿಂಗಳುಗಟ್ಟಲೆ ಆ ಕಾರ್ಯದಲ್ಲಿ ತೊಡಗುವುದೇಕೆ? ಚಕ್ರವರ್ತಿಗಳೂ ದೊರೆಗಳೂ ಎಲ್ಲಾ ಮಿಲಿಟರಿ ಸಮವಸ್ತ್ರದಲ್ಲಿ ಠಾಕುಠೀಕಾಗಿ ಓಡಾಡುವುದೇಕೆ? ಸೇನಾ ಚಲನೆಯನ್ನೂ ಪೆರೇಡುಗಳನ್ನೂ ಏರ್ಪಡಿಸಿ, ಮಿಲಿಟರಿ ಜನಕ್ಕೆ ಬಹುಮಾನಗಳನ್ನು ಹಂಚುತ್ತಾ ಸೇನಾಪತಿಗಳಿಗೂ ಯಶಸ್ವಿ ದಂಡನಾಯಕರುಗಳಿಗೂ ಸ್ಮಾರಕಗಳನ್ನು ನಿರ್ಮಿಸುವುದೇಕೆ? ಸ್ವತಂತ್ರ ಉದ್ದಿಮೆಗಳನ್ನುಳ್ಳ ಶ್ರೀಮಂತಜನ ಕಿರೀಟಪತಿಗಳ ಎದುರಿಗೆ ಕಾಲಾಳುಗಳಿಗೆ ಬಗ್ಗಿ ಸಲಾಮು ಹೊಡೆಯುತ್ತಾ ತಮ್ಮನ್ನೇ ಕೀಳುಮಾಡಿಕೊಂಡು ಅವರನ್ನು ಉಬ್ಬಿಸುತ್ತಾ ಆ ಅಧಿಕಾರಿ

---

[9] ಜನರಲ್ ಸ್ಕ್ಯೊಬೆಕೋವ್ 1873ರಲ್ಲಿ 'ಖೀವಾ'ವನ್ನು ವಶಪಡಿಸಿಕೊಂಡ. 1878ರಲ್ಲಿ ಪ್ಲೀವ ಆಕ್ರಮಣದಲ್ಲಿ ಪ್ರಮುಖ ಪಾತ್ರ ವಹಿಸಿದ್ದ ಈತ ತುಂಬ ಜನಪ್ರಿಯನಾಗಿದ್ದ, 1882ರಲ್ಲಿ ತುಂಬ ನಾಚಿಕೆಗೇಡಿನ ರೀತಿಯಲ್ಲಿ ಈತ ಸತ್ತದ್ದು ಮಾಸ್ಕೋದಲ್ಲೇ ಅಲ್ಲೋಲಕಲ್ಲೋಲವನ್ನೆಬ್ಬಿಸಿತು. Tales of Army Life ಎಂಬ ಗ್ರಂಥದಲ್ಲಿ ಈತನ ಬಗೆಗೆ ಉಲ್ಲೇಖವಿದೆ.

ಗಳ ವಿಶೇಷ ಸ್ಥಾನಮಾನಗಳನ್ನು ಒಪ್ಪಿಕೊಂಡಂತೆ ನಟಿಸುವುದೇಕೆ? ಮಧ್ಯಯುಗದ ಜರ್ಜಿನ ಮೂಢ ನಂಬಿಕೆಗಳನ್ನೆಲ್ಲಾ ಎಂದೋ ನಂಬದೆ ಕೈಬಿಟ್ಟಿರುವ ಮತ್ತು ಈಗಲೂ ನಂಬಿಕೆ ಇಡದ ಜನರು ಬಹಳ ಗಂಭೀರವಾಗಿ ಮತ್ತು ಬಂದೇ ಸಮನಾಗಿ ನಂಬಿಕೆಯುಳ್ಳವ ರಂತೆ ನಟಿಸುತ್ತಾ ಆ ನೀತಿಕೆಟ್ಟ ಪಾಷಂಡಿ ಕ್ರೈಸ್ತಮತೀಯ ಸಂಸ್ಥೆಗಳಿಗೆ ಉತ್ತೇಜನ ಕೊಡುವುದೇಕೆ? ಸರಕಾರ ಮಾತ್ರವಲ್ಲದೆ ಉನ್ನತ ವರ್ಗಗಳ ಖಾಸಗೀ ಜನ ಕೂಡ ಸಾಮಾನ್ಯ ಜನರ ಅಜ್ಞಾನವನ್ನು ಬಹಳ ಜೋಪಾನವಾಗಿ ರಕ್ಷಿಸಿಕೊಂಡು ಬರುತ್ತಿರುವು ದೇಕೆ? ಜನರಿಗೆ ನಿಜವಾದ ತಿಳುವಳಿಕೆ ತರಲು ಧಾರ್ಮಿಕ ಮೂಢ ನಂಬಿಕೆಗಳನ್ನು ಮೂಲೋತ್ಪಾಟನ ಮಾಡಲು ನಡೆಯುವ ಯಾವುದೇ ಪ್ರಯತ್ನವನ್ನು ಈ ವರ್ಗದ ಜನ ತುಂಬ ತೀವ್ರವಾಗಿ ವಿರೋಧಿಸುತ್ತಿರುವುದೇಕೆ? ಇತಿಹಾಸಕಾರರಿಗೆ, ಕಾದಂಬರಿ ಕಾರರಿಗೆ ಮತ್ತು ಕವಿಗಳಿಗೆ ಈಗ ಸ್ತುತಿಯಿಂದ ಏನೂ ಲಾಭವಾಗುತ್ತಿಲ್ಲ. ಆದರೂ ಅವರು ಎಂದೋ ಸತ್ತುಹೋದ ಚಕ್ರವರ್ತಿಗಳ, ದೊರೆಗಳ ಮತ್ತು ಸೇನಾನಾಯಕರ ಕಥೆಗಳನ್ನು ವೀರಗಾಥೆಗಳಂತೆ ವರ್ಣಿಸುತ್ತಿರುವುದೇಕೆ? ತಾವು ತುಂಬಾ ವಿದ್ಯಾವಂತರೆಂದು ಕೊಚ್ಚಿ ಕೊಳ್ಳುವ ಜನ, ಸರಕಾರವು ತನ್ನ ಪ್ರಜೆಗಳ ಮೇಲೆ ವಿಧಿಸುವ ಹಿಂಸೆ ಹಿಂಸೆಯೇ ಅಲ್ಲ ವೆಂದೂ ಅದೊಂದು ವಿಶಿಷ್ಟವಾದ ಹಕ್ಕೆಂದೂ ಸಾಧಿಸುವುದಕ್ಕಾಗಿ ವಾದಗಳನ್ನು ಮಂಡಿಸಲು ತಮ್ಮ ಜೀವಮಾನವನ್ನೇ ಮುಡಿಪಾಗಿಟ್ಟಿರುವುದೇಕೆ? ಸಮಾಜದ ಬಹು ಕಲಾವಿದ ಅಥವಾ ಹೆಂಗಸು ಸೈನಿಕ ಸಂಬಂಧವಾದ ಯಾವುದೇ ಸಮಸ್ಯೆಯಲ್ಲೂ ತಮಗೆ ಆಸಕ್ತಿ ಇಲ್ಲ ಎಂದು ತೋರಿಸಿಕೊಳ್ಳುತ್ತಾರೆ. ಆದರೂ ಅವರು ಕಾರ್ಮಿಕರ ಮುಷ್ಕರವನ್ನು ಖಂಡಿಸುತ್ತಾರೆ. ಯುದ್ಧವನ್ನು ಬೆಂಬಲಿಸುತ್ತಾರೆ. ಹೀಗೆ ಅವರು ಇಷ್ಟು ವಿಚಿತ್ರವಾಗಿ ಒಂದನ್ನು ಖಂಡಿಸಿ ಇನ್ನೊಂದನ್ನು ಮೆಚ್ಚಿಕೊಳ್ಳುವುದು ಏಕೆ?

ನಿಜವಾಗಿ ಹೇಳಬೇಕೆಂದರೆ ಆಳುವ ವರ್ಗದ ಜನಕ್ಕೆ ತಮ್ಮ ವಿಶೇಷ ಹಕ್ಕುಗಳೆಲ್ಲಾ ಉಳಿಯಬೇಕಾದರೆ ಏನು ಮಾಡಬೇಕೆಂಬುದು ಗೊತ್ತು. ವ್ಯವಸ್ಥೆಯ ಹಾನಿ ವೃದ್ಧಿ ಗಳೆರಡೂ ಏತರಲ್ಲಿವೆ ಎಂಬುದು ಅವರಿಗೆ ವಾಸನಾತ್ಮಕವಾಗಿ ತಿಳಿದುಹೋಗಿರುತ್ತವೆ. ಇವೆಲ್ಲಾ ಅರ್ಥವಾದಾಗ ನಾವೇನೂ ಆಶ್ಚರ್ಯಪಡಬೇಕಾಗಿಲ್ಲ.

ಸಮಾಜದ ಸಭ್ಯ ಮಹಿಳೆ ಸ್ಪಷ್ಟವಾಗಿ ಬಾಯಿಬಿಟ್ಟು ಹೀಗೆಲ್ಲಾ ಹೇಳುವುದಿಲ್ಲ. ತಮ್ಮ ರಕ್ಷಣೆಗೆ ಬಂಡವಾಳ ಶಾಹಿಗಳು ಮತ್ತು ಸೈನ್ಯವು ಇಲ್ಲದಿದ್ದರೆ ತಮ್ಮ ಗಂಡನ ಕೈಯಲ್ಲಿ ಹಣ ಇರುವುದಿಲ್ಲ. ಆಗ ತಮ್ಮ ವೈಭವಕ್ಕೆ, ಅದ್ದೂರಿಯ ಪೋಷಾಕುಗಳಿಗೆ ಅವಕಾಶವೇ ಇರುವುದಿಲ್ಲ ಎಂದು ಅವರು ಯಾರೊಂದಿಗೂ ವಾದಮಾಡಲು ಹೋಗುವು ದಿಲ್ಲ. ಹಾಗೆಯೇ ಕಲೆಗಾರನು ತನ್ನ ಚಿತ್ರಗಳ ಮಾರಾಟದ ದೃಷ್ಟಿಯಿಂದ ಶ್ರೀಮಂತವರ್ಗ ಮತ್ತು ಅದನ್ನು ಕಾಪಾಡುವ ಸೈನಿಕವರ್ಗ ಇರಬೇಕಾದುದು ತುಂಬ ಅಗತ್ಯ ಎಂದು ಘೋಷಿಸುವುದಿಲ್ಲ. ಆದರೆ ಈ ಸಂದರ್ಭಗಳಲ್ಲೆಲ್ಲ ಅವರ ವಾಸನಾತ್ಮಕವಾದ ವಿಚಾರಗಳು

ಬುದ್ಧಿಶಕ್ತಿಗೆ ಬದಲಾಗಿ ನಿಂತು ಅವರನ್ನು ತೊಂದರೆಯಾಗದ ಹಾದಿಯಲ್ಲಿ ನಡೆಸಿಕೊಂಡು ಹೋಗುತ್ತವೆ.

ಅದೇ ರೀತಿಯಲ್ಲಿ ಎಲ್ಲ ಬಗೆಯ ರಾಜಕೀಯ, ಧಾರ್ಮಿಕ ಮತ್ತು ಆರ್ಥಿಕ ಸಂಸ್ಥೆಗಳನ್ನು ಸ್ವಪ್ರಯೋಜನದ ದೃಷ್ಟಿಯಿಂದ ಬೆಂಬಲಿಸುವ ಜನರಿದ್ದಾರಲ್ಲ ಅವರನ್ನು ಕೂಡ ಈ ದಾರಿಗೆ ಹಚ್ಚುವ ಶಕ್ತಿ ಎಂದರೆ ಬಹುಮಟ್ಟಿಗೆ ಈ ವಾಸನಾತ್ಮಕ ಸ್ವಭಾವವೇ.

ಉನ್ನತ ವರ್ಗದ ಜನ ಕೇವಲ ತಮಗೆ ಪ್ರಯೋಜನಕಾರಿಯಾದದ್ದು ಎಂಬ ಕಾರಣಕ್ಕೆ ಮಾತ್ರ ಈ ರಾಜ್ಯವ್ಯವಸ್ಥೆಯನ್ನು ಬೆಂಬಲಿಸುತ್ತಿದ್ದಾರೆ ಎಂದು ಹೇಳುವುದು ಸಾಧ್ಯವೇ? ಈ ರಾಜ್ಯವ್ಯವಸ್ಥೆ ಮತ್ತು ಅದರ ಕ್ರಮಗಳೆಲ್ಲಾ ಯುಕ್ತಿಯುಕ್ತವಾದುವಲ್ಲ; ಮಾನವರ ಆತ್ಮಸಾಕ್ಷಿಗೆ ಹೊಂದುವಂತಹವಲ್ಲ. ಸಾರ್ವಜನಿಕ ಅಭಿಪ್ರಾಯದಲ್ಲಿ ಕೂಡ ಇದು ಸಿಂಧುವಲ್ಲ. ಅಲ್ಲದೆ ಇದು ತುಂಬ ಅಪಾಯದಿಂದ ಕೂಡಿದೆ ಎಂಬ ಸಂಗತಿಗಳು ಅವರಿಗೆಲ್ಲ ಗೊತ್ತಿರುತ್ತವೆ. ಆಳುವ ವರ್ಗದ ಸದ್ಭಾವದ ಪ್ರಾಮಾಣಿಕ ಮತ್ತು ವಿವೇಚನಾ ಶಕ್ತಿಯುಳ್ಳ ಕೆಲವೇ ಮಂದಿಗಾದರೂ ಈ ಅಂತರ್‌ವಿರೋಧಗಳು ಮತ್ತು ಮುಂದೆ ಬರಲಿರುವ ಅಪಾಯಗಳು ತಿಳಿಯದೆ ಇಲ್ಲ. ಇನ್ನು ಕೆಳವರ್ಗದ ವಿಚಾರ ಮಾಡೋಣ. ಸಮಾಜದಲ್ಲಿ ಕೆಳವರ್ಗದ ಕೋಟ್ಯಂತರ ಮಂದಿ ಇದ್ದಾರೆ. ಇವರು ಕೇವಲ ಒತ್ತಾಯದಿಂದ ಮತ್ತು ಶಿಕ್ಷೆಯ ಭಯದಿಂದ ಹಿಂಸಾಚಾರ ಮತ್ತು ಕೊಲೆ ಕೆಲಸಗಳನ್ನು ಮತ್ತು ಎಲ್ಲ ಬಗೆಯ ಕ್ರೂರ ಆಚರಣೆಗಳನ್ನು ಶಾಂತ ಮನಸ್ಸಿನಿಂದಲೇ ಮಾಡುತ್ತಾರೆ ಎಂದು ಹೇಳಲು ಸಾಧ್ಯವೇ? ತಾವು ಮಾಡುತ್ತಿರುವ ಕೆಲಸ ಎಷ್ಟು ಅವಿಚಾರಗಳಿಂದ ಕೂಡಿದೆ ಮತ್ತು ಎಷ್ಟು ಅಸಹಜವಾಗಿದೆ ಎಂಬ ಸಂಗತಿ ಈ ಎರಡು ವರ್ಗಗಳ ಜನತೆಗೂ ಒಳಗೊಳಗೇ ಗೊತ್ತಾಗದಿರಲು ಸಾಧ್ಯವಿಲ್ಲ. ರಾಜ್ಯವ್ಯವಸ್ಥೆಯ ಸಂಕೀರ್ಣತೆಯಲ್ಲೂ ಅವರು ಗುಪ್ತೋದ್ದೇಶಗಳನ್ನು ಅರ್ಥಮಾಡಿಕೊಳ್ಳಬಲ್ಲರು.

ಈ ಅವಿಚಾರಗಳನ್ನೆಲ್ಲಾ ಮುಚ್ಚಿಡುವ ದಾರಿಯನ್ನು ಸರಕಾರ ಕಂಡುಕೊಂಡಿದೆ. ಒಂದು ಕಾರ್ಯಾಚರಣೆ ನಡೆದರೆ ಅದರ ಮೂಲ ಯೋಜಕರು, ಸಹಾಯಕರು, ದಂಡಾಳುಗಳು ಎಷ್ಟೊಂದು ಜನರಿದ್ದಾರೆ ಎಂದರೆ ಇದರಲ್ಲಿ ಭಾಗವಹಿಸುವ ಯಾರಿಗೂ ತಾನೇ ನೈತಿಕವಾಗಿ ಇದಕ್ಕೆ ಜವಾಬ್ದಾರ ಎಂಬ ಭಾವನೆ ಬರುವುದೇ ಇಲ್ಲ.

ಕೊಲೆಗಾರರು, ಕೊಂದಮನುಷ್ಯನ ದೇಹದ ಎದುರಿಗೆ ನಿಂತ ಜನರನ್ನೆಲ್ಲ ಕರೆಸಿ ಅವರಿಂದಲೂ ಸತ್ತವನ ದೇಹಕ್ಕೆ ಹೊಡೆಸುತ್ತಾರೆ. ಇದರ ಜವಾಬ್ದಾರಿಯು ಸಾಕಷ್ಟು ವ್ಯಾಪಕವಾಗಿ ಇರಲಿ ಎಂಬುದೇ ಅವರ ಉದ್ದೇಶ. ಅದೇ ತತ್ವವನ್ನು ಇನ್ನಷ್ಟು ಖಚಿತವಾದ ವ್ಯವಸ್ಥೆಗಳೊಂದಿಗೆ ಸರಕಾರ ಅನುಸರಿಸಿದೆ. ಈ ಹತ್ಯಾಕಾಂಡವನ್ನು ಒಂದೇ ಸಮನೆ ಮಾಡಿಕೊಂಡು ಬರದಿದ್ದರೆ ಯಾವ ಸರಕಾರೀ ವ್ಯವಸ್ಥೆಯೂ ಉಳಿಯುವು

ದಿಲ್ಲ ಎಂಬ ಸಂಗತಿ ಆಳುವವರಿಗೆ ಗೊತ್ತಿರುತ್ತದೆ. ಆದುದರಿಂದ ಅಧಿಕಾರಿಗಳು ತಾವು ಮಾಡುವ ಪಾತಕ ಕಾರ್ಯಗಳಲ್ಲಿ ಎಷ್ಟೆಷ್ಟು ಸಾಧ್ಯವೋ, ಅಗತ್ಯವೋ ಅಷ್ಟಷ್ಟು ಸಾರ್ವಜನಿಕರು ಭಾಗವಹಿಸುವುದನ್ನು ಬಯಸುತ್ತಾರೆ.

ಈಚೆಗಂತೂ ಇದು ಸ್ಪಷ್ಟವಾಗಿ ವ್ಯಕ್ತಗೊಂಡಿದೆ. ನ್ಯಾಯಾಲಯಗಳಿಗ[10], ಪಂಚರ ಆಯ್ಕೆಮಾಡುವಾಗ ಸೈನ್ಯಕ್ಕೆ ಯೋಧರ ಆಯ್ಕೆಮಾಡುವಾಗ ಸ್ಥಾನಿಕ ವಿಧಾನ ಸಭೆಗಳಿಗೆ ಆಯ್ಕೆದಾರರಾಗಿ[11] ಪ್ರತಿನಿಧಿಗಳನ್ನು ನೇಮಿಸುವಾಗ ಸರಕಾರ ಈ ಕೆಲಸ ಮಾಡುತ್ತಿದೆ.

ಮೇದರು ಕುಕ್ಕೆಯನ್ನು ಹೆಣೆಯುವಾಗ ಒಳಗಿನ ಕಡ್ಡಿಗಳೆಲ್ಲಾ ಎಲ್ಲಿ ಅಡಗಿರುತ್ತವೆ ಎಂಬುದೇ ನಮಗೆ ಗೊತ್ತಾಗುವುದಿಲ್ಲ. ಅದೇ ರೀತಿಯಲ್ಲಿ ಒಂದು ರಾಜ್ಯವ್ಯವಸ್ಥೆಯಲ್ಲಿ ನಡೆಯುವ ತುಂಬ ಕ್ರೂರವಾದ ಅಪಕೃತ್ಯಗಳೆಲ್ಲಾ ಒಳಗೇ ಅಡಗಿರುತ್ತವೆ. ಆದ್ದರಿಂದ ಅವುಗಳಿಗೆ ಸಂಬಂಧಪಟ್ಟ ಯಾವುದೇ ಶ್ರೇಣಿಯ ಜನರಿಗೂ ತಾವು ಇದರಲ್ಲಿ ಜವಾಬ್ದಾರರು ಎಂಬ ಭಾವನೆ ಬರುವುದೇ ಇಲ್ಲ.

ಪೂರ್ವಕಾಲದಲ್ಲಿ ದುಷ್ಟ ಕಾರ್ಯಗಳನ್ನು ಮಾಡಿದಾಗ ಪೀಡಿತರನ್ನು ವಿಚಾರಣೆಗೆ ಗುರಿಪಡಿಸಲಾಗುತ್ತಿತ್ತು. ಆದರೆ ನೀರೋ ದೊರೆಯ ಕಾಲದಲ್ಲಿ ಕೂಡ. ನಡೆಯಲಾಗದಿದ್ದ ದುಷ್ಟ ಕಾರ್ಯಗಳು ಇಂದು ನಡೆಯುತ್ತಿವೆ. ಆದರೂ ನಾವು ಯಾರನ್ನೂ ದೂಷಿಸುವ ಹಾಗಿಲ್ಲ.

ಈಗ ಕೆಲವರು ಇಂಥ ಹೀನ ಕೃತ್ಯಗಳು ಆಗಬೇಕೆಂದು ಬಯಸುತ್ತಾರೆ. ಉಳಿದವರು ಅದು ಆಗತಕ್ಕದ್ದೆಂದು ನಿರ್ಧರಿಸುತ್ತಾರೆ. ಮೂರನೆಯ ಗುಂಪು ಆ ನಿರ್ಧಾರವನ್ನು ದೃಢಗೊಳಿಸುತ್ತದೆ. ನಾಲ್ಕನೆಯ ಗುಂಪು ಕಾರ್ಯಾಚರಣೆಯ ರೂಪ ರೇಷೆಗಳನ್ನು ನಿರ್ಧರಿಸುತ್ತದೆ. ಐದನೆಯದು ಅದರ ಬಗ್ಗೆ ಒಂದು ವರದಿಯನ್ನು ತಯಾರಿಸುತ್ತದೆ. ಆರನೆಯ ಗುಂಪು ಅಂತಿಮವಾಗಿ ಅದನ್ನು ಘೋಷಿಸುತ್ತದೆ. ಏಳನೆಯ ಗುಂಪು ಈ ನಿರ್ಧಾರವನ್ನು ಕಾರ್ಯಗತ ಗೊಳಿಸಲು ಹೊರಡುತ್ತದೆ. ಇದರ ಪರಿಣಾಮವಾಗಿ ಹೆಂಗಸರು ಮುದುಕರು ಮುಗ್ಧ ಜನರು ಸಾಯುತ್ತಾರೆ. ನೇಣಿಗೆ ಬಲಿಯಾಗುತ್ತಾರೆ. ಹೊಡೆತ ತಿನ್ನುತ್ತಾರೆ. ಕ್ರಾಂತಿಕಾರರು ಮತ್ತು ಕಾನೂನು ಭಂಗಮಾಡುವ ಜನರೊಂದಿಗೆ

---

10 1864ರಲ್ಲಿ ನಡೆದ ನ್ಯಾಯಾಂಗ ಸುಧಾರಣೆಗಳ ಅಂಗವಾಗಿ ಪಂಚರ ಮೂಲಕ ನ್ಯಾಯಾಂಗ ವಿಚಾರಣೆ ನಡೆಸುವ ಪದ್ಧತಿಯನ್ನು ಜಾರಿಗೆ ತರಲಾಯಿತು.

11 ಎಲೆಕ್ಟೋರಲ್ ಆಧಾರದ ಮೇಲೆ ಜೆಮ್‌ಸ್ಟ್ವೊವ್ಸ್ ಎಂಬ ಕೌಂಟಿ ಕೌನ್ಸಿಲ್ ಪದ್ಧತಿಯನ್ನು 1864ರಲ್ಲಿ ಜಾರಿಗೆ ತರಲಾಯಿತು.

ಹೋರಾಡಬೇಕಾದ ಎಲ್ಲ ಸಂದರ್ಭಗಳಲ್ಲೂ ಯೂರೋಪ್ ಅಮೆರಿಕಾ ದೇಶಗಳಲ್ಲಿ ಆಗುವುದು ಹೀಗೆಯೇ. ಈಚೆಗೆ[12] ಯೂಸೋವ್ ಗಣಿಗಳಲ್ಲಿ ನಡೆದದ್ದು ಹೀಗೆಯೇ. ಇಲ್ಲೆಲ್ಲಾ ನೂರಾರು, ಸಾವಿರಾರು ಜನರನ್ನು ಗುಂಡಿಕ್ಕಿ ಕೊಲ್ಲಲಾಗುತ್ತದೆ ಅಥವಾ ನೇಣು ಹಾಕಿ ಕೊಲ್ಲಲಾಗುತ್ತದೆ. ಯುದ್ಧಗಳಲ್ಲಿ ಆಗುವಂತೆ ಲಕ್ಷಾಂತರ ಮಂದಿಯನ್ನು ನಿರ್ದಾಕ್ಷಿಣ್ಯವಾಗಿ ಹತ್ಯೆ ಮಾಡಲಾಗುತ್ತದೆ. ಏಕಾಂತದ ಕೋಣೆಗಳಲ್ಲಿ ಕೂಡಿಹಾಕಿ ಜನರ ವಿವೇಕವನ್ನು ಕೆಡಿಸಲಾಗುತ್ತದೆ. ಇದು ಸತತವಾಗಿ ನಡೆಯುತ್ತಿರುವ ಕೆಲಸ. ಆದರೆ ಯಾರೂ ಇದರ ಜವಾಬ್ದಾರಿಯನ್ನು ಒಪ್ಪಿಕೊಳ್ಳುವುದಿಲ್ಲ.

ಸಾಮಾಜಿಕ ಶ್ರೇಣಿಯಲ್ಲಿ ಕೆಳಗಿನ ಹಂತದಲ್ಲಿರುವ ಸೈನಿಕರು ಬಂದೂಕು ರಿವಾಲ್ವರ್ ಮತ್ತು ಆಯುಧಗಳನ್ನು ಹಿಡಿದು. ಜನರನ್ನು ಚಿತ್ರಹಿಂಸೆಗೆ ಮತ್ತು ವಧೆಗೆ ಗುರಿಮಾಡುತ್ತಾರೆ ಮತ್ತು ಅವೇ ಕ್ರಮಗಳಿಂದ ಜನರನ್ನು ಒತ್ತಾಯಪೂರ್ವಕವಾಗಿ ಸೈನ್ಯಕ್ಕೆ ಸೇರಿಸುತ್ತಾರೆ. ಈ ಸೈನಿಕ ವರ್ಗದವರು ತಮಗೆ ಕಾರ್ಯಾಚರಣೆ ಮಾಡಲು ಆಜ್ಞೆ ಕೊಡುವ ಅಧಿಕಾರಿಗಳ ಮೇಲೆಯೇ ಎಲ್ಲ ಜವಾಬ್ದಾರಿಯು ಬಿದ್ದಿದೆಯೆಂದು ನಂಬುತ್ತಾರೆ. ಈ ಶ್ರೇಣಿಯ ಮೇಲು ವರ್ಗದಲ್ಲಿರುವ ಜಾರ್‌ಗಳು, ಅಧ್ಯಕ್ಷರು ಮತ್ತು ಮಂತ್ರಿಗಳು ಈ ಚಿತ್ರಹಿಂಸೆ, ವಧೆ ಮತ್ತು ಕಡ್ಡಾಯ ಸೇನಾ ಪ್ರವೇಶಗಳಿಗೆ ಆಜ್ಞೆಕೊಡುತ್ತಾರೆ. ದೇವರ ಮರ್ಜಿಯಿಂದಲೇ ತಾವೆಲ್ಲರೂ ಈ ಅಧಿಕಾರಗಳಲ್ಲಿ ಇರುವುದಾಗಿ ಅಥವಾ ತಾವು ಆಳುವ ಸಮಾಜ ತಮ್ಮಿಂದ ಇಂಥ ಕ್ರಮಗಳನ್ನು ಬಯಸುತ್ತವೆ ಎಂಬುದಾಗಿ ಸಂಪೂರ್ಣವಾಗಿ ನಂಬಿರುವ ಈ ಜನರನ್ನು ಇದಕ್ಕೆ ಜವಾಬ್ದಾರರು ಎಂದು ಹೇಳಲು ಸಾಧ್ಯವಿಲ್ಲ.

ಈ ಎರಡು ವರ್ಗಗಳ ಮಧ್ಯೆ ಒಂದು ಮಧ್ಯಂತರ ವರ್ಗವಿದೆ. ಹಿಂಸಾಚಾರ-ಕೊಲೆಗೆಲಸಗಳ ಮತ್ತು ಕಡ್ಡಾಯ ಸೇನಾ ನಿರ್ಮಾಣ ಪದ್ಧತಿಯ ಮೇಲ್ವಿಚಾರಕರು ಇವರು. ಈ ಜನ ಕೂಡ ತಾವು ಎಲ್ಲಾ ಬಗೆಯ ಜವಾಬ್ದಾರಿಗಳಿಂದ ಮುಕ್ತರು ಎಂದು ಭಾವಿಸುತ್ತಾರೆ. ಮೇಲಧಿಕಾರಿಗಳಿಂದ ಆಜ್ಞೆಯನ್ನು ಸ್ವೀಕಾರ ಮಾಡುವುದು ಮತ್ತು ಕೆಳವರ್ಗಕ್ಕೆ ಅದನ್ನು ವರ್ಗಾಯಿಸಿ ಬಿಡುವುದು ಇಷ್ಟೇ ತಮ್ಮ ಜವಾಬ್ದಾರಿಯೆಂದು ಭಾವಿಸಿದಂತಿದೆ.

ಆಜ್ಞೆಯನ್ನು ಕೊಡುವವರು ಮತ್ತು ಆಜ್ಞೆಯನ್ನು ಕೊನೆಯಲ್ಲಿ ಪಾಲಿಸುವವರು ಇವರಿಬ್ಬರೂ ರಾಜ್ಯ ವ್ಯವಸ್ಥೆಯ ಎರಡು ತುದಿಗಳಲ್ಲಿ ನಿಲ್ಲುತ್ತಾರೆ. ದುಂಡು ಸರಪಳಿಯ ಎರಡು ತುದಿಗಳನ್ನು ಕೂಡಿಸಿದಂತೆ ಇವರು ಎರಡು ತುದಿಗಳಲ್ಲಿ ಇದ್ದಾರೆ. ಒಂದೊಂದು

---

12 ದಕ್ಷಿಣ ರಷ್ಯಾದಲ್ಲಿ. ಹ್ಯೂ ಎಂಬ ಇಂಗ್ಲಿಷ್ ವ್ಯಾಪಾರಿ ಇಲ್ಲಿ ದೊಡ್ಡ ಕಬ್ಬಿಣದ ಕಾರ್ಖಾನೆಯನ್ನು ತೆರೆದಿದ್ದ.

ತುದಿಯು ತನ್ನ ಮಧ್ಯಂತರ ಕೊಂಡಿಗಳೊಂದಿಗೆ ಇನ್ನೊಂದು ತುದಿಗೆ ಅವಲಂಬನ ವಾಗಿರುತ್ತದೆ, ಮತ್ತು ಇನ್ನೊಂದರ ಕಾರ್ಯವನ್ನು ನಿರ್ಧರಿಸುತ್ತದೆ.

ಈ ಕಾರ್ಯಾಚರಣೆಯ ಎಲ್ಲಾ ಜವಾಬ್ದಾರಿಯೂ ಯಾರ ಮೇಲೋ ಬಿದ್ದಿದೆ ಎಂಬ ನಂಬಿಕೆ ಬರದಿದ್ದರೆ ಯಾವ ಸೈನಿಕರೂ ಹಿಂಸೆ ಮತ್ತು ಕೊಲೆ ಕೆಲಸಗಳಿಗೆ ಮುಂದೆ ಬರುವುದಿಲ್ಲ. ಅದೇ ರೀತಿಯಲ್ಲಿ ಈ ಕಾರ್ಯವನ್ನು ಆಚರಣೆಗೆ ತರುವ ಜನರಿದ್ದಾರೆ ಎಂಬ ನಂಬಿಕೆ ಬರದಿದ್ದರೆ ಯಾವ ಚಕ್ರವರ್ತಿ, ದೊರೆ, ಅಧ್ಯಕ್ಷ ಅಥವಾ ಪಾರ್ಲಿಮೆಂಟ್-ಕೂಡಾ ಇಂಥ ಆಜ್ಞೆಗಳನ್ನು ಹೊರಡಿಸುವ ಧೈರ್ಯಮಾಡುವುದಿಲ್ಲ. ತಮ್ಮ ಒಳ್ಳೆಯ ದಕ್ಕಾಗಿಯೇ ಇಂಥ ಕಾರ್ಯಾಚರಣೆ ಮಾಡಬಲ್ಲ ಕೆಳವರ್ಗದ ಸೈನಿಕರು ಸಿದ್ಧರಾಗಿದ್ದಾರೆ ಎಂಬ ನಂಬಿಕೆ ಇಲ್ಲದಿದ್ದರೆ ಯಾವ ಮಧ್ಯಂತರ ವರ್ಗದ ಅಧಿಕಾರಿಗಳೂ ಇಂತಹ ಜವಾಬ್ದಾರಿಗಳನ್ನು ಒಪ್ಪಿಕೊಳ್ಳುವುದಿಲ್ಲ.

ನಮ್ಮ ರಾಜ್ಯ ವ್ಯವಸ್ಥೆ ಹೇಗಿದೆ ಎಂದರೆ ಜನ ಈ ಸಾಮಾಜಿಕ ಶ್ರೇಣಿಯ ಯಾವುದೇ ಮಟ್ಟದಲ್ಲಿರಲಿ ಅವರ ಹೊಣೆಗೇಡಿತನ ಮಾತ್ರ ಒಂದೇ ಬಗೆಯದಾಗಿರುತ್ತದೆ. ಒಬ್ಬನು ಎತ್ತರದ ಮಟ್ಟಗಳನ್ನು ಮುಟ್ಟಿದಂತೆಲ್ಲಾ ಕೆಳಗಿನವರು ಅವನ ಆಜ್ಞೆಗಾಗಿ ಕಾಯುವುದೂ ಹೆಚ್ಚಾಗುತ್ತದೆ. ಹಾಗೆಯೇ ಕೆಳಗಿನವನಾದಂತೆಲ್ಲಾ ಅವನಿಗೆ ನೇರವಾಗಿ ಆಜ್ಞೆಕೊಡುವ ಅಧಿಕಾರಿಗಳ ಸಂಖ್ಯೆ ಕಡಿಮೆಯಾಗುತ್ತಾ ಹೋಗುತ್ತದೆ.

ನನ್ನ ಎದುರಿಗೆ ಇದ್ದ ದೃಶ್ಯವೂ ಇದೇ ಬಗೆಯದು. ಒಬ್ಬನ ಸ್ಥಾನ ಎಷ್ಟು ದೊಡ್ಡದು ಅಥವಾ ಎಷ್ಟು ಚಿಕ್ಕದು ಎಂಬುದು ಇದೇ ಅಳತೆಗೋಲಿನಿಂದ ನಿರ್ಧಾರ ವಾಗುತ್ತದೆ. ರಾಜ್ಯವ್ಯವಸ್ಥೆಗೆ ಸೇರಿದ ಎಲ್ಲ ಜನಗಳೂ ಹೀಗೆ ಜವಾಬ್ದಾರಿಯನ್ನು ಬೇರೊಬ್ಬರ ಮೇಲೆಯೇ ಹಾಕುತ್ತಾ ಹೋಗುತ್ತಾರೆ. ಸೈನಿಕ ತನ್ನ ಮೇಲಧಿಕಾರಿ ಯಾದ ಘನವಂತನ ಮೇಲೆ ಹಾಕುತ್ತಾನೆ. ಈ ಮೇಲಧಿಕಾರಿಯು ಗವರ್ನರನ ಸ್ಥಾನವನ್ನು ಗಿಟ್ಟಿಸಿರುವ ಸಮಾಜದ ಇನ್ನೊಬ್ಬ ಪ್ರತಿಷ್ಠಿತನ ಮೇಲೆ ಈ ಜವಾಬ್ದಾರಿಯನ್ನು ಹೊರಿಸುತ್ತಾನೆ. ಆ ಗವರ್ನರ್ ಪ್ರತಿಯಾಗಿ ಅದನ್ನು ಮಂತ್ರಿಪದವಿಯನ್ನು ಪಡೆದಿರುವ ಒಬ್ಬ ಹಿರಿಯ ಅಧಿಕಾರಿಯ ಮಗನ ಮೇಲೆ ಅಥವಾ ಸಮಾಜದ ಹಿರಿಯನ ಮೇಲೆ ಹೊರಿಸುತ್ತಾನೆ. ಆ ಮಂತ್ರಿ ಅದನ್ನು ಜಾರ್ ಪದವಿಗೆ ಏರಿದ ರಾಜ ಕುಟುಂಬದ ಮೇಲೆ ಹಾಕುತ್ತಾನೆ. ಇವರಂತೆಯೇ ಜಾರ್‌ದೊರೆ ಕೂಡ ಈ ಜವಾಬ್ದಾರಿಯನ್ನು ಅಧಿಕಾರಿಗಳಮೇಲೆ, ಘನವಂತರ ಮೇಲೆ, ವರ್ತಕರ ಮೇಲೆ, ರೈತರ ಮೇಲೆ ಹಾಕುತ್ತಾ ಹೋಗುತ್ತಾನೆ. ಹೀಗೆ ಎಲ್ಲ ಜನರೂ ಜವಾಬ್ದಾರಿಗಳಿಂದ ಮುಕ್ತರಾಗುತ್ತಾರೆ ಮತ್ತು ಜವಾಬ್ದಾರಿಯ ನೈತಿಕ ಪ್ರಜ್ಞೆಯನ್ನು ಕಳೆದುಕೊಂಡು ಬಿಡುತ್ತಾರೆ. ಇದಕ್ಕೆ ಕಾರಣ ವೇನೆಂದರೆ, ರಾಜ್ಯವ್ಯವಸ್ಥೆಯ ಯಂತ್ರಕ್ಕೆ ಸಿಕ್ಕಿದ ಅವರು ತಾವೆಲ್ಲರೂ ಸಮಾನರಾಗಿ ವ್ಯಕ್ತಿ ವ್ಯಕ್ತಿಯ ನಡುವೆ. ನಕ್ಷತ್ರಗಳಿಗಿರುವಂತೆ. ತುಂಬ ವ್ಯತ್ಯಾಸಗಳಿವೆ ಎಂಬುದಾಗಿ

ಸತತವಾಗಿ ಕಷ್ಟಪಟ್ಟು ನಂಬಿಕೊಂಡು ಬಂದಿದ್ದಾರೆ. ಇದು ನಿಜವೆಂದೇ ಅವರು ಭ್ರಮಿಸುತ್ತಾರೆ. ಇದರಿಂದಾಗಿ ಸಮಾಜದಲ್ಲಿ ಕೆಲವರು ಹಿರಿಯರು ಉಳಿದವರಂತೆ ತಾವು ಸಾಮಾನ್ಯದವರಲ್ಲವೆಂದೂ ವಿಶೇಷ ಗೌರವಾದರಗಳಿಗೆ ಪಾತ್ರವಾಗುವ ಯೋಗ್ಯತೆ ತಮಗಿದೆಯೆಂದೂ ಭಾವಿಸಿಕೊಳ್ಳುತ್ತಾರೆ. ತಾವು ತುಂಬ ಕೀಳೆಂದೂ ಮೇಲಿನವರ ಆಜ್ಞೆಗಳನ್ನು ಎಂದಿಗೂ ಗೊಣಗದೆ ತಪ್ಪದೆ ಪರಿಪಾಲಿಸಬೇಕೆಂದೂ ಉಳಿದವರು ಭಾವಿಸುವಂತೆ ಇವರು ಮಾಡುತ್ತಾರೆ.

ಈಗಿನ ರಾಜ್ಯವ್ಯವಸ್ಥೆಯ ವಿತರ್ಕ, ಕ್ರೌರ್ಯ ಮತ್ತು ದುಷ್ಟತನಗಳನ್ನು ಜನ ಕಡೆಗಣಿಸಿದ್ದಾರೆ. ಇದಕ್ಕೆ ಮುಖ್ಯ ಕಾರಣವೆಂದರೆ ಈ ಅಸಮತೆ. ಕೆಲವರನ್ನು ಮೇಲಕ್ಕೆತ್ತಿ. ಕೆಲವರನ್ನು ಮೂಲೆಗೆ ತಳ್ಳಿರುವ ತಂತ್ರ. ಕೆಲವರು ಇಂಥಾ ಭ್ರಮೆಯ ತಂತ್ರಗಳಲ್ಲಿ ತುಂಬ ನುರಿತಿದ್ದಾರೆ. ಆದ್ದರಿಂದ ಉಳಿದವರು ಸಂಕಟಪಡಬೇಕಾಗಿದೆ.

ಯಾವ ಅಧಿಕಾರಿಯ ಮನಸ್ಸಿನಲ್ಲಿ. ತಾನು ಇಂಥ ಒಂದು ವಿಶೇಷ ಅತಿಮಾನುಷ ಮಹತ್ವ ಮತ್ತು ವೈಭವಗಳ[13] ಕೃಪೆಗೆ ಪಾತ್ರನಾಗಿದ್ದೇನೆ ಎಂಬ ಭಾವನೆ ಹೊಕ್ಕಿರುತ್ತದೆಯೋ ಅಂಥವನು ತನ್ನ ಕಲ್ಪನೆಯ ಪ್ರತಿಷ್ಠೆಯ ಮದದಿಂದ ಕೊಬ್ಬಿರುತ್ತಾನೆ. ಮತ್ತು ತನ್ನ ನಡವಳಿಕೆಯ ಜವಾಬ್ದಾರಿಯನ್ನು ಮರೆಯಲು ಆರಂಭಿಸುತ್ತಾನೆ.

ಈಗ ಕೆಳವರ್ಗದ ಜನರ ವಿಚಾರಕ್ಕೆ ಬರೋಣ. ಇವರು ತಾವು ಕ್ಷುಲ್ಲಕರೆಂದೂ ಪ್ರತಿಯೊಂದು ವಿಷಯದಲ್ಲೂ ಮೇಲಧಿಕಾರಿಗಳ ಆಜ್ಞಾನುವರ್ತಿಗಳೆಂದೂ ನಂಬಿದ ಜನ. ಒಂದೇ ಸಮನಾಗಿ ತುಳಿತಕ್ಕೆ ಒಳಗಾದ ಈ ಜನ ದೀನ ಗುಲಾಮಗಿರಿಯ ಸ್ಥಿತಿಗೆ ಇಳಿಯುತ್ತಾರೆ. ಪರಿಣಾಮವಾಗಿ ತಾವು ಮಾಡುವ ಕಾರ್ಯದ ಜವಾಬ್ದಾರಿ ತಮ್ಮ ಮೇಲಿರುವುದನ್ನು ಮರೆಯುತ್ತಾರೆ.

ಇನ್ನು ಮಧ್ಯಂತರ ವರ್ಗದ ಜನ. ಇವರು ಒಂದುಕಡೆ ಮೇಲಿನವರ ಆಜ್ಞೆಗೆ ತಲೆಬಾಗುತ್ತಾ ಹೋಗುತ್ತಾರೆ, ಇನ್ನೊಂದು ಕಡೆ ತಮ್ಮ ಕೆಳಗಿನವರ ಮೇಲೆ ಅಧಿಕಾರ ಚಲಾಯಿಸುತ್ತಾ ಹೋಗುತ್ತಾರೆ. ಇವರು ಅಧಿಕಾರ ಮತ್ತು ಗುಲಾಮಗಿರಿ ಇವೆರಡರ ಹುಚ್ಚಿಗೂ ಸಿಕ್ಕ ಜನ. ಆದ್ದರಿಂದ ಸಹಜವಾಗಿ ಇವರು ತಮ್ಮ ಜವಾಬ್ದಾರಿಗಳನ್ನು ಮರೆತು ಬಿಡುತ್ತಾರೆ.

ಒಂದು ಸೇನಾ ಪ್ರದರ್ಶನದ ದೃಶ್ಯವನ್ನು ನೋಡಿದಾಗ ತಾನು ಏಕಮೇವಾದ್ವಿತೀಯನೆಂಬ ಮದ ತಲೆಹೊಕ್ಕಿರುವ ದಂಡನಾಯಕನ ಠೀವಿಯನ್ನು ಕಾಣಬಹುದು.

---

13 ಕೈಸರ್ ಎರಡನೆಯ ವಿಲ್‌ಹೆಲ್ಮ್‌ನ ಹುಚ್ಚಾಟಗಳು ಆಗ ತಾನೇ ಜಗತ್ತಿನ ಶಾಂತಿಯನ್ನು ಮತ್ತು ಪೂರ್ವ ಯೂರೋಪಿನ ಮೂರು ಸಾಮ್ರಾಜ್ಯಗಳನ್ನು ಅಪಾಯಕ್ಕೆ ಈಡುಮಾಡಿದ್ದವು.

ಬಹಳ ವೈಭವದಿಂದ ಸಜ್ಜುಗೊಂಡ ಕುದುರೆಗಳ ಮೇಲೆ ಕುಳಿತ ವಿಶೇಷ ಸಮವಸ್ತ್ರ ಧರಿಸಿದ ಸೈನಿಕರ ನಡುವೆ ಆತ ಕಾಣಿಸಿಕೊಳ್ಳುತ್ತಾನೆ. ಬಿಜಯದುಂದುಭಿ ಮೊಳಗುತ್ತಿರುತ್ತದೆ. . ಮಿಲಿಟರಿ ಸಂಗೀತ ಆರಂಭವಾಗಿರುತ್ತದೆ. ಇವುಗಳ ಹಿನ್ನೆಲೆಯಲ್ಲಿ ಸ್ತಂಭೀಭೂತರಾದ ದೀನಭಕ್ತಿಯ ಸೈನಿಕರ ಗೌರವ ರಕ್ಷಣೆಯನ್ನು ಸ್ವೀಕರಿಸುತ್ತಾ ಮಹಾ ದಂಡನಾಯಕ ಅಶ್ವಾರೋಹಿಯಾಗಿ ಬರುತ್ತಾನೆ. ಇಂಥ ದೃಶ್ಯಗಳನ್ನು ನೋಡಿ ದಾಗ ಒಂದು ವಿಶೇಷ ಅನುಭವವಾಗುತ್ತದೆ. ಮಹಾ ದಂಡನಾಯಕ, ಅಲ್ಲಿರುವ ಅಧಿಕಾರಿ ಗಳು ಮತ್ತು ಸೈನಿಕರು ಆ ನಿಮಿಷದಲ್ಲಿ ಸಂಪೂರ್ಣವಾಗಿ ಮದಿಸಿರುತ್ತಾರೆ. ಬೇರೆ ಯಾವ ಸಂದರ್ಭದಲ್ಲೂ ಮಾಡಲು ಸಾಧ್ಯವಿಲ್ಲದ ಯಾವುದೇ ಬಗೆಯ ಕಾರ್ಯಾಚರಣೆಗೆ ಅವರೆಲ್ಲಾ ಸಿದ್ಧರಾಗಿರುತ್ತಾರೆ.

ಇಂಥ ಪರೇಡುಗಳ, ರಾಜಸ್ವಾಗತಗಳ, ಚರ್ಚ್ ಮತವಿಧಿಗಳ ಮತ್ತು ಕಿರೀಟ ಧಾರಣೋತ್ಸವಗಳ ದೃಶ್ಯಗಳು ಈ ಜನರ ಮೇಲೆ ತರುವ ಅಮಲು ದೀರ್ಘಕಾಲದ್ದಲ್ಲ. ಅದೊಂದು ಕ್ಷಣಿಕ ಸ್ಥಿತಿ ಅಷ್ಟೆ. ಆದರೆ ದೀರ್ಘ ಕಾಲದಿಂದ ಬೇರೂರಿದ ಮತ್ತು ಸತತವಾದ ಇನ್ನೂ ಕೆಲವು ಅಮಲುಗಳಿವೆ. ಅಧಿಕಾರವುಳ್ಳ(ಅಂದರೆ ಜಾರ್ ದೊರೆಯಿಂದ ಹಿಡಿದು ಬೀದಿಯ ಪೋಲೀಸ್‌ನ ವರೆಗೆ) ಜನ ಮತ್ತು ಜಡ ದೈನ್ಯದಿಂದ ಅಧಿಕಾರಕ್ಕೆ ತಲೆಬಾಗುವ ಜನ ಇಬ್ಬರೂ ಈ ಅಮಲುಗಳ ಅನುಭವ ಪಡೆದಿದ್ದಾರೆ.

ತಮ್ಮ ಸ್ಥಿತಿಯನ್ನು ಸಮರ್ಥಿಸಿಕೊಳ್ಳುವುದಕ್ಕಾಗಿ ಈ ಜನರು ಯಾವಾಗಲೂ ತಮ್ಮ ಮೇಲಿನವರಿಗೆ ಅತ್ಯಂತ ಹೆಚ್ಚಿನ ಮಹತ್ವವನ್ನೂ ಘನತೆಯನ್ನೂ ತಂದುಕೊಡು ತ್ತಾರೆ. ಎಲ್ಲ ಗುಲಾಮರುಗಳು ವರ್ತಿಸುವುದು ಹೀಗೆ ತಾನೆ.

ಒಟ್ಟಿನಲ್ಲಿ ಹೇಳುವುದಾದರೆ ಈ ಅಸಮಾತೆಯ ಪೊಳ್ಳು ಭಾವನೆ. ಅಧಿಕಾರ ಮತ್ತು ದೀನತನಗಳ ಅಮಲು ಇವು ರಾಜ್ಯ ವ್ಯವಸ್ಥೆಯ ಎಲ್ಲ ವರ್ಗಗಳ ಜನರಲ್ಲಿ ಸೇರಿಕೊಂಡಿವೆ. ಅದರಿಂದಾಗಿ ಈ ಜನ ಆತ್ಮಸಾಕ್ಷಿಗೆ ವಿರೋಧವಾದ ಎಲ್ಲ ಕೆಲಸಗಳನ್ನೂ ಅಳುಕಿಲ್ಲದೆ ನೆರವೇರಿಸುತ್ತಾರೆ.

ಇಂಥ ಅಮಲಿನ ಪ್ರಭಾವಕ್ಕೆ ಸಿಕ್ಕಿರುವ ಜನ ತಾವು ಎಂದಿನ ರೀತಿಯ ಜನರಲ್ಲ ವೆಂದೂ ವಿಶೇಷ ಸಂಪ್ರದಾಯದ ಜೀವಿಗಳೆಂದೂ ತಮ್ಮನ್ನು ತಾವೇ ವಂಚಿಸಿಕೊಳ್ಳುತ್ತಾರೆ ಮತ್ತು ಇತರರನ್ನು ವಂಚಿಸುತ್ತಾರೆ. ಧನವಂತರು. ವರ್ತಕರು, ಗವರ್ನರ್‌ಗಳು. ನ್ಯಾಯಪತಿಗಳು. ಅಧಿಕಾರಿಗಳು. ದೊರೆಗಳು. ಮಂತ್ರಿಗಳು. ಸೈನಿಕರು ಇವರೆಲ್ಲ ಹೀಗೆ ಸಾಮಾನ್ಯ ಮಾನವ ಕರ್ತವ್ಯಗಳನ್ನು ಮರೆತು ಇವರು ಶ್ರೀಮಂತಿಕೆಯ. ವಾಣಿಜ್ಯದ. ಸರಕಾರದ. ನ್ಯಾಯಾಂಗದ. ಮಿಲಿಟರಿಯ. ಅರಸೊತ್ತಿಗೆಯ ಅಥವಾ ಸಚಿವಗಾರಿಕೆಯ ವಿಧಿಗಳಲ್ಲಿ ತೊಡಗುತ್ತಾರೆ. ಮರದ ತೋಪಿನ ವಿಚಾರವಾಗಿ

ಜಮೀನ್ದಾರನು ನ್ಯಾಯ ರಕ್ಷಣೆಯನ್ನು ಕೋರಿದ್ದು ಇದೇ ಕಾರಣಕ್ಕಾಗಿ. ತನ್ನ ಜತೆಯಲ್ಲಿ ವಾಸಮಾಡುತ್ತಿರುವ ರೈತ ಜನಗಳಂತೆಯೇ ಸಾಧಾರಣವಾದ ಮಾನವ ಹಕ್ಕುಗಳನ್ನು ಅನುಭವಿಸುವ ಸಾಮಾನ್ಯ ಮನುಷ್ಯ ತಾನಲ್ಲ ಎಂದು ಅವನು ನಂಬಿಕೊಂಡಿದ್ದಾನೆ. ತಾನೊಬ್ಬ ದೊಡ್ಡ ಜಮೀನುದಾರ. ಸಂಭಾವಿತ ವರ್ಗದ ಸದಸ್ಯ ಎಂಬುದೂ ಅವನ ಭಾವನೆಯಾಗಿದೆ. ಅಧಿಕಾರದ ಅಮಲಿನಿಂದ ಪ್ರಭಾವಿತನಾದ ಅತ ಈ ರೈತರ ಬೇಡಿಕೆಗಳಿಂದ ತನ್ನ ಘನತೆಗೆ ಕುಂದು ಬಂದಿದೆಯೆಂದು ಭಾವಿಸಿದ್ದಾನೆ. ಇದರಿಂದಾಗಿ ಮುಂದೆ ಆಗುವ ಯಾವ ಪರಿಣಾಮಗಳ ಕಡೆಗೂ ಲಕ್ಷ್ಯಕೊಡದೆ ತಾನು ಭ್ರಮಿಸಿದ ಹಕ್ಕುಗಳನ್ನು ಉಳಿಸಿಕೊಳ್ಳುವುದು ಮಾತ್ರ ಅವನ ಉದ್ದೇಶ.

ಆ ಮರದ ತೋಪನ್ನು ಕಾನೂನುಬದ್ಧವಾಗಿ ಮತ್ತೆ ಜಮೀನುದಾರನಿಗೆ ಕೊಡಬೇಕೆಂದು ತೀರ್ಪುಕೊಟ್ಟ ನ್ಯಾಯಾಧೀಶರದೂ ಇದೇ ಪಾಡು. ತಾವು ಉಳಿದೆಲ್ಲರಂತೆ ಸಾಮಾನ್ಯ ಮನುಷ್ಯರಲ್ಲವೆಂದೂ ಪ್ರತಿಯೊಂದು ಸಮಯದಲ್ಲೂ ಸತ್ಯದ ಬೆಳಕಿನಲ್ಲೇ ನಡೆಯುವವರೆಂದೂ ಅವರು ಭಾವಿಸಿಕೊಂಡಿದ್ದಾರೆ. ಆದರೆ ಈಗ ಅಧಿಕಾರದ ಅಮಲಿನಿಂದಾಗಿ ಅವರು ತಾವು ಈಗ ಸರಕಾರಿ ಕಾಯಿದೆಗಳ ನಿಷ್ಠಾವಂತ ಪಾಲಕರೆಂದೂ ಯಾವ ತಪ್ಪು ತಮ್ಮಿಂದ ಆಗುವುದಿಲ್ಲವೆಂದೂ ಭಾವಿಸಿಕೊಂಡಿದ್ದಾರೆ. ಮೇಲಧಿಕಾರಿಗಳಿಗೆ ತೋರಿಸುವ ಗುಲಾಮಗಿರಿಯ ಅಮಲಿನಲ್ಲಿ ಅವರು ಕಾನೂನಿನ ಗ್ರಂಥಗಳಲ್ಲಿ ಬರೆಯಲಾಗಿರುವ ಕೆಲವು ನ್ಯಾಯ ಸೂತ್ರಗಳನ್ನು ಜಾರಿಗೆ ತರುವ ಜನ ತಾವು ಎಂದು ತಿಳಿದುಕೊಂಡಿದ್ದಾರೆ. ಉಳಿದವರೂ ಹೀಗೆಯೇ. ಈ ವರದಿಗೆ ಸಹಿ ಹಾಕಿದ ಅಧ್ಯಕ್ಷ ಅಧಿಕಾರಿ. ಸೇನೆಗೆ ಜನರನ್ನು ಸೇರಿಸಿಕೊಂಡ ಸಮಯದಲ್ಲಿ ಮುಖ್ಯ ಪಾತ್ರವಹಿಸಿದ್ದ ಸೇನಾಧಿಕಾರಿ. ಸೇನೆಗೆ ಸೇರಿದವರನ್ನು ವಂಚನೆಯ ಜಾಲಕ್ಕೆ ಸಿಕ್ಕಿಸಿದ ಚರ್ಚಿನ ಬಿಷಪ್, ಇವರುಗಳಿಂದ ಹಿಡಿದು ಈಗ ತನ್ನ ಬಾಂಧವರನ್ನೇ ಕೊಲ್ಲಲು ಸಿದ್ಧವಾಗಿ ಹೊರಟಿರುವ ಸೈನಿಕರವರೆಗೆ ಎಲ್ಲರದೂ ಇದೇ ಭಾವನೆಯಾಗಿದೆ. ತಾವು ಉಳಿದವರಂತೆ ಅಲ್ಲ, ತಾವು ಬೇರೊಂದು ವಿಶಿಷ್ಟ ಶಕ್ತಿಯ ಜನ ಎಂಬುದಾಗಿ ಇವರೆಲ್ಲಾ ಭಾವಿಸಿದ್ದಾರೆ. ಸಾಮಾನ್ಯವಾಗಿ ನಮ್ಮ ಆತ್ಮಸಾಕ್ಷಿಗೆ ಒಪ್ಪದ ಕೆಲಸಗಳನ್ನು ಮಾಡುವ ಮುನ್ನ ಜನರಲ್ಲಿ ಇದು ಸರಿಯೇ ತಪ್ಪೇ ಎಂಬ ಯೋಚನೆಗಳ ಗೊಂದಲ ಉಂಟಾಗುತ್ತದೆ. ಇದು ನಿಜ ಜೀವನದಲ್ಲಿ ಸಾಧ್ಯ. ಆದರೆ ಈ ಜನ ತಾವು ಎಲ್ಲರಂತೆ ಅಲ್ಲವೆಂದೂ ಒಂದು ಸಂಪ್ರದಾಯಕ್ಕೆ ಒಳಪಟ್ಟವರೆಂದೂ ಭಾವಿಸುವುದರಿಂದ ಯಾವುದೇ ಬಗೆಯ ಕೆಲಸ ಮಾಡುವುದಕ್ಕೂ ಸಿದ್ಧರಾಗಿ ಮುನ್ನುಗ್ಗುತ್ತಾರ. ಉದಾಹರಣೆಗೆ ಪಟ್ಟಾಭಿಷಿಕ್ತನಾದ ಜಾರ್ ದೊರೆ. ಈತ ಕೋಟ್ಯಂತರ ಜನಗಳ ಕಲ್ಯಾಣವನ್ನು ಚಿಂತಿಸುವ ವಿಶಿಷ್ಟ ವ್ಯಕ್ತಿ ತಾನು ಎಂದು ಭಾವಿಸುತ್ತಾನೆ. ಇನ್ನೊಬ್ಬ ಘನವಂತರ ವರ್ಗದ ಮೇಲ್ವಿಚಾರಕ ತಾನು ಎಂದು ಭಾವಿಸುತ್ತಾನೆ. ಪಾದ್ರಿ ತಾನು ಕ್ರೈಸ್ತ ದೀಕ್ಷೆಯನ್ನು ತೊಟ್ಟು ವಿಶೇಷ ಕೃಪೆಗೆ ಪಾತ್ರನಾಗಿದ್ದೇನೆ ಎಂದು ಭಾವಿಸುತ್ತಾನೆ. ಹಿಂದೆ ಮುಂದೆ ನೋಡದೆ ಪ್ರತಿಜ್ಞೆಯನ್ನು

ಸ್ವೀಕರಿಸಿದ ಸೈನಿಕ ತನಗೆ ಅಪ್ಪಣೆಯಾದುದನ್ನೆಲ್ಲಾ ಮಾಡಲೇಬೇಕು ಎಂದು ನಿರ್ಧರಿಸಿಕೊಂಡು ಬಿಟ್ಟಿರುತ್ತಾನೆ. ತಾವೇ ಕಲ್ಪಿಸಿಕೊಂಡಿರುವ ವಿಶಿಷ್ಟ ಅಧಿಕಾರದ ಪರಿಣಾಮವಾಗಿ ಈ ಎಲ್ಲ ಜನರೂ ಅಧಿಕಾರ ದೈನ್ಯಗಳ ಅಮಲಿಗೆ ಸಿಕ್ಕು ವಿವೇಚನೆ ಇಲ್ಲದೆ ಕಾರ್ಯಾಚರಣೆಯಲ್ಲಿ ತೊಡಗುತ್ತಾರೆ.

ಜಾರ್ ದೊರೆ. ಮಂತ್ರಿ. ಗವರ್ನರ್. ನ್ಯಾಯಪತಿ. ಧನವಂತ. ಜಮೀನ್ದಾರ, ಸೇನಾಧಿಕಾರಿ, ಅಧಿಕಾರಿ, ಯೋಧ – ಹೀಗೆಂದು ಕರೆಸಿಕೊಳ್ಳುವುದು ತುಂಬ ಸಹಜವೆಂದೂ ಮುಖ್ಯವೆಂದೂ ನಂಬಿಕೆ ಬರದಿದ್ದರೆ ಈ ಮೇಲಿನ ಜನಗಳಲ್ಲಿ ಯಾರೂ ಅಸಹ್ಯಪಡದೆ ಹೆದರದೆ ಇಂಥ ಕೆಲಸಗಳಲ್ಲಿ ತೊಡಗಲು ಒಪ್ಪಿಕೊಳ್ಳುತ್ತಿರಲಿಲ್ಲ.

4

ನೂರಾರು ವರ್ಷಗಳಿಂದ ಭದ್ರವಾಗಿ ಬೇರೂರಿರುವ ಸಾಂಪ್ರದಾಯಿಕ ಪಟ್ಟಗಳು ಇವು. ಈಗ ಬಲುಮಟ್ಟಿಗೆ ಎಲ್ಲರೂ ಇದನ್ನು ಒಪ್ಪಿಕೊಂಡಿದ್ದಾರೆ. ವಿಶಿಷ್ಟ ಪದವಿಗಳಿಗೆ ವಿಶಿಷ್ಟ ಸಮವಸ್ತ್ರಗಳಿರುತ್ತವೆ. ಅಧಿಕಾರ ಸ್ವೀಕರಣದ ಹಲವಾರು ವಿಧಿಗಳಿರುತ್ತವೆ. ಇವೆಲ್ಲಾ ಜನಗಳ ತಲೆಹೊಕ್ಕು ಜನರ ಸಾಮಾನ್ಯವೂ ಸಹಜವೂ ಆದ ಜೀವನ ಪದ್ಧತಿಯ ಮೇಲೆ ಪರಿಣಾಮ ಬೀರುತ್ತವೆ. ಜನ ಈ ಪರಂಪರೆಯ ದೃಷ್ಟಿಯಿಂದಲೇ ತಮ್ಮ ಸ್ಥಾನವನ್ನೂ ಇತರರ ಸ್ಥಾನವನ್ನೂ ಗುರುತಿಸಿರುತ್ತಾರೆ. ತಾವು ಮಾಡುವ ಕೆಲಸಗಳನ್ನು ಇತರರು ಮಾಡುವ ಕೆಲಸಗಳನ್ನು ಈ ಪರಂಪರೆಯ ದೃಷ್ಟಿಕೋನದಿಂದ ಮಾತ್ರ ಅಳೆಯುತ್ತಾರೆ.

ಹೀಗಾಗಿ ಪೂರ್ಣ ಮಾನಸಿಕ ಆರೋಗ್ಯ ಉಳ್ಳ ಪ್ರಬುದ್ಧ ಮನುಷ್ಯನು ಇದ್ದಕ್ಕಿದ್ದಂತೆ ಆತ್ಮಪ್ರತ್ಯಯವುಳ್ಳ ಗರ್ವಿಯಂತೆ ಆನಂದ ಪಟ್ಟುಕೊಳ್ಳುತ್ತಾನೆ. ಇದಕ್ಕೆ ಕಾರಣ ಒಂದು ಕ್ಷುಲ್ಲಕವಾದ ಆಟದ ಸಾಮಾನಿನಂತಹ ಪದವಿ ಸೂಚಕ ಚಿಹ್ನೆಯಿಂದ ಅವನು ಅಲಂಕೃತನಾಗಿರುತ್ತಾನೆ. ಇಲ್ಲವೇ, ಹಿಂಭಾಗದ ಜೇಬಿನಿಂದ ಬೀಗದಕ್ಕೆಗಳನ್ನು ಜೋತಾಡಿ. ಸುತ್ತಿರುತ್ತಾನೆ. ಒಂದು ಸಣ್ಣ ಹುಡುಗಿಗೆ ಮಾತ್ರ ಸರಿಹೋಗುವ ನೀಲಿಯ ರಿಬ್ಬನ್ ಹಾಕಿಕೊಂಡಿರುತ್ತಾನೆ. ಮಹಾದಂಡನಾಯಕ, ದರ್ಬಾರುಭಕ್ಷಿ, ಸಂತ ಆಂಡ್ರೂನ ಸವಾರ. ಇಂಥ ವಿಲಕ್ಷಣ ಹೆಸರುಗಳನ್ನು ಹೊಂದಿರುತ್ತಾನೆ. ಒಂದು ವೇಳೆ ಆತ ನಿರೀಕ್ಷಿಸುವ ಈ ಕ್ಷುದ್ರವಾದ ಪದವಿ ಚಿಹ್ನೆಗಳು ಅಥವಾ ಹೆಸರುಗಳು ದಕ್ಕದೆ ಹೋದಲ್ಲಿ ಆತ ತುಂಬ ದುಃಖದಿಂದ ಸೊರಗಿ ಕಾಹಿಲೆ ಮಲಗಿದರೂ ಆಶ್ಚರ್ಯವಿಲ್ಲ. ಇನ್ನೂ ಆಶ್ಚರ್ಯಕರವಾದ ವಿಚಾರವೆಂದರೆ ಉಳಿದೆಲ್ಲ ವಿಚಾರಗಳಲ್ಲಿ ತುಂಬ ಪ್ರಾಮಾಣಿಕವಾಗಿ ನಡೆದುಕೊಳ್ಳುವ ಮತ್ತು ಸ್ವತಂತ್ರವಾಗಿ ಆಲೋಚನೆ ಮಾಡುವ ಶಕ್ತಿ ಹೊಂದಿರುವ ಇದೇ ಮನುಷ್ಯ ಒಬ್ಬಳು ಅಭಾಗಿನಿಯಾದ ವಿಧವೆಯನ್ನು ಮಕ್ಕಳ ಎದುರಿನಲ್ಲಿಯೇ ಎಳೆದೊಯ್ದು ಅವಳನ್ನು ಸೆರೆಮನೆಯಲ್ಲಿಡಿಸಿ ಅವಳ ಪುಟ್ಟ ಮಕ್ಕಳನ್ನು ಅನಾಥರನ್ನಾಗಿ ಮಾಡಿ ಹೋಗುತ್ತಾನೆ. ಆ ಹೆಂಗಸು ಮಾಡಿದ ತಪ್ಪಾದರೂ ಏನು? ಅವಳು ಕಳ್ಳ ಭಟ್ಟಿ

ವ್ಯಾಪಾರದಲ್ಲಿ ತೊಡಗಿದ್ದು, ಸರಕಾರಕ್ಕೆ ಇಪ್ಪತ್ತೈದು ರೂಬಲ್‌ಗಳ ಆದಾಯವನ್ನು ತಪ್ಪಿಸಿದ್ದಾಳೆ. ಅದಕ್ಕಾಗಿ ಅವಳಿಗೆ ಈ ಶಿಕ್ಷೆ. ಇಂಥ ಕೆಲಸ ಮಾಡಿದೆನಲ್ಲಾ ಎಂದು ಅವನಿಗೆ ಸ್ವಲ್ಪವೂ ನಾಚಿಕೆಯಾಗುವುದಿಲ್ಲ. ಏಕೆಂದರೆ ತಾನೊಬ್ಬ ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ ಜಿಲ್ಲಾಧಿಕಾರಿ ಎಂದು ಅವನೇ ಕರೆದುಕೊಳ್ಳುತ್ತಾನೆ. ಉಳಿದವರೂ ಹಾಗೆಯೇ ಕರೆಯುತ್ತಾರೆ. ಇನ್ನೂ ಹೆಚ್ಚಿನ ಸಂಗತಿ ಏನೆಂದರೆ ಉಳಿದ ಸಂದರ್ಭಗಳಲ್ಲಿ ಯೋಗ್ಯನೆಂದೂ ದಯಾಪರನೆಂದೂ ಕಾಣುವ ವ್ಯಕ್ತಿ ಇಲ್ಲಿ ಜನಗಳ ಮೇಲೆ ಗುಂಡಿನ ಮಳೆ ಕರೆಯಲು ಸಿದ್ಧನಾಗುತ್ತಾನೆ. ಏಕೆಂದರೆ ಅವನಿಗೆ ಒಂದು ಬ್ಯಾಡ್ಜ್ ಅಥವಾ ಸಮವಸ್ತ್ರವನ್ನು ಕೊಟ್ಟು 'ಸುಂಕದ ಅಧಿಕಾರಿ' ಎಂಬ ಹೆಸರನ್ನು ಕೊಡಲಾಗಿದೆ. ಅವನು ತಪ್ಪು ಮಾಡಿದ್ದಾನೆಂದು ಅವನಾಗಲೀ ಅವನ ಸುತ್ತ ಇರುವ ಜನವಾಗಲೀ ಭಾವಿಸುವುದೇ ಇಲ್ಲ. ಅದಕ್ಕೆ ಬದಲಾಗಿ ಆತ ಗುಂಡು ಹಾರಿಸದಿದ್ದರೆ ಎಲ್ಲರೂ ಅವನನ್ನು ದ್ವೇಷಿಸುತ್ತಾರೆ. ಜನಕ್ಕೆ ಗಲ್ಲಿನ ಶಿಕ್ಷೆಯನ್ನು ಕೊಡುವ ನ್ಯಾಯಾಧಿಪತಿಗಳೂ ವಂಚಕರೂ ಇದ್ದಾರೆ. ಆಜ್ಞಾನುಸಾರವಾಗಿ ಯಾವುದೇ ಎಗ್ಗಿಲ್ಲದೆ ಎಲ್ಲಬಗೆಯ ಕೆಲಸಗಳನ್ನು ಮಾಡುವ ಜನರಿದ್ದಾರೆ. ಇದಕ್ಕೆ ಕಾರಣವೇನೆಂದರೆ ತಾವು ಸಾಮಾನ್ಯ ಮನುಷ್ಯರಲ್ಲ. ಪಂಚರು. ನ್ಯಾಯಮೂರ್ತಿಗಳು. ದಂಡನಾಯಕರು. ಸೈನಿಕರು ಎಂಬ ಭಾವನೆಗಳನ್ನು ಅವರಲ್ಲಿ ಆಳವಾಗಿ ಊರಲಾಗಿದೆ.

ಹೊಟ್ಟೆಗಿಲ್ಲದ ಮಂದಿಯನ್ನು ಹಿಂಸಿಸಿ ಕೊಲ್ಲುವುದಕ್ಕಾಗಿಯೇ ಈ ಜನ ಪ್ರಯಾಣ ಹೊರಟಿದ್ದಾರೆ. ಜಮೀನ್ದಾರನ ಮತ್ತು ರೈತನ ವಿವಾದದಲ್ಲಿ ರೈತರದೇ ಸರಿ ಎಂಬುದು ಅವರಿಗೆಲ್ಲ ಗೊತ್ತು. ಒಬ್ಬ ಹಿರಿಯ ಅಧಿಕಾರಿ ನನಗೆ ಹಾಗೆ ಹೇಳಿಯೂ ಹೇಳಿದ್ದ. ರೈತರು, ಹಸಿದು ಕಂಗಾಲಾದವರು, ಬಡವರು ಎಂದು ಅವರಿಗೆಗೆ ಗೊತ್ತು. ಜಮೀನ್ದಾರ ಶ್ರೀಮಂತ ಅವನ ಮೇಲೆ ಕನಿಕರ ತೋರಿಸಬೇಕಾಗಿಲ್ಲ ಎಂಬುದೂ ಅವರಿಗೆ ಗೊತ್ತು. ಆದರೂ ಈ ಶ್ರೀಮಂತನಿಗೆ ಮೂರು ಸಾವಿರ ರೂಬಲ್‌ಗಳನ್ನು ಕೊಡಿಸುವುದಕ್ಕಾಗಿ ಅವರು ರೈತವರ್ಗದ ಮೇಲೆ ಕ್ರಮತೆಗೆದುಕೊಳ್ಳಲು ಹೊರಟಿದ್ದಾರೆ. ಇದಕ್ಕೆ ಕಾರಣ ಮತ್ತೆ ಅದೇ. ಪ್ರತಿಯೊಬ್ಬನೂ ತಾನು ಮನುಷ್ಯ ಎಂದು ಭಾವಿಸುವುದಿಲ್ಲ ತಾನೊಬ್ಬ ಗವರ್ನರ್, ಹಿರಿಯ ಅಧಿಕಾರಿ. ರಿಜರ್ವ್ ಪೋಲಿಸ್ ಪಡೆಯ ಮುಖಂಡ. ಅಥವಾ ಒಬ್ಬ ಸೈನಿಕ ಎಂದು ಭಾವಿಸಿಕೊಳ್ಳುತ್ತಾನೆ. ಮನುಷ್ಯನ ಆತ್ಮಸಾಕ್ಷಿಯ ಸತತವಾದ ಕೋರಿಕೆಗಳನ್ನು ಆತ ಒಪ್ಪಿಕೊಳ್ಳುತ್ತಿಲ್ಲ ಅದನ್ನು ಬಿಟ್ಟು ತನ್ನ ಸ್ಥಾನದ ತಾತ್ಕಾಲಿಕ ಬೇಡಿಕೆಗಳಿಗೆ ಬದ್ಧನಾಗಿ ನಡೆಯುತ್ತಾನೆ.

ನನ್ನ ವಾದ ತುಂಬ ವಿಚಿತ್ರವಾಗಿ ಕಾಣಬಹುದು. ಆದರೂ ನಾನು ಅದನ್ನು ಹೀಗೆ ವಿವರಿಸುತ್ತೇನೆ. ವಶೀಕರಣದ ಪ್ರಭಾವಕ್ಕೆ ಒಳಗಾದವರು ತಮ್ಮ ಮೇಲೆ ಆರೋಪಿತವಾದ ಸ್ವಭಾವವನ್ನು ಸುಲಭವಾಗಿ ಒಪ್ಪಿಕೊಂಡು ಬಿಡುತ್ತಾರೆ.

ಉದಾಹರಣೆಗೆ, ವಶೀಕರಣಕ್ಕೆ ಒಳಗಾದ ಒಬ್ಬನಿಗೆ ನೀನು ಕುಂಟ ಎಂದು ಹೇಳಿದರೆ ಅವನು ಕುಂಟಲು ಶುರುಮಾಡುತ್ತಾನೆ. ನೀನು ಕುರುಡ ಎಂದು ಹೇಳಿದ ಕೂಡಲೇ ಅವನ ಕಣ್ಣಿಗೆ ಏನೂ ಕಾಣಿಸದೆ ಅವನು ಕುರುಡನಂತೆಯೇ ವರ್ತಿಸುತ್ತಾನೆ. ನೀನು ಪ್ರಾಣಿ ಎಂದು ನಿರ್ದೇಶಿಸಿದಾಗ ಅವನು ಪ್ರಾಣಿಯಂತೆ ಕಚ್ಚಲು ಬರುತ್ತಾನೆ. ಈ ರೈಲಿನಲ್ಲಿ ಪ್ರಯಾಣ ಮಾಡುತ್ತಿರುವ ಕಾರ್ಯಾಚರಣೆಯ ವರ್ಗದವರೆಲ್ಲಾ ಇದೇ ರೀತಿಯ ಜನ. ಮಾನವರಾಗಿ ತಾವು ನಡೆದುಕೊಳ್ಳಬೇಕಾದ ರೀತಿಯನ್ನು ಕಡೆಗಣಿಸಿ ಸರಕಾರೀ ಮತ್ತು ಸಾಮಾಜಿಕ ಕರ್ತವ್ಯಗಳನ್ನು ಮಾತ್ರ ನಿರ್ವಹಿಸಲು ಮುಂದೆ ಬರುವ ಎಲ್ಲ ಜನರೂ ಇದೇ ಸ್ವಭಾವದವರೇ.

ವಶೀಕರಣ ಸ್ಥಿತಿಯ ಮಹತ್ವವೇನೆಂದರೆ ಅದರ ಪ್ರಭಾವಕ್ಕೆ ಸಿಕ್ಕಿದ ಜನ, ತಾವು ಮಾಡುವ ಕೆಲಸದ ವಿಚಾರವಾಗಿ ಯೋಚನೆ ಮಾಡುವುದನ್ನೇ ಮರೆಯುತ್ತಾರೆ. ಸಲಹೆಗಾರರ ನಿರೀಕ್ಷೆಗೆ ಅನುಗುಣವಾಗಿ ಸರಿಹೊಂದುವಂಥದ್ದನ್ನು ಅವರು ಯಾವಾಗಲೂ ಮಾಡುತ್ತಾರೆ.

ಕೃತಕ ಸಾಧನಗಳಿಂದ ಮಾಡುವ ವಶೀಕರಣಕ್ಕೂ ರಾಜಕೀಯ ಸಲಹೆಗಳ ಪ್ರಭಾವದಿಂದ ಮಾಡುವ ವಶೀಕರಣಕ್ಕೂ ವ್ಯತ್ಯಾಸವಿದೆ. ಮೊದಲನೆಯದರಲ್ಲಿ ಈ ಕಾಲ್ಪನಿಕ ಸ್ಥಿತಿ ಒಬ್ಬ ವ್ಯಕ್ತಿಯ ಶಕ್ತಿಯಿಂದ ಅಲ್ಪ ಕಾಲಾವಧಿಯಲ್ಲೇ ತಟಕ್ಕನೆ ಬೆಳಕಿಗೆ ಬರುತ್ತದೆ. ಆದ್ದರಿಂದ ಈ ವಶೀಕರಣವು ನಮ್ಮನ್ನು ಚಕಿತಗೊಳಿಸುವಷ್ಟು ಉತ್ಕಟವಾಗಿ ಕಾಣಿಸಿಕೊಳ್ಳುತ್ತದೆ. ಆದರೆ ರಾಜಕೀಯ ಪ್ರೇರಣೆಯಿಂದ ಬರುವ ಕಾಲ್ಪನಿಕ ಸ್ಥಿತಿಯು ಕ್ರಮಕ್ರಮವಾಗಿ ಅರಿವಿಲ್ಲದಂತೆಯೇ ಎಳೆಯತನದಿಂದಲೇ ರಕ್ತಗತವಾಗಿ ಬಂದುಬಿಡುತ್ತದೆ. ಕೆಲವು ವೇಳೆ ಹಲವಾರು ವರ್ಷಗಳ ಅವಧಿಯಲ್ಲಿ ಅಥವಾ ತಲೆಮಾರುಗಳ ಅವಧಿಯಲ್ಲಿ ಬರುವುದುಂಟು. ಇಲ್ಲಿ ಅದರ ಪ್ರಯೋಗಕಾರ ಒಬ್ಬ ವ್ಯಕ್ತಿಯಲ್ಲ, ಇಡೀ ಸಮಾಜ.

"ಆದರೆ ಎಲ್ಲ ಸಮಾಜಗಳಲ್ಲೂ ಹೆಚ್ಚು ಪಾಲಿನ ಜನ ಸ್ವತಂತ್ರವಾಗಿ ಆಲೋಚಿಸಲಾರದವರು ಮತ್ತು ಅದರ ಪರಿಣಾಮವಾಗಿ ಈ ಜನ ಉನ್ನತಮಟ್ಟದ ಪ್ರಜ್ಞಾವಂತರ ಅಥವಾ ಕುಟುಂಬದ ಸಮಾಜದ ಪರಂಪರೆಗಳ ಪ್ರಭಾವಕ್ಕೆ ಒಳಗಾಗುತ್ತಾರೆ. ಇದನ್ನು ಸಾರ್ವಜನಿಕ ಅಭಿಪ್ರಾಯ ಎಂದು ಹೇಳುತ್ತಾರೆ. ಈ ಬಗೆಯ ಶರಣತೆಯಲ್ಲಿ ಅಸಹಜವಾದದ್ದು ವಿಸಂಗತವಾದದ್ದು ಏನೂ ಇಲ್ಲ", ಎಂದು ಕೆಲವರು ಹೇಳುವುದುಂಟು. ಸಮಾಜದಲ್ಲಿ ಹೆಚ್ಚಿನ ಮಂದಿ ಇವರೇ. ಎಲ್ಲ ಮಕ್ಕಳು ಮಕ್ಕಳನ್ನು ಹೆತ್ತು ಪೋಷಿಸುವ ತಾಯಂದಿರು ಸತತವಾದ ಮತ್ತು ವ್ಯಾಪಕವಾದ ದೈಹಿಕ ಶ್ರಮದ ಕೆಲಸಗಳಲ್ಲಿ ತೊಡಗುವ ಕಾರ್ಮಿಕರು, ಸಹಜವಾಗಿಯೇ ದುರ್ಬಲವಾದ ಮನಸ್ಸುಳ್ಳವರು, ನಿಕೋಟಿನ್, ಆಲ್ಕೋಹಾಲ್, ಅಫೀಮು ಮತ್ತು ಇತರ ಮಾದಕದ್ರವ್ಯಗಳ ಸೇವನೆ

ಯಲ್ಲಿ ತೊಡಗಿ ಸ್ವತಂತ್ರ ಆಲೋಚನೆಯನ್ನು ಕಳೆದುಕೊಂಡವರು – ಇವರೆಲ್ಲಾ ಈ ವರ್ಗಕ್ಕೆ ಸೇರಿದವರೇ.

ಆಲೋಚನಾ ಶಕ್ತಿಯನ್ನು ಹೆಚ್ಚು ಬಳಸದ ಜನ ಈ ರೀತಿ ಉನ್ನತ ಪ್ರಜ್ಞೆಯ ಜನರ ಪ್ರಭಾವಕ್ಕೆ ಶರಣಾಗುವುದು ತೀರ ಸಹಜವಾದದ್ದು. ಇದರಲ್ಲಿ ಆಶ್ಚರ್ಯ ಏನೂ ಇಲ್ಲ. ಒಪ್ಪಿಕೊಳ್ಳಬಹುದಾದ ತತ್ವಗಳಿಗೆ ಶರಣಾಗಿ ಮನುಷ್ಯರು ಸಮಾಜದಲ್ಲಿ ಬಾಳಲು ಸಾಧ್ಯವಾಗಿರುವುದು ಇದರಿಂದಲೇ. ಅಲ್ಪಸಂಖ್ಯಾತರಾದ ಬುದ್ಧಿಜೀವಿಗಳು ಈ ತತ್ವವು ತಮ್ಮ ವಿಚಾರ ಸರಣಿಗೆ ಒಗ್ಗಿಕೊಳ್ಳುವುದರಿಂದ ಪ್ರಜ್ಞಾಪೂರ್ವಕವಾಗಿ ಇವುಗಳಿಗೆ ಹೊಂದಿಕೊಳ್ಳುತ್ತಾರೆ. ಆದರೆ ಬಹುಸಂಖ್ಯಾತರು ಹೀಗೆ ಸ್ವಂತ ತಿಳುವಳಿಕೆಯಿಂದ ಆ ತತ್ವಗಳನ್ನು ಒಪ್ಪಿಕೊಳ್ಳುವುದಿಲ್ಲ. ಅವು ಸಾರ್ವಜನಿಕ ಅಭಿಪ್ರಾಯವೆಂದು ಮನ್ನಣೆ ಪಡೆದಿರುವುದರಿಂದ ಒಪ್ಪಿಕೊಳ್ಳುತ್ತಾರೆ.

ಈ ಸಾರ್ವಜನಿಕ ಅಭಿಪ್ರಾಯ ಎಲ್ಲೆಡೆಯಲ್ಲೂ ಒಂದೇ ಆಗಿ ಉಳಿದುಕೊಂಡರೆ ಈ ಜನ ಅದಕ್ಕೆ ವಿಧೇಯರಾಗುವುದು ತಪ್ಪು ಎಂದು ಹೇಳಲಾಗುವುದಿಲ್ಲ.

ಆದರೆ ಒಮ್ಮೊಮ್ಮೆ ಉದಾತ್ತ ಸತ್ಯದ ಪ್ರಜ್ಞೆ ಕಾಣಿಸಿಕೊಳ್ಳುವುದುಂಟು. ಈ ಪ್ರಜ್ಞೆ ಜನದಿಂದ ಜನಕ್ಕೆ ಹಬ್ಬಿ ಅಸಂಖ್ಯಾತ ಜನರನ್ನು ತನ್ನೆಡೆಗೆ ಸೆಳೆದುಕೊಳ್ಳುತ್ತದೆ. ಆಗ ರೂಢಮೂಲವಾಗಿದ್ದ ಸಾರ್ವಜನಿಕ ಅಭಿಪ್ರಾಯವು ಪ್ರಜ್ಞೆಯ ಸಣ್ಣ ಪಾತಳಿಯ ಮೇಲೆ ನಿಲ್ಲಲಾರದೆ ಅದರ ಬುಡ ಕುಸಿಯಲು ಆರಂಭವಾಗುತ್ತದೆ. ಹೊಸ ವಿಚಾರಧಾರೆ ಬೇರೂರಲು ಇದು ಸರಿಯಾದ ಸಮಯ. ಆದರೂ ಇದು ಸರಿಯಾಗಿ ಸ್ಥಿರಗೊಂಡಿಲ್ಲ. ವಸಂತೋದಯಕ್ಕೆ ಹೋಲಿಸಬಹುದಾದ ಒಂದು ಕಾಲದ ಅವಸ್ಥೆ ಎಂದು ಇದನ್ನು ಕರೆಯಬಹುದು. ಹಳೆಯ ಅಭಿಪ್ರಾಯ ಇನ್ನೂ ಮೂಲೆಗುಂಪಾಗಿಲ್ಲ. ಹೊಸದು ಇನ್ನೂ ಸ್ಥಾಪಿತವಾಗಿಲ್ಲ. ಆದರೆ ಈ ಹೊಸ ಪ್ರಜ್ಞಾವಲಯದಲ್ಲಿ ನಿಂತು ಜನ ತಮ್ಮ ಮತ್ತು ಇತರರ ಚಟುವಟಿಕೆಗಳನ್ನು ವಿಮರ್ಶಿಸಲು ತೊಡಗುತ್ತಾರೆ. ಅವರ ಒಳಮನಸ್ಸು ಜಡತೆ ಮತ್ತು ಪರಂಪರೆಗಳ ಪ್ರಭಾವದಿಂದ ಇನ್ನೂ ಹಿಂದಿನ ಕಾಲದ ಪ್ರಜ್ಞಾವಲಯದ ತತ್ವಗಳಿಗೆ ಬದ್ಧವಾಗಿರುತ್ತವೆ. ಆದರೂ ಈಗ ಅವರು ಎದ್ದು ಕಾಣುವಂತೆ ಹಳೆಯ ವಿಚಾರಗಳ ಬುಡವನ್ನು ಕೆದಕುತ್ತಾರೆ. ಇಂಥ ಸ್ಥಿತ್ಯಂತರದ ಕಾಲದಲ್ಲಿ ಹಳೆಯದನ್ನು ತಳಮೇಲು ಮಾಡುವ ಶಕ್ತಿ ಇಲ್ಲದೆ, ಹೊಸ ವಿಚಾರಗಳನ್ನು ತಿರಸ್ಕರಿಸುವ ಮನಸ್ಸಿಲ್ಲದೆ ಒಂದು ಬಗೆಯ ಅಸಹಜವಾದ ತೊಳಲಾಟದಲ್ಲಿ ಸಿಕ್ಕುತ್ತಾರೆ. ರೈಲಿನಲ್ಲಿ ಪ್ರಯಾಣ ಮಾಡುತ್ತಿರುವ ಜನ ಮಾತ್ರವಲ್ಲ ನಮ್ಮ ಕಾಲದ ಬಹುತೇಕ ಮಂದಿ ಸತ್ಯದ ವಿಚಾರವಾಗಿ ಇಂಥ ಒಂದು ತೊಳಲಾಟದ ಸ್ಥಿತಿಯಲ್ಲಿದ್ದಾರೆ.

ಸರಕಾರದಲ್ಲಿ ಉತ್ತಮೋತ್ತಮ ಸ್ಥಾನಗಳಲ್ಲಿರುವ ಉನ್ನತವರ್ಗದ ಜನ ಇದೇ ಸ್ಥಿತಿಯಲ್ಲಿದ್ದಾರೆ. ಆಜ್ಞೆಗಳಿಗೆ ತಲೆಬಾಗುವ ಕೆಳವರ್ಗದ ಜನರೂ ಇದೇ ಸ್ಥಿತಿಯಲ್ಲಿದ್ದಾರೆ.

ಉನ್ನತ ವರ್ಗದ ಜನರನ್ನು ತೆಗೆದುಕೊಳ್ಳೋಣ. ಇವರಿಗೆ ಸಿಕ್ಕಿರುವ ಸ್ಥಾನ ಗೌರವಕ್ಕೆ ಯಾವ ಸಕಾರಣವಾದ ಸಮರ್ಥನೆಯನ್ನೂ ಇವರು ಕೊಡಲಾರರು. ಇವರು ತಮ್ಮ ಸ್ಥಾನಗಳನ್ನು ಉಳಿಸಿಕೊಳ್ಳುವುದಕ್ಕಾಗಿ ತಮ್ಮ ಉನ್ನತ ವಿಚಾರಶಕ್ತಿಯನ್ನು ಸೋದರ ಪ್ರೇಮವನ್ನು ಮರೆಯಬೇಕಾಗಿ ಬಂದಿದೆ. ಈ ಉತ್ತಮೋತ್ತಮ ಸ್ಥಾನ ಮಾನಗಳು ತಮಗೆ ತುಂಬ ಅಗತ್ಯ ಎಂದು ಅವರು ಭಾವಿಸಿರುವುದರಿಂದ ಈ ರೀತಿಯ ವಶೀಕರಣಕ್ಕೆ ತಾವಾಗಿಯೇ ಒಳಗಾಗಿದ್ದಾರೆ. ಕೆಳವರ್ಗದ ಜನ ಉದ್ದೇಶಪೂರ್ವಕ ವಾಗಿ ಮಂಕುಮಾಡಲ್ಪಟ್ಟ ಜನ. ದುಡಿಮೆಯಿಂದ ಅವರು ಹಣ್ಣಾಗಿದ್ದಾರೆ. ಆದ್ದರಿಂದ ಇವರು ಉನ್ನತ ವರ್ಗದವರ ಸತತವಾದ ವಶೀಕರಣದ ಪ್ರಭಾವಕ್ಕೆ ಸಹಜವಾಗಿ ಬಲಿಯಾಗುತ್ತಾರೆ.

ನಮ್ಮ ಬದುಕನ್ನು ತುಂಬಿಕೊಂಡಿರುವ ಇಂಥ ವಿಲಕ್ಷಣವಾದ ವಿರೋಧಾಭಾಸ ಗಳನ್ನು ಮೇಲೆ ಹೇಳಿದಂತೆ ಮಾತ್ರ ವಿವರಿಸಲು ಸಾಧ್ಯ. ಅದಕ್ಕೆ ಒಂದು ಉತ್ತಮ ಉದಾಹರಣೆ ಎಂದರೆ ಸೆಪ್ಟೆಂಬರ್ 9 ರಂದು ನಾನು ಕಂಡ ಜನ. ಅವರು ತುಂಬ ದಯಾಳುಗಳು ಮತ್ತು ಮೃದು ಸ್ವಭಾವದವರು. ತುಂಬ ಕ್ರೂರವಾದ ನಿರರ್ಥಕವಾದ ದುಷ್ಟ ಕರ್ಮವನ್ನು ಆಚರಿಸುವುದಕ್ಕಾಗಿ ಅವರೆಲ್ಲಾ ತುಂಬ ಶಾಂತ ಸ್ವಭಾವದಿಂದಲೇ ಹೊರಟಿದ್ದರು. ಪ್ರಜ್ಞೆ ಅವರನ್ನು ಯಾವುದಾದರೂ ಬಗೆಯಲ್ಲಿ ಚುಚ್ಚಿದ್ದರೆ ಅವರು ನಿಜವಾಗಿ ಈಗ ಮಾಡಲು ಹೊರಟಿದ್ದ ಕಾರ್ಯದಲ್ಲಿ ನೂರನೇ ಒಂದು ಭಾಗದಷ್ಟು ಕ್ರೂರ ಕರ್ಮವನ್ನು ಮಾಡುವುದಕ್ಕೆ ಕೂಡ ಒಪ್ಪುತ್ತಿರಲಿಲ್ಲ. ನಾನೂರು, ಮುನ್ನೂರು, ಇನ್ನೂರು ಅಷ್ಟೇ ಏಕೆ ಒಂದು ನೂರು ವರ್ಷದ ಹಿಂದೆ ಈ ಬಗೆಯ ಜನ ಸುಡುಗಂಬದ ಬಳಿ ಜನರನ್ನು ಕೊಲ್ಲುತ್ತಿದ್ದರು. ಹಿಂಸೆಗೆ ಗುರಿಮಾಡುತ್ತಿದ್ದರು. ಕೊಚ್ಚಿಹಾಕುತ್ತಿದ್ದರು. ಆದರೆ ಅವರಿಗೆ ಪ್ರಜ್ಞೆ ಬಾಧಿಸಿರಲಿಲ್ಲ. ಅದೇ ರೀತಿ ಈಗಿನವರನ್ನೂ ಪ್ರಜ್ಞೆ ಬಾಧಿಸುತ್ತಿಲ್ಲ ಎಂದು ಹೇಳುವುದು ಸರಿಯಲ್ಲ. ಈ ಪ್ರಜ್ಞೆ ಅವರೆಲ್ಲರಲ್ಲಿ ಇದೆ. ಆದರೆ ಅದು ನಿದ್ರಾವಸ್ಥೆಯಲ್ಲಿದೆ. ಅಧಿಕಾರದಲ್ಲಿರುವ ಮತ್ತು ಉತ್ತಮ ಸ್ಥಾನಗಳಲ್ಲಿರುವ ಎಲ್ಲ ಜನಗಳಲ್ಲಿಯೂ ಅದು ಆತ್ಮಪ್ರೇರಣೆಯಿಂದ ನಿದ್ರಾವಸ್ಥೆಗೆ ತಳ್ಳಲ್ಪಟ್ಟಿದೆ. ಸೈನಿಕವರ್ಗ ದವರ ವಿಚಾರವಾಗಿ ಹೇಳುವುದಾದರೆ ಉನ್ನತ ವರ್ಗದವರ ನೇರವೂ, ಉದ್ದೇಶ-ಪೂರ್ವಕವೂ ಆದ ಸಲಹೆ ಮತ್ತು ವಶೀಕರಣಗಳ ಪರಿಣಾಮವಾಗಿ ಅದು ನಿದ್ರಾವಸ್ಥೆಗೆ ತಳ್ಳಲ್ಪಟ್ಟಿದೆ.

ಪ್ರಜ್ಞೆ ಇವರಲ್ಲಿ ನಿದ್ರಿಸುತ್ತಿದೆ ನಿಜ. ಆದರೂ ಅದು ಜೀವಂತವಾಗಿದೆ. ಯಾವುದೇ ಗಳಿಗೆಯಲ್ಲಿ ಅದು ಎಚ್ಚರಗೊಳ್ಳಬಹುದು. ಅಂತಃಪ್ರೇರಣೆ ಮತ್ತು ವಶೀ ಕರಣ ಇವುಗಳ ಪ್ರಬಲ ಕೋಟೆಯ ಮೇಲೆ ದಾಳಿ ನಡೆಸುತ್ತಿರುವ ಅದರ ಧ್ವನಿಯನ್ನು ಅಲ್ಲಲ್ಲಿ ಕೇಳಬಹುದು.

ಇವರೆಲ್ಲಾ ವಶೀಕರಣಕ್ಕೆ ಒಳಗಾದ ಒಬ್ಬ ಮನುಷ್ಯನ ಸ್ಥಿತಿಯಲ್ಲಿದ್ದಾರೆ. ವಶೀ-
ಕರಣಕ್ಕೆ ಒಳಗಾದವನು ತನ್ನ ತಾಯಿಯನ್ನೋ ಮಗುವನ್ನೋ ಕೊಲ್ಲಬೇಕು ಎಂಬ
ಪ್ರೇರಣೆಗೆ ಒಳಗಾಗಿದ್ದಾನೆ ಎಂದು ಭಾವಿಸೋಣ. ಈ ಆಜ್ಞೆ ಅವನು ಯಾವುದನ್ನು
ತರ್ಕಬದ್ಧವಾದದ್ದು ನ್ಯಾಯವಾದದ್ದು ಎಂದು ಭಾವಿಸಿದ್ದಾನೋ ಅದಕ್ಕೆ ವಿರುದ್ಧವಾಗಿದೆ.
ವಶೀಕರಣದ ಪ್ರೇರಣೆಯಿಂದಾಗಿ ಅವನಿಗೆ ನಿಲ್ಲಲು ಸಾಧ್ಯವಾಗುವುದಿಲ್ಲ. ಮುಂದಕ್ಕೆ
ಧಾವಿಸುತ್ತಾನೆ. ಅದರ ಕಾರ್ಯಾಚರಣೆಯ ಜಾಗ ಮತ್ತು ಸಮಯ ಸಮೀಪವಾದಂತೆಲ್ಲ
ಅವನ ಸುಪ್ತ ಚೇತನ ಅಲುಗಾಡಲು. ಕೊಸರಿಕೊಳ್ಳಲು. ಪ್ರತಿಭಟಿಸಲು. ಅಂದರೆ ಒಟ್ಟಿ
ನಲ್ಲಿ ಎಚ್ಚರಗೊಳ್ಳಲು ಪ್ರಯತ್ನಿಸುತ್ತದೆ. ಇಂಥ ಸಮಯದಲ್ಲಿ ಅವನು ಕೊಲೆಯ
ಕೆಲಸವನ್ನು ಮಾಡುತ್ತಾನೋ ಇಲ್ಲವೋ ಎಂಬುದನ್ನು ಮುಂದಾಗಿಯೇ ಹೇಳಲು
ಯಾರಿಗೂ ಸಾಧ್ಯವಿಲ್ಲ. ಅವನ ವಿವೇಕಪ್ರಜ್ಞೆ ಅಥವಾ ಅಯುಕ್ತ ಸಲಹೆ ಇವುಗಳಲ್ಲಿ
ಯಾವುದು ಪ್ರಬಲವಾಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಯಾವುದು ಹೆಚ್ಚು
ಶಕ್ತವೋ ಅದು ಉಳಿದುಕೊಳ್ಳುತ್ತದೆ.

ರಾಜಕೀಯ ಹಿಂಸಾಕೃತ್ಯಗಳನ್ನು ಮಾಡಿ ಅದರಿಂದ ಲಾಭ ಪಡೆಯುವ ಮಿಲಿಟರಿ
ಜನ ಅಥವಾ ಅಂಥ ಯಾವುದೇ ಬಗೆಯ ಜನ ಇರುವ ಕಡೆಗಳಲ್ಲೆಲ್ಲ ನಡೆಯುವುದೇ ಹೀಗೆ.

ಹಿಂದೆ ಒಂದು ಕಾಲವಿತ್ತು. ಹಿಂಸಾಚಾರ ಮತ್ತು ಕೊಲೆಗಳ ಮೂಲಕ ಜನರಿಗೆ
ಪಾಠ ಕಲಿಸಬೇಕೆಂದು ಹೊರಟ ಜನ ತಮ್ಮ ಕಾರ್ಯದಲ್ಲಿ ಯಶಸ್ವಿಯಾಗದೆ ಹಿಂದಕ್ಕೆ
ಬರುತ್ತಿದ್ದುದೇ ಅಪರೂಪ. ಆ ಕಾರ್ಯಗಳನ್ನು ಮಾಡುವಾಗ ಅನುಮಾನವಾಗಲೀ,
ಹೀನಾಯವಾದದ್ದು ಎಂಬ ಭಾವನೆಯಾಗಲೀ ಅವರಲ್ಲಿ ಇರುತ್ತಿರಲಿಲ್ಲ. ಜನಗಳನ್ನು
ಚೆನ್ನಾಗಿ ಸಾಯಬಡಿದು ಆ ಜನ ಆನಂದವಾಗಿ ಮನೆಗೆ ಹಿಂತಿರುಗುತ್ತಿದ್ದರು. ತಮ್ಮ
ಮಕ್ಕಳನ್ನು ಮುದ್ದಾಡುತ್ತಿದ್ದರು. ನಗುತ್ತಾ, ಅಣಕಿಸುತ್ತಾ ಕುಟುಂಬ ಜೀವನದ ಸೌಭಾಗ್ಯ
ಗಳನ್ನೆಲ್ಲಾ ಶಾಂತವಾಗಿ ಅನುಭವಿಸುತ್ತಿದ್ದರು. ಅಂಥ ಕಾರ್ಯಾಚರಣೆಗಳನ್ನು ಮಾಡಿಸಿ
ತುಂಬ ಲಾಭ ಪಡೆಯುತ್ತಿದ್ದ ಜಮೀನ್ದಾರರಿಗೂ ಮತ್ತು ಶ್ರೀಮಂತರಿಗೂ ತಮಗಿರುವ
ಸೌಲಭ್ಯ ಮತ್ತು ನಡೆಯುತ್ತಿರುವ ದುಷ್ಕೃತ್ಯಗಳಿಗೂ ಸಂಬಂಧವೇನು ಎಂಬುದೇ
ತಿಳಿಯುತ್ತಿರಲಿಲ್ಲ.

ಈಗ ಹಾಗೆ ಹೇಳುವಂತಿಲ್ಲ. ತಾವು ಮಾಡುವುದೆಲ್ಲಾ ಏನು ಏಕೆ ಎಂಬುದು ಅವರಿಗೆ
ಬಹುಮಟ್ಟಿಗೆ ತಿಳಿದಿರುತ್ತದೆ. ಸದ್ಯಕ್ಕೆ ಅವರ ಕಣ್ಣುಮುಚ್ಚಿರಬಹುದು. ಪ್ರಜ್ಞಾವಂತರಾಗಿರ
ಬಹುದು. ಆದರೆ ಬಿಚ್ಚಿ ಕಣ್ಣಿನಿಂದ ಮತ್ತು ಮುಕ್ತ ಮನಸ್ಸಿನಿಂದ ನೋಡಿದಾಗ ಹಿಂಸಾಚಾರ
ಮಾಡುವವರು ಮತ್ತು ಅದರಿಂದ ಲಾಭ ಪಡೆಯುವವರು ಇಬ್ಬರೂ ಆ ದುಷ್ಕೃತ್ಯದ
ಪರಿಣಾಮಗಳನ್ನು ಕುರಿತು ಚಿಂತಿಸದೆ ಇರುವುದಿಲ್ಲ. ಕೆಲವು ವೇಳೆ ಕೆಲವರಿಗೆ ಕೆಲಸವೆಲ್ಲಾ

ಆದ ನಂತರ ಅದರ ಮಹತ್ವ ಏನು ಎಂಬುದು ತಿಳಿದುಬರುತ್ತದೆ. ಆದರೆ ಇನ್ನು ಕೆಲವು ವೇಳೆ ಕೆಲಸವನ್ನು ಆರಂಭಿಸುವ ಮುನ್ನವೇ ಅವರು ತಿಳಿದುಕೊಂಡಿರುತ್ತಾರೆ. ನಿಜ್‌ಗಿ. ನೋವ್ಗೊರೊಡ್. ಸರಟೌ. ಒರ್ಯೋಲ್ ಮತ್ತು ಯುಸೋವ್ ಫ್ಯಾಕ್ಟರಿಗಳಲ್ಲಿ ಜನರ ಪ್ರಹಾರಕ್ಕೆ ಏರ್ಪಾಟು ಮಾಡಿದ ಜನ ಕಾರ್ಯಾಚರಣೆ ನಡೆದ ನಂತರ ಎಂಥ ಕೆಲಸವಾಯಿತು ಎಂದು ಹೇಚಾಡಿಕೊಂಡರು. ಈಗ ಜನಾಭಿಪ್ರಾಯ ಮತ್ತು ಆತ್ಮಸಾಕ್ಷಿ ಈ ಎರಡರಿಂದಲೂ ಅವಮಾನಕ್ಕೆ ಒಳಗಾದ ಆ ಜನ ಈಗ ತುಂಬ ನೊಂದುಕೊಂಡಿದ್ದಾರೆ. ಆ ಕಾರ್ಯಾಚರಣೆಗಳಲ್ಲಿ ಭಾಗವಹಿಸಿದ್ದ ಅನೇಕ ಸೈನಿಕರ ಜತೆಯಲ್ಲಿ ನಾನು ಮಾತನಾಡಿದ್ದೇನೆ. ಆ ವಿಚಾರವನ್ನು ಪ್ರಸ್ತಾಪಿಸಿದಾಗ ಸೈನಿಕರು ಮಾತು ಹಾರಿಸಲು ,ಪ್ರಯತ್ನಿಸುತ್ತಾರೆ. ಹೇಳಲೇಬೇಕಾಗಿ ಬಂದಾಗ ಅವರು ತುಂಬ ಕ್ಷೋಭೆಗೊಂಡವರಂತೆ. ಭಯಪೀಡಿತರಾದಂತೆ ಮಾತನಾಡುತ್ತಾರೆ. ಇನ್ನು ಕೆಲವು ಬಗೆಯ ಜನರಿದ್ದಾರೆ. ಕಾರ್ಯಾಚರಣೆ ಇನ್ನೇನು ಆರಂಭಿಸಬೇಕು ಎನ್ನುವಾಗ ಅವರೆಲ್ಲಾ ತಮ್ಮಲ್ಲೇ ಯೋಚಿಸಿ ನೊಂದುಕೊಳ್ಳುತ್ತಾರೆ. ನನಗೆ ಒಬ್ಬ ಸಾರ್ಜೆಂಟನ ವಿಚಾರ ಗೊತ್ತು. ಒಂದು ದಂಗೆಯನ್ನು ಅಡಗಿಸಲು ಹೋದಾಗ ಆತ ಇಬ್ಬರು ರೈತರಿಂದ ಒದೆ ತಿಂದ. ಆ ಸಂಗತಿಯನ್ನು ಅವನು ಮೇಲಧಿಕಾರಿಗಳಿಗೆ ವರದಿ ಮಾಡಿದ. ಮಾರನೆಯ ದಿನ ಮೇಲಧಿಕಾರಿಗಳು ಅವರಿಗೆಲ್ಲಾ ಯಮಹಿಂಸೆಯನ್ನು ಕೊಟ್ಟರು. ದೂರು ಕೊಟ್ಟ ಸೈನಿಕ ಆ ದೃಶ್ಯವನ್ನು ನೋಡಲಾರದೆ ತನ್ನ ವರದಿಯನ್ನು ಹರಿದು ಹಾಕಬೇಕೆಂದೂ ಆ ಮಂದಿಯನ್ನೆಲ್ಲಾ ಬಿಡಬೇಕೆಂದೂ ಕಂಪನಿಯ ಕಮ್ಯಾಂಡರನ್ನು ಕೇಳಿಕೊಂಡ. ನನಗೆ ಇನ್ನೂ ಒಂದು ಸಂಗತಿ ಗೊತ್ತು. ಕೆಲವು ಜನರನ್ನು ಕೊಲ್ಲಬೇಕೆಂದು ಯೋಧರನ್ನು ಕೇಳಲಾಗಿತ್ತು. ಆದರೆ ಆ ಯೋಧರು ಅಂಥ ನೀಚ ಕೆಲಸ ಮಾಡಲು ಒಪ್ಪಿಕೊಳ್ಳಲಿಲ್ಲ. ಜನರನ್ನು ಹೊಡೆಸುವುದು ಮತ್ತು ಕೊಲ್ಲಿಸುವುದು ಮುಂತಾದ ಜವಾಬ್ದಾರಿಗಳನ್ನು ಕೈಗೊಳ್ಳಲು ಕೆಲವು ಅಧಿಕಾರಿಗಳು ಒಪ್ಪುತ್ತಿಲ್ಲ ಎನ್ನುವುದಕ್ಕೆ ನನಗೆ ಕೆಲವು ನಿದರ್ಶನಗಳು ಗೊತ್ತಿವೆ. ಅಂದರೆ ಹಿಂಸಾಚಾರವನ್ನು ವ್ಯವಸ್ಥೆಗೊಳಿಸುವವರು. ಅಥವಾ ತಾವೇ ನಡೆಸುವವರು ಕೆಲವು ಸಲ ಕಾರ್ಯ ನಡೆಯುವ ಮುನ್ನವೇ ಜಾಗೃತರಾಗುತ್ತಾರೆ. ಕೆಲವು ಸಲ ಇನ್ನೇನು ನಡೆಯಲಿದೆ ಎನ್ನುವಾಗ ಜಾಗೃತರಾಗುತ್ತಾರೆ. ಇನ್ನೂ ಕೆಲವು ಸಲ ಎಲ್ಲವೂ ಮಿಂಚಿ ಹೋದಮೇಲೆ ಜಾಗೃತರಾಗುತ್ತಾರೆ.

ಸುತ್ತಮುತ್ತಣ ಪರಿಸ್ಥಿತಿ ಎಷ್ಟೇ ಉತ್ತೇಜಕವಾಗಿದ್ದರೂ ಗವರ್ನರನು ಹಿಂಸಾಚಾರ ಮತ್ತು ಕೊಲೆಗಳಿಗೆ ಅಂತಿಮವಾಗಿ ಆಜ್ಞೆ ಕೊಡುವಾಗ ಅವನ ಮನಸ್ಸಿನಲ್ಲಿ ಗೊಂದಲವಾಗದೇ ಇರುವುದಿಲ್ಲ. ಒರ್ಯೋಲ್‌ನ ಗವರ್ನರ್ ನಡೆದು ಕೊಂಡ ರೀತಿ ಸಮಾಜದ ಸಭ್ಯ ವರ್ಗದವರನ್ನು ಕೂಡ ಕೆರಳಿಸಿತ್ತು. ಈತ ಕೂಡ ತನ್ನ ಮಟ್ಟದ ಜನರ ಪ್ರಭಾವಕ್ಕೆ ಸಿಕ್ಕಿ ಅನೇಕ ಬಾರಿ ಅಂಥ ಕೆಲಸಗಳು ನಡೆಯಬಾರದು ಎಂದು ಅಸಮ್ಮತಿ ಸೂಚಿಸಿದ್ದಾನೆ. ಆ ಸ್ಥಳಕ್ಕೆ ಬರಬೇಕಾಗಿದ್ದ ಪಬ್ಲಿಕ್ ಪ್ರಾಸಿಕ್ಯೂಟರ್ ಅದೊಂದು ನಾಚಿಕೆಕೇಡಿನ ಸಂಗತಿ

ಎಂದು ಬಗೆದು ಅಲ್ಲಿಗೆ ಬರಲು ನಿರಾಕರಿಸಿದ್ದ ಎಂಬ ಸಂಗತಿಯೂ ಅವರಿಗೆ ಗೊತ್ತು. ಸರಕಾರದಲ್ಲಿ ಇಂದಲ್ಲ ನಾಳೆ ಬದಲಾವಣೆಗಳು ಆಗಬಹುದು. ನೆನ್ನೆ. ಹೆಸರು ತರಬಹುದಾಗಿದ್ದ ಕಾರ್ಯಗಳು ನಾಳೆ ಹೆಸರಿಗೆ ಮಸಿ ಬಳಿಯಬಹುದು ಎಂಬ ಸಂಗತಿಯೂ ಆತನಿಗೆ ಗೊತ್ತು. ರಷ್ಯದಲ್ಲಿ ಇಲ್ಲದಿದ್ದರೂ ಪ್ರಪಂಚದ ಬೇರೆ ಭಾಗಗಳಲ್ಲಿ ಸಾರ್ವಜನಿಕ ಸುದ್ದಿ ಪತ್ರಿಕೆಗಳಿವೆ. ಅವು ಈ ವರದಿಯನ್ನು ಉಲ್ಲೇಖಿಸಿ ಗವರ್ನರನಿಗೆ ಕಳಂಕ ತರಬಹುದು ಎಂಬ ಸಂಗತಿಯೂ ಅವನಿಗೆ ಗೊತ್ತು. ಹಿಂದೆ ಕೋರುತ್ತಿದ್ದುದನ್ನೆಲ್ಲಾ ಇಂದು ಧಿಕ್ಕರಿಸುವ ರೀತಿಯಲ್ಲಿ ಸಾರ್ವಜನಿಕ ದೃಷ್ಟಿ ಬದಲಾಗುತ್ತಿದೆ ಎಂಬುದರ ವಾಸನೆಯನ್ನು ಆತ ಕಂಡುಕೊಳ್ಳಬಲ್ಲ. ಎಲ್ಲಕ್ಕಿಂತ ಮೇಲಾಗಿ ಕೊನೆ ಗಳಿಗೆಯಲ್ಲಿ ಸೈನಿಕರು ತನ್ನ ಆಜ್ಞೆಯನ್ನು ಶತಾಯ ಗತಾಯ ನಡೆಸಿಕೊಡುತ್ತಾರೆಯೇ ಎಂಬ ವಿಚಾರದಲ್ಲೂ ಅವನಿಗೆ ಖಚಿತವಾಗಿ ನಂಬಿಕೆ ಇಲ್ಲ. ಹೀಗಾಗಿ ಆತ ಡೋಲಾಯಮಾನ ಸ್ಥಿತಿಯಲ್ಲಿರುತ್ತಾನೆ. ಇಂಥ ಗವರ್ನರ್ ಏನು ಮಾಡುತ್ತಾನೆ ಎಂದು ಹೇಳುವುದು ಸಾಧ್ಯವಿಲ್ಲ. ಗವರ್ನರನ ಜತೆ ಕೆಲಸಮಾಡುವ ಅಧಿಕಾರಿಗಳ ಮತ್ತು ಇತರ ಸಹಾಯಕರ ಸ್ಥಿತಿಯೂ ಬಲು ಮಟ್ಟಿಗೆ ಇದೇ ಆಗಿದೆ. ತಾವು ತೊಡಗಿರುವ ಕೆಲಸ ತುಂಬ ನಾಚಿಕೆಗೇಡಿನದು ಎಂಬುದು ಅವರ ಒಳ ಮನಸ್ಸಿಗೆ ಗೊತ್ತು. ಈ ಕಾರ್ಯವನ್ನು ಮಾಡುವುದರಿಂದ ಸಮಾಜದಲ್ಲಿ ತಾವು ಬೆಲೆಕೊಡುವ ಕೆಲವು ಹಿರಿಯ ಜೀವಿಗಳ ದೃಷ್ಟಿಯಲ್ಲಿ ತಮ್ಮ ಸ್ಥಾನಮಾನ ತುಂಬ ನಿಕೃಷ್ಟವಾಗುತ್ತದೆ ಎಂಬುದೂ ಅವರಿಗೆ ಗೊತ್ತು. ರಕ್ಷಣಾರಹಿತರಾದ ಮುಗ್ಧ ಜನವನ್ನು ಹಿಂಸಿಸಿ ಕೊಲ್ಲಿಸಿದ ಮೇಲೆ ತಾವು ಪ್ರೀತಿಸಿದ ಹೆಣ್ಣಿಗೆ ಮುಖ ತೋರಿಸುವುದಕ್ಕೆ ಕೂಡ ಇವರು ನಾಚುತ್ತಾರೆ. ಅಲ್ಲದೆ ಗವರ್ನರನಂತೆ ಅವರಿಗೂ ಸೈನಿಕರು ಎಲ್ಲಿ ತಮ್ಮ ಮಾತು ಕೇಳುವುದಿಲ್ಲವೋ ಎಂಬ ಹೆದರಿಕೆ ಇದ್ದೇ ಇದೆ. ಸ್ಟೇಷನ್ನಿನಲ್ಲಿ ಪ್ಲಾಟ್‌ಫಾರ್ಮಿನ ಉದ್ದಕ್ಕೂ ಅವರು ಖುಷಿಯಾಗಿ ಅಡ್ಡಾಡುತ್ತಿರುವಂತೆ ನಟಿಸುತ್ತಾರೆ: ಆದರೆ ನಿಜವಾಗಿ ಒಳಗೊಳಗೆ ಅವರು ಆತಂಕಪಟ್ಟುಕೊಳ್ಳುತ್ತಿರುತ್ತಾರೆ, ತಲ್ಲಣಗೊಂಡಿರುತ್ತಾರೆ. ಒಳಗಿನ ಈ ಆತಂಕವನ್ನು ಮರೆಸುವುದಕ್ಕೆಂದೇ ಅವರು ಹಾಗೆ ಸಂತೃಪ್ತರ ಮುಖವಾಡವನ್ನು ಧರಿಸುತ್ತಾರೆ. ಕಾರ್ಯಾಚರಣೆಯ ಪ್ರವೇಶ ಸಮೀಪವಾದಂತೆಲ್ಲಾ ಅವರ ಈ ಗೊಂದಲ ಹೆಚ್ಚುತ್ತ ಹೋಗುತ್ತದೆ.

ಹೊರಗೆ ಸ್ವಲ್ಪವೂ ಕಾಣಿಸುವುದಿಲ್ಲ ನಿಜ. ನಾನು ಹೀಗೆ ಹೇಳಿದರೆ ವಿಚಿತ್ರ ಎಂದು ಕೆಲವರು ಭಾವಿಸಬಹುದು. ಆದರೆ ಈ ಎಲ್ಲ ತರುಣರು ಇದೇ ಮನಃಸ್ಥಿತಿಯಲ್ಲಿದ್ದಾರೆ.

ಈ ಸೈನಿಕರು ಹಿಂದಿನ ಕಾಲದ ಸೈನಿಕರಂತಲ್ಲ. ಹಿಂದಿನ ಕಾಲದ ಸೈನಿಕರು ಸಹಜವಾದ ಶ್ರಮಸಾಧ್ಯವಾದ ಜೀವನ ಪದ್ಧತಿಯನ್ನು ಬಿಟ್ಟುಕೊಟ್ಟು ತಮ್ಮ ಬದುಕನ್ನೆಲ್ಲಾ. ವ್ಯಭಿಚಾರ. ಲೂಟಿ. ಕೊಲೆ ಇಂಥ ಕೆಲಸಗಳಿಗೆ ವಿನಿಯೋಗಿಸುತ್ತಿದ್ದರು ರೋಮನ್ ಸೈನ್ಯದಳ 'ಮೂವತ್ತು ವರ್ಷಗಳ ಯುದ್ಧದ' ಯೋಧಪಡೆ. ಅಥವಾ

ಅಷ್ಟು ಹಿಂದಿನವರಲ್ಲದಿದ್ದರೂ ಸೈನ್ಯಕ್ಕೆ ಸೇರಿ ಇಪ್ಪತ್ತೈದು ವರ್ಷಗಳವರೆಗೆ ಸೇವೆ ಸಲ್ಲಿಸಬೇಕಾಗಿದ್ದ ಸೈನಿಕವರ್ಗ – ಇವುಗಳನ್ನು ಉದಾಹರಿಸಬಹುದು. ಈಗಿನ ಸೈನಿಕರು ಬಹುಮಟ್ಟಿಗೆ ರೈತ ಕುಟುಂಬಗಳಿಂದ ಈಚೀಚೆಗೆ ಆಯ್ದು ಜನ ಉತ್ತಮವಾದ. ಸಹಜವಾದ ಮತ್ತು ಬೌದ್ಧಿಕವಾದ ಜೀವನವನ್ನು ನಡೆಸಿದ ನೆನಪು ಅವರಿಗುಂಟು.

ಬಹುಮಟ್ಟಿಗೆ ಅವರು ರೈತವರ್ಗದ ಜನ. ತಮ್ಮ ನೇಮಕದ ಉದ್ದೇಶ ಅವರಿಗೆ ಚೆನ್ನಾಗಿ ಗೊತ್ತು. ಜಮೀನುದಾರರು ಯಾವಾಗಲೂ ತಮ್ಮ ಸೋದರರಾದ ರೈತ ವರ್ಗದ ಮೇಲೆ ಹಕ್ಕು ಪಡೆಯಲು ಯತ್ನಿಸುತ್ತಾರೆ ಎಂಬ ಸಂಗತಿಯೂ ಅವರಿಗೆ ಗೊತ್ತು. ಈ ಪ್ರಸಂಗವೂ ಅಂಥದೇ ಒಂದು. ಅಲ್ಲದೆ ಈಗಿನ ಸೈನಿಕರಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಪುಸ್ತಕಗಳನ್ನು ಓದುತ್ತಾರೆ. ಎಲ್ಲ ಪುಸ್ತಕಗಳೂ ಯುದ್ಧದ ವ್ಯವಹಾರವನ್ನೇ ಕೊಂಡಾಡುತ್ತವೆ ಎಂದೇನೂ ಹೇಳುವಂತಿಲ್ಲ. ಅದರ ಅನ್ಯಾಯಗಳನ್ನು ಕುರಿತು ಹೇಳುವ ಪುಸ್ತಕಗಳೂ ಹಲವಾರಿವೆ. ಈ ಸೈನಿಕರಲ್ಲಿ ಸ್ವತಂತ್ರ ವಿಚಾರ ಲಹರಿಯುಳ್ಳವರು ಅನೇಕರಿದ್ದಾರೆ. ಅಧಿಕಾರಿಗಳಲ್ಲೂ ಇದೇ ಮನಸ್ಸಿನ ಉದಾರಿ ತರುಣರಿದ್ದಾರೆ. ತಮ್ಮ ವೃತ್ತಿ ಪರಮೋಚ್ಚವಾದದ್ದು. ವೈಭವಪೂರ್ಣವಾದದ್ದು ಎಂಬ ವಿಷಯದಲ್ಲಿ ಅವರಲ್ಲಿ ಸಂಶಯದ ಬೀಜ ಮೊಳೆತಿದೆ.

ಸೈನಿಕರೆಲ್ಲ ಕವಾಯತು ಎಂಬ ಭಯಂಕರ ಕೃತಕ ವ್ಯವಸ್ಥೆಯಲ್ಲಿ ನುರಿತಿದ್ದಾರೆ. ಇದು ನೂರಾರು ವರ್ಷಗಳಿಂದ ಅವರ ಕ್ರಿಯಾಶಕ್ತಿಗಳಿಗೆಲ್ಲ ಮಾರಕವಾಗಿ ಬೆಳೆಯುತ್ತ ಬಂದಿದೆ. ಈ ಜನರೆಲ್ಲ ಈ ಯಾಂತ್ರಿಕ ಆಜ್ಞಾಪಾಲನೆಯಲ್ಲಿ ಎಷ್ಟು ಪಳಗಿದ್ದಾರೆಂದರೆ "ಸಿದ್ಧರಾಗಿ. ಸಾಲಾಗಿ ನಿಲ್ಲಿ. ಗುಂಡಿಕ್ಕಿ" ಇತ್ಯಾದಿ ಆಜ್ಞೆಗಳು ಹೊರಟ ಕೂಡಲೆ ರೂಢಿಯ ಚಲನೆಗಳು. ಬಂದೂಕು ಎತ್ತುವಿಕೆ ಇವೆಲ್ಲ ತಾವಾಗಿಯೇ ನಡೆದು ಹೋಗುತ್ತವೆ. ಆದರೆ ಈಗ 'ಗುಂಡಿಕ್ಕಿ' ಎಂದಾಗ ವಿನೋದಕ್ಕಾಗಿ ಮತ್ತು ಗುರಿಸಾಧನೆಗಾಗಿ ಲಕ್ಷ್ಯ ವಸ್ತುವಿನ ಮೇಲೆ ಹೊಡೆಯುತ್ತಿಲ್ಲ ಎಂಬುದು ಅವರಿಗೆ ಗೊತ್ತು. ಬೀದಿಯಲ್ಲಿ ಇಕ್ಕಟ್ಟಾದ ಗುಂಪಿನಲ್ಲಿ ಹೆಂಡತಿ ಮಕ್ಕಳ ಮಧ್ಯದಲ್ಲಿ ನಿಂತು ತೋಳು ಬೀಸುತ್ತಿರುವ ತಮ್ಮ ಸೋದರರನ್ನೇ. ಅಪಹಾಸ್ಯಕ್ಕೀಡಾಗಿ ನೋವು ತಿನ್ನುತ್ತಿರುವ ತಮ್ಮ ಸೋದರರನ್ನೇ ಮಿತ್ರಗಳನ್ನೇ ಈಗ ಕೊಲ್ಲಬೇಕಾದ ಸಮಯ ಬಂದಿದೆ ಎಂಬ ತಿಳುವಳಿಕೆ ಅವರಿಗುಂಟು. ಕಾಜ್ಯಾನ್ ಅಥವಾ ರ್ಯಾಜ್ಯಾನ್ ಪ್ರಾಂತದಲ್ಲಿ ತನ್ನನ್ನು ಬೀಳ್ಕೊಟ್ಟು ಒಂಟಿಯಾಗಿ ಉಳಿದಿರುವ ಹರಕು ಕೋಟಿನ. ಕಿರುಗಡ್ಡದ. ತೊಗಟೆ ಚಪ್ಪಲಿಯ ತಂದೆಯಂತೆ ಒಬ್ಬ ವ್ಯಕ್ತಿ ಆ ಗುಂಪಿನಲ್ಲಿದ್ದಾನೆ. ತನ್ನ ಅಜ್ಜನಂತೆಯೇ ನರೆತ ಗಲ್ಲದ. ಬಾಗಿದ ಬೆನ್ನಿನ, ಊರುಗೋಲಿನ ಒಬ್ಬಾತ ಕಾಣುತ್ತಿದ್ದಾನೆ. ಒಂದು ವರ್ಷದ ಹಿಂದೆ ತಾನು ಹೇಗೆ ಇದ್ದನೋ ಹಾಗೆ ಕಾಣುವ ಎತ್ತರದ ಬೂಟಿನ ಕೆಂಪಂಗಿಯ ಒಬ್ಬ ಯುವಕ ಅಲ್ಲಿ ಕಾಣುತ್ತಾನೆ. ಈಗ ಸೈನಿಕನಾಗಿರುವ ತಾನು ಅವನನ್ನು ಕೊಲ್ಲಬೇಕಾಗಿದೆ. ಮನೆಯಲ್ಲಿ

ಬಿಟ್ಟು ಬಂದ ತಾಯಿಯಂತೆಯೇ ಲಿನನ್ ಸ್ಕರ್ಟಿನ, ತೊಗಟೆ ಚಪ್ಪಲಿಯ ಹೆಂಗಸೊಬ್ಬಳು ಆ ಗುಂಪಿನಲ್ಲಿದ್ದಾಳೆ ......... ಅವರ ಮೇಲೆ ನಿಜವಾಗಿ ಗುಂಡು ಹಾರಿಸಬೇಕೆ ?

ಕೊನೆಯ ಗಳಿಗೆಯಲ್ಲಿ ಪ್ರತಿ ಸೈನಿಕನೂ ಏನುಮಾಡುತ್ತಾನೆ ಎಂಬುದನ್ನು ಹೇಳುವುದು ಅಸಾಧ್ಯ. ಅಂಥ ಕೆಲಸ ಮಾಡುವುದು ಸಲ್ಲ. ಅದನ್ನು ಮಾಡುವುದಿಲ್ಲ ಎಂದು ಹೇಳುವುದು ಸಾಧ್ಯ ಎಂಬ ಸೂಚನೆ ಅವನಿಗೆ ಸಿಕ್ಕಿದರೂ ಸಾಕು. ಆತ ಖಂಡಿತವಾಗಿ ಈ ಕೃತ್ಯವನ್ನು ನಿಲ್ಲಿಸಿಬಿಡುತ್ತಾನೆ.

ರೈಲಿನಲ್ಲಿ ಪ್ರಯಾಣಿಸುತ್ತಿರುವ ಈ ಜನರೆಲ್ಲ ತಮ್ಮ ಉದ್ದೇಶದ ಸಾಧನೆಗೆ ಹೊರಟ ಗಳಿಗೆಯಲ್ಲಿ ವಶೀಕರಣಕ್ಕೆ ಒಳಗಾದ ವ್ಯಕ್ತಿಯಂತೆ ಪ್ರಭಾವಿತರಾಗಿರುತ್ತಾರೆ. ವಶೀಕರಣಕ್ಕೆ ಒಳಗಾದವನಿಗೆ ಒಂದು ಮರದ ತುಂಡನ್ನು ಸೀಳು ಎಂದು ಹೇಳಿರುತ್ತಾರೆ ಎಂದು ಭಾವಿಸೋಣ. ಕೊಡಲಿಯನ್ನು ಮಸೆದು ನಿಲ್ಲುವ ಆತನಿಗೆ ಎದುರಿಗೆ ಇರುವುದು ಮರದ ಕೊರಡಲ್ಲ. ಮಲಗಿರುವ ತನ್ನ ಸೋದರನ ದೇಹ ಎಂಬುದು ಕಾಣಿಸುತ್ತದೆ. ಅಂಥ ಸಂದರ್ಭಗಳಲ್ಲಿ ಆತ ತನ್ನ ಕೆಲಸವನ್ನು ಮಾಡಿ ಮುಗಿಸಬಹುದು ಅಥವಾ ಅದಕ್ಕೆ ಮುನ್ನ ನಿಜಸ್ಥಿತಿಯ ಅರಿವು ಮಾಡಿಕೊಳ್ಳಬಹುದು. ಅದೇ ಬಗೆಯಲ್ಲಿ ಈ ಯೋಧ ಪಡೆಯೂ ಸಕಾಲಕ್ಕೆ ಅರಿವು ಪಡೆಯಬಹುದು. ಪಡೆಯದೆ ಹೋಗಬಹುದು.

ಹಾಗೆ ಇವರಿಗೆ ಅರಿವು ಮೂಡದಿದ್ದರೆ ಓರ್ಯೋಲಿನಲ್ಲಿ ನಡೆದಂತೆ ಒಂದು ದೊಡ್ಡ ಪಾತಕ ಮತ್ತೆ ಜರಗುತ್ತದೆ....ಆಗ ಇವರನ್ನು ಹಿಡಿತದಲ್ಲಿಟ್ಟುಕೊಂಡ ಆತ್ಮಪ್ರೇರಣೆ ಮತ್ತು ವಶೀಕರಣ ಶಕ್ತಿಗಳಿಗೆ ಇನ್ನೂ ಕೋಡು ಬೆಳೆಯುತ್ತದೆ. ಇವರಿಗೆ ಅರಿವು ಮೂಡಿದರೆ ಈ ಹತ್ಯಾಕಾಂಡ ನಿಂತುಹೋಗುತ್ತದೆ. ಅಲ್ಲದೆ ಇಂಥ ಘಟನೋತ್ತರರ ಕಿವಿಗೆ ಬಿದ್ದಾಗ ಅವರನ್ನು ಬಂಧಿಸಿರುವ ವಶೀಕರಣದ ಹಿಡಿತ ಸಡಿಲವಾಗುತ್ತದೆ ಅಥವಾ ಕ್ರಮೇಣ ಮಂಕಾಗುತ್ತ ಹೋಗುತ್ತದೆ.

ಕೆಲವರಲ್ಲಿ ಈ ಅರಿವು ಮೂಡಿದರೂ ಸಾಕು ಅವರು ಈ ಕಾರ್ಯಾಚರಣೆಯಲ್ಲಿ ಭಾಗವಹಿಸಲು ಒಪ್ಪದೆ. ಅವರ ದುಷ್ಟತನವನ್ನು ಕುರಿತು ಹಿರಿಯರಿಗೆ ಧೈರ್ಯವಾಗಿ ಹೇಳುವಂತಾದರೆ ಸಾಕು ಆ ಕೆಲವು ಮಂದಿ ಧೈರ್ಯಶಾಲಿಗಳ ಪ್ರಭಾವದಿಂದ ಉಳಿದವರೂ ಕೂಡ ತಮ್ಮನ್ನು ತುಳಿಯುತ್ತಿರುವ ವಶೀಕರಣದ ಪ್ರಭಾವದ ಬೇರುಗಳನ್ನು ಅಲುಗಿಸಲು ಪ್ರಯತ್ನ ಮಾಡುತ್ತಾರೆ. ಆಗ ಹತ್ಯಾಕಾಂಡಗಳು ನಿಲ್ಲುತ್ತವೆ.

ಈ ಕಾರ್ಯಾಚರಣೆಯಲ್ಲಿ ಭಾಗವಹಿಸದೆ ಇದ್ದರೂ ಅವರ ಸಿದ್ಧತೆಗಳನ್ನೆಲ್ಲಾ ನೋಡುತ್ತಿರುವ ಜನ ಅಥವಾ ಹಿಂದಿನ ಹತ್ಯಾಕಾಂಡಗಳ ದೃಶ್ಯಗಳ ವಿಚಾರವಾಗಿ ಕೇಳಿರುವ ಜನ ಧೈರ್ಯವಾಗಿ ಮುಂದೆ ಬಂದು ಚುಚ್ಚುಮಾತಿನಿಂದ ಈ ಹತ್ಯಾಕಾಂಡಗಳಲ್ಲಿ ಭಾಗವಹಿಸುವ ಜನರಿಗೆ ಛೀಮಾರಿ ಹಾಕಿದರೆ ಸಾಕು. ಅವರು ಮಾಡುತ್ತಿರುವ ಕೆಲಸ

ಎಷ್ಟು ಕೆಟ್ಟದೆಂಬುದನ್ನೂ ಕ್ರೂರವೆಂಬುದನ್ನೂ, ಅರ್ಥಹೀನವಾದುದೆಂಬುದನ್ನೂ ತೋರಿಸಿಕೊಟ್ಟರೆ ಸಾಕು. ಸುಮ್ಮನೆ, ಎಲ್ಲವನ್ನೂ ನೋಡಿಕೊಂಡಿರುವುದಕ್ಕಿಂತ ಯಾರಾದರೂ ಮುಂದೆ ಬಂದು ಹೀಗೆ ವಾದ ಮಾಡಿದರೆ ಅದರಿಂದ ಪರಿಣಾಮ ವಾಗದೇ ಹೋಗುವುದಿಲ್ಲ.

ನಮ್ಮ ಮುಂದಿದ್ದ ದೃಶ್ಯದ ವಿಚಾರದಲ್ಲೂ ಈ ಮಾತನ್ನೇ ಹೇಳಬಹುದು. ಹಿಂದಿನ ಕಾರ್ಯಾಚರಣೆಗಳಲ್ಲಿ ಭಾಗವಹಿಸಿದವರೋ ಅಥವಾ ಪ್ರತ್ಯಕ್ಷದರ್ಶಿಗಳೋ ಎದುರಿಗೆ ನಿಂತು ಧೈರ್ಯವಾಗಿ, ಹೊಡೆತ ಮತ್ತು ಹಿಂಸಾ ಕಾರ್ಯಗಳನ್ನು ವಿರೋಧಿಸಿ ಅವುಗಳಲ್ಲಿ ಭಾಗವಹಿಸಿದ ಜನರ ಬಗೆಗೆ ತೀವ್ರ ತಿರಸ್ಕಾರವನ್ನು ತೋರಿಸಿದ್ದರೆ ಸಾಕಾಗಿತ್ತು. ಈಗಿನ ಟೂಲಾ ಪ್ರಕರಣದ ವಿಚಾರವನ್ನು ಎತ್ತಿಕೊಂಡು ಕೆಲವರು ತಮಗೆ ಅದರಲ್ಲಿ ಭಾಗವಹಿಸಲು ಇಷ್ಟವಿಲ್ಲ ಎಂದು ಹೇಳಬಹುದಾಗಿತ್ತು. ಪ್ರಯಾಣ ಮಾಡುತ್ತಿರುವ ಮಹಿಳೆ ಮತ್ತು ಅಕ್ಕಪಕ್ಕದ ಕೆಲವು ಜನರು ಸೇರಿ, ಹತ್ಯಾಕಾಂಡಕ್ಕೆ ಹೊರಟಿರುವ ಯೋಧ ವರ್ಗಕ್ಕೆ ಎದುರಿಗೆ ತಮ್ಮ ಕ್ರೋಧ ಅಸಮ್ಮತಿಗಳನ್ನು ಸೂಚಿಸಬಹುದಾಗಿತ್ತು. ಟೂಲದಲ್ಲಿ ಕಾನೂನಿನ ಪಾಲನೆಗಾಗಿ ಯಾವ ರೆಜಿಮೆಂಟಿನ ಕಮ್ಯಾಂಡರನ ಸೇನಾ ಸಹಾಯ ವನ್ನು ಕೋರಲಾಗಿತ್ತೋ ಆ ಕಮ್ಯಾಂಡರ್ ಒಬ್ಬನು ಮುಂದೆ ಬಂದು ಸೈನಿಕರು ಹತ್ಯಾ ಕಾರರಾಗುವುದಕ್ಕೆ ನಾನು ಒಪ್ಪುವುದಿಲ್ಲ ಎಂದು ಹೇಳಿದ್ದರೆ ಸಾಕಾಗಿತ್ತು. ಪುಣ್ಯಕ್ಕೆ ಯಾವುದೋ ಅಜ್ಞಾತ ಖಾಸಗೀ ಪ್ರಭಾವಗಳು ಸೇರಿಕೊಂಡು ಈ ವಶೀಕರಣದ ಪ್ರಭಾವ ಬಿಟ್ಟುಹೋಯಿತೋ ಏನೋ. ಟೂಲಾದಲ್ಲಿ ಹತ್ಯಾಕಾಂಡ ನಡೆಯಲಿಲ್ಲ. ಕಾರ್ಯಾಚರಣೆಯ ಜಾಗವನ್ನು ತಲುಪಿದ ಯೋಧರ ಪಡೆ ರೈತರಿಗೆ ಕಿರುಕುಳವನ್ನು ಕೊಡಲಿಲ್ಲವಂತೆ. ಸೈನಿಕರೇ ಮುಂದಾಗಿ ಮರಗಳನ್ನು ಕತ್ತರಿಸಿ ದಿಮ್ಮಿಗಳನ್ನು ಜಮೀನು ದಾರರಿಗೆ ಒದಗಿಸಿದರಂತೆ.

ತಮ್ಮದು ತಪ್ಪು ಎಂದು ತಿಳಿಯಬಲ್ಲ, ಮುಕ್ತವಾದ ವಿಚಾರ ದೃಷ್ಟಿಯುಳ್ಳವರು ಕೆಲವರಾದರೂ ಇಲ್ಲದೆ ಇದ್ದಿದ್ದರೆ, ಈ ಕೆಲವು ಜನ ತಮ್ಮಂತಹ ಇತರರ ಮೇಲೆ ಪರಿಣಾಮ ಬೀರಲು ಸಾಧ್ಯವಾಗದೆ ಇದ್ದಿದ್ದರೆ ಒರ್ಯೋಲಿನಲ್ಲಿ ನಡೆದಂತೆಯೇ ಟೂಲದಲ್ಲೂ ನಡೆದು ಹೋಗುತ್ತಿದ್ದಿತು. ತಮ್ಮ ದೃಷ್ಟಿ ತಪ್ಪು ಎಂಬ ಪ್ರಜ್ಞೆ ಇನ್ನೂ ಬಲವತ್ತರವಾಗಿದ್ದಿದ್ದರೆ, ಅಥವಾ ಕೆಲವರ ಪ್ರಭಾವ ಇನ್ನೂ ಗಾಢವಾಗಿದ್ದಿದ್ದರೆ ಆಗ ಗವರ್ನರ್ ಮತ್ತು ಆತನ ಪಡೆಯವರು ಮರಗಳನ್ನು ಬಹುಶಃ ಕಡಿಯುತ್ತಲೇ ಇರಲಿಲ್ಲ, ಕಡಿದು ಜಮೀನು ದಾರನಿಗೆ ಒದಗಿಸುತ್ತಿರಲಿಲ್ಲ. ಆ ಪ್ರಜ್ಞೆ ಅತ್ಯಂತ ಪ್ರಬಲವಾಗಿದ್ದು, ಪ್ರಭಾವಗಳು ಇನ್ನೂ ಹಲವು ಪಟ್ಟು ಹೆಚ್ಚಾಗಿದ್ದಿದ್ದರೆ ಗವರ್ನರನು ಕಾರ್ಯಾಚರಣೆಯ ಜಾಗಕ್ಕೇ ಹೋಗುತ್ತಿರಲಿಲ್ಲವೋ ಏನೋ. ಅಂಥ ಪ್ರಭಾವಗಳು ಸಂಖ್ಯಾವೃದ್ಧಿಯಿಂದ ಹೆಚ್ಚಾಗಿದ್ದಿದ್ದರೆ ಮಂತ್ರಿಗಳು ಅಂಥ ಕ್ರೂರ ಕಾರ್ಯಾಚರಣೆ ನಡೆಯಬೇಕೆಂದು ಯೋಜಿಸುತ್ತಿರಲಿಲ್ಲ. ರಾಜನೂ ಅದಕ್ಕೆ ಸಹಿ ಹಾಕುತ್ತಿರಲಿಲ್ಲ.

ಆದ್ದರಿಂದ ಪ್ರತಿ ವ್ಯಕ್ತಿಯಲ್ಲೂ ಬೆಳಗುವ ಕ್ರೈಸ್ತ ಧರ್ಮದ ಪ್ರಜ್ಞಾಬಲ ವಿಸ್ತೃ ಎಂಬುದರ ಮೇಲೆ ಇದೆಲ್ಲಾ ನಿಂತಿದೆ.

ಆದ್ದರಿಂದ, ಮಾನವ ಕಲ್ಯಾಣವನ್ನು ಬಯಸುವ ನಮ್ಮ ಕಾಲದ ಎಲ್ಲ ಜನರ ಪ್ರಯತ್ನವೂ ಅವರಲ್ಲಿ ಮತ್ತು ಇತರರಲ್ಲಿ ಕ್ರೈಸ್ತ ಸತ್ಯದ ಮತ್ತು ಅದರ ಅಗತ್ಯಗಳ ಅರಿವನ್ನು ಬೆಳಗಿಸಿ ಬಲಪಡಿಸುವ ದಿಕ್ಕಿನಲ್ಲಿ ಸಾಗಬೇಕೆಂದು ಕಾಣುತ್ತದೆ.

ಆದರೆ ಒಂದು ವಿಚಿತ್ರ. ನಮ್ಮ ಜನರಲ್ಲಿ ಕೆಲವರು ಸಾರ್ವಜನಿಕ ವೃತ್ತಿಯಲ್ಲಿ ಬುದ್ಧಿವಂತ ನಾಯಕರೆಂದು ಖ್ಯಾತಿ ಪಡೆದಿದ್ದಾರೆ. ಮಾನವ ಸಮಾಜದ ಏಳಿಗೆಯ ಬಗೆಗೆ ಉದ್ದುದ್ದ ಮಾತನಾಡುತ್ತಾರೆ. ಆದರೆ ಅದೇ ಜನ, ಇದೆಲ್ಲಾ ಅನಗತ್ಯವೆಂದೂ ಮನುಷ್ಯನ ಸ್ಥಿತಿ ಸುಧಾರಿಸಲು ಇನ್ನೂ ಅನೇಕ ಉತ್ತಮ ಹಾದಿಗಳಿವೆಯೆಂದೂ ವಾದಿಸುತ್ತಾರೆ.

ಸತ್ಯವನ್ನು ಗುರುತಿಸುವ, ಬೆಳಕಿಗೆ ತರುವ, ಘೋಷಿಸುವ ದಿಕ್ಕಿನಲ್ಲಿ ಪ್ರತಿ ವ್ಯಕ್ತಿಯು ಕೈಗೊಳ್ಳುವ ನೈತಿಕ ಪ್ರಯತ್ನದ ಪರಿಣಾಮವಾಗಿ ಮಾನವ ಜೀವನ ಸುಧಾರಿಸುತ್ತದೆ ಎಂಬ ಮಾತನ್ನು ಇವರು ಒಪ್ಪುವುದಿಲ್ಲ. ಬದುಕನ್ನು ನಿಯಂತ್ರಿಸುವ ಹೊರಗಿನ ಸಾಧನಗಳನ್ನು ಕ್ರಮೇಣ ಬದಲಿಸುವುದರಿಂದ ಸುಧಾರಿಸಬಹುದು ಎಂದು ಇವರು ವಾದಿಸುತ್ತಾರೆ. ಪ್ರತಿ ವ್ಯಕ್ತಿಯ ಪ್ರಯತ್ನವೂ ವೈಯಕ್ತಿಕ ನೈತಿಕ ಪ್ರಗತಿಯ ಕಡೆ ಸಾಗುವುದಕ್ಕಿಂತ ಸಾಧಾರಣ ಸ್ಥಿತಿಗತಿಗಳನ್ನು ಬದಲಿಸುವ ಕಡೆ ಸಾಗಿದರೆ ತುಂಬ ಒಳ್ಳೆಯದು ಎಂದು ಇವರು ನಂಬುತ್ತಾರೆ. ಹಾಲಿ ಇರುವ ಸಾಧಾರಣ ನಿಯಮಾವಳಿಗೆ ಹೊಂದಿಕೊಳ್ಳಲಾರದ ವೈಯಕ್ತಿಕ ಸತ್ಯದ ನಿಲುವು ಅರ್ಥಹೀನವಾದದ್ದು. ಘಾತಕವಾದದ್ದು. ಏಕೆಂದರೆ ಅಂಥ ನಿಲುವು, ಸಮಾಜಕ್ಕೆ ಸಹಾಯಕವಾದ ಕೆಲಸವನ್ನು ವ್ಯಕ್ತಿ ಕೈಗೊಳ್ಳದಂತೆ ತಡೆ ಹಾಕುವುದರ ಮೂಲಕ ಸರಕಾರದ ನಿಬಂಧನೆಗಳ ಔಚಿತ್ಯವನ್ನು ಪುಷ್ಟಿಸುತ್ತದೆ – ಇದು ಅವರ ಹೇಳಿಕೆ. ಈ ತತ್ವವನ್ನು ಒಪ್ಪಿಕೊಂಡರೆ ಮಾನವ ಜೀವನದ ಎಲ್ಲ ಬದಲಾವಣೆಗಳೂ ಪ್ರಾಣಿ ಜೀವನದ ಸೂತ್ರವನ್ನು ನಿಯಂತ್ರಿಸುವ ತತ್ವಗಳ ಆಧಾರದ ಮೇಲೆಯೇ ನಿಂತಿದೆ ಎಂದು ಹೇಳಿದಂತಾದೀತು.

ಈ ತತ್ವವನ್ನು ವಿಚಾರಮಾಡೋಣ. ಮೋಸೆಸ್, ಪ್ರವಾದಿಗಳು, ಕಾನ್‌ಫ್ಯೂಷಿಯಸ್, ಲಾಜೆ, ಬುದ್ಧ, ಕ್ರಿಸ್ತ ಮೊದಲಾದ ಧರ್ಮ ಸಂಸ್ಥಾಪಕರೆಲ್ಲ ತಮ್ಮ ತತ್ವಗಳನ್ನು ಬೋಧಿಸಿದ್ದು, ಅವರ ಶಿಷ್ಯರುಗಳು ಮತ್ತು ಅನುಯಾಯಿಗಳು ಅವನ್ನು ಅನುಸರಿಸಿದ್ದು ಸತ್ಯದ ವಿಚಾರವಾಗಿ ಅವರಿಗೆ ತುಂಬ ಪ್ರೇಮವಿತ್ತು, ಅದನ್ನು ಬೆಳಕಿಗೆ ತರಲು, ಹರಡಲು ಅವರು ಪ್ರಯತ್ನಿಸಿದರು ಎಂಬ ಕಾರಣಕ್ಕಾಗಿ ಅಲ್ಲ; ಆಯಾ ಧರ್ಮಗಳು ಎಲ್ಲೆಲ್ಲಿ ಹರಡಿದವೋ ಅಲ್ಲೆಲ್ಲ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಗಳು ಆ ಧರ್ಮಗಳ ಹುಟ್ಟು ಬೆಳವಣಿಗೆಗಳಿಗೆ ತುಂಬ ಅನುಕೂಲವಾಗಿದ್ದುದೇ ಅದಕ್ಕೆ ಕಾರಣ ಎಂದು ಈ ತತ್ವ ಹೇಳುತ್ತದೆ.

ಆದ್ದರಿಂದ ಇವರ ಪ್ರಕಾರ ಮಾನವ ಸಮಾಜಕ್ಕೆ ಸೇವೆಸಲ್ಲಿಸಬೇಕೆಂದೂ. ಮಾನವತೆಯ ಸ್ಥಿತಿಯನ್ನು ಉತ್ತಮ ಪಡಿಸಬೇಕೆಂದೂ ಬಯಸುವ ಮನುಷ್ಯ ತನ್ನ ಚಟುವಟಿಕೆಯನ್ನು ಒಳಗಿನ ಬರೀ ಸತ್ಯದ ಪ್ರಕಾಶಕ್ಕೆ ಮೀಸಲಿಡಬಾರದು. ಅದಕ್ಕೆ ಬದಲಾಗಿ ಹೊರಗಿನ ರಾಜಕೀಯ, ಸಾಮಾಜಿಕ ಮತ್ತು ಇನ್ನೂ ಮುಖ್ಯವಾಗಿ ಆರ್ಥಿಕ ಪ್ರಗತಿಗಾಗಿ ದುಡಿಯಬೇಕು. ಈ ರಂಗಗಳಲ್ಲಿ ಸುಧಾರಣೆಗಳನ್ನು ತರಬೇಕಾದರೆ ಭಾಗಶಃ ಸರಕಾರದ ಸೇವೆಗೆ ಸೇರಿ, ಅದರಲ್ಲಿ ಮುಕ್ತವಾದ ಮತ್ತು ಪ್ರಗತಿಪರವಾದ ಧೋರಣೆಗಳನ್ನು ಸೇರಿಸುವುದರ ಮೂಲಕ: ಭಾಗಶಃ ಕೈಗಾರಿಕೆಯನ್ನು ವೃದ್ಧಿಪಡಿಸಿ. ಸಮಾಜವಾದೀ ಭಾವನೆಗಳನ್ನು ಜನರಲ್ಲಿ ಹರಡುವುದರ ಮೂಲಕ. ಮುಖ್ಯವಾಗಿ ವೈಜ್ಞಾನಿಕ ತಿಳಿವಳಿಕೆಯನ್ನು ಜನಪ್ರಿಯಗೊಳಿಸುವುದರ ಮೂಲಕ ಪ್ರಯತ್ನ ಮಾಡುವುದು ಅಗತ್ಯ.

ಈ ತತ್ತ್ವದ ಪ್ರಕಾರ ಮನುಷ್ಯ ತನ್ನಲ್ಲಿ ವಿಚಾರ ಶಕ್ತಿಯನ್ನು ಬೆಳೆಸುವ ಸತ್ಯಕ್ಕೆ ಅಂಟಿ ನಿಲ್ಲಬೇಕಾಗಿಲ್ಲ. ಆದ್ದರಿಂದ ಸಹಜವಾಗಿ ಆತ ಈ ಸತ್ಯವನ್ನು ತನ್ನ ಜೀವನಕ್ಕೆ ಅಳವಡಿಸಿಕೊಳ್ಳಬೇಕಾಗಿಲ್ಲ. ಆ ಸತ್ಯಕ್ಕೆ ವಿರೋಧವಾದ ಕಾರ್ಯಗಳನ್ನು ಮಾಡಲೊಪ್ಪದೆ ತಟಸ್ಥವಾಗಿ ಉಳಿಯಬೇಕಿಲ್ಲ. ಉದಾಹರಣೆಗೆ ಕೆಲವು ಹಕ್ಕುಗಳು ತುಂಬ ಅಪಾಯಕರವೆಂದು ತಿಳಿದಿದ್ದರೂ ಆ ಹಕ್ಕುಗಳನ್ನು ಇನ್ನಷ್ಟು ಬಲಪಡಿಸುವ ಸರಕಾರದಲ್ಲಿ ಸೇವೆ ಸಲ್ಲಿಸುವುದು, ಬಂಡವಾಳಶಾಹೀ ಪದ್ಧತಿಯು ಅಕ್ರಮವೆಂದು ತಿಳಿದಿದ್ದರೂ ಅದರಿಂದ ಲಾಭ ಸಂಪಾದಿಸುವುದು, ಕೀಳಾದ ಮೂಢ ನಂಬಿಕೆಗಳೆಂದು ತಿಳಿದಿದ್ದರೂ ಕೆಲವು ಹಬ್ಬ ಹರಿದಿನ ಸಮಾರಂಭಗಳಿಗೆ ತುಂಬ ಗೌರವ ತೋರುವುದು. ನಡವಳಿಕೆಯ ವ್ಯವಸ್ಥೆಯೇ ಸರಿಯಿಲ್ಲವೆಂದು ತಿಳಿದಿದ್ದರೂ ನ್ಯಾಯಾಂಗ ವಿಚಾರಣೆಗಳಲ್ಲಿ ಪಾಲುಗೊಳ್ಳುವುದು. ಯೋಧಪಡೆಗೆ ಸೇರುವುದು. ಪ್ರಮಾಣವಚನ ತೆಗೆದುಕೊಳ್ಳುವುದು - ಒಟ್ಟಿನಲ್ಲಿ ತುಂಬ ಉಡಾಫೆ ಹೊಡೆಯುವುದು, ಪಟಿಂಗನಂತೆ ವರ್ತಿಸುವುದು. ತಮ್ಮ ಆತ್ಮಸಾಕ್ಷಿ ಮತ್ತು ನಂಬಿಕೆಗಳಿಗೆ ವಿರೋಧವಾಗಿರುವ ಈಗಿನ ಜೀವನ ಪದ್ಧತಿಗಳಿಗೆ ಹೇಗೋ ಹೊಂದಿಕೊಂಡು ಅವುಗಳನ್ನು ಬದಲಾಯಿಸುವ ಗೋಜಿಗೇ ಹೋಗದೆ ಇದ್ದುಬಿಡುವುದು ಅವರ ಒಂದು ವರ್ತನೆಯಾದರೆ ಇತ್ತ ಹೊರಗೆ ಮಾತ್ರ ಈಗಿನ ಕಾರ್ಯಸಂಸ್ಥೆಗಳಲ್ಲಿ ಉದಾರ ನೀತಿಯನ್ನು ಪಾಲಿಸಬೇಕೆಂದೂ ಕೈಗಾರಿಕೆಯನ್ನು ಬೆಳೆಸಬೇಕೆಂದೂ ವಿಜ್ಞಾನದ ವಿಜಯೋತ್ಸವಗಳೆಂದು ಕರೆಯಲಾಗಿರುವ ಸಮಾಜವಾದ ಮತ್ತು ವಿದ್ಯೆಯ ಪ್ರಸಾರಗಳಲ್ಲಿ ಆಸಕ್ತಿವಹಿಸಬೇಕೆಂದು ಹೇಳುವುದೂ ಅವರ ಇನ್ನೊಂದು ವೈಖರಿಯಾಗಿದೆ.

ಇವರ ತತ್ತ್ವದ ಪ್ರಕಾರ ಈಗ ಒಬ್ಬ ವ್ಯಕ್ತಿ ಜಮೀನುದಾರನಾಗಿ ಉಳಿಯಬಹುದು. ವರ್ತಕ. ಉತ್ಪಾದಕ, ನ್ಯಾಯಾಧಿಪತಿ. ಸರಕಾರದ ಸಂಬಳ ಪಡೆಯುವ ಅಧಿಕಾರಿ. ಸೈನಿಕ ಯಾರೇ ಆಗಬಹುದು. ಆಗಿಯೂ ದಯಾವಂತನೆಂದು ಹೆಸರು ಪಡೆಯಬಹುದು. ಅಷ್ಟೇ ಅಲ್ಲದೆ ಆತ ಸಮಾಜವಾದಿ. ಕ್ರಾಂತಿಕಾರ ಎಂದೆಲ್ಲ ಕರೆಸಿಕೊಳ್ಳಬಹುದು.

ಮಾನವನ ಪತನ, ವಿಮೋಚನೆ ಮತ್ತು ಚರ್ಚ್ ಇವುಗಳಿಗೆ ಸಂಬಂಧಿಸಿದಂತೆ ಆಷಾಢಭೂತಿತನವು ಹಿಂದೆ ಒಂದು ಧಾರ್ಮಿಕ ನೆಲೆಗಟ್ಟನ್ನು ಪಡೆದುಕೊಂಡಿತ್ತು. ಈಗ ಆಷಾಢಭೂತಿತನ ಒಂದು ವೈಜ್ಞಾನಿಕ ನೆಲಗಟ್ಟನ್ನು ಗಿಟ್ಟಿಸಿಕೊಂಡಿದೆ. ಆದರಿಂದಾಗಿ ಧಾರ್ಮಿಕ ಕಪಟಾಚಾರವನ್ನು ನಂಬದ ಕೆಲವರು ಬುದ್ಧಿ ಜೀವಿಗಳಿದ್ದಾರಲ್ಲ, ಅಂಥವರನ್ನು ಕೂಡ ತನ್ನ ಬಲೆಗೆ ಹಾಕಿಕೊಂಡಿದೆ. ಹಿಂದೆಲ್ಲಾ ಚರ್ಚಿನ ತತ್ತ್ವೋಪದೇಶಗಳಲ್ಲಿ ನಂಬಿಕೆಯಿಟ್ಟವನು ಮಾತ್ರ ಸರಕಾರದ ದುರಾಚರಣೆಯ ಕಾರ್ಯಗಳಲ್ಲಿ ಪಾಲುಗೊಳ್ಳ ಬಹುದಾಗಿತ್ತು. ಲಾಭ ಪಡೆಯಬಹುದಾಗಿತ್ತು. ಆದರೂ ತಾನು ತನ್ನ ಧರ್ಮದ ಬಾಹ್ಯ ವಿಧಿಗಳನ್ನು ಅನುಸರಿಸುತ್ತಿರುವ ತನಕ ಯಾವ ಪಾಪದ ಕಳಂಕವೂ ತನ್ನನ್ನು ತಟ್ಟುವುದಿಲ್ಲ ಎಂದು ಭಾವಿಸಬಹುದಾಗಿತ್ತು. ಆದರೆ ಈಗಿನ ಪರಿಸ್ಥಿತಿಯೇ ಬೇರೆ. ಸರಕಾರದ ದುರಾಚರಣೆಗಳಲ್ಲಿ ಈಗಲೂ ಅವನು ಭಾಗವಹಿಸಬಹುದು. ಲಾಭ ಪಡೆಯಬಹುದು. ಅವನಿಗೆ ಈಗ ಚರ್ಚಿನ ಸಿದ್ಧಾಂತಗಳಲ್ಲಿ ನಂಬಿಕೆಯೇ ಇರಬೇಕಾಗಿಲ್ಲ. ಆದರೂ ಈಗ ಆತ ವೈಜ್ಞಾನಿಕ ಆಧಾರದ ಮೇಲೆ ತಾನು ಕಳಂಕದೂರನೆಂದೂ ದೊಡ್ಡ ನೀತಿವಂತನೆಂದೂ ಹೇಳಿಕೊಳ್ಳಲು ಅವಕಾಶವಿದೆ.

ಜಮೀನುದಾರರು ರಷ್ಯದಲ್ಲಿ ಮಾತ್ರವಲ್ಲ, ಫ್ರಾನ್ಸ್. ಇಂಗ್ಲೆಂಡ್, ಜರ್ಮನಿ ಮತ್ತು ಅಮೆರಿಕಗಳಲ್ಲಿ ಕೂಡ ಇದ್ದಾರೆ. ಈ ಜನ ತಮ್ಮ ಭೂಮಿಯ ಒಕ್ಕಲುತನದಿಂದ ಜೀವನ ನಿರ್ವಹಿಸಿಕೊಳ್ಳಲು ಜನರಿಗೆ ಅವಕಾಶಕೊಟ್ಟು ಅವರಿಂದ ಗೇಣಿಯನ್ನು ವಸೂಲು ಮಾಡುತ್ತಾರೆ. ಸಾಮಾನ್ಯವಾಗಿ ಅರಕೆಯುಳ್ಳ ರೈತವರ್ಗದವರಿಂದ ತಮಗೆ ಸಾಧ್ಯ ವಾದಷ್ಟನ್ನೂ ಸುಲಿಯುತ್ತಾರೆ. ಮಾಲಿಕ ಈ ಭೂಮಿಯ ಮೇಲೆ ಒಂದು ಬಗೆಯಲ್ಲಿ ಹಕ್ಕು ಸ್ಥಾಪಿಸಿಕೊಂಡಿರುತ್ತಾನೆ. ಈತನ ಒಪ್ಪಿಗೆ ಪಡೆಯದೆ, ರೈತವರ್ಗದವರೇನಾದರೂ ಆತನ ಜಮೀನನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಬೇಕೆಂದು ಪ್ರಯತ್ನಿಸಿದರೆ ಕೂಡಲೇ ಸೇನಾಪಡೆಗಳು ಅಲ್ಲಿಗೆ ನುಗ್ಗಿ ಅವರನ್ನು ಚಿತ್ರಹಿಂಸೆ. ವಧೆಗಳಿಗೆ ಗುರಿಮಾಡುತ್ತವೆ. ಇಂಥ ರೀತಿಯಲ್ಲಿ ಬದುಕಬಯಸುವ ಜಮೀನುದಾರನು ಕೆಟ್ಟ. ದುರಭಿಮಾನದ ವ್ಯಕ್ತಿಯೆಂದೇ ಕರೆಯಬಹುದು. ಕ್ರೈಸ್ತಧರ್ಮದವನೆಂದೂ ಉದಾರಿಯೆಂದೂ ಆತ ಕರೆದುಕೊಳ್ಳಲು ಯೋಗ್ಯನಲ್ಲ. ಕ್ರೈಸ್ತ ಧರ್ಮ, ಉದಾರತೆಗಳ ಸೀಮೆಗೆ ಸುಳಿಯ ಬೇಕಾದರೆ ಕೂಡ ಆತ ಮೊದಲು ಒಂದು ಕೆಲಸಮಾಡಬೇಕು. ಏನೆಂದರೆ ಜಮೀನು ತನ್ನದು ಎಂದು ಹೇಳುತ್ತ ರೈತರನ್ನು ಸುಲಿದು ನಾಶಮಾಡುವುದನ್ನು ನಿಲ್ಲಿಸಬೇಕು. ಸರಕಾರವು ಹಿಂಸಾಚಾರ, ಕೊಲೆಗಳಿಂದ ತನ್ನ ಜಮೀನನ್ನು ರಕ್ಷಿಸುತ್ತಿದೆ ಎಂಬುದು ಆತನಿಗೆ ತಿಳಿಯಬೇಕು. ಈತನದು ಒಂದು ಕೃತ್ರಿಮ ವಿಚಾರಧಾರೆ. ಧಾರ್ಮಿಕ ದೃಷ್ಟಿಯಿಂದ ನೋಡಿದಾಗ ಜಮೀನು ಹೊಂದಿರುವುದು ಅಥವಾ ಹೊಂದದಿರುವುದು ಇವು ಮುಕ್ತಿಗೆ ಸಾಧಕವೂ ಅಲ್ಲ ಬಾಧಕವೂ ಅಲ್ಲ. ಮುಕ್ತಿಗೂ ಅದಕ್ಕೂ ಸಂಬಂಧವೇ ಇಲ್ಲ ಎಂದು ವಾದ ಮಾಡಿದಂತಾಗುತ್ತದೆ. ವೈಚಾರಿಕ ದೃಷ್ಟಿಕೋನದಿಂದ ನೋಡಿದಾಗ

ರೈತರಿಗೆ ಭೂಮಿಯ ಒಡೆತನವನ್ನು ಬಿಟ್ಟುಕೊಡುವುದು ಅರ್ಥಹೀನವಾದ ತ್ಯಾಗವಾಗುತ್ತದೆ. ಏಕೆಂದರೆ ಹಾಗೆ ಮಾಡುವುದಕ್ಕಿಂತ ಕ್ರಮಕ್ರಮವಾಗಿ ಹೊರಗಿನ ಸ್ವರೂಪವನ್ನು ಬದಲಿಸುವುದರಿಂದ ಸಮಾಜದ ಉದ್ಧಾರ ಸಾಧ್ಯವೆಂದು ಈ ಜನ ವಾದಿಸುತ್ತಾರೆ. ಈ ಜನ ತಮ್ಮ ವಿಚಾರಕ್ಕೆ ಸ್ವಲ್ಪವೂ ನಾಚಿಕೆಪಟ್ಟುಕೊಳ್ಳುವುದಿಲ್ಲ. ಜನ ತಮ್ಮನ್ನು ಪ್ರಾಮಾಣಿಕರೆಂದು ಕರೆಯುತ್ತಾರೆ ಎಂಬ ವಿಚಾರದಲ್ಲಿ ಅನುಮಾನ ಪಡುವುದಿಲ್ಲ. ಹಾಗೆ ನಂಬಿ ಕೈಗಾರಿಕಾ ಪ್ರದರ್ಶನಗಳನ್ನು ವ್ಯವಸ್ಥೆ ಮಾಡುತ್ತಾರೆ. ಅತಿ ಮದ್ಯಪಾನ ವಿರೋಧಿ ಸಂಘವನ್ನು ರಚಿಸಿಕೊಳ್ಳುತ್ತಾರೆ. ನಾಲ್ಕಾರು ಬಡ ಮುದುಕಿಯರಿಗೆ ಬಟ್ಟೆ ಆಹಾರಗಳನ್ನು. ಹೆಂಡತಿ ಮಕ್ಕಳ ಮೂಲಕ ಹಂಚಿಸುವ ಕಾರ್ಯಕ್ರಮ ಇಟ್ಟುಕೊಳ್ಳುತ್ತಾರೆ. ತಮ್ಮ ಮನೆಯಲ್ಲೋ ಬೇರೆಯವರ ದಿವಾನಖಾನೆಯಲ್ಲೋ. ಸಮಿತಿಯಲ್ಲೋ ಪತ್ರಕರ್ತರ ಸಭೆಯಲ್ಲೋ ಧೈರ್ಯವಾಗಿ ಚರ್ಚೆ ನಡೆಸುತ್ತಾರೆ. ಅವರ ಚರ್ಚೆಯ ವಿಷಯ ಮುಖ್ಯವಾಗಿ ಕ್ರೈಸ್ತ ಧರ್ಮದ ಮತ್ತು ಮಾನವೀಯ ಗುಣವಾದ 'ನೆರೆಹೊರೆಯವರನ್ನು ಪ್ರೀತಿಸು' ಅಥವಾ ಸಾಮಾನ್ಯವಾಗಿ ತಾವು ಯಾರನ್ನು ಸದಾ ತುಳಿದು ಸುಲಿಯುತ್ತಿದ್ದಾರೋ ಅಂಥ ರೈತ ವರ್ಗವನ್ನು ಪ್ರೀತಿಯಿಂದ ಕಾಣುವ ಅಗತ್ಯವನ್ನು ಕುರಿತದ್ದಾಗಿರುತ್ತದೆ. ಆಗ ಅವರಂತೆಯೇ ಇರುವ ಉಳಿದ ಜನ ಆ ಮಾತನ್ನು ನಂಬಿದಂತೆ ಗೋಣುಹಾಕುತ್ತಾರೆ. ಯಾರನ್ನು ತಮ್ಮ ಲಾಭಕ್ಕೆ ಬಳಸಿಕೊಳ್ಳಲಾಗಿದೆಯೋ ಯಾರ ಸುಲಿಗೆಯಿಂದ ತಮ್ಮ ಇಡೀ ಜೀವನ ವೈಭವದಿಂದ ನಡೆಯುತ್ತಿದೆಯೋ ಅಂಥ ಬಡ ರೈತರ ಸ್ಥಿತಿಗತಿಗಳನ್ನು ಸುಧಾರಿಸಬೇಕು ಎಂದು ಹೇಳಿ ಅದಕ್ಕೆ ಕೈಗೊಳ್ಳಬೇಕಾದ ಕ್ರಮಗಳನ್ನು ಸೂಚಿಸುತ್ತಾರೆ. ಆ ರೈತ ವರ್ಗದವರ ಜೀವನ ನಿರ್ವಹಣೆಗೆ ಅಗತ್ಯವಾದ ಜಮೀನನ್ನು ಅವರಿಗೇ ಕೊಟ್ಟುಬಿಡುವ ಒಂದು ಮುಖ್ಯ ವಿಚಾರವನ್ನು ಬಿಟ್ಟು – ಇದನ್ನೇ ಬಿಟ್ಟಮೇಲೆ ರೈತರ ಸುಧಾರಣೆ ಹೇಗೆ ಸಾಧ್ಯ? – ಉಳಿದ ಎಲ್ಲಾ ಬಗೆಯ ಸುಧಾರಣೆಯ ಕ್ರಮಗಳನ್ನು ಕುರಿತು ಅವರು ಮುಕ್ತ ಮನಸ್ಸಿನಿಂದ ಚರ್ಚೆ ನಡೆಸುತ್ತಾರೆ.

ಇಂಥ ಕಪಟಾಚಾರಕ್ಕೆ ಒಂದು ಉತ್ತಮ ನಿದರ್ಶನವನ್ನು ಜಮೀನುದಾರರು ಕೊಟ್ಟಿದ್ದಾರೆ. ಕಳೆದ ವರ್ಷ ಜಮೀನುದಾರರು ತಾವೇ ಉಂಟುಮಾಡಿದ್ದ ಕ್ಷಾಮ ಪರಿಸ್ಥಿತಿಯಲ್ಲಿ ಅದನ್ನು ತೊಡೆದು ಹಾಕುವ ಸಂಕಲ್ಪವನ್ನು ತಾವೇ ಮಾಡಿದರು. ಬಹಳ ಉದಾರಿಗಳಂತೆ ಮುಂದೆ ಬಂದು ಅತಿ ಹೆಚ್ಚಿನ ಬೆಲೆ ತೆಗೆದುಕೊಂಡು ಧಾನ್ಯವನ್ನು ರೈತರಿಗೆ ಮಾರಿದರು. ಅಷ್ಟೇ ಅಲ್ಲ, ಒಣಗಿದ ಆಲೂಗಡ್ಡೆಯ ಬಳ್ಳಿಗಳನ್ನು ಒಲೆ ಉರಿಸಲು ರೈತರಿಗೆ ಕೊಡುವ ಮುನ್ನ ಎಕರೆಗೆ ಎರಡು ರೂಪಾಯಿಗಳಂತೆ ವಸೂಲು ಮಾಡಿ ಮೊದಲೇ ಶೋಷಿತರಾಗಿದ್ದವರನ್ನು ಇನ್ನಷ್ಟು ಹಿಂಡಿ ಲಾಭ ಮಾಡಿಕೊಂಡರು.

ಒಬ್ಬ ವ್ಯಾಪಾರಿಯನ್ನೇ ನೋಡಿ. ಅವನ ಇಡೀ ವ್ಯಾಪಾರದ ಕ್ರಮವೇ ಮೋಸಗಾರಿಕೆಯದಾಗಿರುತ್ತದೆ. ಜನಗಳ ಅಜ್ಞಾನವನ್ನು ಅವರ ಅಗತ್ಯಗಳನ್ನು ಈ ವ್ಯಾಪಾರಿ

ತನ್ನ ಲಾಭಕ್ಕೆ ಬಳಸಿಕೊಂಡು ಸಾಮಗ್ರಿಗಳನ್ನು ಅಲ್ಪ ಬೆಲೆಗೆ ಕೊಂಡು ಸ್ವಲ್ಪಕಾಲದ ನಂತರ ಅಧಿಕ ಬೆಲೆಗೆ ಅವರಿಗೇ ಮಾರುತ್ತಾನೆ. ಬೇರೆ ಸಂದರ್ಭಗಳಲ್ಲಾಗಿದ್ದರೆ ಇದು ಹಗಲು ದರೋಡೆ ಎಂದು ಆತನೇ ಕರೆಯುತ್ತಿದ್ದ. ಇಂಥವನು ಕ್ರೈಸ್ತಧರ್ಮದ ಅನುಯಾಯಿ ಎಂದು ಕರೆದುಕೊಂಡು, ಉದಾರಿ ಎನ್ನಿಸಿಕೊಂಡು ಹೀಗೆ ಬಾಳು ನಡೆಸಲು ನಿಜವಾಗಿ ನಾಚಿಕೆಪಟ್ಟುಕೊಳ್ಳಬೇಕಾಗಿತ್ತು. ಆ ಧರ್ಮದಲ್ಲಿ ತಾನಿರಲು ಅಯೋಗ್ಯ ಎಂದು ನಿರ್ಧರಿಸಿಕೊಳ್ಳಬೇಕಾಗಿತ್ತು. ಆದರೆ ಕುತರ್ಕದ ಈ ಕಪಟಾಚಾರದಲ್ಲಿ ಆತ ವಿಧ್ವಂಸಕ ಕಾರ್ಯಗಳಲ್ಲಿ ತೊಡಗಿರುವ ಸಮಯದಲ್ಲಿಯೇ ಸಂಭಾವಿತ ಮನುಷ್ಯನೆಂದು ಕರೆಸಿ ಕೊಳ್ಳುವುದೂ ಸಾಧ್ಯವಾಗಿಬಿಟ್ಟಿದೆ. ಧಾರ್ಮಿಕ ವ್ಯಕ್ತಿಗೆ ನಂಬಿಕೆ ಒಂದು ಇದ್ದುಬಿಟ್ಟರೆ ತೀರಿತು. ಉದಾರಿಯಾದ ಮನುಷ್ಯ ಹೊರಗಿನ ಸ್ಥಿತಿಗಳ ಬದಲಾವಣೆ, ಕೈಗಾರಿಕೆಯ ಏಳಿಗೆಗಳ ಮೂಲಕ ಸುಧಾರಣೆ ತರಬಹುದೆಂದು ನಂಬಿಬಿಟ್ಟರೆ ಸಾಕು. ಈ ಕಾರಣ ಗಳಿಂದಾಗಿ ವರ್ತಕ ತನ್ನ ವಿನಾಶಕಾರಿಯಾದ ವೃತ್ತಿಯ ಜತೆಗೆ ಕೆಲವು ಹೇಳಿ ನೀರವಾದ 'ಅಕ್ರಮ'ಗಳನ್ನು ಮಾಡುತ್ತಾನೆ. (ಮಿಶ್ರ ಆಹಾರವನ್ನು ಮಾರುವುದು, ಸುಳ್ಳು ಅಳತೆ ತೂಕಗಳನ್ನು ಬಳಸುವುದು, ಸ್ಪಿರಿಟ್, ಅಫೀಮು ಮುಂತಾದ ಆರೋಗ್ಯಕ್ಕೆ ಹಾನಿತರುವ ಸಾಮಗ್ರಿಗಳನ್ನು ಮಾರುವುದು ಇತ್ಯಾದಿ). ಇಂಥವನೇ ಸಮಾಜದಲ್ಲಿ ಸಾಚಾತನ, ಪ್ರಜ್ಞಾವಂತಿಕೆಗಳ ಮಾದರಿಯೂ ಆಗಿದ್ದೇನೆಂದು ಭಾವಿಸುತ್ತಾನೆ. ಉಳಿದವರೂ ಹಾಗೆಯೇ ನಂಬುತ್ತಾರೆ. ಎಲ್ಲಿಯವರೆಗೆ ಈ ವರ್ತಕ ತನ್ನಂಥ ಇತರ ವರ್ತಕ ಬಂಧುಗಳಿಗೆ ಮೋಸಮಾಡುವುದಿಲ್ಲವೋ ಅಲ್ಲಿಯವರೆಗೆ ಅವನಿಗೆ ಒಳ್ಳೆಯ ಹೆಸರೇ ಇರುತ್ತದೆ. ಹೀಗೆ ಜಮಾಯಿಸಿದ ಮೋಸದ ಹಣದಲ್ಲಿ ಸಾವಿರದಲ್ಲಿ ಒಂದು ಭಾಗದಷ್ಟು ಹಣವನ್ನು ಆತ ಉದಾರವಾಗಿ ಆಸ್ಪತ್ರೆಗೆಂದೋ, ಮ್ಯೂಸಿಯಮ್‌ ಗೆಂದೋ, ವಿದ್ಯಾಸಂಸ್ಥೆಗಳಿಗೆಂದೋ ದಾನಮಾಡಿಬಿಟ್ಟರೆ ಸಾಕು. ತಮ್ಮ ಹಣವನ್ನೇ ಕದ್ದು ತಮ್ಮನ್ನು ವಂಚಿಸಿ ಆಸ್ತಿ ಮಾಡಿಕೊಂಡಿರುವ ಈತನ ತ್ಯಾಗ ಮನೋಧರ್ಮವನ್ನು ಜನ ಮುಕ್ತ ಕಂಠದಿಂದ ಹೊಗಳುತ್ತಾರೆ. ಈ ಅನ್ಯಾಯದ ಹಣದಲ್ಲಿ ಒಂದಷ್ಟು ಭಾಗವನ್ನು ಚರ್ಚಿಗೋ ಬಡಬಗ್ಗರಿಗೋ ದಾನಮಾಡಿಬಿಟ್ಟರೆ ಆತನಿಗೆ 'ಮಾದರಿ ಕ್ರೈಸ್ತ'ನೆಂದು ನಾಮಕರಣ ಮಾಡಿಬಿಡುತ್ತಾರೆ.

ಒಬ್ಬ ಉತ್ಪಾದಕನ ವಿಚಾರ ತೆಗೆದುಕೊಳ್ಳೋಣ. ಮನುಷ್ಯರ ಭವಿಷ್ಯದ ತಲೆ ಮಾರುಗಳನ್ನೇ ಹಾಳುಮಾಡಬಹುದಾದಷ್ಟು ಅನ್ಯಾಯವೂ ಅಸಹಜವೂ ಆದ ಒತ್ತಾ-ಯದ ದುಡಿಮೆಯನ್ನು ಹೇರುವುದರ ಮೂಲಕ ಮತ್ತು ದಂಡಗಳನ್ನು ವಸೂಲುಮಾಡು ವುದರ ಮೂಲಕ ಕಾರ್ಮಿಕ ವರ್ಗದ ಮೇಲೆ ದಬ್ಬಾಳಿಕೆ ನಡೆಸಿ ಈತ ಲಾಭಗಳಿಸುತ್ತಾನೆ. ನಿಜವಾಗಿ ತಾನು ಕ್ರೈಸ್ತ ಧರ್ಮೀಯನೆಂದೂ ಉದಾರಿಯೆಂದೂ ಹೇಳಿಕೊಳ್ಳಬೇಕೆಂದಿದ್ದರೆ ಆತ ಮೊದಲಿಗೆ ತನ್ನ ಲಾಭದಾಸೆಗಾಗಿ ಮಾನವ ಜೀವಗಳನ್ನು ಹಾಳುಮಾಡುವುದನ್ನು ನಿಲ್ಲಿಸಬೇಕು. ಆದರೆ ಈಗ ಚಾಲ್ತಿಯಲ್ಲಿರುವ ತತ್ವದ ಪ್ರಕಾರ ಆತ ಕೈಗಾರಿಕೆಯ

ಏಳಿಗೆಗೆ ದುಡಿಯುತ್ತಿರುವ ವ್ಯಕ್ತಿಯಾಗಿರುವುದರಿಂದ ಆತನ ಚಟುವಟಿಕೆ ಎಂದಿಗೂ ನಿಲ್ಲಬಾರದು. ಆತ ಹಾಗೆ ನಿಲ್ಲಿಸಿಬಿಟ್ಟರೆ ಸಮಾಜಕ್ಕೆ ತುಂಬ ನಷ್ಟವಾಗುತ್ತದೆ. ಆದ್ದರಿಂದ ಈ ಕ್ರೂರ ಉದ್ಯೋಗಪತಿ, ಸಾವಿರಾರು ಜನರನ್ನು ಗುಲಾಮರನ್ನಾಗಿ ಮಾಡಿದ ಈ ಉದ್ಯೋಗಪತಿ, ಒಂದು ಸೇವಿಂಗ್ಸ್ ಬ್ಯಾಂಕ್. ಬಡವರ ವಸತಿಗೃಹ. ಆಸ್ಪತ್ರೆಗಳನ್ನು ಆರಂಭಿಸಿ ತನ್ನ 'ಚಟುವಟಿಕೆ'ಗಳನ್ನು ಮುಂದುವರಿಸುತ್ತಾನೆ. ದೈಹಿಕವಾಗಿ ನೈತಿಕವಾಗಿ ಪತನ ಹೊಂದಿರುವ ಕಾರ್ಮಿಕರಿಗೆ ಅವರ ಯೋಗ್ಯತೆಗಿಂತ ಹೆಚ್ಚಿನದನ್ನು ಕೊಟ್ಟಿರುವುದಾಗಿ ಈತ ಭಾವಿಸಿದ್ದರೆ ಆಶ್ಚರ್ಯವಿಲ್ಲ.

ಅಥವಾ ರಾಜನ. ಸಾರ್ವಜನಿಕರ. ಚರ್ಚಿನ ಅಥವಾ ಮಿಲಿಟರಿಯ ಕೆಲಸಗಾರರ ವಿಷಯ ತೆಗೆದುಕೊಳ್ಳಿ. ಇವರು ತಮ್ಮ ಗರ್ವ ಮತ್ತು ಮಹತ್ವಾಕಾಂಕ್ಷೆಗಳ ಪೂರೈಕೆಗಾಗಿ ದೇಶಸೇವೆಗೆ ನಿಲ್ಲುತ್ತಾರೆ. ಅಥವಾ ಬಳಲಿ ಬೆಂಡಾದ ಕಾರ್ಮಿಕ ವರ್ಗದವರಿಂದ ತೆರಿಗೆಯ ರೂಪದಲ್ಲಿ ಕಿತ್ತುಕೊಂಡ ಹಣವನ್ನು ಸಂಬಳದ ರೂಪದಲ್ಲಿ ಪಡೆಯಲು ಬಯಸುತ್ತಾರೆ. (ಯಾವುದೇ ತೆರಿಗೆಯಾಗಲಿ. ಪರೋಕ್ಷವಾಗಲೀ. ಪ್ರತ್ಯಕ್ಷವಾಗಲಿ, ಕಾರ್ಮಿಕ ವರ್ಗದವರಿಂದ ವಸೂಲು ಮಾಡಿದ ಹಣವೇ ಅದು) ಅಪಮಾರ್ಗಗಳಲ್ಲಿ ಇವರು ಸರಕಾರದ ಹಣವನ್ನು ಲಪಟಾಯಿಸದಿದ್ದರೆ (ಇದು ತುಂಬ ಅಪರೂಪ) ಸಮಾಜದ ತುಂಬ ದಯಾಪರರಾದ ಜನ ಎಂದು ಭಾವಿಸಿಕೊಳ್ಳುತ್ತಾರೆ – ಇತರರೂ ಹಾಗೆಯೇ ಭಾವಿಸುತ್ತಾರೆ.

ನ್ಯಾಯಾಧಿಪತಿ. ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ ದೊರೆ ಇವರ ಉದಾಹರಣೆಗಳನ್ನು ತೆಗೆದುಕೊಳ್ಳೋಣ. ಇವರ ತೀರ್ಪು. ಆಜ್ಞೆಗಳ ಪರಿಣಾಮವಾಗಿ ನೂರಾರು ಸಾವಿರಾರು ಜನ ಬಡವರು ತಮ್ಮ ಕುಟುಂಬಗಳಿಂದ ಸಿಡಿದು ನಿಲ್ಲುತ್ತಾರೆ. ಬಂಧನಕ್ಕೆ ಒಳಗಾಗಿ ಒಂಟಿಯಾಗಿ ಸೆರೆಮನೆಗಳಲ್ಲಿ ನರಳುತ್ತಾರೆ. ತಲೆಕೆಟ್ಟು. ಮುರಿದ ಗಾಜಿನ ಚೂರಿನಿಂದಲೋ ಉಪವಾಸದಿಂದಲೋ ಪ್ರಾಣ ಕಳೆದುಕೊಳ್ಳುತ್ತಾರೆ. ಈ ಸಂಗತಿ ಆಜ್ಞೆ ಕೊಟ್ಟವರಿಗೆಲ್ಲ ಗೊತ್ತು. ಈ ಸಾವಿರಾರು ಜನರಿಗೆ ಸಾವಿರಾರು ತಾಯಿಯರಿದ್ದಾರೆ, ಪತ್ನಿಯರಿದ್ದಾರೆ. ಮಕ್ಕಳಿದ್ದಾರೆ. ಅವರೆಲ್ಲಾ ಅಗಲಿಕೆಯಿಂದ ಹಣ್ಣಾಗಿದ್ದಾರೆ. ಅವಮಾನಕ್ಕೆ ಗುರಿಯಾಗಿದ್ದಾರೆ. ಅವರು ಬಂಧಿತರನ್ನು ನೋಡಿಕೊಂಡು ಹೋಗಲು ಬಂದು ನಿರಾಶರಾಗಿ ಹೋಗುತ್ತಾರೆ. ಬಂಧಿತರನ್ನು ಉದಾರವಾಗಿ ಕ್ಷಮಿಸಬೇಕೆಂದೋ ಅಥವಾ ಅವರ ಉಗ್ರ ಶಿಕ್ಷೆಗಳನ್ನು ತಗ್ಗಿಸಬೇಕೆಂದೋ ವ್ಯರ್ಥವಾಗಿ ಅರ್ಜಿಗಳನ್ನು ಹಾಕುತ್ತಾರೆ ಎಂಬ ಸಂಗತಿಗಳೂ ಎಲ್ಲರಿಗೂ ಗೊತ್ತು. ಆದರೆ ಕಪಟಾಚಾರದ ಅಭ್ಯಾಸದಿಂದಾಗಿ ಈ ಅಧಿಕಾರಿ ಎಷ್ಟು ಮರಗಟ್ಟಿ ಹೋಗಿದ್ದಾನೆಂದರೆ ಇಂಥದೆಲ್ಲ ನಡೆಯುತ್ತಿದ್ದರೂ ಆತ ತಾನು ಸಂಭಾವಿತನೆಂದೂ ಸೂಕ್ಷ್ಮಪ್ರಕೃತಿಯವನೆಂದೂ ತಿಳಿದುಕೊಂಡಿದ್ದಾನೆ. ಅವನ ಹೆಂಡತಿ ಮಕ್ಕಳೂ ಹಾಗೆಯೇ ನಂಬಿದ್ದಾರೆ. ಕಪಟಾಚಾರದ ಕುತರ್ಕದಿಂದಾಗಿ ಈತ ತಾನು ಒಂದು ಸಮಾಜೋಪಯೋಗಿಯಾದ ಕಾರ್ಯದಲ್ಲಿ ತೊಡಗಿದ್ದೇನೆಂಬ ಭಾವನೆಯಲ್ಲಿ

ಇರುವಂತಾಗಿದೆ ಅಲ್ಲವೆ? ನೂರಾರು ಸಾವಿರಾರು ಮಂದಿಯನ್ನು ನಿರಾಶೆಯ ಕೂಪಕ್ಕೆ ತಳ್ಳಿ ಸರ್ವನಾಶಮಾಡಿ ಅವರ ಹಿಡಿಶಾಪಕ್ಕೆ ಗುರಿಯಾಗಿರುವ ಈತನ ಚಟುವಟಿಕೆಗಳನ್ನು ಏನೆಂದು ಹೇಳೋಣ? ಇಷ್ಟೆಲ್ಲಾ ಮಾಡಿರುವ ಈತ ಸದ್ಭಾವನೆಗಳಲ್ಲಿ ನಂಬಿಕೆ ಇಟ್ಟವನು. ದೇವರಲ್ಲಿ ನಂಬಿಕೆ ಉಳ್ಳವನು. ಮೃದುವಾದ ಮುಖದಲ್ಲಿ ಮುಗುಳು ನಗೆಯನ್ನು ಉಕ್ಕಿಸುತ್ತ ಹಾಯಾಗಿ ಪ್ರಾರ್ಥನೆಗೆಂದು ಚರ್ಚಿಗೆ ಹೋಗುತ್ತಾನೆ, ಸ್ತೋತ್ರಗಳನ್ನು ಕೇಳುತ್ತಾನೆ. ಮುಕ್ತಮನಸ್ಸಿನವನಂತೆ ಭಾಷಣಗಳನ್ನು ಬಿಗಿಯುತ್ತಾನೆ, ಮಕ್ಕಳನ್ನು ಮುದ್ದುಮಾಡುತ್ತಾನೆ, ಮಕ್ಕಳಲ್ಲಿ ನೈತಿಕ ತತ್ವಗಳ ಜಾಗೃತಿ ಬೆಳೆಸಬೇಕೆಂದು ಬಯಸುತ್ತಾನೆ. ಭಾವುಕ ಸಂಕಟಗಳ ವಿಚಾರದಲ್ಲಿ ತುಂಬ ಭಾವಾತಿರೇಕ ಹೊಂದುತ್ತಾನೆ.

ಈ ಎಲ್ಲ ಜನ. (ಮತ್ತು ಅವರ ಆಶ್ರಯದಲ್ಲಿ ಬದುಕುವ ಪತ್ನಿಯರು. ಶಿಕ್ಷಕರು ಮಕ್ಕಳು. ಅಡಿಗೆಯವರು. ನಟರು. ಸವಾರರು ಮುಂತಾದವರು)ಕಾರ್ಮಿಕ ವರ್ಗದವರನ್ನು ಒಂದಲ್ಲ ಒಂದು ರೀತಿಯಲ್ಲಿ ಜಿಗಣೆಗಳಂತೆ ಹೀರಿ ಅವರ ರಕ್ತದ ಬಲದಿಂದ ಬದುಕುವಂಥ ಜನರಾಗಿದ್ದಾರೆ. ಕೊಲೆ. ಶಿಕ್ಷೆಗಳ ಬೆದರಿಕೆ ಹಾಕಿ ಕಾರ್ಮಿಕರನ್ನು ಕೆಲಸಕ್ಕೆ ಅಟ್ಟಿ ಅವರ ಸಾವಿರಾರು ದಿನಗಳ ದುಡಿಮೆಯ ಫಲವನ್ನು ತಮ್ಮ ಸಂತೋಷಕ್ಕಾಗಿ ದಿನವೂ ಅನುಭವಿಸುತ್ತಾರೆ. ಈ ಕ್ಷುದ್ರ ಕಾರ್ಮಿಕರ ಮತ್ತು ಅವರ ಮಕ್ಕಳ, ಮುದುಕರ ಸ್ತ್ರೀಯರ ಮತ್ತು ರೋಗಿಗಳ ಸಂಕಟ. ದಾರಿದ್ರ್ಯ ಎಲ್ಲ ಅವರಿಗೆ ಗೊತ್ತು. ತಮ್ಮ ವ್ಯವಸ್ಥಿತ ಕೊಳ್ಳೆಯ ವಿರುದ್ಧ ಕಾನೂನು ಭಂಗಮಾಡಲು ಹೊರಡುವ ಆ ಬಡ ಕಾರ್ಮಿಕರಿಗೆ ಕಾದಿರುವ ಕ್ರೂರ ಶಿಕ್ಷೆಗಳೇನೆಂಬುದೂ ಅವರಿಗೆ ಗೊತ್ತು. ಆದರೂ ಈ ಜನ ತಮ್ಮ ವೈಭವಗಳ ಪ್ರದರ್ಶನಗಳನ್ನು ನಿಲ್ಲಿಸುವುದಿಲ್ಲ. ತುಂಬ ಸೊಕ್ಕಿನಿಂದ. ತಾವು ತುಳಿದ ಜನಕ್ಕೆ. ತಮ್ಮನ್ನು ದ್ವೇಷಿಸುವ ಜನಕ್ಕೆ. ಉದ್ದೇಶಪೂರ್ವಕವಾಗಿಯೇ ಎಂಬಂತೆ ತಮ್ಮ ಉದ್ಯಾನಗಳು. ಅರಮನೆಗಳು. ನಾಟಕ ಮಂದಿರಗಳು. ಬೇಟೆ. ಜೂಜಿನ ತಾಣಗಳು – ಇವುಗಳನ್ನು ವೈಭವದಿಂದ ಪ್ರದರ್ಶಿಸುತ್ತಾರೆ. ಒಂದು ಕಡೆಯಲ್ಲಿ ಹಾಗೆ ಮಾಡುತ್ತಾ ಅದೇ ಸಮಯಕ್ಕೆ ತಾವು ತುಳಿದು ಹೊಸಕಿಹಾಕುತ್ತಿರುವ ಜನತೆಯ ಬಗೆಗೆ ತಮಗೆ ತುಂಬ ಕಳಕಳಿಯಿದೆಯೆಂದೂ. ಅವರ ಏಳಿಗೆಗಾಗಿ ತಾವು ಶ್ರಮಿಸುತ್ತಿದ್ದೇವೆಂದೂ ಅವರು ಒಂದೇ ಸಮನೆ ತಮ್ಮ ಆತ್ಮಕ್ಕೇ ಹೇಳಿಕೊಳ್ಳುತ್ತ. ಪರಸ್ಪರ ನಂಬಿಸುತ್ತ ಹೋಗುತ್ತಾರೆ. ಭಾನುವಾರದ ದಿನ ಅವರು ತುಂಬ ಒಳ್ಳೆಯ ಪೋಷಾಕಿನಲ್ಲಿ ಸೊಗಸಾದ ಗಾಡಿಗಳಲ್ಲಿ ಕುಳಿತು ಕ್ರೈಸ್ತಧರ್ಮದ ಅಣಕಕ್ಕಾಗಿ ವಿಶೇಷ ವೈಭವದಿಂದ ಕಟ್ಟಿರುವ ಆರಾಧನ ಮಂದಿರಗಳಿಗೆ ಹೋಗುತ್ತಾರೆ. ಅಲ್ಲಿ ಆ ಅಣಕದಲ್ಲಿ ವಿಶೇಷ ತರಬೇತಿ ಪಡೆದ ಪಾದ್ರಿಗಳ ಭಾಷಣವನ್ನು ಕೇಳುತ್ತಾರೆ. ಈ ಜನರೂ ಬಗೆಬಗೆಯಾಗಿ ಬೋಧನೆ ಮಾಡುತ್ತಾರೆ. (ವೃತ್ತಿಯ ಉಡುಪನ್ನು ಧರಿಸಿಯೋ. ಧರಿಸದೆಯೋ ಬಿಳಿಯ ಪಟ್ಟಿಗಳನ್ನು ಕಟ್ಟಿ ಅಥವಾ ಕಟ್ಟದೆ ಬೋಧಿಸುತ್ತಾರೆ) ದೈನಂದಿನ ಜೀವನದಲ್ಲಿ ಯಾವುದನ್ನು ಅಲಕ್ಷಿಸಲಾಗುತ್ತಿದೆಯೋ ಆ ಮಾನವ ಪ್ರೇಮವನ್ನು ಕುರಿತು ಇವರ ಬೋಧನೆ ಸಾಗು

ತ್ತದೆ. ಹೀಗೆಲ್ಲಾ ಮಾಡುವುದರಿಂದ ಜನಗಳಲ್ಲಿ ಸ್ವಲ್ಪಸ್ವಲ್ಪವಾಗಿ ನಂಬಿಕೆ ಬೆಳೆದು ಕೊನೆಗೆ ಅವರು ತಮ್ಮ ನಟನೆಯೆಲ್ಲಾ ನಿಜವೆಂದು ಸಂಪೂರ್ಣವಾಗಿ ನಂಬಿಕೊಂಡುಬಿಡುತ್ತಾರೆ.

ಒಟ್ಟಿನಲ್ಲಿ ಆಷಾಢಭೂತಿತನ ನಮ್ಮ ಕಾಲದ ಎಲ್ಲಾವರ್ಗದ ಜನರ ರಕ್ತ ಮಾಂಸಗಳಲ್ಲಿ ಯಾವ ಪ್ರಮಾಣದಲ್ಲಿ ತುಂಬಿಕೊಂಡಿದೆಯೆಂದರೆ ಈಗ ಅದರ ವಿಚಾರ ಕೇಳಿದಾಗ ನಮಗೆ ಯಾರಿಗೂ ಕೋಪ ಕೆರಳುವುದೇ ಇಲ್ಲ. ಆಷಾಢಭೂತಿತನ ಎಂಬ ಶಬ್ದ ನಾಟಕ. ನಟನೆಯಿಂದ ಬಂದದ್ದು ಎಂಬ ಮಾತು ಸುಳ್ಳಲ್ಲ. ಇಲ್ಲಿ ಯಾರು ಬೇಕಾದರೂ ನಟಿಸಬಹುದು. ಅಂದರೆ 'ಪಾತ್ರ' ವಹಿಸಬಹುದು. ಉದಾಹರಣೆಗೆ ತಮ್ಮ ಸೋದರರನ್ನು ಗುಂಡಿಕ್ಕಿ ಕೊಲ್ಲಲು ಬಾರುಮಾಡಿದ ಬಂದೂಕ ಹಿಡಿದು ಸಿದ್ಧರಾಗಿ ನಿಂತ ಯೋಧ ವರ್ಗಕ್ಕೆ ಕ್ರೈಸ್ತನ ಪ್ರತಿನಿಧಿ ಆಶೀರ್ವದಿಸುತ್ತಾನೆ. ಎಲ್ಲ ಕ್ರೈಸ್ತ ಪಂಗಡಗಳ ಪಾದ್ರಿಗಳೂ ವಧಾ ಪ್ರದೇಶದಲ್ಲಿ ಹಾಜರಿ ಹಾಕಬೇಕಾದದ್ದು ವಧಾಕಾರನ ಹಾಜರಿಯಷ್ಟೇ ಅತ್ಯಗತ್ಯವಾಗಿದೆ. ಅಲ್ಲಿ ಹಾಜರಿರುವುದರ ಮೂಲಕ ವಧಾ ಕಾರ್ಯವು ಕ್ರೈಸ್ತ ಧರ್ಮಕ್ಕೆ ಹೊಂದಿಕೊಳ್ಳುವಂಥದ್ದು ಎಂದು ಅವರೇ ಒಪ್ಪಿದಂತಾಗುತ್ತದೆ. ಇದು ಯಾರಿಗೂ ಆಶ್ಚರ್ಯದ ಸುದ್ದಿ ಎನ್ನಿಸುವುದಿಲ್ಲ. (ಈಚೆಗೆ ವಿದ್ಯುತ್ತಿನ ಮೂಲಕ ಮರಣದಂಡನೆಯ ಪ್ರಯೋಗವನ್ನು ನಡೆಸಿದ ಸಂದರ್ಭದಲ್ಲಿ ಅಮೆರಿಕಾದಲ್ಲಿ ಒಬ್ಬ ಪಾದ್ರಿ ಆ ಕಾರ್ಯವನ್ನು ಮೊದಲನೆಯ ಬಾರಿ ನಡೆಸಿಕೊಟ್ಟ ಸಂಗತಿಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು.)

ಈಚೆಗೆ ಪೀಟರ್ಸ್‌ಬರ್ಗ್‌ನಲ್ಲಿ ಒಂದು ಅಂತರರಾಷ್ಟ್ರೀಯ ಕಾರಾಗೃಹ ಪ್ರದರ್ಶನ ನಡೆಯಿತು. ಅದರಲ್ಲಿ ಬಂಧನದ ಸಲಕರಣೆ ಮತ್ತು ವಿದ್ಯುತ್ತಿನ ಹಿಂಸೋಪಕರಣಗಳನ್ನು ಪ್ರದರ್ಶಿಸಲಾಯಿತು. ಅವು ಸಲಾಕಿ, ಚಾವಟಿಗಳಿಗಿಂತ ಭಯಾನಕವಾದ ಹಿಂಸೋಪಕರಣಗಳು. ತುಂಬ ಸೂಕ್ಷ್ಮ ಸ್ವಭಾವದ ಮಹಿಳೆಯರು ಮತ್ತು ಪುರುಷರು ಅಂಥ ದೃಶ್ಯಗಳನ್ನು ನೋಡಿ ಆನಂದಪಡಲು ಹೋಗಿದ್ದರು.

ಸ್ವಾತಂತ್ರ್ಯ. ಸಮಾನತೆ, ಸರ್ವಬಂಧುತ್ವ ಮೊದಲಾದ ತತ್ವಗಳನ್ನು ಅಂಗೀಕರಿಸುವ ಉದಾರ ವಿಜ್ಞಾನದಲ್ಲಿ ಕೆಲವು ಅಗತ್ಯಗಳು ಕಂಡುಬಂದರೆ ಆಶ್ಚರ್ಯಪಡಬೇಕಾಗಿಲ್ಲ. ಸೇನಾರಚನೆ, ವಧೆಯ ಕಾರ್ಯಗಳು, ಸುಂಕದ ಕಟ್ಟೆಗಳು, ಸೆನ್ಸಾರ್ ಪದ್ಧತಿ. ವೇಶ್ಯಾವೃತ್ತಿಗೆ ಕಾನೂನಿನ ವ್ಯವಸ್ಥೆ, ವಿದೇಶಿ ಕೆಲಸಗಾರರನ್ನು ಉಚ್ಚಾಟಿಸುವುದು, ವಲಸೆಯ ಪದ್ಧತಿಯ ನಿರೋಧ, ಮದ್ಯ ಅಫೀಮು ಮುಂತಾದುವುಗಳನ್ನು ಧಾರಾಳವಾಗಿ ಬಳಸಿ ಅಥವಾ ಲೂಟಿಮಾಡಿ ಕಾಡು ಜನಗಳನ್ನು ಓಡಿಸಿ ವಸಾಹತುಗಳನ್ನು ಸ್ಥಾಪಿಸುವುದರ ಔಚಿತ್ಯ ಮತ್ತು ಅಗತ್ಯಗಳನ್ನು ನಂಬುವುದು ಇವೆಲ್ಲಾ ಇದಕ್ಕೆ ಕೆಲವು ಉದಾಹರಣೆಗಳು.

ಜನರೆಲ್ಲಾ ಮುಂದೆ ಬರಲಿರುವ ಒಂದು ಒಳ್ಳೆಯ ಕಾಲವನ್ನು ಕುರಿತು ಮಾತನಾಡುತ್ತಾರೆ. ಕ್ರೈಸ್ತಧರ್ಮದ ವ್ಯಾಪ್ತಿಯನ್ನು ಬಯಸುತ್ತಾರೆ. ಪ್ರತಿಯೊಬ್ಬ ಮನುಷ್ಯನ

ಅನ್ನ ವಸ್ತ್ರಗಳ ಸಮಸ್ಯೆ ಪರಿಹಾರವಾಗುವುದು ಎನ್ನುತ್ತಾರೆ. ಟೆಲಿಗ್ರಾಫ್, ಟೆಲಿಫೋನ್, ಮತ್ತು ಹಾರಾಡುವ ಯಂತ್ರಗಳ ಸಹಾಯದಿಂದ ಜಗತ್ತಿನ ಎಲ್ಲ ಮೂಲೆಗಳ ಜನರು ಸಂಪರ್ಕ ಪಡೆಯುತ್ತಾರೆ, ಎಲ್ಲ ಕಾರ್ಮಿಕರು ಸಮಾಜವಾದಿ ತತ್ವಗಳಿಂದ ಪ್ರಭಾವಿತರಾಗುತ್ತಾರೆ. ಟ್ರೇಡ್ ಯೂನಿಯನ್‌ಗಳಲ್ಲಿ ಕೋಟ್ಯಂತರ ಸದಸ್ಯರು ಸೇರುತ್ತಾರೆ. ಸಂಪತ್ತು ಹೇರಳವಾಗಿ ಶೇಖರವಾಗುತ್ತದೆ. ಎಲ್ಲರೂ ವಿದ್ಯಾವಂತರಾಗುತ್ತಾರೆ, ಪತ್ರಿಕೆಗಳನ್ನು ಓದುತ್ತಾರೆ. ಎಲ್ಲಾ ವಿಜ್ಞಾನಗಳನ್ನು ಕಲಿಯುತ್ತಾರೆ. ಅಂಥ ಕಾಲ ನಿಜಕ್ಕೂ ಬರುತ್ತದೆ ಎಂದು ಅನೇಕರು ತಿಳಿದಿದ್ದಾರೆ. ಆದರೆ ಜನ ಯಾವುದನ್ನು ಸತ್ಯ ಎಂದು ಭಾವಿಸಿದ್ದಾರೋ ಅದರಂತೆ ನಡೆದುಕೊಳ್ಳದಿದ್ದ ಮೇಲೆ, ಮಾತನಾಡದಿದ್ದ ಮೇಲೆ, ಈ ಎಲ್ಲ ಸಾಧನಗಳು ಬಂದರೂ ಏನು ಪ್ರಯೋಜನವಾದೀತು?

ಈ ವಿಸಂಗತಿಗಳೇ ಮನುಷ್ಯರ ದುಃಖಕ್ಕೆ ಮೂಲಕಾರಣ. ಅವರಲ್ಲಿ ವಿಸಂಗತಿ ಮೂಡುವುದಕ್ಕೆ ಅವರು ಸತ್ಯವನ್ನು ನಂಬದಿರುವುದು ಮತ್ತು ಅಪಾರ ಮುಖಗಳಲ್ಲಿ ಕಾಣಿಸಿಕೊಳ್ಳುವ ಸುಳ್ಳನ್ನು ನಂಬಿರುವುದು ಕಾರಣವಾಗಿದೆ. ಮನುಷ್ಯರು ಒಗ್ಗಟ್ಟಿನಿಂದ ಇರಬಹುದಾದ ಒಂದೇ ಒಂದು ದಾರಿ ಎಂದರೆ ಸತ್ಯದಲ್ಲಿ ಒಮ್ಮತಿಯುಳ್ಳ ದಾರಿ. ಆದ್ದರಿಂದ ಜನ ಎಷ್ಟೆಷ್ಟು ಪ್ರಾಮಾಣಿಕವಾಗಿ ಸತ್ಯದ ಶೋಧನೆಯಲ್ಲಿ ತೊಡಗುತ್ತಾರೋ ಅಷ್ಟಷ್ಟು ಒಗ್ಗಟ್ಟು ಹೊಂದುತ್ತಾರೆ.

ಆದರೆ ದುರ್ದೈವದ ಸಂಗತಿ ಎಂದರೆ ಜನ ತಮಗೆ ಗೊತ್ತಿರುವ ಸತ್ಯವನ್ನು ಧೈರ್ಯವಾಗಿ ಹೇಳುವುದಿಲ್ಲ. ಅಷ್ಟೇ ಅಲ್ಲ ತಮಗೆ ತಿಳಿದಿರುವುದೆಲ್ಲಾ ಸುಳ್ಳು ಎಂಬ ಸಂಗತಿಯನ್ನು ನಂಬಿದವರಂತೆ ನಟಿಸುತ್ತಾರೆ ಮತ್ತು ತಾವು ಸತ್ಯವನ್ನು ಹೇಳಬಾರದು ಎಂದು ತಿಳಿಯುತ್ತಾರೆ. ಹೀಗಿರುವಾಗ ಜನ ಸತ್ಯದ ವಿಚಾರದಲ್ಲಿ ಒಮ್ಮತಿ ಹೊಂದುವುದು ಹೇಗೆ ಸಾಧ್ಯ?

ಜನ ಹೀಗೆ ನಟನೆ ಮಾಡುತ್ತಿರುವಾಗ ಅಂದರೆ ಸತ್ಯ ಸಂಗತಿಯನ್ನು ಬಚ್ಚಿಡುತ್ತಿರುವಾಗ ಮನುಷ್ಯರ ಸ್ಥಿತಿಗತಿಗಳು ಸುಧಾರಿಸಿವೆ ಎಂದು ಹೇಳುವುದು ಹೇಗೆ? ಸತ್ಯದ ವಿಚಾರದಲ್ಲಿ ಎಲ್ಲರ ಮನಸ್ಸೂ ಒಂದು ಎಂಬ ಭಾವನೆ ಬರುವವರೆಗೆ, ತಮಗೆ ಬೋಧೆಯಾಗಿರುವ ಪರಮ ಸತ್ಯವನ್ನು ಗುರುತಿಸಿ ಅದನ್ನು ಉಳಿದ ಎಲ್ಲಕ್ಕಿಂತ ಮೇಲಿನ ಸ್ಥಾನದಲ್ಲಿ ಇಡುವುದಕ್ಕೆ ಜನ ತಯಾರಾಗುವವರೆಗೆ ಜನತೆಯ ಉದ್ಧಾರ ಸಾಧ್ಯವೇ ಇಲ್ಲ.

ಧಾರ್ಮಿಕರು ಮತ್ತು ವೈಜ್ಞಾನಿಕ ಮನೋಧರ್ಮದವರೆಂದು ಹೇಳಿಕೊಳ್ಳುವ ಜನರು ಕನಸು ಕಾಣುವ ಬಾಹ್ಯ ಸಾಧನಗಳೆಲ್ಲಾ ನೆರವೇರಲಿ: ಎಲ್ಲ ಜನರು ಕ್ರೈಸ್ತ ಧರ್ಮವನ್ನು ಒಪ್ಪಿಕೊಳ್ಳಲಿ. ಬೆಲಾಮಿಸ್[14] ಮತ್ತು ರಿಷೆಟ್[15] ಇವರುಗಳು ಸೂಚಿಸುವ

---

[14] "Looking Backward" ಎಂಬ ಗ್ರಂಥದ ಕರ್ತೃವಾದ ಎಡ್‌ವರ್ಡ್ ಬೆಲಾಮಿಸ್.

[15] ಬಹುಶಃ ಇದು ಜೀವವಿಜ್ಞಾನಿಯೂ, ರೆವ್ಯೂ ಸೈಂಟಿಫಿಕ್ ಪತ್ರಿಕೆಯ ಸಂಪಾದಕನೂ ಆದ ಸಿ. ಆರ್. ರಿಷೆಟ್ ಎಂಬಾತನ ಉಲ್ಲೇಖವಿರಬೇಕು.

ಅಂಶಗಳನ್ನೆಲ್ಲ ಅದರ ಎಲ್ಲ ತಿದ್ದುಪಡಿಗಳೊಂದಿಗೆ ಒಪ್ಪಿಕೊಳ್ಳಲಿ. ಅದಕ್ಕೆ ನನ್ನದೇನೂ ಅಭ್ಯಂತರವಿಲ್ಲ. ಆದರೆ ಇಷ್ಟೆಲ್ಲಾ ಆದಮೇಲೂ ಜನಗಳಲ್ಲಿ ಆಷಾಢಭೂತಿತನ ಈಗಿನಂತೆಯೇ ಉಳಿಯುವುದಾದರೆ, ಜನ ತಮಗೆ ತಿಳಿದಿರುವ ಸತ್ಯವನ್ನು ಆಡದಿದ್ದರೆ. ತಮಗೇ ನಂಬಿಕೆ ಇಲ್ಲದ ಸಂಗತಿಗಳಲ್ಲಿ ನಂಬಿಕೆ ಇಟ್ಟಂತೆ ಸೋಗುಹಾಕಿದರೆ, ತಮಗೆ ನಿಜವಾಗಿ ಗೌರವ ಇಲ್ಲದಿದ್ದರೂ ತುಂಬಾ ಪೂಜ್ಯ ಭಾವನೆಯನ್ನು ತೋರಿಸುವ ನಾಟಕವಾಡಿದರೆ ಆಗ ಜನಗಳ ಸ್ಥಿತಿ ಮಾತ್ರ ಸುಧಾರಿಸಿಲ್ಲ ಎಂದೂ ಇನ್ನೂ ಹದಗೆಡುತ್ತ ಬರುತ್ತಿದೆ ಎಂದೂ ಹೇಳಬೇಕಾಗುತ್ತದೆ. ಜನರಿಗೆ ಪ್ರಾಪಂಚಿಕ ಭೋಗಗಳು ಹೆಚ್ಚಿದಂತೆಲ್ಲಾ ಅಂದರೆ ಟೆಲಿಗ್ರಾಫ್‌ಗಳೂ ಟೆಲಿಫೋನ್‌ಗಳೂ ಪುಸ್ತಕಗಳೂ ಕಾಗದಗಳೂ ಸಂಚಿಕೆಗಳೂ ಹೆಚ್ಚಾದಂತೆಲ್ಲಾ ಬೇರೆಬೇರೆ ಬಗೆಯ ಸುಳ್ಳುಗಳನ್ನು ಕಪಟಾಚಾರಗಳನ್ನು ಹರಡುವ ಬಗೆ ಹೆಚ್ಚಾಗುತ್ತಾ ಹೋಗುತ್ತದೆ. ಇದರ ಪರಿಣಾಮವಾಗಿ ಜನರಲ್ಲಿ ಒಗ್ಗಟ್ಟು ಇನ್ನಷ್ಟು ಮುರಿಯುತ್ತದೆ, ಜನ ಇನ್ನೂ ಹೆಚ್ಚಿನ ದುಃಖಿಗಳಾಗುತ್ತಾರೆ.

ಬಾಹ್ಯ ಸಾಧನಗಳು ಎಷ್ಟೇ ಶೀಘ್ರವಾಗಿ ಒದಗುತ್ತ ಬಂದರೂ ಮಾನವನ ಸ್ಥಿತಿ ಉತ್ತಮಗೊಳ್ಳುವುದಿಲ್ಲ. ಆದ್ದರಿಂದ ನನ್ನ ಸಲಹೆ ಇಷ್ಟೆ. ಪ್ರತಿಯೊಬ್ಬ ಮನುಷ್ಯನೂ ತನ್ನ ಚೈತನ್ಯವಿದ್ದ ಮಟ್ಟಿಗೆ ತನಗೆ ತಿಳಿದಿರುವ ಸತ್ಯವನ್ನು ಸ್ವಂತ ಬದುಕಿನಲ್ಲಿ ಆಚರಣೆಗೆ ತರುವ ಪ್ರಯತ್ನ ಮಾಡಲಿ, ಅಥವಾ ತಾನು ಸತ್ಯವೆಂದು ಪ್ರತಿಪಾದಿಸುತ್ತಿರುವ ಅಸತ್ಯಕ್ಕೆ ಮನ್ನಣೆಕೊಡುವುದನ್ನು ನಿಲ್ಲಿಸಲಿ. ಆಗ ಈ ವರ್ಷದಲ್ಲೇ ಅಂದರೆ 1893ರಲ್ಲೇ ಮನುಷ್ಯನ ಮುಕ್ತಿಗೆ ಅಗತ್ಯವಾದ ಅನೇಕ ಬದಲಾವಣೆಗಳು ಮಿಂಚಿನಂತೆ ತೋರಿ ಸತ್ಯವು ಸ್ಥಾಪಿತವಾಗುತ್ತದೆ. ನೂರು ವರ್ಷಗಳಲ್ಲಿ ಆಗದ ಕೆಲಸ ಈ ಭೂಮಿಯಲ್ಲಿ ಈಗಲೇ ಸಾಧ್ಯವಾಗುತ್ತದೆ. ಆಷಾಢಭೂತಿಗಳ ಮತ್ತು ಕಪಟಾಚಾರಗಳ ವಿರುದ್ಧ ಏಸುಕ್ರಿಸ್ತನು ಒಂದು ನಿಂದಾತ್ಮಕವಾದ ಕಠಿಣ ಭಾಷಣವನ್ನು ಮಾಡುವುದಕ್ಕೆ ಪ್ರಬಲವಾದ ಕಾರಣಗಳು ಇದ್ದಿರಬೇಕು. ಜನಗಳಲ್ಲಿ ವಂಚನೆಯ ಭಾವವನ್ನು ತುಂಬಿ, ಒರಟು ತನವನ್ನು ಬೆಳೆಸಿ ಪಾಶವೀ ಭಾವನೆಯನ್ನು ಯಾವುದು ಬಲಪಡಿಸುತ್ತದೋ ಅದೇ ಅಸತ್ಯ. ಇದು ಜನಗಳನ್ನು ದೂರಮಾಡುತ್ತಾ ಹೋಗುತ್ತದೆ. ಕಳ್ಳತನ, ಕೊಲೆ, ಸುಲಿಗೆ, ವ್ಯಭಿಚಾರ, ಖೋಟಾವಸ್ತುಗಳ ಸೃಷ್ಟಿ ಇವುಗಳಿಗಿಂತ ಕಪಟಾಚಾರದ ಅಸತ್ಯವೇ ತುಂಬ ಕ್ರೂರವಾದದ್ದು. ಅದು ಮನುಷ್ಯರಲ್ಲಿ ಒಳ್ಳೆಯದನ್ನೂ ಕೆಟ್ಟದ್ದನ್ನೂ ಗುರುತಿಸುವ ಪ್ರಜ್ಞಾಶಕ್ತಿಯನ್ನೇ ತೊಡೆದುಹಾಕಿ ಬಿಡುತ್ತದೆ. ಅಸತ್ಯವನ್ನು ದೂರಮಾಡಿ ಸತ್ಯದ ಶೋಧನೆ ಮಾಡುವ ಗುಣವನ್ನು ಹಾಳುಮಾಡುತ್ತದೆ. ನೈಜ ಜೀವನದ ತಿರುಳು ಅವರಿಗೆ ಸಿಕ್ಕದಂತೆ ಮಾಡಿ ಪ್ರಗತಿಯ ಹಾದಿಯಲ್ಲಿ ದೊಡ್ಡ ಅಡ್ಡಗಲ್ಲಾಗಿ ನಿಲ್ಲುತ್ತದೆ.

ಸತ್ಯದ ಅರಿವಿಲ್ಲದೆ ಪಾಪ ಮಾಡುವವರು ಒಂದು ರೀತಿಯಲ್ಲಿ ಅಷ್ಟು ಕೆಟ್ಟವರಲ್ಲ. ಅಂಥ ಪಾಪಿಗಳಿಂದಾಗಿ ಯಾರು ನರಳುತ್ತಾರೋ ಅವರ ಬಗೆಗೆ ನಮಗೆ ಕನಿಕರ ಹುಟ್ಟುತ್ತದೆ. ಮತ್ತು ಪಾಪಕಾರ್ಯದ ಬಗೆಗೆ ನಮ್ಮ ತಿರಸ್ಕಾರ ಹೆಚ್ಚುತ್ತದೆ. ಅವರು ಯಾರಮೇಲೆ

ದೌರ್ಜನ್ಯ ಎಸಗುತ್ತಾರೋ ಅವರಿಗೆ ಮಾತ್ರ ಇದರಿಂದ ಹಾನಿಯುಂಟು. ಆದರೆ ಸತ್ಯ ಯಾವುದೆಂದು ತಿಳಿದಿದ್ದರೂ ಯಾರು ಕಪಟಾಚಾರದಿಂದ ಪಾಪವನ್ನು ಮುಚ್ಚಿಡಲು ಬಯಸುತ್ತಾರೋ ಅಂಥವರು ಆತ್ಮವಂಚನೆಗೂ ಒಳಗಾಗುತ್ತಾರೆ. ಪರವಂಚನೆಯ ಪಾಪವನ್ನೂ ಹೊತ್ತುಕೊಳ್ಳುತ್ತಾರೆ. ಅಷ್ಟೇ ಅಲ್ಲದೆ ಅವರು ಮುಚ್ಚಿಡಲು ಬಯಸುವ ಅಸತ್ಯಕಾರ್ಯದಿಂದಾಗಿ ಸಾವಿರಾರು ಜನಕ್ಕೆ ದಿಕ್ಕು ತಪ್ಪಿಸುತ್ತಾರೆ.

ಕಳ್ಳರು. ದರೋಡೆಕೋರರು. ಕೊಲೆಪಾತಕಿಗಳು ಮತ್ತು ದಗಾಕೋರರು ಮಾಡುವ ಕಾರ್ಯಗಳು ಶುದ್ಧ ಪಾಪಕಾರ್ಯಗಳೆಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ. ಜನರ ಶಾಂತಿ ಕಲಕಲು ಏನು ಮಾಡಬಾರದೆಂಬುದಕ್ಕೆ ಇವರು ಒಳ್ಳೆಯ ಉದಾಹರಣೆ. ಆದರೆ ಧರ್ಮದ ವಿಜ್ಞಾನದ, ಮತ್ತು ಇತರ ಉದಾರ ತತ್ವಗಳ ಪಾಲನೆಯ ನೆಪದಲ್ಲಿ ಕಳ್ಳತನ. ದರೋಡೆ. ಕೊಲೆ ಮುಂತಾದ ಹೀನ ಕೃತ್ಯಗಳನ್ನು ಮಾಡುವವರಿದ್ದಾರೆ. ಜಮೀನುದಾರರು. ವ್ಯಾಪಾರಿಗಳು, ತಯಾರಕರು. ನಮ್ಮ ಕಾಲದ ಸರ್ಕಾರಿ ಸೇವಕರು ಇವರೆಲ್ಲಾ ಈ ಗುಂಪಿಗೆ ಸೇರಿದವರು. ಇವರು ತಮ್ಮಂತೆಯೇ ವಂಚನೆ ಮಾಡುವುದನ್ನು ಇತರರಿಗೂ ಕಲಿಸುತ್ತಾರೆ ಮತ್ತು ನೇರವಾಗಿ ತಮ್ಮಿಂದ ತೊಂದರೆ ಪಡುವ ಕೆಲವು ಜನಗಳಿಗೆ ಮಾತ್ರವಲ್ಲದೆ ಒಳ್ಳೆಯದು ಯಾವುದು ಕೆಟ್ಟದು ಯಾವುದು ಎಂದು ತಿಳಿಯಲಾರದ ರೀತಿಯಲ್ಲಿ ಸಾಮಾನ್ಯ ಜನರ ಬುದ್ಧಿಯನ್ನು ಹಾಳುಮಾಡುತ್ತಾರೆ.

ಕೆಲವರು, ಜನರ ಬದುಕಿನ ಅವಶ್ಯಕತೆಗಳಿಗೆ ಕೊಕ್ಕೆಹಾಕಿ ಹಣವನ್ನು ದೋಚುತ್ತಾರೆ. ದೊಡ್ಡ ಸಂಪತ್ತನ್ನು ಶೇಖರಿಸುತ್ತಾರೆ. ಜನರನ್ನು ಕಷ್ಟಗೊಳಿಸುವ ವ್ಯವಹಾರದ ದಾರಿಯನ್ನು ಹುಡುಕಿ. ಮಾರುಕಟ್ಟೆಯ ಬೆಲೆಗಳ ಏರಿಳಿತಗಳಲ್ಲಿ ಹೊಂಚುಹಾಕಿ. ಏರುತ್ತಿರುವ ಬೆಲೆಯ ಜಮೀನನ್ನು ಕಡಮೆ ಬೆಲೆಗೆ ಕೊಂಡುಕೊಂಡು. ಜನರ ಆರೋಗ್ಯ ಮತ್ತು ಬದುಕನ್ನು ಕೆಡಿಸುವ ರೀತಿಯಲ್ಲಿ ಕಾರ್ಖಾನೆಗಳನ್ನು ನಡೆಸಿ ಕುಬೇರರಾಗುತ್ತಾರೆ. ಅಥವಾ ರಾಜ್ಯದ ಆಡಳಿತ ಅಥವಾ ಸೇನಾ ಶಾಖೆಗಳಿಗೆ ಸೇರಿ ಮನುಷ್ಯರ ದುಷ್ಕಾರ್ಯಗಳಿಗೆ ಪ್ರೇರಕವಾಗುವ ಕಳ್ಳವ್ಯವಹಾರಗಳಲ್ಲಿ ತೊಡಗಿ ಹಣಗಳಿಸುತ್ತಾರೆ. ಹೀಗೆ ಹಣ ಸಂಗ್ರಹಿಸುವ ಈ ಜನ ದಾನಶೂರರೆಂದು ಪ್ರಸಿದ್ಧಿ ಹೊಂದಿ ಸಮಾಜದಲ್ಲಿ ಜನಗಳ ಮೆಚ್ಚುಗೆಯನ್ನು ಪಡೆದು ಬದುಕುತ್ತಾರೆ. ಸರಕಾರದ ನಿಯಮಗಳಿಗೆ ವಿರುದ್ಧವಾಗಿ ಕ್ರೂರ ಶಿಕ್ಷೆಗಳಿಗೂ ಬೆದರದೆ. ಕಳ್ಳರು ಕೊಲೆಗಾರರು ಮಾಡುವ ಕೋಟ್ಯಂತರ ಹೀನ ಕೃತ್ಯಗಳಿಗಿಂತಲೂ ನಾನು ಹೇಳಿದ ಶ್ರೀಮಂತ ವರ್ಗದವರು ನಡೆಸುವ ಒಂದು ಹೀನ ಕೃತ್ಯ ಹೆಚ್ಚು ಉಗ್ರವಾದದ್ದು ಎಂದು ನಾನು ಭಾವಿಸುತ್ತೇನೆ.

ಪ್ರಗತಿಪರರೂ ವಿದ್ಯಾವಂತರೂ ಆದ ಜನ ಕ್ರೈಸ್ತ ಧಾರ್ಮಿಕ ವ್ಯಕ್ತಿಗಳ ಅನುಮತಿಯನ್ನು ಪಡೆದು ಅವರನ್ನು ಎದುರಿಗೆ ಇಟ್ಟುಕೊಂಡು ತುಂಬ ನಿರ್ಲಿಪ್ತರಂತೆ ನಡೆಸುವ ಒಂದು 'ಕಾರ್ಯಾಚರಣೆ' ಇದೆಯಲ್ಲ, ಅದು ತುಂಬ ಅಗತ್ಯ ತುಂಬ ನ್ಯಾಯ

ಪರವಾದದ್ದು ಎಂಬ ಭಾವನೆಯೂ ಅವರಲ್ಲಿದೆ. ಆದರೆ ಅಂಥ ಒಂದು ಕೃತ್ಯವು, ಉದ್ವೇಗಕ್ಕೆ ಒಳಗಾಗಿ ಅವಿದ್ಯಾವಂತ ಕೆಲಸಗಾರರು ಮಾಡುವ ಸಾವಿರಾರು ಕೊಲೆಗೆಲಸಗಳಿಗಿಂತ ಹೆಚ್ಚಾಗಿ ಜನರ ಮಾನಸ್ಸನ್ನು ವಿಕಾರಕ್ಕೆ ಒಳಗುಮಾಡುತ್ತದೆ, ಪಾಶವೀಶಕ್ತಿಯನ್ನು ಬೆಳೆಸುತ್ತದೆ. ಝುಕೋವ್‌ಸ್ಕಿ[16] ಎಂಬಾತ ಜನರಲ್ಲಿ ಧಾರ್ಮಿಕ ಉದ್ವೇಗವನ್ನು ಕೆರಳಿಸುವ ರೀತಿಯಲ್ಲಿ ಒಂದು ಕಾರ್ಯಾಚರಣೆ ನಡೆಸಲು ಯೋಜಿಸಿದ್ದನಂತೆ. ಅಂಥವು ಊಹಿಸಲೂ ಆಗದಷ್ಟು ಉಗ್ರವಾಗಿ ಜನರಮೇಲೆ ಪರಿಣಾಮ ಬೀರುತ್ತದೆ.[17]

ಪ್ರತಿ ಯುದ್ಧದಲ್ಲಿಯೂ, ಸಣ್ಣ ಯುದ್ಧದಲ್ಲಿ ಕೂಡ, ಕೆಲವು ಅನಾಹುತಗಳಾಗುತ್ತವೆ. ಯುದ್ಧ ಎಂದಮೇಲೆ ಅನಿವಾರ್ಯವಾಗುವ ಖರ್ಚು, ಬೆಳೆಯ ನಾಶ, ಲೂಟಿ, ಸೈನಿಕರ ಸ್ವೈರ ವರ್ತನೆ, ಕೊಲೆ, ಅವೆಲ್ಲಾ ತುಂಬಾ ಅಗತ್ಯ, ತುಂಬ ನ್ಯಾಯಬದ್ಧ ಎಂಬ ಉದ್ದುದ್ದನೆಯ ಹೇಳಿಕೆಗಳು, ಮಿಲಿಟರಿ ದಿಗ್ವಿಜಯಗಳ ವಿಚಾರವಾಗಿ ಪ್ರಶಂಸೆ, ರಾಷ್ಟ್ರಾಭಿಮಾನ, ರಾಷ್ಟ್ರಧ್ವಜದ ಬಗೆಗೆ ಶ್ರದ್ಧೆ ಭಕ್ತಿಗಳು, ಗಾಯಗೊಂಡವರ ಬಗೆಗೆ ಅನುಕಂಪೆಯ ಕಪಟೋದ್ಗಾರಗಳು ಇತ್ಯಾದಿ ಇವೆಲ್ಲ ನಡೆಯುತ್ತವೆ. ಒಂದು ವರ್ಷದಲ್ಲಿ ನಡೆಯುವ ಇಂಥ ಒಂದು ಯುದ್ಧವು, ನೂರಾರು ವರ್ಷದ ಅವಧಿಯಲ್ಲಿ ವ್ಯಕ್ತಿಗಳು ಯಾವುದೋ ಉದ್ವೇಗಕ್ಕೆ ಒಳಗಾಗಿ ಮಾಡುವ ಕೋಟ್ಯಂತರ ಕೊಲೆ ಸುಲಿಗೆಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಜನರ ಮನಸ್ಸನ್ನು ಹಾಳುಮಾಡುತ್ತವೆ.

ಒಬ್ಬ ಧೀರ, ಗೌರವಾನ್ವಿತ, ಸದ್ವಂಶದ ಶ್ರೀಮಂತನ ಭೋಗಜೀವನದ ಪಕ್ಕದಲ್ಲಿ ಹಸಿದು ಕಂಗಾಲಾಗಿರುವ ಸಾವಿರಾರು ಬಡ ಕೂಲಿಗಾರರ ನಿರ್ವಹಣೆ ಸಾಧ್ಯವಾದೀತು. ಆತನ ಬುದ್ಧಿ ಜನರನ್ನು ವಿಕಾರಗೊಳಿಸುವಷ್ಟು ಪ್ರಮಾಣದಲ್ಲಿ, ಅಸಭ್ಯ ವ್ಯಾಪಾರಿಗಳು ಅಧಿಕಾರಿಗಳು ನಡೆಸುವ ಸಾವಿರಾರು ದೌರ್ಜನ್ಯಗಳೂ ವಿಕಾರಗೊಳಿಸಲಾರವು.

ಹಾಗೆಯೇ ಖೋಟಾಸೃಷ್ಟಿ, ಆಹಾರ ಸಾಮಗ್ರಿಗಳ ಕಲಬೆರಕೆ ಮುಂತಾದ ನೂರಾರು ದುಷ್ಕೃತ್ಯಗಳು ಮಾಡುವ ಪರಿಣಾಮಕ್ಕಿಂತ ಒಂದು ಧಾರ್ಮಿಕ ಮೆರವಣಿಗೆ ಅಥವಾ ಪಾದ್ರಿ ಸ್ವಯಂ ತಾನೇ ನಂಬದ ಕ್ರೈಸ್ತ ತತ್ತ್ವಗಳ ಗಂಭೀರ ವಾಚನ ಅಥವಾ ಪ್ರಾರ್ಥನೆ ನಡೆಸುವುದು ಜನರಲ್ಲಿ ಹೆಚ್ಚಿನ ಪಾಪ ದೃಷ್ಟಿಯನ್ನುಂಟುಮಾಡುವಂತಾಗಿದೆಯೆಂದು ನಾನು ಭಾವಿಸಿದ್ದೇನೆ.

ನಾವು ಫರಿಸಾಯರ ಕಪಟಾಚಾರದ ಬಗೆಗೆ ತುಂಬ ಮಾತನಾಡುತ್ತೇವೆ. ಆದರೆ ಪಾಪ ಆ ಮುಗ್ಧ ಫರಿಸಾಯರ ಕಪಟಾಚಾರಕ್ಕಿಂತ ನಮ್ಮ ಇಂದಿನ ಸಮಾಜದ

---

16 ವಿ. ಎ. ಝುಕೋವ್‌ಸ್ಕಿ (1783–1852) ಈತ ಒಬ್ಬ ಕವಿ. ಅಲ್ಲದೆ ಷಿಲ್ಲರ್, ಬೈರನ್ ಮತ್ತು ಇತರರ ಕೃತಿಗಳನ್ನು ಅನುವಾದಿಸಿದ್ದಾನೆ. ಈತ ಎರಡನೇ ಅಲೆಗ್ಸಾಂಡರ್ ದೊರೆಯ ಶಿಕ್ಷಕನಾಗಿದ್ದ.

17 ಝುಕೋವ್‌ಸ್ಕಿಯ ಕೃತಿಗಳ ಆರನೇ ಸಂಪುಟವನ್ನು ನೋಡಿ.

ಕಪಟಾಚಾರವು ತುಂಬ ಹೆಚ್ಚಿನದು ಎಂದು ಹೇಳಬೇಕಾಗಿದೆ. ಅವರು ತಮ್ಮ ನೆರೆಯವರ ದುಃಖಕ್ಕೆ ಅಳುತ್ತಿರಲಿಲ್ಲ ನಿಜ. ಆದರೆ ಅಂಥ ವರ್ತನೆಗೆ ಪ್ರೇರಕವಾದ ಒಂದು ಧಾರ್ಮಿಕ ಕಾನೂನಿನ ಬೆಂಬಲ ಅವರಿಗಿತ್ತು. ಅಲ್ಲದೆ ಆ ಕಾಲದಲ್ಲಿ ಅವರಿಗೆ ತಮ್ಮ ಕರ್ತವ್ಯಗಳ ಬಗೆಗೆ ಧಾರ್ಮಿಕ ಕಾನೂನು ಖಚಿತವಾದ ತಿಳಿವಳಿಕೆಯನ್ನು ನೀಡಿರಲಿಲ್ಲ. ಆದರೆ ಇಂದಿನ ಧಾರ್ಮಿಕ ಕಾನೂನುಗಳಲ್ಲಿ ಯಾವುದರಲ್ಲೂ ಮನುಷ್ಯನನ್ನು ಕರ್ತವ್ಯ ಪರಾಙ್ಮುಖನನ್ನಾಗಿ ಮಾಡುವ ವಿಧಿಗಳಿಲ್ಲ (ಈಗಲೂ ಮತಸಂಸ್ಕಾರಗಳನ್ನು ಹೊಂದುವುದರ ಮೂಲಕ ಅಥವಾ ಪೋಪ್‌ರಿಂದ ಆಶೀರ್ವಾದ ಪಡೆಯುವುದರ ಮೂಲಕ ಎಲ್ಲ ಪಾಪಗಳಿಂದ ವಿಮೋಚನೆ ಹೊಂದಬಹುದೆಂದು ನಂಬಿರುವವರಿದ್ದಾರೆ. ಅಂಥವರ ವಿಚಾರ ನಾನು ಹೇಳುತ್ತಿಲ್ಲ). ಯಾಕೆ, ನಾವೆಲ್ಲ ತುಂಬ ಹೇಳಿಕೊಳ್ಳುವ ಸತ್ಯವೇದದ ಕಾನೂನಿನಲ್ಲಿ ಕೂಡ ನಮ್ಮ ಕರ್ತವ್ಯಗಳ ಬಗೆಗೆ ಸ್ಪಷ್ಟ ಉಲ್ಲೇಖಗಳಿವೆ. ಕೆಲವರು ಪ್ರವಾದಿಗಳು ಸ್ಪಷ್ಟಾಸ್ಪಷ್ಟವಾಗಿ ಹೇಳಿದ್ದ ಆ ಕರ್ತವ್ಯ ವಿಧಿಗಳು ಈಗ ಎಷ್ಟು ಖಚಿತವಾಗಿ ಘೋಷಿತವಾಗಿವೆ ಎಂದರೆ ಅದು ಈಗ ಶಾಲೆಯ ಮಕ್ಕಳೂ. ಪತ್ರಕರ್ತರೂ ಸರಾಗವಾಗಿ ಒಪ್ಪಿಸುವಷ್ಟು ಸಾಧಾರಣ ಸೂಕ್ತಿಗಳಾಗಿವೆ. ಆದ್ದರಿಂದ ಈಗಿನ ಜನ ತಮಗೆ ಕರ್ತವ್ಯದ ಪ್ರಜ್ಞೆಯಿಲ್ಲ ಎಂದು ಹೇಳುವುದು ಸಾಧ್ಯವೇ ಇಲ್ಲ.

ನಮ್ಮ ಕಾಲದ ಜನ ಇತ್ತ ಹಿಂಸಾಚಾರದ ವ್ಯವಸ್ಥೆಯನ್ನು ಒಪ್ಪಿಕೊಂಡು ಅತ್ತ ತಮ್ಮ ಸೋದರರನ್ನು ಪ್ರೀತಿಸುತ್ತಿದ್ದೇವೆ ಎಂದು ಹೇಳಿಕೊಳ್ಳುತ್ತಿದ್ದಾರೆ. ಆದರೆ ತಮ್ಮ ಸೋದರರಿಗೆ ತೊಂದರೆಯಾಗುತ್ತಿದೆ ಎಂಬ ಮಾತನ್ನು ಅವರು ಒಪ್ಪುವುದಿಲ್ಲ. ಇದು ತುಂಬ ವಿಚಿತ್ರ. ಇಂಥವರನ್ನು ಕಳ್ಳರಿಗೆ ಹೋಲಿಸಬಹುದು. ಕಳ್ಳ, ಮನುಷ್ಯನೊಬ್ಬನನ್ನು ಕೊಲ್ಲಲು ಆಯುಧವೆತ್ತಿದ್ದಾನೆ. ಸಿಕ್ಕವನು ಪಾಪ ಜೋರಾಗಿ ಗೋಳಾಡುತ್ತಿದ್ದಾನೆ. ಅಂಥ ಸಮಯದಲ್ಲಿ ಉಪಾಯವಾಗಿ ಕಳ್ಳನನ್ನು ಹಿಡಿದರೆ ಆಗ ಆ ಕಳ್ಳ "ನಾನು ಮಾಡುತ್ತಿರುವ ಕೆಲಸ ಆತನಿಗೆ ಇಷ್ಟವಾಗುವುದಿಲ್ಲ ಎಂಬ ವಿಚಾರ ನನಗೆ ತಿಳಿದಿರಲಿಲ್ಲ" ಎಂದು ಹೇಳಿದನಂತೆ. ಕಳ್ಳರು ಮತ್ತು ಕೊಲೆಗಾರರು ಕೂಡ ಪ್ರತಿಯೊಬ್ಬರಿಗೂ ಬದುಕಲು ಬಾಳಲು ಹಕ್ಕಿದೆ ಎಂಬುದನ್ನು ತಿರಸ್ಕರಿಸಲಾರರು. ಕಾನೂನು ಹಾಗೆ ಹೇಳುತ್ತದೆ. ಈ ದೃಷ್ಟಿಯಿಂದ ನೋಡಿದರೆ ಇಂದಿನ ದಲಿತವರ್ಗದ ಶೋಷಣೆ ಮಾಡುತ್ತ ಬದುಕುತ್ತಿರುವ ನಮ್ಮ ಕಾಲದ ಜನರಿಗೆ ಇದು ತುಂಬ ಕಷ್ಟ.ತಾವು ಕೊಳ್ಳೆ ಹೊಡೆಯುತ್ತಿರುವ ಜನಗಳ ಏಳಿಗೆಗಾಗಿಯೇ ಎಲ್ಲವನ್ನು ಮಾಡುತ್ತಿರುವುದಾಗಿ ತಾವೂ ನಂಬುವುದು. ಇತರರೂ ನಂಬುವಂತೆ ಒತ್ತಾಯ ಹೇರುವುದು, ತಮಗೆ ಬಂದಿರುವ ಸೌಲಭ್ಯಗಳೆಲ್ಲ ಹೇಗೆ ಎಂಬುದನ್ನು ತಿಳಿಯದೆ ಇರುವುದು ಇವರ ವೈಖರಿಯಾಗಿದೆ.

ನಮ್ಮ ಆಸ್ತಿಪಾಸ್ತಿಗಳು ಸುರಕ್ಷಿತವಾಗಿರಲಿ ಎಂಬ ಉದ್ದೇಶದಿಂದ. ನಮ್ಮಲ್ಲಿ ನೆಮ್ಮದಿ ಮೂಡಲಿ ಎಂಬ ಭಾವನೆಯಿಂದ ರಷ್ಯವೊಂದರಲ್ಲೇ ವರ್ಷಕ್ಕೆ ಸಾವಿರಾರು

ಜನರನ್ನು ಕಾರಾಗೃಹಗಳಿಗೂ ಅಪರಾಧಿಗಳ ಶಿಬಿರಗಳಿಗೂ ಕಳಿಸುತ್ತಿದ್ದೇವೆಂಬ ಸಂಗತಿ ನಮಗೆ ಗೊತ್ತಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಅವರಿಗಾಗಿ ನಡೆಯುವ ವಿಚಾರಣೆಗಳು ನಮಗೆ ಗೊತ್ತಿಲ್ಲದಿಲ್ಲ. ನಮ್ಮ ಆಸ್ತಿಪಾಸ್ತಿಗಳಿಗೆ ಧಕ್ಕೆ ತರುವ, ಕಾರಾಗೃಹ ಪಾಲಕರ ಮೇಲೆ ಕೈಮಾಡುವ ಅಥವಾ ಓಡಿಹೋಗಲು ಯತ್ನಿಸುವ ಜನ, ದೊಡ್ಡ ವಿಚಾರಣೆಗೆ ಒಳಗಾಗಿ ನಾಶಹೊಂದುತ್ತಾರೆ ಇಲ್ಲವೇ ಭ್ರಷ್ಟರಾಗುತ್ತಾರೆ. ಇದು ನಮಗೆ ಗೊತ್ತಿಲ್ಲದೆ ಇಲ್ಲ. ತಾವು ಸೌಲಭ್ಯಗಳನ್ನು ಪಡೆದಿರುವುದು, ಪಡೆಯುತ್ತಿರುವುದು ಸರಕಾರದ ಹಿಂಸಾಚಾರ ಮತ್ತು ಕೊಲೆಗೆಲಸಗಳ ಫಲವಾಗಿ ಎಂಬ ಸಂಗತಿ ಗೊತ್ತಿಲ್ಲದವರಂತೆ ಕೆಲವರು ನಟಿಸುತ್ತಾ ನಾವು ಸುಖವಾಗಿ ಸುಗ್ರಾಸ ಭೋಜನ ಮಾಡುತ್ತಲೋ, ಥಿಯೇಟರಿನಲ್ಲಿ ಹೊಸ ನಾಟಕವನ್ನು ನೋಡುತ್ತಲೋ ಕಾಲ ಕಳೆಯುವಾಗ ಗುಂಡು ತುಂಬಿದ ರಿವಾಲ್ವರ್ ಹಿಡಿದು ಕಾನ್‌ಸ್ಟೇಬಲ್ ನಮ್ಮ ಮನೆಯ ಕಿಟಕಿಗಳ ಮುಂದೆ ಅಡ್ಡಾಡುತ್ತ ನಮಗೆ ರಕ್ಷಣೆ ಕೊಡುತ್ತಿರುವುದನ್ನು ನಾವು ನೋಡಿಲ್ಲ ಎಂದು ನಟಿಸುವುದಕ್ಕೆ ಸಾಧ್ಯವಿಲ್ಲ. ಅಥವಾ ನಮ್ಮ ಆಸ್ತಿಪಾಸ್ತಿ ಘನತೆಗಳಿಗೆ ಧಕ್ಕೆ ಬರುವ ಸಂದರ್ಭಗಳಲ್ಲೆಲ್ಲಾ ಚಾರುಮಾಡಿದ ಬಂದೂಕಗಳನ್ನು ಹಿಡಿದು ತಪ್ಪದಂತೆ ನಮ್ಮ ಕಾವಲಿಗೆ ಬರುವ ಸೈನಿಕರನ್ನು ನಾವು ಕಂಡಿಲ್ಲ ಎಂದು ನಟಿಸುವುದಕ್ಕೆ ಸಾಧ್ಯವಿಲ್ಲ.

ನಮ್ಮ ಊಟ, ನಾಟಕ, ನರ್ತನ, ಕ್ರಿಸ್‌ಮಸ್ ವೃಕ್ಷ, ಮಂಜಿನ ಜಾರುಗಾಲಿ, ಕುದುರೆ ಜೂಜು, ಬೇಟೆ ಇವಾವುದಕ್ಕೂ ವಿಘ್ನ ಬರದಿರುವುದು ಸೈನಿಕನ ಅಥವಾ ಕಾನ್‌ಸ್ಟೇಬಲನ ಗುಂಡಿನ ಮಹಿಮೆಯಿಂದಾಗಿ ಎಂಬ ಸಂಗತಿ ನಮಗೆಲ್ಲ ಗೊತ್ತು. ಮೂಲೆಯಲ್ಲಿ ನಿಲ್ಲುವ ಹಸಿದ ಹೊಟ್ಟೆಯವನ ಎದೆಗೆ ಅವು ತಾಗುತ್ತವೆ ಎಂಬ ಸಂಗತಿ ನಮಗೆ ತಿಳಿದಿದೆ. ಆ ಬಡ ಹಸಿದ ಹೊಟ್ಟೆಯ ಶೋಷಿತ ವ್ಯಕ್ತಿ ನಮ್ಮ ಎಲ್ಲ ವೈಭವಗಳನ್ನು ಮೂಲೆಯಲ್ಲಿ ತುಟಿ ಚಪ್ಪರಿಸಿಕೊಂಡು ನೋಡುತ್ತಾ ನಿಂತಿರುತ್ತಾನೆ. ಕಾನ್ಸ್‌ಟೇಬಲ್ ಹೊರಟು ಹೋದರೆ ಸಾಕು, ಅಥವಾ ನಮ್ಮ ಕೂಗು ಕೇಳಿಸುವಷ್ಟು ದೂರದಲ್ಲಿ ಸೇನಾ ಶಿಬಿರವಿದ್ದರೆ ಸಾಕು. ಆ ಬಡ ಮನುಷ್ಯ ನಮ್ಮ ಸೌಖ್ಯವನ್ನು ಭಂಗಮಾಡಲು ಮುನ್ನುಗ್ಗದೆ ಬಿಡುವುದಿಲ್ಲ.

ಹಾಡೇ ಹಗಲಿನಲ್ಲಿ ಕಳ್ಳತನಕ್ಕೆ ತೊಡಗಿ ಸಿಕ್ಕಿಕೊಂಡ ಮನುಷ್ಯ "ನನಗೆ ಕಾಸಿನ ಹಣ ದೋಚುವ ಉದ್ದೇಶವಿರಲಿಲ್ಲ. ...... ತಲೆ ತೆಗೆಯುವ ಉದ್ದೇಶವಿರಲಿಲ್ಲ" ಎಂದರೆ ನಂಬಲು ಸಾಧ್ಯವಿಲ್ಲ. ಅದೇ ರೀತಿಯಲ್ಲಿ ನಾವು ಸೈನಿಕರು ಮತ್ತು ಕಾನ್‌ಸ್ಟೇಬಲ್‌ಗಳು ನಮ್ಮ ರಕ್ಷಣೆಗಾಗಿ ನೇಮಿತರಾಗಿಲ್ಲ: ಹೊರದೇಶದ ಶತ್ರುಗಳಿಂದ ನಮ್ಮ ದೇಶವನ್ನು ಕಾಪಾಡಲು ನೇಮಿತರಾಗಿದ್ದಾರೆ ಎಂದು ಹೇಳಿದರೆ ಅದು ನಂಬುವ ಮಾತಲ್ಲ. ಸೈನಿಕರು ಅಲಂಕಾರಕ್ಕಾಗಿ, ವೈಭವದ ಪೆರೇಡುಗಳಿಗಾಗಿ ನೇಮಿತರಾಗಿದ್ದಾರೆ ಎಂದಂತಾಗುತ್ತದೆ. ತಾವು ಅವಲಂಬಿಸಿರುವ ಭೂಮಿಯ ಮೇಲಿನ ಹಕ್ಕು ಕಳೆದುಕೊಂಡು ರೈತರು ಹಸಿವಿನಿಂದ ಸಾಯುತ್ತಿದ್ದಾರೆ ಎಂಬ ಸಂಗತಿ ನಮಗೆ ಗೊತ್ತಿಲ್ಲ ಎಂದು ಹೇಳಲು

ಹೇಗೆ ಸಾಧ್ಯ? ಆ ರೈತ ವರ್ಗದ ಜನ ಗಣಿಗಳಲ್ಲಿ, ನೀರಿನಲ್ಲಿ ಅಥವಾ ರಣ ರಣ ಬಿಸಿಲಿನಲ್ಲಿ ದಿನಕ್ಕೆ 10–14 ಗಂಟೆಗಳ ಕಾಲ ತುಂಬ ಶ್ರಮವಹಿಸಿ ದುಡಿಯುವುದು ಹೊಟ್ಟೆಯ ಪಾಡಿಗಾಗಿಯೇ ಹೊರತು ಸ್ವಂತ ಇಚ್ಛೆಯಿಂದ ಅಲ್ಲ ಎಂಬ ಸಂಗತಿ ನಮಗೆ ಗೊತ್ತಿಲ್ಲ ಎಂದು ಹೇಳುವುದು ಸರಿಯಲ್ಲ. ಯಾವುದು ಕಣ್ಣಿಗೆ ಕಟ್ಟಿದಂತೆ ಕಾಣುತ್ತದೆಯೊ ಅದನ್ನೇ ನಂಬದಿರುವುದು ಸಾಧ್ಯವಿಲ್ಲ ಎಂದು ಅನ್ನಿಸುತ್ತದೆ. ಆದರೆ ಈಗ ನಾವು ಹಾಗೆ ನಂಬುತ್ತಿಲ್ಲ.

ಶ್ರೀಮಂತ ವರ್ಗದ ಜನರಲ್ಲಿ ನಿಜವಾಗಿ ಕೆಲವರು ಈ ಹೊಸ ಅರಿವನ್ನು ಪಡೆದ ಜನರಾಗಿದ್ದಾರೆ. ಇಂಥವರು ಆಗಾಗ ನನಗೆ ಸಿಕ್ಕುತ್ತಿರುತ್ತಾರೆ. ಇದು ನನ್ನ ಸುದೈವ. ಅದರಲ್ಲೂ ಹಲವರು ಹೆಂಗಸರು ಮತ್ತು ತರುಣರಲ್ಲಿ ಈ ಜಾಗೃತಿ ಹೆಚ್ಚಾಗಿದೆ. ನೀವು ಭೋಗಿಸುತ್ತಿರುವ ಸುಖ ಹೇಗೆ ಬಂದಿದೆ ಗೊತ್ತೆ? ಎಂದು ಕೇಳಿದಾಗ ಅವರು ಸತ್ಯಸಂಗತಿಯನ್ನು ಬಚ್ಚಿಡಬಯಸುವುದಿಲ್ಲ. ಗೋಣಾಡಿಸುತ್ತ "ಛೆ, ಅದರ ವಿಚಾರ ಎತ್ತಬೇಡಿ; ಹಾಗಿಲ್ಲದಿದ್ದರೆ ಬದುಕುವುದೇ ದುಸ್ತರವಾದೀತು" ಎಂದು ಹೇಳುತ್ತಾರೆ. ಸದ್ಯಕ್ಕೆ ಇಂಥ ತೊಡಕುಗಳಿಂದ ಬಿಡಿಸಿಕೊಳ್ಳಲು ಸಾಧ್ಯವಿಲ್ಲದಿದ್ದರೂ ಪಾಪ ಪ್ರಜ್ಞೆಯನ್ನು ಉಳಿಸಿಕೊಂಡಿರುವ ಪ್ರಾಮಾಣಿಕ ಶ್ರೀಮಂತರು ಕೆಲವರಾದರೂ ಇದ್ದಾರೆ ನಿಜ. ಆದರೆ ನಮ್ಮಕಾಲದ ಬಹುತೇಕ ಮಂದಿ ತಮ್ಮ ಕಪಟಾಚಾರದ ಪಾತ್ರಕ್ಕೆ ಎಷ್ಟರಮಟ್ಟಿಗೆ ಹೊಂದಿಕೊಂಡುಬಿಟ್ಟಿದ್ದಾರೆಂದರೆ ಪ್ರತಿಯೊಬ್ಬನಿಗೂ ಸ್ಪಷ್ಟವಾಗಿ ತಿಳಿದಿರುವ ಸಂಗತಿಯನ್ನು ಇವರು ಧೈರ್ಯವಾಗಿ ನಿರಾಕರಿಸುತ್ತಾರೆ.

ಆ ಜನ ಹೀಗೆ ಉತ್ತರ ಕೊಡುತ್ತಾರೆ: "ನೀವು ಹೇಳುವುದೆಲ್ಲ ಸಂಪೂರ್ಣವಾಗಿ ಅನ್ಯಾಯ. ಜಮೀನುದಾರರಿಗೋಸ್ಕರ ಅಥವಾ ತಯಾರಕರಿಗೋಸ್ಕರ ಕೆಲಸಮಾಡಿ ಎಂದು ಯಾರನ್ನೂ ನಾವು ಬಲವಂತ ಮಾಡುವುದಿಲ್ಲ. ನಮ್ಮದು ಒಂದು ಮುಕ್ತ ಒಪ್ಪಂದದ ವ್ಯವಹಾರ. ಕಾರ್ಮಿಕವರ್ಗದ ಹಿತಸಾಧನೆಗಾಗಿ ದೊಡ್ಡ ಪ್ರಮಾಣದ ಸ್ವತ್ತು ಮತ್ತು ಬಂಡವಾಳ ತುಂಬ ಅಗತ್ಯ. ಗಣಿಗಳಲ್ಲಿ ಕಾರಖಾನೆಗಳಲ್ಲಿ ದುಡಿಮೆಯು ನೀವು ಹೇಳುವಷ್ಟು ಭಯಂಕರವಾಗೇನೂ ಇರುವುದಿಲ್ಲ. ಕಾರಖಾನೆಗಳಲ್ಲಿ ದುರಾಡಳಿತವಿದ್ದರೆ ಸರಕಾರ ಮತ್ತು ಸಮಾಜ ಕ್ರಮ ತೆಗೆದುಕೊಂಡು ಕೆಟ್ಟದ್ದನ್ನೆಲ್ಲಾ ಸುಧಾರಿಸಲಿ. ಕಾರ್ಮಿಕ ವರ್ಗಕ್ಕೆ ಒಪ್ಪಿಗೆಯಾಗುವಂತೆ ಸುಲಭವಾಗುವಂತೆ ಸಹಾಯಮಾಡಲಿ. ಕಾರ್ಮಿಕ ವರ್ಗದ ಜನ ಶರೀರ ಶ್ರಮಕ್ಕೆ ಹೊಂದಿಕೊಂಡ ಜನಾಂಗವಾದ್ದರಿಂದ ಬೇರಾವ ಕೆಲಸಕ್ಕೂ ಅವರು ಲಾಯಕ್ ಅಲ್ಲ. ಜನರಲ್ಲಿ ಬಡತನ ಕಾಲಿಡುವುದು ಜಮೀನುದಾರರ ಅಥವಾ ಬಂಡವಾಳಗಾರರ ಶೋಷಣೆ, ತುಳಿತಗಳಿಂದಾಗಿ ಅಲ್ಲ. ಅದಕ್ಕೆ ಬೇರೆ ಕಾರಣಗಳಿವೆ. ಅವರ ಬಡತನಕ್ಕೆ ಆ ವರ್ಗದ ಜನತೆಯ ಅಜ್ಞಾನ, ಕ್ರೌರ್ಯ, ಮತ್ತು ಕುಡಿತದ ಚಟ ಮುಂತಾದವೇ ಕಾರಣ. ನಾವು, ಬುದ್ಧಿವಂತ ಜನ, ಕಾನೂನಿನ ಬೆಂಬಲ ಪಡೆದು ಅವರು ಹಾಳಾಗುವುದನ್ನು ತಪ್ಪಿಸಲು ಹೆಣಗುತ್ತೇವೆ. ಹೊಸ ಹೊಸ

ಶೋಧನೆಗಳ ಮೂಲಕ ಅವರ ಬಡತನ ನಿರ್ಮೂಲ ಮಾಡಲು ಯತ್ನಿಸುತ್ತೇವೆ ನಾವು. ಧಾರ್ಮಿಕರು, ಧಾರ್ಮಿಕ ಶಿಕ್ಷಣ ಕೊಡಲು ಯತ್ನಿಸುತ್ತಿದ್ದೇವೆ; ನಾವು ಉದಾರಿಗಳು. ಟ್ರೇಡ್‌ಯೂನಿಯನ್‌ಗಳನ್ನು ಸಂಘಟಿಸುವುದರ ಮೂಲಕ. ವಿದ್ಯೆಯನ್ನು ಹರಡುವುದರ ಮೂಲಕ ಪ್ರಯತ್ನ ನಡೆಸಿದ್ದೇವೆ. ಈ ಹೆಜ್ಜೆಗಳಿಂದ ನಾವು ನಮ್ಮ ಅಸ್ತಿತ್ವಕ್ಕೆ ಧಕ್ಕೆ ತಂದುಕೊಳ್ಳದೆ ಈ ಜನರ ಏಳಿಗೆಗೂ ಸಹಕರಿಸುತ್ತಿದ್ದೇವೆ. ಎಲ್ಲರೂ ಬಡವರಂತೆಯೇ ದರಿದ್ರರಾಗಬೇಕು ಎಂಬುದು ನಮ್ಮ ಆಶಯವಲ್ಲ, ಶ್ರೀಮಂತರಂತೆ ಹಣವಂತರಾಗಬೇಕು —ಇದು ನಮ್ಮ ಆಶೆ. ದರಿದ್ರರನ್ನು ತಿರಸ್ಕಾರದಿಂದ ಕಾಣಲಾಗುತ್ತಿದೆ. ಶ್ರಿಮಂತರಿಗಾಗಿ ದುಡಿಯಿರಿ ಎಂದು ಅವರನ್ನು ಬಲಾತ್ಕರಿಸುವ ಸಲುವಾಗಿ ಆಗಾಗ ಕಾರ್ಯಾಚರಣೆ ಯಲ್ಲಿ ಕೊಲ್ಲಲಾಗುತ್ತಿದೆ, ಎಂದು ಹೇಳುವುದು ಕುತರ್ಕವಾದೀತು. ಈ ಕಾರ್ಮಿಕರು ತಮ್ಮ ಸ್ವಂತ ಹಿತಾಸಕ್ತಿಗಳನ್ನೇ ಮರೆತು, ಸಮಾಜದ ಉದ್ಧಾರಕ್ಕೆ ಅಗತ್ಯವಾದ ಶಾಂತಿ ಮತ್ತು ನೆಮ್ಮದಿಗಳನ್ನು ಕೆಡಕಲು ಹೊರಟಾಗ ಮಾತ್ರ ಸೈನಿಕರನ್ನು ಅಹ್ವಾನಿಸ ಲಾಗುತ್ತಿದೆ. ಕೇಡಿಗರಿಗಾಗಿ ಸೆರೆಮನೆ, ಉಗ್ರಶಿಕ್ಷೆ ಇತ್ಯಾದಿಗಳನ್ನು ವ್ಯವಸ್ಥೆ ಗೊಳಿಸಬೇಕಾಗಿರುವುದು ಅನಿವಾರ್ಯ. ಇದು ನಮಗೆ ಇಷ್ಟ ಎಂದೇನೂ ಅಲ್ಲ. ಅವುಗಳ ರದ್ದತಿಯನ್ನು ನಾವು ಮನಸಾರೆ ಹಾರೈಸುತ್ತೇವೆ, ಆ ದಿಕ್ಕಿನಲ್ಲಿ ಕೆಲಸವನ್ನು ಆರಂಭಿಸಿದ್ದೇವೆ."

ನಮ್ಮ ಕಾಲದಲ್ಲಿ ಕಪಟಾಚಾರಕ್ಕೆ ಎರಡು ಮುಖಗಳು ಕಾಣಿಸಿಕೊಂಡಿವೆ: ಅವೇ ಮಿಥ್ಯಾಧರ್ಮ ಮತ್ತು ಮಿಥ್ಯಾವಿಜ್ಞಾನದ ಮುಖಗಳು. ಈ ಕಪಟಾಚಾರ ಎಷ್ಟು ವಿಸ್ತಾರಕ್ಕೆ ಬೆಳೆಬಿದುಬಿಟ್ಟಿದೆ ಎಂದರೆ ನಾವೀಗ ಅವುಗಳ ಮಧ್ಯೆ ವಾಸಮಾಡುತ್ತಿರುವುದು ನಿಜವಲ್ಲದೆ ಹೋಗಿದ್ದರೆ ಮಾನವ. ಆತ್ಮವಂಚನೆಯ ಹಾದಿಯಲ್ಲಿ ಇಷ್ಟು ಮುಂದುವರಿಯ ಬಲ್ಲನೇ ಎಂದು ಸಂದೇಹಪಡಬೇಕಾಗುತ್ತಿತ್ತು. ಈಗ ಅವರು ವಂಚನೆಯ ಹಾದಿಯಲ್ಲಿ ಒಂದು ಸ್ಥಿತಿಯನ್ನು ಮುಟ್ಟಿದ್ದಾರೆ. ಅವರ ಹೃದಯ ಕಲ್ಲಾಗಿದೆ, ಕಣ್ಣಿದ್ದರೂ ಅವರು ಕಾಣಲಾರರು, ಕಿವಿಯಿದ್ದರೂ ಅವರು ಕೇಳಲಾರರು, ಅವರಿಗೆ ಯಾವ ಸಂಗತಿಯೂ ಅರ್ಥವಾಗುವುದೇ ಇಲ್ಲ.

ಮಾನವರು ಬಹಳ ಕಾಲದಿಂದ ತಮ್ಮ ಆತ್ಮಸಾಕ್ಷಿಗೆ ವಿರುದ್ಧವಾಗಿ ನಡೆದುಕೊಳ್ಳು ತ್ತಿದ್ದಾರೆ. ಕಪಟಾಚಾರದ ಬುದ್ಧಿ ಇಲ್ಲದಿದ್ದರೆ ಹಾಗೆ ಮುಂದುವರಿಯುವುದು ತುಂಬ ಕಷ್ಟ. ಅವರ ಈಗಿನ ಜೀವನ ವ್ಯವಸ್ಥೆ ಅವರ ಆತ್ಮಸಾಕ್ಷಿಗೆ ವಿರುದ್ಧವಾಗಿ ಸಾಗಿರುವು ದಕ್ಕೆ ಅದು ಕಪಟಾಚಾರದ ಮುಖವಾಡ ಧರಿಸಿಕೊಂಡಿರುವುದೇ ಕಾರಣ.

ವಾಸ್ತವತೆ ಮತ್ತು ಆತ್ಮಸಾಕ್ಷಿಗಳ ಅಂತರ ಹೆಚ್ಚಿದಂತೆಲ್ಲಾ ಕಪಟಾಚಾರ ಬಲಿಷ್ಠ ವಾಗುತ್ತಾ ಹೋಗುತ್ತದೆ. ಆದರೆ ಕಪಟಾಚಾರಕ್ಕೆ ಕೆಲವು ಮಿತಿಗಳಿವೆ. ನಮ್ಮ ಕಾಲದಲ್ಲಿ ಆ ಮಿತಿ ತುಂಬಿಹೋಗಿದೆ ಎನ್ನಿಸುತ್ತದೆ.

ಅಂಟಿಕೊಂಡು ಬಂದ ಕ್ರೈಸ್ತ ತತ್ವಗಳಿಗೆ ಶರಣಾಗುವ ನಮ್ಮ ಕಾಲದ ಪ್ರತಿಯೊಬ್ಬನ ಸ್ಥಿತಿಯೂ ಹೆಚ್ಚು ಕಡಿಮೆ ನಿದ್ದೆಮಾಡುತ್ತಿರುವವನ ಸ್ಥಿತಿ ಎನ್ನಬಹುದು. ನಿದ್ದೆಮಾಡು ತ್ತಿರುವವನು ಏನಾದರೂ ಮಾಡಬೇಕೆಂದು ಕನಸುಕಾಣುತ್ತಾನೆ. ಕನಸಿನಲ್ಲಿ ಕೂಡ ಹಾಗೆ ಮಾಡಬಾರದು ಎಂಬುದು ಅವನ ತಿಳಿವಳಿಕೆಯಾಗಿದೆ. ಆತನ ಆಳವಾದ ಆತ್ಮಸಾಕ್ಷಿಗೂ ಅದು ಗೊತ್ತು. ಆದರೆ ಆತ ಏನನ್ನೂ ಬದಲಾಯಿಸಲಾರ, ಅಥವಾ ಮಾಡಬಾರದ್ದೆಂದು ಗೊತ್ತಿದ್ದರೂ ತಾನು ಆರಂಭಿಸಿದ ಕೆಲಸವನ್ನು ಬಿಡಲಾರ. ಇದರ ಪರಿಣಾಮವಾಗಿ ಕನಸಿನಲ್ಲಿ ಆಗುವಂತೆ ಆತನ ಸ್ಥಾನ ದಿನೇ ದಿನೇ ಹದಗೆಡುತ್ತ ಬರುತ್ತದೆ. ಕೊನೆಗೆ ತೀವ್ರತೆ ಹೆಚ್ಚಾಗಿ ಆತ ಹಾಲಿ ಸತ್ಯದ ಸ್ವರೂಪವನ್ನು ಕುರಿತು ತೀವ್ರ ಚಿಂತನೆಗೆ ತೊಡಗಿ ಎಲ್ಲವನ್ನೂ ಸಂಶಯದ ಕಣ್ಣಿನಿಂದ ನೋಡುವಂತಾಗಬಹುದು, ಅಂಥ ಭ್ರಮೆಯಿಂದ ದೂರವಿರಲು ಪ್ರಜ್ಞೆಯ ಮಟ್ಟದಲ್ಲಿ ಪ್ರಯತ್ನ ನಡೆಸಬಹುದು.

ಕ್ರೈಸ್ತ ಸಮಾಜದ ಸಾಮಾನ್ಯ ಮನುಷ್ಯನ ಸ್ಥಿತಿ ಇದು. ತಾನು ಮಾಡುತ್ತಿರುವುದು, ತನ್ನ ಸುತ್ತಮುತ್ತಣ ಸಂಗತಿ ಎಲ್ಲ ಅಸಂಬದ್ಧವೆಂಬ ಸಂಗತಿ ಅವನಿಗೆ ಗೊತ್ತು. ಅದು ರಾಕ್ಷಸೀ ಸ್ವರೂಪದ್ದು, ನೀಚತನದ್ದು ಎಂಬ ಸಂಗತಿಯೂ ಗೊತ್ತು. ಅದು ತನ್ನ ಆತ್ಮ ಸಾಕ್ಷಿಗೆ ವಿರುದ್ಧವಾದದ್ದು ಎಂದರೆ ಆತ ನಂಬುತ್ತಾನೆ. ತನ್ನ ಸ್ಥಿತಿ ದಿನೇ ದಿನೇ ಹದಗೆಡುತ್ತ ಹೋಗಿದೆ. ತೀವ್ರತೆಯ ಪತನಾವಸ್ಥೆಯಲ್ಲಿದೆ ಎಂದು ಆತ ಭಾವಿಸುತ್ತಾನೆ.

ನಮ್ಮ ಕಾಲದ ಜನ, ಕ್ರೈಸ್ತ ಧರ್ಮದ ಗಾಂಭೀರ್ಯ ಪ್ರಜ್ಞೆ, ಸರ್ವರೂ ಸಮ ಎಂಬ ಪ್ರಜ್ಞೆಗಳನ್ನು ಅರೆದು ಕುಡಿದಿದ್ದಾರೆ. ಜಗತ್ತಿನ ಎಲ್ಲ ರಾಷ್ಟ್ರಗಳೂ ಶಾಂತಿಯುತವಾಗಿ ಸೌಹಾರ್ದದಿಂದ ಬಾಳಬೇಕೆಂದು ಪ್ರಾಮಾಣಿಕವಾಗಿ ನಂಬಿದ್ದಾರೆ. ಆದರೆ ಅಂಥವರು ಕೂಡ, ತಮ್ಮ ಪ್ರತಿಯೊಂದು ಸಂತೋಷದ ಗಳಿಗೆಯೂ, ಪ್ರತಿಯೊಂದು ಸೌಲಭ್ಯವೂ ದೇಶದ ಸಾಮಾನ್ಯಜನರ ಸಾವು ನೋವುಗಳ ಫಲವಾಗಿ ಬಂದಿವೆಯೆಂದೂ ಆ ಸ್ಥಿತಿಯಲ್ಲಿ ತಾವು ಬದುಕಬೇಕಾಗಿದೆಯೆಂದೂ ತಿಳಿಯದಿರುವುದು ಶೋಚನೀಯ. ಈ ಲೋಕದಲ್ಲಿ ನಾವು ಯಾವ ಕ್ಷಣದಲ್ಲೋ ಒಬ್ಬರಮೇಲೆ ಒಬ್ಬರು ಬಿದ್ದು ಕಾಡು ಪ್ರಾಣಿಗಳಂತೆ ಕಾದಾಡಬೇಕಾಗುತ್ತದೆ. ರಾಷ್ಟ್ರ-ರಾಷ್ಟ್ರಗಳ ದ್ವೇಷದ ಕಿಚ್ಚಿನಲ್ಲಿ ಬೇಯುತ್ತ ಜನರ ಜೀವ ಮತ್ತು ದುಡಿಮೆಗಳನ್ನು ನಿರ್ದಾಕ್ಷಿಣ್ಯವಾಗಿ ಹೊಸಕೆ ಹಾಕುತ್ತ ಸಾಗಬೇಕಾಗುತ್ತದೆ. ಇದಕ್ಕೆ ಕಾರಣ ಗೊತ್ತೆ? ಒಬ್ಬ ಮುತ್ಸದ್ದಿ ಅಥವಾ ದೊರೆ ಇನ್ನೊಂದು ದೇಶದ ಅಧಿಕಾರಿಗೋ ರಾಜನಿಗೋ ಏನೋ ಅಸಂಬದ್ಧವಾದದ್ದನ್ನು ಬರೆದು ಕಳಿಸಿರುತ್ತಾನೆ. ಆತನೂ ಇವನಷ್ಟೇ ದಾರಿತಪ್ಪಿದ ವ್ಯಕ್ತಿಯಾಗಿರುತ್ತಾನೆ!

ಇದು ಅಸಾಧ್ಯ! ಆದರೂ ಎಲ್ಲ ಹೀಗೇ ನಡೆಯಬೇಕು ಎಂಬುದೂ ಇದರಲ್ಲಿ ತಾವೂ ಭಾಗವಹಿಸಬೇಕಾಗುತ್ತದೆ ಎಂಬುದೂ ಎಲ್ಲರಿಗೂ ಗೊತ್ತಿರುವ ಸಂಗತಿ. ಪರಿಸ್ಥಿತಿ ಬರುಬರುತ್ತಾ ಹದಗೆಡುತ್ತ ಹೋಗುತ್ತದೆ.

ಕನಸು ಕಾಣುತ್ತಿರುವವನು ತನಗೆ ನೈಜವೆಂದು ಕಾಣಿಸುತ್ತಿರುವುದೆಲ್ಲಾ 'ವಾಸ್ತವ' ಎಂದು ನಂಬುವುದಿಲ್ಲ. ಆತ ಇನ್ನೊಂದು ನೈಜ – ವಾಸ್ತವವನ್ನು ಕಾಣಬಯಸುತ್ತಾನೆ. ಸಾಮಾನ್ಯ ಪ್ರಜೆಯೂ ಅಷ್ಟೆ. ಆತ ಈಗಾಗಲೇ ತನ್ನ ಪ್ರಜ್ಞೆಯಲ್ಲಿ ಪ್ರತಿಷ್ಠಿತವಾಗಿರುವ ಸತ್ಯದ ಬಗೆಗೆ ಎಚ್ಚರ ವಹಿಸುತ್ತಾನೆ.

ಕನಸು ಕಾಣುವವನು ಎಚ್ಚರುವ ಪ್ರಯತ್ನ ಮಾಡಬೇಕು ಮತ್ತು "ಇದೆಲ್ಲಾ ಕನಸಲ್ಲವೇ?" ಎಂದು ತನ್ನಲ್ಲೇ ಕೇಳಬೇಕು. ಹದಗೆಟ್ಟ ಪರಿಸ್ಥಿತಿಯಿಂದ ಕೂಡಲೇ ಪಾರಾಗಬೇಕಾದರೆ ಸಂತೋಷ ಪಡೆಯಬೇಕಾದರೆ ಅದು ಅಗತ್ಯ. ಹಾಗೆಯೇ ಇಂದಿನ ಮನುಷ್ಯನು ತನ್ನ ಮತ್ತು ಸುತ್ತಣ ಜಗತ್ತಿನ ಕಪಟಾಚಾರದಿಂದ ಎಚ್ಚೆತ್ತು ನೈಜತೆಯನ್ನು ಕಾಣುವ ನೈತಿಕ ಪ್ರಯತ್ನವನ್ನು ಮಾಡಬೇಕು. 'ಇದು ವಂಚನೆಯಲ್ಲವೇ?' ಎಂಬ ಪ್ರಶ್ನೆಯನ್ನು ಆಗಾಗ ಕೇಳಿಕೊಳ್ಳಬೇಕು. ನಿದ್ದೆಯಿಂದ ಎಚ್ಚರ ಹೊಂದಬೇಕಾದರೆ ಮತ್ತು ಕಾಲ್ಪನಿಕವಾದ ಭಯಾನಕ ಜಗತ್ತಿನಿಂದ ನೈಜಸುಂದರ ಜಗತ್ತಿಗೆ ಬರಬೇಕಾದರೆ ಇಂಥ ಎಚ್ಚರದ ಪ್ರಶ್ನೆ ಹಾಕಿಕೊಳ್ಳುವುದು ಅತ್ಯಗತ್ಯ.

ಇದನ್ನು ಸಾಧಿಸಲು ಮನುಷ್ಯ ದೊಡ್ಡ ಸಾಹಸವನ್ನೇನೂ ಮಾಡಬೇಕಾಗಿಲ್ಲ. ಅಥವಾ ದಂಡಯಾತ್ರೆ ಮಾಡಬೇಕಾದ್ದಿಲ್ಲ, ಎಚ್ಚೆತ್ತುಕೊಳ್ಳುವ ಒಂದು ಆತ್ಮಪ್ರಯತ್ನವನ್ನು ಮಾಡಬೇಕು ಅಷ್ಟೆ.

## 5

ಇಂಥ ಪ್ರಯತ್ನ ಸಾಧ್ಯವೇ?

ಕಪಟಾಚಾರಕ್ಕೆ ಅತ್ಯಂತ ಅನಿವಾರ್ಯವಾದ ಒಂದು ಈಚಿನ ತತ್ತ್ವದ ಪ್ರಕಾರ 'ಮನುಷ್ಯ ಮುಕ್ತನಲ್ಲ; ತನ್ನ ಬದುಕನ್ನು ಆತ ಬದಲಾಯಿಸಲಾರ'.

'ಮನುಷ್ಯ ತನ್ನ ಬದುಕನ್ನು ಬದಲಾಯಿಸಲಾರ, ಏಕೆಂದರೆ ಆತ ಮುಕ್ತನಲ್ಲ. ಆತ ಮುಕ್ತನಲ್ಲ, ಏಕೆಂದರೆ ಅವನ ಎಲ್ಲ ಚಟುವಟಿಕೆಗಳಿಗೂ ಮೂಲಭೂತವಾದ ಕಾರಣಗಳಿದ್ದೇ ಇರುತ್ತವೆ. ಮನುಷ್ಯ ಏನೇ ಮಾಡಲಿ. ಕೆಲವು ನಿರ್ದಿಷ್ಟ ಕಾರಣಗಳು ಅವನ ಕೆಲವು ನಿರ್ದಿಷ್ಟ ಕಾರ್ಯಗಳಿಗೆ ಪ್ರೇರಣೆ ನೀಡುತ್ತವೆ. ಈ ಕಾರಣದಿಂದ ಮನುಷ್ಯ ಮುಕ್ತನಲ್ಲ ತನ್ನ ಬದುಕನ್ನು ಆತ ಬದಲಾಯಿಸಲಾರ' – ಹೀಗೆಂದು ಕಪಟಾಚಾರದ ತತ್ತ್ವದ ಭಕ್ತರು ಹೇಳುತ್ತಾರೆ. ಮನುಷ್ಯ ಒಂದು ವೇಳೆ ಪ್ರಜ್ಞಾವಂತನಲ್ಲದವನಾಗಿದ್ದರೆ ಸತ್ಯದ ಅಗತ್ಯಕ್ಕೆ ತಕ್ಕಂತೆ ಬೆಳೆಯುವ ಚೈತನ್ಯ ಇಲ್ಲದವನಾಗಿದ್ದಿದ್ದರೆ ಈ ಮಾತನ್ನು ನಂಬಬಹುದಾಗಿತ್ತು. ಅಂದರೆ ಯಾವುದಾದರೂ ಒಂದು ಸತ್ಯವನ್ನು ಅಂಗೀಕರಿಸಿ ಪ್ರಜ್ಞೆಯು ಅದೇ ಮಟ್ಟದಲ್ಲಿ ಸದಾ ಉಳಿದಿದ್ದರೆ ಈ ಮಾತಿಗೆ ಒಪ್ಪಬಹುದಾಗಿತ್ತು.

ಆದರೆ ಮನುಷ್ಯ ಎಚ್ಚರವುಳ್ಳ ಪ್ರಾಣಿ. ಸತ್ಯವನ್ನು ಆತ ಇನ್ನೂ ಉನ್ನತೋನ್ನತ ಮಟ್ಟಗಳಲ್ಲಿ ಗುರುತಿಸಬಲ್ಲವನಾಗಿದ್ದಾನೆ. ಆದ್ದರಿಂದ ಪ್ರತಿಯೊಂದು ಕಾರ್ಯಕ್ಕೂ ಮೂಲ ಕಾರಣವೊಂದಿದೆ ಎಂಬುದರಿಂದ ಆತ ಮುಕ್ತನಲ್ಲ ಎಂದು ವಾದಿಸಬಹುದಾದರೂ ಆ ಮೂಲ ಕಾರಣಗಳನ್ನೇ ತನ್ನ ಹತೋಟಿಗೆ ಒಳಪಡಿಸಿಕೊಳ್ಳುವುದು ಅವನ ಕೈಯಲ್ಲಿದೆ. ಒಬ್ಬ ಪ್ರಜ್ಞಾವಂತ ವ್ಯಕ್ತಿಗೆ ಸತ್ಯವನ್ನು ಗುರುತಿಸುವುದು ಅದೇ ಕಾರ್ಯಕ್ಕೆ ಮೂಲಕಾರಣವಾಗುವಂತೆ ನೋಡಿಕೊಳ್ಳುವುದು ಸಾಧ್ಯ.

ಮನುಷ್ಯ ಕೆಲವು ಕಾರ್ಯಗಳ ಆಚರಣೆಯ ದೃಷ್ಟಿಯಿಂದ ಮುಕ್ತನಲ್ಲ ಎಂಬ ಮಾತು ನಿಜ. ಆದರೆ ಆತ ತನ್ನ ಮುಂದಿನ ಕಾರ್ಯಗಳ ಮೂಲ ಕಾರಣವನ್ನು ಹುಡುಕುವ ದೃಷ್ಟಿಯಿಂದ. ಮುಕ್ತನೆಂದು ಹೇಳಬಹುದು. ಎಂಜಿನ್ ಡ್ರೈವರನು ತನ್ನ ಯಂತ್ರದ ಗತ ಚಲನೆಯ ವಿಚಾರದಲ್ಲಿ ಯಾವ ಹತೋಟಿಯೂ ಇಲ್ಲದವನು. ಅದರ ಸದ್ಯದ ಚಲನೆಯ ಮೇಲೂ ಅವನಿಗೆ ಪೂರ್ಣ ಹತೋಟಿ ಬಂದಿರದೆ ಇರಬಹುದು. ಆದರೆ ಆತ ಅದರ ಮುಂದಿನ ಚಲನೆಗಳ ಮೇಲೆ ಖಂಡಿತ ಹತೋಟಿ ಸಾಧಿಸಿಕೊಳ್ಳಬಲ್ಲ.

ಪ್ರಜ್ಞಾವಂತ ಮನುಷ್ಯ ಏನನ್ನೇ ಮಾಡಲಿ ಆತ ಅದು ಸತ್ಯಕ್ಕೆ ಹೊಂದಿಕೊಳ್ಳುವಂಥ ದೆಂಬುದರಿಂದ ತಾನು ಹಾಗೆ ಮಾಡಲೇಬೇಕೆಂದು ನಿರ್ಧರಿಸಿ ಮಾಡಿರುತ್ತಾನೆ. ಅಥವಾ ಹಿಂದಿನ ಯಾವುದೋ ಸನ್ನಿವೇಶದಲ್ಲಿ ಆತ ಸತ್ಯವನ್ನು ಗುರುತಿಸಿರುತ್ತಾನೆ. ಈಗ ಅಭ್ಯಾಸ ಬಲದಿಂದ. ಹಿಂದೆ ನಂಬಿ ಮಾಡಿದ್ದನ್ನೇ. ಮಾಡುತ್ತಾನೆ.

ಏನೇ ಇರಲಿ ಆತನ ಚಟುವಟಿಕೆಯ ಮೂಲ ಪ್ರೇರಣೆ ಹೊರಗಿನ ಘಟನೆಯಿಂದ ಬಂದದ್ದಲ್ಲ. ಇಂಥ ಒಂದು ಭಾವ ಸತ್ಯವಾದದ್ದು ಎಂಬ ಪ್ರಜ್ಞೆ. ಈ ಸತ್ಯವನ್ನು ಕಾರ್ಯ ಮಾಡಲು ಪ್ರೇರಣೆ ಕೊಡಬಲ್ಲ ಮೂಲಕಾರಣವೆಂದು ಗುರುತಿಸುವುದು ಮುಖ್ಯ.

ಮನುಷ್ಯ ಏನನ್ನಾದರೂ ತಿನ್ನಲಿ ಅಥವಾ ತಿನ್ನದೆ ಬಿಡಲಿ, ಕೆಲಸಮಾಡಲಿ. ವಿಶ್ರಾಂತಿ ಪಡೆಯಲಿ ಆತ ಅದು ಸರಿಯೆಂದು ಭಾವಿಸಿರುವುದರಿಂದ ಸತ್ಯಕ್ಕೆ ಅನುಗುಣವಾಗಿ ರುವುದೆಂದು ತಿಳಿದಿರುವುದರಿಂದ ಅಥವಾ ಹಿಂದೊಮ್ಮೆ ಹಾಗೆ ಮಾಡಿದ್ದ ನೆನಪಿದ್ದುದ ರಿಂದ ಹಾಗೆ ವರ್ತಿಸುತ್ತಾನೆ.

ಆದರೆ ಕೆಲವೊಂದು ಸತ್ಯಗಳನ್ನು ಗುರುತಿಸುವುದು ಅಥವಾ ಗುರುತಿಸದಿರುವುದು ಬಾಹ್ಯ ಕಾರಣಗಳಿಂದ ಪ್ರಭಾವಿತವಾಗಿರುವುದಿಲ್ಲ. ಅವನಲ್ಲೇ ಅಂತರ್ಗತವಾಗಿರುವ ಕೆಲವು ಕಾರಣಗಳಿಂದ ಅದು ಸಾಧ್ಯವಾಗಿದೆ. ಉದಾಹರಣೆಗೆ ಕೆಲವು ಸಲ ಸತ್ಯವನ್ನು ಗುರುತಿಸಲು ಬಾಹ್ಯ ಸಾಧನಗಳು ತುಂಬ ಸಹಾಯಕವಾಗಿದ್ದರೂ ಆತ ಸತ್ಯವನ್ನು ಗುರುತಿಸದೆ ಹೋಗಬಹುದು. ಇನ್ನು ಕೆಲವುಸಲ ಸಹಾಯಕವಾದ ಯಾವ ಸಾಮಗ್ರಿಯೂ ಇಲ್ಲದಿದ್ದರೂ ಯಾವುದೇ ಬಾಹ್ಯ ಕಾರಣಗಳ ಹಂಗಿಲ್ಲದೆ ಆತ ಸತ್ಯವನ್ನು ಗುರುತಿಸಲೂ

ಬಹುದು. ಯೋಹಾನನ ಸುವಾರ್ತೆಯಲ್ಲಿ ಹೇಳಿಲ್ಲವೆ? "ತಂದೆಯನ್ನು ಬಿಟ್ಟು ಇನ್ನಾರೂ ನನ್ನ ಬಳಿ ಬರಲಾರರು........." (VI. 44) ಅಂದರೆ ಮನುಷ್ಯ ಜೀವನದ ಎಲ್ಲ ಬಗೆಯ ತೋರಿಕೆಗಳಿಗೂ ಮೂಲವಾದ ಸತ್ಯವನ್ನು ಗುರುತಿಸುವುದಕ್ಕೆ ಬಾಹ್ಯ ಕಾರಣಗಳ ನೆರವು ಒಂದೇ ಸಾಲದು, ಆದರೆ ನಮ್ಮ ತಿಳಿವಳಿಕೆಗೆ ಮೀರಿದ ಯಾವುದೋ ಒಳಗಿನ ಗುಣಗಳಿಂದಲೂ ಅದು ಸಾಧ್ಯವಾಗಬಹುದು.

ಆದ್ದರಿಂದ ಮನುಷ್ಯ ತನ್ನ ಕಾರ್ಯಗಳಲ್ಲಿ ಮುಕ್ತನೆಂದು ಹೇಳಿಕೊಳ್ಳಲಾಗದಿದ್ದರೂ ತನ್ನ ಕಾರ್ಯಗಳ ಮೂಲ ಉದ್ದೇಶ. ಪ್ರೇರಣೆಗಳನ್ನು ಶೋಧಿಸುವ ವಿಚಾರದಲ್ಲಿ ಸ್ವತಂತ್ರವಾದ ವಿಚಾರವನ್ನು ಬೆಳೆಸಿಕೊಂಡು ಹೋಗಲು ಆತ ಸ್ವತಂತ್ರ. ಅದೇ ಸತ್ಯವನ್ನು ಒಪ್ಪುವಿಕೆ ಅಥವಾ ಒಪ್ಪದಿರುವಿಕೆ. ತನಗೆ ಹೊರತಾದ ಬಾಹ್ಯ ಸನ್ನಿವೇಶಗಳ ವಿಚಾರದಲ್ಲಿ ಮಾತ್ರವಲ್ಲದೆ ತನ್ನ ಸ್ವಂತ ಚರ್ಯೆಗಳ ವಿಷಯದಲ್ಲಿಯೂ ಆತ ಮುಕ್ತವಾಗಿ ಯೋಚಿಸಬಲ್ಲ ಶಕ್ತಿ ಪಡೆದಿರುತ್ತಾನೆ.

ಹೀಗಾಗಿ ಒಬ್ಬ ಮನುಷ್ಯ ತನ್ನ ಸತ್ಯ ಪ್ರಜ್ಞೆಗೆ ವಿರೋಧವಾಗಿ ಯಾವುದೋ ಉದ್ವೇಗಕ್ಕೆ ಒಳಗಾಗಿ ಒಂದು ಕಾರ್ಯಮಾಡುತ್ತಾನೆ ಎನ್ನೋಣ. ಅದನ್ನು ಗುರುತಿಸುವುದು ಅಥವಾ ಪತ್ತೆಹಚ್ಚದಿರುವುದು ಅವನಿಗೆ ಬಿಟ್ಟದ್ದು. ಅಂದರೆ ಆತ ಸತ್ಯವನ್ನು ಗುರುತಿಸಲು ಒಪ್ಪದೇ ಹೋಗಬಹುದು, ತನ್ನ ಕಾರ್ಯ ಅಗತ್ಯವಾಗಿತ್ತು ಎಂದು ಭಾವಿಸಿರಬಹುದು: ಮತ್ತು ತಾನು ಹಾಗೆ ಮಾಡಿದ್ದನ್ನು ಸರಿಯಾಗಿ ಸಮರ್ಥನೆ ಮಾಡಿಕೊಳ್ಳಬಹುದು. ಅಥವಾ ಆತ ಸತ್ಯ ಯಾವುದೆಂದು ಗುರುತಿಸಬಹುದು. ಅದರ ಹಿನ್ನೆಲೆಯಲ್ಲಿ ತನ್ನ ಕಾರ್ಯ ಕೆಡುಕಿನದೆಂದು ಭಾವಿಸಬಹುದು. ಅದಕ್ಕಾಗಿ ತನಗೆ ಛೀಮಾರಿ ಹಾಕಿಕೊಳ್ಳಬಹುದು.

ಒಬ್ಬ ಕುಡುಕ ಅಥವಾ ಜೂಜುಕೋರ ಪ್ರಲೋಭನೆಯನ್ನು ಮೆಟ್ಟಿನಿಲ್ಲುವ ಬದಲು ಆಮಿಷಕ್ಕೆ ಬಲಿಯಾಗಿದ್ದಾನೆ ಎಂದುಕೊಳ್ಳೋಣ. ಆತ ಕುಡಿಯುವಿಕೆ ಅಥವಾ ಜೂಜುಗಾರಿಕೆ ತುಂಬ ಕೆಟ್ಟದ್ದೆಂದು ಭಾವಿಸಬಹುದು. ಅಥವಾ ಅವು ನಿರುಪದ್ರವಿಯಾದ ಸಂತೋಷದ ಸಾಧನೆಗಳು ಎಂಬುದು ಆತನ ಗ್ರಹಿಕೆಯಾಗಿರಬಹುದು. ಮೊದಲನೆಯ ಪ್ರಸಂಗದಲ್ಲಿ ಆತ ಆ ನಿಮಿಷದಲ್ಲಿ ತನ್ನ ಮೋಹ ಜಗತ್ತಿನಿಂದ ಬಿಡಿಸಿಕೊಳ್ಳಲಿಲ್ಲ ಎಂಬುದು ನಿಜವಾದರೂ ಮುಂದೆ ಆತ ಸತ್ಯವನ್ನು ಒಪ್ಪಿಕೊಳ್ಳುತ್ತಿದ್ದಾನೆ ಎಂಬಷ್ಟರ ಮಟ್ಟಿಗಾದರೂ ಆತ ಅದರಿಂದ ಮುಕ್ತ ಎಂದು ಹೇಳಬಹುದು. ಎರಡನೆಯದರಲ್ಲಿ ಆತ ತನ್ನ ಚಟವನ್ನೇ ವೃದ್ಧಿಪಡಿಸಿಕೊಳ್ಳುತ್ತಾ ಹೋಗಿ ಅದರಿಂದ ಮುಕ್ತನಾಗುವ ಯಾವ ಅವಕಾಶವೂ ದೊರೆಯದಂತೆ ಮಾಡಿಕೊಳ್ಳಬಹುದು.

ಅದೇ ರೀತಿಯಲ್ಲಿ ಉರಿಯುವ ಮನೆಯೊಂದರಿಂದ ಗೆಳೆಯನನ್ನು ಉಳಿಸಿಕೊಳ್ಳಲಾರದೆ ಒಬ್ಬ ತಾನು ಮಾತ್ರ ಪಾರಾಗಿ ಬಂದಿದ್ದಾನೆ ಎನ್ನೋಣ. ಆತ ಮುಂದೆ

ತನ್ನ ಕಾರ್ಯ ತಪ್ಪೆಂದು ತಿಳಿದು ತನ್ನನ್ನೇ ದೂಷಿಸಿಕೊಳ್ಳುವುದೂ ಸಾಧ್ಯ. ತನ್ನ ಬದುಕನ್ನು ಪಣವಾಗಿಟ್ಟರೂ ಚಿಂತೆಯಿಲ್ಲ. ಗೆಳೆಯನ ಜೀವರಕ್ಷಣೆ ಮುಖ್ಯ ಎಂಬ ಸಂಗತಿ ಗೊತ್ತಿದ್ದರೂ ಕೂಡ ಆತ ತನ್ನ ವರ್ತನೆಯನ್ನು ಸಮರ್ಥಿಸಿಕೊಳ್ಳಬಹುದು. ಸತ್ಯವನ್ನು ಗುರುತಿಸುವುದು. ಗುರುತಿಸದಿರುವುದು ಇವೆರಡರಲ್ಲೂ ಅವನು ಮುಕ್ತ. ಅವನ ಮನಸ್ಸು ಯಾವುದನ್ನು ಬೇಕಾದರೂ ನಿರ್ಧರಿಸಬಹುದು. ಮೊದಲನೆಯ ಪ್ರಸಂಗದಲ್ಲಿ ಆತ ಸತ್ಯದಿಂದ ದೂರ ಹೋಗಿದ್ದರೂ ಅದನ್ನು ಅನಂತರ ಸರಿಯಾಗಿ ಗುರುತಿಸಿದ ಪಕ್ಷದಲ್ಲಿ ಆ ಮನೋಭಾವ ಮುಂದೆ ಸ್ವಾರ್ಥತ್ಯಾಗದ ಅನೇಕ ಸಂಗತಿಗಳ ಕಡೆ ಅವನ ಗಮನವನ್ನು ಸೆಳೆಯುತ್ತದೆ. ಎರಡನೆಯ ಪ್ರಕರಣದಲ್ಲಿ ಆತ ಬರಿಯ ಸ್ವಾರ್ಥ ಕಾರ್ಯಗಳ ದೊಡ್ಡ ಜಾಲದಲ್ಲೇ ಸಿಕ್ಕುಬೀಳುವ ಸಂಭವವಿದೆ.

ಮನುಷ್ಯ ಪ್ರತಿಯೊಂದು ಸತ್ಯವನ್ನೂ ಸರ್ವದಾ ಗುರುತಿಸಬಲ್ಲ ಎಂದು ಇದರ ಅರ್ಥವಲ್ಲ. ಮನುಷ್ಯ ಹಿಂದೆಯೇ ಸ್ವತಃ ಗುರುತಿಸಿದ ಕೆಲವು ಸತ್ಯಗಳಿವೆ. ಶಿಕ್ಷಣ, ಸಂಪ್ರದಾಯ, ಶ್ರದ್ಧೆಗಳಿಂದ ಸಾಗಿ ಬಂದಿರುವ ಕೆಲವು ಸತ್ಯಗಳಿವೆ. ಇವುಗಳ ಅನುಸರಣೆ ಅಭ್ಯಾಸಗತವಾಗಿ ಬಂದುಬಿಟ್ಟಿದೆ. ಇನ್ನು ಕೆಲವು ಸತ್ಯಗಳು ತಾವಾಗಿ ಆತನಿಗೆ ಅಸ್ಪಷ್ಟವಾಗಿ ತುಂಬ ದೂರದಲ್ಲಿ ಎಂಬಂತೆ ಕಾಣಿಸಿಕೊಂಡಿವೆ. ಮೊದಲನೆಯದನ್ನು ತಿರಸ್ಕರಿಸಲು ಅಥವಾ ಎರಡನೆಯದನ್ನು ಒಪ್ಪಲು ಮನುಷ್ಯನಿಗೆ ಇನ್ನೂ ಸ್ವಾತಂತ್ರ್ಯವಿಲ್ಲ. ಆದರೆ ಮೂರನೆಯ ಬಗೆಯ ಕೆಲವು ಸತ್ಯಗಳಿವೆ. ಇವು ಇನ್ನೂ ನಮಗೆ ಅರಿವಾಗದಂತೆ, ಕಾರ್ಯಗಳಿಗೆ ಪ್ರೇರಣೆ ಕೊಡುವಂಥವಾಗಿಲ್ಲ. ಆದರೂ ಅವು ಅವನಿಗೆ ಎಷ್ಟು ಚೆನ್ನಾಗಿ ಅರಿವಿಗೆ ನಿಲುಕಿವೆ ಎಂದರೆ ಆತ ಅವುಗಳನ್ನು ಉಪೇಕ್ಷಿಸಲಾರ. ಆತ ಅನಿವಾರ್ಯವಾಗಿ ಅವುಗಳ ಬಗೆಗೆ ಏನಾದರೊಂದು ಧೋರಣೆ ತಾಳಲೇಬೇಕಾಗಿದೆ. ಅವುಗಳನ್ನು ಖಚಿತವಾಗಿ ಒಪ್ಪಬೇಕಾಗಿದೆ ಅಥವಾ ತಿರಸ್ಕರಿಸಬೇಕಾಗಿದೆ. ಇಂಥ ಸತ್ಯಗಳ ವಿಚಾರವಾಗಿ ಹೇಳುವುದಾದರೆ ಮನುಷ್ಯನ ಸ್ವಾತಂತ್ರ್ಯ ಪ್ರಕಟವಾಗುವುದು ಇಲ್ಲಿಯೇ. ಸತ್ಯದ ವಿಚಾರಕ್ಕೆ ಸಂಬಂಧಿಸಿದಂತೆ ತೀರ್ಮಾನ ಕೈಗೊಳ್ಳಬೇಕಾದಾಗ ಪ್ರತಿಯೊಬ್ಬನೂ ಪಕ್ಕದಲ್ಲಿ ಲಾಟೀನು ಹಿಡಿದು ಕತ್ತಲಲ್ಲಿ ಹೊರಡುವ ಪಯಣಿಗನಂತೆ ಕಾಣುತ್ತಾನೆ. ಲಾಟೀನಿನ ಬೆಳಕು ಯಾವುದನ್ನು ಬೆಳಗಿಸಿದೆ ಎಂಬುದೂ ಅವನಿಗೆ ಗೊತ್ತಾಗುವುದಿಲ್ಲ. ಅಥವಾ ಕತ್ತಲಲ್ಲಿ ತನ್ನ ಗಮನಕ್ಕೆ ಯಾವುದು ಬರಲಿಲ್ಲ ಎಂಬುದೂ ಅವನಿಗೆ ಗೊತ್ತಾಗುವುದಿಲ್ಲ. ತನ್ನ ಸಂಬಂಧವನ್ನು ಯಾವುದರೊಂದಿಗೆ ಕೂಡಿಸಿಕೊಳ್ಳಬೇಕೆಂಬುದು ಅವನಿಗೆ ತಿಳಿಯುವುದಿಲ್ಲ. ಆದರೆ ಇಷ್ಟು ನಿಜ. ಅವನು ಎಲ್ಲೇ ಇರಲಿ, ಲಾಟೀನು ತೋರಿಸಿದ ಬೆಳಕು ಎಷ್ಟು ಎಂಬುದು ಖಚಿತವಾಗಿ ಅವನಿಗೆ ಗೊತ್ತಿರುತ್ತದೆ. ದಾರಿಯ ಯಾವ ಬದಿಯಲ್ಲಿ ಹೋಗಬೇಕೆಂದು ತೀರ್ಮಾನಿಸುವ ಸ್ವಾತಂತ್ರ್ಯ ಆತನಿಗುಂಟು.

ಮನುಷ್ಯನ ಅನುಭವಕ್ಕೆ ಇನ್ನೂ ನಿಲುಕದಿರುವ ಸತ್ಯಗಳೆಷ್ಟೋ ಇವೆ. ಆತ ಬಳಸಿ ಹಳೆಯದಾಗಿರುವ ಸತ್ಯಗಳೂ ಹಲವಾರಿವೆ. ಮರೆತು ಹೊಂದಾಣಿಸಿಕೊಂಡ

ಸತ್ಯಗಳೂ ಇವೆ. ಇವೇ ಅಲ್ಲದೆ ಮನುಷ್ಯ ತನ್ನ ವಿಚಾರಶಕ್ತಿಯ ಬೆಳಕಿನಲ್ಲಿ ಹೊಸದಾಗಿ ಉದ್ದೀಪನಗೊಂಡು ಕಣ್ಣಿಗೆ ಬೀಳಲು ಕಾಯುತ್ತಿರುವ ಸತ್ಯಗಳೂ ಇವೆ. ಈ ಸತ್ಯಗಳನ್ನು ತಿರಸ್ಕರಿಸುವುದರಲ್ಲಿ ಅಥವಾ ಪುರಸ್ಕರಿಸುವುದರಲ್ಲಿ ನಮ್ಮ ಸ್ವಾತಂತ್ರ್ಯಪ್ರಜ್ಞೆ ಮಿಂಚುತ್ತದೆ.

ಸತ್ಯದ ವಿಚಾರ ಪ್ರಸ್ತಾಪಬಂದಾಗ ಜನ ತಮ್ಮದು ಸ್ಥಿರವಾದ ಮತ್ತು ಒಂದಕ್ಕೆ ಅಂಟಿಕೊಂಡ ಸತ್ಯವೆಂದು ಹೇಳಿಬಿಡುತ್ತಾರೆ. ಅನೇಕ ತೊಡಕುಗಳು ಬರುವುದು ಇದರಿಂದಲೇ. ಮನುಷ್ಯನ ಸ್ವಾತಂತ್ರ್ಯದ ಪ್ರಶ್ನೆ ಅಪರಿಹಾರ್ಯವೆಂಬಂತೆ ಕಾಣುವುದು ಇದರಿಂದಲೇ.

ಮನುಷ್ಯ ಅವಿಚಲಿತ ನಿಸ್ಪೃಹವಾದ ಪಕ್ಷಕ್ಕೆ ಖಂಡಿತವಾಗಿ ಆತ ಮುಕ್ತನಲ್ಲ ಎಂದು ಹೇಳಬಹುದು. ಮನುಷ್ಯನ ಮತ್ತು ಮಾನವತೆಯ ಜೀವನ ಒಂದು ಅಖಂಡವಾದ ಸ್ರೋತವೆಂದೂ ಕತ್ತಲಿಂದ ಬೆಳಕಿನೆಡೆಗೆ ಸಾಗುತ್ತಿದೆಯೆಂದೂ ನಾವು ಮರೆಯದೇ ತಿಳಿಯಬೇಕು. ಸತ್ಯದ ಕೆಳಮಟ್ಟಲಿನಿಂದ ಹಿಡಿದು ಇನ್ನೂ ಉನ್ನತ ಮಟ್ಟದವರೆಗೆ ತಪ್ಪುಗಳಿಂದ ಹಿಡಿದು ಎಲ್ಲ ತಪ್ಪುಗಳಿಂದ ಮುಕ್ತವಾಗುವವರೆಗೆ ಸತ್ಯ ಹರಡಿಕೊಂಡಿದೆ.

ಸತ್ಯವೇ ತಿಳಿಯದಿದ್ದ ಪಕ್ಷದಲ್ಲಿ ಮನುಷ್ಯ ಮುಕ್ತನಾಗುತ್ತಿರಲಿಲ್ಲ, ಅಥವಾ ಆ ಅಖಂಡ ಸತ್ಯ ಯಾವ ತಪ್ಪಿನ ಮಿಶ್ರಣವೂ ಇಲ್ಲದ ಶುದ್ಧ ಸ್ವರೂಪದಲ್ಲಿ ಸಿಕ್ಕಿಬಿಟ್ಟಿದ್ದರೆ ಸಿಕ್ಕಿ ಬದುಕನ್ನು ನಡೆಸಿದ್ದರೆ ಆಗಲೂ ಆತ ಮುಕ್ತನಾಗುತ್ತಿರಲಿಲ್ಲ, ಸ್ವಾತಂತ್ರ್ಯದ ಕಲ್ಪನೆಯೇ ಅವನಿಗೆ ಬರುತ್ತಿರಲಿಲ್ಲ.

ಆದರೆ ಮನುಷ್ಯನಿಗೆ ಸತ್ಯದ ವಿಚಾರ ಇನ್ನೂ ಸ್ಥಿರವಾಗಿಲ್ಲ. ಬದುಕು ಸಾಗಿದಂತೆಲ್ಲಾ ಪ್ರತಿವ್ಯಕ್ತಿ ಮತ್ತು ಮಾನವತೆ ಹೆಚ್ಚುಹೆಚ್ಚಿನ ಪ್ರಮಾಣದಲ್ಲಿ ಸತ್ಯದ ವಿಚಾರಗಳನ್ನು ತಿಳಿಯುತ್ತಾ ಹೋಗುತ್ತಾರೆ, ಮತ್ತು ತಪ್ಪಿನಿಂದ ಇನ್ನಷ್ಟು ಇನ್ನಷ್ಟು ದೂರವಿರುವುದನ್ನು ಕಲಿಯುತ್ತಾರೆ.

ಈ ಕಾರಣಗಳಿಂದ ಮಾನವ ಸತ್ಯದೊಂದಿಗೆ ಮೂರು ಬಗೆಯ ಸಂಬಂಧ ಹೊಂದಿದ್ದಾನೆಂದು ಹೇಳಬಹುದು. ಕೆಲವು ಸತ್ಯಗಳು ಈಗಾಗಲೇ ಎಷ್ಟೊಂದು ರಕ್ತಗತವಾಗಿವೆಯೆಂದರೆ ಅವರ ವರ್ತನೆಗಳಿಗೆ ಅವು ಅಗೋಚರ ಮೂಲಕಾರಣಗಳಾಗಿಬಿಟ್ಟಿವೆ. ಉಳಿದ ಸತ್ಯಗಳು ಇನ್ನೂ ನಮ್ಮ ಅನುಭವದ ತೆಕ್ಕೆಗೆ ಈಗೀಗ ಸಿಗಲಾರಂಭಿಸಿವೆ. ಮೂರನೆಯ ಬಗೆಯ ಸತ್ಯ ನಮಗೆ ಇನ್ನೂ ಹೊಂದಿಕೊಂಡಿಲ್ಲದಿದ್ದರೂ ನಮ್ಮ ಗಮನವನ್ನು ಒಂದಲ್ಲ ಒಂದು ವಿಧದಲ್ಲಿ ಸೆಳೆಯಬಲ್ಲ ಮಟ್ಟಿಗೆ ಖಚಿತವಾದ ರೂಪದಲ್ಲಿ ನಮಗೆ ಕಾಣಿಸಿಕೊಂಡಿವೆ. ಅವುಗಳನ್ನು ಒಪ್ಪುವುದು ಅಥವಾ ಬಿಡುವುದು ನಮಗೆ ಸೇರಿದ್ದು.

ಈ ಬಗೆಯ ಅಂಗೀಕಾರ ಇಲ್ಲವೇ ಬಿಡುವಿಕೆಯ ವಿಚಾರದಲ್ಲಿ ಮನುಷ್ಯ ಸ್ವತಂತ್ರ.

ಸ್ವತಂತ್ರ ವರ್ತನೆ ಎಂದ ಮಾತ್ರಕ್ಕೆ ಸ್ವೇಚ್ಛೆಯಿಂದ ವರ್ತಿಸುವುದು ಎಂದಾಗಲೀ ಗೊತ್ತಾದ ಜೀವನಕ್ರಮಕ್ಕಿಂತ ಭಿನ್ನವಾಗಿರುವುದೆಂದಾಗಲೀ ವ್ಯವಸ್ಥಿತ ಕಾರಣಗಳ ಪ್ರಭಾವಕ್ಕೆ ಸಿಲುಕದೆ ಇರುವುದೆಂದಾಗಲಿ ಅರ್ಥವಲ್ಲ. ದೇವರಿಂದ ಅಥವಾ ಲೋಕದ ಜೀವನದಿಂದ ಆರಂಭವಾಗಿ ಸತತವಾಗಿ ಅನಂತ ಕಾಲದಿಂದ ಸಾಗಿ ಬಂದಿರುವ ಕಾರ್ಯದಲ್ಲಿ ಸಂತೋಷವಾಗಿ ಭಾಗವಹಿಸುವುದು ಮನುಷ್ಯನಿಗೆ ಸಾಧ್ಯವಾಗಬೇಕಾದರೆ ಆತ ತನಗೆ ಬೋಧೆಯಾಗಿರುವ ಸತ್ಯವನ್ನು ಗುರುತಿಸುವ, ಘೋಷಿಸುವ ಕಾರ್ಯದಲ್ಲಿ ತೊಡಗಬೇಕು. ಅಥವಾ ಆ ಸತ್ಯವನ್ನು ಗುರುತಿಸುವ ತಂಟೆಗೇ ಹೋಗದೆ ಸ್ವತಂತ್ರತೆಯ ದಾಸನಾಗಿ ಸಂಕಟದಿಂದ ತನಗಿಷ್ಟವಿಲ್ಲದ ಹಾದಿಯನ್ನು ತುಳಿಯುತ್ತಾ ಸಾಗಬೇಕು.

ಸತ್ಯವು ಮಾನವನ ಬದುಕಿನ ಹಾದಿಯನ್ನು, ಅದು ಸಾಗಬೇಕಾದ ಒಂದೇ ಹಾದಿಯನ್ನು ತೋರಿಸಿಕೊಡುತ್ತದೆ. ಆದ್ದರಿಂದ ಇಷ್ಟವಿರಲಿ ಇಲ್ಲದಿರಲಿ ಎಲ್ಲರೂ ಅನಿವಾರ್ಯವಾಗಿ ಆ ಹಾದಿ ತುಳಿಯಲೇ ಬೇಕು. ಕೆಲವರು ತಾವಾಗಿ, ಬದುಕು ತಮ್ಮ ಮುಂದೆ ಇಟ್ಟಿರುವ ಕೆಲಸವನ್ನು ಮುಗಿಸುತ್ತಾರೆ. ಇನ್ನು ಕೆಲ ವರು ತಮಗೇ ತಿಳಿಯದಂತೆ ಜೀವನದ ನಿಯಮಕ್ಕೆ ಒಳಪಟ್ಟಿರುತ್ತಾರೆ. ಮನುಷ್ಯನ ಸ್ವಾತಂತ್ರ್ಯ ಅಂಥ ಆಯ್ಕೆಯ ವಿಧಕ್ಕೆ ಮಾತ್ರ ಸಂಬಂಧಿಸಿದುದು.

ಇಷ್ಟು ಇಕ್ಕಟ್ಟಿನ ಮಿತಿಗಳಲ್ಲಿ ದೊರೆಯುವ ಸ್ವಾತಂತ್ರ್ಯ ಎಷ್ಟು ಗೌಣವಾಗಿ ಕಾಣುತ್ತದೆಂದರೆ ಜನ ಅದನ್ನು ಬೇಗ ಗುರುತಿಸುವುದೇ ಇಲ್ಲ. ದೃಢ ತೀರ್ಮಾನ ಕೈಗೊಳ್ಳಬಲ್ಲ ಜನ ಅದನ್ನು ತುಂಬ ಸಣ್ಣ ಪ್ರಮಾಣದ್ದೆಂದು ತಿಳಿದು. ಗುರುತಿಸುವ ಕೆಲಸಕ್ಕೇ ಹೋಗುವುದಿಲ್ಲ. ಉಳಿದವರು, ಅಂದರೆ ಪೂರ್ಣ ಸ್ವತಂತ್ರ ಮನೋವಾದಿಗಳು, ತಮಗಿರುವ ಸ್ವಾತಂತ್ರ್ಯ ಏನೇನೂ ಮಹತ್ವದ್ದಲ್ಲವೆಂದು ಭಾವಿಸಿ ಯಾವುದೋ ಇಲ್ಲದ ಸ್ವಾತಂತ್ರ್ಯವನ್ನು ಭ್ರಮಿಸಿಕೊಂಡು ತಮ್ಮಲ್ಲಿ ನಿಜವಾಗಿ ಇರುವಷ್ಟು ಪ್ರಮಾಣದ ಸ್ವಾತಂತ್ರ್ಯವನ್ನೂ ಹಳಿಯುವ ಬುದ್ಧಿಯವರಾಗಿದ್ದಾರೆ. ಸತ್ಯದ ವಿಚಾರವಾಗಿ ಪೂರ್ಣ ಅಜ್ಞಾನ ಮತ್ತು ಸತ್ಯದ ಒಂದು ಮಿತ ಪ್ರಜ್ಞೆ – ಈ ಎರಡು ನೆಲೆಗಳ ಮಧ್ಯೆ ಇರುವ ಸ್ವಾತಂತ್ರ್ಯ ಕೆಲವರಿಗೆ ಸ್ವಾತಂತ್ರ್ಯ ಎಂದೇ ಅನ್ನಿಸುವುದಿಲ್ಲ. ಆದರೆ ಸತ್ಯವನ್ನು ಗುರುತಿಸಲು ಇಷ್ಟವಿರಲಿ ಇಲ್ಲದಿರಲಿ ಮನುಷ್ಯ ಜೀವನದಲ್ಲಿ ತನಗೆ ಬೋಧೆಯಾಗುವ ಸತ್ಯವನ್ನು ಅಂಗೀಕರಿಸುವುದು ಅನಿವಾರ್ಯವಾಗಿದೆ.

ಬೇರೆ ಕುದುರೆಗಳ ಜತೆಯಲ್ಲಿ ಗಾಡಿಗೆ ಹೂಡಲಾದ ಒಂದು ಕುದುರೆ ಮುಂದೆ ಚಲಿಸದೆ ಇರಲು ಸಾಧ್ಯವಿಲ್ಲ. ಅದು ಮುಂದೆ ಚಲಿಸದೆ ನಿಂತುಬಿಟ್ಟರೆ ಗಾಡಿ ಅದರ ಕಾಲಿಗೆ ತಗಲಿ ಮುನ್ನುಗ್ಗುವಂತೆ ಮಾಡುತ್ತದೆ. ಅಂದರೆ ಕುದುರೆ ಗಾಡಿಯನ್ನು

ಎಳೆಯಬೇಕು ಅಥವಾ ಗಾಡಿಯಿಂದ ಮುಂದೆ ತಳ್ಳಿಸಿಕೊಳ್ಳಬೇಕು. ಮನುಷ್ಯನ ಸ್ಥಿತಿಯೂ ಹೀಗೆಯೇ.

ನಾವು ಭ್ರಮಿಸಿಕೊಂಡಿರುವ ಸ್ವಾತಂತ್ರ್ಯದೊಂದಿಗೆ ಹೋಲಿಸಿದಾಗ ನಮಗೆ ಒದಗುವ ಸ್ವಾತಂತ್ರ್ಯ ಸಣ್ಣದಿರಲಿ ದೊಡ್ಡದಿರಲಿ ಅದು ಮುಖ್ಯವಲ್ಲ. ಖಚಿತವಾಗಿ ನಮ್ಮ ಎದುರಿಗೆ ಇರುವುದು ಅದೊಂದೇ ಸ್ವಾತಂತ್ರ್ಯ. ಮನುಷ್ಯನ ಎಲ್ಲಾ ಸೌಖ್ಯಗಳೂ ಅದರಲ್ಲೇ ಅಡಗಿವೆ.

ಆ ಸ್ವಾತಂತ್ರ್ಯ ಮನುಷ್ಯನ ಏಳಿಗೆಗೆ ಸಹಕಾರಿಯಾಗಿದೆ. ಜಗತ್ತಿನ ಜೀವ ಕಾರ್ಯದಲ್ಲಿ ಸಹಕರಿಸುತ್ತಿರುವುದು ಅದೊಂದೆ.

ಸ್ವತಂತ್ರವಲ್ಲದ ಕ್ಷೇತ್ರದಲ್ಲಿ ಅಂದರೆ ಕಾರ್ಯಗಳ ಕ್ಷೇತ್ರದಲ್ಲಿ ಜೀವನದ ಅರ್ಥವನ್ನು ಹುಡುಕಲು ಹೊರಡುವ ಮನುಷ್ಯ ನೈಜ ಜೀವನದಿಂದ ವಂಚಿತನಾಗುತ್ತಾನೆ – ಎಂದು ಕ್ರಿಸ್ತನು ಹೇಳಿದ್ದಾನೆ. ಕ್ರೈಸ್ತ ತತ್ವದ ಪ್ರಕಾರ ಸ್ವತಂತ್ರ ಕ್ಷೇತ್ರಕ್ಕೆ ಯಾವನು ತನ್ನ ಬದುಕನ್ನು ಬದಲಾಯಿಸಿಕೊಂಡಿರುತ್ತಾನೋ. ಅಂಥವನಲ್ಲಿ ಮಾತ್ರ ನೈಜ ಜೀವನವಿರುತ್ತದೆ. ಅದು ಕಾರಣದ ಕ್ಷೇತ್ರ ಅಂದರೆ ಅರಿವಿಗೆ ನಿಲುಕುತ್ತಿರುವ ಸತ್ಯದ ತಿಳಿವಳಿಕೆ ಮತ್ತು ಅದನ್ನು ಗುರುತಿಸುವಿಕೆ. ಅದನ್ನು ಹೊಂದಿರುವ ಮನುಷ್ಯ ಅನಿವಾರ್ಯವಾಗಿ ಕುದುರೆಯ ಹಿಂದೆ ಗಾಡಿ ಹೊರಡುವ ಹಾಗೆ ಸತ್ಯದ ದಾರಿಯಲ್ಲಿ, ನಡೆಯುತ್ತಾನೆ.

ಮನುಷ್ಯನ ಜೀವನ ಬರಿಯ ಲೌಕಿಕ ವ್ಯವಹಾರಗಳಲ್ಲೇ ಇದ್ದರೆ ಆತ ತನ್ನಿಂದ ಹೊರಗಿನ ಐಹಿಕ ಮತ್ತು ಪ್ರಾದೇಶಿಕ ಕಾರಣಗಳಿಗೆ ಸಂಬಂಧಿಸಿದ ಸಂಗತಿಗಳಲ್ಲೇ ಆಸಕ್ತನಾಗಿರುತ್ತಾನೆ. ಅಂದರೆ ಆತ ನಿಜವಾಗಿ ತನ್ನದೇ ಆದ ಯಾವ ಕೆಲಸವನ್ನೂ ಮಾಡುವುದಿಲ್ಲ. ಅವನ ಚರ್ಯೆಗಳೆಲ್ಲಾ ಬರಿಯ ಆತ್ಮವಂಚನೆ. ತಾನು ಮಾಡುತ್ತಿದ್ದೇನೆ ಎಂದು ಯಾವುದನ್ನು ಆತ ಭಾವಿಸಿದ್ದಾನೋ ಅದು ನಿಜವಾಗಿ ಅವನ ಕೆಲಸವಲ್ಲ. ಬೇರೊಂದು ಪ್ರಬಲ ಶಕ್ತಿ ಅವನಿಂದ ಆ ಕೆಲಸವನ್ನು ಮಾಡಿಸುತ್ತಿರುತ್ತದೆ. ಆದ್ದರಿಂದ ಆತ ಬದುಕಿನ ಸೃಷ್ಟಿಗಾರನಲ್ಲ. ಅದರ ಗುಲಾಮ. ಆದರೆ ತನಗೆ ಬೋಧೆಯಾಗುತ್ತಿರುವ ಸತ್ಯದ ಅಂಗೀಕರಣ ಮತ್ತು ಗುರುತಿಸುವಿಕೆಗಳಿಗೆ ಬದುಕು ಅಧೀನವಾಗಿದೆ ಎಂದು ಒಪ್ಪಿಕೊಂಡರೆ ಆಗ ಆತ ವಿಶ್ವಜೀವನದ ಮೂಲದೊಂದಿಗೆ ತನ್ನ ವ್ಯಕ್ತಿತ್ವವನ್ನು ಗುರುತಿಸಿಕೊಳ್ಳಬಲ್ಲ ಶಕ್ತಿಯನ್ನು ಪಡೆಯುತ್ತಾನೆ. ಆಗ ಕಾಲದೇಶಗಳಿಗೆ ಬದ್ಧವಾಗದ ಕಾರ್ಯಗಳನ್ನು ಮಾಡುತ್ತಾನೆ ಹೊರಗಿನ ಕಾರಣಗಳ ಹಿಡಿತಕ್ಕೆ ಸಿಕ್ಕದ ಕಾರ್ಯಗಳನ್ನು ಮಾಡುತ್ತಾನೆ. ಅಂಥ ಕೆಲಸಗಳಿಗೆ ಅನಂತವಾದ, ಸೀಮಾತೀತವಾದ ಮಹತ್ವವಿದೆ.

ಜೀವನದಲ್ಲಿ ಅನಾಗರಿಕ ಕಲ್ಪನೆಯುಳ್ಳ ಜನರಿದ್ದಾರೆ. ಸತ್ಯವನ್ನು ಗುರುತಿಸುವ ಹೇಳುವ ನೈಜ ಜೀವನದ ತಿರುಳನ್ನು ಇವರು ನಿರ್ಲಕ್ಷಿಸುತ್ತಾರೆ. ಬರೀ ಹೊರಗಿನ

ಕೃತ್ಯಗಳಿಂದಲೇ ತಮ್ಮ ವೈಯಕ್ತಿಕ ಬದುಕನ್ನು ಬಲಪಡಿಸಿಕೊಳ್ಳಲು ಇವರು ಎಲ್ಲ ಬಗೆಯ ಬದುಕನ್ನು ಮಾಡುತ್ತಾರೆ. ಇಂಥವರನ್ನು ಆವಿಯ ಜಹಜಿ (ಸ್ಟೀಮರ್)ನ ಮೇಲಿನ ಜನರಿಗೆ ಹೋಲಿಸಬಹುದು. ಈ ಜನ ತಾವು ಜಾಗ ಸೇರಿಕೊಳ್ಳಬೇಕೆಂಬ ಅವಸರದಲ್ಲಿ ಹುಟ್ಟುಹಾಕುವ ಜನಗಳಿಗೆ ಅಡ್ಡಿಯಾಗುತ್ತದೆಂಬ ಕಾರಣದಿಂದ ಬಾಯಿಲರನ್ನು ತಣ್ಣಗೆ ಮಾಡುತ್ತಾರೆ. ಮುಂದೆ ಬಿರುಗಾಳಿ ಬಂದಾಗ ಆವಿಯನ್ನು ನಂಬುವ ಬದಲು ಹುಟ್ಟುಹಾಕುವುದರ ಮೂಲಕವೇ ಹಡಗನ್ನು ನಡೆಸಲು ಯತ್ನಿಸುತ್ತಾರೆ. ಆದರೆ ಆ ಹುಟ್ಟುಗಳು ನೀರಿನೊಳಕ್ಕೆ ಹೋಗುವಷ್ಟು ಉದ್ದವಾಗಿರುವುದಿಲ್ಲ.

ಕಷ್ಟಪಟ್ಟು ಸಾಧಿಸಿಕೊಂಡರೆ ಮಾತ್ರ ದೇವರ ರಾಜ್ಯ ಸುಲಭವಾಗಿ ದಕ್ಕುತ್ತದೆ. ಅಂಥ ಪ್ರಯತ್ನ ಮಾಡಿದವರು ಮಾತ್ರ ದೇವರ ರಾಜ್ಯಕ್ಕೆ ಪ್ರವೇಶಮಾಡಬಲ್ಲರು. ಹೀಗೆ ಹೊರಗಿನ ಸ್ಥಿತಿಗತಿಗಳ ಮಟ್ಟದಿಂದ ಮೇಲಕ್ಕೆ ಏಳಲು ನಿಷ್ಠೆಯಿಂದ ಪ್ರಯತ್ನ ಮಾಡಿ ಸತ್ಯದ ನೆಲೆಯನ್ನು ಸೇರಲು ಯಾರಿಗೆ ಸಾಧ್ಯವೋ ಅಂಥವರು ದೇವರ ರಾಜ್ಯವನ್ನು ಪಡೆಯಬಲ್ಲರು. ಈ ಪ್ರಯತ್ನ ನಮ್ಮ ಕಾಲದಲ್ಲೇ ನಡೆಯಬೇಕಾಗಿದೆ. ಹಾಗೆ ನಡೆಯುವುದು ಸಾಧ್ಯ.

ಜನಕ್ಕೆ ಇದು ಅರ್ಥವಾಗಬೇಕು ಅಷ್ಟೆ. ಸಾಧಾರಣವಾದ ಮತ್ತು ಹೊರಗಿನ ಸಂಗತಿಗಳಲ್ಲಿ ತಮಗೆ ಸ್ವಾತಂತ್ರ್ಯವಿಲ್ಲ ಎಂದುಕೊಂಡು ಗೊಂದಲಕ್ಕೆ ಒಳಗಾಗುವುದನ್ನು ಅವರು ನಿಲ್ಲಿಸಬೇಕು. ಲೌಕಿಕ ಸಂಗತಿಗಳಿಗಾಗಿ ಅವರು ವ್ಯಯಮಾಡುವ ಶಕ್ತಿಯಲ್ಲಿ ನೂರನೆಯ ಒಂದು ಭಾಗದಷ್ಟನ್ನಾದರೂ, ಈ ಸತ್ಯಕಾರ್ಯಕ್ಕೆ ಮೀಸಲಿಡಬೇಕು. ಅಂದರೆ ತಮ್ಮ ಮುಂದಿರುವ ಸತ್ಯವನ್ನು ಗುರುತಿಸಿ ಅರ್ಥಮಾಡಿಕೊಳ್ಳುವುದು ಮತ್ತು ಆ ಸತ್ಯದ ಮುಖವನ್ನೇ ಮುಚ್ಚಿರುವ ಸುಳ್ಳು ಮತ್ತು ಕಪಟಾಚಾರಗಳಿಂದ ಬಿಡುಗಡೆ ಹೊಂದುವುದು ಮುಖ್ಯ. ಆಗ ಮಾತ್ರ ದೇವರ ರಾಜ್ಯ ಅಥವಾ ಜನ ಈಗ ತಮ್ಮ ಪ್ರಜ್ಞೆಯಲ್ಲಿ ಗುರುತಿಸಿರುವ ಅದರ ಮೊದಲ ಘಟ್ಟ ಸಾಧಿತವಾಗಬಲ್ಲದು.

ಉಪ್ಪಿನಲ್ಲಿ ಪೂರ್ಣವಾಗಿ ನೆಂದ ದ್ರಾವಕವು ಒಂದೇ ಕುಲುಕಿಗೆ ಹೇಗೆ ಹರಳಾಗಿ ಬಿಡುತ್ತದೋ ಹಾಗೆಯೇ ಮನುಷ್ಯರಿಗೆ ಗೊತ್ತಿರುವ ಸತ್ಯವನ್ನು ವಿಸ್ತರಿಸುವ ಒಂದು ಸಣ್ಣ ಪ್ರಯತ್ನ ನಡೆದರೆ ಸಾಕು. ಆಗ ನೂರಾರು ಸಾವಿರಾರು, ಲಕ್ಷಾಂತರ ಜನ ಅದರಿಂದ ಪ್ರಭಾವಿತರಾಗುತ್ತಾರೆ. ನಮ್ಮ ಪ್ರಜ್ಞೆಗೆ ಸಮಾನವಾದ ಸಾರ್ವಜನಿಕ ಅಭಿಪ್ರಾಯ ರೂಪುಗೊಳ್ಳುತ್ತದೆ. ಬದುಕಿನ ವ್ಯವಸ್ಥೆಯೇ ಬದಲಾಗುತ್ತದೆ. ಇಂಥದೊಂದು ಪ್ರಯತ್ನವನ್ನು ಮಾಡುವುದು ನಮ್ಮ ಕೈಯಲ್ಲಿದೆ.

ನಮ್ಮ ಸುತ್ತಲೂ ಅನೇಕ ಬಗೆಗಳಲ್ಲಿ ಆವರಿಸಿಕೊಂಡು ನಮ್ಮೊಳಗೆ ಪ್ರವೇಶಿಸಲು ಬಯಸುವ ಆ ಕ್ರಿಸ್ತ ಸತ್ಯವನ್ನು ನಮ್ಮಲ್ಲಿ ಪ್ರತಿಯೊಬ್ಬರೂ ಅರ್ಥಮಾಡಿಕೊಂಡು ಅನುಷ್ಠಾನಕ್ಕೆ ತರುವುದಾದರೆ ಎಷ್ಟು ಚೆನ್ನ. ಅಥವಾ ನಮಗೆ ಈ ಸತ್ಯ ಗೋಚರಿಸುವುದೇ

ಇಲ್ಲ ಎಂದು ಸುಳ್ಳು ಹೇಳುವುದನ್ನು, ಸೋಗು ಹಾಕುವುದನ್ನು ನಿಲ್ಲಿಸಿದರೂ ಸಾಕು. ನಮ್ಮನ್ನು ಪ್ರೇರಿಸುತ್ತಿರುವ ಆ ಮಹಾ ಸತ್ಯವನ್ನು ನಾವು ಧೈರ್ಯವಾಗಿ ಒಪ್ಪಿಕೊಂಡು ಘೋಷಿಸಿದರೂ ಸಾಕು. ಆಗ ನಮ್ಮಂತೆಯೇ ಲಕ್ಷಾಂತರ ಜನ ಸತ್ಯವನ್ನು ಕಾಣುತ್ತಿದ್ದಾರೆ. ಇತರರು ಅದನ್ನು ಗುರುತಿಸಲಿ ಎಂದು ಕಾಯುತ್ತಿದ್ದಾರೆ ಎಂಬ ಅಂಶ ತಿಳಿದು ಬರುತ್ತದೆ.

ಜನರಲ್ಲಿ ಸೋಗಿನ ಬುದ್ಧಿ ನಿಲ್ಲಬೇಕು. ಆಗ ಈ ಕ್ರೂರ ಸಾಮಾಜಿಕ ವ್ಯವಸ್ಥೆ, ಇವೆಲ್ಲಾ ದೇವರು ನಿರ್ಮಿಸಿದ್ದು ಭದ್ರವಾದದ್ದು. ಅಪ್ರತಿಹತವಾದದ್ದು. ಪವಿತ್ರವಾದದ್ದು ಎಂಬ ಭಾವನೆ ತರುವ ಈ ಸಾಮಾಜಿಕ ವ್ಯವಸ್ಥೆ ಬುಡದಲ್ಲಿ ಅಲುಗಾಡುತ್ತಿದೆ, ಕೇವಲ ನಮ್ಮ ಸೋಗು ಸುಳ್ಳುಗಳ ಬೆಂಬಲದ ಮೇಲೆ ಮಾತ್ರ ಸದ್ಯಕ್ಕೆ ನಿಂತುಕೊಂಡಿದೆ ಎಂಬ ಅಂಶ ಗೊತ್ತಾಗುತ್ತದೆ.

ಆದರೆ ಈಗಿನ ಜೀವನ ವ್ಯವಸ್ಥೆಯನ್ನು ನಾಶಪಡಿಸುವುದು ನಮ್ಮನ್ನು ಅವಲಂಬಿಸಿದೆ ಎಂಬುದು ನಿಜವಾದರೆ ಅದರ ಬದಲಿಗೆ ಏನಿಡಬೇಕು ಎಂಬುದು ಖಚಿತವಾಗದೆ ಅದನ್ನು ಹಾಳುಮಾಡಲು ನಮಗೆ ಏನು ಹಕ್ಕಿದೆ? ಈಗಿನ ವ್ಯವಸ್ಥೆ ಕುಸಿದುಬಿದ್ದರೆ ಜಗತ್ತಿಗೆ ಏನಾದೀತು? "ನಾವು ಬಿಟ್ಟುಹೋಗುವ ಈ ಜಗತ್ತಿನ ಗೋಡೆಗಳ ಆಚೆ ಏನು ಉಳಿದೀತು"?

"ಆಗ ರೌದ್ರತೆ – ಒಂದು ಬಗೆಯ ಶೂನ್ಯ ಸ್ವಾತಂತ್ರ್ಯ ಎಲ್ಲಾ ಇದ್ದೀತು……… ಮುಂದೇನು ಎಂದು ತಿಳಿಯದೆ, ಎಲ್ಲಿಗೆ ಎಂದು ಗೊತ್ತಿಲ್ಲದೆ, ನಾವು ಮುಂದುವರಿಯುವುದಾದರೂ ಹೇಗೆ? ಮುಂದೆ ನಮಗೆ ಏನು ಸಿಕ್ಕುತ್ತದೆ ಎಂಬುದೂ ತಿಳಿಯದಿದ್ದಾಗ ನಮ್ಮಲ್ಲಿ ಇರುವುದನ್ನೆಲ್ಲಾ ಬಿಡುವುದು ಹೇಗೆ? ……"[18]

ಕೊಲಂಬಸ್ ಹೀಗೆಲ್ಲಾ ಯೋಚಿಸಿದ್ದರೆ ಅವನು ಲಂಗರು ಎತ್ತಿ ಹೊರಡುತ್ತಲೇ ಇರಲಿಲ್ಲ. ದಾರಿಯೇ ಗೊತ್ತಿಲ್ಲದೆ ಸಮುದ್ರದಲ್ಲಿ ಪ್ರಯಾಣ ಹೊರಡುವುದು, ಇದುವರೆಗೂ ಹೋಗಿಲ್ಲದ ಸಮುದ್ರದ ದಾರಿಯಲ್ಲಿ ಪ್ರಯಾಣ ಹೊರಡುವುದು. ಗೊತ್ತಿಲ್ಲದ ಭೂಮಿಯನ್ನು ನೆಚ್ಚಿಕೊಂಡು ಹೋಗುವುದು ಇವೆಲ್ಲಾ ಹುಚ್ಚು ಪ್ರಯತ್ನಗಳಲ್ಲವೇ? ಆದರೆ ಇಂಥ ಹುಚ್ಚು ಇದ್ದುದರಿಂದಲೇ ಅವನು ಹೊಸ ಜಗತ್ತನ್ನು ಕಂಡುಹಿಡಿದ. ಚೆನ್ನಾಗಿ ಅಲಂಕರಿಸಿದ ಒಂದು ಕೋಣೆಯಿಂದ ಇನ್ನಷ್ಟು ಒಳ್ಳೆಯ ಕೋಣೆಗೆ ಬದಲಾಯಿಸುವಷ್ಟು ಸುಲಭವಾಗಿ ಜಗತ್ತಿನ ರಾಷ್ಟ್ರಗಳು ಮುಂದುವರಿಯಬಲ್ಲವಾದರೆ ಎಷ್ಟು ಚೆನ್ನ. ಆದರೆ ಹೊಸ ಮನೆಗಳನ್ನು ಸಿದ್ಧಪಡಿಸಲು ಯಾರೂ ಮುಂದೆ ಬರುವುದಿಲ್ಲ. ಅದೇ ದೊಡ್ಡ

---

18 ಹೆರ್‌ಜನ್‌ನ ಗ್ರಂಥದಿಂದ ಸಂಪುಟ 5, ಪುಟ 55.

ತೊಡಕು. ಸಮುದ್ರದ ಪ್ರಯಾಣಕ್ಕಿಂತ ಭವಿಷ್ಯದ ದಿಕ್ಕಿನಲ್ಲಿ ಮಾಡುವ ಪ್ರಯಾಣ ಕಷ್ಟಕರವಾದದ್ದು. ಅಲ್ಲಿ ಏನುಂಟೋ ಗೊತ್ತಿಲ್ಲ. ಜನ ಹೇಗೆ ಸಿದ್ಧಪಡಿಸುತ್ತಾರೋ ಸನ್ನಿವೇಶಗಳು ಹೇಗೆ ಬರುತ್ತವೆಯೋ ಹಾಗೆ ಭವಿಷ್ಯ ನಿರ್ಧಾರವಾಗುತ್ತದೆ.

'ಹಳೆಯ ಜಗತ್ತೇ ನಮಗೆ ತುಂಬ ತೃಪ್ತಿಕೊಟ್ಟಿದ್ದರೆ ಅದನ್ನು ಉಳಿಸಿಕೊಳ್ಳಲು ಪ್ರಯತ್ನಿಸಿ. ಆದರೆ ಅದು ತುಂಬ ಮುದಿಯಾಗಿ ಜೀರ್ಣಾವಸ್ಥೆಯಲ್ಲಿರುವುದರಿಂದ ಹೆಚ್ಚುಕಾಲ ಉಳಿಯಲಾರದು. ಆದರೆ ನಿಮ್ಮ ಜೀವನ ಮತ್ತು ನಿಮ್ಮ ನಂಬಿಕೆಗಳು ಪರಸ್ಪರ ವಿರುದ್ಧ ದಿಕ್ಕಿನಲ್ಲಿ ಸಾಗುವುದು ನಿಮಗೆ ಬೇಕಿಲ್ಲವಾದರೆ ಯೋಚಿಸುವುದೊಂದು ಮಾಡುವುದೊಂದು ಹೀಗೆ ಮಾಡಬೇಡಿ. ಧೈರ್ಯ ತೆಗೆದುಕೊಂಡು ನಿಮ್ಮ ಹಳೆಯ ಬಣ್ಣ ಹಚ್ಚಿದ ಕಂದಾಚಾರಗಳನ್ನೆಲ್ಲಾ ಬಿಟ್ಟುಬಿಡಿ. ಇದು ಅಷ್ಟು ಸುಲಭವಲ್ಲ ಎಂಬುದು ನಮಗೆ ಗೊತ್ತು. ತಾನು ಹುಟ್ಟಿದಂದಿನಿಂದ ಪರಿಚಯ ಮಾಡಿಕೊಂಡಿರುವ ಮತ್ತು ಪ್ರಬುದ್ಧತೆ ಪಡೆಯಲು ಸಹಾಯಕವಾಗಿರುವ ಎಲ್ಲವನ್ನೂ ಬಿಟ್ಟುಬಿಡುವುದು ಅಷ್ಟು ಸುಲಭವಲ್ಲ. ಮನುಷ್ಯರು ಎಂಥ ಭಯಂಕರವಾದ ತ್ಯಾಗಗಳಿಗೂ ಸಿದ್ಧರಾಗುತ್ತಾರೆ. ಆದರೆ ಹೊಸರೀತಿಯ ಬದುಕು ಬೇಡುವ ತ್ಯಾಗಗಳನ್ನು ಅವರು ಮಾಡಲಾರರು. ಈಗಿನ ನಾಗರಿಕತೆ, ಜೀವನ ಪದ್ಧತಿ, ಧರ್ಮ ಮತ್ತು ಅಂಗೀಕೃತವಾಗಿರುವ ನೈತಿಕ ಸಂಪ್ರದಾಯ ಇವುಗಳನ್ನೆಲ್ಲಾ ಚೆಲ್ಲಿಕೊಡಲು ಮನುಷ್ಯರು ಸಿದ್ಧರಿದ್ದಾರೆಯೇ? ಮುನ್ನೂರು ವರ್ಷಗಳಿಂದ ನಾವು ಸಾಧಿಸಿದ್ದೇವೆ ಎಂದು ಕೊಚ್ಚಿಕೊಳ್ಳುವ ಈ ಸತ್ಫಲಗಳನ್ನೆಲ್ಲಾ ಬಿಟ್ಟುಕೊಡಲು ಮನುಷ್ಯರು ಸಿದ್ಧರಿದ್ದಾರೆಯೇ? ಬದುಕಿನ ಎಲ್ಲ ಅನುಕೂಲಗಳನ್ನೂ ಸುಖಗಳನ್ನೂ ಬಿಟ್ಟುಕೊಟ್ಟು, ಕಟ್ಟಿಬೆಳೆಸಿದ್ದವುಗಳನ್ನೆಲ್ಲಾ ಬಿಟ್ಟುಕೊಟ್ಟು ಹೊಸ ತಾರುಣ್ಯದ ಕಚ್ಚಾ ಪದಾರ್ಥಗಳನ್ನು ಅವರು ಮೆಚ್ಚುತ್ತಾರೆಯೇ? ಒಂದು ಹೊಸಮನೆಗೆ ಅಸ್ತಿವಾರ ಹಾಕೋಣ ಎಂಬ ಸಂತೋಷಕ್ಕಾಗಿ ತಲೆತಲಾಂತರದಿಂದ ಬಂದಿರುವ ಕೋಟೆಯನ್ನು ಹಾಳುಗೆಡವಲು ಅವರು ಒಪ್ಪುತ್ತಾರೆಯೇ? ಹೊಸ ಅಸ್ತಿವಾರದ ಮೇಲೆ ತಮ್ಮ ಜೀವಮಾನದ ಕಾಲದಲ್ಲಂತೂ ಹೊಸ ಕಟ್ಟಡ ಏಳುವುದಿಲ್ಲ ಎಂದು ಗೊತ್ತಾದಾಗ ಅವರು ಇಂಥ ತ್ಯಾಗಕ್ಕೆ ಸಿದ್ಧರಾಗಿದ್ದಾರೆಯೇ?'

ಇದನ್ನು ಅರ್ಧಶತಮಾನದಷ್ಟು ಹಿಂದೆಯೇ ಒಬ್ಬ ರಷ್ಯನ್ ಬರಹಗಾರ ತಿಳಿಸಿದ್ದಾನೆ. ಎಲ್ಲ ವಿಚಾರವಂತ ಜನ ಇಂದು ಯಾವುದನ್ನು ಕಾಣುತ್ತಿದ್ದಾರೋ ಅದನ್ನು ಆತನ ತೀಕ್ಷ್ಣ ಪ್ರತಿಭೆ ಬಹಳ ಹಿಂದೆಯೇ ನಿಚ್ಚಳವಾಗಿ ಗುರುತಿಸಿತ್ತು. ಬದುಕನ್ನು ಹಳೆಯ ಅಸ್ತಿವಾರದಮೇಲೆ ಸಾಗಿಸುವುದು ಕಷ್ಟ. ಹೊಸ ಬದುಕಿನ ನೆಲೆಗಳನ್ನು ನಾವು ರೂಪಿಸಿಕೊಳ್ಳಬೇಕಾಗಿದೆ ಎಂಬ ಸತ್ಯಸಂಗತಿ ಅದು.

ತನ್ನ ಭಾವನೆಯ ತೂಕವನ್ನು ತಡೆದುಕೊಳ್ಳಲಾರದ ಕಟ್ಟಡದಲ್ಲಿ ವಾಸಮಾಡುತ್ತಾನೆ ಎಂಬುದು ಎಂಥ ಹುಚ್ಚುತನ ಎಂಬ ಅಂಶವು ತೀರ ಸಣ್ಣ ಸರಳ ವ್ಯಾವಹಾರಿಕ

ಬುದ್ಧಿಗೆ ಕೂಡ ಗೊತ್ತಾಗುತ್ತದೆ. ಅಂಥ ಮನೆಯನ್ನು ಬಿಡಬೇಕಾದ್ದು ಅನಿವಾರ್ಯ. ಈಗ ಕ್ರೈಸ್ತ ಜಗತ್ತು ಇರುವಷ್ಟು ಕೆಟ್ಟ ಪರಿಸ್ಥಿತಿಯಲ್ಲಿ ಹಿಂದೆಂದೂ ಇರಲಿಲ್ಲ. ಅದರ ರಾಷ್ಟ್ರಗಳು ಒಂದರ ವಿರುದ್ಧ ಒಂದು ಯುದ್ಧ ಸನ್ನದ್ಧವಾಗಿವೆ. ಪ್ರತಿ ದೇಶವೂ ತನ್ನ ಹೆಚ್ಚುತ್ತಿರುವ ಯುದ್ಧೋಪಕರಣಗಳ ವೆಚ್ಚವನ್ನು ಸರಿತೂಗಿಸಲು ತೆರಿಗೆಗಳನ್ನು ಹೆಚ್ಚಿಸುತ್ತಿದೆ. ಮೇಲಾಗಿ ಡೆಮಾಕ್ಲಿಸನ ಕತ್ತಿಯಂತೆ ಯುದ್ಧ ಭೀತಿಯು ಯಾವ ನಿಮಿಷದಲ್ಲೋ ನಮ್ಮ ಮೇಲೆ ಬೀಳಬಹುದು ಎಂಬಹಾಗೆ ಆವರಿಸಿದೆ.

ಈಗ ಚಾಲ್ತಿಯಿರುವ ಜೀವನದ ವ್ಯವಸ್ಥೆ ಅಥವ ಅವ್ಯವಸ್ಥೆಯು ಉಂಟು ಮಾಡುತ್ತಿರುವ ಹಾನಿಗಿಂತ ಹೆಚ್ಚಿನ ಹಾನಿಯನ್ನೇನೂ ಕ್ರಾಂತಿ ಉಂಟುಮಾಡಲಾರದು. ಅಸಹಜವಾದ ಕಷ್ಟಗಳೂ, ಬಡತನ, ಪಾನಮತ್ತತೆ. ವ್ಯಭಿಚಾರ. ಯುದ್ಧದ ಸಂಕಷ್ಟಗಳು – ಇವುಗಳಿಂದ ಒಂದು ವರ್ಷದಲ್ಲಿ ಆಗುವ ನಷ್ಟ ಒಂದು ಶತಮಾನದ ಅವಧಿಯಲ್ಲಿ ಕ್ರಾಂತಿಯಿಂದ ಆದ ನಷ್ಟಕ್ಕಿಂತ ಹೆಚ್ಚು ಉಗ್ರವಾದದ್ದು.

ನಮಗೆ ಪ್ರಜ್ಞಾಶಕ್ತಿಯನ್ನು ಕೊಟ್ಟಿರುವ ದೇವರು ನಮ್ಮಿಂದ ಏನನ್ನು ನಿರೀಕ್ಷಿಸುತ್ತಾನೋ ಅದನ್ನೆಲ್ಲಾ ನಾವು ಪ್ರತಿಯೊಬ್ಬರೂ ಪೂರೈಸಿದರೆ ಇಡೀ ಮಾನವ ಜಾತಿಯ ಗತಿ ಏನಾಗುತ್ತದೆ? ಯಜಮಾನನ ತಾನೇ ಸಿದ್ಧಪಡಿಸಿ ಆಳುತ್ತಿರುವ ಒಂದು ವ್ಯವಸ್ಥೆಯಲ್ಲಿ ಆತನ ಉದ್ದೇಶಗಳನ್ನು ಅರ್ಥಮಾಡಿಕೊಳ್ಳದೆ ಸುಮ್ಮನೆ ಆತ ಆಜ್ಞೆ ಮಾಡಿದ್ದನ್ನೆಲ್ಲ ಮಾಡುತ್ತಾ ಹೋದರೆ ಅದು ಅನರ್ಥಕಾರಿಯಾಗುವುದಿಲ್ಲವೆ?

ಒಡೆಯನ ಇಂಗಿತದಂತೆ ನಡೆಯಲು ಜನ ಹಿಂದೆ ಮುಂದೆ ನೋಡಿದಾಗ ಏನಾಗುತ್ತದೆ ಎಂಬ ಪ್ರಶ್ನೆ ನಮ್ಮನ್ನು ಅಷ್ಟಾಗಿ ಕಾಡುತ್ತಿಲ್ಲ. ಅವರನ್ನು ಕಾಡುತ್ತಿರುವುದು ಒಂದೇ ಸಮಸ್ಯೆ. ವಿಜ್ಞಾನ. ಕಲೆ. ನಾಗರೀಕತೆ, ಸಂಸ್ಕೃತಿ ಮೊದಲಾದ. ಜೀವನದ ಪರಂಪರೆಯ ಪದ್ಧತಿಗಳನ್ನು ಇಲ್ಲವಾಗಿಸಿದಾಗ ಬದುಕುವುದು ಹೇಗೆ? ಎಂಬುದೇ ಅವರ ಪ್ರಶ್ನೆ....ನಮ್ಮ ವರ್ತಮಾನ ಬದುಕಿನ ಮೇಲೆ ಭಾರ ಎಷ್ಟೆಂಬುದು ನಮಗೆ ತಿಳಿಯುತ್ತಿದೆ. ಬದುಕಿನ ಇಂದಿನ ವ್ಯವಸ್ಥೆಯೇ ಮುಂದುವರಿದರೆ, ಅದು ಕುಸಿದು ಬೀಳುವುದು ಖಂಡಿತ ಎಂಬುದೂ ನಮಗೆ ಗೊತ್ತಿದೆ. ಆದರೂ ನಮ್ಮ ಬದುಕು ಬದಲಾಗಬೇಕು. ನಮ್ಮ ಹಳೆಯ ಆಸ್ತಿಗಳೆಲ್ಲಾ ಭದ್ರವಾಗಿ ಉಳಿಯಬೇಕು ಎಂದು' ಎರಡನ್ನೂ ನಾವು ಬಯಸುತ್ತೇವೆ.

ಇದು ತುಂಬ ವಿಚಿತ್ರವಾದ ಸ್ಥಿತಿ. ಒಬ್ಬ ಹಳೆಯ ಮನೆಯಲ್ಲಿ ವಾಸಮಾಡುತ್ತಿರುತ್ತಾನೆ. ಅಲ್ಲಿ ಛಳಿ ಮತ್ತು ಇತರ ಅನನುಕೂಲತೆಗಳಿಂದ ತುಂಬ ಸಂಕಟ ಪಡುತ್ತಿರುತ್ತಾನೆ. ಆ ಮನೆ ಕುಸಿದು ಬೀಳುತ್ತದೆಂಬುದೂ ಅವನಿಗೆ ಗೊತ್ತು ಮನೆಯನ್ನು ಹೊಸ ಮಾದರಿಯಲ್ಲಿ ಕಟ್ಟಲು ಅವನ ಬುದ್ಧಿಗೆಯೂ ಇದೆ. ಆದರೆ

ತಾನು ಮನೆಯಿಂದ ಹೊರಕ್ಕೆ ಮಾತ್ರ ಬರುವುದಿಲ್ಲ. ಆಗಬೇಕಾದ ಸುಧಾರಣೆಗಳೆಲ್ಲಾ ಹಾಗೆಯೇ ಆಗಬೇಕಾದರೆ ಆಗಲಿ ಎಂಬ ಧೋರಣೆ ಆತನದು. ಅಂದರೆ ಮನೆಯನ್ನು ಪುನರ್ನಿರ್ಮಿಸಲು ಆತ ಒಪ್ಪುತ್ತಿಲ್ಲ ಎಂಬ ಅರ್ಥವೇ ಇದರಿಂದ ಹೊರಡುತ್ತದೆ. 'ಈ ಮನೆಯ ಅನುಕೂಲಗಳನ್ನೆಲ್ಲಾ ನಷ್ಟಮಾಡಿಕೊಂಡು ನಾನು ಈ ಮನೆಯನ್ನು ಬಿಡುವುದು. ಹೊಸಮನೆ ಸಿದ್ಧವಾಗುತ್ತದೆಯೋ ಇಲ್ಲವೋ ಗೊತ್ತಿಲ್ಲ. ಸಿದ್ಧವಾದರೂ ನನಗೆ ಪರಿಚಿತವಾದ ಯಾವ ವಸ್ತುವೂ ಇಲ್ಲದಂತೆ ಬೇರೆ ರೀತಿಯಲ್ಲಿ ಸಿದ್ಧವಾಗುವುದು – ಈ ತೊಡಕುಗಳೆಲ್ಲಾ ಏಕೆ?'

ಆದರೆ ಕಟ್ಟಬೇಕಾದ ಸಾಮಗ್ರಿ ಮತ್ತು ಕಟ್ಟುವವರು ಇದ್ದರೆ ಸಾಕು. ಹೊಸಮನೆ ಹಿಂದಿನ ಮನೆಗಿಂತಲೂ ಚೆನ್ನಾಗಿಯೇ ರೂಪುಗೊಳ್ಳುತ್ತದೆ. ಅಲ್ಲದೆ ಇಲ್ಲಿ ಇನ್ನೊಂದು ಸಮಾಧಾನಕರವಾದ ಅಂಶವೂ ಇದೆ. ಏನೆಂದರೆ ಹಳೆಯ ಮನೆಯಂತೆ ಇದು ಎಂದೋ ಕುಸಿದು ಬಿದ್ದು ವಾಸಿಸುವವರನ್ನು ನಾಶಿಸುತ್ತದೆ ಎಂಬ ಹೆದರಿಕೆಯಂತೂ ಇಲ್ಲಿ ಇಲ್ಲವೇ ಇಲ್ಲ.

ಹಳೆಯ ರೂಢವಾದ ಜೀವನ ಸ್ಥಿತಿಗಳೇ ಮುಂದುವರಿಯಬಹುದು ಅಥವ ಅವುಗಳ ಸ್ಥಾನದಲ್ಲಿ ಹೊಸದಾದ ಮತ್ತು ಉತ್ತಮವಾದ ಜೀವನ ಸ್ಥಿತಿಗಳು ಬರಬಹುದು. ಏನೇ ಆಗಲಿ ಹಳೆಯ ಸ್ಥಿತಿಗಳು ಅಸಹನೀಯವೂ ಮೃತ್ಯುಪ್ರಾಯವೂ ಆಗಿರುವುದರಿಂದ ಅವುಗಳನ್ನು ಬಿಟ್ಟುಕೊಟ್ಟು ಭವಿಷ್ಯವನ್ನು ಸಂಧಿಸಲು ನಾವು ಮುಂದುವರಿಯುವುದೇ ಉತ್ತಮ.

ಆಗ ಒಂದು ಕೂಗು ಏಳಬಹುದು, 'ನಾಗರೀಕತೆ. ಸಂಸ್ಕೃತಿ. ವಿಜ್ಞಾನ. ಕಲೆ– ಇವೆಲ್ಲಾ ಮಾಯವಾದಾವು'!

ಆದರೂ ಚಿಂತಿಲ್ಲ. ನಮ್ಮ ಪ್ರಯತ್ನಗಳೆಲ್ಲವೂ ಸತ್ಯದ ಆವಿಷ್ಕಾರಕ್ಕಾಗಿ ತಾನೇ. ಆ ಸತ್ಯವನ್ನು ಸಾಧಿಸಿಕೊಳ್ಳುವುದಕ್ಕಾಗಿ. ಸಾಧ್ಯವಾದಷ್ಟು ಅದರ ಸಮೀಪ ಹೋಗುವುದ–ಕ್ಕಾಗಿ ನಾವು ಈ ಬದಲಾವಣೆಗಳನ್ನು ಮಾಡಲೇ ಬೇಕಾಗಿದೆ. ಈ ಸತ್ಯದ ಸಾಧನಗಳು ಮೊದಲಿನದಕ್ಕಿಂತ ಬೇರೆ ರೀತಿಯವಾಗಿರುತ್ತವೆ. ಉತ್ತಮವಾಗಿರುತ್ತವೆ. ಮತ್ತು ಉನ್ನತ ರೀತಿಯವಾಗಿರುತ್ತವೆ. ಅವಕ್ಕೆ ನಿಲುಗಡೆ ಎಂಬುದೇ ಇಲ್ಲ. ಅವುಗಳಲ್ಲಿ ಇದ್ದ ಟೊಳ್ಳೆಲ್ಲಾ ನಾಶವಾಗುತ್ತವೆ. ಒಳಗಿನ ಸತ್ಯ ಹೆಚ್ಚು ಹೆಚ್ಚು ವಿಕಾಸಗೊಳ್ಳುತ್ತಾ ಶಕ್ತಿ-ಪೂರ್ಣವಾಗುತ್ತಾ ಹೋಗುತ್ತದೆ.

## 6

ಮಾನವರೇ ನೀವೇ ವಿಚಾರಮಾಡಿ, ಅಥವಾ ಮಂಗಳವನ್ನು ಬೋಧಿಸುವ ಸುವಾರ್ತೆಯನ್ನು ನಂಬಿ. ನೀವೇ ಸ್ವಂತವಾಗಿ ವಿಚಾರಮಾಡದಿದ್ದರೆ ನಿಮ್ಮೆಲ್ಲರ

ನಾಶ ಖಚಿತ. ಪಿಲಾತನಿಂದ ವಧೆಗೆ ಒಳಗಾದವರಂತೆ. ಸಿಲೋಮಿನ ಗೋಪುರದಡಿ
ಯಲ್ಲಿ ಸಿಕ್ಕಿ ಬಿದ್ದವರಂತೆ. ಕೊಂದವರೂ. ಕೊಲ್ಲಲ್ಪಟ್ಟವರೂ. ಹಿಂಸಕರೂ. ಹಿಂಸಿತರೂ.
ಲಕ್ಷಗಟ್ಟಲೆ ಸಂಖ್ಯೆಯಲ್ಲಿ ಮರಣ ಹೊಂದಿದವರ ಹಾಗೆ ನಿಮ್ಮೆಲ್ಲರ ನಾಶ ಖಂಡಿತ
ಬಿಟ್ಟಾತ ಸುಖ ಜೀವನವನ್ನು ದೀರ್ಘಕಾಲ ನಡೆಸಬೇಕೆಂಬ ಬಯಕೆಯಿಂದ ದೊಡ್ಡ
ಕಣಜಗಳನ್ನು ತುಂಬಿಸಿದ. ಆದರೆ ಅವನು ಆ ಬಗೆಯ ಜೀವನವನ್ನು ಆರಂಭಿಸಿದ
ದಿನವೇ ಆಕಸ್ಮಾತ್ ಸತ್ತುಹೋದ. ನೀವೆಲ್ಲರೂ ಹಾಗೆಯೇ ಅಳಿವತ್ತರು
ಕ್ರಿಸ್ತನು 1900 ವರ್ಷಗಳ ಹಿಂದೆಯೇ "ನಿಮ್ಮಲ್ಲೆ ವಿಚಾರ ವಿಮರ್ಶೆ ಮಾಡಿಕೊಳ್ಳಿ,
ಸಂತೋಷವಾರ್ತೆಗಳು ಬರುತ್ತವೆಂದು ನಂಬಿಕೆ ಇರಲಿ" ಎಂದು ಹೇಳಿದ. ಈಗಾತನ
ಹೇಳಿಕೆ ಇನ್ನೂ ಅರ್ಥಪೂರ್ಣವಾಗಿ ಕಾಣುತ್ತದೆ. ಏಕೆಂದರೆ ನಮ್ಮ ಬದುಕಿನ.
ದರಿದ್ರತನ ಮತ್ತು ಅವಿಚಾರಪರತೆ ಈಗ ತನ್ನ ಕೊನೆಯ ಹಂತವನ್ನು ತಲುಪಿದೆ.

ಹಿಂಸೆಯಂತಹ ಕ್ರೂರ ವ್ಯವಸ್ಥೆಯ ಮೂಲಕ ನಮ್ಮ ಬದುಕನ್ನು ಸುಗಮಗೊಳಿಸ
ಬೇಕೆನ್ನುವ ನಿಷ್ಫಲ ಪ್ರಯತ್ನವನ್ನು ನಾವು ಶತಮಾನದಿಂದ ಮಾಡುತ್ತ ಬಂದಿದ್ದೇವೆ.
ಆದ್ದರಿಂದ ಈ ದಿಕ್ಕಿನಲ್ಲಿ ನಾವು ನಡೆಸುವ ಪ್ರಯತ್ನ ನಮ್ಮ ಬದುಕನ್ನು ಸುಗಮ
ಗೊಳಿಸುವುದಕ್ಕೆ ಬದಲಾಗಿ ನಮ್ಮ ವೈಯಕ್ತಿಕ ಹಾಗೂ ಸಾಮಾಜಿಕ ಜೀವನದಲ್ಲಿ
ಇನ್ನೂ ಹೆಚ್ಚಿನ ಅಪಾಯಗಳನ್ನು ತಂದುಹಾಕುತ್ತಿದೆ ಎಂಬ ಸಂಗತಿ ಈಗ ಖಚಿತವಾಗಿದೆ.

ನಾವು ಯಾವುದೇ ಹೆಸರಿಟ್ಟುಕೊಂಡು ಜಂಬಕೊಚ್ಚಿಕೊಳ್ಳಬಹುದು. ಯಾವುದೇ
ಪೋಷಾಕನ್ನು ಧರಿಸಬಹುದು. ಯಾವುದೇ ಪುರೋಹಿತನ ಎದುರಿಗೆ. ಅಥವಾ
ಪುರೋಹಿತನಿಂದ ತೈಲ ಲೇಪನ ಮಾಡಿಸಿಕೊಳ್ಳಬಹುದು. ಲಕ್ಷಾಂತರ ಪ್ರಮಾಣದಲ್ಲಿ
ಸಂಪತ್ತು ನಮ್ಮಬಳಿ ಕೊಳೆಯುತ್ತಿರಬಹುದು. ನಾವು ಸಾಗುವ ದಾರಿಯ ಇಕ್ಕೆಲದಲ್ಲೂ
ವಿಶೇಷ ಕಾವಲು ದಳದವರು ನೇಮಿತರಾಗಿರಬಹುದು. ಎಷ್ಟೋ ಜನ ಪೋಲೀಸರು
ನಮ್ಮ ಆಸ್ತಿಯನ್ನು ರಕ್ಷಿಸಬಹುದು, ದುಷ್ಕೃತ್ಯಗಳಲ್ಲಿ ತೊಡಗುವ ದೊಂಬಿಗಾರರನ್ನು
ಕ್ರಾಂತಿಕಾರರನ್ನು ನಾವು ಶಿಕ್ಷೆಗೆ ಗುರಿ ಮಾಡಬಹುದು, ಎಷ್ಟೋ ದೊಡ್ಡ ದೊಡ್ಡ
ದಾಳಿಗಳನ್ನು ನಾವು ಆರಂಭಿಸಬಹುದು. ಯಾವುದೇ ಹೊಸ ಹೊಸ ರಾಜ್ಯಗಳನ್ನು
ನಾವು ಸ್ಥಾಪಿಸಬಹುದು. ಬೇಬಲ್ ಗೋಪುರದಿಂದ ಐಫೆಲ್ ಗೋಪುರದವರೆಗೆ
ಎಷ್ಟೋ ಕೋಟಿ ಗೋಪುರಗಳನ್ನು ನಿರ್ಮಿಸಿರಬಹುದು. ಆದರೆ ಎಲ್ಲ ಸಂದರ್ಭಗಳಲ್ಲೂ
ಬದುಕಿನ ಸಮಗ್ರ ಅರ್ಥವನ್ನೇ ಕೆಡಿಸುವ ಎರಡು ಅನಿವಾರ್ಯ ಸ್ಥಿತಿಗಳು ನಮಗೆ
ಎದುರಾಗುತ್ತವೆ. ಮೊದಲನೆಯದಾಗಿ ಸಾವು. ಇದು ಯಾವ ಕ್ಷಣದಲ್ಲೇ ನಮ್ಮನ್ನು
ಅಪ್ಪಳಿಸಬಹುದು. ಎರಡನೆಯದಾಗಿ ನಾವು ಮಾಡುವ ಎಲ್ಲ ಸಂಗತಿಗಳು ನಶ್ವರ
ಸ್ವರೂಪದವು. ಆದ್ದರಿಂದ ಗುರುತು ಕೂಡ ಉಳಿಯದಂತೆ ಅವು ನಾಶವಾಗುತ್ತವೆ.
ನಾವು ಏನೇನೋ ಮಾಡುತ್ತೇವೆ, ರಾಜ್ಯಗಳನ್ನು ಸ್ಥಾಪಿಸುತ್ತೇವೆ, ಅರಮನೆಗಳನ್ನು
ಸ್ಮಾರಕಗಳನ್ನು ಸ್ಥಾಪಿಸುತ್ತೇವೆ. ಪದ್ಯಗಳನ್ನು ರಚಿಸುತ್ತೇವೆ; ಪ್ರಣಯ ಸಾಹಸಗಳನ್ನು
ನಡೆಸುತ್ತೇವೆ – ಇವೆಲ್ಲಾ ಕ್ಷಣಿಕ. ಸ್ವಲ್ಪ ಗುರುತು ಕೂಡ ಕೊಡದೆ ಅಳಿದುಹೋಗು

ಮಂಥನ. ಇದರಿಂದ ಒಂದು ಅಂಶ ಸ್ಪಷ್ಟವಾಗುತ್ತದೆ. ಎಷ್ಟೇ ಮುಚ್ಚಿಡಲು ಪ್ರಯತ್ನಿಸಿದರೂ ನಮಗೆ ಇದು ಗೋಚರವಾಗದೆ ಇರುವುದಿಲ್ಲ. ಅಪರಿಹಾರ್ಯವಾದ ಸಂಕಟಗಳಿಗೂ ಸಾವಿಗೂ ಅಧೀನವಾಗಿರುವ ಭೌತಿಕ ಜೀವನದಲ್ಲಿ ನಮ್ಮ ಬದುಕಿನ ಅರ್ಥವನ್ನು ಎಷ್ಟು ಹುಡುಕಿದರೂ ಸಿಕ್ಕುವುದಿಲ್ಲ. ಅಥವಾ ಜಗತ್ತಿನ ಯಾವುದೇ ವ್ಯವಸ್ಥೆ, ಸಂಸ್ಥೆಯಲ್ಲೂ. ಇದರ ಅರ್ಥ ದೊರೆಯುವುದಿಲ್ಲ.

ನೀವು ಯಾರೇ ಆಗಿರಲಿ. ನಿಮ್ಮ ಸ್ಥಾನ ಮತ್ತು ಕರ್ತವ್ಯಗಳ ಕಡೆ ಸ್ವಲ್ಪ ಗಮನ ಕೊಡಿ. ಸ್ಥಾನ ಎಂದರೆ ನಾನು ಇಲ್ಲಿ ವರ್ತಕ. ನ್ಯಾಯಾಧೀಶ. ಚಕ್ರವರ್ತಿ, ಅಧ್ಯಕ್ಷ. ಮಂತ್ರಿ. ಪುರೋಹಿತ. ಸೈನಿಕ ಮೊದಲಾದ ಹಣೆಪಟ್ಟಿಗಳನ್ನು ಅಂಟಿಸಿಕೊಂಡ ಸ್ಥಾನಗಳನ್ನಾಗಲೀ ಆ ಸ್ಥಾನದಿಂದ ನಮಗೆ ಕಡ್ಡಾಯವಾಗಿ ಬರುವ ಕರ್ತವ್ಯಗಳನ್ನಾಗಲೀ ಕುರಿತು ಹೇಳುತ್ತಿಲ್ಲ. ಒಂದು ಜೀವವಾಗಿ ಅನಂತತೆಯಲ್ಲಿ ನಿಮಗಿರುವ ಒಂದು ನೈಜ ಸ್ಥಾನದ ದೃಷ್ಟಿಯನ್ನು ಕುರಿತು ನಾನು ಹೇಳುತ್ತಿದ್ದೇನೆ. ಬಹಳಕಾಲ ಅಸ್ತಿತ್ವವೇ ಇಲ್ಲದಿದ್ದ ನೀವು ಯಾರೋ ಒಬ್ಬನ ಆಜ್ಞೆಯಂತೆ ಅಪ್ರಜ್ಞೆಯ ವಲಯದಿಂದಾಚೆಗೆ ಕರೆಯಲ್ಪಟ್ಟಿದ್ದೀರಿ. ಹಿಂದಿನ ವಲಯಕ್ಕೆ ನೀವು ಮತ್ತೆ ಹೋಗಬೇಕಾದೀತೋ ಏನೋ. ಈ ದೃಷ್ಟಿಯಿಂದ ನಿಮ್ಮ ಕರ್ತವ್ಯವನ್ನು ಕುರಿತು ಚಿಂತಿಸಿ – ಕಾಲ್ಪನಿಕ ದೃಷ್ಟಿಯಿಂದ ನೋಡಬೇಡಿ. ನಿಮ್ಮ ಜಮೀನಿನ ಪಾಲಕನೆಂಬ. ರಾಜ್ಯದ ದೊಡ್ಡ ವರ್ತಕನೆಂಬ. ಚಕ್ರವರ್ತಿಯೆಂಬ. ಮಂತ್ರಿ. ಅಧಿಕಾರಿ ಎಂಬ ಕಲ್ಪಿತ ಸ್ಥಾನದ ದೃಷ್ಟಿಯಿಂದ ನೋಡಬೇಡಿ. ಆದರೆ ಬದುಕಿನ ವಲಯಕ್ಕೆ ತರಲಾದ. ವಿಚಾರಶಕ್ತಿ. ಪ್ರೇಮ ಮುಂತಾದ ಭಾವಗಳಿಂದ ಪ್ರಸಾದಿತವಾದ ನಿಮ್ಮ ನೈಜ ಸ್ಥಾನ ಮತ್ತು ಆ ಸ್ಥಾನದಲ್ಲಿ ನಿಂತು ಮಾಡಬೇಕಾದ ನೈಜ ಕರ್ತವ್ಯಗಳ ದೃಷ್ಟಿಯಿಂದ ಯೋಚಿಸಿ.

ಯಾರು ನಿಮ್ಮನ್ನು ಈ ಲೋಕಕ್ಕೆ ತಂದನೋ ಯಾರ ಬಳಿಗೆ ನೀವೆಲ್ಲ ಮತ್ತೆ ಹಿಂತಿರುಗಿ ಹೋಗಲೇಬೇಕಾಗಿದೆಯೋ ಆತ ನಿಮ್ಮಿಂದ ಏನೇನು ಕಾರ್ಯವನ್ನು ಅಪೇಕ್ಷಿಸಿದ್ದಾನೋ ಅದನ್ನೆಲ್ಲ ನೀವು ಮಾಡುತ್ತಿದ್ದೀರಾ? ಜಮೀನುದಾರನಾಗಿ ಅಥವಾ ಉತ್ಪಾದಕನ ಸ್ಥಾನದಲ್ಲಿ ನಿಂತು ನೀವು ಬಡಜನರ ಬೆವರಿನಿಂದ ಬಂದ ಫಲವನ್ನು ಕಿತ್ತು ಕೊಳ್ಳುವಾಗ. ಆ ಸುಲಿಗೆಯ ಆಧಾರದಿಂದ ನಿಮ್ಮ ಬದುಕನ್ನು ರೂಪಿಸಿಕೊಳ್ಳುವಾಗ ಆತನ ಆಜ್ಞೆಯಂತೆ ನಡೆಯುತ್ತಿದ್ದೇನೆಂದು ಹೇಳಬಲ್ಲಿರಾ? ರಾಜನಾಗಿ ಅಥವಾ ನ್ಯಾಯಾಧೀಶನಾಗಿ ಹಿಂಸಾಚಾರ ನಡೆಸುವಾಗ. ಜನರನ್ನು ಕ್ರೂರಶಿಕ್ಷೆಗಳಿಗೆ ಒಳಪಡಿಸುವಾಗ ಅಥವಾ ಸೈನಿಕರಾಗಿ ಯುದ್ಧಕ್ಕೆ ಸಜ್ಜಾಗಿ ಮನುಷ್ಯರ ಕೊಲೆ ಲೂಟಿಗಳಲ್ಲಿ ತೊಡಗುವಾಗ ಆತನ ಆಜ್ಞೆಯಂತೆ ನಡೆಯುತ್ತಿದ್ದೇನೆಂದು ಹೇಳಬಲ್ಲಿರಾ?

ಜಗತ್ತು ರಚಿತವಾಗಿರುವುದು ಹೀಗೆ. ಇವೆಲ್ಲಾ ಅನಿವಾರ್ಯ ಎಂಬ ವಾದ ನಿಮ್ಮದು. ನಾವು ಈ ಕೆಲಸಗಳನ್ನೆಲ್ಲಾ ಒಪ್ಪಿಕೊಂಡಿರುವುದು ಸ್ವಂತ ಇಚ್ಛೆಯಿಂದ ಅಲ್ಲ. ಆದರೆ

ನಮ್ಮನ್ನು ಹಾಗೆ ಮಾಡಲು ಒತ್ತಾಯ ಹೇರಲಾಗಿದೆ ಎನ್ನುತ್ತೀರೇನೋ. ಆದರೆ ಮನುಷ್ಯರ ಕಷ್ಟನಷ್ಟಗಳ ವಿಚಾರದಲ್ಲಿ. ಅವರ ಬಗ್ಗೆ ತಾತ್ಸಾರ ತೋರಿಸುವ ವಿಚಾರದಲ್ಲಿ. ಅವರ ಕೊಲೆಯ ವಿಚಾರದಲ್ಲಿ ನಿಮ್ಮ ಆತ್ಮ ಇಷ್ಟು ಕ್ರೂರವಾಗಿರುವುದು ಹೇಗೆ ಸಾಧ್ಯ? ಈ ಬಾಂಧವರನ್ನು ಪ್ರೀತಿಸುವ ಅಗತ್ಯ ಮತ್ತು ಅವರಿಂದ ಇನ್ನೂ ಹೆಚ್ಚಿನ ಪ್ರೀತಿ ಪ್ರಶಂಸೆಗಳಿಗೆ ಪಾತ್ರರಾಗಬೇಕೆಂಬ ಹಂಬಲ ನಿಮ್ಮಲ್ಲಿ ಹೇಗೆ ಬಂದಿದೆ? ಎಲ್ಲರೂ ಎಲ್ಲ ವಿಚಾರಗಳಲ್ಲೂ ಸರಿಸಮಾನರು. ಪರಸ್ಪರ ಸಹಕಾರದಿಂದ ಮಾತ್ರ ಮಾನವ ಸಮಾಜದ ಹೆಚ್ಚಿನ ಕಲ್ಯಾಣವನ್ನು ಸಾಧಿಸುವುದು ಸಾಧ್ಯ ಎಂಬ ಸಂಗತಿ ನಿಮಗೆ ಚೆನ್ನಾಗಿ ಗೊತ್ತು. ನಿಮ್ಮ ಹೃದಯ ನಿಮ್ಮ ವಿಚಾರಶಕ್ತಿ ನಿಮ್ಮ ನಂಬಿಕೆ ಮತ್ತು ವಿಜ್ಞಾನ ಎಲ್ಲವೂ ನಿಮಗೆ ಇದನ್ನೇ ಕಲಿಸಿಕೊಟ್ಟಿವೆ. ಇಷ್ಟಾದರೂ ನೀವು ಯಾವುದೋ ಅಸ್ಪಷ್ಟವಾದ ಗೊಂದಲಮಯವಾದ ವಿಚಾರಕ್ಕೆ ಸಿಕ್ಕಿಬಿದ್ದು ಎಲ್ಲಕ್ಕೂ ವಿರುದ್ಧವಾದ ಕೆಲಸದಲ್ಲೇ ತೊಡಗುವಂತೆ ಒತ್ತಾಯಕ್ಕೆ ಕಟ್ಟುಬೀಳುವುದು ಹೇಗೆ ಸಾಧ್ಯ? ಜಮೀನ್ದಾರರಂತೆ ಅಥವಾ ಬಂಡವಾಳಗಾರರಂತೆ ಸ್ವತಃ ಜನರನ್ನು ತುಳಿಯುತ್ತಾ ಸಾಗುವ ಕಾರ್ಯದಲ್ಲೇ ನಿಮ್ಮ ಬದುಕನ್ನು ತೊಡಗಿಸುವುದು ನಿಜವಾಗಿಯೂ ಅಗತ್ಯವೇ? ಚಕ್ರವರ್ತಿಯಾಗಿ. ರಾಷ್ಟ್ರದ ಅಧ್ಯಕ್ಷರಾಗಿ ನೀವು ಸೇನೆಯನ್ನು ನುಗ್ಗಿಸುವ ಅಂದರೆ ಕೊಲೆಗಳ ಮುಖಂಡರಾಗುವ ಕಾರ್ಯದಲ್ಲಿ ನಿಜವಾಗಿ ತೊಡಗಬೇಕೆ? ಸರಕಾರಿ ಅಧಿಕಾರಿಯಾಗಿ ನೀವು ಬಡವನು ಬೆವರಿಳಿಸಿ ಸಂಪಾದಿಸಿದ ಹಣವನ್ನು ನಿಮ್ಮ ಖರ್ಚಿಗೋ ಅಥವಾ ಶ್ರೀಮಂತರಿಗಾಗಿಯೋ ಹಿಂಸಾಚಾರದಿಂದ ಕಿತ್ತುಕೊಳ್ಳುವುದು ನಿಜವಾಗಿಯೂ ಅಗತ್ಯವೇ? ನ್ಯಾಯಾಧೀಶರಾಗಿ ಅಥವಾ ಜ್ಯೂರಿಯಾಗಿ ನೀವು ತಪ್ಪಿತಸ್ಥರಿಗೆ ಇನ್ನೂ ಸತ್ಯದ ಬೋಧೆಯಾಗಿಲ್ಲ ಎಂಬ ಕಾರಣದಿಂದ ಅವರನ್ನು ಕ್ರೂರ ಶಿಕ್ಷೆಗಳಿಗೂ ಸಾವಿಗೂ ಗುರಿಮಾಡುವುದು ನಿಜವಾಗಿಯೂ ಅಗತ್ಯವೇ? ಎಲ್ಲಕ್ಕಿಂತ ಹೆಚ್ಚಾಗಿ ಈ ಎಲ್ಲ ಪಾಪಗಳ ಮೂಲ ಇನ್ನೊಂದಿದೆ. ನೀವು ಅಥವಾ ಯಾವುದೇ ತರುಣ ಬಲಾತ್ಕಾರದಿಂದ ಸೇನೆಗೆ ಸೇರಿಸಲ್ಪಡಬೇಕೆ? ಹಾಗೆ ಸೈನಿಕನಾಗಿ ಸ್ವಂತ ಮನಸ್ಸು ಮತ್ತು ಮಾನವೀಯ ಉದ್ವೇಗಗಳು ಇವನ್ನೆಲ್ಲಾ ಬಿಟ್ಟುಕೊಟ್ಟು. ನಿಮಗೆ ಗೊತ್ತಿಲ್ಲದ. ಯಾವನೋ ಒಬ್ಬ ಮಾಡಿದ ಆಜ್ಞೆಗಾಗಿ ಕೊಲೆಗೆಲಸಕ್ಕೆ ನಿಲ್ಲಬೇಕೆ? ಹಾಗಾಗಬಾರದು.

ಈಗಿನ ಜೀವನ ವ್ಯವಸ್ಥೆಯನ್ನು ಸುಗಮಗೊಳಿಸಲು ಮತ್ತು ಪಾಲಿಸಿಕೊಂಡು ಬರಲು ಇವೆಲ್ಲಾ ಅಗತ್ಯ ಎಂದು ಕೆಲವರು ಹೇಳಬಹುದು. ಎಷ್ಟೇ ದರಿದ್ರತೆ. ಹಸಿವ. ಸೆರೆಮನೆ. ಶಿಕ್ಷೆ. ಸೇನೆ. ಯುದ್ಧಗಳಿದ್ದರೂ ಈಗಿನ ಸಾಮಾಜಿಕ ವ್ಯವಸ್ಥೆ ನಮ್ಮ ಸಮಾಜಕ್ಕೆ ತುಂಬ ಅಗತ್ಯವೆಂದೂ. ಈ ವ್ಯವಸ್ಥೆಗೆ ಭಂಗ ಬಂದರೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಸಂಕಷ್ಟಗಳು ಪ್ರಾಪ್ತವಾಗುತ್ತವೆಯೆಂದೂ ಅವರು ಹೇಳಬಹುದು. ಅಂಥ ವ್ಯವಸ್ಥೆಯಿಂದ ಯಾರು ತುಂಬ ಹೆಚ್ಚಿನ ಲಾಭ ಪಡೆಯುತ್ತಿದ್ದಾರೋ ಅವರೇ ಈ ಮಾತನ್ನೆಲ್ಲಾ ಹೇಳುತ್ತಿದ್ದಾರೆ. ಆದರೆ ಇವರಿಗಿಂತ ಹತ್ತು ಪಟ್ಟು ಹೆಚ್ಚಾಗಿರುವ ಜನ ಈ ವ್ಯವಸ್ಥೆ

ಯಿಂದ ನರಳುತ್ತಾ ಇದಕ್ಕೆ ವಿರುದ್ಧವಾದ ಮಾತುಗಳನ್ನು ಆಡುತ್ತಾರೆ. ಈಗಿನ ಜೀವನ ವ್ಯವಸ್ಥೆ ಶುದ್ಧಾಂಗವಾಗಿ ಸುಳ್ಳು, ಈ ಕಾಲಕ್ಕೆ ಹೊಂದುವಂಥದಲ್ಲ. ಅದನ್ನು ಹೊಸ ತತ್ತ್ವಗಳ ಆಧಾರದ ಮೇಲೆ ಪುನರ್ರಚಿಸಬೇಕಾಗಿದೆ, ಇದನ್ನು ಉಳಿಸಿಕೊಳ್ಳುವುದಕ್ಕಾಗಿ ಮಾನವೀಯ ಭಾವನೆಗಳನ್ನೆಲ್ಲಾ ಬಲಿಕೊಡುವ ಅಗತ್ಯವಿಲ್ಲ – ಇವೆಲ್ಲ ಸಂಗತಿ ಹೃದಯಾಂತರಾಳದಲ್ಲಿ ನಿಮಗೆ ಗೊತ್ತಿರುತ್ತದೆ.

ಈಗಿನ ವ್ಯವಸ್ಥೆ ಅಗತ್ಯ ಎಂದು ವಾದಕ್ಕಾಗಿ ಒಪ್ಪಿಕೊಳ್ಳೋಣ. ಆದರೆ ನಿಮ್ಮ ಮಾನವೀಯ ಭಾವನೆಗಳನ್ನೆಲ್ಲಾ ಬಲಿಕೊಟ್ಟು ಅದನ್ನು ಪಾಲಿಸಿಕೊಂಡು ಬರಬೇಕಾದದ್ದು ಅತ್ಯಗತ್ಯ ಎಂದು ನೀವೇಕೆ ಭಾವಿಸುತ್ತೀರಿ? ಈ ರೋಗದ ವ್ಯವಸ್ಥೆಗೆ ಚಿಕಿತ್ಸೆ ಮಾಡಲು ನಿಮಗೆ ಅಪ್ಪಣೆ ಕೊಟ್ಟವರು ಯಾರು? ನಿಮ್ಮ ಈಗಿನ ಸ್ಥಾನವನ್ನು ಒಪ್ಪಿಕೊಂಡು ರಾಜ್ಯ ವ್ಯವಸ್ಥೆಗೆ ಬೆಂಬಲಕೊಡಿ ಎಂದು ನಿಮ್ಮನ್ನು ಸಮಾಜ ಕೇಳಿಲ್ಲ. ಸರಕಾರ ಕೇಳಿಲ್ಲ, ಅಥವಾ ಯಾರೂ ಕೇಳಿಲ್ಲ. ಮಾನವ ಕಲ್ಯಾಣಕ್ಕೆ ಅಗತ್ಯವಾದ ಒಂದು ಬದುಕಿನ ವ್ಯವಸ್ಥೆಯ ಪಾಲನೆಗಾಗಿ ನೀವು ಆತ್ಮತ್ಯಾಗಕ್ಕೆ ಸಿದ್ಧರಾಗಿ ಈ ಕೆಲಸಕ್ಕೆ ಒಪ್ಪಿಕೊಂಡಿದ್ದೀರಿ ಎಂದು ನೀವೇನೂ ಹೇಳುವಂತಿಲ್ಲ. ಇದು ನಿಮಗೂ ಚೆನ್ನಾಗಿ ಗೊತ್ತು. ಈ ಕೆಲಸಕ್ಕೆ ನೀವು ಒಪ್ಪಿರುವುದು ಬೇರೆ ಕಾರಣಗಳಿಂದ. ಅಧಿಕಾರದ ಆಸೆ. ಜಂಬ. ಮಹತ್ವಾಕಾಂಕ್ಷೆ, ಅಥವಾ ಹೇಡಿತನ ಇವೇ ನಿಮ್ಮನ್ನು ಈ ಕಾರ್ಯಕ್ಕೆ ಪ್ರೇರಿಸಿವೆ. ಈ ವೃತ್ತಿಯಲ್ಲಿ ನಿಮಗೆ ನಿಜವಾಗಿಯೂ ಆಸಕ್ತಿ ಇಲ್ಲದಿದ್ದರೆ ಅದು ಸತತವಾಗಿ ಕೋರುವ ಶ್ರಮಸಾಧ್ಯವಾದ ಎಲ್ಲ ಕೆಲಸಗಳನ್ನು ಮಾಡಿ ಪಟ್ಟವನ್ನು ಉಳಿಸಿಕೊಳ್ಳುವ ಗೋಜಿಗೆ ಹೋಗುತ್ತಿರಲಿಲ್ಲ. ಸಂಕೀರ್ಣವೂ. ಕ್ರೂರವೂ, ತಿರಸ್ಕಾರ ಯೋಗ್ಯವೂ. ಕೃತ್ರಿಮವೂ ಆದ ಆ ಬಗೆಯ ಕೆಲಸಗಳಿಂದ ಒಮ್ಮೆ ದೂರವಾಗಿರಲು ಪ್ರಯತ್ನಮಾಡಿ. ಕೂಡಲೇ ನಿಮ್ಮ ಕೆಲಸ ಹೋಗಿಬಿಡುತ್ತದೆ. ಪಾಲಕನಾಗಿ ಅಥವಾ ಅಧಿಕಾರಿಯ ಸ್ಥಾನದಲ್ಲಿ ನಿಂತು ಸುಳ್ಳು ಹೇಳುವುದು, ಕೀಳುವರ್ತನೆ. ಹಿಂಸಾಚಾರ. ಮತ್ತು ಶಿಕ್ಷೆಗಳಲ್ಲಿ ಭಾಗವಹಿಸುವುದು – ಇವುಗಳನ್ನು ಒಂದುಸಲ ಬಿಟ್ಟು ಬಿಡಿ: ಪಾದ್ರಿಯಾದಾಗ ವಂಚನೆಯನ್ನು ಬಿಟ್ಟು ಬಿಡಿ ಸೈನ್ಯಕ್ಕೆ ಸೇರಿ ಯಾರನ್ನೂ ಕೊಲ್ಲದಿರಲು ಪ್ರಯತ್ನಿಸಿ. ಜಮೀನುದಾರನಾಗಿ ಅಥವಾ ಉತ್ಪಾದಕನಾಗಿ, ಹಿಂಸೆ ಮತ್ತು ಕೋರ್ಟುಗಳ ಸಹಾಯದಿಂದ ನಿಮ್ಮ ಆಸ್ತಿ ಕಾಪಾಡಿಕೊಳ್ಳುವುದನ್ನು ನಿಲ್ಲಿಸಿಬಿಡಿ. ಆಗ ನೋಡಿ ಯಾವ ಕೆಲಸವನ್ನು ಬಲವಂತವಾಗಿ ಹೇರಿದ್ದಾರೆ ಎನ್ನುವಿರೋ. ಯಾವ ಕೆಲಸ ನಿಮ್ಮನ್ನು ತುಂಬ ತುಳಿಯುತ್ತಿದೆ ಎಂಬಂತೆ ನಟಿಸುತ್ತೀರೋ ಆ ನಿಮ್ಮ ಕೆಲಸವನ್ನು ಕೂಡಲೇ ಕಳೆದುಕೊಂಡು ಬಿಡುತ್ತೀರಿ.

ಆತ್ಮಸಾಕ್ಷಿಗೆ ವಿರುದ್ಧವಾದ ಸ್ಥಾನದಲ್ಲಿ ನಿಲ್ಲುವುದು ಇಷ್ಟವಿಲ್ಲದ ವ್ಯಕ್ತಿಗೆ ಆ ಸ್ಥಾನದಲ್ಲಿ ಮುಂದುವರಿಯುವುದು ತುಂಬ ಕಷ್ಟ.

ಇಷ್ಟವಿಲ್ಲದಿದ್ದರೂ ನೀವು ಆ ಸ್ಥಾನದಲ್ಲಿ ಇದ್ದೀರಿ. ಇದಕ್ಕೆ ಕಾರಣ ಇದು ಅತ್ಯಗತ್ಯ ಎಂಬುದಲ್ಲ. ನಿಮಗೆ ಆ ಕೆಲಸ ಬೇಕಾಗಿದೆ, ಅದೇ ಮುಖ್ಯವಾದ ಕಾರಣ.

ಈ ಸ್ಥಾನ ನಿಮ್ಮ ಹೃದಯ, ವಿವೇಕ, ಧರ್ಮ ಮತ್ತು ನೀವು ನಂಬಿರುವ ವಿಜ್ಞಾನ ಇವಕ್ಕೆಲ್ಲಾ ತೀರ ವಿರುದ್ಧವಾಗಿದೆ ಎಂಬ ಸಂಗತಿ ನಿಮಗೆ ಚೆನ್ನಾಗಿ ಗೊತ್ತು. ಆದರೆ ಆ ಸ್ಥಾನದಲ್ಲಿಯೇ ನೀವು ಉಳಿಯುತ್ತೀರಿ. ಅದನ್ನು ಸಮರ್ಥನೆ ಮಾಡಿಕೊಳ್ಳುತ್ತೀರಿ. ನೀವು ಮಾಡುತ್ತಿರುವುದು ಸರಿಯೇ ಎಂದು ಆತ್ಮಶೋಧನೆಮಾಡಿಕೊಳ್ಳುವುದು ಅಗತ್ಯ.

ಒಂದು ತಪ್ಪು ಆಗಿದೆ ಎಂದು ಭಾವಿಸೋಣ. ಆದರೆ ನೀವು ಮಾಡುತ್ತಿರುವ ಕೆಲಸ ತುಂಬ ಮಹತ್ವದ್ದಾದರೆ ಹಾಗೆ ತಪ್ಪು ಮಾಡುವುದು, ಅದನ್ನು ಪರ್ಯಾಲೋಚಿಸಿ ತಿದ್ದಿಕೊಳ್ಳುವುದು ಅಪೇಕ್ಷಣೀಯವಾದದ್ದು. ಆದರೆ ನೀವು ಮಾಡಿದ ತಪ್ಪನ್ನು ತಿದ್ದಿಕೊಳ್ಳುವುದು ಇಲ್ಲಿ ಸಾಧ್ಯವಿಲ್ಲ, ಏಕೆಂದರೆ ನೀವಾಗಲೀ ಅಥವಾ ನಿಮ್ಮನ್ನು ಈ ತಪ್ಪಿನಲ್ಲಿ ತೊಡಗಿಸಿದ ಇತರರಾಗಲೀ ತಪ್ಪನ್ನು ಸರಿದೂಗಿಸುವಷ್ಟರಲ್ಲಿಯೇ ಸ್ಥಾನಭ್ರಷ್ಟರಾಗುವ ಸಾಧ್ಯತೆ ಇದೆ. ಜಗತ್ತಿನ ಬಾಹ್ಯಸ್ಥಿತಿಯಲ್ಲಿ ನೀವು ಏನುಮಾಡಿದರೂ ಅದು ಗುರುತು ಕೂಡ ಉಳಿಯದಂತೆ ನಾಶವಾಗುವುದು ಖಂಡಿತ. ನಿಮ್ಮದೂ ಅದೇ ಪಾಡು. ಹೀಗಿರುವಾಗ ನೀವು ಅಂಥ ಮಹತ್ವದ ತಪ್ಪಿನ ಹೊಣೆಗಾರಿಕೆಯನ್ನು ಏಕೆ ಹೊರಬೇಕು?

ಖಚಿತವಾಗಿ ನಮಗೆ ತೋರುವ ಸತ್ಯವನ್ನು ಕಪಟಾಚಾರದ ಮಂಜಿನಲ್ಲಿ ಮುಸು-ಕುವ ಪ್ರಯತ್ನವನ್ನು ನಾವು ಮಾಡದಿದ್ದರೆ ಇವೆಲ್ಲಾ ಬಹಳ ಸರಳವಾಗಿ ಬಿಡುತ್ತಿದ್ದುವು.

ನಿಮ್ಮಲ್ಲಿರುವುದನ್ನೆಲ್ಲಾ ಇತರರೊಂದಿಗೆ ಹಂಚಿಕೊಳ್ಳಿ. ಹೆಚ್ಚು ಸಂಪತ್ತನ್ನು ಶೇಖರಿಸಬೇಡಿ. ನೀವೇ ದೊಡ್ಡವರೆಂದು ಭಾವಿಸಬೇಡಿ. ಕದಿಯಬೇಡಿ. ಪರರಿಗೆ ನೋವನ್ನುಂಟುಮಾಡಬೇಡಿ, ಯಾರನ್ನೂ ಕೊಲ್ಲಬೇಡಿ. ನಿಮ್ಮಂತೆಯೇ ಪರರನ್ನು ಬಗೆಯಿರಿ – ಇಂಥ ಸೂಕ್ತಿಗಳೆಲ್ಲಾ 5.000 ವರ್ಷಗಳಷ್ಟು ಹಳೆಯವು. ಈ ನಿಯಮ ಸತ್ಯವೆಂಬ ಬಗೆಗೆ ಅನುಮಾನವೇ ಇಲ್ಲ. ಕಪಟಾಚಾರ ಒಂದು ಇಲ್ಲದೇ ಇದ್ದರೆ ಜನರಿಗೆ ಇದರ ಅಗತ್ಯದ ಅರಿವು ಆಗದೇ ಇರುತ್ತಿರಲಿಲ್ಲ.

ಸಾರ್ವಜನಿಕರ ಹಿತದೃಷ್ಟಿಯಿಂದ ಈ ಕ್ರಮಗಳನ್ನೆಲ್ಲಾ ಕೈಕೊಳ್ಳಬೇಕಾಗುತ್ತದೆ. ಸಮಾಜದ ಕಲ್ಯಾಣದ ದೃಷ್ಟಿಯಿಂದ ಮಾಡುವ ಕೊಲೆ ಹಿಂಸೆ ಸುಲಿಗೆ ಎಲ್ಲವೂ ಯುಕ್ತವೇ ಎಂದು ಹೇಳಬಹುದು. ಕಾಯಫರು ಹೇಳಿದಂತೆ ದೇಶವು ಹಾಳಾಗುವುದಕ್ಕಿಂತ ಒಬ್ಬ ಮನುಷ್ಯನು ನಾಶವಾಗುವುದು ಶ್ರೇಯಸ್ಕರವಾದದ್ದು ಎನ್ನುತ್ತೀರಿ. ಒಬ್ಬನ, ಎರಡನೆಯವನ ಮತ್ತು ಮೂರನೆಯವನ ಸಾವಿನ ಶಿಕ್ಷೆಯನ್ನು ಜಾರಿಗೊಳಿಸಿ ಸಹಿ ಹಾಕುತ್ತೀರಿ. ಸಾರ್ವಜನಿಕ ಹಿತಕ್ಕಾಗಿ ಒಬ್ಬನಮೇಲೆ ಬಂದೂಕು ಎತ್ತುತ್ತೀರಿ. ಅವನನ್ನು ಸೆರೆಮನೆಯಲ್ಲಿಡುತ್ತೀರಿ ಅವನ ಆಸ್ತಿಯನ್ನೆಲ್ಲಾ ಮುಟ್ಟುಗೋಲು ಹಾಕಿಕೊಳ್ಳುತ್ತೀರಿ. ಆಗ ನೀವು ಹೇಳುವ ಮಾತಾದರೂ ಏನು? ಸಮಾಜದ

ಮತ್ತು ರಾಜ್ಯದ ಸೇವೆ ಮಾಡುವುದು ಅತ್ಯಗತ್ಯವಾದ್ದರಿಂದ ಈ ಕ್ರೂರ ಕಾರ್ಯಗಳನ್ನು ಮಾಡುವ ಕಾರ್ಯದಲ್ಲಿ ತೊಡಗಿರುವುದಾಗಿ ನೀವು ವಾದಿಸುತ್ತೀರಿ. ಜಮೀನುದಾರ, ನ್ಯಾಯಾಧೀಶ, ಚಕ್ರವರ್ತಿ ಅಥವಾ ಸೈನಿಕ ಈ ಸ್ಥಾನಗಳಲ್ಲಿ ನಿಂತು ನಿಯಮಗಳಂತೆ ನಡೆಯುವ ನಿಷ್ಠೆಯನ್ನು ತೋರುತ್ತೀರಿ. ಆದರೆ ಒಂದು ವಿಚಾರವನ್ನು ಮರೆಯ ಬಾರದು. ನೀವು ಒಂದು ದೇಶಕ್ಕೆ ಸೇರಿದವರು. ನಿಮ್ಮ ಸ್ಥಾನದಲ್ಲಿ ಮಾಡಬೇಕಾದ ಕರ್ತವ್ಯಗಳನ್ನು ನೀವು ಮಾಡುತ್ತೀರಿ. ಅದೇ ರೀತಿಯಲ್ಲಿ ನೀವು ದೇವರಿಗೂ ಸೇರಿದವರು, ಅನಂತತೆಗೂ ಸೇರಿದವರು. ಆದ್ದರಿಂದ ಆ ದಿಕ್ಕಿನಲ್ಲಿಯೂ ನೀವು ಮಾಡಬೇಕಾದ ಕರ್ತವ್ಯ ಗಳಿವೆ.

ಮನೆಯ ಕೆಲಸ ಸಂಸಾರದ ಕೆಲಸ ಅಥವಾ ಒಂದು ವರ್ಗದ ಕೆಲಸ ಇವುಗಳಿಗಿಂತ ರಾಜ್ಯದ ಪ್ರಜೆಯಾಗಿ ನೀವು ಮಾಡಬೇಕಾದ ಕೆಲಸ ದೊಡ್ಡದು. ಇದೇ ತರ್ಕವನ್ನು ಅನುಸರಿಸಿದರೆ ವಿಶ್ವ ಜೀವನ ಮತ್ತು ದೇವರಿಗೆ ಸಂಬಂಧಪಟ್ಟಂತೆ ನೀವು ಮಾಡಬೇಕಾದ ಕರ್ತವ್ಯಗಳಿಗೆ ಇನ್ನೂ ಹೆಚ್ಚಿನ ಪ್ರಾಶಸ್ತ್ಯ ಸಿಕ್ಕಬೇಕಾಗಿದೆ.

ಒಂದು ಸಂಸಾರಕ್ಕೆ ಸೌದೆಯನ್ನು ಒದಗಿಸುವುದಕ್ಕಾಗಿ ಟೆಲಿಗ್ರಾಫ್ ಕಂಬಗಳನ್ನು ಕಡಿಯುವುದು ತುಂಬಾ ಆಭಾಸವಾಗಿ ತೋರುತ್ತದೆ. ದೇಶದ ಹಿತವನ್ನು ಪ್ರತಿನಿಧಿಸುವ ಕಾನೂನನ್ನು ಇದರಿಂದ ಮುರಿದಂತಾಗುತ್ತದೆ. ಅದೇ ರೀತಿಯಲ್ಲಿ ಒಂದು ರಾಜ್ಯ ಸುಭದ್ರವಾಗಬೇಕು. ಅದರ ಸಂಪತ್ತು ಹೆಚ್ಚಾಗಬೇಕು ಎಂಬ ಉದ್ದೇಶ ಇಟ್ಟುಕೊಂಡವರು ಅದಕ್ಕಾಗಿ ಒಬ್ಬ ಮನುಷ್ಯನನ್ನು ಹಿಂಸಿಸುವುದು ಕೊಲ್ಲುವುದು ಅಷ್ಟೇ ಆಭಾಸ ವೆನಿಸುತ್ತದೆ. ಇದರಿಂದ ಜಗತ್ತಿನ ಕಲ್ಯಾಣವನ್ನು ನೋಡಿಕೊಳ್ಳುವ ಪ್ರಶ್ನಾತೀತ ವಾದ ನಿಯಮಗಳನ್ನೇ ಮುರಿದಂತಾಗುತ್ತದೆ.

ನೀವು ಒಂದು ದೇಶದ ಪ್ರಜೆಯಾಗಿರುವುದರಿಂದ ನೀವು ತೀರಿಸಬೇಕಾದ ಋಣಗಳು ಯಾವುವು ಇವೆಯೋ ಅದಕ್ಕಿಂತ ಹೆಚ್ಚಾಗಿ ಅನಂತವಾದ ಲೋಕಜೀವನಕ್ಕೆ ಮತ್ತು ದೇವರಿಗೆ ನೀವು ಸಲ್ಲಿಸಬೇಕಾದ ಋಣಗಳಿವೆ. ಎಲ್ಲವೂ ಈ ದೈವ ಋಣಕ್ಕೆ ಅಧೀನ. ಅದರ ವಿರುದ್ಧ ಯಾವುವೂ ಹೋಗಲಾರವು. ಹತ್ತೊಂಬತ್ತು ಶತಮಾನಗಳ ಹಿಂದೆ ಕ್ರಿಸ್ತನ ಶಿಷ್ಯರು ಹೇಳಿದ ಹಾಗೆ 'ದೇವರ ಮಾತು ಕೇಳುವುದು ಸರಿಯೋ ನಿಮ್ಮ ಮಾತು ಕೇಳುವುದು ಸರಿಯೋ ಯೋಚನೆಮಾಡಿ'. (ವಿಧಿ18 IV 19). ಮತ್ತು 'ನಾವು ಮನುಷ್ಯರ ಆಜ್ಞೆಗಿಂತ ಹೆಚ್ಚಾಗಿ ದೇವರ ಆಜ್ಞೆಗೆ ತಲೆಬಾಗಬೇಕು' (ವಿಧಿ V 29).

ಜಗತ್ತಿನ ಯಾವುದೋ ಒಂದು ಮೂಲೆಯಲ್ಲಿ ಹಿಂದೆ ಯಾರೋ ಕೆಲವರು ಕೆಲವು ನಿಯಮಗಳನ್ನು ಸ್ಥಾಪಿಸಿದರು. ಸದಾ ಬದಲಾಗಬಹುದಾದ ಅಂಥ ನಿಯಮ ಗಳನ್ನು ಯಾರೂ ಮುರಿಯದಂತೆ ನೋಡಿಕೊಳ್ಳಲು ನಾವು ಹಿಂಸಾಚಾರಗಳಲ್ಲಿ

ತೊಡಗಬೇಕಾಗುತ್ತದೆ. ಕೊಲೆಮಾಡಬೇಕಾಗುತ್ತದೆ. ಮನುಷ್ಯರನ್ನು ಸತತವಾಗಿ ತುಳಿಯಬೇಕಾಗುತ್ತದೆ. ಹೀಗೆ ಮಾಡುವುದರಿಂದ ನಾವು ದೇವರು ಮತ್ತು ವಿವೇಕವು ಹಾಕಿಕೊಟ್ಟಿರುವ ನಿಯಮಗಳನ್ನೇ ಮುರಿಯುತ್ತಿದ್ದೇವೆ. ಹಾಗೆ ಮಾಡುವುದು ಸಾಧುವೇ?

ಆದ್ದರಿಂದ ನಾವು ಜಮೀನುದಾರರಾಗಿ, ವರ್ತಕರಾಗಿ, ನ್ಯಾಯಾಧಿಪತಿ. ಚಕ್ರವರ್ತಿ, ಅಧ್ಯಕ್ಷ. ಮಂತ್ರಿ ಅಥವಾ ಪುರೋಹಿತರಾಗಿ ಅಥವಾ ಸೈನಿಕರಾಗಿ ಸತತವೂ ದಮನ ಕಾರ್ಯ. ಹಿಂಸಾಚಾರ. ವಂಚನೆಗಳಲ್ಲಿ ತೊಡಗುತ್ತೇವೆ. ಇತ್ತಕಡೆ ಅದು ತಪ್ಪೆಂದು ಗುರುತಿಸುತ್ತೇವೆ.

ಹಾಗೆಂದ ಮಾತ್ರಕ್ಕೆ ನೀವು ಜಮೀನುದಾರರಾಗಿದ್ದರೆ ನಿಮ್ಮ ಜಮೀನನ್ನು ಬಡಜನರಿಗೆ ಈ ಕೂಡಲೇ ಕೊಟ್ಟುಬಿಡಬೇಕು ಎಂದು ಈಗ ನಾನು ಹೇಳುತ್ತಿಲ್ಲ. ನಿಮ್ಮ ಹಣ ಕಾರ್ಖಾನೆ ಎಲ್ಲವನ್ನೂ ಕಾರ್ಮಿಕರಿಗೆ ಕೊಟ್ಟುಬಿಡಿ ಎಂದು ಬಂಡವಾಳಗಾರರಿಗೆ ಹೇಳುವುದಿಲ್ಲ. ಜಾರ್‌ದೊರೆ, ಮಂತ್ರಿ. ಅಧಿಕಾರಿ. ನ್ಯಾಯಾಧೀಶ. ದಂಡನಾಯಕ ಇವರೆಲ್ಲಾ ಈ ಕೂಡಲೇ ತಮ್ಮ ಅನುಕೂಲದಾಯಕವಾದ ವೃತ್ತಿಯನ್ನು ಬಿಟ್ಟುಬಿಡಬೇಕು ಎಂದು ಹೇಳುತ್ತಿಲ್ಲ. ನೀವು ಸೈನಿಕರಾಗಿದ್ದರೆ (ಅಂದರೆ ಎಲ್ಲ ಹಿಂಸೆಯ ಕೇಂದ್ರಸ್ಥಾನದಲ್ಲಿ ಇದ್ದರೆ) ಯಾವ ಅಪಾಯಕ್ಕೂ ಲೆಕ್ಕಿಸದೆ ಸೇನಾ ಸೇವೆಯನ್ನು ಈ ಕೂಡಲೇ ತಿರಸ್ಕರಿಸಿ ಎಂದೂ ನಾನು ಹೇಳುತ್ತಿಲ್ಲ.

ಹೀಗೆ ಮಾಡುವುದರಿಂದ ನೀವು ಅತ್ಯುತ್ತಮವಾದ ಕೆಲಸವನ್ನು ಮಾಡಿದಂತೆ ಆಗುತ್ತದೆ ನಿಜ. ಆದರೆ ಪ್ರಾಯಶಃ ಹಾಗೆ ಮಾಡಲು ನಿಮಗೆ ಎದೆಗಾರಿಕೆ ಸಾಲದು. ನಿಮಗೆ ಕೆಲವು ಬಂಧನಗಳಿವೆ. ಸಂಸಾರ. ಆಶ್ರಿತರು ಮತ್ತು ಮೇಲಧಿಕಾರಿಗಳು. ನೀವು ಎಂಥ ಪ್ರಬಲವಾದ ಪ್ರಭಾವ ಒತ್ತಡಗಳಿಗೆ ಒಳಗಾಗಿದ್ದೀರಿ ಎಂದರೆ ಅವುಗಳ ಬಂಧವನ್ನು ಅಲುಗಿಸಲು ನಿಮಗೆ ಶಕ್ತಿಸಾಲದು. ಹೋಗಲಿ ನೀವು ಅದು ಮಾಡುವುದು ಬೇಡ. ಆದರೆ ಸತ್ಯ ಎಂದು ಗುರುತಿಸುವುದು, ಸುಳ್ಳು ಹೇಳುವುದನ್ನು ತಪ್ಪಿಸುವುದು, ಇಷ್ಟನ್ನಾದರೂ ನೀವು ಮಾಡಬಹುದು. "ನಾನು ಜಮೀನುದಾರನಾಗಿರುವುದು. ಉತ್ಪಾದಕನಾಗಿರುವುದು. ವರ್ತಕನಾಗಿರುವುದು. ಕಲಾವಿದನಾಗಿರುವುದು. ಸಾಹಿತಿಯಾಗಿರುವುದು ಮಾನವತೆಗೆ ಒಳ್ಳೆಯದಾಗಲಿ ಎಂಬ ಉದ್ದೇಶದಿಂದ" ಎಂದು ಕೊಚ್ಚಿಕೊಳ್ಳುವುದನ್ನು ನೀವು ನಿಲ್ಲಿಸಬಹುದು. ನೀವು ಗವರ್ನರ್. ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ ಜಾರ್ ಆಗಿರುವುದು ಸಾರ್ವಜನಿಕರ ಹಿತಕ್ಕಾಗಿಯೇ ಹೊರತು ನಿಮಗೆ ಅದು ಅಭ್ಯಾಸವಾಗಿದೆ. ನಿಮಗೆ ಒಪ್ಪಿಗೆಯೂ ಇದೆ ಎಂಬ ಕಾರಣಕ್ಕೆ ಅಲ್ಲ ಎಂದು ಹೇಳುವುದನ್ನು ನಿಲ್ಲಿಸುವುದೂ ನಿಮ್ಮ ಕೈಯಲ್ಲಿದೆ. ಹಾಗೆಯೇ 'ನಾನು ಸೈನಿಕನಾಗಿ ಮುಂದುವರಿಯುತ್ತಿರುವುದು ಶಿಕ್ಷೆಯ ಹೆದರಿಕೆಯಿಂದಲ್ಲ, ಜನರು ಬದುಕಲು ಅವರ ಭದ್ರತೆಗೆ ಸೇನೆ ತುಂಬ ಅಗತ್ಯ' ಎಂದು ಹೇಳುವುದೇಕೆ? ಹೀಗಲ್ಲ ಹೇಳಿ ನೀವೂ ಅದನ್ನು ನಂಬಿಕೊಂಡು ಇತರರನು

ನಂಬಿಸುವ ಬದಲು ಇದನ್ನೆಲ್ಲ ನಿಲ್ಲಿಸಿಬಿಡುವುದು ನಿಮ್ಮ ಕೈಯಲ್ಲಿದೆ. ಇದೊಂದರಲ್ಲೇ ನಿಮ್ಮ ಜೀವನದ ಭದ್ರತೆ ಅಡಗಿದೆ. ನಿಮ್ಮನ್ನು ಸುಳ್ಳಿನಿಂದ ಬೇರ್ಪಡಿಸಿಕೊಳ್ಳುವುದು ಮತ್ತು ಸತ್ಯವನ್ನು ಹೇಳುವುದು, ಇವು ಮುಖ್ಯ.

ನೀವು ಸುಳ್ಳಿನಿಂದ ಮುಕ್ತರಾದರೆ ಸಾಕು. ನಿಮ್ಮ ಸ್ಥಿತಿಗತಿ ಖಂಡಿತವಾಗಿ ಬದಲಾಗುತ್ತದೆ.

ಮನುಷ್ಯ ಸ್ವತಂತ್ರನಾಗಲು ಸಾಧ್ಯವಿರುವುದು ಮತ್ತು ಪರಿಸ್ಥಿತಿ ಅವನ ಅಧೀನ ದಲ್ಲಿರುವುದು ಬದುಕಿನಲ್ಲಿ ಇದೊಂದು ಪ್ರಸಂಗದಲ್ಲಿ ಮಾತ್ರ. ಉಳಿದುದೆಲ್ಲ ಅವನ ಶಕ್ತಿಗೆ ಮೀರಿದ್ದು. ಸತ್ಯವನ್ನು ಗ್ರಹಿಸುವುದು ಮತ್ತು ಹೇಳುವುದು ಇದೇ ಮನುಷ್ಯನಿಗೆ ಮುಕ್ತ ಕ್ಷೇತ್ರ.

ಆದರೂ ನಿಮ್ಮಂತಹ ಇತರ ಕ್ಷುದ್ರ ಅಪರಾಧೀ ಜೀವಿಗಳು ನೀವು ಸೈನಿಕ. ಜಮೀನುದಾರ, ಶ್ರೀಮಂತ, ಪುರೋಹಿತ. ಸೈನಿಕ. ದಂಡನಾಯಕ ಎಂದು ಮುಂತಾಗಿ ಹೇಳಿ ನಂಬಿಕೆ ಹುಟ್ಟಿಸುತ್ತಾನೆ. ಅಷ್ಟರಿಂದಲೇ ನೀವು ನಿಮ್ಮ ಹೃದಯಕ್ಕೂ ವಿವೇಕಕ್ಕೂ ದೂರವಾದ ಕ್ರೂರ ಕೃತ್ಯಗಳಲ್ಲಿ ತೊಡಗುತ್ತೀರಿ. ಜನರನ್ನು ಹಿಂಸಿಸಿ ಸುಲಿಗೆ ಮಾಡಿ ಕೊಲ್ಲುತ್ತೀರಿ. ಅವರ ಸಂಕಟಗಳೇ ನಿಮ್ಮ ಇರುವಿಕೆಗೆ ಆಧಾರವಾಗಿವೆ. ಎಲ್ಲಕ್ಕಿಂತ ಮಿಗಿಲಾಗಿ ಸತ್ಯವನ್ನು ಒಪ್ಪಿಕೊಳ್ಳುವ ಮತ್ತು ತಿಳಿಯಪಡಿಸುವ ಬದುಕಿನ ಒಂದು ಮುಖ್ಯ ಕರ್ತವ್ಯವನ್ನು ಕುರಿತು ಅದು ನಿಮಗೆ ಗೊತ್ತೇ ಇಲ್ಲ ಎಂಬಂತೆ ಬಹಳ ಎಚ್ಚರಿಕೆ ಯಿಂದ ನಟಿಸುತ್ತೀರಿ. ಅದನ್ನು ಮುಚ್ಚಿಡುತ್ತೀರಿ. ಇದರಿಂದ ಯಾವ ಏಕೈಕ ಉದ್ದೇಶದಿಂದ ನಿಮ್ಮನ್ನು ನೇಮಿಸಲಾಗಿದೆಯೋ ಅದಕ್ಕೆ ತದ್ವಿರುದ್ಧವಾಗಿ ನಡೆದುಕೊಳ್ಳುತ್ತೀರಿ.

ಹಾಗೆ ಮಾಡಲು ನಿಮ್ಮನ್ನು ಪ್ರೇರಿಸುವ ಸಂದರ್ಭಗಳು ಯಾವುವು? ಯಾವುದೇ ಕ್ಷಣದಲ್ಲಿ ಸಾಯಬಹುದಾದ ನಶ್ವರ ಜೀವಿಯಾದ ನೀವು ಸಾವಿನ ಶಿಕ್ಷಾಪತ್ರಕ್ಕೆ ಸಹಿ ಹಾಕುತ್ತೀರಿ, ಯುದ್ಧ ಘೋಷಿಸುತ್ತೀರಿ. ಯುದ್ಧ ಮಾಡುತ್ತೀರಿ. ಕಾರ್ಮಿಕರನ್ನು ಅಟ್ಟುತ್ತೀರಿ. ತೀರ್ಮಾನಗಳನ್ನು ಕೈಗೊಳ್ಳುತ್ತೀರಿ. ಜನಗಳನ್ನು ಶಿಕ್ಷಿಸುತ್ತೀರಿ. ಸುತ್ತಲೂ ಬಡವರೇ ಇದ್ದರೂ ನೀವು ಭೋಗಜೀವನ ನಡೆಸುತ್ತೀರಿ. ದುರ್ಬಲ ಜನ ನಿಮ್ಮನ್ನು ನಂಬಿ ಬಂದಾಗ ಮನುಷ್ಯರ ಕರ್ತವ್ಯಗಳನ್ನು ಕುರಿತು ಭಾಷಣ ಬಿಗಿಯುತ್ತೀರಿ. ನೀವು ಹೀಗೆ ಮಾಡುತ್ತಿರುವ ಕ್ಷಣದಲ್ಲೇ ಒಂದು ಕೀಟವೋ. ಗುಂಡೋ, ಹಾರಿಬಂದು ನಿಮ್ಮ ಮೇಲೆ ಎರಗಬಹುದು. ಆಗನೀವು ಗಂಟಲಲ್ಲಿ ಗೊರಗೊರಸಿ ಬಿದ್ದು ಸಾಯಬಹುದು. ಆಗ ನೀವು ಮಾಡಿರುವ ಪಾತಕವನ್ನು ಸರಿದೂಗಿಸಲು ನಿಮಗೆ ಅವಕಾಶವೇ ಇಲ್ಲದಂತಾ ಗುತ್ತದೆ. ಈ ಅನಂತವಾದ ಜೀವನದಲ್ಲಿ ನೀವು ಮಾಡಲೇಬೇಕಾಗಿದ್ದ ಒಂದು ಮುಖ್ಯ ಕರ್ತವ್ಯವನ್ನು ಪೂರೈಸದೆ ನಿಮ್ಮ ಪಾಲಿನ ಒಂದೇ ಒಂದು ಜೀವನವನ್ನು ಹಾಳು ಮಾಡಿಕೊಳ್ಳುತ್ತೀರಿ.

ಅದು ಎಷ್ಟೇ ಸರಳವಾಗಿ ಎಷ್ಟೇ ಹಳೆಯದಾಗಿರಬಹುದು. ಕಪಟಾಚಾರದಿಂದ ನಾವು ಅದನ್ನು ಎಷ್ಟೇ ಜಡಗೊಳಿಸಲು ಯತ್ನಿಸಿರಬಹುದು. ಆದರೆ ಈ ಸ್ಪಷ್ಟವಾದ ಸರಳ ಸತ್ಯದ ಖಚಿತತೆಯನ್ನು ಯಾವುದೂ ನಾಶಪಡಿಸಲಾರದು. ನಮ್ಮ ಜೀವನ ಅಪರಿಹಾರ್ಯವಾದ ಸಂಕಟಗಳಿಂದ ಕೂಡಿದ್ದು ಮುಂದೆ ತಪ್ಪಿಸಲು ಸಾಧ್ಯವೇ ಇಲ್ಲದ ಸಾವಿನಿಂದ ಕೊನೆಗಾಣುತ್ತದೆ. ಸಾವು ನಮಗೆ ಯಾವುದೇ ಕ್ಷಣದಲ್ಲಿ ಬರಬಹುದು. ಹೊರಗಿನ ಯಾವ ಪ್ರಯತ್ನಗಳೂ ನಮ್ಮ ಬದುಕನ್ನು ರಕ್ಷಿಸಲಾರವು. ಆದುದರಿಂದ ನಮಗೆ ಉಳಿದಿರುವ ದಾರಿ ಒಂದೇ. ಬದುಕಿಗೆ ಇರುವ ಅರ್ಥ ಒಂದೇ. ನಮ್ಮನ್ನು ಈ ಜೀವನಕ್ಕೆ ತಂದು ಹಾಕಿ ವಿವೇಕ ಪ್ರಜ್ಞೆಗಳ ನಂಬಿಕೆಯ ಮಾರ್ಗದರ್ಶಿಯನ್ನು ಕೊಟ್ಟಿರುವ ಆ ದಿವ್ಯ ಶಕ್ತಿ ನಮ್ಮಿಂದ ಏನಾಗಬೇಕೆಂದು ಬಯಸುತ್ತದೆಯೋ ಅದನ್ನು ತೃಪ್ತಿಕರವಾಗಿ ಪೂರೈಸುವುದು.

ಆ ದಿವ್ಯ ಚೈತನ್ಯವು ನಮ್ಮ ನಶ್ವರ, ಲೈಂಗಿಕ ಜೀವನ ಸ್ಥಾಪನೆ, ಸಮಾಜ ಅಥವಾ ರಾಜ್ಯದ ಜೀವನ ಸ್ಥಿರೀಕರಣ ಮುಂತಾದ ಅಸಾಧ್ಯವಾದ ಮತ್ತು ಅವಿವೇಕದ ಕೆಲಸಗಳನ್ನು ಮಾಡಲಿ ಎಂದು ಬಯಸುವುದಿಲ್ಲ. ಯಾವುದು ಖಚಿತವೋ ವಿವೇಕಪೂರ್ಣವೋ ಮಾಡಲು ಸಾಧ್ಯವೋ ಅಂಥದನ್ನೇ ಅದು ಕೇಳುತ್ತದೆ. ಉದಾ: ದೇವರ ರಾಜ್ಯದ ಸೇವೆ. ಅಂದರೆ ಎಲ್ಲ ಜೀವಿಗಳಲ್ಲೂ ಸಾಧ್ಯವಾದಷ್ಟು ಹೆಚ್ಚಿನ ಪ್ರಮಾಣದಲ್ಲಿ ಒಗ್ಗಟ್ಟನ್ನು ತರಲು ಸಹಕರಿಸುವುದು. ಈ ಒಗ್ಗಟ್ಟು ಸತ್ಯದ ವಿಚಾರದಲ್ಲಿ ಮಾತ್ರ ಸಾಧ್ಯ. ಯಾವಾಗಲೂ ನಮ್ಮ ಅಧೀನದಲ್ಲಿರುವ ಶಕ್ತಿ ಎಂದರೆ ಅದೊಂದೇ. ಆದ್ದರಿಂದ ಸತ್ಯವನ್ನು ಗುರುತಿಸುವುದನ್ನು ಮತ್ತು ಹೇಳುವುದನ್ನು ಆ ದಿವ್ಯ ಶಕ್ತಿಯು ನಮ್ಮಿಂದ ಬಯಸುತ್ತದೆ.

'ಮೊದಲು ದೇವರ ರಾಜ್ಯವನ್ನೂ ಆತನಸತ್ಯನಿಷ್ಠೆಯನ್ನೂ ಶೋಧಿಸಿ. ಅನಂತರ ಇವೆಲ್ಲಾ ನಿಮ್ಮಲ್ಲಿ ಬಂದು ಸೇರಿಕೊಳ್ಳುತ್ತವೆ'.

ದೇವರ ರಾಜ್ಯವನ್ನು ಬೆಂಬಲಿಸುವುದೊಂದೇ ಜಗತ್ತಿಗೆ ಸೇವೆಸಲ್ಲಿಸುವ ದಾರಿಯಾಗಿದೆ. ಇದೇ ಮಾನವ ಜೀವನದ ಮುಖ್ಯ ಉದ್ದೇಶವೂ ಆಗಿದೆ. ಪ್ರತಿ ವ್ಯಕ್ತಿಯೂ ಸತ್ಯವನ್ನು ಗುರುತಿಸುವ ಮತ್ತು ಅನುಸರಿಸುವ ಕಾರ್ಯದಲ್ಲಿ ತೊಡಗಿದರೆ ಈ ಸೇವೆ ಪರಿಪೂರ್ಣವಾಗುತ್ತದೆ.

'ಬಾಹ್ಯಾಡಂಬರದಿಂದ ವರ್ತಿಸಿದರೆ ದೇವರ ರಾಜ್ಯ ಲಭಿಸುವುದಿಲ್ಲ. ಅದು ಇಲ್ಲಿದೆ ನೋಡು, ಅಲ್ಲಿದೆ ನೋಡು ಎಂದು ದೇವರು ಹೇಳುವುದಿಲ್ಲ. ಏಕೆಂದರೆ ದೇವರ ರಾಜ್ಯ ನಿಮ್ಮೊಳಗೇ ಇದೆ'.

[1893]

# ಕೊಲ್ಲಬೇಡ

'ಕೊಲ್ಲಬೇಡ' – ಎಕ್ಸೊಡಸ್ [XX 13.]

'ಅನುಯಾಯಿ ಗುರುವಿಗಿಂತ ಮೇಲಲ್ಲ: ಆದರೆ ತನ್ನನ್ನು ತಾನು ಪರಿಪೂರ್ಣವಾಗಿಸಿಕೊಂಡಾಗ ಗುರುವಿನಂತೆಯೇ ಆಗಬಲ್ಲ.' ಲ್ಯೂಕ್ [VI. 40.]

'ಕತ್ತಿಯನ್ನು ಎತ್ತುವವರೆಲ್ಲ ಕತ್ತಿಯೊಂದಿಗೇ ನಾಶವಾಗುತ್ತಾರೆ'. [ಮ್ಯಾಥ್ಯೂ. XXVI - 52]

ಆದ್ದರಿಂದ ಬೇರೆಯವರು ನಿನಗೆ ಏನು ಮಾಡಬೇಕೆಂದು ಬಯಸುತ್ತೀಯೋ ಅದನ್ನೇ ಅವರಿಗೂ ನೀನು ಮಾಡು.' ಮ್ಯಾಥ್ಯೂ [VII-12]

ವಿಚಾರಣೆಯ ಅನಂತರ ಒಂದನೆಯ ಚಾರ್ಲ್ಸ್, ಹದಿನಾಲ್ಕನೆಯ ಲೂಯಿ ಮತ್ತು ಮೆಕ್ಸಿಕೊವಿನ ಮ್ಯಾಕ್ಸಿಮಿಲನ್ ದೊರೆಗಳು ಗಲ್ಲಿಗೇರಿಸಲ್ಪಟ್ಟರೆ ಅಥವಾ ರಾಜಾಸ್ಥಾನದ ಪಿತೂರಿಗಳಿಂದ ಮೂರನೆಯ ಪೀಟರ್, ಪಾಲ್ ಮತ್ತು ಬೇರೆ ಬೇರೆ ಸುಲ್ತಾನರು, ಶಾಗಳು ಹಾಗೂ ಖಾನರು ಕೊಲ್ಲಲ್ಪಟ್ಟರೆ ಆ ಬಗ್ಗೆ ಹೇಳಬೇಕಾದ್ದು ಬಹಳ ಕಡಿಮೆ. ಫ್ರಾನ್ಸಿನ ನಾಲ್ಕನೇ ಹೆನ್ರಿ, ಎರಡನೆಯ ಅಲೆಕ್ಸಾಂಡರ್, ಆಸ್ಟ್ರಿಯದ ರಾಣಿ, ಗತಿಸಿದ ಪರ್ಷಿಯದ ಶಾ ಮತ್ತು ತೀರ ಇತ್ತೀಚೆಗೆ ಹಂಬರ್ಟ್ ಇವರುಗಳು ಅಂಥ ವಿಚಾರಣೆಯಾಗಲಿ ಅಥವಾ ರಾಜಾಸ್ಥಾನದ ಪಿತೂರಿಯಾಗಲಿ ನಡೆಯದೆ ಕೊಲ್ಲಲ್ಪಟ್ಟಾಗ ಆ ಕೊಲೆಗಳು ರಾಜರು ಮತ್ತು ಮಹಾರಾಜರುಗಳಲ್ಲಿ ಹಾಗೂ ಅವರ ಅನುಯಾಯಿಗಳಲ್ಲಿ – ಅವರು ಮಾತ್ರ ತಾವೆಂದೂ ಇಂಥ ಕೊಲೆಗಳಲ್ಲಿ ಪಾಲುಗೊಂಡೇ ಇಲ್ಲವೆನ್ನುವಂತೆ ಅಥವಾ ಇವುಗಳಿಂದ ಯಾವ ಲಾಭವನ್ನೂ ಪಡೆದೇ ಇಲ್ಲವೆನ್ನುವಂತೆ ಅಥವಾ ಇದಕ್ಕೆ ಯಾವ ಪ್ರಚೋದನೆಯನ್ನೂ ನೀಡೇ ಇಲ್ಲವೆನ್ನುವಂತೆ – ಅತ್ಯಂತ ತೀವ್ರವಾದ ಆಶ್ಚರ್ಯವನ್ನೂ ಮತ್ತು ಕೋಪವನ್ನೂ ಉದ್ರೇಕಿಸಿಬಿಡುತ್ತವೆ. ಆದರೆ ವಾಸ್ತವವಾಗಿ ಹೀಗೆ ಕೊಲೆಯಾದ ರಾಜರುಗಳಲ್ಲಿ ಅತ್ಯಂತ ಮೃದುವಾದವರೂ (ಉದಾಹರಣೆಗೆ ಎರಡನೆಯ ಅಲೆಕ್ಸಾಂಡರ್ ಅಥವಾ ಹಂಬರ್ಟ್ ಅವರು), ಅವರ ದೇಶಗಳಲ್ಲಿ ನಡೆದ ಮರಣದಂಡನೆಗಳ ಬಗ್ಗೆ ಹೇಳದಿದ್ದರೂ, ಯುದ್ಧರಂಗದಲ್ಲಿ ನಾಶವಾದ ಲಕ್ಷಾಂತರ ಜನರ ಕೊಲೆಗಳಲ್ಲಿ ಸಹಭಾಗಿಗಳೂ, ಪ್ರಚೋದಕರೂ ಮತ್ತು ಸಹಾಪರಾಧಿಗಳೂ ಆಗಿದ್ದಾರೆ. ಇನ್ನೂ ಹೆಚ್ಚು ಕ್ರೂರಿಗಳಾದ ರಾಜರು ಮತ್ತು ಮಹಾರಾಜರು ಇದಕ್ಕೂ ಅಧಿಕ ರೀತಿಯಲ್ಲಿ ನೂರಾರು ಸಾವಿರಾರು ಹಾಗೂ ಲಕ್ಷಾಂತರ ಕೊಲೆಗಳಿಂದ ಕಳಂಕಿತರಾಗಿದ್ದಾರೆ.

ವಿಶೇಷವಾಗಿ ನಿರತರಾದ. ಇಂಥ ಕೊಲೆಯನ್ನು ತಮ್ಮ ಉದ್ಯೋಗವಾಗಿ ಮಾಡಿಕೊಂಡ ಹಾಗೂ ಸೈನಿಕ ಸಮವಸ್ತ್ರಗಳನ್ನು ಧರಿಸಿ ತಮ್ಮ ಎರಡೂ ಪಕ್ಕಗಳಲ್ಲಿ ಕೊಲೆಗಡುಕ ಖಡ್ಗಗಳನ್ನು ಧರಿಸಿದ ಇದೇ ಜನರೇ – ಇವರೇ – ತಮ್ಮಲ್ಲಿ ಒಬ್ಬನು ಕೊಲೆಯಾದಾಗ ಭಯಭೀತರಾಗುವವರು ಮತ್ತು ಕೋಪೋದ್ರೇಕಗೊಳ್ಳುವವರು.

ರಾಜರ ಕೊಲೆ – ಅಂದರೆ ಹಂಬರ್ಟನ ಕೊಲೆ – ಭೀಕರವಾದುದಾಗಿರುವುದು ಅದರ ಕ್ರೌರ್ಯಕ್ಕಾಗಿ ಅಲ್ಲ. ರಾಜರು ಮತ್ತು ಮಹಾರಾಜರುಗಳ ಆಜ್ಞೆಗಳಿಂದ ಆದ ಕಾರ್ಯಗಳು – ಹಿಂದೆ ನಡೆದಿದ್ದಂತಹ ಸಂತ ಬಥೋಲೊಮೋಯಿಯ ಕಗ್ಗೊಲೆ, ಧಾರ್ಮಿಕ ಕಗ್ಗೊಲೆಗಳು, ದಂಗೆಯೆದ್ದ ರೈತರ ಭೀಕರ ದಮನಗಳು ಮತ್ತು ಪ್ಯಾರಿಸಿನ ದಂಗೆಗಳೇ ಅಲ್ಲದೆ ಇಂದಿನ ಸರ್ಕಾರಗಳು ನಡೆಸುತ್ತಿರುವ ಗಲ್ಲು ಶಿಕ್ಷೆಗಳು, ಏಕಾಕಿತನದಿಂದ ನರಳುವಂತೆ ಸೆರೆಮನೆಯಲ್ಲಿರಿಸಿ ಕೊಲ್ಲುವುದು. ಶಿಸ್ತಿನ ಸೈನ್ಯದ ತುಕಡಿಗಳು ನೇಣುಹಾಕುವುದು, ತಲೆ ಹಾರಿಸುವುದು ಹಾಗೂ ಯುದ್ಧಗಳಲ್ಲಿ ಗುಂಡಿಕ್ಕಿ ಕಗ್ಗೊಲೆ ಮಾಡುವುದು – ಇವುಗಳಲ್ಲಿ, ಅರಾಜಕರೆಂಬುವರು ಮಾಡಿದ ಕೊಲೆಗಳಿಗಿಂತ ಹೆಚ್ಚು ಕ್ರೂರವಾದುವು ಎಂದೇ ಹೇಳಬೇಕು. ಈ ಕೊಲೆಗಳು ಭೀಕರವಾಗುವುದು ಅಪಾತ್ರ ವಾದುವೆಂಬ ಕಾರಣಕ್ಕಾಗಿ ಅಲ್ಲ. ಎರಡನೆಯ ಅಲೆಕ್ಸಾಂಡರ್ ಮತ್ತು ಹಂಬರ್ಟರು ಸಾವಿಗೆ ಅರ್ಹರಲ್ಲವಾದರೆ ಪ್ಲೆವ್ನಾದಲ್ಲಿ ನಾಶವಾದ ಸಾವಿರಾರು ಜನ ರಷ್ಯನರು ಅಥವಾ ಅಬಿಸೀನಿಯನದಲ್ಲಿ ನಾಶವಾದ ಇಟಾಲಿಯನರು ಇನ್ನೂ ಹೆಚ್ಚು ಅರ್ಹರಲ್ಲ. ಇಂಥ ಕೊಲೆಗಳು ಭೀಕರವಾಗಿರುವುದು ಅವು ಕ್ರೂರವೂ ಅಪಾತ್ರವೂ ಆಗಿರುವುದ ರಿಂದಲ್ಲ – ಅವುಗಳನ್ನು ಮಾಡಿದವರ ಅಕಾರಣ ಕಟುಕತನದಿಂದ. ದೊರೆಗಳನ್ನು ಕೊಲ್ಲುವವರು ದಮನಮಾಡಲ್ಪಟ್ಟ ಜನರ ಸಂತಾಪಗಳಿಂದ ಕೋಪೋದ್ರಿಕ್ತರಾಗಿ ಅದಕ್ಕೆ ಅಲೆಕ್ಸಾಂಡರ್ ಅಥವಾ ಕಾರ್ನಾಟ್ ಅಥವಾ ಹಂಬರ್ಟರನ್ನು ಹೊಣೆಮಾಡಿ ಕಾರ್ಯ ಪ್ರವೃತ್ತರಾದರೆ ಅಥವಾ ಪ್ರತೀಕಾರದ ವೈಯಕ್ತಿಕ ಭಾವನೆಗಳಿಂದ ಹಾಗೆ ಮಾಡಿದ್ದರೆ ಅವರ ನಡೆವಳಿಕೆ ಎಷ್ಟೋ ಅನೈತಿಕವಾಗಿದ್ದರೂ ಅರ್ಥಮಾಡಿಕೊಳ್ಳಬಲ್ಲಂಥದ್ದು. ಆದರೆ ಬ್ರೆಸ್ಕಿಯನ್ನು ಹೊರಕ್ಕಟ್ಟಿದ (ಅರಾಜಕರು ಅವರು ಎಂದು ನಮಗೆ ಹೇಳುತ್ತಾರೆ) ಮತ್ತು ಈಗ ಯೂರೋಪಿನ ಮತ್ತೊಬ್ಬ ಮಹಾರಾಜನನ್ನು ಬೆದರಿಸುತ್ತಿರುವ ಈ ಜನರ ತಂಡ ಒಂದು ತಲೆಯನ್ನು ಕತ್ತರಿಸುತ್ತಿದ್ದಂತೆಯೇ ಮತ್ತೊಂದು ತಲೆ ಮೊಳೆತು ಬರುವ ಪೌರಾಣಿಕ ದೈತ್ಯನ ತಲೆಹಾರಿಸುವುದರಷ್ಟೇ ನಿಷ್ಪ್ರಯೋಜಕವಾಗಿ ಮಾನವರನ್ನು ಕೊಲ್ಲುವುದಕ್ಕಿಂತ ಮಾನವತೆಯ ಸ್ಥಿತಿಯನ್ನು ಉತ್ತಮಗೊಳಿಸುವಂಥ ಯಾವುದೇ ಒಂದು ಹೊಸ ಸಾಧನವನ್ನೇಕೆ ಹುಡುಕುವುದಿಲ್ಲ? ರಾಜರು ಮತ್ತು ಮಹಾರಾಜರು ಬಹುಹಿಂದೆಯೇ ತಮಗಾಗಿ ಗುಂಡು ತುಂಬಿದ ಬಂದೂಕಿನಂಥ ವ್ಯವಸ್ಥೆಯೊಂದನ್ನು ರೂಪಿಸಿಕೊಂಡಿದ್ದರು: ಒಂದು ಗುಂಡು ಹೊರಚಿಮ್ಮುತ್ತಿದ್ದಂತೆಯೇ ಮತ್ತೊಂದು ಗುಂಡು ಅದರ ಜಾಗವನ್ನು ತುಂಬಿಕೊಳ್ಳುವುದು. ದೊರೆಯು ಮಡಿದ: ದೊರೆಯು

ಚಿರಾಯುವಾಗಿರಲಿ! – ಆದ್ದರಿಂದ ಅವರನ್ನು ಕೊಲ್ಲುವುದರಿಂದ ಏನು ಪ್ರಯೋಜನ ಹೇಳಿ ?

ಅತ್ಯಂತ ಮೇಲು ನೋಟದ ದೃಷ್ಟಿಗೆ ಮಾತ್ರ ಈ ಜನಗಳನ್ನು ಕೊಲ್ಲುವುದು ಯುದ್ಧಗಳ ವಿನಾಶದಿಂದ ಹಾಗೂ ದಮನ ಕಾರ್ಯಗಳಿಂದ ಮಾನವ ಜೀವನವನ್ನು ರಕ್ಷಿಸುವ ಸಾಧನವಾಗಿ ತೋರುತ್ತದೆ.

ನಿಕೋಲಾಸ್ ಅಥವಾ ಅಲೆಕ್ಸಾಂಡರ್, ಫ್ರೆಡರಿಕ್ ಅಥವಾ ವಿಲ್‌ಹೆಲ್ಮ್, ನೆಪೋಲಿಯನ್ ಅಥವಾ ಲೂಯಿ, ಪಾಲ್ಮರ್‌ಸ್ಟನ್ ಅಥವಾ ಗ್ಲಾಡ್‌ಸ್ಟೋನ್, ಮೆಕಿನ್ಲೆ ಅಥವಾ ಇನ್ಯಾರೇ ಸರ್ಕಾರದ ಅಧಿಪತಿಯಾಗಿದ್ದರೂ ಯಾವೊಬ್ಬ ನಿರ್ದಿಷ್ಟ ವ್ಯಕ್ತಿಯೂ ಇದಕ್ಕೆ ಕಾರಣರಲ್ಲ – ಜನಾಂಗಗಳು ನರಳುವಂಥ ಇಂಥ ದಮನ ಕಾರ್ಯಗಳು ಮತ್ತು ಯುದ್ಧಗಳು ನಡೆದೇ ನಡೆದಿವೆಯೆಂಬುದನ್ನು ಪ್ರತಿಯೊಬ್ಬನೂ ಅವಶ್ಯಕವಾಗಿ ನೆನಪಿಡಬೇಕು. ಜನಾಂಗಗಳಿಗೆ ಕ್ಲೇಶ ಉಂಟಾಗುವುದು ನಿರ್ದಿಷ್ಟ ಜನರಿಂದ ಅಲ್ಲ; ಆದರೆ ಕೆಲವೇ ಜನರ ಅಥವಾ ಅನೇಕವೇಳೆ ಒಬ್ಬನೇ ವ್ಯಕ್ತಿಯ ಅಧಿಕಾರದ ರಕ್ಷೆಯಲ್ಲಿ ಸಿಕ್ಕಿ ತಾವೆಲ್ಲ ಬಂಧಿತರಾಗಿರುವಂಥ ಒಂದು ಸಮಾಜದ ವಿಶಿಷ್ಟ ವ್ಯವಸ್ಥೆಯಿಂದ. ಹೀಗೆ ಲಕ್ಷಾಂತರ ಜನರ ಹಣೆಬರಹವನ್ನು ನಿರ್ಣಯಿಸಬಲ್ಲಂಥ ಅಸ್ವಾಭಾವಿಕ ಸ್ಥಾನದಿಂದ ಅಡ್ಡದಾರಿ ಹಿಡಿಯುವ ಅನಾರೋಗ್ಯಕರವಾದ ಸ್ಥಿತಿಯಲ್ಲಿ ಸದಾ ಇರುವ ಆ ಮನುಷ್ಯ ಯಾವಾಗಲೂ ತನ್ನನ್ನು ಇನ್ನಷ್ಟು ಎತ್ತರಕ್ಕೇರಿಸಿಕೊಳ್ಳುವ ರೋಗದಿಂದ ನರಳುತ್ತಾನೆ; ಆದರೆ ಅಸಾಧಾರಣವಾದ ಆತನ ಸ್ಥಾನ ಅವನ್ನೆಲ್ಲಾ ಕಾರ್ಯಗಳನ್ನೂ ಸಾಮಾನ್ಯರ ದೃಷ್ಟಿಯಿಂದ ಮರೆಮಾಡಿಬಿಡುತ್ತದೆ.

ಇಂಥ ಜನ ತಮ್ಮ ಅತ್ಯಂತ ಎಳೆಯ ದಿನಗಳಿಂದ ಹಿಡಿದು ಮಸಣದವರೆಗೆ ಮೂರ್ಖ ಶ್ರೀಮಂತಿಕೆಯ ವೈಭವಗಳು ಮತ್ತು ತಮ್ಮ ಸುತ್ತ ಇರುವ ಭ್ರಮೆಯ ಹಾಗೂ ಹೊಗಳಿಕೆಯ ವಾತಾವರಣದಿಂದ ಬಳಸಲ್ಪಟ್ಟಿರುವುದೇ ಅಲ್ಲದೆ. ಅವರುಗಳ ಎಲ್ಲ ವಿದ್ಯಾಭ್ಯಾಸ ಹಾಗೂ ಎಲ್ಲ ವೃತ್ತಿಗಳು ಯಾವಾಗಲೂ ಒಂದೇ ಒಂದು ಗುರಿಯತ್ತ ಕೇಂದ್ರೀಕೃತವಾಗಿರುತ್ತವೆ: ಅದೆಂದರೆ ಹಿಂದಿನ ಕೊಲೆಗಳ ಬಗ್ಗೆ ಕಲಿಯುವುದು. ವರ್ತಮಾನದ ಅತ್ಯುತ್ತಮ ಕೊಲೆಯ ವಿಧಾನಗಳ ಬಗ್ಗೆ ಕಲಿಯುವುದು ಮತ್ತು ಭವಿಷ್ಯತ್ತಿನ ಕೊಲೆಗಳಿಗೆ ಅತ್ಯುತ್ತಮ ಸಿದ್ಧತೆಗಳನ್ನು ನಡೆಸುವುದು. ಎಲ್ಲಾ ಸಾಧ್ಯವಾದ ರೂಪಗಳಲ್ಲಿ ಕೊಲ್ಲುವುದನ್ನು ಅವರು ಬಾಲ್ಯದಿಂದಲೂ ಕಲಿಯುತ್ತಾರೆ. ತಮ್ಮ ಜೊತೆಯಲ್ಲಿ ಯಾವಾಗಲೂ ಕೊಲೆಪಾತಕ ಆಯುಧ – ಕತ್ತಿ ಅಥವಾ ಹರಿತವಾದ ಚೂರಿ – ಗಳನ್ನು ಅವರು ಒಯ್ಯುತ್ತಾರೆ; ವಿಧವಿಧವಾದ ಸಮವಸ್ತ್ರಗಳಿಂದ ತಮ್ಮನ್ನು ಅಲಂಕರಿಸಿಕೊಂಡಿರುತ್ತಾರೆ; ಪ್ರದರ್ಶನಗಳು. ತನಿಖೆಗಳು ಮತ್ತು ಸೈನಿಕ ಕಾರ್ಯಾಚರಣೆ ಗಳಲ್ಲಿ ಅವರು ಹಾಜರಾಗುತ್ತಾರೆ; ಸೈನ್ಯಕ್ಕೆ ತುಕಡಿಗಳಿಗೆ ಅಧಿಕಾರಿಗಳಿಗೆ ನಾಮಕರಣ

ಮಾಡುತ್ತ ಮತ್ತು ಆಜ್ಞೆಗಳನ್ನು ನೀಡುತ್ತ ಒಬ್ಬರೊಬ್ಬರನ್ನು ಅವರು ಭೇಟಿಮಾಡುತ್ತಾರೆ; ಆದರೆ ಯಾವನೊಬ್ಬನೂ ಅವರೇನು ಮಾಡುತ್ತಿದ್ದಾರೆಂಬುದನ್ನು ಮುಚ್ಚುಮರೆಯಿಲ್ಲದೆ ಸ್ಪಷ್ಟಗೊಳಿಸುವುದಿಲ್ಲ ಅಥವಾ ಹೀಗೆ ಕೊಲ್ಲುವುದಕ್ಕಾಗಿ ಸಿದ್ಧತೆಗಳನ್ನು ನಡೆಸುವುದರಲ್ಲಿಯೇ ಮುಳುಗಿರುವುದು ವಿದ್ರೋಹಕರವೂ ಮತ್ತು ಅಪರಾಧಾತ್ಮಕವೂ ಆದದ್ದೆಂದು ಹೇಳುವುದಿಲ್ಲ. ಅದಕ್ಕೆ ಬದಲಾಗಿ ಅವರು ಎಲ್ಲಾ ಕಡೆಗಳಿಂದಲೂ ತಮ್ಮ ಎಲ್ಲ ಚಟುವಟಿಕೆಗಳ ಬಗ್ಗೆಯೂ ಅಂಗೀಕಾರ ಮತ್ತು ಉತ್ಸಾಹಗಳನ್ನು ಮಾತ್ರ ಕಾಣುತ್ತಾರೆ. ಪ್ರತಿಯೊಂದು ಸಲ ಪ್ರದರ್ಶನ ಹಾಗೂ ಪರಿಶೀಲನೆಗೆ ಅವರು ಹೊರಬಂದಾಗಲೂ ಅವರನ್ನು ಅಭಿನಂದಿಸಲು ಅವರ ಸುತ್ತ ಗುಂಪು ಗುಂಪಾಗಿ ಜನ ಉತ್ಸಾಹದಿಂದ ನೆರೆಯುತ್ತಾರೆ. ಇದರಿಂದ ಇಡೀ ಜನಾಂಗವೇ ತಮ್ಮ ನಡವಳಿಕೆಯನ್ನು ದೃಢೀಕರಿಸಿದಂತೆ ಅವರಿಗೆ ಭಾಸವಾಗುತ್ತದೆ. ಎಲ್ಲಾ ಜನಗಳ ಭಾವನೆಗಳ ಅಭಿವ್ಯಕ್ತಿ ಎಂಬಂತೆ ಅವರಿಗೆ ತೋರುವ, ಅಥವಾ ಕನಿಷ್ಠ ಎಂದರೆ ಜನರ ಅತ್ಯುತ್ತಮ ಪ್ರತಿನಿಧಿಗಳಂತೆ ತೋರುವ ಹಾಗೂ ಅವರನ್ನು ಮುಟ್ಟಬಲ್ಲ ಪತ್ರಿಕಾತಂಡದ ಏಕೈಕ ವಿಭಾಗವೂ ಕೂಡ ಅವರ ಪ್ರತಿಯೊಂದು ಮಾತನ್ನೂ ಮತ್ತು ಕಾರ್ಯವನ್ನೂ—ಅದೆಷ್ಟೇ ಮೂರ್ಖತನದ್ದಾಗಿರಲಿ ಅಥವಾ ದುಷ್ಟತನದ್ದಾಗಿರಲಿ – ಅತ್ಯಂತ ಗುಲಾಮತನದಿಂದ ದೊಡ್ಡದೆಂದು ಹೊಗಳುತ್ತದೆ. ಅವರ ಸುತ್ತ ಇರುವ ಜನರು – ಮಾನವತೆಯ ಘನತೆಯನ್ನು ಗೌರವದಿಂದ ಕಾಣದ ಧರ್ಮಪೀಠದವರು ಮತ್ತು ಅಧಿಕಾರ ವರ್ಗದವರು – ಪರಸ್ಪರವಾಗಿ ಅತ್ಯಂತ ನಯಗೊಳಿಸಿದ ಭಟ್ಟಂಗಿತನದಿಂದ ಕಾಲ ಹಾಕುತ್ತಾ, ಏನನ್ನಾದರೂ ಒಪ್ಪಿಕೊಳ್ಳುತ್ತ ಮತ್ತು ಎಲ್ಲದರ ಬಗ್ಗೆಯೂ ಮೋಸಗೊಳ್ಳುತ್ತ ಬದುಕನ್ನು ಇದ್ದಂತೆ ಕಾಣುವುದನ್ನೇ ಅಸಾಧ್ಯವಾಗಿ ಮಾಡಿಕೊಂಡು ಬಿಡುತ್ತಾರೆ. ಅಂಥ ದೊರೆಗಳು ನಿಜವಾಗಿಯೂ ಸ್ವತಂತ್ರನಾಗಿರುವ ಯಾವ ಒಬ್ಬ ವ್ಯಕ್ತಿಯನ್ನೂ ನೋಡದೆಯೇ ಅಥವಾ ಎಂದೂ ಸತ್ಯವನ್ನು ಕಾಣದೆಯೇ ನೂರು ವರ್ಷಗಳೂ ಬದುಕಿಬಿಡಬಹುದು. ಈ ಜನರ ಮಾತು ಮತ್ತು ಕೃತಿಗಳ ಬಗ್ಗೆ ಕೇಳಿದರೆ ಯಾರಾದರೂ ಗಾಬರಿಗೊಳ್ಳುತ್ತಾರೆ; ಆದರೆ ಆ ವೇಳೆಯಲ್ಲಿ ಇಂಥ ಸ್ಥಾನಗಳಲ್ಲಿರುವ ಯಾರಾದರೂ ಹೀಗೆಯೇ ವರ್ತಿಸುತ್ತಿದ್ದರೆಂಬುದನ್ನು ಅರ್ಥಮಾಡಿಕೊಳ್ಳಲು ಅವರಿದ್ದ ಸ್ಥಾನವನ್ನಷ್ಟೇ ಗಮನಕ್ಕೆ ತಂದುಕೊಳ್ಳಬೇಕು. ಒಬ್ಬ ವಿವೇಕಿಯಾದ ಮನುಷ್ಯನೇನಾದರೂ ತಾನು, ಅಂಥ ಸ್ಥಾನಕ್ಕೆ ಬಂದರೆ, ಅವನು ಮಾಡಬೇಕಾದ ಏಕೈಕ ವಿವೇಕದ ಕಾರ್ಯವೆಂದರೆ ಅಂಥ ಸ್ಥಾನದಿಂದ ಹೊರಬೀಳುವುದೇ ಆಗಿದೆ. ಅವರಲ್ಲಿ ಉಳಿಯುವ ಯಾರೇ ಆದರೂ ಅವರು ಮಾಡಿದಂತೆಯೇ ಮಾಡುತ್ತಾರೆ.

ಇತರರೊಡನೆ ಬೆರೆಯದ ಶ್ರೀಮಂತ ಪಕ್ಷದ ಸದಸ್ಯನ ಆದರ್ಶಗಳಿಂದ ಕೂಡಿದ ಸಣ್ಣ ಮನಸ್ಸಿನ, ಕೆಟ್ಟ ಶಿಕ್ಷಣದ, ಜಂಬದ ಮನುಷ್ಯನಾದ ಜರ್ಮನಿಯ ದೊರೆಯು ತಲೆಯಲ್ಲಿ ಏನು ನಡೆಯುತ್ತಿರಬೇಕೆಂದರೆ ಅವನು ಹೇಳಿದುದು – ಎಷ್ಟೇ ಮೂರ್ಖ

ತನದ್ದು ಮತ್ತು ಭೀಭತ್ಸವಾದದ್ದು ಆಗಿದ್ದರೂ – ಉತ್ಸಾಹಪೂರ್ಣ ಜೈಕಾರದಿಂದ ಸ್ವಾಗತಿಸಲ್ಪಡಬೇಕು: ಮತ್ತು ಇಡೀ ಪ್ರಪಂಚದ ಎಲ್ಲ ಪತ್ರಿಕೆಯೂ ಅದನ್ನು ಅತ್ಯಂತ ಪ್ರಮುಖವಾದ ಕಾರ್ಯವೊಂದೆಂದು ವ್ಯಾಖ್ಯಾನಿಸಬೇಕು. ಅವನು ಆಜ್ಞೆಮಾಡಿದಾಗ ಸೈನಿಕರು ತಮ್ಮ ತಾಯಿತಂದೆಗಳನ್ನೇ ಕೊಲ್ಲಲು ಸಿದ್ಧರಾಗಬೇಕು: ಪ್ರಜೆಗಳು ಜೈಕಾರ ಮಾಡಬೇಕು: ಅವನು ತನ್ನ ತತ್ವವು ವಜ್ರಮುಷ್ಟಿಯಿಂದ ಕಾರ್ಯಗತವಾಗಬೇಕೆಂದು ಘೋಷಿಸಿದಾಗ ಜನರು ಜೈ ಎನ್ನಬೇಕು. ಚೀನದಲ್ಲಿ ಯಾರನ್ನೂ ಸೆರೆಹಿಡಿಯಬಾರದು. ಆದರೆ ಎಲ್ಲರನ್ನೂ ಕಗ್ಗೊಲೆ ಮಾಡಬೇಕು ಎಂದು ಸೈನಿಕನಿಗೆ ಅವನು ಹೇಳಿದಾಗ ಜನರು ಯಾರೂ ಅವನನ್ನು ಹುಚ್ಚರ ಆಸ್ಪತ್ರೆಗೆ ಸೇರಿಸುವುದಿಲ್ಲ: ಆದರೆ ಜಯಕಾರಗಳನ್ನು ಮಾಡುತ್ತಾರೆ ಮತ್ತೆ ಅವನ ಆಜ್ಞೆಗಳನ್ನು ಪಾಲಿಸಲು ಹಡಗುಗಳಿಗೆ ಧ್ವಜಪಟಗಳನ್ನೇರಿಸುತ್ತಾರೆ. ಅಥವಾ ತಮ್ಮ ಸ್ವಂತ ವಿಚಾರಗಳನ್ನು ತಮ್ಮತಮ್ಮಲ್ಲಿ ಚರ್ಚಿಸಲು ಅವಕಾಶಮಾಡಿಕೊಡಬೇಕೆಂದು ಗೌರವಸ್ಥರಾದ ವೃದ್ಧ ಜನರು ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದಾಗ ಅಂಥ ಸ್ವಾಯತ್ತ ಸರ್ಕಾರದ ಭಾವನೆಗಳನ್ನು ಮುಚ್ಚುಗನಸುಗಳೆಂದು ಘೋಷಿಸುತ್ತ ಎರಡನೆಯ ನಿಕೋಲಸ್ (ಸಹಜವಾಗಿಯೆ ವಿನಯಶಾಲಿಯಾದ ಮನುಷ್ಯ) ಆಡಳಿತವನ್ನು ಆರಂಭಿಸಿದರೆ, ಭೇಟಿಮಾಡಿದ ಪತ್ರಿಕಾವರದಿಗಾರರು ಮತ್ತು ಜನರು ಅವನನ್ನು ಅದಕ್ಕಾಗಿ ಸ್ತುತಿಸುತ್ತಾರೆ. ಅವನು ಬಾಲಿಶವಾದ, ಮೂರ್ಖತನದಿಂದ ಕೂಡಿದ ಹಾಗೂ ಅಷ್ಟಹಾದಿ ಹಿಡಿದ ವಿಶ್ವಶಾಂತಿಯ ಯೋಜನೆಯೊಂದನ್ನು ಮುಂದಿಡುತ್ತಾನೆ; ಮತ್ತೆ ಅದೇ ಘಳಿಗೆಯಲ್ಲಿ ಸೈನ್ಯದ ಶಕ್ತಿವೃದ್ಧಿಗೆ ಆಜ್ಞೆಮಾಡುತ್ತಿರುತ್ತಾನೆ – ಮತ್ತೆ ಇಂಥ ವೇಳೆಯಲ್ಲಿಯೂ ಆತನ ಬುದ್ಧಿವಂತಿಕೆ ಹಾಗೂ ಘನತೆಗಳ ಬಗ್ಗೆ ಮಾಡುವ ಸ್ತುತಿಮಾಲಿಕೆಗಳಿಗೆ ಮಿತಿಯೇ ಇರುವುದಿಲ್ಲ. ಯಾವ ಅಗತ್ಯವೂ ಇಲ್ಲದೆ ಅವನು ನಿಷ್ಕಾರಣವಾಗಿ ಹಾಗೂ ಮೂರ್ಖನಾಗಿ ಫಿನ್ನ್‌ಗಳ ಇಡೀ ಜನಾಂಗವನ್ನೇ ಅಪಮಾನಗೊಳಿಸುತ್ತಾನೆ ಮತ್ತು ದಮನ ಮಾಡುತ್ತಾನೆ. ಆದರೂ ಆತ ಕೇಳುವುದು ಹೊಗಳಿಕೆಯ ಮಾಲೆಯನ್ನಲ್ಲದೆ ಬೇರೆಯಲ್ಲ! ಅಂತಿಮವಾಗಿ ಆತ ಚೀನಿಯರ ಕಗ್ಗೊಲೆಗೆ ವ್ಯವಸ್ಥೆಮಾಡುತ್ತಾನೆ – ತನ್ನ ಶಾಂತಿ ಯೋಜನೆಗಳಿಗೆ ಅಸಂಬದ್ಧವಾದ ರೀತಿಯಲ್ಲಿ ಅನ್ಯಾಯದ ಭೀಕರತೆಯಿಂದಲೂ ಮತ್ತು ಕ್ರೌರ್ಯದಿಂದಲೂ ಕೂಡಿರುತ್ತಾನೆ. ಆಗಲೂ ಜನ ಅವನ ಸುತ್ತಲೂ ನೆರೆದು ಅವನನ್ನು ತಂದೆಯ ಶಾಂತಿಸೂತ್ರವನ್ನು ಮುಂದುವರಿಸಿದವನೆಂದೂ ವಿಜೇತನೆಂದೂ ಎಲ್ಲ ಕಡೆಗಳಿಂದಲೂ ಚಪ್ಪಾಳೆ ಬಡಿದು ಹೊಗಳುತ್ತಾರೆ.

ನಿಜವಾಗಿ ಈ ಜನರ ತಲೆಗಳಲ್ಲಿ ಮತ್ತು ಹೃದಯಗಳಲ್ಲಿ ಆಗುತ್ತಿರುವುದಾದರೂ ಏನು?

ಆದ್ದರಿಂದಲೇ ಜನಾಂಗಗಳನ್ನು ದಮನಮಾಡುವುದಕ್ಕೆ ಮತ್ತು ಆಯುಧಗಳಿಗೆ ಆಜ್ಞೆಗಳನ್ನು ನೀಡಿದ್ದರೂ ಈ ಪಾಪಗಳಿಗೆ ಕಾರಣರಾದ ಅಪರಾಧಿಗಳು ಮಾತ್ರ

ಅಲೆಕ್ಸಾಂಡರುಗಳು ಮತ್ತು ಹಂಬರ್ಟುಗಳಲ್ಲ; ಕೊನೆಗೆ ವಿಲ್‌ಹೆಲ್ಮ್‌ಗಳು. ನಿಕೋಲಸರುಗಳು ಮತ್ತು ಚೆಂಬಲ್‌ಲೇನರುಗಳೂ† ಅಲ್ಲ. ಆದ್ದರಿಂದಲೇ ನಾವು ಮಾಡಬೇಕಾಗಿರುವುದು ಅಲೆಕ್ಸಾಂಡರುಗಳನ್ನು. ನಿಕೋಲಸರುಗಳನ್ನು. ವಿಲ್‌ಹೆಲ್ಮ್‌ಗಳನ್ನು ಮತ್ತು ಹಂಬರ್ಟುಗಳನ್ನು ಕೊಲ್ಲುವುದಲ್ಲ: ಯಾವ ಒಂದು ಸಮಾಜದ ವ್ಯವಸ್ಥೆಯ ಪರಿಣಾಮ ಅವರಾಗಿದ್ದರೋ ಅಂಥ ವ್ಯವಸ್ಥೆಗೆ ನಮ್ಮ ಬೆಂಬಲವನ್ನು ನಿಲ್ಲಿಸುವುದು. ನಮ್ಮ ಇಂದಿನ ಸಮಾಜದ ವ್ಯವಸ್ಥೆಯಾದರೋ ತಮ್ಮ ಸ್ವಾತಂತ್ರ್ಯವನ್ನು ಮತ್ತು ಘನತೆಯನ್ನು ಅಮುಖ್ಯವಾದ ಪ್ರಾಪಂಚಿಕ ಲಾಭಗಳಿಗೆ ಮಾರಿಕೊಳ್ಳುವ ಜನರ ಸ್ವಾರ್ಥ ಮತ್ತು ಮೂರ್ಖತನಗಳಿಂದ ಬೆಂಬಲಿಸಲ್ಪಟ್ಟಿದ್ದಾಗಿದೆ.

ಸಮಾಜದ ಶ್ರೇಣಿಯ ಅತ್ಯಂತ ಕೆಳಹಂತದಲ್ಲಿರುವ ಜನರಾದರೋ. ಭಾಗಶಃ ದೇಶಾಭಿಮಾನ ಹಾಗೂ ಬೂಟಾಟಿಕೆಯ ಧಾರ್ಮಿಕ ಶಿಕ್ಷಣದಿಂದ ಮೂರ್ಖರಾಗಿ ಮತ್ತೆ ಭಾಗಶಃ ಸ್ವಂತದ ಲಾಭಗಳ ಗಳಿಕೆಗಾಗಿ, ತಮ್ಮೆಲ್ಲ ಸ್ವಾತಂತ್ರ್ಯವನ್ನೂ ಮತ್ತು ಮಾನವ ಘನತೆಯ ಭಾವವನ್ನೂ ತಮಗಿಂತ ಮೇಲಿನ ಹಂತದಲ್ಲಿರುವ ಜನ ತಮ್ಮ ಇದಿರಿಗೊಡ್ಡುವ ಕೆಲವು ಪ್ರಾಪಂಚಿಕ ಲಾಭಗಳಿಗೆ ಪಣವಾಗಿ ಶರಣಾಗಿಬಿಡುತ್ತಾರೆ. ಮುಖ್ಯವಾಗಿ ತಮ್ಮ ಲಾಭಗಳಿಗೋಸ್ಕರವಾಗಿಯೇ ಮೂಢಗೊಳಿಸಲ್ಪಟ್ಟು ಸ್ವಲ್ಪ ಎತ್ತರದ ಹಂತದಲ್ಲಿರುವವರೂ ಹೀಗೆಯೇ ತಮ್ಮ ಸ್ವಾತಂತ್ರ್ಯ ಮತ್ತು ಮಾನವೀಯ ಘನತೆಗಳನ್ನು ಮಾರಿಕೊಂಡುಬಿಡುತ್ತಾರೆ: ಇನ್ನಷ್ಟು ಎತ್ತರದ ಹಂತದಲ್ಲಿರುವವರಲ್ಲಿಯೂ ಇದೇ ಮರುಕಳಿಸುತ್ತದೆ: ಸಮಾಜದ ಅತ್ಯುನ್ನತ ಸ್ಥಾನಗಳಲ್ಲಿರುವವರ ಸ್ಥಿತಿಯೂ ಇದೇ ರೀತಿಯೇ. ಈ ಜನರಾದರೋ ಸಹರಾಷ್ಟ್ರೀಯರ ಸಾವು ಮತ್ತು ಬದುಕಿನ ತೀರ್ಮಾನಮಾಡುವ ಅಧಿಕಾರದಿಂದ ಅಡ್ಡದಾರಿಹಿಡಿದ ಮೂರ್ಖರು. ಇವರ ಕಾರ್ಯೋದ್ದೇಶಗಳಿಗೆಲ್ಲ ಮೂಲಕಾರಣ ಕೇವಲ ಅಧಿಕಾರದ ಪ್ರೇಮ ಹಾಗೂ ಗೌರವಗಳು. ಇವರಂತೂ ತಮ್ಮ ಸುತ್ತ ಮುತ್ತಿಕೊಂಡಿರುವ ಜನರ ಗುಲಾಮತನ ಮತ್ತು ಹೊಗಳಿಕೆಗಳಿಂದ ಮತ್ತರಾಗಿ ಕೆಡಕು ಮಾಡುವುದನ್ನು ನಿಲ್ಲಿಸದೆಯೇ ತಾವು ಮಾನವ ಕುಲಕ್ಕೇ ಉಪಕಾರಮಾಡುವವರು ಎಂಬ ಪೂರ್ಣ ಭ್ರಮಾಜನ್ಯ ಭರವಸೆಯಿಂದ ಬೀಗಿ ಹೋಗುತ್ತಾರೆ.

ತಮ್ಮ ಪ್ರಾಪಂಚಿಕ ಲಾಭಗಳಿಗಾಗಿ ತಮ್ಮ ಘನತೆಯನ್ನು ಬಲಿಗೊಡುವ ಈ ಜನರು ತಾವು ವರ್ತಿಸುವ ರೀತಿಯಲ್ಲಲ್ಲದೆ ಅನ್ಯರೀತಿಯಲ್ಲಿ ವರ್ತಿಸಲಾರರು: ಮತ್ತು ಇದರಿಂದಾಗಿಯೇ ಅವರ ಮೂರ್ಖ ಹಾಗೂ ದುಷ್ಟ ಕಾರ್ಯಗಳಿಗಾಗಿ ಅವರ ಮೇಲೆ

---

† ರಷ್ಯದಲ್ಲಿ ಮತ್ತು ಸರ್ವೇಸಾಮಾನ್ಯವಾಗಿ ಯೂರೋಪಿನಲ್ಲೆಲ್ಲ ಬೋಯರ್ ಯುದ್ಧಕೆ ಚೆಂಬರ್‌ಲೇನನೇ ಕಾರಣನೆಂದು ಭಾವಿಸಲಾಗಿತ್ತು.

ಕೋಪಗೊಳ್ಳುವುದು ನಿಷ್ಪ್ರಯೋಜಕ. ಇಂಥ ಜನರನ್ನು ಕೊಲ್ಲುವುದು ಎಂದರೆ ಮೊದಲು ತಾವೇ ಕೆಡಿಸಿದ ಮಕ್ಕಳನ್ನು ಅನಂತರ ತಾವೇ ದೊಣ್ಣೆಯಿಂದ ಬಡಿದಹಾಗೆ.

ಜನಾಂಗಗಳು ದಬ್ಬಾಳಿಕೆಗೆ ಗುರಿಯಾಗದಿರಬೇಕಾದರೆ, ನಿಷ್ಪ್ರಯೋಜಕವಾದ ಒಂದು ಯುದ್ಧವೂ ನಡೆಯದಿರಬೇಕಾದರೆ ಮತ್ತು ಇಂಥ ಕೆಡುಕುಗಳಿಗೆ ಕಾರಣರಾದವರನ್ನು ಕಂಡು ಜನ ಕೋಪಗೊಳ್ಳದಂತೆ ಮತ್ತು ಕೊಲ್ಲದಂತೆ ಇರಬೇಕಾದರೆ ಒಂದೇ ಒಂದು ಸಣ್ಣ ಕಾರ್ಯವನ್ನು ಮಾಡುವುದು ಅವಶ್ಯ. ಜನರು ಇರುವುದನ್ನು ಇದ್ದಂತೆ ಅರ್ಥ ಮಾಡಿಕೊಳ್ಳಬೇಕು, ಜನರನ್ನು ಅವರ ಯೋಗ್ಯತೆಗೆ ತಕ್ಕಂತೆ ಗೌರವಿಸಬೇಕು. ಮತ್ತು ಸೈನ್ಯವೆನ್ನುವುದು ಕೊಲೆಮಾಡುವುದಕ್ಕೆ ಇರುವ ಸಾಧನವೆಂಬುದನ್ನು ಮನವರಿಕೆ ಮಾಡಿ ಕೊಳ್ಳಬೇಕು – ರಾಜರು, ಮಹಾರಾಜರು ಮತ್ತು ಅಧ್ಯಕ್ಷರುಗಳು ಅತ್ಯಂತ ಆತ್ಮ ಪ್ರತ್ಯಯದಿಂದ ನಡೆಸುವ ಸೈನ್ಯಕ್ಕೆ ಜನರನ್ನು ಸೇರಿಸಿಕೊಳ್ಳುವುದು ಮತ್ತು ಸೈನ್ಯದ ವ್ಯವಸ್ಥೆ ಮಾಡುವುದು ಇವುಗಳು ಕೊಲೆಗೆ ಒಂದು ಸಿದ್ಧಾಂತ.

ಸೈನ್ಯಗಳನ್ನು ನಿರ್ದೇಶಿಸುವ ಕಾರ್ಯ – ಹೊಗಳುಭಟ್ಟರು ಹುರಿದುಂಬಿಸುವಂತೆ– ಮುಖ್ಯವಲ್ಲದ ಹಾಗೂ ಗೌರವಾಸ್ಪದವಲ್ಲದ ಕಾರ್ಯ ಎಂದೂ ಕೊಲೆಗೆ ಸಿದ್ಧತೆ ನಡೆಸುವ ನಾಚಿಕೆಗೇಡಿನ ಕೆಟ್ಟಕೆಲಸ ಎಂದೂ ಪ್ರತಿಯೊಬ್ಬ ರಾಜ, ಮಹಾರಾಜ ಮತ್ತು ಅಧ್ಯಕ್ಷರು ಭಾವಿಸುವುದಾದರೆ; ಹೀಗೆ ಸೈನಿಕರನ್ನು ಕೊಳ್ಳುವುದು ಮತ್ತು ಸಜ್ಜುಗೊಳಿ ಸುವುದು ಮತ್ತು ಇಡೀ ಸೈನ್ಯವನ್ನೇ ಸಿದ್ಧತೆಗೊಳಿಸುವುದು ಖಂಡಿತ ಅಲಕ್ಷಿಸುವಂಥ ದಲ್ಲ. ಇವು ಕೊಲೆಯಲ್ಲಿ ಭಾಗವಹಿಸುವಂಥ ಕೆಟ್ಟ ಹಾಗೂ ನಾಚಿಕೆಗೇಡಿನ ಕಾರ್ಯಗಳಾಗಿ ಯುದ್ಧಕ್ಕೆ ಅನುಮತಿಯನ್ನು ನೀಡುತ್ತವೆ ಎಂದು ಪ್ರತಿಯೊಬ್ಬ ತೆರಿಗೆ ನೀಡುವ ಪ್ರಜೆಯೂ ಭಾವಿಸುವುದಾದರೆ ನಮ್ಮ ಕೋಪವನ್ನು ಉದ್ರೇಕಿಸುವ ಮತ್ತು ಅವರನ್ನು ಕೊಲೆಮಾಡುವುದಕ್ಕೆ ಕಾರಣವಾಗುವಂಥ ರಾಜರು, ಮಹಾರಾಜರು ಮತ್ತು ಅಧ್ಯಕ್ಷರು ಗಳ ಅಧಿಕಾರವೇ ಆಗ ಇಲ್ಲವಾಗಿಬಿಡುತ್ತದೆ.

ಆದ್ದರಿಂದ ಅಲೆಕ್ಸಾಂಡರುಗಳು, ಕಾರ್ನಾಟ್‌ಗಳು, ಹಂಬರ್ಟ್‌ಗಳು ಮತ್ತಿತರರನ್ನು ಕೊಲೆಮಾಡಬಾರದು; ಆದರೆ ಅವರಿಗೆ ಅವರು ತಾವೇ ಕೊಲೆಗಡುಕರಾಗಿದ್ದಾರೆಂಬುದನ್ನು ಮನವರಿಕೆಮಾಡಿಕೊಡಬೇಕು; ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಜನರನ್ನು ಕೊಲ್ಲಲು ಅವರಿಗೆ ಅವಕಾಶ ಕೊಡಲೇಬಾರದು; ಜನ ಅವರ ಆಜ್ಞೆಯ ಮೇರೆಗೆ ಕೊಲೆಮಾಡುವುದನ್ನು ತಿರಸ್ಕರಿಸಬೇಕು.

ಜನರು ಇನ್ನೂ ಈ ರೀತಿ ಮಾಡುತ್ತಿಲ್ಲವೆಂದರೆ ಅದಕ್ಕೆ ಕಾರಣ ಸರ್ಕಾರಗಳು, ತಮ್ಮ ಅಧಿಕಾರಗಳನ್ನು ಉಳಿಸಿಕೊಳ್ಳಲು, ಜನರ ಮೇಲೆ ಒಂದು ಸಮ್ಮೋಹನೆಯ ಪ್ರಭಾವವನ್ನು ಉಂಟುಮಾಡುತ್ತವೆ. ಆದ್ದರಿಂದ ನಾವು ಜನರು ಅಥವಾ ದೊರೆಗಳನ್ನು

ಪರಸ್ಪರರನ್ನು ಕೊಲ್ಲದಿರುವಂತೆ ತಡೆಯಲು ಸಹಾಯ ಮಾಡಬಹುದಾದುದು ಕೊಲ್ಲುವುದರಿಂದಲ್ಲ – ಕೊಲೆ ಕೇವಲ ಸಮ್ಮೋಹನೆಯ ಪ್ರಭಾವವನ್ನು ಹೆಚ್ಚಿಸುತ್ತದೆ, ಆದರೆ ಜನರನ್ನು ಅವರ ಸಮ್ಮೋಹನೆಯ ಸ್ಥಿತಿಯಿಂದ ಎಚ್ಚರಗೊಳಿಸುವುದರಿಂದ ಮಾತ್ರ.

ಮತ್ತು ಇದನ್ನೇ ನಾನು ಈ ಮಾತುಗಳಲ್ಲಿ ಹೇಳಲು ಪ್ರಯತ್ನಿಸಿರುವುದು.

[ಆಗಸ್ಟ್ 8, 1900].

---

ರಷ್ಯದಲ್ಲಿ ಬಹಿಷ್ಕರಿಸಲ್ಪಟ್ಟು, ಜರ್ಮನಿ ದೇಶದಲ್ಲಿ ಈ ಲೇಖನವನ್ನು ಮುದ್ರಿಸುವ ಪ್ರಯತ್ನವೊಂದು ನಡೆಯಿತು; ಆದರೆ 1903ರ ಜುಲೈನಲ್ಲಿ ಮೂಲ ಪ್ರತಿಯನ್ನು ವಶಪಡಿಸಿ ಕೊಳ್ಳಲಾಯಿತು ಮತ್ತು ಆಗಸ್ಟ್ 1903ರಲ್ಲಿ ನಡೆದ ಲಿಫ್ಜೀಜ್‌ನ ಪ್ರಾದೇಶಿಕ ನ್ಯಾಯಾಲಯದಲ್ಲಿ ವಿಚಾರಣೆ ನಡೆದಾದ ಮೇಲೆ ಇದು ಜರ್ಮನಿಯ ಕೈಸರನಿಗೆ ಅಪಮಾನ ಮಾಡುತ್ತದೆಂದು ತೀರ್ಮಾನಿಸಲಾಯಿತು ಮತ್ತು ಎಲ್ಲ ಪ್ರತಿಗಳನ್ನೂ ನಾಶಮಾಡಲು ಆಜ್ಞೆ ನೀಡಲಾಯಿತು.

# ಮಾಡಬೇಕಾದದ್ದೇನು?

೧

ಸುಮಾರು ಒಂದು ತಿಂಗಳ ಹಿಂದೆ ಇಬ್ಬರು ಯುವಕರು ನನ್ನನ್ನು ಭೇಟಿಮಾಡಿದ್ದರು; ಅವರಲ್ಲೊಬ್ಬ ತಲೆಗೆ ಟೋಪಿಯನ್ನೂ ಕಾಲುಗಳಿಗೆ ರೈತರು ಧರಿಸುವ ಮರದ ಬೂಟುಗಳನ್ನೂ ಧರಿಸಿದ್ದ. ಇನ್ನೊಬ್ಬ ತಲೆಗೆ ಹಿಂದೊಮ್ಮೆ ಹೊಸ ನಮೂನೆಯದಾಗಿದ್ದ ಕಪ್ಪುಟೋಪಿಯನ್ನೂ ಕಾಲುಗಳಿಗೆ ಹರಿದ ಬೂಟುಗಳನ್ನೂ ಧರಿಸಿದ್ದ.

ನಾನು ಅವರನ್ನು ಯಾರೆಂದು ಕೇಳಿದೆ; ಅವರು ಮುಚ್ಚುಮರೆಯಿಲ್ಲದೆ ಹೆಮ್ಮೆಯಿಂದ ತಾವು ಸಶಸ್ತ್ರ ಹೋರಾಟದಲ್ಲಿ ಭಾಗವಹಿಸಿದ್ದಕ್ಕಾಗಿ ಮಾಸ್ಕೋದಲ್ಲಿ ಉಚ್ಚಾಟಿಸಲ್ಪಟ್ಟ ಕೆಲಸಗಾರರೆಂದು ತಿಳಿಸಿದರು. ನಮ್ಮ ಹಳ್ಳಿಯ ಮಾರ್ಗವಾಗಿ ಹೋಗುತ್ತಿರುವಾಗ ಒಂದು ಎಸ್ಟೇಟಿನ ಕಾವಲುಗಾರರಾಗಿ ಉದ್ಯೋಗ ಪಡೆದು ಅಲ್ಲಿ ಒಂದು ತಿಂಗಳಿಗಿಂತ ಕಡಿಮೆ ದಿನಗಳು ಇದ್ದರು. ನನ್ನನ್ನು ನೋಡುವುದಕ್ಕೆ ಬಂದ ದಿನಕ್ಕೆ ಹಿಂದಿನ ದಿನವೇ ಎಸ್ಟೇಟನ್ನು ಹಾಳುಗೆಡವಲು ರೈತರನ್ನು ಪ್ರೇರೇಪಿಸುತ್ತಿದ್ದಾರೆಂಬ ಆಪಾದನೆಯ ಮೇಲೆ ಅವರು ಯಜಮಾನನಿಂದ ಉಚ್ಚಾಟಿಸಲ್ಪಟ್ಟಿದ್ದರು. ಅವರು ಯಾವ ಪ್ರೇರೇಪಣೆಯ ಪ್ರಯತ್ನವನ್ನೂ ಮಾಡಲಿಲ್ಲವೆಂದೂ ಆದರೆ ಒಂದು ಸಂಜೆ ಆ ಹಳ್ಳಿಗೆ ಹೋಗಿ ತಮ್ಮ ಜೊತೆಯವರೊಂದಿಗೆ ಹರಟಿದುದಾಗಿಯೂ ಹೇಳುತ್ತ ಆ ಆಪಾದನೆಯನ್ನು ಮುಗುಳುನಗೆಯಿಂದಲೇ ನಿರಾಕರಿಸಿದರು.

ಅವರಿಬ್ಬರೂ ಕ್ರಾಂತಿಕಾರಕ ಸಾಹಿತ್ಯವನ್ನು ಓದಿದ್ದರು, ಅದರಲ್ಲಿಯೂ ನಿರ್ದಿಷ್ಟವಾಗಿ ಅವರಿಬ್ಬರಲ್ಲಿ ಹೆಚ್ಚು ಧೈರ್ಯಸ್ಥನಾದವನು ಹೊಳೆಯುವ ಕಪ್ಪುಕಣ್ಣುಗಳು ಮತ್ತು ಬಿಳಿಯ ಹಲ್ಲುಗಳು ಉಳ್ಳವನು. ವಿಪುಲವಾಗಿ ಮುಗುಳುನಗುತ್ತಿದ್ದವನು ಸ್ವಲ್ಪ ಹೆಚ್ಚಾಗಿಯೇ ಓದಿದ್ದ: ಮತ್ತು ಅವರಿಬ್ಬರೂ ರಾಜಕೀಯ ಭಾಷಣಕಾರ,† ಶ್ರಮಜೀವಿ, ಸಾಮಾಜಿಕ ಸಮತಾವಾದಿ. ಶೋಷಣೆ – ಇಂಥ ಇನ್ನೂ ಹಲವಾರು ಪರಕೀಯ ಶಬ್ದಗಳಿಗೆ ತೀರ ಬಳಕೆಯಾದವರಾಗಿದ್ದರು.

ನಾನು ಅವರನ್ನು ಏನು ಓದಿದ್ದಾರೆಂದು ಕೇಳಿದೆ. ಅವರಲ್ಲಿ ಹೆಚ್ಚು ಕಪ್ಪಾಗಿರುವವನು ಮುಗುಳು ನಗುತ್ತಾ ವಿವಿಧವಾದ ಕರಪತ್ರಗಳನ್ನು ಓದಿರುವುದಾಗಿ ಉತ್ತರಿಸಿದ.

---

† ಯಾವುದಾದರೊಂದು ರಾಜಕೀಯ ಪಕ್ಷದ ಸ್ತಂಭದಂಥ ವಾಗ್ಮಿ ಎಂದರ್ಥವಾಗುತ್ತದೆ.

'ಏನೇನು ಓದಿರುವೆ?' ನಾನು ಕೇಳಿದೆ.

'ಎಲ್ಲ ಬಗೆಯುವನ್ನೂ. ಉದಾಹರಣೆಗೆ, 'ಭೂಮಿ ಮತ್ತು ಸ್ವಾತಂತ್ರ್ಯ'.

ನಾನು ಆಗ ಅವರನ್ನು ಅಂಥ ಕರಪತ್ರಗಳನ್ನು ಕುರಿತು ಏನು ಯೋಚಿಸಿದ್ದೀರೆಂದು ಕೇಳಿದೆ.

'ಅವು ನಿಜವಾಗಿ ಸತ್ಯವನ್ನು ಹೇಳುತ್ತವೆ' ಕಪ್ಪಗಿದ್ದವನು ಉತ್ತರಿಸಿದ.

'ನೀನು ಅವುಗಳಲ್ಲಿ ಸತ್ಯವೆಂದು ಕಂಡದ್ದೇನು?' – ನಾನು ಕೇಳಿದೆ.

'ಏಕೆಂದರೆ, ನಾವೀಗ ಬದುಕುತ್ತಿರುವಂತೆಯೇ ಬದುಕುವುದು ಅಸಾಧ್ಯವಾಗಿ ಬಿಟ್ಟಿದೆ'.

'ಅದೇಕೆ ಅಸಾಧ್ಯವಾಗಿದೆ?'

'ಏತಕ್ಕೆನ್ನುತ್ತೀರಾ? ನಮಗೆ ಭೂಮಿಯೂ ಇಲ್ಲ; ಮಾಡುವುದಕ್ಕೆ ಉದ್ಯೋಗವೂ ಇಲ್ಲ ಮತ್ತೆ ಈ ಸರ್ಕಾರವಾದರೋ ಪ್ರಜ್ಞೆಯಾಗಲಿ ಕಾರಣವಾಗಲಿ ಇಲ್ಲದೆ ಜನರ ಕತ್ತು ಹಿಸುಕುತ್ತದೆ.'

ಮತ್ತೆ ಒಬ್ಬ ಮತ್ತೊಬ್ಬನ ಮಾತಿಗಡ್ಡಿಪಡಿಸುತ್ತ, ಯಾವ ತಪ್ಪನ್ನೂ ಮಾಡದ ಜನರು ಕೊಸಾಕ್ಸ್ ಜನರ ಭಾರವಾದ ಚಾಟಿಗಳಿಂದ ಹೇಗೆ ಥಳಿಸಲ್ಪಟ್ಟರು, ಪೋಲೀಸ ರಿಂದ ಹುಚ್ಚು ಹುಚ್ಚಾಗಿ ಚದುರಿಸಿ ಹಿಡಿಯಲ್ಪಟ್ಟು ಹೇಗೆ ಥಳಿಸಲ್ಪಟ್ಟರು ಮತ್ತು ಇವು ಸಾಲದೆಂಬಂತೆ ಅವರವರ ಮನೆಗಳಲ್ಲೇ ಹೇಗೆ ಗುಂಡುಗಳಿಗೆ ಗುರಿಯಾದರು ಎಂಬುದನ್ನು ಹೇಳತೊಡಗಿದರು.

ನಾನು 'ಸಕಸ್ಮಾದಂಗೆ ಕೆಟ್ಟದ್ದು ಮತ್ತು ಅತಾರ್ಕಿಕವಾದುದು' ಎಂದು ಹೇಳಿದಾಗ ಹೆಚ್ಚು ಕಪ್ಪಗಿದ್ದವನು ಮುಗುಳು ನಕ್ಕುಬಿಟ್ಟು ಮತ್ತೂ ಸಮಾಧಾನವಾಗಿ ಉತ್ತರಿಸಿದ 'ನಾವು ಬೇರೆಯ ಅಭಿಪ್ರಾಯವುಳ್ಳವರಾಗಿದ್ದೇವೆ'.

ನಾನು ಕೊಲೆಯ ಪಾಪ ಗುಣವನ್ನೂ ದೇವರ ಕಾನೂನನ್ನೂ ಕುರಿತು ಹೇಳಿದಾಗ ಅವರು ಪರಸ್ಪರ ನೋಟವನ್ನು ವಿನಿಮಯ ಮಾಡಿಕೊಂಡರು, ಮತ್ತು ಅವರಲ್ಲಿ ಹೆಚ್ಚು ಕಪ್ಪಗಿದ್ದವನು ತನ್ನ ಭುಜಗಳನ್ನು ಕುಣಿಸಿದನು.

'ದೇವರ ಕಾನೂನು ಶ್ರಮಜೀವಿಯನ್ನು ಶೋಷಿಸಬೇಕೆಂದು ಹೇಳುತ್ತದೆಯೇನು?' ಅವನು ಹೇಳಿದ, 'ಜನರು ಹಿಂದೆ ಹಾಗೆ ಭಾವಿಸುತ್ತಿದ್ದರು. ಆದರೆ ಈಗವರಿಗೆ ಚೆನ್ನಾಗಿ ಗೊತ್ತಿದೆ ಮತ್ತು ಇನ್ನು ಮುಂದೆ ಹೀಗೆಯೇ ನಡೆಯಲಾರದು............'

ನಾನು ಅವರಿಗಾಗಿ ಮುಖ್ಯವಾಗಿ ಧಾರ್ಮಿಕ ವಿಚಾರಗಳನ್ನು ಕುರಿತು ಕೆಲವು ಕಿರುಹೊತ್ತಗೆಗಳನ್ನು ತುಂಬುಕೊಟ್ಟೆ. ಅವರು ಅವುಗಳ ತಲೆಬರಹಗಳ ಮೇಲೆ ಕಣ್ಣಾಡಿಸಿದರು ಮತ್ತು ನಿಜವಾಗಿಯೂ ಅವರು ಸಂತೋಷಗೊಂಡಿರಲಿಲ್ಲ.

'ಬಹುಶಃ ನೀವು ಇವುಗಳ ಬಗ್ಗೆ ಆಸಕ್ತಿತೋರಲಾರಿರಿ? ಹಾಗಿದ್ದರೆ ಅವನ್ನು ಒಯ್ಯಬೇಡಿರಿ'.

'ಏಕೆ ಬೇಡ.' ಹೆಚ್ಚು ಕಪ್ಪಗಿದ್ದವನು ಹೇಳಿದ ಮತ್ತು ಅಂಗಿಯ ಕಿಸೆಗಳಿಗೆ ಆ ಕಿರುಹೊತ್ತಗೆಗಳನ್ನು ತುರುಕುತ್ತ ಅವರು ನನ್ನನ್ನು ಬೀಳ್ಕೊಟ್ಟರು.

ನಾನು ಪತ್ರಿಕೆಗಳನ್ನೋದುವುದನ್ನು ಬಿಟ್ಟಿದ್ದರೂ, ನನ್ನ ಕುಟುಂಬದಲ್ಲಿ ನಡೆಯುವ ಮಾತುಕತೆಗಳಿಂದ, ನನಗೆ ಬಂದ ಪತ್ರಗಳಿಂದ ಮತ್ತು ನನ್ನನ್ನು ಸಂದರ್ಶಿಸಿದವರು ಕೊಡುತ್ತಿದ್ದ ವಿವರಗಳಿಂದ ತೀರ ಇತ್ತೀಚೆಗೆ ರಷ್ಯದಲ್ಲಿ ಏನಾಗುತ್ತಿದೆಯೆಂಬುದನ್ನು ತಿಳಿದಿದ್ದೆ: ಮತ್ತು ನಾನು ಪತ್ರಿಕೆಗಳನ್ನು ಓದದಿದ್ದುದರಿಂದಾಗಿಯೇ ನಮ್ಮ ಸಮಾಜ ಹಾಗೂ ಜನರು ತಳೆದಿದ್ದ ಅಭಿಪ್ರಾಯಗಳಲ್ಲಿ ದಿಗ್ಭ್ರಮೆ ಹುಟ್ಟಿಸುವಂಥ ಬದಲಾವಣೆಯಾಗಿದ್ದುದನ್ನು ಚೆನ್ನಾಗಿ ತಿಳಿದಿದ್ದೆ. ಈ ಬದಲಾವಣೆಯ ಕಾರಣವಾಗಿ ಮೊದಲು ಜನ ಸರ್ಕಾರವು ಅವಶ್ಯವೆಂದು ಭಾವಿಸುತ್ತಿದ್ದರೆ. ಈಗ ಎಲ್ಲೋ ಕೆಲವರನ್ನು ಬಿಟ್ಟು ಉಳಿದವರೆಲ್ಲರೂ ಸರ್ಕಾರದ ಚಟುವಟಿಕೆಗಳನ್ನು ಅಪರಾಧಾತ್ಮಕ ಹಾಗೂ ದೋಷಪೂರ್ಣ ಎಂದು ನೋಡುತ್ತಾರೆ: ಅಲ್ಲದೆ ಈ ಎಲ್ಲ ಗೊಂದಲಗಳಿಗೂ ಸರ್ಕಾರವೊಂದನ್ನೇ ಕಾರಣವೆಂದು ದೂಷಿಸುತ್ತಾರೆ. ಈ ಅಭಿಪ್ರಾಯವನ್ನೇ ಪ್ರಾಧ್ಯಾಪಕರುಗಳು. ಅಂಚೆಯ ಅಧಿಕಾರಿಗಳು, ಲೇಖಕರು, ವರ್ತಕರು, ವೈದ್ಯರು ಮತ್ತು ಕೆಲಸಗಾರರಾದಿಯಾಗಿ ಎಲ್ಲರೂ ಒಂದೇ ರೀತಿ ಹಂಚಿಕೊಳ್ಳುತ್ತಾರೆ; ಒಂದನೆಯ ಡ್ಯೂಮಾನ ವಿನಾಶದಿಂದಾಗಿ ಬಲಗೊಂಡ ಈ ಭಾವನೆಯು ಸರ್ಕಾರವು ಅನಂತರದಲ್ಲಿ ಕೈಗೊಂಡ ಕ್ರೂರ ಕ್ರಮಗಳ ಫಲಿತಾಂಶವಾಗಿ ತನ್ನ ಪರಾಕಾಷ್ಠೆಯನ್ನು ಮುಟ್ಟಿದೆ.

ನಾನಿದನ್ನು ತಿಳಿದಿದ್ದೆ. ಆದರೆ ಈ ಇಬ್ಬರೊಡನೆ ನಡೆಸಿದ ಮಾತುಕತೆಗಳು ನನ್ನ ಮೇಲೆ ಮಹತ್ತಾದ ಪರಿಣಾಮ ಬೀರಿದುವು. ಕೊರೆಯುತ್ತಿರುವ ದ್ರವವನ್ನು ಇದ್ದಕ್ಕಿದ್ದಂತೆ ಮಂಜುಗಡ್ಡೆಯಾಗಿ ಹೆಪ್ಪುಗಟ್ಟಿಸುವ ಆಘಾತದಂತೆ ಇದು ಇದ್ದಕ್ಕಿದ್ದಂತೆ ನಾನು ಹಿಂದೆ ಪಡೆದಿದ್ದಂಥ ಇದೇ ರೀತಿಯ ಅನೇಕಾನೇಕ ಭಾವನೆಗಳ ಪೂರ್ಣಮಾಲೆಯನ್ನೆಲ್ಲ ಒಂದು ಖಚಿತ ಹಾಗೂ ಅಸಂದಿಗ್ಧ ಸಂಕಲ್ಪವಾಗಿಸಿಬಿಟ್ಟಿತು.

ಅವರ ಜೊತೆ ನಾನು ಮಾತನಾಡಿದ ಮೇಲೆ ನಾನು ಸ್ಪಷ್ಟವಾಗಿ ಕಂಡುಕೊಂಡದ್ದು ಇಷ್ಟು: 'ಕ್ರಾಂತಿಯನ್ನು ದಮನಮಾಡುವುದಕ್ಕಾಗಿ ಮಾಡುತ್ತಿರುವ ಸರ್ಕಾರದ ಎಲ್ಲ ಅಪರಾಧಗಳೂ ಅದನ್ನು ದಮನಮಾಡಲು ಮಾಡುವುದಕ್ಕೆ ಪ್ರತಿಯಾಗಿ ಇನ್ನಷ್ಟು ರೊಚ್ಚಿಗೆಬ್ಬಿಸುತ್ತವೆ; ಒಂದು ಪಕ್ಷ ಕ್ರಾಂತಿಕಾರಿ ಚಳುವಳಿಯು ಸರ್ಕಾರದ ಕ್ರೌರ್ಯಗಳಿಂದಾಗಿ ಕ್ಷಣಕಾಲ ಸತ್ತಂತೆ ತೋರಿದರೂ, ಅದು ನಿಜವಾಗಿಯೂ ವಿನಾಶಗೊಳಿಸಲ್ಪಟ್ಟಿರುವುದಿಲ್ಲ ಆದರೆ ತಾತ್ಕಾಲಿಕವಾಗಿ ಬಚ್ಚಿಡಲ್ಪಟ್ಟಿರುತ್ತದೆ. ಅಷ್ಟೇ ಅಲ್ಲ ಮತ್ತೊಮ್ಮೆ ಅದು ಅನಿವಾರ್ಯವಾಗಿ ಹೊಸ ಮತ್ತು ವೃದ್ಧಿಗೊಂಡ ಬಲದೊಡನೆ

ಮೇಲುಸ್ಕುತ್ತದೆ. ಈ ಬೆಂಕಿ ಈಗ ಎಂಥ ಸ್ಥಿತಿಯಲ್ಲಿದೆಯೆಂದರೆ ಅದರೊಂದಿಗಿನ ಯಾವ ಸಂಪರ್ಕವೂ ಅದರ ಭಯಾನಕತೆಯನ್ನು ಹೆಚ್ಚಿಸಬಲ್ಲುದು. 'ಸರ್ಕಾರಕ್ಕೆ ಸಹಾಯಕವಾಗಬಲ್ಲ ಏಕೈಕ ವಿಧಾನವೆಂದರೆ ಅದು ತನ್ನ ಆಜ್ಞೆಯನ್ನು ಒತ್ತಾಯವಾಗಿ ಹೇರುವ ಪ್ರಯತ್ನಗಳನ್ನು ನಿಲ್ಲಿಸುವುದು: ಮತ್ತು ಕೇವಲ ಗಲ್ಲಿಗೇರಿಸುವುದನ್ನು ಮತ್ತು ಬಂಧನದಲ್ಲಿರಿಸುವುದನ್ನು ನಿಲ್ಲಿಸುವುದಷ್ಟೆ ಅಲ್ಲದೆ ಎಲ್ಲ ರೀತಿಯ ಗಡೀಪಾರು ಶಿಕ್ಷೆಗಳನ್ನು. ಕಿರುಕುಳ ಕೊಡುವುದನ್ನು ಮತ್ತು ಬಹಿಷ್ಕರಿಸುವುದನ್ನು ನಿಲ್ಲಿಸುವುದಾಗಿದೆ.' ಎಂಬುದಂತೂ ನನಗೆ ಸ್ಪಷ್ಟವಾಗಿ ಬಿಟ್ಟಿದೆ. ಪ್ರಾಗೀಯ ಜನರ ಮಧ್ಯೆ ನಡೆಯುತ್ತಿರುವ ಈ ಭಯಂಕರ ಘರ್ಷಣೆಯನ್ನು ಕೊನೆಗಾಣಿಸಬಲ್ಲ ಏಕೈಕ ಮಾರ್ಗವೆಂದರೆ ಇದೊಂದೇ.

ಈಗ ನಡೆಸಲ್ಪಡುತ್ತಿರುವ ಭೀಕರತೆಗಳನ್ನು ಮತ್ತು ಜನರು ಅಡ್ಡದಾರಿಹಿಡಿಯುವುದನ್ನು ತಪ್ಪಿಸುವ ಏಕೈಕ ಮಾರ್ಗವೆಂದರೆ ಸರ್ಕಾರ ತನ್ನ ಅಧಿಕಾರಕ್ಕೆ ರಾಜೀನಾಮೆ ಕೊಡುವುದೇ ಆಗಿದೆ ಎಂಬುದು ನನಗೆ ಸಂಪೂರ್ಣವಾಗಿ ಸ್ಪಷ್ಟವಾಗಿದೆ. ಸರ್ಕಾರ ಮಾಡಬಲ್ಲ ಅತ್ಯುತ್ತಮ ಕಾರ್ಯವೆಂದರೆ ಅದೇ ಎಂಬುದು ನನಗೆ ಮನವರಿಕೆಯಾಗಿದೆ: ಅಷ್ಟೇ ಅಲ್ಲ ಇಂಥ ಸಲಹೆಯೊಂದನ್ನು ಮುಂದಿಡುವುದರಿಂದ ನನ್ನನ್ನು ಅದು ಪೂರ್ಣ ಹುಚ್ಚನೆಂದು ಭಾವಿಸುತ್ತದೆಂಬುದೂ ನನಗೆ ಅಷ್ಟೇ ಸ್ಪಷ್ಟವಾಗಿ ಮನವರಿಕೆಯಾಗಿದೆ. ಆದುದರಿಂದಲೇ, ಸರ್ಕಾರದ ಕ್ರೌರ್ಯದ ಮುಂದುವರಿಕೆಯು ಪರಿಸ್ಥಿತಿಯನ್ನು ಇನ್ನಷ್ಟು ಹದಗೆಡಿಸುವುದಲ್ಲದೆ ಉತ್ತಮಗೊಳಿಸುವುದಿಲ್ಲವೆಂದು ನನಗೆ ಪೂರ್ಣವಾಗಿ ಮನದಟ್ಟಾಗಿದ್ದರೂ ನಾನು ಈ ಬಗ್ಗೆ ಬರೆಯುವುದಕ್ಕಾಗಲೀ ಅಥವಾ ಕೊನೆಗೆ ಮಾತನಾಡುವುದಕ್ಕಾಗಲಿ ಪ್ರಯತ್ನಿಸಲಿಲ್ಲ.

ಈ ಮಧ್ಯೆ ಸುಮಾರು ಒಂದು ತಿಂಗಳು ಕಳೆದಿದೆ; ದುರ್ದೈವದಿಂದ ನನ್ನ ಗ್ರಹಿಕೆಯೂ ಹೆಚ್ಚು ಹೆಚ್ಚು ದೃಢೀಕರಣಗೊಳ್ಳುತ್ತಿದೆ. ಈಗ ಹೆಚ್ಚು ಹೆಚ್ಚು ಗಲ್ಲು ಶಿಕ್ಷೆಗಳೂ ಮತ್ತು ಹೆಚ್ಚು ಹೆಚ್ಚು ಕೊಲೆಗಳೂ ಹಾಗೂ ದರೋಡೆಗಳೂ ನಡೆಯುತ್ತಿವೆ. ಸಂಭಾಷಣೆಗಳು ಮತ್ತು ಆಕಸ್ಮಾತ್ ಪತ್ರಿಕೆಗಳ ಮೇಲೆ ಕಣ್ಣಾಡಿಸುವುದು ಇವೆರಡರಿಂದಲೂ ನಾನಿದನ್ನು ಬಲ್ಲೆ. ಸರ್ಕಾರದ ಬಗೆಗೆ ಜನರ ಮತ್ತು ಸಮಾಜದ ಭಾವನೆಗಳು ಹೆಚ್ಚು ಹೆಚ್ಚು ಕಹಿಗೊಂಡಿವೆ.

ಕೆಲವು ದಿನಗಳ ಹಿಂದೆ ನಾನು ಹೊರಗೆ ಕುದುರೆ ಸವಾರಿ ಮಾಡುತ್ತಿದ್ದಾಗ ಪೀ – ಜಾಕೆಟ್ ಮತ್ತು ನೇರವಾದ ಅಧಿಕಾರ ಲಾಂಛನವುಳ್ಳ ವಿಚಿತ್ರವಾದ ನೀಲಿಯ ಟೋಪಿ ಧರಿಸಿದ ತರುಣನೊಬ್ಬನು ರೈತರ ಗಾಡಿಯಲ್ಲಿ ಅದೇ ದಿಕ್ಕಿನಲ್ಲಿ ಹೋಗುತ್ತಿದ್ದವನು ಗಾಡಿಯಿಂದ ಧುಮುಕಿ ನನ್ನ ಬಳಿಗೆ ಬಂದ.

ನಸುವೆ ಕೆಂಪಾದ ಮೀಸೆಯ. ಅನಾರೋಗ್ಯದ ಮೈಬಣ್ಣವುಳ್ಳ ಕುಳ್ಳ ಮನುಷ್ಯ ಅತ: ಅತ ಚುರುಕಾದ ಮತ್ತು ಒರಟಾದ ಮುಖವುಳ್ಳವನಾಗಿದ್ದನು; ಹಾಗೆಯೇ ಅಸಂತುಷ್ಟ ಮುಖಭಾವದವನಾಗಿದ್ದನು.

ಅವನು ಕಿರುಹೊತ್ತಿಗೆಗಳು ಬೇಕೆಂದು ಕೇಳಿದ: ಅದರೆ ಅದು ಸಂಭಾಷಣೆಯನ್ನು ಆರಂಭಿಸುವ ಸ್ಪಷ್ಟವಾದ ನೆಪವಾಗಿತ್ತು.

ಅವನು ಎಲ್ಲಿಂದ ಬಂದವನೆಂದು ನಾನು ಕೇಳಿದೆ.

ಅವನು ದೂರದ ಹಳ್ಳಿಯ ಒಬ್ಬ ರೈತನಾಗಿದ್ದ. ಆ ಹಳ್ಳಿಯ ಕೆಲವರು ಇತ್ತೀಚೆಗೆ ಬಂಧಿಸಲ್ಪಟ್ಟಿದ್ದರು ಮತ್ತು ಅವರ ಹೆಂಡತಿಯರು ನನ್ನನ್ನು ನೋಡಲು ಬಂದಿದ್ದರು.

ಅದು ನನಗೆ ಚೆನ್ನಾಗಿ ಗೊತ್ತಿದ್ದ ಹಳ್ಳಿ. ಅಲ್ಲಿ ಜಮೀನ್ದಾರಿ ಪದ್ಧತಿಯಿಂದ ಮುಕ್ತಗೊಳಿಸುವ ಅಧಿಕಾರ ಪತ್ರಗಳ ವ್ಯವಹಾರವನ್ನು ನೋಡಿಕೊಳ್ಳುವ ಭಾರ ನನ್ನ ಮೇಲೆ ಬಿದ್ದಿತ್ತು.† ಮತ್ತು ನಾನಂತೂ ಅಲ್ಲಿನ ವಿಶಿಷ್ಟವಾಗಿ ರೈತರ ಎದೆಗಾರಿಕೆ ಮತ್ತು ಸೌಂದರ್ಯಗಳನ್ನು ಪ್ರಶಂಸಿಸಿದ್ದೆ. ವಿಶೇಷ ಪ್ರತಿಭೆಯುಳ್ಳ ಬಾಲಕರು ಆ ಹಳ್ಳಿಯಿಂದ ನನ್ನ ಶಾಲೆಗೆ ಬರುವ ರೂಢಿಯಿತ್ತು.

ಸೆರೆಮನೆಗೆ ಕಳುಹಿಸಲ್ಪಟ್ಟ ರೈತರ ಬಗ್ಗೆ ನಾನು ಕೇಳಿದೆ. ಇತ್ತೀಚೆಗೆ ಮುಖಾಮುಖಿಯಾದ ಪ್ರತಿಯೊಬ್ಬರಲ್ಲಿಯೂ ನಾನು ಕಂಡದ್ದು ಅದೇ ರೀತಿಯ ಭರವಸೆ ಹಾಗೂ ನಿಸ್ಸಂದೇಹಗಳಿಂದ ಮತ್ತು ಇವೆಲ್ಲಕ್ಕೂ ಸರ್ಕಾರವನ್ನಷ್ಟೇ ದೂಷಿಸಬೇಕೆನ್ನುವ ಪೂರ್ಣ ನಂಬಿಕೆಯಿಂದ ಅವನು ಹೇಳಿದ–"ಅವರನ್ನೆಲ್ಲ ಹಿಡಿದರು; ಬಡಿದರು ಮತ್ತು ಬಂಧಿಸಿದರು".

ಅತ್ಯಂತ ಕಷ್ಟದಿಂದ ಮಾತ್ರವೇ ಅವರ ಮೇಲಿನ ಆರೋಪಣೆಯ ನಿಬಂಧನೆಯ ವಿವರ ತಿಳಿದುಕೊಂಡೆ.

ಅವರೆಲ್ಲ 'ಭಾಷಣಕಾರ'ರೆಂದೂ ಸಭೆಗಳನ್ನು ಮಾಡಿ ಅಲ್ಲಿ ಭೂಮಿಯ ಮರುಹಂಚಿಕೆಯ ಅಗತ್ಯವನ್ನು ಹೇಳುತ್ತಿದ್ದಾರೆಂದೂ ಆಮೇಲೆ ತಿಳಿಯಿತು.

ಭೂಮಿಯ ಬಳಕೆಯ ಬಗ್ಗೆ ಸಮಾನವಾದ ಹಕ್ಕು ಎಲ್ಲರಿಗೂ ಇರುವಂಥ ವ್ಯವಸ್ಥೆಯನ್ನು ಹಿಂಸೆಯಿಂದ ಸಾಧಿಸಲು ಸಾಧ್ಯವಾಗುವುದಿಲ್ಲ ಎಂದು ನಾನು ಹೇಳಿದೆ.

ಅವನು ಒಪ್ಪಲಿಲ್ಲ.

'ಏಕಾಗುವುದಿಲ್ಲ?', ಅವನು ಹೇಳಿದ. 'ನಾವದನ್ನು ವ್ಯವಸ್ಥೆಗೊಳಿಸಬೇಕಾದ ಅಗತ್ಯವಿದೆ'.

---

† ಸೈನ್ಯವನ್ನು ಬಿಟ್ಟಮೇಲೆ ಟಾಲ್‌ಸ್ಟಾಯ್ ವಹಿಸಿಕೊಂಡಿದ್ದ ಏಕೈಕ ಅಧಿಕಾರಸ್ಥಾನ 1861–62ರಲ್ಲಿ 'ಶಾಂತಿಪಾಲಕ'ನಾಗಿದ್ದುದು ಮಾತ್ರ. ಆ ಅಧಿಕಾರದಲ್ಲಿದ್ದಾಗ ಜಿಲ್ಲೆಯಲ್ಲಿರುವ ಜಮೀನ್ದಾರರು ಮತ್ತು ಆಗತಾನೆ ಮುಕ್ತಗೊಳಿಸಲ್ಪಟ್ಟ ಜೀತದಾಳುಗಳ ಸಂಬಂಧಗಳನ್ನೂ ನಿಯಂತ್ರಿಸುವ ಭಾರ ಅವನ ಮೇಲೆ ಬಿದ್ದಿತ್ತು.

'ಹೇಗೆ ವ್ಯವಸ್ಥೆಗೊಳಿಸುತ್ತೀರಿ?'—ನಾನು ಕೇಳಿದೆ.

'ಕಾಲಬಂದಾಗ ಅದನ್ನು ನೋಡಬಹುದು'.

'ಮತ್ತೊಂದು ಸಶಸ್ತ್ರ ದಂಗೆಯೆಂದು ನಿನ್ನ ಅಭಿಪ್ರಾಯವೆ?'

'ಅದು ನೋವುಂಟುಮಾಡುವ ಅವಶ್ಯಕತೆಯಾಗಿದೆ.'

ಇಂಥ ಸಂದರ್ಭಗಳಲ್ಲಿ ಯಾವಾಗಲೂ ಹೇಳುವುದನ್ನೇ ನಾನು ಹೇಳಿದೆ. 'ಕೆಟ್ಟದ್ದನ್ನು ಕೆಟ್ಟದ್ದರಿಂದ ಗೆಲ್ಲಲಾಗುವುದಿಲ್ಲ; ಕೇವಲ ಕೆಟ್ಟದ್ದರಿಂದ ದೂರ ಉಳಿಯುವುದ ರಿಂದ ಮಾತ್ರ ಗೆಲ್ಲಬಹುದು.'

'ಆದರೆ ಹಾಗೆ ಬದುಕುವುದು ಅಸಾಧ್ಯವಾಗಿಬಿಟ್ಟಿದೆಯಲ್ಲ. ನಮಗೆ ಉದ್ಯೋಗ ವಿಲ್ಲ ಮತ್ತು ಭೂಮಿ ಇಲ್ಲ. ನಮಗೆ ಇನ್ನೇನಾಗಬೇಕಾಗಿದೆ? – ಹುಬ್ಬಿನಡಿಯಿಂದ ನನ್ನತ್ತ ನೋಡುತ್ತಾ ನನ್ನನ್ನು ಕೇಳಿದ.

'ನನಗೆ ನಿನ್ನ ಅಜ್ಜನಾಗುವಷ್ಟು ವಯಸ್ಸಾಗಿದೆ.' ನಾನು ಉತ್ತರಿಸಿದೆ. 'ನಾನು ನಿನ್ನೊಡನೆ ತರ್ಕ ಮಾಡುವುದಿಲ್ಲ. ಆದರೆ ಹೊಸದಾಗಿ ಬದುಕನ್ನು ಆರಂಭಿಸುತ್ತಿರುವ ಯುವಕನಾದ ನಿನಗೆ ನಾನು ವಿಷಯವನ್ನು ಹೇಳುತ್ತೇನೆ. ಈಗ ಸರ್ಕಾರ ಮಾಡುತ್ತಿರು ವುದು ಕೆಟ್ಟದ್ದಾದರೆ. ನೀನು ಈಗ ಮಾಡುತ್ತಿರುವುದು ಹಾಗೂ ಮಾಡಲು ಸಿದ್ಧತೆ ನಡೆಸುತ್ತಿರುವುದು ಅಷ್ಟೇ ಕೆಟ್ಟದ್ದಾಗಿದೆ. ಸ್ವಭಾವಗಳು ಈಗ ತಾನೆ ರೂಪುಗೊಳ್ಳುತ್ತಿರುವ ತರುಣನಾದ ನೀನು ಇದೊಂದನ್ನು ಮಾಡಲೇ ಬೇಕು – ನ್ಯಾಯವಾಗಿ ಬದುಕು, ಪಾಪಮಾಡುವುದರಿಂದಲ್ಲ. ಅಥವಾ ಭಗವಂತನ ಇಚ್ಛೆಯನ್ನು ವಿರೋಧಿಸುವುದರಿಂದಲ್ಲ'.

ಅತೃಪ್ತಿಯಿಂದ ಅವನು ತಲೆಯನ್ನಲ್ಲಾಡಿಸಿದ. ಮತ್ತು ಹೇಳಿದ: 'ಬಹುಶ್ಯಃ ಬ್ಬನಿಗೂ ಅವನದೇ ಆದ ದೇವನಿದ್ದಾನೆ: ಲಕ್ಷಾಂತರ ಜನರು – ಲಕ್ಷಾಂತರ ದೇವರು.'

'ಅದು ಸರಿ', ನಾನು ಹೇಳಿದೆ. 'ಕ್ರಾಂತಿಯಲ್ಲಿ ಭಾಗವಹಿಸಬೇಡವೆಂದು ನಿನಗೆ ಬುದ್ಧಿ ಹೇಳುತ್ತೇನೆ.'

'ಆದರೆ, ಏನುಮಾಡಬೇಕು?', ಅವನು ಉತ್ತರಿಸಿದ. 'ನಾವು ಹೀಗೆಯೇ ಸಹಿಸುತ್ತ ಸಹಿಸುತ್ತ ಕೂರುವುದಕ್ಕೆ ಸಾಧ್ಯವಿಲ್ಲ. ಏನುಮಾಡಬೇಕು?'

ಈ ಮಾತಿನಿಂದ ಏನೂ ಪ್ರಯೋಜನವಿಲ್ಲವೆಂದು ನಾನು ಹೊರಡಲು ಸಿದ್ಧ ನಾಗುತ್ತಿದ್ದೆ: ಆದರೆ ಅವನು ನನ್ನನ್ನು ತಡೆದ

'ಒಂದು ವೃತ್ತಪತ್ರಿಕೆಗೆ ಚಂದಾದಾರರಾಗಿ ಸಹಾಯಮಾಡಲಾರಿರಾ?' ಅವನು ಪ್ರಶ್ನಿಸಿದ, ನಾನು ತಿರಸ್ಕರಿಸಿದೆ ಮತ್ತು ವ್ಯಥೆಗೊಳ್ಳುತ್ತಾ ಅಲ್ಲಿಂದ ಕುದುರೆ ಹತ್ತಿ ಹೊರಟೆ

ಕಾರ್ಖಾನೆಗಳಲ್ಲಿ ಕೆಲಸವಿಲ್ಲದೆ ನಿರುದ್ಯೋಗಿಗಳಾಗಿ ರಷ್ಯದಲ್ಲೆಲ್ಲ ಈಗ ಅಲೆದಾಡು ತ್ತಿರುವ ಸಾವಿರಾರು ಜನರಲ್ಲಿ ಅವನು ಒಬ್ಬನಲ್ಲ. ಅವನು ಹಳ್ಳಿಯಲ್ಲಿ ಬೇಸಾಯ ಗಾರನಾಗಿರುವ ಒಬ್ಬ ರೈತ: ಮತ್ತು ಅಂಥ ನೂರಾರು ಸಾವಿರವಲ್ಲ – ಆದರೆ ಲಕ್ಷಾಂತರ ರೈತರು ದೇಶದ ತುಂಬ ಇದ್ದಾರೆ, ಮತ್ತು ಇಂಥ ಮನೋವೃತ್ತಿಯ ಸೋಂಕು ಈಗ ಹೆಚ್ಚು ಹೆಚ್ಚು ವ್ಯಾಪಿಸಿಕೊಳ್ಳುತ್ತಿದೆ.

ಮನೆಗೆ ಹಿಂದಿರುಗಿದಾಗ ನನ್ನ ಕುಟುಂಬ ಅತ್ಯಂತ ದುಃಖಕರವಾದ ಮನಃಸ್ಥಿತಿ ಯಲ್ಲಿತ್ತು. ಅದೇ ತಾನೇ ಬಂದಿದ್ದ ವೃತ್ತ ಪತ್ರಿಕೆಯ ಸುದ್ದಿಯನ್ನವರು ಆಗತಾನೆ ಓದಿದ್ದರು (ಅಂದು ಅಕ್ಟೋಬರ್ ಆರು, ಆದೇ ಹಳೆಯ ಶೈಲಿ.)

'ಮತ್ತೆ ಇಪ್ಪತ್ತೆರಡು ಗಲ್ಲಿನ ಶಿಕ್ಷೆಗಳು ಇಂದು', ನನ್ನ ಮಗಳು ಹೇಳಿದಳು. 'ಇದು ಭೀಕರ.'

'ಭೀಕರ ಮಾತ್ರವಲ್ಲ ವಿವೇಕವಿಲ್ಲದ್ದು ಕೂಡ' ನಾನು ಹೇಳಿದೆ. 'ಹಾಗಾದರೆ ಏನುಮಾಡಬೇಕು? ಕೊಂದು ಮತ್ತು ದರೋಡೆ ಮಾಡಿದಮೇಲೂ ಅವರು ಶಿಕ್ಷಿಸಲ್ಪಡದಿರಲು ಅವಕಾಶಕೊಡಬಾರದು' ಅವರಲ್ಲೊಬ್ಬ ರೈತ ಹೇಳಿದ.

ಆ ಮಾತುಗಳು : 'ಏನುಮಾಡಬೇಕು', ಇವೇ ಮಾತುಗಳೇ ಎಸ್ಟೇಟಿನಿಂದ ಬಂದಿದ್ದ ಇಬ್ಬರು ಅಲೆಮಾರಿಗಳು ಮತ್ತು ಇಂದಿನ ಕ್ರಾಂತಿಕಾರೀ ರೈತ ಕೂಡ ಬಳಸಿದ್ದಂಥವು.

'ದೇಶ ಮತ್ತು ಜನ ಎರಡನ್ನೂ ಹಾಳುಮಾಡುತ್ತಿರುವ ಈ ಭ್ರಷ್ಟ ಸರ್ಕಾರ ಮಾಡುತ್ತಿರುವ ಈ ಪಾಷಾಣ ಸದೃಶ ದೌರ್ಜನ್ಯಗಳನ್ನು ಸಹಿಸುವುದು ಅಸಾಧ್ಯವಾಗಿದೆ. ನಾವು ಬಳಸಿಕೊಳ್ಳಬೇಕಾಗಿರುವ ಸಾಧನಗಳನ್ನು ನಾವೂ ದ್ವೇಷಿಸುತ್ತೇವೆ: ಆದರೆ ಏನು ಮಾಡುವುದು?' ಒಂದು ಕಡೆ ಕ್ರಾಂತಿಕಾರಿಗಳು ಹೇಳುತ್ತಾರೆ.

'ತಮ್ಮನ್ನು ತಾವೇ ಅಧಿಕಾರಕ್ಕೆ ನೇಮಕಮಾಡಿಕೊಂಡ ಕೆಲವರು ಆಷಾಢ-ಭೂತಿಗಳು ಅಧಿಕಾರವನ್ನು ಕಿತ್ತುಕೊಳ್ಳಲು ಮತ್ತು ರಷ್ಯವನ್ನು ಮನಸ್ಸು ಬಂದಂತೆ ಆಳಲು ಅಷ್ಟ ದಾರಿಗೆಳೆಯಲು ಮತ್ತು ಅದನ್ನು ಹಾಳುಮಾಡಲು ಅವಕಾಶ ಕೊಡಬಾರದು. ಈಗ ತಾತ್ಕಾಲಿಕವಾಗಿ ಕೈಗೊಂಡಿರುವ ಕಾರ್ಯಕ್ರಮಗಳೇನೋ ದುಃಖಕರವಾದುವು ಆದರೆ ಏನುಮಾಡಬೇಕು?' ಎನ್ನುತ್ತಾರೆ ಇತರರು, ಸಂಪ್ರದಾಯಶರಣರು.

ನನಗೆ ಹತ್ತಿರವಾಗಿರುವ ಜನ – ಕ್ರಾಂತಿಕಾರಿಗಳು ಮತ್ತು ಸಂಪ್ರದಾಯ ಶರಣರು ಮತ್ತು ಇಂದಿನ ರೈತ ಹಾಗೂ ಆ ದುರದೃಷ್ಟಶಾಲೀ ಕ್ರಾಂತಿಕಾರಿಗಳು – ಇವರ ಬಗ ನಾನು ಯೋಚಿಸಿದ್ದೇನೆ. ಇವರು ಬಾಂಬುಗಳನ್ನು ಆಮದು ಮಾಡಿಕೊಂಡು ಮತ್ತು

ತಯಾರಿಸಿಕೊಂಡು ಕೊಲೆಮಾಡುತ್ತಾರೆ ಮತ್ತು ದರೋಡೆ ಮಾಡುತ್ತಾರೆ. ಮತ್ತು ಇಷ್ಟೇ ಮರುಕ ತೋರಿಸುವಂಥದ್ದೆಂದರೆ ಜನರನ್ನು ಕಳೆದುಕೊಂಡವರು ಆಜ್ಞೆಮಾಡಿ ಸೈನಿಕ ನ್ಯಾಯಾಲಯಗಳನ್ನು ಏರ್ಪಡಿಸುತ್ತಾರೆ. ಅದರಲ್ಲಿ ಭಾಗವಹಿಸುತ್ತಾರೆ. ಗುಂಡಿ-ಕ್ಕುತ್ತ, ಹಾಗೂ ನೇಣು ಹಾಕುತ್ತ ಎಲ್ಲರೂ ಒಂದೇ ರೀತಿ ತಾವು ಅಗತ್ಯವಾದುದನ್ನೇ ಮಾಡುತ್ತಿದ್ದೇವೆಂದು ತಮಗೆ ತಾವೇ ಭರವಸೆಗೊಳ್ಳುತ್ತ ಎಲ್ಲರೂ ಒಂದೇ ರೀತಿ ಇದೇ ಶಬ್ದಗಳನ್ನು ಪುನರುಚ್ಚರಿಸುತ್ತಾರೆ: ಏನು ಮಾಡಬೇಕು?

'ಏನುಮಾಡಬೇಕು?' – ಅವರೆಲ್ಲ ಕೇಳುತ್ತಾರೆ: ಆದರೆ 'ನಾನು ಮಾಡಲೇ ಬೇಕಾದ್ದೇನು?' ಎಂದು ಅದನ್ನು ಪ್ರಶ್ನೆಯಾಗಿ ಕೇಳುತ್ತಿಲ್ಲ. ನಾವೀಗ ಮಾಡುತ್ತಿರುವುದನ್ನು ನಿಲ್ಲಿಸಿಬಿಟ್ಟರೆ ಇದರಿಂದ ಎಲ್ಲರಿಗೂ ಇನ್ನೂ ಹೆಚ್ಚಿನ ಕೆಟ್ಟದ್ದಾಗುತ್ತದೆಂಬ ಒತ್ತಾಯಪೂರ್ವಕ ತರ್ಕವಾಗಿ ಇದನ್ನು ಕೇಳುತ್ತಾರೆ.'

ಮತ್ತು ಅತ್ಯಂತ ಭೀಕರವಾದ ಹಾಗೂ ಅನೈತಿಕವಾದ ಕಾರ್ಯಗಳ ಬಗ್ಗೆ ವಿಶದೀಕರಣವನ್ನು ಮತ್ತು ಸಮರ್ಥನೆಯನ್ನು ಬಚ್ಚಿಡುವ ಈ ಶಬ್ದಗಳಿಗೆ ಪ್ರತಿಯೊಬ್ಬನೂ ಎಷ್ಟೊಂದು ಒಗ್ಗಿಹೋಗಿದ್ದಾನೆಂದರೆ ಯಾರೊಬ್ಬರ ತಲೆಗೂ ಹೀಗೆ ಕೇಳಬೇಕೆಂದು ಅನ್ನಿಸುವುದಿಲ್ಲ: 'ಏನುಮಾಡಬೇಕು ಎಂದು ಕೇಳುವ ನೀನು ಯಾರು? ಎಲ್ಲ ಜನರೂ ತಿಳಿದಿರುವಂತೆ – ಕೊನೆಗೆ ನೀನೂ ತಿಳಿದಿರುವಂತೆ – ಕೆಟ್ಟದ್ದೂ ಮತ್ತು ದುಷ್ಟವೂ ಆದ ಕಾರ್ಯಗಳನ್ನು ಮಾಡಿ ಜನರ ಹಣೆಬರಹವನ್ನು ತೀರ್ಮಾನಿಸಬಲ್ಲೆನೆಂದು ಭಾವಿಸಲು ನೀನು ಯಾರು? ನಿನಗೆ ಸರಿಯೆಂದು ತೋರುವ ರೀತಿಯಲ್ಲೇ ಎಲ್ಲವನ್ನೂ ಬದಲಾಯಿಸಬೇಕೆಂದು ಇಚ್ಛಿಸುವುದು ಒಳ್ಳೆಯದೆಂದು ನಿನಗೆ ಹೇಗೆ ಗೊತ್ತು? ನೀನು ಒಳ್ಳೆಯದು ಮತ್ತು ಉಪಯುಕ್ತವಾದುದು ಎಂದು ಭಾವಿಸಿದುದನ್ನು ಕೆಟ್ಟದ್ದೂ ಹಾಗೂ ಅಪಾಯಕಾರಿಯಾದದ್ದು ಎಂದು ಹೇಳುವ ಜನ ಬಹಳ ಇದ್ದಾರೆಂಬುದು ನಿನಗೆ ಗೊತ್ತಿದೆಯೇನು? ನೀನು ಮಾಡುತ್ತಿರುವುದು ನೀನು ಬಯಸಿದ ಫಲಿತಾಂಶಗಳನ್ನೆ ಉಂಟು ಮಾಡುತ್ತದೆಂದು ನಿನಗೆ ಹೇಗೆ ಗೊತ್ತು? ಏಕೆಂದರೆ ಸಾಮಾನ್ಯವಾಗಿ ಉದ್ದೇಶಿಸಿದುದಕ್ಕೆ ವಿರುದ್ಧವಾದ ಫಲಿತಾಂಶಗಳೇ – ವಿಶೇಷವಾಗಿ ಒಂದು ಇಡೀ ಜನಾಂಗದ ಬದುಕಿಗೆ ಸಂಬಂಧಿಸಿದ ವಿಷಯಗಳಲ್ಲಿ – ಉಂಟಾಗುತ್ತವೆಂಬುದು ನಿನಗೂ ವಿದಿತವಾಗಿರಬೇಕು. ಎಲ್ಲಕ್ಕಿಂತ ಹೆಚ್ಚಾಗಿ ದೇವರ ನಿಯಮಕ್ಕೆ ವಿರುದ್ಧವಾದುದನ್ನು (ನಿಜವಾಗಿ ನೀನು ದೇವರನ್ನು ನಂಬುವುದಾದರೆ ) ಮಾಡಲು ನಿನಗೇನು ಅಧಿಕಾರವಿದೆ? ಅಥವಾ ಅತ್ಯಂತ ಸಾಮಾನ್ಯವಾಗಿ ಒಪ್ಪಿಕೊಂಡ ನೈತಿಕ ನಿಯಮಗಳಿಗೆ ( ಸಾರ್ವತ್ರಿಕವಾದ ನೈತಿಕ ನಿಯಮಗಳನ್ನು ನೀನು ಅಂಗೀಕರಿಸುವುದಾದರೆ) ವಿರುದ್ಧವಾದುದನ್ನು ಮಾಡಲು ನಿನಗೇನು ಅಧಿಕಾರವಿದೆ? ನಿನ್ನ ಕ್ರಾಂತಿಕಾರಕವಾದ ಹಾಗೂ ಸರ್ಕಾರದ ಕಾರ್ಯಗಳಿಗೆ ಹೊಂದಿಕೆಯೇ ಆಗದಿರುವ ಸರಳವೂ ಮತ್ತು ಅಪರಿಹಾರ್ಯವೂ ಆದ ಮಾನವೀಯ

ಹೊಣೆಗಾರಿಕೆಗಳಿಂದ ನಿನ್ನನ್ನು ನೀನು ಮುಕ್ತನಾದವನೆಂದು ಭಾವಿಸಿಕೊಳ್ಳಲು ನಿನಗಾವ ಹಕ್ಕಿದೆ?'

'ಏನುಮಾಡಬೇಕು' ಎಂಬ ನಿನ್ನ ಪ್ರಶ್ನೆ ಒಂದು ಸಮರ್ಥನೆಯಾಗದೆ ನಿಜವಾಗಿಯೂ ಒಂದು ಪ್ರಶ್ನೆಯೇ ಆಗಿರುವುದಾದರೆ ಮತ್ತು ನಿನಗೆ ನೀನೇ ಆ ಪ್ರಶ್ನೆಯನ್ನು ಹಾಕಿಕೊಳ್ಳುವುದಾದರೆ ಸ್ಪಷ್ಟವೂ ಹಾಗೂ ಸರಳವೂ ಆದ ಒಂದುಉತ್ತರ ತಾನಾಗಿಯೇ ಧ್ವನಿತವಾಗುತ್ತದೆ ಇದಕ್ಕೆ ಉತ್ತರ – ಜಾರ್ ದೊರೆಗಳು. ರಾಜ್ಯಪಾಲರು. ಪೋಲೀಸ್ ಅಧಿಕಾರಿಗಳು. ಅಥವಾ ಯಾವುದಾದರೊಂದು ರಾಜಕೀಯ ಪಕ್ಷ ನೀನು ಮಾಡಬೇಕೆಂದು ಬಯಸುವುದನ್ನು ಮಾಡುವುದಲ್ಲ: ಆದರೆ ಮಾನವನಾಗಿ ನಿನಗೆ ಯಾವುದು ಸಹಜವೊ ಮತ್ತು ನಿನ್ನನ್ನು ಈ ಜಗತ್ತಿಗೆ ಕಳುಹಿಸಿದ ಆ ಶಕ್ತಿ – ಯಾವುದನ್ನು ಜನರು ರೂಢಿಯಾಗಿ ದೇವರೆಂದು ಕರೆಯುತ್ತಾರೋ ಆ ಶಕ್ತಿ–ನಿನ್ನಿಂದೇನನ್ನು ಬಯಸುತ್ತದೆಯೋ ಅದನ್ನು ಮಾಡುವುದು.

'ಏನು ಮಾಡಬೇಕು?' ಎಂಬ ಪ್ರಶ್ನೆಗೆ ಈ ಉತ್ತರವನ್ನು ಕೊಡುತ್ತಿದ್ದಂತೆಯೇ ಇದು ತಕ್ಷಣವೇ ತಾವುಗಳು ಮಾತ್ರ. ಯಾವುದೋ ಕಾರಣಕ್ಕಾಗಿ ತಾವು ಮಾತ್ರವೇ ಜನರ ಕಷ್ಟಗಳನ್ನು ನಿವಾರಿಸುವವರು ಎನ್ನುವ ಮೂರ್ಖವೂ ಮತ್ತು ಅಪರಾಧ ಪರಂಪರೆಗೆ ಕಾರಣವೂ ಆದ ಮಂಜನ್ನು ನಿವಾರಿಸಿಬಿಡುತ್ತದೆ. ಈ ಮಂಜಿನಲ್ಲಿ ಸಿಕ್ಕಿ ಬಿದ್ದ ಈ ಜನ ಬದುಕಿನ ನಿಜವಾದ ದಾರಿಯಿಂದ ಸಿಡಿದು ಹೋದವರು ಹಾಗೂ ತೊಡಕುಗಳಲ್ಲಿ ಸಿಕ್ಕಿಬಿದ್ದವರು ಇಂಥ ಲಕ್ಷಾಂತರ ಜನರ ಹಣೆಬರಹವನ್ನು ತೀರ್ಮಾನಿಸುವವರು ತಾವು ಎಂದು ಭ್ರಮಿಸುತ್ತಾರೆ; ಮತ್ತೆ ಈ ಲಕ್ಷಾಂತರ ಜನರಿಗೆ ಪ್ರಶ್ನಾರ್ಹವಾದ ಅನುಕೂಲಗಳನ್ನುಂಟುಮಾಡುವುದಕ್ಕಾಗಿ ಪ್ರಶ್ನಾತೀತವಾಗಿ ಹಾಗೂ ಖಚಿತವಾಗಿ ಅಪಾಯ ತರುವ ಕಾರ್ಯವನ್ನು ಮಾಡಿಬಿಡುತ್ತಾರೆ.

ಎಲ್ಲ ವಿವೇಕವುಳ್ಳವರಿಂದಲೂ. ಸಂಪ್ರದಾಯದಿಂದಲೂ. ಎಲ್ಲ ಜನಾಂಗಗಳ ಎಲ್ಲ ಧರ್ಮಗಳಿಂದಲೂ ಮತ್ತು ನಿಜವಾದ ವಿಜ್ಞಾನದಿಂದಲೂ ಅಂಗೀಕರಿಸಲ್ಪಟ್ಟ ಕೆಲವು ಸಾಮಾನ್ಯ ನಿಯಮಗಳಿರುತ್ತವೆ. ಈ ನಿಯಮ ಎಂದರೆ ಜನರು ತಮ್ಮ ಹಣೆಬರೆಹವನ್ನು ರೂಪಿಸಿಕೊಳ್ಳಲು ಮತ್ತು ಅತ್ಯುತ್ತಮ ವೈಯಕ್ತಿಕ ಕ್ಷೇಮಾಭ್ಯುದಯಗಳನ್ನು ಸಾಧಿಸಲು ಪರಸ್ಪರ ಸಹಾಯ ಮಾಡಬೇಕು: ಪರಸ್ಪರ ಪ್ರೀತಿಸಬೇಕು: ಮತ್ತು ಖಂಡಿತವಾಗಿ ಹಾಗೂ ಯಾವುದೇ ಕಾರಣಕ್ಕಾಗಿ ಒಬ್ಬರು ಮತ್ತೊಬ್ಬರ ಸ್ವಾತಂತ್ರ್ಯ ಮತ್ತು ಪ್ರಾಣಗಳ ಮೇಲೆ ಆಕ್ರಮಣಮಾಡಬಾರದು. ಆದರೂ ವಿಚಿತ್ರವೆಂದರೆ ಈ ನಿಯಮಕ್ಕೆ ವಿಧೇಯವಾಗಿರುವುದು ಪೂರ್ತಿ ಅನವಶ್ಯವೆಂದೂ. ಈ ನಿಯಮಕ್ಕೆ ವಿರೋಧವಾಗಿ ಅಥವಾ ಒತ್ತಾಯಪೂರ್ವಕವಾಗಿ ವರ್ತಿಸಬೇಕಾದ ಸಂದರ್ಭಗಳಿರುವುದಾಗಿಯೂ ಮತ್ತು ಎಲ್ಲ ಮಾನವಕೋಟಿಗೂ ಪರಮೋಚ್ಚವಾದ ನಿಯಮಕ್ಕಿಂತ

ಹೆಚ್ಚಾಗಿ ಚಿರಂತನ ನಿಯಮಗಳಿಂದ ಕವಲೊಡೆದ ಇಂಥ ನಿಯಮಗಳಿಂದ ಮಾತ್ರವೇ ವ್ಯಕ್ತಿಗಳಿಗೂ ಮತ್ತು ಸಮಾಜಗಳಿಗೂ ಒಟ್ಟಿಗೇ ಕ್ಷೇಮಾಭ್ಯುದಯ ಗಳು ಉಂಟಾಗುತ್ತವೆಯೆಂದೂ ನಮಗೆ ಮನವರಿಕೆ ಮಾಡಿಕೊಡಲು ಬರುವ ಜನರಿದ್ದಾರೆ.

ಒಂದು ಅಗಾಧವಾದ ಸಂಕೀರ್ಣ ಕಾರ್ಖಾನೆಯಲ್ಲಿರುವ ಕೆಲಸಗಾರರು ಉತ್ಪಾದನೆ ಚೆನ್ನಾಗಿ ನಡೆಯಲೆಂದೂ ಹಾಗೂ ತಮ್ಮ ಕ್ಷೇಮಾಭ್ಯುದಯಗಳು ಸಾಧಿತವಾಗಲೆಂದೂ ತಾವು ಏನನ್ನು ಮಾಡಬೇಕು ಮತ್ತು ಮಾಡಬಾರದು ಎಂದು ಯಜಮಾನನು ಕೊಟ್ಟ ನಿರ್ದೇಶನಗಳನ್ನು ಪಡೆಯುತ್ತಾರೆ ಮತ್ತು ಅಂಗೀಕರಿಸುತ್ತಾರೆ. ಆದರೆ ಉತ್ಪಾದನೆ ಹೇಗೆ ನಡೆಯುತ್ತದೆ ಮತ್ತು ಹೇಗೆ ಜನರು ಅವನ್ನು ಉತ್ಪಾದಿಸುತ್ತಾರೆ ಎಂಬುದರ ಕಲ್ಪನೆಯೇ ಇಲ್ಲದ ಜನರು ಬಂದು, ಕಾರ್ಖಾನೆಯ ಉತ್ಪಾದನೆಯ ಕಾರ್ಯವನ್ನು ಹೆಚ್ಚಿಸುತ್ತೇವೆಂದೂ ಮತ್ತು ಕೆಲಸಗಾರರಿಗೆ ಅತ್ಯಂತ ಹೆಚ್ಚಿನ ಪ್ರಯೋಜನಗಳನ್ನು ದೊರಕಿಸಿಕೊಡುತ್ತೇವೆಂದೂ ಭರವಸೆ ಕೊಡುತ್ತ, ಕೆಲಸಗಾರರು ಯಜಮಾನ ಹೇಳಿದ್ದನ್ನು ಮಾಡಬಾರದೆಂದೂ ಮತ್ತು ಅದಕ್ಕೆ ವಿರುದ್ಧವಾಗಿ ನಡೆದುಕೊಳ್ಳಬೇಕೆಂದೂ ಹೇಳುತ್ತಾರೆ.

ಮಾನವನ ಸಾಮಾನ್ಯ ಚಟುವಟಿಕೆಗಳಿಂದ ಜನಿಸುವ ಪರಿಣಾಮ ಪರಂಪರೆ ಗಳನ್ನು ಅರಿಯಲಾರದ ಈ ಜನ ಮಾಡುತ್ತಿರುವುದು ಇದೇ ಅಲ್ಲವೇನು? ವೈಯಕ್ತಿಕವಾಗಿ ಪ್ರತಿಯೊಬ್ಬ ವ್ಯಕ್ತಿಯ ಮತ್ತು ಸಂಕೀರ್ಣ ಮಾನವ ಚಟುವಟಿಕೆಗಳ ಯಶಸ್ಸಿಗಾಗಿ ರೂಪಿತವಾಗಿರುವ, ಎಲ್ಲ ಮಾನವರಿಗೂ ಸಮಾನವಾದ ಹಾಗೂ ಮಾನವ ಬುದ್ಧಿ ಖಚಿತಗೊಳಿಸಿರುವ, ಇಂಥ ಚಿರಂತನ ನಿಯಮಗಳನ್ನು ಅವರು ಪಾಲಿಸದಿರು ವುದಷ್ಟೇ ಅಲ್ಲದೆ, ಸಾಧಾರಣವಾಗಿ ವಿಶೇಷವಾಗಿಯೇ ತಪ್ಪುಮಾಡುವ ತಮ್ಮಂಥ ಕೆಲವರಿಂದಲೇ ರೂಪಿತವಾದ ಕೇವಲ ಸಣ್ಣದೂ ಏಕಪಕ್ಷೀಯವೂ ಆದ ಆಕಸ್ಮಿಕ ಅನಿಶ್ಚಿತ ಗುರಿಗಳಿಗೋಸ್ಕರವಾಗಿ ಪ್ರತ್ಯಕ್ಷವಾಗಿಯೂ ಮತ್ತು ಪ್ರಜ್ಞಾಪೂರ್ಣವಾಗಿಯೂ ಆ ನಿಯಮಗಳನ್ನು ಮುರಿದು ಹಾಕುತ್ತಾರೆ: ಹೀಗೆ ಮಾಡುವಾಗಲೆಲ್ಲ ಅವರು ಇದಕ್ಕೆ ತೀರ ವಿರುದ್ಧವಾಗಿ ಯೋಚಿಸುವವರು ಇದ್ದಾರೆಂಬುದನ್ನು ಮರೆತು, ಎಲ್ಲ ಮಾನವರಿಗೂ ಸಮಾನವಾದ ಹಾಗೂ ಮಾನವ ಸ್ವಭಾವಕ್ಕೆ ಅನುಗುಣವಾಗಿರುವ ಚಿರಂತನ ನಿಯಮ ಗಳನ್ನು ಪಾಲಿಸುವುದರಿಂದ ಪಡೆಯುವ ಪ್ರಯೋಜನಗಳಿಗಿಂತಲೂ ಹೆಚ್ಚು ಪ್ರಯೋಜನ ಗಳನ್ನು ಪಡೆಯಬಲ್ಲೆವೆಂಬ ಭ್ರಮೆಗೆ ಒಳಗಾಗುತ್ತಾರೆ.

ಆಧ್ಯಾತ್ಮಿಕ ರೋಗಗಳಿಂದ ಹಾಗೂ ರಾಜಕೀಯ ಭ್ರಮೆಯಿಂದ ಪೀಡಿತರಾಗಿ ನರಳುತ್ತಿರುವವರಿಗೆ. "ಏನುಮಾಡಬೇಕು?" ಎಂಬ ಪ್ರಶ್ನೆಗೆ ಸರಳವಾದ ಮತ್ತು ಸ್ಪಷ್ಟವಾದ ಉತ್ತರ ಎಂದರೆ – "ಎಲ್ಲ ಮಾನವ ಕೋಟಿಗೂ ಸಮಾನವಾದ ಹಾಗೂ

ಅತ್ಯಂತ ಶ್ರೇಷ್ಠವಾದ. ನೆರೆಯವನನ್ನು ಪ್ರೀತಿಸುವ ಪ್ರೀತಿಯ ನಿಯಮಕ್ಕೆ ವಿಧೇಯವಾಗಿ ನಡೆದುಕೊಳ್ಳುವುದೇ" – ಎಂದು ಹೇಳುವುದು ಅಮೂರ್ತವೂ ಹಾಗೂ ಅಪ್ರಾಯೋಗಿಕವೂ ಆಗಿ ತೋರುತ್ತದೆಂಬುದು ನನಗೆ ಗೊತ್ತು. ತಮ್ಮ ಕಾರ್ಯಗಳ ಪರಿಣಾಮವೇನೆಂದು ತಿಳಿಯಲಾರದವರು. ಇನ್ನೊಂದು ಗಂಟೆಯ ಅನಂತರ ಬದುಕಿರುತ್ತಾರೋ ಇಲ್ಲವೋ ಎಂಬುದನ್ನು ತಿಳಿಯಲಾರದವರು. ಆದರೆ ಪ್ರತಿಯೊಂದು ಕೊಲೆಯೂ ಮತ್ತು ಹಿಂಸೆಯ ಕಾರ್ಯವೂ ಕೆಟ್ಟದೆಂಬುದನ್ನು ಚೆನ್ನಾಗಿ ತಿಳಿದವರು, ಹೇಗಾದರಾಗಲಿ ಬೇರೆ ಜನರ ಭವಿಷ್ಯದ ಕ್ಷೇಮಾಭ್ಯುದಯಗಳನ್ನು ಸ್ಥಾಪಿಸುತ್ತೇವೆಂಬ ನೆಪದಲ್ಲಿ ತಾವು ಮಾಡುವ ಕಾರ್ಯಗಳು ಉಂಟುಮಾಡುವ ಪರಿಣಾಮಗಳನ್ನು ನಿಸ್ಸಂದಿಗ್ಧವಾಗಿ ತಿಳಿದವರಂತಿರುವವರು ಹಾಗೂ ಜನರನ್ನು ಕೊಲ್ಲುವುದು ಮತ್ತು ಸಂಕಟಕ್ಕೊಳಗುಮಾಡುವುದು ಕೆಟ್ಟದೆಂಬುದು ಗೊತ್ತೇ ಇಲ್ಲ ಎನ್ನುವಂತೆ ಭಾವಿಸುವವರು–ಇವರಿಗೆಲ್ಲಾ ಪ್ರಾಯೋಗಿಕವಾಗಿ ತೋರುವ ಉತ್ತರ ಎಂದರೆ ಇಂಥ ಪ್ರಭುತ್ವ ಅಥವಾ ರಾಜ್ಯಾಂಗವೇ ತೀರ ಅಪೇಕ್ಷಣೀಯ ಎನ್ನುವಂತೆ ವರ್ತಿಸುವುದೇ ಆಗಿದೆ.

ರಾಜಕೀಯ ಭ್ರಾಂತಿಯ ಅಧ್ಯಾತ್ಮಿಕ ರೋಗದಿಂದ ಅನೇಕರು ನರಳುತ್ತಿರುವ ರೀತಿ ಅದು. ಅಂಥ ರೋಗಗ್ರಸ್ತ ಜನ ಮಾಡಿದ ಭೀಕರತೆಗಳು ಮತ್ತು ಅಪರಾಧಗಳಿಂದ ನರಳುತ್ತಿರುವ ಅಧಿಕ ಸಂಖ್ಯೆಯ ಜನ ಧರ್ಮಬದ್ಧವಾಗಿರಲು ಮತ್ತು ಉಪಯುಕ್ತವಾಗಿರಲು ಮನುಷ್ಯ ಮನುಷ್ಯನ ಮೇಲೆ ಬಲಪ್ರಯೋಗದ ಅಧಿಕಾರ ಚಲಾಯಿಸುವ ಭಯಂಕರವಾದ ಎಂಥ ಭ್ರಮೆಗೆ ಸಿಕ್ಕಿಬಿದ್ದವೆಂಬುದನ್ನು ಕೊನೆಗಾದರೂ ಅರ್ಥಮಾಡಿಕೊಳ್ಳಬಲ್ಲರು: ಇದನ್ನು ಚೆನ್ನಾಗಿ ಮನವರಿಕೆ ಮಾಡಿಕೊಂಡು ಬಲಪ್ರಯೋಗ ಮಾಡುವ ಅಧಿಕಾರದ ಜೊತೆ ಭಾಗವಹಿಸುವ ಅಥವಾ ಅದಕ್ಕೆ ಶರಣಾಗುವ ಹುಚ್ಚುತನ ಮತ್ತು ದುಷ್ಟತನಗಳಿಂದ ತಮ್ಮನ್ನು ತಾವು ಮುಕ್ತಗೊಳಿಸಿಕೊಳ್ಳಬಲ್ಲರು; ಹಾಗೆ ಮಾಡುವುದರಿಂದ ಅವರು ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನಿಗೆ ಏನುಮಾಡಬೇಕಾಗಿದೆಯೆಂಬುದನ್ನು – ಯಾವುದರ ಆಜ್ಞೆಗಳನ್ನು ವಿವೇಕವುಳ್ಳ ಯಾವ ವ್ಯಕ್ತಿಯೂ ಮರೆಯಲಾಗುವುದಿಲ್ಲವೋ ಮತ್ತು ಮಾನವರು ದೇವರೆಂದು ಕರೆಯುವ ಆ ತರ್ಕಬದ್ಧವೂ ಹಾಗೂ ಮಂಗಳಪ್ರದವೂ ಆದ ಆ ಮೂಲಶಕ್ತಿ ತಮ್ಮಿಂದ ಏನನ್ನು ಅಪೇಕ್ಷಿಸುತ್ತದೆಯೋ ಅದನ್ನು – ನಡೆಸಲು ಸಿದ್ಧರಾಗುತ್ತಾರೆ ಎಂದು ನಾನು ಭಾವಿಸುತ್ತೇನೆ.

ಒಂದು ಪಕ್ಷ ಎಲ್ಲಜನರೂ. ಮಂತ್ರಿ. ಪೋಲೀಸರು. ರಾಷ್ಟ್ರಾಧ್ಯಕ್ಷರು ಹೋರಾಡುವ ಅಥವಾ ಹೋರಾಡದಿರುವ ಪಕ್ಷಗಳ ಸದಸ್ಯ – ಇಂಥ ತಮ್ಮ ತಮ್ಮ ವೈಯಕ್ತಿಕವಾದ ಭಿನ್ನ ಭಿನ್ನ ಸ್ಥಾನಗಳನ್ನು ಮರೆತು ಮಾನವರಾಗಿ ತಮಗೆಲ್ಲರಿಗೂ ಸಹಜವಾದುದನ್ನಷ್ಟೇ ಮಾಡುವುದಾದರೆ ಇಂದು ಜನರ (ಅದರಲ್ಲಿಯೂ ವಿಶೇಷವಾಗಿ ರಷ್ಯದ ಜನರ) ಬದುಕನ್ನು ತುಂಬಿಕೊಂಡಿರುವ ಭೀಕರತೆಗಳು ಮತ್ತು ನರಳಿಕೆಗಳು ನಿಂತು

ಹೋಗುತ್ತವೆ. ಮತ್ತೆ ದೇವರ ರಾಜ್ಯವು ಭೂಮಿಗಿಳಿಯುತ್ತದೆ ಎಂದು ನಾನು ನಂಬದೆ ಇರಲಾರೆ.

ಎಲ್ಲೋ ಕೆಲವರಾದರೂ ಹಾಗೆ ಮಾಡದಿದ್ದರೆ, ಅಂಥವರು ಹೆಚ್ಚಾಗುತ್ತಾ ಹೋದಂತೆ ಅಷ್ಟಷ್ಟೇ ಕೆಡಕು ಕಡಿಮೆಯಾಗುತ್ತದೆ: ಮತ್ತೆ ಹೆಚ್ಚು ಉತ್ತಮ ವ್ಯವಸ್ಥೆಯೂ ಹಾಗೂ ಜನಸಾಮಾನ್ಯರ ಕ್ಷೇಮಾಭ್ಯುದಯಗಳೂ ಉಂಟಾಗುತ್ತವೆ.

[ಅಕ್ಟೋಬರ್ 1906]

# ನಾ ಸುಮ್ಮನಿರಲಾರೆ

'ಏಳು ಮರಣದಂಡನೆಯ ಶಿಕ್ಷೆಗಳು: ಎರಡು ಪೀಟರ್ಸ್‌ಬರ್ಗಿನಲ್ಲಿ. ಒಂದು ಮಾಸ್ಕೋದಲ್ಲಿ. ಎರಡು ಪೆನ್‌ಜಾದಲ್ಲಿ ಮತ್ತು ಎರಡು ರೀಗಾದಲ್ಲಿ. ನಾಲ್ಕು ಗಲ್ಲಿನ ಶಿಕ್ಷೆಗಳು: ಎರಡು ಖೇರ್‌ಸೋನ್‌ನಲ್ಲಿ ಒಂದು ವಿಲ್ನಾದಲ್ಲಿ ಮತ್ತೆ ಇನ್ನೊಂದು ಒಡೆಸ್ಸಾದಲ್ಲಿ.'

ಇದು ಪ್ರತಿದಿನವೂ ಪತ್ರಿಕೆಗಳಲ್ಲಿ ಮರುಕಳಿಸುತ್ತಿತ್ತು: ವಾರಗಳವರೆಗಲ್ಲ. ತಿಂಗಳುಗಳವರೆಗಲ್ಲ. ವರ್ಷದವರೆಗಲ್ಲ – ಆದರೆ ಅನೇಕ ವರ್ಷಗಳಲ್ಲಿ ಮುಂದುವರಿಯಿತು ಮತ್ತೆ ಇದು ನಡೆದದ್ದು ರಷ್ಯದಲ್ಲಿ! ಯಾವ ದೇಶದ ಜನ ಅಪರಾಧಿಗಳನ್ನು ಮರುಕದಿಂದ ನೋಡುತ್ತಿದ್ದರೋ ಮತ್ತು ಎಲ್ಲಿ ತೀರ ಇತ್ತೀಚಿನವರೆಗೂ ಮರಣದಂಡನೆಯು ಕಾನೂನಿನ ದೃಷ್ಟಿಯಿಂದ ಅಂಗೀಕರಿಸಲ್ಪಟ್ಟಿರಲಿಲ್ಲವೋ ಆ ರಷ್ಯದಲ್ಲಿ! ಪಶ್ಚಿಮ ಯೂರೋಪಿನ ಜನರ ಜೊತೆಗೆ ಈ ವಿಷಯ ಮಾತಾಡುವಾಗ ಎಷ್ಟೊಂದು ಹೆಮ್ಮೆ ಪಡುತ್ತಿದ್ದೆ ಎಂಬುದನ್ನು ನಾನು ನೆನೆಯುತ್ತೇನೆ. ಆದರೆ ಈಗ ಒಂದನೆಯ ವರ್ಷವನ್ನು ಬಿಡಿ – ಎರಡನೆಯ ಮತ್ತು ಮೂರನೆಯ ವರ್ಷಗಳಲ್ಲೂ ಎಷ್ಟೊಂದು ಕೊನೆಯಿಲ್ಲದ ಗಲ್ಲುಶಿಕ್ಷೆಗಳು ಗಲ್ಲು ಶಿಕ್ಷೆಗಳು, ಗಲ್ಲು ಶಿಕ್ಷೆಗಳು ಮತ್ತು ಗಲ್ಲು ಶಿಕ್ಷೆಗಳು!

ಇಂದಿನ ಪತ್ರಿಕೆಯನ್ನು ಕೈಗೆತ್ತಿಕೊಳ್ಳುತ್ತೇನೆ.

ಇಂದು. ಮೇ 9, ಪತ್ರಿಕೆ ಈ ಪದಗಳನ್ನೊಳಗೊಂಡಿದೆ: 'ಸ್ಟ್ರೆಲ್‌ಬಿಟ್ಸ್ಕಿ ಮೈದಾನದಲ್ಲಿರುವ ಖೇರ್ಸೋನ್‌ನಲ್ಲಿ ಎಲಿಸಬೆಟ್‌ಗ್ರಾಡ್ ಜಿಲ್ಲೆಯಲ್ಲಿರುವ ಭೂಮಾಲೀಕನ ಎಸ್ಟೇಟಿನ ಮೇಲೆ ದರೋಡೆ ಮಾಡುವ ಉದ್ದೇಶದಿಂದ ಆಕ್ರಮಣಮಾಡಿದ್ದಕ್ಕೆ ಇಂದು ಇಪ್ಪತ್ತು ಜನ ರೈತರನ್ನು ನೇಣುಹಾಕಲಾಯಿತು.'

ಯಾರ ಬೆವರಿನ ಫಲವಾಗಿ ನಾವು ಬದುಕಿದ್ದೇವೆಯೋ ಅವರಲ್ಲಿ ಹನ್ನೆರಡು ಜನರನ್ನು ನಮ್ಮ ಅಧಿಕಾರದಲ್ಲಿರುವ ಎಲ್ಲ ಸಾಧನಗಳ ಮೂಲಕವೂ ಭ್ರಷ್ಟಗೊಳಿಸುತ್ತ ಹಾಗೂ ಭ್ರಷ್ಟಗೊಳಿಸುವುದನ್ನು ಮುಂದುವರಿಸುತ್ತ ವೋಡ್ಕದ ವಿಷದಿಂದ ಬಿಡಿಮು ಕುಲದ ಭೀಕರ ಮಿಥ್ಯೆಯವರೆಗೆ ಎಲ್ಲವನ್ನೂ ನಮ್ಮೆಲ್ಲ ಶಕ್ತಿಯಿಂದ ಅವರ ಮೇಲೆ ಹೇರುತ್ತ, ಆದರೆ ಇದಾವುದನ್ನು ನಂಬದವರಂತೆ. ಅವರು ಯಾರಿಗೆ ಅನ್ನ ವಸ್ತ್ರ ಮತ್ತು ವಸತಿಗಳನ್ನು ನೀಡುತ್ತಿದ್ದಾರೋ ಅಂಥವರಿಂದಲೇ ಅವರನ್ನು ಗಲ್ಲಿಗೇರಿಸುತ್ತ

ಭ್ರಷ್ಟಗೊಳಿಸುತ್ತಿದ್ದಾರೆ. ಮುಂದೆಯೂ ಅವರನ್ನು ಭ್ರಷ್ಟಗೊಳಿಸುತ್ತಲೇ ಹೋಗುತ್ತಾರೆ. ಹನ್ನೆರಡು ಜನ ಗಂಡಂದಿರು. ತಂದೆಗಳು ಮತ್ತು ಮಕ್ಕಳು – ಯಾರ ದಯೆ. ದುಡಿಮೆ ಮತ್ತು ಸರಳತೆಯ ಮೇಲೆ ಇಡೀ ರಷ್ಯದ ಬದುಕು ನಿಂತಿದೆಯೋ – ಅವರನ್ನು ಹಿಡಿದರು; ಸೆರೆಮನೆಗೆ ಹಾಕಿದರು ಮತ್ತು ಅಳ್ಳಾಡಿಸಿಬಿಟ್ಟರು. ಆಮೇಲೆ ನೇಣುಹಾಕುವಾಗ ಹಗ್ಗಗಳನ್ನು ಹಿಡಿದುಕೊಂಡಾರೆಂಬ ಕಾರಣಕ್ಕಾಗಿ ಕೈಗಳನ್ನು ಬೆನ್ನಹಿಂದಕ್ಕೆಳೆದು ಹಗ್ಗ ಗಳಿಂದ ಕಟ್ಟಿ ಅವರನ್ನು ಗಲ್ಲುಗಂಬಗಳ ಬಳಿಗೆ ಒಯ್ಯಲಾಗುತ್ತದೆ. ಜೊತೆಯಲ್ಲಿಯೇ ನೇಣುಹಾಕುವುದಕ್ಕೆ ಬೇಕಾದ ಇಂಥವರೇ ಹಲವಾರು ಜನ ರೈತರು. ಆದರೆ ಆಯುಧ ಪಾಣಿಗಳು ಮತ್ತು ಶುಭ್ರವಾದ ಸೈನಿಕ ಸಮವಸ್ತ್ರಗಳಿಂದ ಅಲಂಕೃತರಾದವರು. ಒಳ್ಳೆಯ ಬೂಟುಗಳನ್ನು ಧರಿಸಿದವರು. ಕೈಗಳಲ್ಲಿ ಬಂದೂಕಗಳನ್ನು ಹಿಡಿದು ಅಪರಾಧಿಗಳ ಜೊತೆ ಹೋಗುತ್ತಾರೆ. ಅವರ ಜೊತೆಗೇ ರೇಶ್ಮೆಯ ಮೇಲುಡುಪು ಮತ್ತು ಬಂಗಾರದ ನಡು ಪಟ್ಟಿಗಳ ಅಲಂಕಾರ ಮಾಡಿಕೊಂಡು ಹಾಗೂ ಕೊರಳಿನಲ್ಲಿ ಶಿಲುಭೆಯನ್ನು ತೂಗುಬಿಟ್ಟಿರುವ ದೀರ್ಘ ಕೇಶಿಯಾದ ಮನುಷ್ಯನೊಬ್ಬ ಹೋಗುತ್ತಾನೆ. ಮೆರವಣಿಗೆ ನಿಲ್ಲುತ್ತದೆ. ಈ ಎಲ್ಲ ವ್ಯವಹಾರಗಳ ಅಧಿಪತಿಯಾದ ಮನುಷ್ಯನೊಬ್ಬ ಏನನ್ನೋ ಹೇಳುತ್ತಾನೆ. ಕಾರ್ಯದರ್ಶಿ ಪತ್ರವೊಂದನ್ನು ಓದುತ್ತಾನೆ; ದೀರ್ಘಕೇಶಿಯಾದ ಮನುಷ್ಯ ಪತ್ರ ವನ್ನೋದಿ ಮುಗಿಸಿದಮೇಲೆ ಇನ್ನೇನು ಕೊರಳಿಗೆ ನೇಣುಬೀಳುವವರನ್ನುದ್ದೇಶಿಸಿ ದೇವರು ಮತ್ತು ಕ್ರೈಸ್ತನನ್ನು ಕುರಿತು ಏನನ್ನೋ ಹೇಳುತ್ತಾನೆ. ಇದನ್ನೆಲ್ಲಾ ಹೇಳಿ ಮುಗಿಸು ತ್ತಿದ್ದಂತೆಯೇ ನೇಣು ಹಾಕುವವರು (ಅವರು ಹಲವರಿರುತ್ತಾರೆ. ಏಕೆಂದರೆ ಒಬ್ಬ ಇಂಥ ತೊಡಕಿನ ಕಾರ್ಯವನ್ನು ಮಾಡಿ ಮುಗಿಸಲಾಗುವುದಿಲ್ಲ. ನೋಡಿ!) ಯಾವುದೋ ಸಾಬೂನನ್ನು ಕರಗಿಸುತ್ತಾರೆ; ಮತ್ತೆ ಕರಗಿಸಿದ ಸಾಬೂನಿನಿಂದ ಕುಣಿಕೆಗಳನ್ನು – ಚೆನ್ನಾಗಿ ಬಿಗಿದುಕೊಳ್ಳಲೆಂದು – ಸವರಿ. ಬಂಧಿತರನ್ನು ಹಿಡಿದು ಮುಸುಕುಗಳನ್ನು ಹಾಕಿ. ಗಲ್ಲಿನ ಅಟ್ಟದ ಮೇಲಕ್ಕೊಯ್ದು ಅವರ ಕತ್ತುಗಳ ಸುತ್ತ, ಸಾಬೂನು ಬಳಿದ ಕುಣಿಕೆಗಳ–ನ್ನಿಕ್ಕುತ್ತಾರೆ.

ಮತ್ತೆ ಅನಂತರ ಒಬ್ಬರಾದಮೇಲೊಬ್ಬರಂತೆ ಜೀವಂತಮಾನವರ ಕಾಲಕೆಳಗಿನ ಬೆಂಚುಗಳನ್ನು ತಳ್ಳಲಾಗುತ್ತದೆ; ಮತ್ತು ಅವರದೇ ಶರೀರಗಳ ಭಾರದಿಂದ ಇದ್ದಕ್ಕಿದ್ದಂತೆ ಕುಣಿಕೆಗಳು ಕತ್ತಿನ ಸುತ್ತ ಬಿಗಿಗೊಳ್ಳುತ್ತವೆ; ಯಾತನಾಮಯವಾಗಿ ಉಸಿರು ಕಟ್ಟುತ್ತದೆ. ಒಂದು ನಿಮಿಷಕ್ಕೆ ಮೊದಲು ಜೀವಂತರಾಗಿದ್ದ ಮಾನವರು ಹೆಣವಾಗಿ ನೇತುಬೀಳುತ್ತಾರೆ; ಹೆಣಗಳು ಮೊದಮೊದಲು ನಿಧಾನವಾಗಿ ತೂಗಾಡುತ್ತ ಕೊನೆಗೆ ನಿಶ್ಚಲವಾಗುತ್ತವೆ.

ಬಹುಶ್ರುತರೂ ಮತ್ತು ಪ್ರಬುದ್ಧರೂ ಆದ ಮೇಲುವರ್ಗದ ಜನರಿಂದ ಇದೆಲ್ಲ ಎಚ್ಚರಿಕೆಯಿಂದ ವ್ಯವಸ್ಥಿತವಾಗಿರುತ್ತದೆ. ಯಾರೊಬ್ಬರೂ ಹೀಗಾಗುವುದನ್ನೆಲ್ಲ ನೋಡದಿರುವಂತೆ ರಹಸ್ಯವಾಗಿ ಸೂರ್ಯೋದಯಕ್ಕೆ ಮೊದಲೇ ಇವುಗಳನ್ನು ಏರ್ಪಡಿಸ

ತ್ತಾರೆ: ಇದಕ್ಕೆ ತಾವು ಯಾರೊಬ್ಬರೂ ಹೊಣೆಯಲ್ಲವೆಂದು ಭಾವಿಸುವಷ್ಟರ ಮಟ್ಟಿಗೆ ಈ ಅಪರಾಧದ ಹೊಣೆಯನ್ನು ಸಮಾನವಾಗಿ ಎಲ್ಲರಲ್ಲಿಯೂ ಹಂಚಿಹಾಕಿಬಿಟ್ಟಿರುತ್ತಾರೆ. ಇದನ್ನು ಮಾಡುವುದಕ್ಕಾಗಿ ಅತ್ಯಂತ ದುರದೃಷ್ಟಶಾಲಿಗಳೂ ಮತ್ತು ಭ್ರಷ್ಟರೂ ಆದವರನ್ನೆ ಹುಡುಕಲು ಅವರು ವ್ಯವಸ್ಥೆಮಾಡುತ್ತಾರೆ. ತಮ್ಮಿಂದ ಯೋಜಿತವಾದ ಹಾಗೂ ಅಂಗೀಕಾರಮುದ್ರೆ ಪಡೆದ ಈ ಕಾರ್ಯವನ್ನು ಮಾಡಲು ಅವರನ್ನು ಋಣಕ್ಕೆ ಸಿಕ್ಕಿಸಿಕೊಳ್ಳುತ್ತಾರೆ: ಆದರೂ ಇದನ್ನು ಮಾಡುವವರ ಬಗ್ಗೆ ಅಸಹ್ಯಗೊಂಡಂತೆ ಸೋಗುಹಾಕುತ್ತಾರೆ. ಅವರು ಇಂಥ ಒಂದು ಸೂಕ್ಷ್ಮತಂತ್ರವನ್ನೂ ಹೂಡುತ್ತಾರೆ: ಸೈನಿಕ ನ್ಯಾಯಾಲಯಗಳಿಂದ ಮರಣ ದಂಡನೆಗಳು ತೀರ್ಮಾನಿತವಾಗುತ್ತವೆ: ಆದರೂ ಗಲ್ಲಿಗೇರಿಸುವಾಗ ಹಾಜರಿರಬೇಕಾದವರು ಸೈನಿಕರಲ್ಲ: ನಾಗರೀಕರು. ತಪ್ಪಿಸಿಕೊಳ್ಳಲಾಗದಂತೆ ಕತ್ತಿನ ಸುತ್ತ ಬಿಗಿದುಕೊಳ್ಳುವ ಕುಣಿಕೆಗಳಿಗೆ ಸಾಬೂನು ಬಳಿಯುವುದನ್ನಲ್ಲದೆ ಇನ್ನೊಂದನ್ನು ಮಾಡಲಾರದ ದಾರಿತಪ್ಪಿದ. ಅಡ್ಡದಾರಿ ಹಿಡಿದ. ಕ್ಷುದ್ರ ಅಸಂತುಷ್ಟ ಜನರೇ ಇದನ್ನೆಲ್ಲಾ ಮಾಡುತ್ತಾರೆ. ಅನಂತರ ಪ್ರಬುದ್ಧರಾದ ಮೇಲುವರ್ಗದ ಜನರೇ ಮಾರಿದ ವಿಷದಿಂದ ಆದಷ್ಟು ಬೇಗ ತಮ್ಮ ಆತ್ಮಗಳನ್ನು ಮತ್ತು ಮಾನವಗುಣಗಳನ್ನು ಮರೆತುಕೊಳ್ಳುವುದಕ್ಕೆ ಚೆನ್ನಾಗಿ ಕಂಠಪೂರ್ತಿ ಕುಡಿದುಬಿಡುತ್ತಾರೆ. ಒಬ್ಬ ವೈದ್ಯ ನೇತು ಬಿದ್ದ ಶರೀರಗಳ ಸುತ್ತ ಓಡಾಡುತ್ತಾನೆ: ಅವುಗಳನ್ನು ಮುಟ್ಟಿ ಪರೀಕ್ಷಿಸುತ್ತಾನೆ; ಅಧಿಕಾರ ಸ್ಥಾನದಲ್ಲಿರುವವರಿಗೆ ಕಾರ್ಯವೆಲ್ಲ ಸುಗಮವಾಗಿ ನಡೆದಿದೆ – ಎಲ್ಲ ಹನ್ನೆರಡು ಜನರೂ ಖಂಡಿತವಾಗಿ ಸತ್ತರು – ಎಂದು ವರದಿಮಾಡುತ್ತಾನೆ. ನೋವಿನ ಕಾರ್ಯವನ್ನೇ ಮಾಡಿದ್ದರೂ ಅಧಿಕಾರದಲ್ಲಿರುವವರು ಅಗತ್ಯವಾದ ಪ್ರಜ್ಞೆಯೊಂದಿಗೆ ತಮ್ಮ ದೈನಂದಿನ ವೃತ್ತಿಗಳಿಗೆ ತೆರಳುತ್ತಾರೆ. ಈಗ ತಣ್ಣಗಾಗಿರುವ ಶರೀರಗಳನ್ನು ಕೆಳಕ್ಕಿಳಿಸಿ ಹೂಳಲಾಗುತ್ತದೆ. ಈ ಕಾರ್ಯ ಭಯಂಕರ!

ಇದು ಒಮ್ಮೆ ನಡೆದದ್ದಲ್ಲ: ಅಸಂತುಷ್ಟರೂ ಹಾಗೂ ತಪ್ಪುದಾರಿಗೆಳೆಯಲ್ಪಟ್ಟವರೂ ಆದ ರಷ್ಯದ ಜನರಲ್ಲಿ ಅತ್ಯುತ್ತಮವರ್ಗಕ್ಕೆ ಸೇರಿದ ಹನ್ನೆರಡು ಜನಕ್ಕೆ ಮಾತ್ರ ಆದದ್ದಲ್ಲ: ತಮಗೆ ಇಂಥ ಭೀಕರ ಕಾರ್ಯಗಳನ್ನು ಮಾಡುವವರಿಂದಲೇ ತಪ್ಪು ಹಾದಿಗೆಳೆಯಲ್ಪಟ್ಟ ಇಂಥ ನೂರಾರು ಸಾವಿರಾರು ದುರ್ದೈವಿ ಜನರಿಗೆ ವರ್ಷಗಳ ವರೆಗೆ ನಿರಂತರವಾಗಿ ನಡೆಯುತ್ತಿರುತ್ತದೆ.

ಮತ್ತೆ ಇದೊಂದೇ ಭಯಾನಕ ಕಾರ್ಯವನ್ನಲ್ಲ ಮಾಡುತ್ತಿರುವುದು! ಇದೇ ನೆಪದಿಂದ ಮತ್ತು ಇಂಥದೇ ನಿಷ್ಕರುಣ ಕ್ರೌರ್ಯದಿಂದ ಸೆರೆಮನೆಗಳಲ್ಲಿ ಕೋಟೆಗಳಲ್ಲಿ ಮತ್ತು ಅಪರಾಧಿ ಶಿಬಿರಗಳಲ್ಲಿ ಎಲ್ಲ ರೀತಿಯ ಚಿತ್ರಹಿಂಸೆಗಳು ಮತ್ತು ಬಲಪ್ರಯೋಗಗಳು ನಡೆಯುತ್ತಿವೆ.

ಇದಂತೂ ಭಯಂಕರ: ಆದರೆ ಇದಕ್ಕಿಂತಲೂ ಭಯಂಕರವಾದದ್ದೆಂದರೆ ಇದು ಜನಗಳಲ್ಲಾಗುವಂತೆ, ಯುದ್ಧಗಳಲ್ಲಾಗುವಂತೆ ಅಥವಾ ಲೂಟಿಗಳಲ್ಲಾದರೂ ಆಗುವಂತೆ

ತರ್ಕವನ್ನೇ ಸ್ತಬ್ಧಗೊಳಿಸುವ ಭಾವೋದ್ರೇಕಗಳ ಹಿಡಿತಕ್ಕೆ ಸಿಕ್ಕಿ ಆದುದಲ್ಲ; ಆದರೆ ಅದಕ್ಕೆ ವಿರೋಧವಾಗಿ ಭಾವನೆಯನ್ನೇ ಸ್ತಬ್ಧಗೊಳಿಸುವ ತರ್ಕ ಮತ್ತು ಲೆಕ್ಕಾಚಾರಗಳ ಒತ್ತಡದಿಂದಾದುದು. ಇದನ್ನು ಇಷ್ಟೊಂದು ಅತ್ಯಂತ ವಿಶಿಷ್ಟವಾಗಿ ಭಯಂಕರ ವೆನ್ನಿಸುವಂತೆ ಮಾಡುವುದು ಇದೇ. ಈ ಕಾರ್ಯಗಳು ಏಕೆ ಭಯಂಕರ ಎಂದರೆ – ನ್ಯಾಯಾಧೀಶನಿಂದ ಹಿಡಿದು ನೇಣುಹಾಕುವವನವರೆಗೆ – ಯಾರೂ ಇವನ್ನು ಮಾಡಲು ಇಷ್ಟಪಡುವುದಿಲ್ಲ – ಆದರೆ ಎಲ್ಲರೂ ಮನುಷ್ಯ ಮನುಷ್ಯನ ಮೇಲೆ ಅಧಿಕಾರ ನಡೆಸುವ ನಿರಂಕುಶಪ್ರಭುತ್ವವಾದವು ಮಾನವಜೀವಗಳಿಗೆ ಎಷ್ಟೊಂದು ಹಾನಿಕರವೆಂದು ಅತ್ಯಂತ ವಿಶದವಾಗಿ ಸಾಧಿಸುತ್ತಾರೆ.

ಒಬ್ಬ ಮನುಷ್ಯ ಮತ್ತೊಬ್ಬನ ಶ್ರಮ. ಹಣ. ದನಕರುಗಳು. ಕುದುರೆಗಳು ಇಷ್ಟೇ ಅಲ್ಲದೆ ಕೊನೆಗೆ ಅವನ ಗಂಡು ಮತ್ತು ಹೆಣ್ಣುಮಕ್ಕಳನ್ನೂ ಕಿತ್ತುಕೊಳ್ಳುವುದು ಕ್ರಾಂತಿಕಾರಣವಾದುದು. ಅದಕ್ಕಿಂತಲೂ ಹೆಚ್ಚು ಕ್ರಾಂತಿಕಾರಣವಾದುದು ಎಂದರೆ ಒಬ್ಬನು ಮತ್ತೊಬ್ಬನ ಆಧ್ಯಾತ್ಮಿಕ ಸ್ವಾಭಿಮಾನವನ್ನು ಕೊಲ್ಲುವಂತೆ ಬಲಾತ್ಕಾರ ಮಾಡುವುದು ಮತ್ತು ಆತನ ಆಧ್ಯಾತ್ಮಿಕ ಕ್ಷೇಮಾಭ್ಯುದಯವನ್ನು ಭ್ರಷ್ಟಗೊಳಿಸುವುದು. ಗಲ್ಲು ಶಿಕ್ಷೆಗೆ ವ್ಯವಸ್ಥೆಮಾಡುವ ಈ ಜನ – ನ್ಯಾಯಾಧೀಶನಿಂದ ಹಿಡಿದು ನೇಣುಹಾಕು ವವನವರೆಗೆ ಲಂಚಕೊಡುವುದರಿಂದ. ಹೆದರಿಸುವುದರಿಂದ ಮತ್ತು ವಂಚನೆಮಾಡು ವುದರಿಂದ ಅತ್ಯಂತ ಸಮಾಧಾನಚಿತ್ತರಾಗಿ ಬಲಾತ್ಕರಿಸುವ ಈ ಜನ–ಮಾನವ ಕೋಟಿಯ ಕಲ್ಯಾಣದ ಹೆಸರಿನಲ್ಲಿ ಜನರ ಕ್ಷೇಮಾಭ್ಯುದಯಗಳನ್ನು ಹಾಳುಮಾಡುವ ಕಾರ್ಯಗಳನ್ನಷ್ಟೇ ಮಾಡಿಸುತ್ತಾರೆ.

ಮತ್ತೆ ಇದು ವರ್ಷಾಂತರಗಳವರೆಗ ಮುಂದುವರಿಯುತ್ತಲೇ ಇರುತ್ತದೆ. ಯಾರ ಆಜ್ಞೆಯಿಂದ ಈ ಕಾರ್ಯಗಳೆಲ್ಲಾ ನಡೆಯುತ್ತವೆಯೋ ಮತ್ತು ಯಾರು ಇವುಗಳನ್ನೆಲ್ಲ ತಡೆಯಬಲ್ಲರೋ ಆ ಪ್ರಮುಖ ಅಪರಾಧಿಗಳಾದರೋ ಈ ಕಾರ್ಯ ಗಳೆಲ್ಲವೂ ಅತ್ಯಂತ ಉಪಯುಕ್ತವಾದುವು ಮತ್ತು ಅತ್ಯಂತ ಆವಶ್ಯಕವಾದುವು ಎಂದು ಪೂರ್ಣ ನಂಬಿಕೊಂಡು ಬಿಡುತ್ತಾರೆ. ಹಾಗಾಗಿಯೇ ಅವರು ಒಂದು ಪಕ್ಷ ಫಿನ್ಸ್ ಜನರು ಅವರ ಇಚ್ಛೆಯಂತೆ ಬದುಕುವುದಕ್ಕೆ ಅಡ್ಡಿಮಾಡಲು ಹೊಸ ವಿಧಾನಗಳನ್ನು ಹುಡುಕುತ್ತಾರೆ ಮತ್ತು ಭಾಷಣಗಳನ್ನು ರೂಪಿಸುತ್ತಾರೆ ಅಥವಾ ಯಾರೋ ಹಲವರು ರಷ್ಯನ್ ಪೋಷಕರು ಬಯಸುವಂತೆ ಬದುಕಲು ಬಲಾತ್ಕಾರ ಮಾಡುತ್ತಾರೆ; ಇಲ್ಲದಿದ್ದರೆ ಹುಸ್ಸರ್ ಸೈನ್ಯದ ತುಕಡಿಗಳಲ್ಲಿರುವ ಜನರ ಮೇಲಂಗಿಗಳ ತೋಳಿನ ಕೊನೆಯ ಅಲಂಕಾರ ಪಟ್ಟಿಗಳು ಮತ್ತು ಕೊರಳ ಪಟ್ಟಿಗಳ ಬಣ್ಣ ರಷ್ಯನರ ರೀತಿಯಲ್ಲಿಯೇ ಇರಬೇಕು; ಹಾಗೆಯೇ ಅಷ್ಟದಳದ ತುಪ್ಪುಳಂಚಿನ ಸಾದಾ ಜುಬ್ಬ ಧರಿಸಲು ಯೋಗ್ಯ ರಾದವರು ತುಪ್ಪುಳದ ಜುಬ್ಬದ ತೋಳು ಪಟ್ಟಿಯ ಸುತ್ತ ಜರಿಯಂಚನ್ನು ಧರಿಸಕೂಡದು ಎಂದು ಆಜ್ಞೆಗಳನ್ನು ಜಾರಿಮಾಡುತ್ತಾರೆ.

ಈ ಎಲ್ಲ ವಿಷಯದಲ್ಲಿ ಅತ್ಯಂತ ಭೀಕರವಾದುದೆಂದರೆ ಈ ಎಲ್ಲ ಅಮಾನುಷ ಹಿಂಸೆ ಮತ್ತು ಕೊಲ್ಲುವಿಕೆಗಳು. ಇದಕ್ಕೆ ಆಹುತಿಯಾಗುವವರಿಗೆ ಮತ್ತು ಅವರ ಕುಟುಂಬಗಳಿಗೆ ಉಂಟುಮಾಡುವ ಪ್ರತ್ಯಕ್ಷ ಕೆಡುಕಿನ ಜೊತೆಗೆ ಒಣಹುಲ್ಲಿನಲ್ಲಿ ಬೆಂಕಿ ವ್ಯಾಪಿಸಿಕೊಳ್ಳುವಂತೆ ಹರಡಿಕೊಳ್ಳುತ್ತಾ ಎಲ್ಲರನ್ನು ನೀತಿಭ್ರಷ್ಟರಾಗಿಸುತ್ತ ರಷ್ಯದ ಪ್ರತಿಯೊಂದು ವರ್ಗದವರಲ್ಲಿಯೂ. ಇದಕ್ಕಿಂತಲೂ ತೀವ್ರವಾದ ಕೆಡುಕನ್ನು ತರುತ್ತವೆ. ಈ ನೀತಿಭ್ರಷ್ಟತೆಯಾದರೋ ಸರಳಸ್ವಭಾವದ ಕೂಲಿಕಾರರಲ್ಲಿ ವಿಶೇಷ ವೇಗದಿಂದ ಹರಡಿಕೊಳ್ಳುತ್ತದೆ. ಏಕೆಂದರೆ – ಕಳ್ಳರು, ದರೋಡೆಕೋರರು ಮತ್ತು ಎಲ್ಲ ಕ್ರಾಂತಿಕಾರಿಗಳೂ ಸೇರಿ ಮಾಡುವುದಕ್ಕಿಂತ ನೂರುಪಟ್ಟು ಹೆಚ್ಚಾಗಿರುವ – ಈ ಎಲ್ಲ ಅಸಮಾನತೆಗಳೂ ಅವಶ್ಯ. ಮಂಗಳಕರ ಹಾಗೂ ಅಪರಿಹಾರ್ಯ ಎಂಬಂತೆ ಭಾವಿಸಲ್ಪಡುತ್ತವೆ. ಇವುಗಳನ್ನು ಕ್ಷಮಿಸಿಬಿಡಲಾಗುವುದಲ್ಲದೆ ನ್ಯಾಯ ಮತ್ತು ಪಾವಿತ್ರ್ಯಗಳಿಂದ ಬೇರ್ಪಡಿಸಲಾಗದಂತೆ ಜನರ ಮನಸ್ಸಿನಲ್ಲಿ ಬೇರೂರಿಬಿಟ್ಟಿರುವ ಸೆನೆಟ್. (ಚರ್ಚಿನ) ನ್ಯಾಯಾಲಯ (ರಷ್ಯದ) ಲೋಕಸಭೆ, ಚರ್ಚ್ ಮತ್ತು ಜಾರ್‌ಗಳಂಥ ಸಂಸ್ಥೆಗಳು ಪ್ರಬಲವಾಗಿ ಬೆಂಬಲಿಸುತ್ತವೆ.

ಮತ್ತೆ ಈ ನೀತಿ ಭ್ರಷ್ಟತೆ ಅದ್ಭುತ ವೇಗದಲ್ಲಿ ಹರಡಿಕೊಳ್ಳುತ್ತದೆ.

ಸ್ವಲ್ಪಕಾಲಕ್ಕೆ ಹಿಂದೆ ರಷ್ಯದಲ್ಲೆಲ್ಲ ಹುಡುಕಿದರೂ ಇಬ್ಬರು ನೇಣುಹಾಕುವವರು ಸಿಗುತ್ತಿರಲಿಲ್ಲ. ಎಂಬತ್ತರಲ್ಲಿ ಎಲ್ಲೋ ಒಬ್ಬನೇ ಒಬ್ಬನಿದ್ದ. ಎರಡನೆಯ ನೇಣು ಹಾಕುವವನೊಬ್ಬ ರಷ್ಯದಲ್ಲೆಲ್ಲೂ ದೊರೆಯಲಾರ ಎಂಬುದನ್ನೂ ಮತ್ತು ಅವನನ್ನೇ ಒಂದು ಕಡೆಯಿಂದ ಮತ್ತೊಂದು ಕಡೆಗೆ ಕರೆದೊಯ್ಯಲಾಗುತ್ತಿತ್ತು ಎಂಬುದನ್ನೂ ಎಷ್ಟು ಸಂತೋಷದಿಂದ ಆಗ ನನಗೆ ವ್ಲಾಡಿಮಿರ್ ಸೊಲೊವೆವ್ ಹೇಳಿದ್ದನೆಂಬುದು ನನಗಿನ್ನೂ ನೆನಪಿದೆ. ಆದರೀಗ ಹಾಗಿಲ್ಲ.

ವ್ಯಾಪಾರ ದಾಳಾಗಿದ್ದ ಮಾಸ್ಕೋ ಪಟ್ಟಣದ ಸಣ್ಣ ಅಂಗಡಿಯವನೊಬ್ಬ ಸರ್ಕಾರ ವ್ಯವಸ್ಥೆಗೊಳಿಸಿದ ಕೊಲೆಗಳನ್ನು ಮಾಡಲು ಮುಂದೆ ಬಂದನು. ಮತ್ತು ನೇಣುಹಾಕಿದ ಒಬ್ಬೊಬ್ಬನಿಗೂ ನೂರು ರೂಬೆಲ್ (ಹತ್ತು ಪೌಂಡು) ಗಳನ್ನು ಪಡೆದು ತನ್ನ ವ್ಯವಹಾರಗಳನ್ನು ಎಷ್ಟೊಂದು ಚೆನ್ನಾಗಿ ಮಾಡಿಕೊಂಡನೆಂದರೆ ಅವನಿಗಿನ್ನು ಈ ಉಪವೃತ್ತಿ ಅನಗತ್ಯವಾಗಿ ತನ್ನ ಹಳೆಯ ವ್ಯಾಪಾರಕ್ಕೆ ಅವನು ಹಿಂದಿರುಗಿಬಿಟ್ಟ.

ಕಳೆದ ತಿಂಗಳು ಓರೆಲ್‌ನಲ್ಲಿಯೂ, ಬೇರೆಕಡೆಯಂತೆಯೇ, ಒಬ್ಬ ನೇಣುಹಾಕುವವನು ಬೇಕಾಗಿತ್ತು. ಸರ್ಕಾರೀ ಕೊಲೆಗಳ ವ್ಯವಸ್ಥಾಪಕರ ಜೊತೆಗೆ ತಲೆಗೆ ಐವತ್ತು ರೂಬೆಲ್ಲುಗಳಂತೆ ಈ ಉದ್ಯೋಗವನ್ನು ಮಾಡಲು ಒಪ್ಪಿಕೊಂಡ ಒಬ್ಬ ಮನುಷ್ಯ ಸಿಕ್ಕಿದ. ಆದರೆ ತಾನಾಗಿಯೇ ಹೀಗೆ ಮುಂದೆ ಬಂದಿದ್ದ ಈ ನೇಣುಹಾಕುವವನು ಒಪ್ಪಂದವನ್ನು ಮಾಡಿಕೊಂಡಾದ ಮೇಲೆ, ಬೇರೆ ನಗರಗಳಲ್ಲಿ ಇದಕ್ಕಿಂತ ಹೆಚ್ಚು ಹಣವನ್ನು ಕೊಡಲಾಗು

ತ್ತಿದೆಯೆಂಬುದನ್ನು ಕೇಳಿದ ಮೇಲೆ ನೇಣುಹಾಕುವ ಹೊತ್ತಿನಲ್ಲಿ ಬಲಿಯಾಗುವವನ ತಲೆಗೆ ಮುಸುಕಿನ ಚೀಲವನ್ನು ಹಾಕಿ ಅವನನ್ನು ಬಲಿಗಂಬದ ಬಳಿಗೆ ಕರೆದೊಯ್ಯುವ ಬದಲು ನಿಂತುಬಿಟ್ಟ. ಮತ್ತು ವ್ಯವಸ್ಥಾಪಕಾಧಿಕಾರಿಯನ್ನು ಸಮೀಪಿಸಿ ಹೇಳಿದ: "ಇನ್ನೂ ಇಪ್ಪತ್ತೈದು ರೂಬೆಲ್ಲುಗಳನ್ನು ಹೆಚ್ಚಿಸಲೇಬೇಕು: ಇಲ್ಲವಾದರೆ ನಾನಿದನ್ನು ಮಾಡುವುದಿಲ್ಲ". ಅನಂತರ ಅವನು ಹೆಚ್ಚು ಹಣವನ್ನು ಪಡೆದ ಮತ್ತು ಆ ಕಾರ್ಯವನ್ನು ಮಾಡಿ ಮುಗಿಸಿದ.

ಸ್ವಲ್ಪ ದಿನಗಳಾದಮೇಲೆ ಐವರನ್ನು ಗಲ್ಲಿಗೇರಿಸಬೇಕಾಗಿತ್ತು. ಗಲ್ಲಿಗೇರಿಸುವುದಕ್ಕೆ ಒಂದು ದಿನ ಮುಂಚೆ ಹೊಸಬನೊಬ್ಬ ಬಂದು ವೈಯಕ್ತಿಕ ವ್ಯವಹಾರವೊಂದಿದೆಯೆಂದು ಸರ್ಕಾರೀ ಕೊಲೆಗಳ ವ್ಯವಸ್ಥಾಪಕರಿಗೆ ಹೇಳಿ ಕಳುಹಿಸಿದನು. ವ್ಯವಸ್ಥಾಪಕ ಅವನನ್ನು ನೋಡಲು ಹೋದಾಗ ಆ ಹೊಸಬ ಹೀಗೆಂದ:

'ಕಳೆದ ಸಲ ಅವನೊಬ್ಬ ತಲೆಗೆ ಇಪ್ಪತ್ತೈದು ರೂಬೆಲ್ಲುಗಳಂತೆ ನಿಮ್ಮಿಂದ ವಸೂಲಿಮಾಡಿದ. ನಾಳೆ ಐವರನ್ನು ನೇಣುಹಾಕಬೇಕಾಗಿದೆಯೆಂದು ಕೇಳಿದ್ದೇನೆ. ಈ ಇಡೀ ಕಾರ್ಯವನ್ನು ನನಗೆ ವಹಿಸಿಬಿಡಿ. ತಲೆಗೆ ಹದಿನೈದು ರೂಬೆಲ್ಲುಗಳಂತೆ ನಾನದನ್ನು ಮಾಡುತ್ತೇನೆ. ಈ ಕಾರ್ಯವನ್ನು ಕ್ರಮವಾಗಿ ನಾನು ಮಾಡಿಕೊಡುತ್ತೇನೆ- ಎಂದು ಭರವಸೆ ನೀಡುತ್ತೇನೆ ನನ್ನ ಮಾತನ್ನು ನಂಬಿ!'

ಈ ಸಲಹೆಯನ್ನು ಒಪ್ಪಿಕೊಳ್ಳಲಾಯಿತೋ ಅಥವಾ ಇಲ್ಲವೋ ಗೊತ್ತಿಲ್ಲ: ಆದರೆ ಹಾಗೆ ಕೇಳಿದ್ದು ಮಾತ್ರ ನನಗೆ ಗೊತ್ತು.

ಈ ಸರ್ಕಾರ ಮಾಡುವ ಅಪರಾಧಗಳು ಹೀಗೆಯೇ ನೀಚರೂ ಮತ್ತು ಅತ್ಯಂತ ಅನೀತಿಯುಳ್ಳವರೂ ಆದ ಜನರ ಮೇಲೆ ಪ್ರಭಾವ ಬೀರುವುದು: ಮತ್ತು ಈ ಭೀಕರ ಕಾರ್ಯಗಳು ಸಾಧಾರಣ ನೈತಿಕ ಮಟ್ಟವುಳ್ಳ ಬಹುಸಂಖ್ಯಾತ ಜನರ ಮೇಲೆಯೂ ಪ್ರಭಾವ ಬೀರಲೇ ಬೇಕು. ರೂಢಮೂಲವಾಗಿ ಜನರೆಲ್ಲಾ ಅತ್ಯುತ್ತಮರೆಂದು ಗೌರವಿಸಲ್ಪಡುವ ಅಧಿಕಾರ ವರ್ಗದವರು ಮಾಡುವ ಭೀಕರ ಅಮಾನುಷ ಪಾಶವಿಕತೆಯ ಬಗ್ಗೆ ಒಂದೇ ಸಮನೆ ಕೇಳುತ್ತ ಮತ್ತು ಓದುತ್ತ ಸಾಧಾರಣ ಜನರಲ್ಲಿ ಬಹುಸಂಖ್ಯಾತರಾದವರು. ಅದರಲ್ಲೂ ತಮ್ಮ ವ್ಯವಹಾರಗಳಲ್ಲೇ ಮುಳುಗಿಹೋಗಿರುವ ತರುಣರು ಇಂಥ ಭೀಕರ ಕಾರ್ಯಗಳನ್ನು ಮಾಡುವವರು ಗೌರವಕ್ಕೆ ಅನರ್ಹರೆಂದು ಮನವರಿಕೆ ಮಾಡಿಕೊಳ್ಳುವುದಕ್ಕೆ ಬದಲಾಗಿ ತಮ್ಮ ಇಚ್ಛೆಗೆ ವಿರೋಧವಾದ ತೀರ್ಮಾನಕ್ಕೆ ಬಂದು ಮುಟ್ಟುತ್ತಾರೆ: ಇಷ್ಟೇ ಅಲ್ಲದೆ ಜನರು ಸಾಮಾನ್ಯವಾಗಿ ಗೌರವಿಸುವವರೇನಾದರೂ ಹೀಗೆ ನಮಗೆ ಭೀಕರವೆನ್ನುವಂತೆ ತೋರುವ ಕಾರ್ಯಗಳನ್ನು ಮಾಡಿದ್ದಾದರೆ ಅವು ಖಂಡಿತವಾಗಿಯೂ ನಾವು ಭಾವಿಸುವಂತೆ ಭೀಕರವಲ್ಲವೆಂದು ತರ್ಕಿಸಹೊರಡುತ್ತಾರೆ.

ಮರಣದಂಡನೆಗಳು, ಗಲ್ಲಿಗೇರಿಸುವುದು, ಕೊಲೆಗಳು ಮತ್ತು ಬಾಂಬುಗಳು ಇವುಗಳ ಬಗ್ಗೆ ಜನ ಈಗ ಹವಾಮಾನದ ಬಗ್ಗೆ ಮಾತಾಡುವಷ್ಟೆ ಸರಳವಾಗಿ ಮಾತಾಡುವುದು ಮತ್ತು ಬರೆಯುವುದು ಅಭ್ಯಾಸವಾಗಿ ಹೋಗಿದೆ. ಮಕ್ಕಳು ಗಲ್ಲುಗಂಬಗಳ ಬಳಿ ಆಟವಾಡುತ್ತಾರೆ. ಇನ್ನೂ ತೀರ ಚಿಕ್ಕವರಾಗಿರುವ ಪ್ರೌಢಶಾಲೆಗಳ ಹುಡುಗರು ಬೇಟೆಗೆ ಹೊರಡುವಷ್ಟೇ ಸಹಜವಾಗಿ, ಕೊಲ್ಲುವುದಕ್ಕೆ ಸಿದ್ಧರಾಗಿ, ಮತ್ತೊಬ್ಬರ ಕೈಯಲ್ಲಿರುವುದನ್ನು ಕಸಿದುಕೊಳ್ಳುವುದಕ್ಕೆ ಪ್ರಯತ್ನಿಸುತ್ತಾರೆ. ಅವರಲ್ಲಿರುವ ಎಸ್ಟೇಟುಗಳನ್ನು ಹಿಡಿದುಕೊಳ್ಳಲು ದೊಡ್ಡ ಜಮೀನುಗಳ ಮಾಲೀಕರುಗಳನ್ನು ಕೊಂದುಹಾಕಿಬಿಡುವುದೇ ಭೂಸಮಸ್ಯೆಗೆ ಅತ್ಯುತ್ತಮ ಪರಿಹಾರ ಎಂದು ಅನೇಕರು ಭಾವಿಸಿದ್ದಂತೆ ತೋರುತ್ತದೆ.

ಹಾಗೆ ನೋಡಿದರೆ ತನ್ನೆಲ್ಲ ಗುರಿಗಳನ್ನೂ ಸಾಧಿಸಿಕೊಳ್ಳುವುದಕ್ಕಾಗಿ ಸರ್ಕಾರ ಕೊಲ್ಲುವ ಚಟುವಟಿಕೆಗೆ ಅವಕಾಶಮಾಡಿಕೊಟ್ಟಿರುವುದಕ್ಕೆ ಕೃತಜ್ಞತೆಗಳನ್ನು ಅರ್ಪಿಸಬೇಕು! ಏಕೆಂದರೆ ಈ ಉದಾಹರಣೆಯಿಂದ ಅಡ್ಡದಾರಿಹಿಡಿದ ಕೀಳುಜನರು ಕೂಡ ದರೋಡೆ, ಕಳ್ಳತನ, ಸುಳ್ಳುಗಳು, ಚಿತ್ರಹಿಂಸೆಗಳು ಮತ್ತು ಕೊಲೆಗಳು ಈ ಎಲ್ಲ ಅಪರಾಧಗಳನ್ನು ಈಗ ಮಾನವನಿಗೆ ಯೋಗ್ಯವಾದ ಅತ್ಯಂತ ಸಹಜವಾದ ಕಾರ್ಯಗಳೆಂದು ಭಾವಿಸತೊಡಗಿದ್ದಾರೆ.

ಹೌದು! ಈ ಕಾರ್ಯಗಳು ತಮಗೆ ತಾವೇ ಭೀಕರವಾಗಿರುವುದಾದರೂ ಇವುಗಳುಂಟುಮಾಡುವ ಕಣ್ಣಿಗೆ ಕಾಣದ ನೈತಿಕ ಹಾಗೂ ಆಧ್ಯಾತ್ಮಿಕ ಕೆಡಕು ಹೋಲಿಸಲಾಗದಷ್ಟು ಇನ್ನೂ ಹೆಚ್ಚು ಭೀಕರವಾದುದು.

ಶಾಂತಿ ಮತ್ತು ವ್ಯವಸ್ಥೆಗಳನ್ನು ನೆಲೆಗೊಳಿಸಲು ಈ ಎಲ್ಲಾ ಭೀಕರಕಾರ್ಯಗಳನ್ನು ಮಾಡುತ್ತೇವೆಂದು ನೀವು ಹೇಳುತ್ತೀರಿ!

ನೀವು ಶಾಂತಿ ಮತ್ತು ವ್ಯವಸ್ಥೆಗಳನ್ನು ನೆಲೆಗೊಳಿಸುತ್ತೀರಿ!

ಕ್ರೈಸ್ತಧರ್ಮಾಧಿಕಾರದ ಪ್ರತಿನಿಧಿಗಳಾದ ನೀವು, ಚರ್ಚುಗಳ ಮಹಾ ಸೇವಕರುಗಳಿಂದ ಅಂಗೀಕರಿಸಲ್ಪಟ್ಟ ಮತ್ತು ಬೆಂಬಲಿಸಲ್ಪಟ್ಟ ಮುಖಂಡರೂ ಮತ್ತು ಬೋಧಕರೂ ಆದ ನೀವು ಯಾವ ಸಾಧನಗಳಿಂದ ಅವುಗಳನ್ನು ನೆಲೆಗೊಳಿಸುತ್ತೀರಿ? ಮಾನವರಲ್ಲಿರುವ ನೈತಿಕತೆ ಮತ್ತು ಶ್ರದ್ಧೆಗಳ ಕೊನೆಯ ಗುರುತನ್ನೂ ಅಳಿಸಿಹಾಕಿಬಿಡುವುದರಿಂದೇನು ? ಇನ್ನೂ ನೀತಿಭ್ರಷ್ಟವಾಗಿಲ್ಲದ ಪ್ರತಿಯೊಂದು ಮಾನವ ಹೃದಯಕ್ಕೂ ಹೇಸಿಗೆ ಹುಟ್ಟಿಸುವಂಥ ಈ ಸುಳ್ಳುಗಳು, ವಂಚನೆ, ಎಲ್ಲರೀತಿಯ ಚಿತ್ರಹಿಂಸೆಗಳು ಮತ್ತು ಕಟ್ಟಕಡೆಯ ಹಾಗೂ ಭೀಕರವಾದ ಅಪರಾಧವಾಗಿರುವ – ಒಂದು ಕೊಲೆಯನ್ನಲ್ಲ, ಅಸಂಖ್ಯಾತ ಕೊಲೆಗಳನ್ನು ಮಾಡುವ ಈ ಮಹಾಪರಾಧಗಳನ್ನು ನೀವು ಮಾಡಿಬಿಡುತ್ತೀರಿ: ಮತ್ತು

ಇವುಗಳನ್ನೆಲ್ಲಾ ನೀವೇ ಬರೆದಿರುವಂಥ ಸುಳ್ಳಿನ ಕಂತೆಗಳಾದ ಮೂರ್ಖ ಕೃತಿಗಳಿಂದ ಕಾನೂನುಗಳೆಂದು ನೀವೇ ಉಗ್ಗಡಿಸುವ ಒಂದೊಂದೇ ವಿಧಿಗಳತ್ತ ಚಪ್ಪಾಗಿ ಬೆರಳು ತೋರಿಸುತ್ತಾ ನೀವು ಮಾಡಿದ್ದನ್ನೆಲ್ಲಾ ಸಮರ್ಥಿಸಿಕೊಳ್ಳಲು ಯೋಚಿಸುತ್ತೀರಿ.

ಜನರನ್ನು ನಿಗ್ರಹಿಸುವ ಹಾಗೂ ಕ್ರಾಂತಿಗಳನ್ನು ದಮನ ಮಾಡುವ ವಿಧಾನ ಇದೊಂದೇ ಎಂದು ನೀವು ಹೇಳುತ್ತೀರಿ; ಆದರೆ ಪ್ರಮಾಣವಾಗಿಯೂ ಅದು ಸುಳ್ಳು. ರಷ್ಯದ ಅಖಂಡ ಬೇಸಾಯಗಾರ ಜನಸಮುದಾಯವನ್ನು ಅವರು ಮುಂದಿಟ್ಟಿರುವ ಅತ್ಯಂತ ಪ್ರಾಥಮಿಕ ನ್ಯಾಯವನ್ನು (ಅದೆಂದರೆ ಭೂಮಿಯ ಮೇಲಿನ ವೈಯಕ್ತಿಕ ಅಧಿಕಾರವನ್ನು ರದ್ದುಪಡಿಸುವುದು) ದೊರಕಿಸದೆ ಶಾಂತಗೊಳಿಸುವುದು ಖಂಡಿತ ಸಾಧ್ಯವಿಲ್ಲ. ಇಷ್ಟೇ ಅಲ್ಲ ಈ ನ್ಯಾಯವನ್ನು ದೊರಕಿಸದೆ ರೈತರನ್ನಾಗಲಿ ಅಥವಾ ನಿರ್ಮೂಡನಾಗಲೀ ಹಿಂಸಾ ಹೋರಾಟವನ್ನು ಆರಂಭಿಸಿರುವ ಆ ತೂಕ ತಪ್ಪಿದ ವಿಷಗ್ರಸ್ತ ಜನರನ್ನಾಗಲೀ ಚುಚ್ಚಿ ಕೆರಳಿಸುವುದರಿಂದ ಸಮಾಧಾನಗೊಳಿಸುವುದು ಖಂಡಿತ ಸಾಧ್ಯವಿಲ್ಲ. ನರಳುವಂತೆ ಮಾಡುವುದರಿಂದ, ಚಿಂತೆಗೊಳ್ಳುವಂತೆ ಮಾಡುವುದರಿಂದ, ಗಡೀಪಾರು ಮಾಡುವುದರಿಂದ, ಸೆರೆಮನೆಗೆ ಹಾಕುವುದರಿಂದ ಮತ್ತು ಹೆಂಗಸರು ಮಕ್ಕಳನ್ನು ನೇಣುಹಾಕುವುದರಿಂದ ನೀವು ಜನರನ್ನು ಸುಮ್ಮನಿರಿಸಲಾರಿರಿ. ನೀವೀಗ ಮಾಡುತ್ತಿರುವಂತೆಯೇ ಈ ಭೀಕರ ಅಪರಾಧಗಳಲ್ಲಿ ಪಾಲ್ಗೊಳುತ್ತ ಎಷ್ಟೇ ಪ್ರಭಲ ವಾಗಿ ಯತ್ನಿಸಿದರೂ ನೀವೀರೋಗವನ್ನು ಗುಣಪಡಿಸಲಾರಿರಿ. ಅಷ್ಟೇ ಅಲ್ಲ ರೋಗ ವನ್ನು ಇನ್ನೂ ಆಳಕ್ಕೆ ತಳ್ಳುವುದರಿಂದ ಪರಿಸ್ಥಿತಿಯನ್ನು ಮತ್ತಷ್ಟು ಹಾಳುಮಾಡುತ್ತೀರಿ. ಮಾನವ ಜೀವಿಗಳಿಗೆ ಸಹಜವಾದ ವಿವೇಕ ಮತ್ತು ಪ್ರೇಮಗಳು ನಿಮ್ಮಲ್ಲಿವೆ–ನಿಮ್ಮೊಳಗೆ ಇನ್ನೂ ಇವೆ – ಆದರೆ ನೀವೀಗ ಮಾಡಬೇಕಾದುದೇನೆಂದರೆ ಇಂದ್ರಿಯಗಳಮೇಲೆ ಹತೋಟಿ ತಂದುಕೊಳ್ಳಬೇಕು. ಎಚ್ಚರಗೊಳ್ಳಬೇಕು ಮತ್ತು ಯೋಚಿಸಬೇಕು ಅಷ್ಟೆ!

ಇದಂತೂ ತೀರ ಸ್ಪಷ್ಟವಾಗಿಯೇ ಇದೆ.

ಈಗ ಏನು ನಡೆಯುತ್ತಿದೆಯೋ ಅದರ ಮೂಲ ಭೌತಿಕ ಘಟನೆಗಳಲ್ಲಿಲ್ಲ; ಆದರೆ ಅದು ಪೂರ್ಣವಾಗಿ ಜನರ ಆಧ್ಯಾತ್ಮಿಕ ಮನಃಸ್ಥಿತಿಯನ್ನವಲಂಬಿಸಿದೆ: ಹೀಗೆ ಈಗಾಗಲೆ ಬದಲಾಗಿ ಹೋಗಿರುವುದನ್ನು. ಬೆಳೆದ ಮನುಷ್ಯನೊಬ್ಬನನ್ನು ಮತ್ತೆ ಅವನ ಪೂರ್ವ ಸ್ಥಿತಿಗೆ ತರುವುದು ಹೇಗೆ ಸಾಧ್ಯವಿಲ್ಲವೋ, ಹಾಗೆಯೇ, ಯಾವ ಪ್ರಯತ್ನಗಳೂ ಮತ್ತೆ ಅದರ ಪೂರ್ವಸ್ಥಿತಿಗೆ ತರಲಾರವು. ಒಂದು ಸಮಾಜದ ಶಾಂತಿ ಅಥವಾ ಕ್ಷೋಭೆಯು ಪೀಟರನನ್ನು ಗಲ್ಲಿಗೇರಿಸಲಾಯಿತೋ ಇಲ್ಲವೇ ಬದುಕಲು ಬಿಡಲಾಯಿತೋ ಎನ್ನುವುದರ ಮೇಲಾಗಲಿ ಅಥವಾ ಜಾನನು 'ಟಂಬೊಫ್'ನಲ್ಲಿ ವಾಸಮಾಡು ತ್ತಾನೆಯೋ ಅಥವಾ 'ನೆರ್ಚಿನ್ಸ್ಕ್'ನಲ್ಲಿ ಕಠಿಣ ಶಿಕ್ಷೆಯನ್ನು ಅನುಭವಿ ಸುತ್ತಿದ್ದಾನೆಯೋ ಎಂಬುದರ ಮೇಲಾಗಲೀ ಅವಲಂಬಿಸಿರಲಾರದು. ಒಂದು

ಸಮಾಜದ ಶಾಂತಿ ಮತ್ತು ಕ್ಷೋಭೆಗಳು ಪೀಟರ್ ಮತ್ತು ಜಾನರನ್ನು ಮಾತ್ರ ಅವಲಂಬಿಸಿರಲಾರದು; ಅವರ ಜೊತೆಗೆ ಒಂದು ಜನಾಂಗದ ಬಹುಸಂಖ್ಯಾತರು ತಮ್ಮ ಸ್ಥಾನದ ಬಗ್ಗೆ ಏನು ಭಾವಿಸುತ್ತಾರೆಂಬುದನ್ನು, ಈ ಬಹುಸಂಖ್ಯಾತರು ಸರ್ಕಾರದ ಬಗೆಗೆ ತಾಳುವ ಧೋರಣೆಯನ್ನು, ಮತ್ತು ಭೂ ಆಸ್ತಿಯ ಬಗ್ಗೆ, ತಮ್ಮನ್ನು ವಿದ್ಯಾವಂತ ರಾಗಿ ಮಾಡಿದ ಧರ್ಮದ ಬಗ್ಗೆ, ಒಳ್ಳೆಯದು ಮತ್ತು ಕೆಟ್ಟದ್ದರ ಬಗ್ಗೆ ಏನು ಯೋಚಿಸು ತ್ತಾರೆ, ಎಂಬಿವುಗಳನ್ನು ಅವಲಂಬಿಸಿ ಇರಬೇಕು. ಒಂದು ಪಕ್ಷ ಇಡೀ ರಷ್ಯನ್ ಜನಾಂಗದ ಹತ್ತನೇ ಒಂದುಭಾಗವನ್ನು ಚಿತ್ರಹಿಂಸೆಗೆ ಗುರಿಮಾಡಿದರೂ ಮತ್ತು ಕೊಂದರೂ ಉಳಿದವರ ಆಧ್ಯಾತ್ಮಿಕ ಮನಸ್ಥಿತಿಯು ಖಂಡಿತ ನೀವು ಬಯಸಿದಂತೆ ಆಗಲಾರದು.

ಆದ್ದರಿಂದ ನಿಮ್ಮೆಲ್ಲ ಹುಡುಕಾಟಗಳಿಂದ, ಗೂಢಚರ್ಯೆಗಳಿಂದ, ಗಡೀಪಾರು ಶಿಕ್ಷೆಗಳಿಂದ, ಸೆರೆಮನೆಗಳಿಂದ, ದಂಡನೆಯ ಶಿಬಿರಗಳಿಂದ ಮತ್ತು ಗಲ್ಲುಗಂಬಗಳಿಂದ ನೀವೀಗ ಮಾಡುತ್ತಿರುವುದೆಲ್ಲವೂ ನೀವು ಬಯಸುವ ಸ್ಥಿತಿಗೆ ಜನರನ್ನು ತರಲಾರದು. ಆದರೆ ಅದಕ್ಕೆ ಪ್ರತಿಯಾಗಿ ಕ್ಷೋಭೆಯನ್ನು ಹೆಚ್ಚಿಸುತ್ತದೆ ಮತ್ತು ಶಾಂತಿ ಹಾಗೂ; ವ್ಯವಸ್ಥೆಗಳ ಎಲ್ಲ ಸಾಧ್ಯತೆಗಳನ್ನೂ ನಾಶಮಾಡುತ್ತದೆ.

'ಆದರೆ ಏನುಮಾಡಬೇಕು?' ಎಂದು ನೀವು ಹೇಳುತ್ತೀರಿ. 'ಏನು ಮಾಡಬೇಕು? ಈಗಾಗಲೇ ಉಂಟುಮಾಡಿರುವ ಅಸಮಾನತೆಗಳನ್ನು ನಿಲ್ಲಿಸುವುದು ಹೇಗೆ?'

ಉತ್ತರ ಬಹಳ ಸರಳವಾಗಿದೆ: ನೀವು ಮಾಡುತ್ತಿರುವುದನ್ನು ನಿಲ್ಲಿಸಿ.

ಜನರನ್ನು ಶಾಂತಗೊಳಿಸುವುದು ಹೇಗೆಂಬುದು ಯಾರಿಗೂ ಗೊತ್ತಿಲ್ಲದಿದ್ದರೆ, ಸುಮ್ಮನಿದ್ದುಬಿಡಿ. ಇಲ್ಲಿಗೆ ಐವತ್ತು ವರ್ಷಗಳ ಹಿಂದೆ ಜೀತಗಾರಿಕೆಯಿಂದ ರೈತರನ್ನು ಮುಕ್ತಗೊಳಿಸಿದಂತೆಯೇ ಇಂದೂ ಕೂಡ ರಷ್ಯದ ಜನರನ್ನು ಸಮಾಧಾನಪಡಿಸ ಬೇಕಾದರೆ ವೈಯಕ್ತಿಕ ಸ್ವಾಮಿತ್ವದಿಂದ ಭೂಮಿಯನ್ನು ಮುಕ್ತಗೊಳಿಸಬೇಕೆಂಬುದು ಬಹಳ ಜನರಿಗೆ ಚೆನ್ನಾಗಿಯೇ ಗೊತ್ತಿದೆ. ಇದು ನಿಮಗೆ ಗೊತ್ತಿಲ್ಲವೆಂದ ಮೇಲೆ ಜನರನ್ನು ಸಮಾಧಾನವಾಗಿಡಬೇಕಾದರೆ ಅವರ ಕ್ಷೋಭೆಯನ್ನು ಹೆಚ್ಚಿಸುವಂಥದ್ದನ್ನಂತೂ ಮಾಡಬಾರದು. ಆದರೂ ಈಗ ನೀವು ಮಾಡುತ್ತಿರುವುದು. ಕೇವಲ ಅದನ್ನೇ!

ನೀವು ಏನನ್ನು ಮಾಡುತ್ತಿದ್ದೀರೋ ಅದನ್ನು ಜನರಿಗಾಗಿ ಮಾಡುತ್ತಿಲ್ಲ; ನಿಮಗಾಗಿ ಮಾಡುತ್ತಿದ್ದೀರಿ ಮತ್ತು ನೀವು ಪಡೆದುಕೊಂಡಿರುವ ಸ್ಥಾನವನ್ನು ಉಳಿಸಿ ಕೊಳ್ಳುವುದಕ್ಕಾಗಿ ಮಾಡುತ್ತಿದ್ದೀರಿ. ಈ ಸ್ಥಾನವಾದರೋ ನೀವು ಭಾವಿಸಿರುವಂತೆ ಉಪಯೋಗಕಾರಿಯಲ್ಲ; ವಾಸ್ತವವಾಗಿ ಕರುಣಾಜನಕವಾದುದು ಮತ್ತು ನೀಚವಾದುದು. ಆದ್ದರಿಂದ ನೀವು ಜನರಿಗಾಗಿ ಮಾಡುತ್ತಿದ್ದೇವೆ ಎಂದು ಹೇಳಬೇಡಿ. ಅದು ನಿಜವಲ್ಲ.

ನೀವು ಮಾಡುವ ಎಲ್ಲ ನೀಚತನಗಳೂ ನಿಮಗಾಗಿಯೇ; ನಿಮ್ಮವೇ ಆದ ಅಸೂಯೆ, ದುರಾಸೆ, ಗರ್ವ, ಸೇಡುಗಳಿಗಾಗಿ: ಸ್ವಾರ್ಥದ ಲಾಭಗಳಿಗಾಗಿ: ಇತರರನ್ನು ಭ್ರಷ್ಟಗೊಳಿಸಿ ಇನ್ನಷ್ಟು ಬದುಕುವುದಕ್ಕಾಗಿ. ಇದೇ ನಿಮಗೆ ಅಪೇಕ್ಷಣೀಯವಾಗಿದ್ದಂತೆಯೂ ತೋರುತ್ತದೆ.

ನೀವು ಮಾಡುತ್ತಿರುವುದೆಲ್ಲಾ ಜನರ ಒಳ್ಳೆಯದಕ್ಕಾಗಿಯೇ ಎಂದು ಎಷ್ಟೇ ಗಟ್ಟಿಯಾಗಿ ನೀವು ಘೋಷಿಸಿದರೂ ಜನ ನಿಮ್ಮನ್ನು ಸರಿಯಾಗಿ ತಿಳಿದುಕೊಳ್ಳಲಾರಂಭಿಸಿ ದ್ದಾರೆ: ಹೆಚ್ಚು ಹೆಚ್ಚು ತಾತ್ಸಾರವಾಗಿ ನೋಡಲಾರಂಭಿಸಿದ್ದಾರೆ. ಜನರನ್ನು ದಮನ ಮಾಡಲು ಮತ್ತು ಹತೋಟಿಯಲ್ಲಿಡಲು ನೀವು ಕೈಗೊಳ್ಳುವ ಕ್ರಮಗಳನ್ನೆಲ್ಲಾ ನೀವು ಆಸಿಸುವಂತೆ ಯಾವುದೋ ಒಂದು ಅತ್ಯುತ್ತಮ ಸಾಮೂಹಿಕ ಸಂಸ್ಥೆ – ಸರ್ಕಾರ ಮಾಡಿದ ಕಾರ್ಯವೆಂದು ಗೌರವಿಸದೆ ವ್ಯಕ್ತಿ ಮತ್ತು ದುಷ್ಟ ಸ್ವಾರ್ಥಿಗಳು ಮಾಡುವ ವೈಯಕ್ತಿಕ ಪಾಪ ಕಾರ್ಯಗಳು ಎಂದು ಜನ ಈಗ ಭಾವಿಸುತ್ತಾರೆ.

ಮತ್ತೆಯೂ ನೀವು ಹೇಳುತ್ತೀರಿ: "ಕ್ರಾಂತಿಕಾರಿಗಳು ಇವೆಲ್ಲವುಗಳನ್ನು ಆರಂಭಿಸಿದರು; ನಾವಲ್ಲ, ಮತ್ತು ಅವರ ಭೀಕರ ಅಪರಾಧಗಳನ್ನು ಕೇವಲ ದೃಢವಾದ ಕ್ರಮಗಳಿಂದ ಮಾತ್ರ ದಮನ ಮಾಡಲು ಸಾಧ್ಯ" ಎಂದು ಸರಕಾರದ ಪರವಾಗಿ ನಿಮ್ಮ ಅಪರಾಧಗಳನ್ನು ನೀವು ಸಮರ್ಥಿಸಿಕೊಳ್ಳುತ್ತೀರಿ.

ಕ್ರಾಂತಿಕಾರಿಗಳು ಮಾಡಿದ ಅನಾಗರಿಕ ಪಾಶವಿಕತೆಗಳು ಭೀಕರವಾದುವೆಂದು ನೀವು ಹೇಳುತ್ತೀರಿ.

ನಾನು ಅವುಗಳನ್ನು ವಿರೋಧಿಸುವುದಿಲ್ಲ. ಅವರು ಕ್ರೂರವಾಗಿದ್ದುದರ ಜೊತೆಗೆ ಮೂರ್ಖರೂ ಆಗಿದ್ದರು ಎಂದು ನಾನು ಸೇರಿಸುತ್ತೇನೆ. ನಿಮ್ಮ ಕಾರ್ಯಗಳ ಹಾಗೆಯೇ ಅವರ ಕಾರ್ಯಗಳೂ ಕೂಡ ಮಾನವ ಮಟ್ಟವನ್ನು ಬಿಟ್ಟು ಕೆಳಗಿಳಿಯುತ್ತವೆ. ಅವರ ಕಾರ್ಯಗಳು ಎಷ್ಟೇ ಕಠೋರವಾದುವು ಮತ್ತು ಮೂರ್ಖವಾದುವು ಆಗಿದ್ದರೂ, ಆ ಎಲ್ಲಾ ಬಾಂಬುಗಳು, ಸುಲಿಗೆ, ತೆರಿಗೆಗಳು, ರೊಚ್ಚಿಗೆಬ್ಬಿಸುವ ಕೊಲೆಗಳು ಮತ್ತು ಕಳ್ಳತನಗಳು ಈ ಎಲ್ಲಾ ಕಾರ್ಯಗಳು, ನೀವು ಮಾಡಿರುವ ಕಾರ್ಯಗಳ ಅಪರಾಧಾತ್ಮಕತೆ ಹಾಗೂ ಮೂರ್ಖತನಗಳ ಸಮೀಪಕ್ಕೂ ಸುಳಿಯಲಾರವು.

ನೀವು ಮಾಡುತ್ತಿರುವುದನ್ನೇ ಅವರೂ ಅದೇ ಉದ್ದೇಶಕ್ಕಾಗಿಯೇ ಮಾಡುತ್ತಿದ್ದಾರೆ. ಅವರೆಲ್ಲಾ ಇದೇ (ಅದರ ಪರಿಣಾಮಗಳು ಇಷ್ಟು ಭೀಕರವಾಗಿಲ್ಲದಿದ್ದರೆ ತಮಾಷೆ ಎಂದು ಬಿಡುತ್ತಿದ್ದೆ). ಭ್ರಮೆಗೆ ಸಿಕ್ಕಿ ತಮ್ಮ ದೃಷ್ಟಿಯಲ್ಲಿ ಸಮಾಜದ ಸರಿಯಾದ ವ್ಯವಸ್ಥೆಗೆ ಯೋಗ್ಯವೆಂದು ತೋರುವುದನ್ನು ಮತ್ತು ತಮ್ಮ ಅಭಿಪ್ರಾಯದಲ್ಲಿ ಅಪೇಕ್ಷಣೀಯ

ಎಂಬುದನ್ನು ಮಾಡಲು ತಮಗಾಗಿಯೇ ಯೋಜನೆಯೊಂದನ್ನು ರೂಪಿಸಿಕೊಂಡು ಆ ಯೋಜನೆಗೆ ತಕ್ಕಂತೆ ಬೇರೆಯ ಜನರ ಬದುಕನ್ನು ವ್ಯವಸ್ಥೆಗೊಳಿಸುವ ಹಕ್ಕು ಮತ್ತು ಅವಕಾಶಗಳನ್ನು ಪಡೆದುಕೊಳ್ಳುತ್ತಾರೆ. ಭ್ರಮೆ ಮಾತ್ರ ಅದೇ! ಈ ವಿಧಾನಗಳಾದರೋ ಜೀವ ತೆಗೆಯುವುದನ್ನೂ ಒಳಗೊಂಡ ಎಲ್ಲಾ ರೀತಿಯ ಹಿಂಸೆಗಳು! ಅನೇಕರ ಅನುಕೂಲಕ್ಕಾಗಿ ಮಾಡಿದ ಒಂದು ಪಾಪಕಾರ್ಯ ಅನೈತಿಕವಾಗುವುದಿಲ್ಲ ಎನ್ನುವುದು ಒಂದು ನೆಪ ಅಥವಾ ಸೋಗು ಅಷ್ಟೆ. ಈ ನೆಪವನ್ನೇ ಮುಂದುಮಾಡಿಕೊಂಡು ನೈತಿಕ ನಿಯಮಕ್ಕೆ ಬಾಧೆಯಾಗದಂತೆ ಒಬ್ಬನು ಬಹುಜನರಿಗೆ ಒಳ್ಳೆಯ ಸ್ಥಿತಿಯನ್ನು ಉಂಟುಮಾಡಬಲ್ಲನೆಂದೂ ಇದನ್ನು ಎಲ್ಲರಿಗಿಂತ ಮೊದಲೇ ಕಂಡುಕೊಂಡೆನೆಂದೂ ಭ್ರಮಿಸಿ ಅದನ್ನು ಸ್ಥಾಪಿಸಲು ಇಷ್ಟಪಟ್ಟು ಭ್ರಮೆಯಿಂದ ಸುಳ್ಳು ಹೇಳಬಹುದು. ದರೋಡೆಮಾಡಬಹುದು ಮತ್ತು ಕೊಲ್ಲಲೂ ಬಹುದು.

ಸರ್ಕಾರದ ಜನ ನೀವು, ಕ್ರಾಂತಿಕಾರಿಗಳ ಕಾರ್ಯಗಳನ್ನು ಅನಾಗರಿಕ ಪಾಶವಿಕತೆಗಳು ಮತ್ತು ಮಹಾಪರಾಧಗಳು ಎಂದು ಕರೆಯುತ್ತೀರಿ. ಆದರೆ ನೀವು ಮಾಡದೆ ಇರುವುದನ್ನೇನೂ ಅವರು ಮಾಡಿಲ್ಲ. ನೀವು ಮಾತ್ರ ಮಾಡುವುದನ್ನೆಲ್ಲ ಹೋಲಿಸಲಾಗದಷ್ಟು ಹೆಚ್ಚಾಗಿಯೇ ಮಾಡಿದ್ದೀರಿ. ನೀವು ಗೂಢಚಾರರನ್ನಿಡುತ್ತೀರಿ. ಮೋಸವನ್ನಾಚರಿಸುತ್ತೀರಿ ಮತ್ತು ಮುದ್ರಿತ ಮಿಥ್ಯೆಗಳನ್ನು ಹರಡುತ್ತೀರಿ. ಅವರೂ ಹಾಗೆಯೇ ಮಾಡುತ್ತಾರೆ. ಎಲ್ಲಾ ರೀತಿಯ ಹಿಂಸಾವಿಧಾನಗಳಿಂದಲೂ ಜನರ ಆಸ್ತಿಯನ್ನು ನೀವು ಕಿತ್ತುಕೊಳ್ಳುತ್ತೀರಿ ಮತ್ತು ನಿಮಗಿಷ್ಟಬಂದಂತೆ ಅದನ್ನು ಬಳಸುತ್ತೀರಿ. ಅವರೂ ಅದನ್ನೇ ಮಾಡುತ್ತಾರೆ. ನಿಮಗೆ ಅಪಾಯಕಾರಿಗಳೆಂದು ತೋರಿದವರನ್ನು ನೀವು ಗಲ್ಲಿಗೇರಿಸುತ್ತೀರಿ ಅವರೂ ಹಾಗೆಯೇ ಮಾಡುತ್ತಾರೆ.

ಆದ್ದರಿಂದಲೇ ಅವರು ಬಳಸುವಂತಹ ಅನೈತಿಕ ವಿಧಾನಗಳನ್ನೇ ನೀವೂ ನಿಮ್ಮ ಉದ್ದೇಶ ಸಾಧನೆಗಾಗಿ ಬಳಸುವುದರಿಂದ ಖಂಡಿತವಾಗಿ ನೀವು ಕ್ರಾಂತಿಕಾರಿಗಳನ್ನು ದೂಷಿಸಲಾರಿರಿ, ನಿಮ್ಮ ಸಮರ್ಥನೆಗೆ ನೀವು ಬಳಸಿಕೊಳ್ಳಬಲ್ಲುದನ್ನೆಲ್ಲ ಅವರೂ ಅಷ್ಟೇ ಬಲವಾಗಿ ತಮ್ಮ ಸಮರ್ಥನೆಗೂ ಬಳಸಿಕೊಳ್ಳಬಲ್ಲರು. ರಾಷ್ಟ್ರದ ಸಂಪತ್ತನ್ನೆಲ್ಲ ಹಾಳುಮಾಡುವಂಥ ಯುದ್ಧಸಿದ್ಧತೆ ನಡೆಸುವುದು. ಯುದ್ಧಮಾಡುವುದು. ಅನ್ಯರಾಷ್ಟ್ರೀಯತೆಗಳನ್ನು ಶರಣಾಗತವಾಗಿ ಮಾಡಿಕೊಳ್ಳುವುದು ಮತ್ತು ದಮನಮಾಡುವುದು ಇನ್ನೂ ಇಂತಹ – ಅವರು ಮಾಡದಂತಹ – ಆದರೆ ನೀವು ಮಾತ್ರ ಮಾಡುವಂತಹ ಅಧಿಕ ಪಾಪಗಳ ಬಗ್ಗೆ ಹೇಳಬೇಕಾಗಿಯೇ ಇಲ್ಲ.

ಹಿಂದಿನ ಪರಂಪರೆಗಳು ನಿಮ್ಮ ರಕ್ಷಣೆಗೆ ಇವೆಯೆಂದೂ ಮತ್ತು ಹಿಂದಿನ ಮಹಾಪುರುಷರು ಮಾಡಿದ ಕಾರ್ಯಗಳು ನಿಮಗೆ ಉದಾಹರಣೆಗಳಾಗಿವೆ ಎಂದೂ ನೀವು ಹೇಳುತ್ತೀರಿ. ಫ್ರಾನ್ಸಿನ ಮಹಾಕ್ರಾಂತಿಯಾಗುವುದಕ್ಕೆ ಬಹಳ ಮುಂಚಿನಿಂದಲೇ

ಹಿಂದಿನಿಂದ ಬಂದ – ಅವರವೇ ಆದ ಪರಂಪರೆಗಳು ಅವರಿಗೂ ಇವೆ. ಆದರ್ಶವಾಗಬಲ್ಲ ಮಹಾಪುರುಷರ ವಿಷಯಕ್ಕೆ ನೋಡುವುದಾದರೆ ಸತ್ಯ ಮತ್ತು ಸ್ವಾತಂತ್ರ್ಯಗಳಿಗಾಗಿ ಅಸುನೀಗಿದ ಹುತಾತ್ಮರುಗಳು ನಿಮಗಿಂತಲೂ ಹೆಚ್ಚಾಗಿಯೇ ಅವರ ಪಾಲಿಗಿದ್ದಾರೆ.

ಆದುದರಿಂದ ನಿಮಗೂ ಅವರಿಗೂ ಇರುವ ಮುಖ್ಯ ವ್ಯತ್ಯಾಸವೆಂದರೆ ನೀವು ಇರುವುದೆಲ್ಲ ಇರುವಂತೆಯೇ ಇರಲಿ ಮತ್ತು ಮುಂದುವರಿಯಲಿ ಎಂದು ಬಯಸುತ್ತೀರಿ, ಆದರೆ ಅವರು ಬದಲಾವಣೆಯನ್ನು ಬಯಸುತ್ತಾರೆ. ಎಲ್ಲವೂ ಯಾವಾಗಲೂ ಇದ್ದಂತೆ-ಯೇ ಇರಲಾರದೆಂದು ಯೋಚಿಸುವ ವಿಷಯದಲ್ಲಿ ಅವರು ನಿಮಗಿಂತಲೂ ಹೆಚ್ಚು ಸರಿಯಾಗಿರುತ್ತಾರೆ. ಎಲ್ಲಾ ಜನರೂ ಭವಿಷ್ಯತ್ತಿನಲ್ಲಿ ಬದುಕಬೇಕಾದ ರೀತಿ ಹೇಗಿರಬೇಕೆಂಬುದನ್ನು ಒಂದು ಗುಂಪಿನ ಜನ ಮಾತ್ರ ತಿಳಿಯಬಲ್ಲರು ಎನ್ನುವ ಮತ್ತು ಇದನ್ನು ಕೇವಲ ಬಲಪ್ರಯೋಗದಿಂದ ಮಾತ್ರ ಸಾಧಿಸಲು ಸಾಧ್ಯ ಎಂಬ ಅಪಾಯಕಾರೀ ಭ್ರಮೆಯಿಂದ ಕೂಡಿದ ನೀವು ಬಳಸುವ ವಿಚಿತ್ರ ಕ್ರಮಗಳನ್ನು ಅವರೂ ಬಳಸಲಿಲ್ಲವಾದರೆ ಅವರು ನಿಮಗಿಂತ ಹೆಚ್ಚು ಸರಿಯಿರುತ್ತಾರೆ. ಮಿಕ್ಕ ವಿಷಯಗಳಲ್ಲಿ ಅವರು ನೀವು ಬಳಸುವ ವಿಧಾನಗಳನ್ನೇ ಬಳಸಿಕೊಂಡು ನೀವು ಮಾಡಿದ್ದನ್ನೇ ಮಾಡುತ್ತಾರೆ. ನಿಜವಾಗಿ ಅವರೆಲ್ಲಾ ನಿಮ್ಮ ಅನುಯಾಯಿಗಳು. ಅವರು ಗಾದೆ ಮಾತಿರುವಂತೆ, ನೀವು ಬಳಸಿದ ಉಪಾಯಗಳನ್ನೆಲ್ಲ ಕಲಿಹಾಕಿಕೊಳ್ಳುತ್ತಾರೆ. ಅವರು ನಿಮ್ಮ ಅನುಯಾಯಿಗಳು ಮಾತ್ರವಲ್ಲ: ನಿಮ್ಮಿಂದಾದ ಸಿದ್ಧವಸ್ತುಗಳು, ನಿಮ್ಮ ಮಕ್ಕಳು. ನೀವಿಲ್ಲದಿದ್ದರೆ ಅವರೂ ಇಲ್ಲ. ಆದ್ದರಿಂದಲೇ ಅವರನ್ನೆಲ್ಲ ಬಲಪ್ರಯೋಗದಿಂದ ದಮನ ಮಾಡುವಾಗಲೆಲ್ಲಾ ನೀವು ತನ್ನ ಕಡೆಗೇ ತೆರೆದುಕೊಳ್ಳುವ ಬಾಗಿಲಿನ ಮೇಲೆ ತನ್ನೆಲ್ಲಾ ಭಾರವನ್ನು ಹಾಕಿ ಅಮುಕಿ ಒತ್ತುವ ಮನುಷ್ಯನಂತೆ ವರ್ತಿಸುತ್ತೀರಿ.

ನಿಮಗೂ ಅವರಿಗೂ ಯಾವುದಾದರೂ ವ್ಯತ್ಯಾಸವಿದ್ದರೆ ಅದು ನಿಶ್ಚಯವಾಗಿಯೂ ನಿಮಗಿಂತಲೂ ಅವರ ಪರವಾಗಿರುತ್ತದೆ. ಅವರ ಅಪರಾಧಗಳ ಭಾರವನ್ನೆಲ್ಲ ಕಡಿಮೆ ಮಾಡುವ, ಅವರ ಪರವಾಗಿರುವ, ಸಂದರ್ಭಗಳೆಂದರೆ: ಮೊದಲನೆಯದಾಗಿ ಅವರ ಅಪರಾಧಗಳೆಲ್ಲಾ ನಿಮಗಿಂತಲೂ ತೀವ್ರವಾದ ರೀತಿಯಲ್ಲಿ ವೈಯಕ್ತಿಕ ಅಪಾಯಗಳಿಗೆ ಅವರು ಗುರಿಯಾದಾಗ ಮಾಡಿದಂಥವು ಹಾಗೂ ಈ ಅಪಾಯ ಮತ್ತು ಅನಾಹುತಗಳು ಈ ಅಪರಾಧಗಳನ್ನೆಲ್ಲ ಸುಲಭವಾಗಿ ಪ್ರಭಾವಕ್ಕೆ ಗುರಿಯಾಗಬಲ್ಲ ಯುವಕರ ಕಣ್ಣಿನಲ್ಲಿ ಕ್ಷಮ್ಯವಾಗಿ ಮಾಡಿಬಿಡುತ್ತವೆ. ಎರಡನೆಯದಾಗಿ ಇವನ್ನು ಮಾಡುವವರಲ್ಲಿ ಬಹುಸಂಖ್ಯಾತರು ವಿಶೇಷವಾಗಿ ದಾರಿತಪ್ಪುವುದೇ ಸಹಜವಾಗಿರುವ ಸಣ್ಣ ವಯಸ್ಸಿನ ಹುಡುಗರು. ನೀವಾದರೋ ಸ್ಪಷ್ಟವಾಗಿ ಮಾಗಿದ ವಯಸ್ಸುಳ್ಳವರು ಮತ್ತು ಶಾಂತರಾದವರ ಬಗ್ಗೆ ಸಹಜವಾಗಿಯೇ ಸಲಿಗೆಯಿಂದಲೂ ವಿವೇಕದ ಶಾಂತಿಯಿಂದಲೂ ವರ್ತಿಸಬಲ್ಲ ವಯೋವೃದ್ಧರು. ಅವರ ಅಪರಾಧಗಳನ್ನು ಕಡಿಮೆಮಾಡುವ ಮೂರನೆಯ

ಅಂಶವೆಂದರೆ – ಅವರು ಮಾಡುವ ಕೊಲೆಗಳು ಎಷ್ಟೇ ಅಸಹ್ಯವಾಗಿದ್ದರೂ ನೀವು ವ್ಯವಸ್ಥಿತವಾಗಿ ಮಾಡುವ ಷ್ಲೂಸ್ಸೆಲ್ ಬರ್ಗ್‌ಗಳು, ಗಡೀಪಾರುಗಳು, ಗಲ್ಲುಗಂಬಗಳು ಮತ್ತು ಗುಂಡಿಕ್ಕಿ ಸುಡುವುದು ಇಂಥ ಅತ್ಯಂತ ಪಾಶವೀಯವಾದ ಹಾಗೂ ಕ್ರಮಬದ್ಧವಾದ ಕ್ರೌರ್ಯಗಳಿಂದ ಕೂಡಿದುವಲ್ಲ. ನಾಲ್ಕನೆಯ ಅಂಶವೆಂದರೆ ಕ್ರಾಂತಿಕಾರಿಗಳು ಘಂಟಾಘೋಷವಾಗಿಯೇ ಧಾರ್ಮಿಕ ಉಪದೇಶಗಳನ್ನೆಲ್ಲಾ ಅಲ್ಲಗಳೆಯುತ್ತಾರೆ: ಹಾಗೂ ಫಲ ಸಾಧನಗಳನ್ನು ಸಮರ್ಥಿಸುತ್ತದೆಂದು ಭಾವಿಸುತ್ತಾರೆ. ಆದ್ದರಿಂದಲೇ ಬಹುಸಂಖ್ಯಾತರ ಕಾಲ್ಪನಿಕವಾದ ಕ್ಷೇಮ ಸಾಧನೆಗಾಗಿ ಒಬ್ಬನು ಅಥವಾ ಹೆಚ್ಚು ಜನರನ್ನು ಕೊಲ್ಲುವಾಗಲೆಲ್ಲ ಅವರು ಅತ್ಯಂತ ಸುಸಂಬದ್ಧವಾಗಿ ವರ್ತಿಸುತ್ತಾರೆ. ಆದರೆ ಸರ್ಕಾರದ ಜನ – ನೀವಾದರೋ – ಅತ್ಯಂತ ಕೆಳಮಟ್ಟದ ನೇಣುಹಾಕುವವನಿಂದ ಹಿಡಿದು ಉನ್ನತಾಧಿಕಾರಿಯವರೆಗೆ ಎಲ್ಲರೂ ನೀವು ಮಾಡುವ ಕಾರ್ಯಗಳಿಗೆ ಒಂದಿಷ್ಟು ಹೊಂದಿಕೆಯಾಗದ – ಪೂರ್ಣ ಅಸಂಬದ್ಧವಾದ ಧರ್ಮವನ್ನು ಮತ್ತು ಕ್ರೈಸ್ತಮತವನ್ನು ಬೆಂಬಲಿಸುತ್ತೀರಿ.

ಮತ್ತು ಹಿರಿಯರಾದ ನೀವು, ಬೇರೆಯವರಿಗೆ ಮುಖಂಡರಾದವರು ಮತ್ತು ಕ್ರೈಸ್ತಮತವನ್ನು ಉದ್ಘೋಷಿಸುವವರು, ಎಳೆಯ ಮಕ್ಕಳು ಜಗಳವಾಡುವಂತೆ, ಹೇಳುತ್ತೀರಿ: 'ನಾವಲ್ಲ ಇದನ್ನು ಆರಂಭಿಸಿದ್ದು; ಅವರೇ!' ಜನರನ್ನಾಳುವ ಹೊಣೆಯನ್ನು ಆರೋಪಿಸಿಕೊಂಡಿರುವ ನೀವು ಆಡಬಲ್ಲಂಥ ಉತ್ತಮವಾದ ಮಾತು ಇದೊಂದೇ ಎನ್ನಬೇಕು. ಅಲ್ಲಾ, ನೀವು ಇನ್ನೆಂಥ ಜನ? ಬೇರೆಯವರ ಬಗ್ಗೆ ತೀರ್ಪುಕೊಡುವುದನ್ನಷ್ಟೇ ಅಲ್ಲದೆ ದಂಡನೆ ಮಾಡುವುದನ್ನೂ ಹಾಗೆಯೇ ಅನ್ಯರನ್ನು ದೂಷಿಸುವುದನ್ನೂ ಸ್ಪಷ್ಟವಾಗಿ ವಿರೋಧಿಸಿದ ಆ ಮಹಾನುಭಾವನನ್ನು ದೇವರೆಂದು ನೀವು ಕರೆಯುತ್ತೀರಿ. ಎಷ್ಟೇ ಅಪರಾಧಗಳನ್ನು ಮತ್ತೆ ಮತ್ತೆ ಮಾಡಿದರೂ ನಿರಂತರವಾಗಿ ಕ್ಷಮಿಸುವ ಅಗತ್ಯವನ್ನು ದೃಢೀಕರಿಸಿದವನು, ಕೇಡುಕಿಗೆ ಪ್ರತಿಯಾಗಿ ಕೆಡಕು ಮಾಡದೆ ಒಂದು ಕೆನ್ನೆಗೆ ಹೊಡೆದರೆ ಮತ್ತೊಂದು ಕೆನ್ನೆಯನ್ನು ತಿರುಗಿಸಲು ಆಜ್ಞೆಮಾಡಿದವನು, ಕಲ್ಲುಬೀರಿ ಕೊಲ್ಲುವ ಶಿಕ್ಷೆಗೆ ಗುರಿಯಾಗಿದ್ದ ಹೆಂಗಸಿನ ಶಿಕ್ಷೆಯ ಸಂದರ್ಭದಲ್ಲಿ ಮನುಷ್ಯ ಮನುಷ್ಯರಲ್ಲಿ ದಂಡಿಸುವ ಹಾಗೂ ತೀರ್ಪುಕೊಡುವ ಕಾರ್ಯದ ಅಸಾಧ್ಯತೆಯನ್ನು ಅಷ್ಟೊಂದು ಸರಳವಾಗಿಯೂ ಮತ್ತು ಸ್ಪಷ್ಟವಾಗಿಯೂ ನಿರೂಪಿಸಿದವನು. ಇಂಥವನನ್ನು ದೇವರು ಎಂದು ಕರೆಯುವ ನೀವು ಮಾಡುವ ಕಾರ್ಯ ಎಂಥದ್ದು? ಆ ಬೋಧಕನನ್ನು ದೇವರೆಂದು ಒಪ್ಪಿಕೊಂಡ ನೀವು ನಿಮ್ಮ ರಕ್ಷಣೆ ಮಾಡಿಕೊಳ್ಳುವ ಸಲುವಾಗಿ 'ಅವರು ಇದನ್ನು ಆರಂಭಿಸಿದರು! ಅವರು ಜನರನ್ನು ಕೊಲ್ಲುತ್ತಾರೆ, ಆದ್ದರಿಂದ ನಾವೂ ಅವರನ್ನು ಕೊಲ್ಲೋಣ' ಎಂದು ಹೇಳಿಕೊಳ್ಳುವುದಕ್ಕಿಂತ ಹೆಚ್ಚು ಉತ್ತಮವಾದುದನ್ನು ಮಾಡಲಾರಿರಿ.

ನನ್ನ ಪರಿಚಯದ ಕಲಾವಿದನೊಬ್ಬ, ಗಲ್ಲಿಗೇರಿಸುವ ಚಿತ್ರವೊಂದನ್ನು ಬರೆಯಲು ಯೋಚಿಸಿದ, ಮತ್ತು ಅವನಿಗೆ ನೇಣುಹಾಕುವವನಿಗೆ ರೂಪದರ್ಶಿಯಾಗುವವನೊಬ್ಬ

ಬೇಕಾಯಿತು. ಮಾಸ್ಕೋದಲ್ಲಿ ಆಗ ಕಾವಲುಗಾರನೊಬ್ಬ ಗಲ್ಲಿಗೇರಿಸುವವನ ಕರ್ತವ್ಯ ವನ್ನು ಮಾಡುತ್ತಾನೆಂದು ಕೇಳಿದ್ದ. ಆದ್ದರಿಂದ ಆವನು ಕಾವಲುಗಾರನ ಮನೆಗೆ ಹೋದ. ಅದು (ಪವಿತ್ರವಾದ) ಈಸ್ಟರ್‌ಕಾಲ ಕುಟುಂಬದವರೆಲ್ಲ ತಮ್ಮ ಅತ್ಯುತ್ತಮವಾದ ಬಟ್ಟೆಗಳನ್ನು ಧರಿಸಿ ಟೀ – ಟೇಬಲ್ಲಿನ ಸುತ್ತ ಕುಳಿತಿದ್ದರು. ಆದರೆ ಮನೆಯ ಯಜಮಾನ ಅಲ್ಲಿರಲಿಲ್ಲ. ಅಪರಿಚಿತನೊಬ್ಬನ ಮುಖವನ್ನು ಕಾಣುತ್ತಲೇ ಆತ ಬಚ್ಚಿಟ್ಟುಕೊಂಡ ನೆಂದು ಅನಂತರ ತಿಳಿದುಬಂದಿತು. ಅವನ ಹೆಂಡತಿ ಕೂಡ ಈ ಬಗ್ಗೆ ನಾಚಿಕೆ ಪಟ್ಟು ಕೊಂಡಿದ್ದಂತೆ ತೋರಿತು. ಮತ್ತು ಅವಳು ತನ್ನ ಗಂಡ ಮನೆಯಲ್ಲಿಲ್ಲವೆಂದು ಹೇಳಿದಳು. ಆದರೆ ಚಿಕ್ಕಮಗುವೊಂದು, 'ಅಪ್ಪ. ಅಟ್ಟದ ಮೇಲಿದ್ದಾನೆ' ಎಂದು ಹೇಳುತ್ತ ಈ ಸುಳ್ಳನ್ನೆಲ್ಲ ಬಯಲು ಮಾಡಿಬಿಟ್ಟಿತು. ತನ್ನ ತಂದೆ ತಾನು ಮಾಡುತ್ತಿರುವ ಅಪರಾಧದ ಅರಿವುಳ್ಳವ ನಾಗಿದ್ದಾನೆಂಬುದೂ ಮತ್ತು ಅದಕ್ಕಾಗಿಯೇ ಆತ ಇತರರ ಮುಖ ನೋಡಲು ಹೆದರು ತ್ತಿದ್ದನೆಂಬುದೂ ಆ ಹೆಣ್ಣುಮಗುವಿಗೆ ಗೊತ್ತಿರಲಿಲ್ಲ. ಕಲಾವಿದ ಮನೆಯ ಯಜಮಾನನ ಹೆಂಡತಿಗೆ ತಾನು ಬರೆಯಲು ಯೋಜಿಸಿರುವ ಚಿತ್ರಕ್ಕೆ (ಯಾವ ಚಿತ್ರವನ್ನು ಬರೆಯು ತ್ತಾನೆಂಬುದನ್ನೇನೋ ಹೇಳಲಿಲ್ಲ. ನಿಜ). ಅವಳ ಗಂಡನ ಮುಖ ಯೋಗ್ಯವಾಗಿ ಕಾಣುವುದರಿಂದ ಅವನನ್ನು ರೂಪದರ್ಶಿಯಾಗಿ ಬಳಸಿಕೊಳ್ಳಬೇಕಾಗಿದೆಯೆಂದು ವಿವರಿಸಿದ. ಅವಳ ಜೊತೆಯಲ್ಲಿ ಸಂಭಾಷಣೆಗಿಳಿದ ಕಲಾವಿದ ಅವಳ ಮನಸ್ಸನ್ನು ಒಲಿಸಿಕೊಳ್ಳುವುದಕ್ಕಾಗಿ ಅವಳ ಚಿಕ್ಕ ಹುಡುಗನನ್ನು ತನ್ನ ಶಿಷ್ಯನಾಗಿ ಸ್ವೀಕರಿಸುವುದಾಗಿ ಹೇಳಿದ್ದು ನಿಜವಾಗಿ ಅವಳನ್ನು ಪ್ರಲೋಭನೆಗೆ ಗುರಿಮಾಡಿತು. ಅವಳು ಮನೆಯಿಂದ ಹೊರಬಿದ್ದಳು. ಸ್ವಲ್ಪಹೊತ್ತಾದ ಮೇಲೆ ಮುಂಕಾದ, ಗಾಬರಿಗೊಂಡ ಮತ್ತು ಶಂಕೆಯ ದೃಷ್ಟಿಯಿಂದ ಕೂಡಿದ ಗಂಡ ಒಳಕ್ಕೆ ಬಂದ. ಅವನು ಕಲಾವಿದ ತನ್ನನ್ನೇ ಏಕೆ ಬಯಸಿದನೆಂಬುದನ್ನು ತಿಳಿದುಕೊಳ್ಳಲು ಬಹಳ ಹೊತ್ತಿನವರೆಗೆ ಪ್ರಯತ್ನಿಸಿದ. ಆತನನ್ನು ದಾರಿಯಲ್ಲೊಮ್ಮೆ ಸಂಧಿಸಿದುದಾಗಿಯೂ ಮತ್ತು ಅವನ ಮುಖ ತಾನು ಬರೆಯಲಿರುವ ಚಿತ್ರಕ್ಕೆ ಸೂಕ್ತವಾಗಿ ತೋರಿದುದಾಗಿಯೂ ಕಲಾವಿದ ಹೇಳಿದ. ಎಲ್ಲಿ? ಯಾವ ಹೊತ್ತಿನಲ್ಲಿ ಮತ್ತು ಯಾವ ವಸ್ತ್ರಗಳಲ್ಲಿ ತನ್ನನ್ನು ಸಂಧಿಸಿದ್ದೆಂದು ಕಾವಲುಗಾರ ಕೇಳಿದ. ಅವನಂತೂ ಯಾವ ಒಪ್ಪಂದಕ್ಕೂ ಸಿದ್ಧನಾಗಿರಲಿಲ್ಲ. ನಿಜವಾಗಿಯೂ ಆತ ಹೆದರಿದ್ದ. ಹಾಗೆಯೇ ಏನೋ ಕೆಟ್ಟದ್ದು ಆಗಲಿದೆಯೆಂದು ಶಂಕಿಸಿದ್ದ.

ಹೌದು. ಈತನಿಗೆ ತಾನು ಗಲ್ಲಿಗೇರಿಸುವವನೆಂಬುದು ಚೆನ್ನಾಗಿ ಗೊತ್ತಿದೆ; ತಾನು ಕೆಟ್ಟದ್ದನ್ನು ಮಾಡುತ್ತಿರುವುದೂ ಗೊತ್ತಿದೆ. ಅದಕ್ಕಾಗಿಯೇ ದ್ವೇಷಿಸಲ್ಪಡುತ್ತಿರುವುದೂ ಗೊತ್ತಿದೆ. ಆದ್ದರಿಂದಲೇ ಅವನು ಜನರನ್ನು ಕಂಡರೆ ಹೆದರುವುದು. ಈ ಬಗೆಯಾದ ಪ್ರಜ್ಞೆ ಹಾಗೂ ಜನರಿಗೆ ಹೆದರುವ ಈ ಮನೋಭಾವ ಅವರು ಮಾಡುವ ಅಪರಾಧದ ಒಂದಂಶವನ್ನು ಶುದ್ಧಗೊಳಿಸುತ್ತ

ವೆಂದು ನಾನಂತೂ ನಂಬಿದ್ದೇನೆ. ಆದರೆ ನ್ಯಾಯಾಲಯದ ಕಾರ್ಯದರ್ಶಿಯಿಂದ
ಹಿಡಿದು ಪ್ರಧಾನಿ ಮತ್ತು ಜಾರರವರೆಗೆ ದಿನದಿನವೂ ಘಟಿಸುವ ಅಸಮಾನತೆಗಳಲ್ಲಿ
ಪರೋಕ್ಷವಾಗಿ ಭಾಗಿಗಳಾದ ನೀವು ಯಾರೊಬ್ಬರೂ ಈ ಭೀಕರತೆಗಳಲ್ಲಿ ಪಾಲ್ಗೊಂಡು
ದಕ್ಕೆ ನಿಮ್ಮಲ್ಲಿ ಉಂಟಾಗಬೇಕಿದ್ದ ಪಾಪ ಮತ್ತು ಲಜ್ಜೆಗೇಡಿತನಗಳ ಬಗ್ಗೆ ನೊಂದು
ಕೊಂಡಂತೆ ತೋರುವುದಿಲ್ಲ. ನೀವೂ ಆ ಗಲ್ಲಿಗೇರಿಸುವವನಂತೆಯೇ ಜನರಿಗೆ
ಹೆದರುತ್ತೀರೆಂಬುದು ನಿಜ: ಆ ಅಪರಾಧಗಳಲ್ಲಿ ನಿಮ್ಮ ಹೊಣೆ ಹೆಚ್ಚಾದಷ್ಟೂ
ಭಯವೂ ಹೆಚ್ಚುತ್ತದೆಂಬುದೂ ನಿಜ: ಪಬ್ಲಿಕ್ ಪ್ರಾಸಿಕ್ಯೂಟರ್ ಕಾರ್ಯದರ್ಶಿಗಿಂತ
ಹೆಚ್ಚು ಹೆದರಿಕೊಳ್ಳುತ್ತಾನೆ: ನ್ಯಾಯಾಲಯದ ಅಧ್ಯಕ್ಷ ಪಬ್ಲಿಕ್ ಪ್ರಾಸಿಕ್ಯೂಟರನಿಗಿಂತ
ಹೆಚ್ಚಾಗಿ: ಜನರಲ್ ಗೌರ್ನರ್ ಅಧ್ಯಕ್ಷನಿಗಿಂತ ಹೆಚ್ಚಾಗಿ: ಮಂತ್ರಿಮಂಡಲದ ಅಧ್ಯಕ್ಷ
ಇನ್ನಷ್ಟು ಹೆಚ್ಚಾಗಿ: ಜಾರ್ ಮತ್ತೆಲ್ಲರಿಗಿಂತಲೂ ಹೆಚ್ಚಾಗಿ – ನೀವೆಲ್ಲರೂ ಹೆದರಿ
ಬಿಟ್ಟಿದ್ದೀರಿ. ಆದರೆ ಗಲ್ಲಿಗೇರಿಸುವವನಂತೆ ಕೆಟ್ಟದ್ದನ್ನು ಮಾಡುತ್ತಿದ್ದೇವೆಂದು ನೀವು
ಹೆದರಿಕೊಂಡಿಲ್ಲ: ಆದರೆ ಬೇರೆಯವರು ಕೆಡುಕನ್ನು ಮಾಡುತ್ತಾರೆಂದು ನೀವು
ಯೋಚಿಸುತ್ತೀರಿ.

ಆದ್ದರಿಂದಲೇ ಆ ದುರದೃಷ್ಟಶಾಲಿ ಕಾವಲುಗಾರ ಕೆಳಗೆ ಬಿದ್ದಿದ್ದರೂ, ಉತ್ತಮ
ನಾದವನೆಂದು ನಾನು ಭಾವಿಸುತ್ತೇನೆ: ಈ ಭಯಾನಕ ಅಪರಾಧಗಳ ಭಾಗಶಃ
ಕರ್ತೃಗಳೂ ಹಾಗೂ ಭಾಗಿಗಳೂ ಆಗಿರುವ ನಿಮಗಿಂತಲೂ ಅವನು ನೈತಿಕವಾಗಿ
ಬೆಲೆಗಟ್ಟಲಾರದಷ್ಟು ಉತ್ತಮನಾದವನೆಂದು ನಾನು ಭಾವಿಸುತ್ತೇನೆ: ನೀವುಗಳಾದರೋ
ನಿಮ್ಮನ್ನೇ ದೂಷಿಸಿಕೊಳ್ಳುವ ಬದಲು ಅನ್ಯರನ್ನು ದೂಷಿಸುತ್ತೀರಿ: ಮತ್ತೆ ತಲೆಯನ್ನು
ಮೇಲಕ್ಕೆತ್ತಿ ಬೀಗಿ ನಡೆಯುತ್ತೀರಿ.

ನನಗೆ ಗೊತ್ತಿದೆ – ಮನುಷ್ಯರು ಮನುಷ್ಯರೇ; ನಾವೆಲ್ಲ ದುರ್ಬಲರು: ನಾವೆಲ್ಲರೂ
ತಪ್ಪು ಮಾಡುತ್ತೇವೆ. ಆದ್ದರಿಂದಲೆ ಒಬ್ಬ ಮತ್ತೊಬ್ಬನ ಬಗ್ಗೆ ತೀರ್ಪುಕೊಡಲಾರ.
ಈ ಭೀಕರ ಅಪರಾಧಗಳಿಗೆ ಹೊಣೆಗಾರರಾದವರು ನನ್ನಲ್ಲಿ ಕೆರಳಿಸಿದ್ದ ಹಾಗೂ
ಕೆರಳಿಸುತ್ತಿರುವ ಈ ಭಾವನೆಗಳ ವಿರುದ್ಧ ಬಹು ಕಾಲದಿಂದಲೂ ನಾನು ಹೋರಾಡು
ತ್ತಿದ್ದೇನೆ. ಅವರು ಸಮಾಜದ ಶ್ರೇಣಿಯಲ್ಲಿ ಎಷ್ಟು ಮೇಲಿದ್ದರೆ ಅಷ್ಟಷ್ಟು ಹೆಚ್ಚಾಗಿ
ನನ್ನಲ್ಲಿ ಈ ಭಾವನೆ ಚೋದಿತವಾಗುತ್ತದೆ. ಆದರೆ ಇನ್ನುಮೇಲೆ ನಾನು ಇಂಥ
ಭಾವನೆಗಳ ವಿರುದ್ಧ ಹೋರಾಡುವುದಿಲ್ಲ ಮತ್ತು ಹೋರಾಡಲಾರೆ.

ನಾನು ಹಾಗೆ ಮಾಡಲಾರೆ ಮತ್ತು ಖಂಡಿತ ಮಾಡುವುದಿಲ್ಲ. ಏಕೆಂದರೆ
ಪ್ರಥಮವಾಗಿ ತಮಗಾಗಲಿ ಅಥವಾ ಜನತೆಗಾಗಲಿ ಅವಶ್ಯವೆಂದು ತಾವು ಮಾಡುವ
ಕಾರ್ಯಗಳ ಪೂರ್ಣ ಅಪರಾಧಾತ್ಮಕತೆಯನ್ನು ಅರಿಯಲಾರದವರು ಈ ಜನರಿಗೆ
ದೊರಕುವ ಬಹಿರಂಗವಾದ ಗೌರವ ಮತ್ತು ಸ್ತುತಿಗಳಿಂದ ಭ್ರಮಿತರಾಗಿ ಅವರ ಭೀಕರ

ಕಾರ್ಯಗಳನ್ನು ಒಪ್ಪಿಕೊಂಡುಬಿಡುವುದೇ ಅಲ್ಲದೆ ಅವನ್ನು ಅನುಕರಣೆಮಾಡಲೂ ಇಚ್ಛಿಸುತ್ತಾರೆ. ಮತ್ತು ಪರಡನೆಯದಾಗಿ (ಧೈರ್ಯವಾಗಿ ನಾನಿದನ್ನು ಒಪ್ಪಿಕೊಳ್ಳುತ್ತೇನೆ.) ಈ ಜನರ ವರ್ತನೆಗಳನ್ನು ಬಯಲುಮಾಡುವ ಕಾರ್ಯ ಒಂದಲ್ಲ ಒಂದು ರೀತಿಯಲ್ಲಿ ನಾನು ವಾಸಮಾಡುತ್ತಿರುವ ಜನರ ಗುಂಪಿನಿಂದ ಇವರನ್ನು ಹೊರದೂಡಲು ಪ್ರಚೋದಿಸುತ್ತದೆ. ಮತ್ತು ನನ್ನ ಸುತ್ತ ನಡೆಯುತ್ತಿರುವ ಅಪರಾಧಗಳಲ್ಲಿ ನಾನು ಕೂಡ ಭಾಗಿಯಾಗಿದ್ದೇನೆಂಬುದನ್ನು ಭಾವಿಸದೆ ನಾನಂತೂ ಇರಲಾರೆ.

ಈಗ ರಷ್ಯದಲ್ಲಿ ಮಾಡಲ್ಪಡುತ್ತಿರುವುದೆಲ್ಲ ಎಲ್ಲರ ಕ್ಷೇಮದ ಹೆಸರಿನಲ್ಲಿ ಮತ್ತು ರಷ್ಯದ ಜನರ ಶಾಂತಿ ಹಾಗೂ ರಕ್ಷಣೆಯ ಹೆಸರಿನಲ್ಲಿ ನಡೆಯುತ್ತಿದೆ. ಮತ್ತು ಇದು ಹೀಗೇ ಇರಬೇಕಾದರೆ ರಷ್ಯದಲ್ಲಿರುವ ನನಗೂ ಹೀಗೆಯೇ ಆಗಲಿ. ತಾನು ಜನ್ಮಪಡೆದ ಭೂಮಿಯನ್ನು ಬಳಸಿಕೊಳ್ಳುವ ಮಾನವನ ಪ್ರಪ್ರಥಮವಾದ ಹಾಗೂ ಸ್ವಾಭಾವಿಕವಾದ ಹಕ್ಕಿನಿಂದ ವಂಚಿತರಾದ ಜನರ ಆ ದಟ್ಟದಾರಿದ್ರ್ಯ ನನಗೂ ಇರಲಿ: ಆ ಐದುಲಕ್ಷ ಜನರೂ ಪೂರ್ಣ ಬೇಸಾಯದ ಬದುಕಿನಿಂದ ಕತ್ತರಿಸಿಹೋಗುವುದು ಮತ್ತು ಸಮವಸ್ತ್ರಗಳನ್ನು ಧರಿಸಿ ಕೊಲ್ಲುವುದನ್ನು ಕಲಿಯುವುದು. ನನಗೂ ಇರಲಿ. ಸ್ವಜವಾದ ಕ್ರೈಸ್ತಧರ್ಮವನ್ನೇ ಮರೆಮಾಚಿ ಅಡ್ಡದಾರಿಗೆಳೆಯುವುದೇ ಕರ್ತವ್ಯವಾಗಿರುವ ಈ ಮಿಥ್ಯೆಯ ಈ ಪಾದ್ರಿತನ, ಸ್ಥಳದಿಂದ ಸ್ಥಳಕ್ಕೆ ಜನರನ್ನು ಸ್ಥಳಾಂತರಮಾಡುವ ಗಡೀಪಾರು ಶಿಕ್ಷೆಗಳು, ಈ ನೂರಾರು ಸಾವಿರಾರು ಜನ ಹಸಿದ ಅಲೆಮಾರಿ ಕೂಲಿಕಾರರು. ಜಾಗವಿಲ್ಲದಂತೆ ದುರ್ಗಗಳಲ್ಲಿ ಮತ್ತು ಸೆರೆಮನೆಗಳಲ್ಲಿ ತುರುಕಲ್ಪಟ್ಟು ಉದ್ರಿಕ್ತ ಜ್ವರ ಹಾಗೂ ಸ್ಕರ್ವಿ ರೋಗಗಳಿಂದ ಸಾಯುತ್ತಿರುವ ನೂರಾರು ಸಾವಿರ ದುರ್ದೈವಿಗಳು, ದೇಶಭ್ರಷ್ಟರಾದವರ ತಾಯಂದಿರು, ಹೆಂಡಿರು ಮತ್ತು ತಂದೆಗಳು. ಈ ಗೂಢಚಾರರು ಮತ್ತು ಈ ಲಂಚ, ಗುಂಡಿಟ್ಟು ಕೊಲ್ಲಲಾದ ಹತ್ತಾರು ನೂರಾರು ಜನರನ್ನು ಹೂತ ಜಾಗಗಳು. ಈ ಗಲ್ಲಿಗೇರಿಸುವವರ ಭೀಕರ ಕೃತ್ಯಗಳು ಇವು ನನ್ನ ಪಾಲಿಗೂ ಇರಲಿ: ಮೊದಮೊದಲಿಲ್ಲ ಯಾತನೆಪಟ್ಟು ಇವನ್ನೆಲ್ಲ ಪಟ್ಟಿಮಾಡುತ್ತಿದ್ದರು: ಈಗ ಯಾರೂ ಅವುಗಳ ಬಗ್ಗೆ ಅಸಹ್ಯ ಪಟ್ಟುಕೊಳ್ಳುವುದಿಲ್ಲ. ಹೆಂಗಸರು ಮಕ್ಕಳು ಮತ್ತು ರೈತರನ್ನು ಗಲ್ಲಿಗೇರಿಸುವ, ಸಾಬೂನು ಬಳಿದ ಹಗ್ಗದ ಕುಣಿಕೆಗಳಿಂದ ಕೂಡಿದ ಗಲ್ಲುಗಂಬಗಳು ಈಗಲೂ ಕಾಣಿಸುತ್ತಿವೆ: ಮನುಷ್ಯ ಮನುಷ್ಯನ ಮೇಲೆ ಕಾರುವ ಭೀಕರ ಕಹಿ ನನ್ನ ಪಾಲಿಗೂ ಇದೆ.

ಇದೆಲ್ಲವನ್ನೂ ನನಗಾಗಿಯೇ ಮಾಡಲಾಯಿತು ಎಂದು ಹೇಳುವುದು ವಿಚಿತ್ರವಾಗಿ ತೋರಬಹುದು: ಮತ್ತು ಈ ಭೀಕರ ಕಾರ್ಯಗಳಲ್ಲಿ ನಾನು ಸಹಭಾಗಿಯಾಗಿರುವುದೂ ವಿಚಿತ್ರವಾಗಿಯೇ ತೋರಬಹುದು. ಆದರೆ ನನ್ನ ಸುವಿಶಾಲವಾದ ಕೋಣೆ, ಭೋಜನ, ಉಡುಪುಗಳು, ವಿರಾಮ ಮತ್ತು ನನ್ನಲ್ಲಿರುವುದನ್ನು ಕಿತ್ತುಕೊಳ್ಳುವುದರಿಂದ ನನ್ನನ್ನು ಉಳಿಸಲು ಮಾಡುವ ಭೀಕರ ಅಪರಾಧಗಳು ಇವುಗಳೊಳಗೆ ನಿಸ್ಸಂದಿಗ್ಧವಾದ ಪರಸ್ಪರಾ

ವಲಂಬಿಸಿಯಿದೆ ಎಂಬುದನ್ನು ನಾನು ಬಲ್ಲೆ. ವಸತಿಗಳಿಲ್ಲದೆ ಕಟಿಗೊಂಡಿರುವ ಈ ಭ್ರಷ್ಟಜನ – ಯಾರು ಸರ್ಕಾರದ ಭಯವೊಂದಿಲ್ಲದಿದ್ದರೆ ನಾನು ಬಳಸುವುದನ್ನೆಲ್ಲ ಕಿತ್ತುಕೊಳ್ಳಬಲ್ಲವರು – ಅದೇ ಸರ್ಕಾರದ ಕ್ರಿಯೆಗಳ ಸಿದ್ಧವಸ್ತುಗಳು ಎಂಬುದನ್ನೂ ನಾನು ತಿಳಿದಿದ್ದೇನೆ. ಈಗಿನ ನನ್ನ ಶಾಂತಿಯೆಲ್ಲ ಈ ಸರ್ಕಾರ ಮಾಡುವ ಎಲ್ಲ ಹಿಂಸೆ ಭೀಕರತೆಗಳನ್ನು ಅವಲಂಬಿಸಿದೆ ಎಂಬುದನ್ನು ತೆಪ್ಪಗೆ ಅನುಭವಿಸುತ್ತಿದ್ದೇನೆ.

ತಿಳಿದೂ ತಿಳಿದೂ ನಾನಿನ್ನು ಇದನ್ನು ಸಹಿಸಲಾರೆ: ಈ ಅಸಹನೀಯ ಸ್ಥಾನದಿಂದ ನನ್ನನ್ನು ನಾನು ಮುಕ್ತಗೊಳಿಸಿಕೊಳ್ಳಲೇಬೇಕು.

ಹಾಗೆ ಬದುಕುವುದು ಇನ್ನು ಸಾಧ್ಯವಿಲ್ಲವಾಗಿದೆ! ಹೇಗಾದರೂ ಆಗಲಿ ನಾನು ಹಾಗೆ ಬದುಕಲಾರೆ; ಹೌದು. ಹಾಗೆ ಬದುಕುವುದಿಲ್ಲ.

ಅದಕ್ಕಾಗಿಯೇ ನಾನಿದನ್ನು ಬರೆಯುತ್ತೇನೆ ಮತ್ತು ನನ್ನ ಸಾಮರ್ಥ್ಯದೊಳಗಿರುವ ಎಲ್ಲಾ ಸಾಧನಗಳ ಮೂಲಕವೂ ರಷ್ಯದ ಒಳಗೂ ಮತ್ತು ಹೊರಗೂ ಇದನ್ನು ಪ್ರಚಾರ ಮಾಡುತ್ತೇನೆ: ಇದರಿಂದ ಈ ಎರಡರೊಳಗೆ ಒಂದು ಆಗಬಹುದು: ಒಂದು ಪಕ್ಷ ಈ ಅಮಾನುಷ ಕಾರ್ಯಗಳು ನಿಲ್ಲಿಸಲ್ಪಡಬಹುದು: ಅಥವಾ ಅವರೊಂದಿಗಿರುವ ನನ್ನ ಬಾಂಧವ್ಯ ಕತ್ತರಿಸಿಹೋಗಬಹುದು ಮತ್ತು ನನ್ನನ್ನು ಸೆರೆಮನೆಗೆ ಹಾಕಬಹುದು; ಇದರಿಂದ ನಾನಂತೂ ಈ ಭೀಕರ ಅಪರಾಧಗಳು ನನಗಾಗಿ ಮಾಡಲ್ಪಟ್ಟಿಲ್ಲ ಎಂದು ಕೊಂಡು ಬಹು ಸ್ಪಷ್ಟವಾಗಿ ಇರಬಹುದು. ಅಥವಾ ಇದಕ್ಕಿಂತಲೂ ಉತ್ತಮವಾದು ದೆಂದರೆ (ಇದೆಷ್ಟು ಶುಭಕರವೆಂದರೆ ಅಂಥ ಸುಖದ ಕನಸನ್ನೂ ಕೊನೆಗೆ ನಾನು ಕಾಣಲಾರೆ, ಆ ಹನ್ನೆರಡು ಅಥವಾ ಇಪ್ಪತ್ತು ಮಂದಿ ರೈತರಿಗೆ ಕುಣಿಕೆ ಮತ್ತು ಮೋರೆ ಮುಸುಕುಗಳನ್ನು ಹಾಕಿದಂತೆಯೇ ನನಗೂ ಹಾಕಿ ನನ್ನ ಮುದಿಕತ್ತಿನ ಸುತ್ತ ಸಾಬೂನು ಬಳಿದು ಗಟ್ಟಿಯಾಗಿರುವ ಕುಣಿಕೆ ನನ್ನ ಭಾರದಿಂದಲೇ ಬಿಗಿಗೊಳ್ಳುವಂತೆ ನಾನು ನಿಂತ ಬೆಂಚಿನಿಂದತ್ತ ನನ್ನನ್ನು ತಳ್ಳಿಬಿಡಬಹುದು.

ಈ ಎರಡು ಉದ್ದೇಶಗಳಲ್ಲೊಂದನ್ನು ಸಾಧಿಸಿಕೊಳ್ಳುವುದಕ್ಕಾಗಿಯೇ ಈ ಭೀಕರ ಕೃತ್ಯಗಳಲ್ಲಿ ಭಾಗವಹಿಸುವವರೆಲ್ಲರನ್ನೂ ಸೆರೆಮನೆಯ ಪಹರೆಯವನಿಂದ ಹಿಡಿದು ನಿಮ್ಮ ವರೆಗೆ – ನಿಮ್ಮ ಸಹೋದರರು. ಹೆಂಡಿರು ಮತ್ತು ಮಕ್ಕಳ ಕತ್ತುಗಳ ಸುತ್ತ ಮೋರೆ ಮುಸುಕು ಮತ್ತು ಕುಣಿಕೆಗಳನ್ನು ಹಾಕಿ ಈ ಭೀಕರ ಕೃತ್ಯಗಳನ್ನು ಅಧಿಕಾರಯುತ ಗೊಳಿಸುವ ಪ್ರಮುಖ ವ್ಯವಸ್ಥಾಪಕರನ್ನೂ ಉದ್ದೇಶಿಸಿ ನಾನು ಹೇಳುತ್ತೇನೆ.

ಸಹೋದರರೇ. ನಿಮ್ಮ ಇಂದ್ರಿಯಗಳ ಮೇಲೆ ಹತೋಟಿ ತಂದುಕೊಳ್ಳಿ. ನಿಲ್ಲಿ. ನೀವೇನು ಮಾಡುತ್ತಿದ್ದೀರೆಂದು ಸ್ವಲ್ಪ ಯೋಚಿಸಿ! ನೀವು ಯಾರೆಂಬುದನ್ನು ನೆನಪು ಮಾಡಿಕೊಳ್ಳಿ.

ನೇಣುಹಾಕುವವರು, ಸೈನ್ಯಾಧಿಕಾರಿಗಳು, ಪಬ್ಲಿಕ್ ಪ್ರಾಸಿಕ್ಯೂಟರುಗಳು ನ್ಯಾಯಾಧೀಶರು, ಪ್ರಧಾನಿಗಳು ಅಥವಾ ಜಾರರು ಆಗುವುದಕ್ಕೆ ಮೊದಲು ನೀವು ಮನುಷ್ಯರಾಗಿರಲಿಲ್ಲವೇನು? ನಾಳೆ ನೀವಿಲ್ಲವಾಗಬಹುದು; ಆದರೆ ಇಂದು ನೀವು ಮನಸ್ಸು ಮಾಡಿದರೆ ದೇವರ ರಾಜ್ಯದೊಳಕ್ಕೆ ಇಣುಕಿ ನೋಡಬಲ್ಲಿರಿ. (ಎಲ್ಲಮಟ್ಟಗಳಲ್ಲಿಯೂ ಇರುವ ನೇಣುಹಾಕುವವರು, ನೀವು, ವಿಶೇಷ ರೀತಿಯ ದ್ವೇಷವನ್ನು ಉದ್ರೇಕಿಸಿದ ಮತ್ತು ಇನ್ನೂ ಉದ್ರೇಕಿಸುತ್ತಿರುವ, ನೀವು, ಇದನ್ನು ವಿಶೇಷವಾಗಿ ನೆನಪಿಡಲೇ ಬೇಕು) ದೇವರ ರಾಜ್ಯದ ಕಾಂತಿ ರೇಖೆಯನ್ನು ಕಂಡಿರುವ ನೀವು (ನೀವಿನ್ನೂ ಕೊಲೆಯಾಗದೆ ಇದ್ದರೂ, ಸಾವು ಮಾತ್ರ ನಮ್ಮ ಬೆನ್ನ ಹಿಂದೆಯೇ ಇರುತ್ತದೆ) ನಿಮ್ಮ ಬದುಕಿನ ಸ್ಪಷ್ಟವಾದ ಘಳಿಗೆಗಳಲ್ಲಿ ಜನರನ್ನು ಕೊಲ್ಲುವುದು ಮತ್ತು ಚಿತ್ರಹಿಂಸೆಗೆ ಗುರಿಮಾಡುವುದೇ ನಿಮ್ಮ ಜೀವನದ ಉದ್ಯೋಗವಲ್ಲ ಎಂದು ನೀವು ತಿಳಿದುಕೊಳ್ಳಲಾರಿರೇನು? ನಿಮಗೆ ನೀವೇ ಕೊಲೆಯಾಗಿ ಹೋಗುವ ಭಯದಿಂದ ಗಡಗಡ ನಡಗುತ್ತಿದ್ದೀರಿ; ಅನ್ಯರಿಗೆ ಸುಳ್ಳು ಹೇಳುತ್ತಿದ್ದೀರಿ: ನಿಮಗೆ ನೀವೇ ಸುಳ್ಳು ಹೇಳಿಕೊಳ್ಳುತ್ತಿದ್ದೀರಿ; ದೇವರಿಗೂ ಸುಳ್ಳು ಹೇಳುತ್ತಿದ್ದೀರಿ. ಇಷ್ಟಾದರೂ ಕೋಟ್ಯಾಂತರ ಜನರ ಕ್ಷೇಮಕ್ಕಾಗಿ ಮುಖ್ಯವಾದ ಹಾಗೂ ಮಹತ್ತಾದ ಕಾರ್ಯವೊಂದನ್ನು ಮಾಡುತ್ತಿರುವುದಾಗಿ ಅನ್ಯರಿಗೆ ಭರವಸೆ ಕೊಡುತ್ತಿದ್ದೀರಿ; ನಿಮಗೆ ನೀವೇ ಭರವಸೆಗೊಳ್ಳುತ್ತಿದ್ದೀರಿ; ಸುತ್ತಮುತ್ತಲಿನ ವಾತಾವರಣದಿಂದ ಮುಖಸ್ತುತಿಯಿಂದ ಮತ್ತು ರೂಢಮೂಲವಾದ ಕೂಟತರ್ಕಗಳಿಂದ ನೀವು ಅಮಲೇರಿಲ್ಲದಿದ್ದಾಗ ಇವೆಲ್ಲಾ ಶುಷ್ಕವಾದ ಮಾತುಗಳೆಂದು ನಿಮಗನ್ನಿಸಲಿಲ್ಲವೇನು? ನೀವೇ ಸಂಶೋಧಿಸಿಕೊಂಡ ಅತ್ಯಂತ ನೀಚಕಾರ್ಯಗಳು ಇವುಗಳೆಂದು ನಿಮಗನ್ನಿಸುವುದಿಲ್ಲವೇನು? ಇಷ್ಟಾದರೂ ನಿಮ್ಮನ್ನು ನೀವು ಒಬ್ಬ ಒಳ್ಳೆಯ ಮನುಷ್ಯನೆಂದು ಭಾವಿಸುವುದು ನಿಮಗೆ ಹೇಗೆ ಸಾಧ್ಯವಾಗಿದೆ? ನಮ್ಮೆಲ್ಲರಂತೆಯೇ ನೀವೂ ಕೂಡ ನಿಮ್ಮನ್ನು ಪ್ರಪಂಚಕ್ಕೆ ಕಳುಹಿಸಿದ ಆ ಭಗವದಿಚ್ಛೆ ದಯಪಾಲಿಸಿದ ಹ್ರಸ್ವವಾದ ಬದುಕನ್ನು ಬದುಕುವ ಕರ್ತವ್ಯವನ್ನು ತಿಳಿಯದೇ ಇಲ್ಲ; ಈ ಭಗವದಿಚ್ಛೆಗೆ ಮಣಿದು ಈ ಜಗತ್ತನ್ನು ಬಿಡಬೇಕಾದುದೂ ನಿಮಗೆ ಗೊತ್ತೇ ಇದೆ. ಆ ಭಗವದಿಚ್ಛೆ ನಿಮ್ಮಿಂದ ಬಯಸುವುದು ಇದೊಂದನ್ನೇ: ಮನುಷ್ಯರಲ್ಲಿ ಪ್ರೇಮವನ್ನು.

ಆದರೆ ನೀವೇನು ಮಾಡುತ್ತಿದ್ದೀರಿ? ನಿಮ್ಮಲ್ಲಿ ಆಧ್ಯಾತ್ಮಿಕ ಶಕ್ತಿಯನ್ನು ಯಾರಿಗರ್ಪಿಸುತ್ತಿದ್ದೀರಿ? ಯಾರನ್ನು ನೀವು ಪ್ರೀತಿಸುತ್ತೀರಿ? ನಿಮ್ಮನ್ಯಾರು ಪ್ರೀತಿಸುತ್ತಾರೆ? ನಿಮ್ಮ ಹೆಂಡತಿಯೆ? ಮಗುವೆ? ಆದರೆ ಅದು ಪ್ರೇಮವಲ್ಲ. ಹೆಂಡತಿ ಮತ್ತು ಮಕ್ಕಳ ಪ್ರೀತಿ ಕೇವಲ ಹೆಂಡತಿ ಮತ್ತು ಮಕ್ಕಳ ಪ್ರೀತಿ ಅಷ್ಟೆ: ಮಾನವ ಪ್ರೇಮವಲ್ಲ. ಹಾಗೆ ನೋಡಿದರೆ ಪ್ರಾಣಿಗಳು ಇದಕ್ಕಿಂತ ಹೆಚ್ಚು ತೀವ್ರವಾಗಿ ಪ್ರೀತಿಸುತ್ತವೆ. ಮಾನವ ಪ್ರೇಮ ಎಂಬುದು ಮನುಷ್ಯ ಮನುಷ್ಯನನ್ನು ಪ್ರೀತಿಸುವ ಪ್ರೇಮ. ಏಕೆಂದರೆ ಪ್ರತಿಯೊಬ್ಬ ಮನುಷ್ಯನೂ ದೇವರ ಮಗ. ಆದ್ದರಿಂದ ಸಹೋದರ

ಈ ರೀತಿ ಯಾರನ್ನು ನೀವು ಪ್ರೀತಿಸುತ್ತೀರಿ? ಒಬ್ಬರನ್ನೂ ಇಲ್ಲ. ನಿಮ್ಮನ್ನಾರು ಹಾಗೆ ಪ್ರೀತಿಸುತ್ತಾರೆ? ಇಲ್ಲ, ಯಾರೂ ಇಲ್ಲ.

ನೇಣುಹಾಕುವವನು ಹೆದರಿಬಿಟ್ಟಿರುವಂತೆ ಅಥವಾ ಕಾಡುಪ್ರಾಣಿಯೊಂದು ಹೆದರಿರುವಂತೆ ನೀವು ಬೆದರಿಬಿಟ್ಟಿದ್ದೀರಿ. ಜನರು ನಿಮ್ಮ ಮುಖಸ್ತುತಿಯನ್ನೇಕೆ ಮಾಡುತ್ತಾರೆಂದರೆ ಹೃದಯದಾಳದಲ್ಲಿ ಅವರು ನಿಮ್ಮನ್ನು ದ್ವೇಷಿಸುತ್ತಾರೆ ಮತ್ತು ತಾತ್ಸಾರ ಮಾಡುತ್ತಾರೆ. ಅವರು ನಿಮ್ಮನ್ನು ಎಷ್ಟೊಂದು ದ್ವೇಷಿಸುತ್ತಾರೆ! ನಿಮಗೇ ಅದು ಬಹಳ ಚೆನ್ನಾಗಿ ಗೊತ್ತಿದೆ: ಅದಕ್ಕಾಗಿಯೇ ಜನರಿಗೆ ನೀವು ಹೆದರುತ್ತೀರಿ.

ಹೌದು ನೀವಿದನ್ನು ಪರಿಶೀಲಿಸಿ. ಮೇಲಿನವರಿಂದ ಹಿಡಿದು ಕೆಳಗಿನ ಮಟ್ಟದವರ ವರೆಗೆ ಕೊಲೆಯ ಕಾರ್ಯದಲ್ಲಿ ಭಾಗವಹಿಸುತ್ತಿರುವ ನೀವು ಯಾರು ಎಂಬುದನ್ನು ಅರ್ಥ ಮಾಡಿಕೊಳ್ಳಿ: ನೀವು ಮಾಡುತ್ತಿರುವುದನ್ನೆಲ್ಲ ನಿಲ್ಲಿಸಿ ಬಿಡಿ. ನಿಮಗೋಸ್ಕರವಾಗಿ ಅಲ್ಲ ನಿಮ್ಮ ವ್ಯಕ್ತಿತ್ವಕ್ಕಾಗಿ ಅಲ್ಲ: ಜನರಿಗೋಸ್ಕರವಾಗಿ ಅಲ್ಲ: ನೀವು ದೂಷಣೆಗೊಳ ಗಾಗುವುದನ್ನು ತಡೆಯುವುದಕ್ಕಾಗಿಯೂ ಅಲ್ಲ: ಆದರೆ ನಿಮ್ಮ ಆತ್ಮದ ಸಲುವಾಗಿ ನಿಲ್ಲಿಸಿ; ನಿಮ್ಮೊಳಗೆ ವಾಸಿಸುತ್ತಿರುವ ಆ ದೇವರಿಗಾಗಿ ನಿಲ್ಲಿಸಿ.

[1908]

## ಟಾಲ್‌ಸ್ಟಾಯ್ ವಿಚಾರಧಾರೆ ....

ಜಗತ್ತಿನ ಮಹಾ ವ್ಯಕ್ತಿಗಳಲ್ಲಿ ಟಾಲ್‌ಸ್ಟಾಯ್ ಒಬ್ಬರು. ಈ ಮಹಾವ್ಯಕ್ತಿತ್ವಕ್ಕೆ ಮುಖಗಳು ಮೂರು: ಕವಿ, ವಿಚಾರವಂತ ಮತ್ತು ಮಾನವತಾವಾದಿ. ಲೇಖಕನಾಗಿ ಟಾಲ್‌ಸ್ಟಾಯ್ ಅನೇಕ ಬೃಹತ್ ಕೃತಿಗಳನ್ನು ಬರೆದು ಹೆಸರಾಗಿದ್ದಾರೆ. ಅವರ ಅನೇಕ ಪುಸ್ತಕಗಳು ವಿಶ್ವದ ಹಲವಾರು ಭಾಷೆಗಳಿಗೆ ಅನುವಾದಿತವಾಗಿವೆ. ಸಾಹಿತಿಯಾಗಿ ಲೋಕವನ್ನು ಸೂಕ್ಷ್ಮವಾಗಿ ಅವಲೋಕಿಸಿದ್ದು ಮಾತ್ರವಲ್ಲದೆ, ವಿಚಾರವಂತನಾದ ಆತ ತನ್ನ ವ್ಯಕ್ತಿತ್ವವನ್ನು ಒರೆಗಲ್ಲಿಗೆ ಹಚ್ಚಿ ಪರಿಶೀಲಿಸಿಕೊಂಡ ನಿಷ್ಠುರ ಆತ್ಮವಿಮರ್ಶಕನೂ ಅಹುದು. ಅತ್ಯಂತ ಶ್ರೀಮಂತ ಕುಟುಂಬದಲ್ಲಿ ಹುಟ್ಟಿದ್ದರೂ, ತನ್ನ ಸುತ್ತಮುತ್ತಲಿನ ಜನಜೀವನದ ದುಸ್ಥಿತಿಯ ಬಗ್ಗೆ ಮರುಗಿ ಶ್ರೀಮಂತಿಕೆಯ ಅನುಕೂಲಾವಕಾಶಗಳನ್ನು ವರ್ಜಿಸಿ ಸಾಮಾನ್ಯರೊಂದಿಗೆ ಬದುಕಲು ಪ್ರಯತ್ನಪಟ್ಟ ಮಾನವತಾವಾದಿ. ಈ ಮೂರು ಲಕ್ಷಣಗಳು ಟಾಲ್‌ಸ್ಟಾಯ್ ಅವರನ್ನು ಮಹಾಜೀವಿಗಳ ವಿರಳ ಪಂಕ್ತಿಯಲ್ಲಿ ನಿಲ್ಲಿಸಿವೆ.

ಟಾಲ್‌ಸ್ಟಾಯ್ ಅವರ ವಿಚಾರಗಳು ಜಗತ್ತಿನ ಅನೇಕ ವ್ಯಕ್ತಿಗಳ ಮೇಲೆ ಪರಿಣಾಮವನ್ನು ಬೀರಿವೆ. ಮಹಾತ್ಮಾ ಗಾಂಧಿಯವರಿಗೆ ಸ್ಫೂರ್ತಿ ನೀಡಿದ ಹಲವರಲ್ಲಿ ಟಾಲ್‌ಸ್ಟಾಯ್ ಅವರೂ ಒಬ್ಬರು. ಟಾಲ್‌ಸ್ಟಾಯ್ ಅವರ ಧ್ಯೇಯ ಧೋರಣೆಗಳು ಪಾಶ್ಚಿಮಾತ್ಯರಿಗಿಂತ ಪೌರಾತ್ಯರಾದ ನಮಗೆ ಹೆಚ್ಚು ಸಮ್ಮತವಾಗುವ ಕಾರಣ ಅವರು ಭಾರತೀಯರಿಗೆ 'ಮಹರ್ಷಿ ಟಾಲ್‌ಸ್ಟಾಯ್' ಎಂದು ಪರಿಚಿತರಾಗಿದ್ದಾರೆ.

ಟಾಲ್‌ಸ್ಟಾಯ್ ಅವರು ಪಾರಂಪಾರಿಕವಾದ ಮತಮೌಢ್ಯಗಳಿಗೆ ವಿರೋಧಿಯಾಗಿ ಹೋರಾಡಿದವರು; ಬದುಕಿನ ಶ್ರೇಯಸ್ಸನ್ನು, ದೀನದಲಿತರ ಉದ್ಧಾರವನ್ನು ಹಾಗೂ ಸರ್ವೋದಯವನ್ನು ಬಹುವಾಗಿ ಹಾರೈಸಿದವರು. ಅವರ ವಿಚಾರಗಳು ಈಗಾಗಲೇ ಎಲ್ಲೆಡೆ ಸಾಕಷ್ಟು ಪ್ರಸಾರವಾಗಿವೆ. 'ಟಾಲ್‌ಸ್ಟಾಯ್ ವಿಚಾರಧಾರೆ' ಎಂಬ ಈ ಲೇಖನಸಂಗ್ರಹದಲ್ಲಿ ಅವರ ವಿಚಾರವಂತಿಕೆಯ ಹಲವು ನಿಲುವುಗಳನ್ನು ನಾವು ಕಾಣಬಹುದು. ಇಂದಿನ ಯುವಜನಾಂಗಕ್ಕೆ ಟಾಲ್‌ಸ್ಟಾಯ್ ಅವರ ವಿಚಾರಧಾರೆಯ ಅಗತ್ಯ ಎಷ್ಟಿದೆ ಎಂಬುದನ್ನು ಹೇಳಬೇಕಾಗಿಲ್ಲ.

**ಎಚ್. ನರಸಿಂಹಯ್ಯ**

[ಮುನ್ನುಡಿಯಿಂದ]